ಶ್ರೀಮತಿ ರಂಜನಾ ಗೋಧಿ

೪-೫-೧೯೮೦

# ಚೆಂಬೆಳಕು

ಸಂಪಾದಕ :

ಡಾ. ಜಿ. ಎಸ್. ಕಾಪಸೆ

ಚೆನ್ನವೀರ ಕಣವಿ ಅಭಿನಂದನಗ್ರಂಥ ಸಮಿತಿ

ಧಾರವಾಡ

CHEMBELAKU — Felicitation Volume presented to Sri Chennaveera Kanavi, a noted Kannada Poet. Editor : Dr. G. S. Kapse, Publisher : Vagdevi Enterprises Mysore-1.

First Edition : 1980, pp. xi + 544 Price : Rs. 60

ಪ್ರಥಮ ಮುದ್ರಣ : ೧೯೮೦



ಬೆಲೆ : ರೂ. ೬೦

ಮುದ್ರಕರು : ಶ್ರೀ ರಾಜೇಂದ್ರ ಪ್ರಿಂಟರ್ಸ್, ಮೈಸೂರು–೧

ಪ್ರಕಾಶಕರು : ವಾಗ್ದೇವಿ ಎಂಟರ್‌ಪ್ರೈಸಸ್, ಈವನಿಂಗ್ ಬಜಾರ್ ಹಿಂಭಾಗ, ಮೈಸೂರು–೧.

# ಸಂಪಾದಕನ ಮಾತು

ಮೂರು ದಶಕಗಳ ಹಿಂದಿನ ಮಾತು. ಕನ್ನಡ ನವೋದಯ ಕಾವ್ಯ ತನ್ನ ಸಿದ್ಧಿಯ ಹಂತದಲ್ಲಿ ಒಳ್ಳೆಯ ಕೃತಿಗಳನ್ನು ಕೊಡುವುದರಲ್ಲಿ ತನ್ಮಯವಾಗಿತ್ತು. ಬೇಂದ್ರೆ, ಕುವೆಂಪು, ಪು.ತಿ.ನ, ಮಧುರಚೆನ್ನ ಮೊದಲಾದವರು ಆ ಕಾವ್ಯ ಮಾರ್ಗವನ್ನು ಆಗಲೇ ಸುಗಮ ಗೊಳಿಸಿದ್ದರು. ಅವರ ಕವಿತೆಗಳು ನಾಡಿನುದ್ದಗಲಕ್ಕೂ ಕೇಳಿಬರುತ್ತಿದ್ದವು. ಸಾಹಿತ್ಯಕ ಸದಭಿರುಚಿಯನ್ನು ಬೆಳೆಸುವಲ್ಲಿ ಮಹತ್ವದ ಪಾತ್ರವಾಡುತ್ತಿದ್ದ ಜಯಂತಿ, ಜೀವನ, ಜಯ ಕರ್ನಾಟಕ ಈ ಮಾಸ ಪತ್ರಿಕೆಗಳು ಹಾಗೂ ವಿದ್ವತ್ ಪತ್ರಿಕೆಯಾದ ಪ್ರಬುದ್ಧ ಕರ್ಣಾಟಕ ತ್ರೈಮಾಸಿಕ ಇವು ಉನ್ನತ ಮಟ್ಟದ ಕವಿತೆಗಳನ್ನು ಪ್ರಕಟಿಸುತಿದ್ದವು. ಕಾವ್ಯ ಪ್ರೇಮಿಗಳಿಗೆ, ಸಹೃದಯರಿಗೆ ಅದೊಂದು ಸುಗ್ಗಿಯ ಕಾಲವೇ ಆಗಿತ್ತು.

ಈ ಸಂದರ್ಭದಲ್ಲಿ ಅನೇಕ ತರುಣ ಕವಿಗಳು ಮೂಡಿ ಬಂದರು. ತಮ್ಮ ಹಿರಿಯ ಸಮಕಾಲೀನ ಕವಿಗಳಿಂದ ಪ್ರೇರಣೆ, ಸ್ಫೂರ್ತಿಗಳನ್ನು ಪಡೆದು, ಅವರ ದಾರಿಯಲ್ಲಿಯೇ ನಡೆಯುತ್ತ ತಮ್ಮತನವನ್ನು ತೋರಿಸತೊಡಗಿದರು. ಹೀಗೆ ಕಾವ್ಯ ಕ್ಷೇತ್ರದಲ್ಲಿ ಕಾಣಿಸಿ ಕೊಂಡವರಲ್ಲಿ ಚೆನ್ನವೀರ ಕಣವಿಯವರೂ ಒಬ್ಬರು. ಅವರು ತಮ್ಮ ಓರಗೆಯವರಲ್ಲಿಯೇ ಹೆಚ್ಚು ಸುಟಿಯಾಗಿ, ಪ್ರತಿಭಾವಂತರಾಗಿ ಪ್ರಕಾಶಿಸಿದರು. ಅವರ ಕವಿತೆಗಳ ಭಾವ, ಲಯ, ಕಲ್ಪಕತೆ, ಬೆಡಗು, ವ್ಯಂಜಕತೆ ಈ ಮೊದಲಾದ ಗುಣಗಳು ಬಹು ಬೇಗನೇ ಸಹೃದಯರನ್ನು ಸೆರೆಹಿಡಿದವು. ನೋಡು ನೋಡುವಷ್ಟರಲ್ಲಿ 'ಕಾವ್ಯಾಕ್ಷಿ' 'ಭಾವ ಜೀವಿ' ಸಂಕಲನಗಳು ಪ್ರಕಟವಾಗಿ, ಕಣವಿಯವರು ಆಗಿನ ಯುವ ಕವಿಗಳಲ್ಲಿ ಮುಂಚೂಣಿಯಲ್ಲಿ ನಿಂತರು. 'ಭಾವಜೀವಿ' ಅಂದಿನ ಓದುಗರ ಅತ್ಯಂತ ಪ್ರಿಯವಾದ, ಕಂಠಸ್ಥವಾದ ಕಾವ್ಯ ವಾಗಿ ಉಳಿಯಿತು. ಇಂದಿಗೂ ಅದರ ರುಚಿ ಹಾಗೆಯೇ ಇದೆ. ಆ ಕಾಲದಲ್ಲಿ ಬಹುಶಃ ಇವರಷ್ಟು ಜನಪ್ರಿಯತೆಯನ್ನು ಗಳಿಸಿದ ತರುಣಕವಿ ಇನ್ನೊಬ್ಬರಿರಲಿಲ್ಲವೆಂದು ಹೇಳ ಬಹುದು. ಅಂದಿನಿಂದ ಇಂದಿನವರೆಗೆ ತಮ್ಮ ಯಶಸ್ಸಿಗೆ, ಓದುಗರ ನಂಬಿಕೆ ಭರವಸೆಗಳಿಗೆ ಕಿಂಚಿತ್ತೂ ಚ್ಯುತಿ ಬರದಂತೆ ಅವರು ಕಾವ್ಯ ಕೃಷಿ ಮಾಡುತ್ತಿರುವುದು ಒಂದು ಅನನ್ಯ ಸಾಧನೆಯೇ ಆಗಿದೆ. ಈ ಮೂರು ದಶಕಗಳಲ್ಲಿ ಒಂಬತ್ತು ಕವನ ಸಂಕಲಗಳನ್ನು ನೀಡಿದ ಕಣವಿ ಸಂಕಲನದಿಂದ ಸಂಕಲನಕ್ಕೆ ಬೆಳೆಯುತ್ತಿರುವುದನ್ನು ತೋರಿಸಿಕೊಟ್ಟಿದ್ದಾರೆ.

೧೯೭೮ರ ಜೂನ ೨೮ಕ್ಕೆ ಅವರಿಗೆ ಐವತ್ತು ತುಂಬಿದವು. ತಾರುಣ್ಯದಲ್ಲಿಯೇ ಪ್ರೌಢಿ ಮೆಯನ್ನೂ ಪರಿಣತಿಯನ್ನೂ ತೋರಿಸಿದ ಅವರು ಈಗ ವ್ಯಾಪಕವಾದ ಅಧ್ಯಯನ ಹಾಗೂ ಅನುಭವಗಳಿಂದ ಪಕ್ವವಾಗಿದ್ದಾರೆ. ಅವರ ವ್ಯಕ್ತಿತ್ವದ ಒಂದು ವಿಶೇಷವೆಂದರೆ ಅಂದಂದಿನ ಬದಲಾವಣೆಗಳನ್ನು ತೀರ ಹತ್ತಿರದಿಂದ, ಆತ್ಮೀಯತೆಯಿಂದ ಕಾಣುವ, ಅದರ ಉತ್ತಮಾಂಶಗಳನ್ನು ಸ್ವೀಕರಿಸುವ ಗುಣವುಳ್ಳದ್ದಾಗಿರುವುದು. ನವೋದಯ ಕವಿಗಳಲ್ಲಿ ಕೆಲವರು ನವ್ಯದ ಬದಲಾವಣೆಯನ್ನು ಸ್ವೀಕರಿಸಲು ಅಸಮರ್ಥರಾಗಿ ಅಲ್ಲಿಯೇ ಉಳಿ

ದರು. ಈಗ ದಲಿತ, ಬಂಡಾಯದ ದನಿಗಳು ಪ್ರಖರವಾಗಿ ಕೇಳಿಬರುತ್ತಿರುವ ಸಂದರ್ಭ ದಲ್ಲಿ ಇವುಗಳ ಜೊತೆಗೆ ಹೆಜ್ಜೆ ಹಾಕಲು ಅಸಮರ್ಥರಾಗಿ ಕೆಲವರು ನವ್ಯಕ್ಕೇ ನಿಂತು ಬಿಡುವ ಸಾಧ್ಯತೆಯೂ ಇಲ್ಲದಿಲ್ಲ. ಆದರೆ ಕಣವಿ ಮಾತ್ರ ಹಾಗಲ್ಲ. ಅವರು ಕಾವ್ಯದ ಎಲ್ಲ ಬದಲಾವಣೆಯೊಂದಿಗೂ ಕೈ-ಕೈ ಹಿಡಿದು ಮುನ್ನಡೆಯುವ ಪ್ರತಿಭಾ ವಿಶೇಷವುಳ್ಳವರು. ತಮ್ಮ ಹಿಂದಿನ ಕಾವ್ಯದೊಂದಿಗೆ ಅವರು ಗಾಢವಾಗಿ ಸಂಪರ್ಕವಿರಿಸಿಕೊಂಡಂತೆ ಇಂದಿನ ಕಾವ್ಯದೊಂದಿಗೂ ನಿಕಟ ಸಂಬಂಧವಿರಿಸಿಕೊಂಡವರು. ಅಂತೆಯೇ ಅವರು ಯುವಕ ರೊಂದಿಗೆ ಯುವಕರಾಗಿ ಬೆರೆತು ಬಿಡುತ್ತಾರೆ. ಹೊಸ ಒಲವುಗಳಿಗೆ ತಮ್ಮ ಕಾವ್ಯ ಕೃಷಿ ಯನ್ನು ಹೊರಳಿಸಿಕೊಳ್ಳುತ್ತಾರೆ. ನವೋದಯ, ನವ್ಯಗಳೆರಡರಲ್ಲಿ ಸಾರ್ಥಕ ಕೃಷಿ ಮಾಡಿದ ಅವರು ಈ ಹೊಸ ತಿರುವಿನಲ್ಲಿಯೂ ತಮ್ಮ ವಿಶೇಷತೆಯನ್ನು ತೋರಿಸದಿರರು, ಹೀಗಾಗಿ ಕಣವಿ ಯಾವಾಗಲೂ Relevent ಆಗಿರುವ ಕವಿ.

ಅವರು ಕವಿಗಳಾಗಿರುವಂತೆ ಕನ್ನಡದ ಗಣ್ಯ ವಿಮರ್ಶಕರಾಗಿರುವುದನ್ನೂ ಮರೆಯು ವಂತಿಲ್ಲ, ಅವರ ವಿಮರ್ಶೆಯ ಧಾಟಿ ನವೋದಯ ಪರಂಪರೆಯದಾಗಿದ್ದರೂ ನವ್ಯದ ಅಂಶಗಳನ್ನು ಸಾಕಷ್ಟು ಸ್ವೀಕರಿಸಿದೆ. ಏನಿದ್ದರೂ ಅವರು ಸಹೃದಯರು, ಸಂಸ್ಕೃತರು. ಕೂದಲು ಸೀಳುವಿಕೆಯ ಕೆಲಸವನ್ನು ಅವರೆಂದೂ ಮಾಡಿಲ್ಲ, ಮಾಡಲಾರರು. ಅವರು ಯಾವ ಕೃತಿಯನ್ನೇ ಎತ್ತಿಕೊಳ್ಳಲಿ, ಅದರ ಎಲ್ಲ ಮುಖಗಳನ್ನು ತೆರೆದ ಮನಸ್ಸಿನಿಂದ ವಸ್ತು ನಿಷ್ಠವಾಗಿ ನೋಡುತ್ತಾರೆ. ತಮಗನಿಸಿದ್ದನ್ನು ತಮ್ಮದೇ ಆದ ರೀತಿಯಲ್ಲಿ ಹೇಳಿ ಬಿಡುತ್ತಾರೆ. ಅವರು ಸ್ನೇಹವನ್ನು ಉಳಿಸಿಕೊಂಡು ಸತ್ಯವನ್ನು ಹೇಳುವ ಕಲಾವಂತರೂ ಅಹುದು.

ಕಣವಿಯವರ ವ್ಯಾಸಂಗದಲ್ಲಿ ಪ್ರಾಚೀನ, ಅರ್ವಾಚೀನ, ಪಾಶ್ಚಾತ್ಯ, ಜಾನಪದ ಇವೆಲ್ಲವುಗಳಿಗೂ ಎಡೆಯುಂಟು. 'ಸಾಹಿತ್ಯ ಚಿಂತನ' 'ಕಾವ್ಯಾನುಸಂಧಾನ' 'ಸಮಾಹಿತ' ಈ ವಿಮರ್ಶಾ ಕೃತಿಗಳು ಅವರ ಬಹುಮುಖ ಅಧ್ಯಯನಕ್ಕೆ ಸಾಕ್ಷಿಯಾಗಿವೆ. ಅವರು ಸಂಪಾದಿಸಿದ ಕೃತಿಗಳ ಸಂಯೋಜನೆಯಲ್ಲಿಯೂ ಒಂದು ವಿಶೇಷತೆಯಿರುವುದುಂಟು. ಅದರು ಬರೆಯುವ ಪ್ರಸ್ತಾವನೆ, ಮುನ್ನುಡಿಗಳೂ ಅಭ್ಯಸನೀಯವಾಗಿರುತ್ತವೆ. ಅವರು ನಿರ್ವಹಿಸುವ ಯಾವುದೇ ಕಾರ್ಯದಲ್ಲಿ ಅಚ್ಚುಕಟ್ಟುತನ, ಶಿಸ್ತು, ಕಲಾತ್ಮಕತೆ ಇದ್ದೇ ಇರುತ್ತವೆ.

ಕಣವಿ ವ್ಯಕ್ತಿಯಾಗಿಯೂ ಎತ್ತರದ ನಿಲುವಿನವರು. ಸರಳತೆ, ಸ್ನೇಹಪರತೆ, ಗುಣ ಗ್ರಾಹಕತೆ ಇವು ಅವರ ಹುಟ್ಟಿನೊಂದಿಗೇ ಬೆಳೆದು ಬಂದ ಗುಣಗಳು. ಸಣ್ಣತನ, ಅಸೂಯೆ ಇವು ಅವರ ಹತ್ತಿರ ಎಂದೂ ಸುಳಿಯಲಾರವು. ಎಂಥ ವಿಪರೀತ ಸ್ಥಿತಿ ಯಲ್ಲಿಯೂ ಚಿತ್ತ ಸ್ವಾಸ್ಥ್ಯವನ್ನು ಕಳೆದುಕೊಳ್ಳದ, ವೈಯಕ್ತಿಕ ನಷ್ಟಗಳಿಗೆ ಎಂದೂ ನೊಂದುಕೊಳ್ಳದ, ಇನ್ನೊಬ್ಬರ ಏಳ್ಗೆಯನ್ನು ಕಂಡು ಸಂತೋಷ ಪಡುವ, ಪರರ ದುಃಖ ದಲ್ಲಿ ಪಾಲುಗೊಳ್ಳುವ ಸ್ವಭಾವವೂ ಅವರದಾಗಿದೆ. 'ಕಣವಿಯವರಿಗೆ ಎಂದಾದರೂ

ಕೋಪ ಬಂದಿತ್ತೇ ?' ಎಂದು ಕೇಳುವಷ್ಟು ಸೌಮ್ಯ ಪ್ರಕೃತಿಯವರಾದ ಅವರು, ಅವ್ಯವಸ್ಥೆಯನ್ನು ಕಂಡಾಗ, ಅಹಿತಕಾರಿಯಾದುದು ಘಟಿಸಿದಾಗ ಮುಖ ಕೆಂಪಗೆ ಮಾಡುವುದುಂಟು. ಆದರೆ ಅದು ಬಹಳ ಹೊತ್ತು ಇರುವುದಿಲ್ಲ, ಮತ್ತೆ ಯಥಾಪ್ರಕಾರ ಸೌಮ್ಯವು ಅಲ್ಲಿ ಕಾಣಿಸಿಕೊಳ್ಳುತ್ತದೆ, ಅದೇ ಅವರ ಸ್ಥಾಯಿ, ಉಳಿದವೆಲ್ಲ ಸಂಚಾರಿಗಳು.

ಕರ್ನಾಟಕ ವಿಶ್ವವಿದ್ಯಾನಿಲಯದ ಆರಂಭಕಾಲದಲ್ಲಿಯೇ ಅದರ ಪ್ರಸಾರಾಂಗದ ಮುಖ್ಯಸ್ಥರಾಗಿ ಅವರು ಮಾಡಿದ ಕಾರ್ಯ ಅವಿಸ್ಮರಣೀಯವಾಗಿದೆ. ವ್ಯಾಸಂಗ ವಿಸ್ತರಣ ಮಾಲೆ, ವಿಶೇಷೋಪನ್ಯಾಸ ಮಾಲೆ, ಪ್ರಕಟನ ಕಾರ್ಯ ಎಲ್ಲದರಲ್ಲಿಯೂ ಕಣ್ಣಿಗೆ ಹೊಡೆಯುವಷ್ಟು ಕಣವಿಯವರ ದಕ್ಷತೆ, ಸುವ್ಯವಸ್ಥೆ ಇರುವುದನ್ನು ಕಾಣಬಹುದು. ಅಲ್ಪಾವಧಿಯಲ್ಲಿ ಯಾವ ಹಳೆಯ ವಿಶ್ವವಿದ್ಯಾನಿಲಯಕ್ಕೂ ಕಡಿಮೆಯಿಲ್ಲದಂತೆ ಪ್ರಸಾರಾಂಗವನ್ನು ಅವರು ಬೆಳೆಸಿ ತೋರಿಸಿದ್ದಾರೆ, ಅವರು ತಮ್ಮ ವೈಯಕ್ತಿಕವಾದ ಕಾವ್ಯ ದೃಷ್ಟಿ, ಕನಸುಗಾರಿಕೆ, ಕಲಾ ಪ್ರಜ್ಞೆಗಳನ್ನು ತಮ್ಮ ವಿಭಾಗವನ್ನು ಕಟ್ಟುವಲ್ಲಿಯೂ ವಿನಿಯೋಗಿಸಿದ್ದಾರೆಂದು ಹೇಳಬೇಕು. ಅದರಿಂದಾಗಿ ಅವರ ಕಾವ್ಯ ರಚನೆ ಒಂದಿಷ್ಟು ಕುಂಠಿತವಾಗಿದ್ದರೂ ಕರ್ತವ್ಯ ನಿರ್ವಹಿಸಿದ ತೃಪ್ತಿ ಅವರಿಗಿದೆ.

ಪ್ರಾಥಮಿಕ ಶಾಲೆಯ ಆದರ್ಶ ಶಿಕ್ಷಕ, ಸಾಹಿತ್ಯ ಪ್ರೇಮಿ ಹಾಗೂ ಆಧ್ಯಾತ್ಮ ಜೀವಿ ಸಕ್ರಪ್ಪನವರ ಮಕ್ಕಳಾಗಿ ಒಳ್ಳೆಯ ಸಂಸ್ಕಾರವನ್ನು ಪಡೆದು, ಗ್ರಾಮೀಣ ಜೀವನದ ಸೊಗಸನ್ನು ತಮ್ಮ ಅಂತರಂಗದಲ್ಲಿ ತುಂಬಿಕೊಂಡು, ಧಾರವಾಡದ ಸಾಹಿತ್ಯಿಕ ವಾತಾವರಣದಲ್ಲಿಯೇ ಜೀವನ ಸಾಗಿಸಿದ ಅವರು ಸಾಹಿತ್ಯೋಪಾಸನೆಗೆ ಬೇಕಾದ ಎಲ್ಲ ಪರಿಕರಗಳನ್ನು ಹೊಂದಿದ್ದಾರೆ. ಕಣವಿಯವರಿಗೆ ಪತ್ನಿಯಾಗಿ ದೊರಕಿರುವ ಶ್ರೀಮತಿ ಶಾಂತಾದೇವಿಯವರ ತಂದೆಯವರಾದ ಶ್ರೀ ಗಿಡ್ನವರ ಸಾಹಿತ್ಯ, ತತ್ವಜ್ಞಾನ ಮುಂತಾದುವುಗಳಲ್ಲಿ ಅಪಾರ ಆಸಕ್ತಿಯುಳ್ಳ, ಮಾಳವಾಡ, ಮಧುರಚೆನ್ನ, ಬೇಂದ್ರೆ ಮೊದಲಾದವರ ಆತ್ಮೀಯತೆಯನ್ನು ಪಡೆದ ಒಬ್ಬ ಅಪರೂಪದ ವ್ಯಕ್ತಿ. ಅವರ ಸ್ವಂತ ಗ್ರಂಥಾಲಯ ಸಂಶೋಧಕರಿಗೆ, ಸಾಹಿತ್ಯಾಭ್ಯಾಸಿಗಳಿಗೆ ಒಂದು ನಿಧಿಯಂತಿದೆ. ಅಲ್ಲಿ ಬೆಳೆದ ಶ್ರೀಮತಿ ಶಾಂತಾದೇವಿ ಚಿಕ್ಕಂದಿನಲ್ಲಿಯೇ ಭಾವಗೀತೆಗಳನ್ನು ಹಾಡುವ, ಕಥೆಗಳನ್ನು ಬರೆಯುವ ಹವ್ಯಾಸವಿರಿಸಿಕೊಂಡವರು. ಅವರೀಗ ಕನ್ನಡದ ಹೆಸರಾಂತ ಕತೆಗಾರ್ತಿಯರಲ್ಲೊಬ್ಬರು. ಕಣವಿಯವರ ಐವರು ಮಕ್ಕಳು ಶಾಲೆ-ಕಾಲೇಜುಗಳಲ್ಲಿ ಯಾವಾಗಲೂ ಪ್ರಥಮ ಶ್ರೇಣಿಯಲ್ಲಿ ಪ್ರಶಸ್ತಿ ಸಹಿತ ಪಾಸಾಗುವವರೇ. ಈ ಎಲ್ಲ ಅನುಪಮವಾದ ಪರಿಸರದ ಮಧ್ಯ ಕಣವಿಯವರು ಕನ್ನಡದ ಬೆಳಕಾಗಿ ನಿಂತಿರುವರು.

ಅವರಿಗೆ ನಲವತ್ತೊಂಬತ್ತು ಸರಿದು ಐವತ್ತು ಆಗುತ್ತಿದ್ದಂತೆಯೇ ಧಾರವಾಡದ ವಿದ್ಯಾವರ್ಧಕ ಸಂಘ ಅತ್ಯಂತ ಆತ್ಮೀಯತೆಯಿಂದ ಅವರನ್ನು ಸತ್ಕರಿಸಿತು. ಅದಕ್ಕೂ ಪೂರ್ವದಲ್ಲಿ ಯಾವ ವಯಸ್ಸಿನ ಎಲ್ಲೆಗಳನ್ನು ನೋಡದೆ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಸಂಘ ಅವರನ್ನು ಬರಮಾಡಿಕೊಂಡು ಸನ್ಮಾನಿಸಿತು. ರಾಜ್ಯ ಸಾಹಿತ್ಯ ಅಕಾಡೆಮಿ

ಕೇಂದ್ರ ಸಾಹಿತ್ಯ ಅಕಾಡೆಮಿಗಳು ಅವರನ್ನು ಸದಸ್ಯರನ್ನಾಗಿ ತಮ್ಮ ಕಾರ್ಯ ಕ್ಷೇತ್ರಕ್ಕೆ ಬರಮಾಡಿಕೊಂಡು, ಆಗಲೇ ಹಲವು ವರ್ಷಗಳು ಕಳೆದವು. ಅವರಿಂದು ನಿಸ್ಸಂದೇಹವಾಗಿ ಕನ್ನಡ ಸಾರಸ್ವತ ಪ್ರಪಂಚದ ಪ್ರಮುಖ ವ್ಯಕ್ತಿಗಳಲ್ಲೊಬ್ಬರು, ಮಹತ್ವದ ಕವಿಗಳಲ್ಲೊಬ್ಬರು.

ಕವಿ ಕಣವಿಯವರಿಗೆ ಐವತ್ತು ತುಂಬಿದ ಸಂದರ್ಭದಲ್ಲಿ ಅವರ ಸ್ನೇಹಿತರೂ ಹಿತೈಷಿಗಳೂ ಕೂಡಿ ಒಂದು ಅಭಿನಂದನ ಗ್ರಂಥವನ್ನು ಸಮರ್ಪಿಸಲು ಯೋಚಿಸಿಕೊಂಡರು. ಆ ವಿಚಾರಕ್ಕೆ ಈಗ ಎರಡು ವರುಷಗಳೇ ಆಗುತ್ತ ಬಂದವು. ಆಗ ಕೂಡಿದ ಸ್ನೇಹಿತ ವರ್ಗ ಈ ಕಾರ್ಯಕ್ಕಾಗಿ ಒಂದು ಸಮಿತಿಯನ್ನು ರಚಿಸಿಕೊಂಡಿತು. ಸಮಿತಿ ಹೀಗಿದೆ :

ಡಾ॥ ಆರ್. ಸಿ. ಹಿರೇಮಠ (ಅಧ್ಯಕ್ಷರು)
ಡಾ॥ ಎಂ. ಎಸ್. ಸುಂಕಾಪುರ
ಡಾ॥ ಕೆ. ಕೃಷ್ಣಮೂರ್ತಿ
ಡಾ॥ ಡಿ. ಎಸ್. ಕರ್ಕಿ
ಶ್ರೀ ಪಾಟೀಲ ಪುಟ್ಟಪ್ಪ
ಪ್ರೊ. ಚಂದ್ರಶೇಖರ ಪಾಟೀಲ
ಡಾ॥ ಎಂ. ಎಂ. ಕಲಬುರ್ಗಿ
ಡಾ॥ ಜಿ. ಎಸ್. ಕಾಪಸೆ (ಕಾರ್ಯದರ್ಶಿ)

ಸಮಿತಿಯವರು ಅಭಿನಂದನ ಗ್ರಂಥದ ಯೋಜನೆಯನ್ನು ರೂಪಿಸಿ, ಅದರ ಸಂಪಾದನಾ ಕಾರ್ಯವನ್ನು ಕಾರ್ಯದರ್ಶಿಗಳಿಗೆ ಒಪ್ಪಿಸಿದರು. ಆಗ ಪ್ರಾರಂಭವಾದ ಈ ಕಾರ್ಯ ಈಗ ಪೂರ್ಣಗೊಳ್ಳುತ್ತಲಿದೆ.

ಪ್ರಸ್ತುತ ಗ್ರಂಥದಲ್ಲಿ 'ನಚ್ಚುಗೆ–ಮೆಚ್ಚುಗೆ' 'ವಿಮರ್ಶೆ-ವಿಶ್ಲೇಷಣೆ' 'ಬಿಡಿ ಕವಿತೆಗಳ ವಿಶ್ಲೇಷಣೆ' 'ಮುನ್ನುಡಿ-ಅವಲೋಕನ' 'ಗದ್ಯ-ಕೃತಿಗಳು-ವಿಮರ್ಶೆ' 'ಸಂದರ್ಶನ ಇತ್ಯಾದಿ' ಭಾಗಗಳಿವೆ. ಮೊದಲನೆಯ ಭಾಗದಲ್ಲಿ ಹಿರಿಯರ ಹರಕೆ, ಮೆಚ್ಚುಗೆಯ ಮಾತುಗಳಿದ್ದು, ಎರಡನೆಯ ಭಾಗದಿಂದ ಕಣವಿಯವರ ಕಾವ್ಯದ ವಿವಿಧ ಮುಖ ವಿಮರ್ಶೆ ಪ್ರಾರಂಭವಾಗುತ್ತದೆ. 'ಮುನ್ನುಡಿ-ಅವಲೋಕನ'ಗಳು ಈಗಾಗಲೇ ಪ್ರಕಟವಾಗಿದ್ದರೂ ಕಣವಿಯವರ ಕಾವ್ಯಾಭ್ಯಾಸಕ್ಕೆ ಪೂರಕವಾದವುಗಳೆಂಬ ಕಾರಣದಿಂದ ಇಲ್ಲಿ ಸಮಾವೇಶಗೊಳಿಸಲಾಗಿದೆ. ಈ ಅಭಿನಂದನ ಗ್ರಂಥವು ಒಟ್ಟಾಗಿ ಸಮಕಾಲೀನ ಕವಿಯ ಅಭ್ಯಾಸದ ದೃಷ್ಟಿಯಿಂದ ಯೋಜಿತವಾಗಿದೆಯೆಂದು ಹೇಳಬಹುದು.

ಹರಕೆ ನೀಡಲು, ಲೇಖನ ಬರೆಯಲು ನಾವು ಬಿನ್ನವಿಸಿದೊಡನೆ ಅತ್ಯಂತ ಸಂತೋಷದಿಂದ ಒಪ್ಪಿಕೊಂಡ ಎಲ್ಲ ಹಿರಿಯರು, ಸ್ನೇಹಿತರು ಕಾಗದ ಬರೆದು, ಲೇಖನಗಳನ್ನು ಕಳಿಸಿ ಸಹಕರಿಸಿದರು. ಈ ಗ್ರಂಥದ ಶ್ರೇಯಸ್ಸು ನಿಜವಾಗಿ ಅವರಿಗೇ

ಸಲ್ಲುವಂತಹದು. ಅಭಿನಂದನ ಗ್ರಂಥ ಸಮಿತಿಯ ಪರವಾಗಿ ಅವರೆಲ್ಲರಿಗೂ ನನ್ನ ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುವೆ.

ಗ್ರಂಥ ಸಮಿತಿಯ ಎಲ್ಲ ಸದಸ್ಯರು ತಮ್ಮ ಸೂಕ್ತ ಸಲಹೆಗಳನ್ನು ನೀಡಿ, ಉಪಕರಿಸಿರುವರು. ಈ ಸಂದರ್ಭದಲ್ಲಿ ಸಮಿತಿಯಲ್ಲಿಲ್ಲದಿದ್ದರೂ, ಸಮಿತಿಯವರಷ್ಟೇ ಜವಾಬ್ದಾರಿಯಿಂದ ಸಲಹೆಯನ್ನು ನೀಡುವಲ್ಲಿ, ಗ್ರಂಥವು ಪ್ರಕಟಗೊಳ್ಳಲು ವ್ಯವಸ್ಥೆ ಮಾಡುವಲ್ಲಿ ಮಹತ್ವದ ಪಾತ್ರವಹಿಸಿದ ಡಾ॥ ಜಿ. ಎಸ್. ಶಿವರುದ್ರಪ್ಪನವರನ್ನು ಮರೆಯುವುದು ಸಾಧ್ಯವಿಲ್ಲ. ಮೈಸೂರಿನ ವಾಗ್ದೇವಿ ಎಂಟರ್ ಪ್ರೈಸಸ್‌ನಲ್ಲಿ ಈ ಗ್ರಂಥ ಪ್ರಕಾಶನಗೊಳ್ಳುವಂತೆ ನೋಡಿಕೊಂಡ ಶ್ರೀ ಎನ್. ಚಂದ್ರಪ್ಪ ಹಾಗೂ ಆ ಪ್ರಕಾಶನದ ಬಳಗದವರೂ ನಮ್ಮ ನೆನಕೆಗೆ ಪಾತ್ರರಾಗಿದ್ದಾರೆ. ಸುಂದರವಾದ ಹೊದಿಕೆಯ ಚಿತ್ರವನ್ನು ರೂಪಿಸಿದ ಕಲಾವಿದ ಶಂಕರ ಪಾಟೀಲರು ನಮ್ಮವರೆ. ಮೈಸೂರಿನಲ್ಲಿ ಮುದ್ರಣ ಕಾರ್ಯ ಪ್ರಾರಂಭವಾದಾಗ ಕರಡಚ್ಚು ಓದುವ ಕಾರ್ಯದಲ್ಲಿ ಪ್ರೊ. ಎಂ. ಅಕಬರ ಅಲಿಯವರು ಆತ್ಮೀಯತೆಯಿಂದ ಸಹಕರಿಸಿದವರು. ಈ ಎಲ್ಲ ಬಳಗಕ್ಕೆ ಆತ್ಮೀಯ ವಂದನೆಗಳು.

ಕಾವ್ಯಾಭ್ಯಾಸಿಗಳ ದೃಷ್ಟಿಯಿಂದ ಒಂದು ಮಾತು : ಕಣವಿಯವರ ವ್ಯಕ್ತಿತ್ವ, ಕಾವ್ಯ, ವಿಮರ್ಶೆ ಮುಂತಾದುವುಗಳನ್ನು ಕುರಿತು ಅಭ್ಯಾಸಪೂರ್ಣವಾದ ಸಾಮಗ್ರಿ ಇಲ್ಲಿರುವುದನ್ನು ಯಾರೂ ಗುರುತಿಸಬಹುದು. ಅವಸರದಲ್ಲಿ ಒಂದೆರಡು ಕಡೆ ಕ್ರಮ ತಪ್ಪಿರುವುದುಂಟು. ಬಿಡಿಕವಿತೆಗಳ ವಿಶ್ಲೇಷಣೆಗೆ ಸಂಬಂಧಿಸಿದಂತೆ 'ಜಾ. ಗೋ' ಅವರ 'ವಿನಾಯಕರಿಗೆ ವಂದನೆ' ಎಂಬ ಕವಿತೆಯ ವಿಶ್ಲೇಷಣೆ, ತನ್ನ ವಿಭಾಗದಲ್ಲಿ ಬರದೆ, 'ಮುನ್ನುಡಿ-ಅವಲೋಕನ' ವಿಭಾಗದಲ್ಲಿ ಸೇರಿಕೊಂಡಿದೆ. ಹಾಗೆಯೇ ವಿಶ್ಲೇಷಣೆಗೊಂಡ ಕೆಲ ಕವಿತೆಗಳು ಆಯಾ ಲೇಖನಗಳ ಜೊತೆಗೆ ಬರದೆ ಬೇರೆಡೆಗೆ ಒಟ್ಟಾಗಿ ಬಂದಿವೆ. ಇವುಗಳನ್ನು ಸಹೃದಯರು ಗಮನಿಸಬೇಕಾಗಿ ಕೇಳಿಕೊಳ್ಳುವೆ.

ಕನ್ನಡ ಅಧ್ಯಯನ ಪೀಠ
ಕರ್ನಾಟಕ ವಿಶ್ವವಿದ್ಯಾಲಯ
ಧಾರವಾಡ
೧೦-೩-೧೯೮೦

ಜಿ.ಎಸ್. ಕಾಪಸೆ.

# ಪ ರಿ ವಿ ಡಿ

ಸಂಪಾದಕನ ಮಾತು

ನಚ್ಚುಗೆ–ಮೆಚ್ಚುಗೆ (ವ್ಯಕ್ತಿತ್ವವನ್ನು ಕುರಿತು)

| | | |
|---|---|---|
| ಬೆಲೆಯುಳ್ಳ ಕಾಣಿಕೆ | ಮಾಸ್ತಿ ವೆಂಕಟೇಶ ಅಯ್ಯಂಗಾರ್ | 3 |
| ಹೊಸ-ಹಳತರ ಸಾಮರಸ್ಯ | ವಿ. ಸೀತಾರಾಮಯ್ಯ | 4 |
| ಸರಳ, ಸ್ನೇಹಪರ | ಶಿವರಾಮ ಕಾರಂತ | 5 |
| ತರುಣರಿಗೆ ಆದರ್ಶಪ್ರಾಯ | ಕುವೆಂಪು | 6 |
| ಶುದ್ಧ ಅಭಿರುಚಿ, ದೈವಿಕ ಸಂಪತ್ತು | ಗೊರೂರು ರಾಮಸ್ವಾಮಿ ಅಯ್ಯಂಗಾರ್ | 7 |
| ಪ್ರೇಮಲ ಮನಸ್ಸು, ರಸಿಕ ಹೃದಯ | ಪು. ತಿ. ನರಸಿಂಹಾಚಾರ್ | 12 |
| ಸಮತೋಲನದ ನಿಲವು | ಸಿಂಪಿ ಲಿಂಗಣ್ಣ | 15 |
| ಸೂಕ್ಷ್ಮಾಂತಃಕರಣದ ಪ್ರಜ್ಞೆ | ವಿ. ಕೃ. ಗೋಕಾಕ | 17 |
| ನವನವೋನ್ಮೇಷ ಪ್ರತಿಭಾ ವಿಲಾಸ | ಜಿ. ಆರ್. ಪಾಂಡೇಶ್ವರ | 19 |
| ಚೆಂಬೆಳಕಿನ ಕವಿ | ಡಿ. ಎಸ್. ಕರ್ಕಿ | 21 |
| ವಯಸ್ಸಿಗೆ ಮೀರಿದ ಪ್ರೌಢಿಮೆ | ಸ. ಸ. ಮಾಳವಾಡ | 22 |
| ಜ್ಞಾನದಾಸೋಹಿ, ಭಾವಜೀವಿ | ಎಚ್. ದೇವೀರಪ್ಪ | 28 |
| ಮಿತ ನುಡಿ, ಹಿತಪಾಕ | ಜಿ. ವೆಂಕಟಸುಬ್ಬಯ್ಯ | 32 |
| ಅನ್ವರ್ಥಕ | ವಿ. ಎಂ. ಇನಾಮದಾರ | 34 |
| ನಾನು ಮತ್ತು ಕಣವಿ | ಕೆ. ಎಸ್. ನರಸಿಂಹಸ್ವಾಮಿ | 38 |
| ಸುಸಂಸ್ಕೃತ ಸಹೃದಯ ಸ್ನೇಹಿತ | ಎಂ. ಗೋಪಾಲಕೃಷ್ಣ ಅಡಿಗ | 40 |
| ಲೇಸಿನ ಉಪಾಸಕ | ಸಿದ್ದಯ್ಯ ಪುರಾಣಿಕ | 42 |
| ಸುಸಂಸ್ಕೃತ ಚೇತನ | ದೇ. ಜವರೇಗೌಡ | 45 |
| ಚೆಂಬೆಳಕಿನ ಚೆನ್ನ | ಬಸವರಾಜ ಕಟ್ಟೀಮನಿ | 49 |
| ಸೂಕ್ಷ್ಮ ಸಂವೇದನಾಶೀಲ | ರಾ. ಯ. ಧಾರವಾಡಕರ | 58 |
| ಕಣವಿ ವ್ಯಕ್ತಿತ್ವ : ಕೆಲವು ಅನಿಸಿಕೆಗಳು | ಕೆ. ಕೃಷ್ಣಮೂರ್ತಿ | 59 |
| ಬದುಕಿಗೆ ಬೆಲೆ ತಂದು ಕೊಟ್ಟ ಕವಿ | ಪಾಟೀಲ ಪುಟ್ಟಪ್ಪ | 62 |

| | | |
|---|---|---|
| ಅರಿತ ಕವಿ–ಸಂರಿತ ಯೋಜಕ | ಆರ್. ಸಿ. ಹಿರೇಮಂಠ | 66 |
| ಭಾವಜೀವಿ | ಸು. ರಂ. ಯಕ್ಕುಂಡಿ | 69 |
| ಕಣವಿ ದಂಪತಿಗಳು | ಶಾಂತಾದೇವಿ ಮಾಳವಾಡ | 72 |
| ಚೆನ್ನವೀರ ಕಣವಿ–ನಾನು ಕಂಡಂತೆ | ಗೀತಾ ಕುಲಕರ್ಣಿ | 76 |
| ನಾ ಕಂಡ ಕಣವಿ | ಎಚ್, ತಿಪ್ಪೇರುದ್ರಸ್ವಾಮಿ | 79 |
| ಪ್ರಶಾಂತ ಬದುಕಿನಲ್ಲಿ ಒಂದೆರಡು ಅಲೆಗಳು | ಪಿ. ಲಂಕೇಶ್ | 81 |
| ಬದುಕು ಬರಹಗಳ ಸಮತೂಕ | ಎಚ್. ಎಂ. ಮರುಳಸಿದ್ಧಯ್ಯ | 84 |
| ಸ್ನೇಹ–ಸಂಪದ | ಬಿ. ಎ. ಸನದಿ | 92 |
| ಕಿರಿಯರೊಂದಿಗೆ ಕಣವಿ : | ದೇಶಪಾಂಡೆ ಸುಬ್ಬರಾಯ | 96 |
| ಜೀವನ ಸಂಗಾತಿ | ಶಾಂತಾದೇವಿ ಕಣವಿ | 103 |
| ನಮ್ಮ ತಂದೆ | ರಂಜನಾ ಕಣವಿ | 107 |
| ಕವನ ಕಾಣಿಕೆ | ದಿನಕರ ದೇಸಾಯಿ | 112 |
| ಚೆನ್ನವೀರ ಕಣವಿ–ಕವಿ ಮತ್ತು ವ್ಯಕ್ತಿ | ಸದಾಶಿವ ಒಡೆಯರ | 114 |


## ವಿಮರ್ಶೆ–ವಿಶ್ಲೇಷಣೆ (ಕಾವ್ಯದ ವಿವಿಧ ಮುಖಗಳನ್ನು ಕುರಿತು)


| | | |
|---|---|---|
| ಕಣವಿಯವರ ಕಾವ್ಯದ ಜೀವಂತ ಗತಿ | ಜಿ. ಎಸ್, ಶಿವರುದ್ರಪ್ಪ | 119 |
| ಕಣವಿಯವರ ಕಾವ್ಯದ ಬೆಳವಣಿಗೆ : ಎದ್ದು ಕಾಣುವ ಅಂಶಗಳು | ರಂ. ಶ್ರೀ ಮುಗಳಿ | 129 |
| ಕಣವಿಯವರ ಕಾವ್ಯದಲ್ಲಿ "ಶ್ರುತಿ ನಿಯೋಜನ" | ಗೌರೀಶ ಕಾಯ್ಕಿಣಿ | 134 |
| ಕಣವಿಯವರ ಕಾವ್ಯದಲ್ಲಿ ನಿಸರ್ಗ | ಎಸ್. ಎಸ್. ಕೋತಿನ | 153 |
| ಕಣವಿಯವರ ಪ್ರೇಮ ಗೀತೆಗಳು | ಎಂ. ಅಕ್ಬರ್ ಅಲಿ | 177 |
| ಕಣವಿಯವರ ಕಾವ್ಯ ಮಾರ್ಗ ಮತ್ತು ಅವರ ಶಿಶುಗೀತೆಗಳು | ದಿರಡ್ಡಿ ಗೋವಿಂದರಾಜ | 185 |
| ಕಣವಿಯವರ ಯುಗಾದಿ ಕವಿತೆಗಳು | ಡಿ. ಲಿಂಗಯ್ಯ | 203 |
| ಕಣವಿಯವರ ಸುನೀತಗಳು | ಶಾಂತಿನಾಥ ದೇಸಾಯಿ | 216 |
| ಕಣವಿಯವರ ಸುನೀತಗಳಲ್ಲಿ ವ್ಯಕ್ತಿ ಚಿತ್ರಗಳು | ಜಿ. ಎಂ. ಹೆಗಡೆ | 224 |

| | | |
|---|---|---|
| ಕಣವಿಯವರ ಕಾವ್ಯದಲ್ಲಿ ಪ್ರತಿಮೆಗಳು | ಕ. ವೆಂ. ರಾಜಗೋಪಾಲ | 235 |
| ಕಣವಿಯವರ ಏಳು ಬಲ ಪದ್ಯಗಳು | ಸಿದ್ಧಲಿಂಗ ಪಟ್ಟಣ ಶೆಟ್ಟಿ | 241 |
| ನೆಲ–ಮುಗಿಲಿನ 'ಚಿರಂತನ ದಾಹ' | ಜ. ಚ. ನಿ. | 248 |
| ಕಣವಿಯವರ ಕಾವ್ಯದಲ್ಲಿ ಧಾರವಾಡ ಪರಿಸರ | ಸಿದ್ಧಲಿಂಗ ದೇಸಾಯಿ | 254 |
| ಕಣವಿಯವರ ಕಾವ್ಯದ ಎರಡು ದಡ | ಕೀರ್ತಿನಾಥ ಕುರ್ತಕೋಟಿ | 258 |
| ಕಣವಿಯವರ ಕಾವ್ಯದಲ್ಲಿ ವಿಡಂಬನೆ | ಕಾಳೇಗೌಡ ನಾಗವಾರ | 262 |
| ಕಣವಿಯವರ ಕಾವ್ಯದಲ್ಲಿ ಸಮಕಾಲೀನ ಪ್ರಜ್ಞೆ | ಅಲ್ಲಮಪ್ರಭು ಬೆಟ್ಟದೂರು | 268 |
| ಕಣವಿಯವರ ನಾಲ್ಕು ಕವನಗಳು : ಒಂದು ಟಿಪ್ಪಣಿ | ಚಂದ್ರಶೇಖರ ಪಾಟೀಲ | 274 |
| ಕಣವಿಯವರ ಕಾವ್ಯದಲ್ಲಿ ಎರಡು ಪ್ರಮುಖ ಜನಪದ ಅಂಶಗಳು | ದೇವೇಂದ್ರಕುಮಾರ ಹಕಾರಿ | 277 |
| ಕಣವಿಯವರ ಕಾವ್ಯ ಭಾಷೆ | ಎಂ. ಎಚ್. ಕೃಷ್ಣಯ್ಯ | 287 |
| ಕಣವಿಯವರ ಕವಿತೆಗಳ ಛಂದಸ್ಸನ್ನು ಕುರಿತು | ಎಂ. ಚಿದಾನಂದ ಮೂರ್ತಿ | 304 |
| ನವೋದಯ ಪರಂಪರೆ ಮತ್ತು ಕಣವಿ | ಪ್ರಭುಸ್ವಾಮಿ ಮಠ | 313 |
| ಕಣವಿಯವರ ನವ್ಯ ಮಾರ್ಗ | ಶಾಮಸುಂದರ ಬಿದರಕುಂದಿ | 326 |
| ಬಿಡಿ ಕವಿತೆಗಳ ವಿಶ್ಲೇಷಣೆ : | | |
| ಕಣವಿಯವರ 'ಭಾವಜೀವಿ' | ಕೆ. ಬಿ. ಪ್ರಭುಪ್ರಸಾದ | 341 |
| 'ಭಾವಜೀವಿ' | ಗುಂಡ್ಮಿ ಚಂದ್ರಶೇಖರ ಐತಾಳ | 350 |
| 'ಕಾಲ ನಿಲ್ಲುವುದಿಲ್ಲ' | ವೇಣುಗೋಪಾಲ ಸೊರಬ | 360 |
| 'ನಗರದಲ್ಲಿ ನೆರಳು' | ಎಂ. ವಿ. ಸೀತಾರಾಮಯ್ಯ | 367 |
| 'ನಗರದಲ್ಲಿ ನೆರಳು' | ಎಲ್. ಎಸ್. ಶೇಷಗಿರಿರಾವ್ | 373 |
| 'ಅಪರಾವತಾರ' | ಅ. ರಾ. ಮಿತ್ರ | 377 |
| 'ನೀಲಾಂಬಿಕೆ' | ಶಾಂತರಸ | 383 |
| 'ಹುಲ್ಲು' | ಗೌರೀಶ ಕಾಯ್ಕಿಣಿ | 389 |
| 'ನಂಬಿಕೆ' ಒಂದು ವಿಶ್ಲೇಷಣೆ | ಜಿ. ಎಸ್. ಕಾಪಸೆ | 396 |
| 'ಎಪ್ಪತ್ತರ ಬೇಂದ್ರೆ' | ಎಂ. ಎಂ. ಕಲಬುರ್ಗಿ | 406 |

ಮುನ್ನುಡಿ–ಅವಲೋಕನ :

| | | |
|---|---|---|
| 'ಕಾವ್ಯಾಕ್ಷಿ' | ದ. ರಾ. ಬೇಂದ್ರೆ | 413 |
| 'ಭಾವಜೀವಿ' | ವಿ. ಕೃ. ಗೋಕಾಕ | 415 |
| 'ಮಧುಚಂದ್ರ' | ಕೆ. ಕೃಷ್ಣಮೂರ್ತಿ | 421 |
| 'ನೆಲ-ಮುಗಿಲು' | ದ. ರಾ. ಬೇಂದ್ರೆ | 434 |
| 'ವಿನಾಯಕರಿಗೆ ವಂದನೆ' | ಜಾ. ಗೋ. | 439 |
| 'ಎರಡು ದಡ' | ಶಂಕರ ಮೊಖಾಶಿ ಪುಣೇಕರ | 444 |

ಗದ್ಯ ಕೃತಿಗಳು–ವಿಮರ್ಶೆ :

| | | |
|---|---|---|
| 'ಸಾಹಿತ್ಯ ಚಿಂತನ' | ಸಿ. ಪಿ. ಕೆ. | 451 |
| 'ಸಮಾಹಿತ' | ಹಾ. ಮಾ. ನಾಯಕ | 455 |
| ಕವಿ ವಿಮರ್ಶಕನಾಗಿ– ವಿಮರ್ಶಕನು ಕವಿಯಾಗಿ | ಸಾ. ಶಿ. ಮರುಳಯ್ಯ | 460 |
| ಕಣವಿಯವರ ವಿಮರ್ಶಾಕೃತಿ : ಆಧುನಿಕ ಕಾವ್ಯ ಸಂದರ್ಭದಲ್ಲಿ | ಎಚ್. ಜಿ. ಲೋಕೂರ | 478 |
| ಜನಪದ ಸಾಹಿತ್ಯವನ್ನು ಕುರಿತು ಕಣವಿಯವರ ವಿಚಾರ ವಿಮರ್ಶೆ | ಬಸವರಾಜ ಮಲಶೆಟ್ಟಿ | 488 |

ಸಂದರ್ಶನ ಇತ್ಯಾದಿ

| | | |
|---|---|---|
| ಸಮಕಾಲೀನ ಪ್ರಜ್ಞೆಯ ಕವಿ ಕಣವಿ | ಜಯಸುದರ್ಶನ | 497 |
| ಕಣವಿಯವರ ಜೊತೆ ಅನುವಾದಕನಾಗಿ | ಕೆ. ರಾಘವೇಂದ್ರರಾವ್ | 504 |
| ಕಣವಿಯವರ ಜ್ಞಾನಪ್ರಸಾರ ಕಾರ್ಯ | ಬಿ. ಎಚ್. ಶ್ರೀಧರ | 508 |
| ಜಿಜ್ಞಾಸೆ ಕೆರಳಿಸುವ ಕವಿ | ಬಂದ್ದಣ್ಣ ಹಿಂಗಮಿರೆ | 515 |

| | | |
|---|---|---|
| ವಿಶ್ಲೇಷಣೆಗೊಂಡ ಕೆಲವು ಕವಿತೆಗಳು | | 519 |
| ಅನುಬಂಧ : | ಕಣವಿಯವರ ಬದುಕಿನ ಹೆಜ್ಜೆಗಳು | 537 |
| 'ಚೆಂಬೆಳಕಿ'ನ ಲೇಖಕ ಬಳಗ | | 539 |



' ಉದಯ ರವಿ ' ಯ  ಸನ್ನಿಧಿಯಲ್ಲಿ



ವರಕವಿಯೊಂದಿಗೆ ರಸ ನಿಮಿಷ



ಕುಟುಂಬ ವತ್ಸಲ



ಸ್ನೇಹ ಜೀವಿ



ಅಧ್ಯಯನ – ಆಲೋಚನ



ಗುರು ಹಿರಿಯರ ಅಭಿಮಾನಿ



ಕಾರ್ಯರಂಗ : ಪ್ರಸಾರಾಂಗ



ಐವತ್ತರ ಸನ್ಮಾನ

ಮಾಸ್ತಿ ವೆಂಕಟೇಶ ಅಯ್ಯಂಗಾರ

# ಬೆಲೆಯುಳ್ಳ ಕಾಣಿಕೆ

ನನ್ನ ತರುಣ ಮಿತ್ರರು ಶ್ರೀ ಚೆನ್ನವೀರ ಕಣವಿಯವರಿಗೆ ಸ್ನೇಹಿತರು ಅಭಿನಂದನ ಗ್ರಂಥವನ್ನು ಒಪ್ಪಿಸಲು ನಿಶ್ಚಯಿಸಿರುವುದು ತಿಳಿದು ನನಗೆ ತುಂಬ ಸಂತೋಷ ಆಗಿದೆ. ಶ್ರೀಯುತರನ್ನು ನಾನು ಹತ್ತಿರ ಹತ್ತಿರ ಮುವ್ವತ್ತು ವರ್ಷಗಳ ಕಾಲ ಕಂಡಿದ್ದೇನೆ. ಅವರು ವಿದ್ಯಾರ್ಥಿದೆಸೆಯಲ್ಲಿಯೇ ಬರೆದ ಒಳ್ಳೆಯ ಕವಿತೆಗಳನ್ನು ನಾನು ಸಂಪಾದಿಸುತ್ತಿದ್ದ ಜೀವನ ಪತ್ರಿಕೆಯಲ್ಲಿ ಪ್ರಕಟಿಸಿ ಅವರ ಕೃತಿಯನ್ನು ಒಪ್ಪಿರುವುದನ್ನು ಸ್ಪಷ್ಟಪಡಿಸಿದ್ದೇನೆ. ಅಲ್ಲಿಂದೀಚೆಗೆ ಕಣವಿಯವರು ನಮ್ಮ ಭಾಷೆಗೆ ತುಂಬ ಬೆಲೆಯ ಅನೇಕ ಕೃತಿಗಳನ್ನು ಕಾಣಿಕೆ ಸಲ್ಲಿಸಿದ್ದಾರೆ, ಮಿತ್ರರು ಇವರಿಗೆ ಈ ಬಗ್ಗೆ ಸಂತೋಷಗೊಳಿಸಿ ಗೌರವ ತೋರುವುದು ತುಂಬ ಯುಕ್ತ. ಈ ಸಂಬಂಧದ ಉತ್ಸವದ ಸಂದರ್ಭದಲ್ಲಿ ನಾನು ಮಿತ್ರರೊಡನೆ ಸೇರಿ ಭಗವಂತನು ಶ್ರೀಯುತರಿಗೆ ದೀರ್ಘಾಯುಸ್ಸು ಆರೋಗ್ಯಗಳನ್ನು ದಯಪಾಲಿಸಿ ಅವರಿಂದ ನಮ್ಮ ಭಾಷೆಗೆ ಮತ್ತಷ್ಟು ಬೆಲೆಯ ಮತ್ತಷ್ಟು ಸೇವೆ ಸಲ್ಲುವಂತೆ ಅನುಗ್ರಹಿಸಲಿ ಎಂದು ಪ್ರಾರ್ಥಿಸುತ್ತೇನೆ.

## ವಿ. ಸೀತಾರಾಮಯ್ಯ

# ಹೊಸ-ಹಳತರ ಸಾಮರಸ್ಯ

ಕವಿ ಚೆನ್ನವೀರ ಕಣವಿಯವರ ಸನ್ಮಾನದಿಂದ ಸಂತೋಷಪಡದ ಕನ್ನಡ ಸಾಹಿತಿಗಳಿರಲಾರರು. ಅವರು ಮೂಲತಃ ಉತ್ತಮ ಕವಿಗಳು. ಅವರಿಂದ ನಾನಂತೂ ಇನ್ನೂ ಕವಿತೆಯ ರಚನೆಗೇ ಕಾಮಿಸುವವನು. ಹೊಸ-ಹಳ ಎರಡರ ಸಾಮರಸ್ಯವನ್ನು ಕಾಣುವ ಹಂಬಲ, ಕ್ರಿಯಾತಂತ್ರ ಅವರಲ್ಲಿದೆ. ಜೊತೆಗೆ ಅವರ ಲೇಖನದಲ್ಲಿ ಕಲೆಯ ನಯ, ಕೋಮಲತೆಗಳಿವೆ. ಶಕ್ತಿ (power) ಇಲ್ಲವೆಂದಲ್ಲ; ಆದರ ಜೊತೆಗೆ ಸತ್ಯಂ ಸೂನೃತಂ ಬ್ರೂಯಾತ್ ಎಂಬಂತೆ ಕಠಿನ ಸತ್ಯವನ್ನು ಪ್ರಿಯವಾಗಿ ಹೇಳಬಲ್ಲ ಶಕ್ತಿ ಅಪರೂಪ.

ಅವರನ್ನು ಅಧಿಕಾರ ಸ್ಥಾನದಲ್ಲಿ ಕೂಡಿಸಿದುದು ಸೃಜನ ಕಾರ್ಯಕ್ಕೆ ಎಷ್ಟು ಮಟ್ಟಿಗೆ ಉಪಕಾರವೋ ನಾನರಿಯೆ. ಆದರೆ ಅಂಥ ಸ್ಥಳದಲ್ಲಿ ಅವರಿರುವಾಗ ಮೇಲ್ತರದ ಗ್ರಂಥ ಸಮೂಹ ಬೆಳಕು ಕಾಣಲು ದಾರಿ ತೆರೆಯುತ್ತದೆಯಾಗಿ ಅದೂ ಉಪಕಾರವೇ. ಆದರೆ ಅವರ ಕೃತಿನಿರ್ಮಾಣ ನಡೆಯಲೆಂದು ಹಾರೈಸುವವನು ನಾನು.

## ಶಿವರಾಮ ಕಾರಂತ

# ಸರಳ–ಸ್ನೇಹಪರ

ಶ್ರೀ ಚೆನ್ನವೀರ ಕಣವಿಯವರ ಹೆಸರು ಪರಿಚಯ ದೀರ್ಘಕಾಲದ್ದು ; ಆದರೆ ಅವರನ್ನು ನಾನು ಚೆನ್ನಾಗಿ ಬಲ್ಲೆ ಎಂಬಷ್ಟು ಸಮೀಪದ ಸ್ನೇಹಾವಕಾಶ ದೊರಕಿದ್ದಿಲ್ಲ. ತೀರ ಮೊದಲ ಬಾರಿಗೆ, ಏನಾದರೂ 25 ವರ್ಷಗಳ ಕೆಳಗೆ ಅವರ ಒಂದು ಕವನ ಸಂಗ್ರಹವನ್ನು ಬಿಡುಗಡೆಗೊಳಿಸುವ ಕಾರ್ಯಕ್ರಮ ಧಾರವಾಡದ ವಿದ್ಯಾವರ್ಧಕ ಸಂಘದಲ್ಲಿ ನಡೆದಾಗ ನಾನು ಅದಕ್ಕೆ ಸಾಕ್ಷಿಯಾಗಿದ್ದೆ. ಅವರ ತರುಣ ಉತ್ಸಾಹೀ ಆಕೃತಿ ನನ್ನ ಮನಸ್ಸನ್ನು ಸೆಳೆದಿತ್ತು. ಮುಂದೆ ಸಂಚಾರಿಜೀವಿಯಾದ ನಾನು ಧಾರವಾಡದಲ್ಲೋ ಇತರ ಕಡೆಗಳಲ್ಲೋ ಕೆಲಕೆಲವು ನಿಮಿಷಗಳ ಭೇಟಿಯಾಗಿ ಮಾತ ನಾಡಿದ ಸಂದರ್ಭಗಳೂ ಇವೆ. ಅವರ ಸರಳ, ಸ್ನೇಹಪರ ಶೀಲ ಅಂದಿನಿಂದ ಇಂದಿನ-ತನಕ ಒಂದೇ ರೀತಿ ಬೆಳೆದು ಬಂದಿರುವುದನ್ನು ಕಂಡಿದ್ದೇನೆ. ಅವರ ಹೆಸರನ್ನು ಕೇಳಿದಾಗ, ಅವರ ವಿಷಯ ಓದುವಾಗ ಮನಸ್ಸಿಗೆ ಸಂತೋಷವಾಗುತ್ತದೆ.

ಈ ನಿಡುಗಾಲದಲ್ಲಿ ಅವರನ್ನು ಕುರಿತ ನನ್ನ ಕಣ್ಣಳತೆ ಕುಗ್ಗುವುದಕ್ಕೆ ಯಾವ ಕಾರಣವೂ ದೊರೆತಿಲ್ಲ. ಅವರ ವ್ಯಕ್ತಿತ್ವದ ಬಿಂಬ ಒಂದೇ ರೀತಿ ಕಾಣಿಸುತ್ತಿದೆ. ಆಯುಸ್ಸು ತುಂಬಿದಂತೆ ಅವರ ವ್ಯಕ್ತಿತ್ವ ಇನ್ನಷ್ಟು ಪಕ್ವವಾಗಿ ಅವರಿಗೂ ಅವರ ಮಿತ್ರರಿಗೂ ಸವಿ, ಸಂತೋಷಗಳು ಹೆಚ್ಚಲಿ–ಎಂದು ಹಾರೈಸುತ್ತೇನೆ.

**ಕುವೆಂಪು**

# ತರುಣರಿಗೆ ಆದರ್ಶ ಪ್ರಾಯ

ಇಂದಿನ ಕನ್ನಡ ಕವಿ ಪಂಕ್ತಿಯಲ್ಲಿ ಶ್ರೀಮಾನ್ ಕಣವಿಯವರು ಉತ್ತಮವಾದ ಸ್ಥಾನ ಪಡೆದಿದ್ದಾರೆ. ಅನೇಕ ತರುಣ ಕವಿಗಳಿಗೆ ಆದರ್ಶವಾಗಿದ್ದಾರೆ. ಅವರಿಗೆ 50 ವರ್ಷ ತುಂಬಿದ ಸಂದರ್ಭದಲ್ಲಿ ಒಂದು ಅಭಿನಂದನ ಗ್ರಂಥವನ್ನು ತರಲಿರುವುದು ಅತ್ಯಂತ ಸಮಯೋಚಿತವೂ ವಿಹಿತವೂ ಆಗಿದೆ. ಅವರಿಗೆ ಹೃತ್ಪೂರ್ವಕವಾದ ಶುಭಾಶಯಗಳು.

## ಗೊರೂರು ರಾಮಸ್ವಾಮಿ ಅಯ್ಯಂಗಾರ್

# ಶುದ್ಧ-ಅಭಿರುಚಿ ದೈವಿಕ ಸಂಪತ್ತು

ಶ್ರೀಮಾನ್ ಚೆನ್ನವೀರ ಕಣವಿಯವರದು ಪ್ರಿಯವೂ ಆಕರ್ಷಣೀಯವೂ ಸ್ಪೃಹಣೀಯವೂ ಆದ ವ್ಯಕ್ತಿತ್ವ. ಒಂದು ಸಲ ನೋಡಿದ ಮೇಲೆ, ಅವರನ್ನು ಮರೆಯುವಂತೆ ಇಲ್ಲ. ನಾನು ಅವರನ್ನು ಮೊದಲು ಎಲ್ಲಿ ನೋಡಿದೆ ಎಂಬುದಂತೂ ನೆನಪಿಲ್ಲ, ಯಾವಾಗ ಅವರನ್ನು ನೆನೆಸಿಕೊಂಡರೂ, ಯಾವಾಗಿನಿಂದಲೂ ಅವರನ್ನು ನೋಡಿದ್ದೇನೆ ಎಂಬಂತೆ ನನ್ನ ಮನಸ್ಸಿಗೆ ತೋರುವುದು. ನನ್ನ ಅವರ ಪರಿಚಯದ ಸಮಯ-ಮಾನವನ ಕಾಲಮಾನದಿಂದ ಸ್ವಲ್ಪಕಾಲದ್ದಾಗಿ ಕಂಡರೂ-ಎರಡು ಮೂರು ಜನ್ಮಗಳಿಂದಲಾದರೂ ನಾವು ಸಂಧಿಸುತ್ತ ಬಂದಿರಬೇಕು ಎಂದು ನನ್ನ ಮನಸ್ಸಿಗೂ ಬುದ್ಧಿಗೂ ಅನುಭವಕ್ಕೂ ತೋರುತ್ತದೆ. ಬಾಹ್ಯ ದೃಷ್ಟಿಯಿಂದ ನಮಗೆ ಗೆಳೆಯರು ಬೇಕಾದವರು ಪರಿಚಿತರು-ವ್ಯವಹಾರ ಪ್ರಪಂಚದಲ್ಲಿ ಬೇಕಾದಷ್ಟು ಮಂದಿ ಇದ್ದಾರೆ. ಆದರೆ ಆಂತರಂಗಿಕವಾಗಿ ಮನಸ್ಸಿಗೆ ಒಪ್ಪಿಗೆಯಾದವರು– ತನ್ನ ಆತ್ಮದಷ್ಟೇ ತನಗೆ ಪ್ರಿಯರಾದವರು-ತನ್ನೊಂದಿಗೆ ಹಾಲು ಸಕ್ಕರೆ ಬೆರೆಯುವಂತೆ ಬೆರೆಯುವವರು ದೊರಕುವುದು ತೀರ ದುರ್ಲಭ. ನನಗೂ ಕೂಡ ಅಂತಹ ಮಿತ್ರರು ದೊರಕಿರುವವರು ಬೆರಳಿನಲ್ಲಿ ಎಣಿಸುವಷ್ಟು ಮಾತ್ರ. ಶ್ರೀಮಾನ್ ಕಣವಿಯವರು ಅವರಲ್ಲಿ ಒಬ್ಬರೆಂದು ಯೋಚಿಸುವಾಗ ಮನಸ್ಸು ತುಂಬ ನೆಮ್ಮದಿಯನ್ನು ಪಡೆಯುತ್ತದೆ. ನಾನು ಕಣವಿಯವರ ಹೆಸರನ್ನು ಮೊದಲು ಕೇಳಿದುದು ಅವರ 'ಕಾವ್ಯಾಕ್ಷಿ' ಕವಿತಾಸಂಕಲನ ಪ್ರಕಟವಾದಾಗ–ಇಪ್ಪತ್ತೈದು ವರುಷಗಳಿಗೂ ಹಿಂದೆಯೆ. ಆ ಸಂಗ್ರಹದಲ್ಲಿ ನಿಷ್ಕೃಷ್ಟವಾದ ಯಾವುದೇ ಒಂದು ಕವನ ನನಗೆ ಈಗ ನೆನಪಿಲ್ಲದಿದ್ದರೂ, ಇವರೊಬ್ಬ ಶುದ್ಧ ಅಭಿರುಚಿಯ ದೈವಿಕ ಸಂಪತ್ತಿನ ಕವಿ, ಎಂಬ ಭಾವ ನನ್ನಲ್ಲಿ ಮೂಡಿತು, ದಿನ ದಿನಕ್ಕೆ, ಅವರ ಕಾವ್ಯಗಳಲ್ಲಿನ ಪ್ರೀತಿ-ಅನಂತರ ಬಂದ ಸಂಕಲನಗಳೂ ಸಹ–ಅವರ ಮೇಲೆ ತಿರುಗಿ ನಾನೂ ಅವರೂ ಸಹ-ನನ್ನ ಮನಸ್ಸಿನ ಮಟ್ಟಿಗಂತೂ–ಅತ್ಯಂತ ಸಮೀಪ ಬಂಧುಗಳೇ ಆದೆವು. ವಾಸ್ತವವಾಗಿ ಅದು ಅವರ ಕಾವ್ಯದ ಮೇಲಿನ ಪ್ರೀತಿಯೆ. ಆದರೆ ಕಾವ್ಯದ ಮೇಲಿನ ಪ್ರೀತಿ, ವ್ಯಕ್ತಿಯ ಮೇಲಿನ ಪ್ರೀತಿಯಾಗಿ ಕೃತಿಗೆ ಪ್ರತಿಕೃತಿ ಆಗುವುದು ಬಹುವೇಳೆ ಸಂಭವ.

ಹೀಗಾಗಿ 1966ರಲ್ಲಿ, ಡಾ॥ ಹಾ. ಮಾ. ನಾಯಕರು, ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣ ಮಹೋತ್ಸವದ ಅಂಗವಾಗಿ–ಪ್ರಥಮ ಬಾರಿಗೆ ಡಾ॥ ಶಿವರಾಮ ಕಾರಂತರ ಅಧ್ಯಕ್ಷತೆಯಲ್ಲಿ ಏರ್ಪಡಿಸಿದ್ದ ಕನ್ನಡ ಲೇಖಕರ ಸಮ್ಮೇಳನದಲ್ಲಿ ನಾವು

ಮೊದಲನೆ ಬಾರಿಗೆ ಸಂಧಿಸಿದರೂ ಹತ್ತು ನಿಮಿಷ ಮಾತು ಕಥೆ ಆಡುವುದರೊಳಗೆ ಚಿರ ಪರಿಚಿತರೇ ಆದೆವು. ಅವರ ಸಹಧರ್ಮಿಣಿಯವರೂ ಸಹ, ಅವರ ಜೊತೆ ಇದ್ದರು. ಅವರೂ ಹೆಸರಾಂತ ಕಥೆಗಾರ್ತಿ ; ಕಣವಿಯವರು ದೇಹದಿಂದ ಬಡ ಆಳು-ಮನಸ್ಸಿನಿಂದಲೇ ಹೆಚ್ಚಾಗಿ ಬದುಕುತ್ತಿದ್ದಾರೆ ಎಂಬಂತೆ. ನಾನು ಅವರ ಹೆಂಡತಿಯವರಿಗೆ "ಇವರಿಗೆ ಸ್ವಲ್ಪ ಚೆನ್ನಾಗಿ ಹಾಲು ಮೊಸರು ಹಣ್ಣು ಹಾಕಿ ದಪ್ಪಮಾಡಿ" ಎಂದು ವಿನೋದ ಮಾಡಿದುದುಂಟು. ಆದರೆ ಈಚೆಗೆ ಅವರ ಮನೆಯಲ್ಲಿಯೇ ಹೋಗಿ ನೋಡಿದಾಗ "ಕಣವಿಯವರಿಗೆ ಮನೆಯಲ್ಲಿ ಉಪಚಾರ ಕಡಿಮೆ ಇಲ್ಲ, ಆದರೆ ಕುದುರೆಯನ್ನು ನೀರಿನ ದಡಕ್ಕೆ ಕರೆದುಕೊಂಡು ಹೋಗಬಹುದು, ಆದರೆ ಅದಕ್ಕೆ ನೀರು ಕುಡಿಸಲು ಸಾಧ್ಯವೆ" ಎಂಬ ಮಾತು ನೆನಪಾಯಿತು. ಅವರು ಯಾವಾಗಲೂ ಮಿತಾಹಾರಿ, ಮಿತಭಾಷಿ ಸಹ. ತಮ್ಮಲ್ಲಿಯೇ ತಾವು ತೃಪ್ತರು. ಅವರು ಉದ್ವೇಗ ಉದ್ರೇಕಗಳಿಗೆ ಮನಸ್ಸು ಕೊಡುವವರಲ್ಲ; ಸಂಯಮದ ವರ್ತನೆಯನ್ನು ಸಾಧಿಸಿದ್ದಾರೆ. ಮುಖದಲ್ಲಿ ಗಂಭೀರಭಾವವಿದ್ದರೂ, ಕಣ್ಣು ತೀಕ್ಷ್ಣವಾಗಿ, ಅಂಗಾಂಗಗಳು ಚುರುಕಿನ ಇಂದ್ರಿಯ ಪಟುತೆಯನ್ನು ಹೊಂದಿವೆ. ಅವರ ವಿನಯ, ಸಂಸ್ಕೃತಿಯ ಕುರುಹೇ ಹೊರತು ನಿರ್ಬಲ ಸೂಚನೆಯಲ್ಲ. ಕವಿ ಯಾದುದರಿಂದ ಅವರು "ಭೃಂಗದ ಬೆನ್ನೇರಿ ಕಲ್ಪನಾ ವಿಲಾಸದಲ್ಲಿ" ತೇಲಬಹುದು. ಈ ವಿನಯ ಕಾವ್ಯಪರಿಶ್ರಮದಿಂದ ರೂಪುಗೊಂಡುದು. ಆಧ್ಯಾತ್ಮ ಅನುಭವದಿಂದ ಗಟ್ಟಿ ಯಾದುದು. ಆದುದರಿಂದಲೇ ಡಾ॥ ಗೋಕಾಕರು "ಹಿಂದೆ ಚೆನ್ನಮಲ್ಲರು ಹಿಡಿದ ಹಾದಿಯನ್ನು, ಚೆನ್ನವೀರರು ಇಂದು ಹಿಡಿದು ಮುಂದುವರಿಸುತ್ತಿದ್ದಾರೆ" ಎಂದುದು.

ಕಣವಿಯವರ ಕವಿತಾ ಗುಣಮಾಧುರ್ಯಗಳನ್ನು ಕುರಿತು ನಾನು ಹೇಳುವುದೇನಿದೆ ? ಬೇಂದ್ರೆ, ಗೋಕಾಕರೆಲ್ಲ ಬಾಯ್ತುಂಬ ಹೊಗಳಿದ್ದಾರೆ.

ಕಣವಿಯವರು ಆಡುವ ಮಾತುಗಳು ಕಡಿಮೆಯಾದರೂ ತುಂಬ ಸ್ವಾರಸ್ಯವಾಗಿ ಆಡುತ್ತಾರೆ. ದಿವಂಗತ ದ. ಬಾ. ಕುಲಕರ್ಣಿ(ದತ್ತ) ನಮ್ಮಿಬ್ಬರಿಗೂ ಸಮಾನ ಮಿತ್ರ. ಆತನೊಬ್ಬ-ಒಂದು ದೃಷ್ಟಿಯಲ್ಲಿ ಕೀಟ್ಸ್‌ನಂತೆ ಬೆಳಗಿ ಹೊಳೆದು ಮರೆಯಾದ ವ್ಯಕ್ತಿ. ಆತನಲ್ಲಿ ಒಂದು ಅಪೂರ್ವ ಆಕರ್ಷಕ ಗುಣವಿತ್ತು. ಅವನು ತುಂಬ ಚಿಕ್ಕ ವನಾಗಿದ್ದರೂ-ನನ್ನ ಮಗನಿಗಿಂತ ಕಡಿಮೆ ವಯಸ್ಸು-ನಾನು ಅವನ ಮನೆಯಲ್ಲಿ ಹೋಗಿ ಇಳಿದುಕೊಳ್ಳುತ್ತಿದ್ದೆ. ಅವನೊಬ್ಬ ನಿಜವಾಗಿಯೂ ಸಾಹಸಿ, ಹೇಗೋ ಇದ್ದದ್ದರಲ್ಲಿ ತೃಪ್ತನಾಗಿ ಗೆಲುವಾಗಿ ನಗುನಗುತ ಸುಖವಾಗಿದ್ದು ಬಿಟ್ಟ ತುಂಬ ಪ್ರಿಯನಾದ ಪ್ರೇಮ ಪೂರ್ಣನಾದ ಅಕೃತ್ರಿಮ ಯುವಕ. ಅವನ ಸಾವಿನ ಸುದ್ದಿಕೇಳಿ ನನಗೂ ಸಿಡಿಲು ಬಡಿದಂತೆ ಆಯಿತು. ಆಗ ನಾನು ಶ್ರೀ ಬೆಟಗೇರಿ ಕೃಷ್ಣಶರ್ಮರು ನಡೆಸುತ್ತಿದ್ದ ಜಯಂತಿ ಪತ್ರಿಕೆಯ ವಿಶೇಷಾಂಕಕ್ಕೆ ದ. ಬಾ. ಕು. ಕುರಿತು ಒಂದು ಕಿರುಲೇಖನ ಬರೆದೆ. ನನ್ನ ಲೇಖನ ನನಗೆ ಅಷ್ಟೊಂದು ಸಮಾಧಾನವನ್ನು ಕೊಟ್ಟಿರಲಿಲ್ಲ. ಅನಂತರ ಕಣವಿ ಯವರು ಅವನ ಮೇಲೆ ಬರೆದಿದ್ದ ಸಾನೆಟ್‌ನ್ನು ಓದಿದಾಗ ಇದು ಅವನ ನೆನಪಿಗೆ

ಸರಿಯಾದ ಕಾಣಿಕೆ ಎಂದು ನನಗೆ ತುಂಬ ತೃಪ್ತಿಯೂ ಮನಸ್ಸಮಾಧಾನವೂ ಆಯಿತು. ಆ ವಿಷಯುವನ್ನೇ ಕಣವಿಯುವರೊಂದಿಗೆ ನಾನು ಚಿಂತಿಸಿದಾಗ ಅವರ ಅನುಭವ, ಅನಾಸಕ್ತಿ, ವಿಧಿಯ ವಿಕಟ ನರ್ತನದ ಅರ್ಥಶೂನ್ಯತೆ, ತರ್ಕಶೂನ್ಯತೆ ಇವೆಲ್ಲ ನನಗೆ ವಿದಿತವಾಯಿತು.

ಅನಂತರ ನಾವು ತರೀಕೆರೆಯಲ್ಲಿ ಪ್ರಥಮ ಕರ್ನಾಟಕ ಜಾನಪದ ಸಮ್ಮೇಳನದ ಕಾಲದಲ್ಲಿ ಸೇರಿದ್ದೆವು. ಆಗ ಕಣವಿಯುವರು ಅಲ್ಲಿ ತಮ್ಮ ಒಂದು ಪ್ರಬಂಧವನ್ನು ಮಂಡಿಸ ಬೇಕಾಗಿತ್ತು. ಬೇಂದ್ರೆಯವರು ತಾವು ಬರುವುದಕ್ಕೆ ಸಾಧ್ಯವಾಗದುದರಿಂದ ತಮ್ಮ ಉದ್ಘಾಟನೆಯ ಭಾಷಣವನ್ನು ಬರೆದು ಕಳುಹಿಸಿದ್ದರು. ಬೇಂದ್ರೆಯುವರ ಭಾಷಣವೇ ಒಂದು ಮಾಯಾಜಾಲ. ಅವರು ಓದುವುದೇ ಒಂದು ಝೋಕು, ಪ್ರಾಸ, ಕೈ ಕುಣಿತ, ಕಾಲಿನ ಕಿರುಮೃದಂಗ, ಮೀಸೆಮೇಲೆ ಕೈ, ಕಣ್ಣಿನ ಹೊಳಪು, ಶ್ಲೇಷೆ, ಕಟಕಿ ಹಾಸ್ಯ–ಅದೊಂದು ಶಬ್ದ ಸೃಷ್ಟಿ ಕರ್ತಾರನ ಕಮ್ಮಟ; ಬೇಂದ್ರೆಯುವರ ಗಾರುಡಿಗ ಅಭಿನಯವಿಲ್ಲದಿದ್ದರೆ, ಅದನ್ನು ಶ್ರೋತೃಗಳ ಕಿವಿಗೆ ದಾಟಿಸುವುದು ಕಷ್ಟ. ಆದರೆ ಕಣವಿ, ಬೇಂದ್ರೆಯವರೊಂದಿಗೆ ಸಹೃದಯ ಕವಿಯಲ್ಲವೆ? ಅಲ್ಲದೆ ಜಾನಪದ ಗರಡಿಯಲ್ಲಿ ಇವರೂ ಅವರಂತೆ ಪಳಗಿ ದವರು ತಾನೆ. ಬೇಂದ್ರೆಯುವರು ಬರೆದು ಕಳುಹಿಸಿದ್ದ ಭಾಷಣವನ್ನು ಕಣವಿಯುವರು ಅರ್ಥಪೂರ್ಣವಾಗಿ ಓದಿ ಮೆಚ್ಚಿಕೆಗೆ ಪಾತ್ರರಾದರು. ಇನ್ನು ಮಧ್ಯಾಹ್ನಾತ್ಪರ ಅವರೇ ತಮ್ಮ ಸ್ವಂತ ಭಾಷಣ (ಜಾನಪದ ಕಾವ್ಯದಲ್ಲಿ ಪ್ರತಿಮಾವಿಧಾನ) ಕುರಿತು ಸಂಪೂರ್ಣವಾದ ಪ್ರಬಂಧವನ್ನು ಮಂಡಿಸಿದರು. ಕವನ ಮಾತ್ರವೇ ಅಲ್ಲ, ಅವರ ಗದ್ಯ ಶೈಲಿಯೂ ಬಿಗಿಯೂ, ಪರಿಣಾಮಕಾರಿಯಾದುದೂ ನಿರ್ದುಷ್ಟವೂ ಶಕ್ತಿಯುತವೂ ಆಗಿದೆ. ಜಾನಪದದಲ್ಲಿ ಅವರು ಕೊಟ್ಟ ಮೊದಲನೆಯ ಪ್ರತಿಮೆಯ ಉದಾಹರಣೆಯೇ ನನ್ನನ್ನು ಬಹಳ ಆಕರ್ಷಿಸಿತು :

ಕೈಯಾಡಿ ಕಾಲಾಡಿ ತೋಳಾಡಿ ಭುಜವಾಡಿ
ನಾಗಸಂಪಿಗೆ ನಡುವಾಡಿ

ಹೀಗೆ ಬೀಸುವ ಹೆಣ್ಣು, ನಾಗರ ಹಾವಿನ ಪ್ರತಿಮೆ. ಆ ಬೀಸುವ ಹೆಣ್ಣಿನ ಪದ್ಯ, ನಾನು ಅನೇಕ ಸಲ ಓದಿ ಹಾವಿಗೂ ಹೆಣ್ಣಿಗೂ ಅಲ್ಲಿ ಹೋಲಿಕೆಯುನ್ನು ತಿಳಿದಿದ್ದೆನಾದರೂ ಅದು ಅಂತಹ ಪೂರ್ಣಪ್ರತಿಮೆಯ ಉದಾಹರಣೆ ಎಂಬುದು ನನಗೆ ಹೊಳೆದಿರಲಿಲ್ಲ. ಇಂಥ ಇನ್ನೂ ಅನೇಕ ಸೊಗಸಾದ ಪ್ರತಿಮೆಗಳನ್ನು ಅವರು ಜನಪದ ಸಾಹಿತ್ಯದಿಂದ ಎತ್ತಿ ತೋರಿಸಿ, ಅವುಗಳ ವಿವರಣೆಯನ್ನು ವಿಶದಪಡಿಸಿದರು. ಒಟ್ಟಿನಲ್ಲಿ ಅದೊಂದು ಉತ್ತಮ ವಿಮರ್ಶಾತ್ಮಕ ಲೇಖನ. ಈಚೆಗೆ ಅದು, ಇನ್ನೂ ಅಂತಹ ಇತರ ಅನೇಕ ಉತ್ತಮ ಪ್ರಬಂಧಗಳೊಡನೆ ಗ್ರಂಥ ರೂಪದಲ್ಲಿ ಪ್ರಕಟವಾಗಿದೆ. ಹೀಗೆ ಕಣವಿಯುವರು ಗದ್ಯ ಪದ್ಯ ಪ್ರಬಂಧ ವಿಮರ್ಶೆ ಎಲ್ಲ ಭಾಗದಲ್ಲಿಯೂ ಅತ್ಯುತ್ತಮ ಸೇವೆ ಸಲ್ಲಿಸಿರುವರು.

ಈಗ ಸುಮಾರು ಒಂದುವರೆ ವರ್ಷಗಳ ಕೆಳಗೆ ನಾನು ಧಾರವಾಡಕ್ಕೆ, ಕರ್ನಾಟಕ ವಿಶ್ವವಿದ್ಯಾಲಯದವರು ಏರ್ಪಡಿಸಿದ್ದ ಜಾನಪದ ಸಮ್ಮೇಳನದ ಅಧ್ಯಕ್ಷನಾಗಿ ಹೋಗಿದ್ದೆ.

ಆಗ, ಶ್ರೀ ಕಣವಿಯವರ ಮನೆಗೆ ಹೋಗಲೇಬೇಕೆಂಬ ಅವರ ಒತ್ತಾಯದ ಆಮಂತ್ರಣವೂ ಇತ್ತು. ಸಾರ್ವಜನಿಕ ಕೆಲಸಕಾರ್ಯಗಳಿಗಾಗಿ ಹೋಗುವಾಗ ಹೇಗೆ ನಮ್ಮ ಅತ್ಯಂತ ಆಪ್ತ ಮಿತ್ರರನ್ನೂ ನಾವು ನೋಡುವುದು ಕಷ್ಟವಾಗುತ್ತದೆ ಎಂಬುದು ನನಗೆ ಅನುಭವವಾಯಿತು. ನಾನು ಮರುದಿವಸ ಲಕ್ಷ್ಮೇಶ್ವರದ ಕಾಲೇಜಿನಲ್ಲಿ ಒಂದು ಉಪನ್ಯಾಸ ಕೊಡುವುದೆಂದು ಏರ್ಪಾಡಾಗಿತ್ತು. ಅದೇ ಬೆಳಿಗ್ಗೆ ಶ್ರೀಕಣವಿಯವರನ್ನೂ ಹಿರಿಯರಾದ ಬೇಂದ್ರೆಯವರನ್ನೂ ಅವರ ಮನೆಗಳಲ್ಲಿ ಸಂಧಿಸುವುದೆಂದು ಗೊತ್ತಾಗಿತ್ತು. ನಾನು ಲಕ್ಷ್ಮೇಶ್ವರಕ್ಕೆ, ನನ್ನನ್ನು "ಸಾಗಿಸುವ" ಮೋಟಾರಿನ ಅಧೀನನಾದೆ. ಅದು ಎಲ್ಲೆಲ್ಲಿಯೋ ಹೊರಟಿತು. ಕೊನೆಗೆ ಅದಕ್ಕೆ ಏಳು ಎಂಟು ಗಿರಾಕಿಗಳಾದರು. ಲಕ್ಷ್ಮೇಶ್ವರದಿಂದ ನೆಟ್ಟಗೆ ಹುಬ್ಬಳ್ಳಿ ಸ್ಟೇಷನ್‌ಗೆ ಹೋಗಬೇಕಾಗಿದ್ದುದರಿಂದ ಮತ್ತೆ ಧಾರವಾಡಕ್ಕೆ ಬರುವಂತಿರಲಿಲ್ಲ. ಆಗ ನಾನು ಆ ಎಲ್ಲರ ಸಮೇತ ಕಣವಿಯರ ಮನೆ ಮುತ್ತಿದೆ. ಬರುತ್ತೇನೆಂದು ಹೇಳಿದ್ದು ನಾನು ಒಬ್ಬ. ಹೋದವರು ಎಂಟು ಜನ. ಆಗ ಹೋಗದಿದ್ದರೆ ಹೋಗಲು ಆಗುತ್ತಲೇ ಇರಲಿಲ್ಲ. ನನಗೆ ಸ್ವಲ್ಪ ಸಂಕೋಚವೇ ಆಗಿತ್ತು. ನನ್ನನ್ನು ಕಂಡ ಕೂಡಲೇ ಕಣವಿಯವರು "ಬನ್ನಿ ಬನ್ನಿ ಇದೊಂದು ಸುಯೋಗ. ಇಷ್ಟೊಂದು ಜನ ಮಿತ್ರರು ಏಕ ಕಾಲದಲ್ಲಿ ಬಂದುದು. What a surprise? what a pleasure! ಎಂದು ಸಂಭ್ರಮಗೊಂಡು ಎಲ್ಲರನ್ನೂ ಆಸನದಲ್ಲಿ ಕೂರಿಸಿದರು. ಅನಿರೀಕ್ಷಿತವಾಗಿ ಬಂದುದರಿಂದ ಪಾಪ, ಶ್ರೀಮತಿ ಶಾಂತಾದೇವಿ ಅವರಿಗೆ ಎಷ್ಟು ಮುಜಗರವಾಗುತ್ತೊ ಎಂದು ನಾನು ಸಂಕೋಚಗೊಂಡಿದ್ದೆ, ಆದರೆ ನಾವು ಅಲ್ಲಿಗೆ ಹೋಗುವ ವೇಳೆಗೇ ಅಲ್ಲಿ ಅವರ ಮಾವಂದಿರಾದಿಯಾಗಿ 8-10 ಜನರೇ ಕೂಡಿದ್ದುದರಿಂದ ಗೃಹಿಣಿ ಸುಲಭವಾಗಿ ವ್ಯವಸ್ಥೆ ಮಾಡುತ್ತಾಳೆಂದುಕೊಂಡೆ. ಕಣವಿ, ನನ್ನನ್ನು ನಿಜವಾಗಿ ಅತ್ಯಂತ ಅಪರೂಪದ ಮಿತ್ರನನ್ನಾಗಿಯೇ ಭಾವಿಸಿ ಫಲಹಾರ, ಹಣ್ಣು ಸಿಹಿ ಪಾನೀಯಗಳಿಂದ ತೃಪ್ತಿಪಡಿಸಿದರು. ಅವರ ಪತ್ನಿಯವರ ದಕ್ಷತ್ತೂ ಸಹ ನಮಗೆ ಪ್ರಿಯವಾಯಿತು. ಎಂಟು ಜನವಲ್ಲ ಎಂಬತ್ತು ಜನ ಹೋಗಿದ್ದರೂ ಅವರು ಹೀಗೆಯೇ ಅಲ್ಲಾವುದ್ದೀನನ ಲಾಂದ್ರದಂತೆ ನಿಭಾಯಿಸುತ್ತಿದ್ದರೆಂದು ನಾನು ನಂಬುತ್ತೇನೆ. ಅಪರೂಪವಾಗಿ ಅವರ ಮನೆಯಲ್ಲಿ ಅಷ್ಟುವರುಷಗಳ ಮೇಲೆ ಬಯಸಿ ಸೇರಿದರೂ ಹೆಚ್ಚು ಹೊತ್ತು ಕುಳಿತು ಮಾತನಾಡಲು ಸಹ ಅವಕಾಶವಾಗಲಿಲ್ಲ. ಹೊರಗೆ ಕಾರಿನ ಭೂತ ಭೊಂ ಭೊಂ ಎಂದು ಆತರಿಸುತ್ತಿತ್ತು. ಕಣವಿಯವರೂ ನನ್ನ ಕಷ್ಟವನ್ನೂ, ನಾನು ಕಾರಿನ ಸೆರೆಯಾಳು ಎಂಬುದನ್ನೂ ಅರ್ಥಮಾಡಿಕೊಂಡರು. "ಇನ್ನು ಹೊರಡಿ. 60 ಮೈಲಿ ಹೋಗಬೇಕು. ಬೇಂದ್ರೆಯವರ ಮನೆಗೆ ಬೇರೆ ಹೋಗಬೇಕೆನ್ನುತ್ತೀರಿ" ಎಂದರು. ನಾನು ಕರ್ತವ್ಯ ಪರನಾದಂತೆ ಎದ್ದೆ. ನಮ್ಮ ಅತುರದ ಭೇಟಿಯಿಂದ ಇಬ್ಬರಿಗೂ ಸಮಾಧಾನವಾಗಲಿಲ್ಲ. ಕಣವಿ ಸಂಸಾರ ಮಕ್ಕಳುಗಳನ್ನು ನೋಡಿದುದು ಸಂತೋಷವಾಯಿತು. ನಾನು ಬೀಳ್ಕೊಡುವ ಕಷ್ಟವನ್ನು ಸ್ವಲ್ಪ ಹಗುರಮಾಡಿಕೊಳ್ಳಲು "ಮೂರುದಿನಗಳಾದರೂ ನಿಮ್ಮ ಮನೆಯಲ್ಲಿ ನಿಮ್ಮ ಜೊತೆ ಇರಬೇಕೆಂದು ಮಾಡಿದ್ದೆ" ಎಂದೆ. ಕಣವಿಯವರು "ಖಂಡಿತ ಸೇರೋಣ" ಎಂದರು. ಅನಂತರ ಬೇಂದ್ರೆಯವರನ್ನು ನೋಡಿಕೊಂಡು

ಲಕ್ಷ್ಮೇಶ್ವರಕ್ಕೆ ಹೋದೆ. ಆ ದಿನವೆಲ್ಲ ನನ್ನ ಮನಸ್ಸು ಅಷ್ಟು ಸಮಾಧಾನದಲ್ಲಿರಲಿಲ್ಲ.

o o o o o o o

ಶ್ರೀ ಕಣವಿಯವರು ಐವತ್ತು ವರುಷಗಳನ್ನು ಈಗ ತಾನೆ ಕ್ರಮಿಸಿದ್ದಾರೆ. ಇದೇನೂ ದೊಡ್ಡ ಕಾಲಮಾನವಲ್ಲ. ಪಾಶ್ಚಾತ್ಯರ ಲೆಕ್ಕದಲ್ಲಿ ಇದು ಅರ್ಧಾಯುಸ್ಸಿಗಿಂತ ಕಡಿಮೆ. ನಾವಂತೂ "ಶತಂಜೀವ ಶರದೋವರ್ಧಮಾನ" ಎನ್ನುತ್ತೇವೆ ನೂರು ಎಂದರೆ ನೂರಿಪ್ಪತ್ತೈದು ಎಂದು ನಮ್ಮವರ ಲೆಕ್ಕ. ನಮ್ಮ ಆಯುರ್ವೇದದಂತೆ, ಮನುಷ್ಯನ ಆಯುಸ್ಸಿನಲ್ಲಿ 50ರಿಂದ 60 ವರುಷದ ಕಾಲ-ಅಂದರೆ ಆ ಹತ್ತು ವರ್ಷ ಅತ್ಯಂತ ಪ್ರವರ್ಧಮಾನವಾದ ಉಚ್ಛ್ರಾಯದ ಕಾಲ. ಅದು ಯೌವನಕ್ಕಿಂತಲೂ ಹೆಚ್ಚು ಫಲಪ್ರದವಾದ ಕಾಲ. ಆಗ ನಮ್ಮ ದೇಹದ ಅಂಗಾಂಗಗಳು ಮನಸ್ಸು ಬುದ್ಧಿ ವಿವೇಕ ಎಲ್ಲವೂ ಅತ್ಯುತ್ತಮ ಸುಂದರ ಧ್ವನಿಗೆ ಹದಮಾಡಿದ ವೀಣೆಯ ತಂತಿಯಂತೆ ಅತಿ ಸೂಕ್ಷ್ಮವಾಗಿರುತ್ತದೆ. ಐವತ್ತನೆ ವರುಷ ಎಂದರೆ ಅಲ್ಲಿಯವರೆಗೆ ನಡೆದು ಬಂದ ದಾರಿಯನ್ನು ಚೆನ್ನಾಗಿ ಮಥಿಸಿ, ಪರ್ಯಾಲೋಚಿಸಿ, ಗಂಭೀರವಾಗಿ ಸಿಂಹಾವಲೋಕನಮಾಡಿ ದೋಷಗಳು ಏನಾದರೂ ಇದ್ದರೆ ಅವುಗಳನ್ನು ತಿದ್ದಿಕೊಂಡು, ಆತ್ಮಪ್ರತ್ಯಯ, ನಿಧಾನ ಮತ್ತು ವಿವೇಕದಿಂದ ಮುಂದಲ ಮಾರ್ಗವನ್ನು ರೂಪಿಸಿಕೊಳ್ಳುವ ಕಾಲ. ಶ್ರೀಮಾನ್ ಕಣವಿಯವರು ಈ ಐವತ್ತು ವರುಷಗಳಲ್ಲಿ ಕವಿಯಾಗಿ ಕೃತಕೃತ್ಯರಾಗಿದ್ದಾರೆ. ಪುಟ್ಟಪ್ಪ, ಬೇಂದ್ರೆ, ಪುತಿನ, ಗೋಕಾಕ, ಅಡಿಗ–ಮುಂದೆ ಕಣವಿಯವರು, ಹೆಸರು ಸ್ವಾಭಾವಿಕವಾಗಿಯೇ ಬರುತ್ತದೆ. ಅವರಿಗಾಗಿ ಬೆರಳು ಮಡಿಚಲೇಬೇಕು. ಭವಿಷ್ಯದಲ್ಲಿ ಇನ್ನೂ ಹೆಚ್ಚಿನ ಸಾಧಾನೆಯ ಯೋಗವಿದೆ.

Grow old along with me
The best is yet to be

ಶ್ರೀ ಕಣವಿಯವರು ನೂರು ವರುಷ ಸರ್ವಾಂಗ ಸಮರ್ಥರಾಗಿ ಬಾಳಲೆಂದು ಹಾರೈಸುತ್ತೇನೆ.

ಇತಿ ಶಂ

ಪು. ತಿ. ನರಸಿಂಹಾಚಾರ್

# ಪ್ರೇಮಲ ಮನಸ್ಸು, ರಸಿಕ ಹೃದಯ

ಶ್ರೀ ಚೆನ್ನವೀರ ಕಣವಿಯವರು ಹರೆಯವನ್ನು ದಾಟಿ ಮುಪ್ಪಿನತ್ತ ಮುಖ ಮಾಡಿದ್ದಾರೆ ಎಂದರೆ ಆಶ್ಚರ್ಯವಾಗುತ್ತದೆ. ಆ ಮುಗ್ಧ ವದನಕ್ಕೆ ಕಾಲ ಸುಕ್ಕನ್ನು ತರಲು ಹವಣಿಸಿದೆಯಲ್ಲ ; ಅದರ ಯತ್ನ ಫಲಿಸೀತೆ ? ಪ್ರಾಯಶಃ ಆಗದು. ಕಣವಿ ಎಳಗೂಸಿನಂಥ ಮನುಷ್ಯ. ಅವರ ಹರಿತವಾದ ಬುದ್ಧಿ ಅವರ ಸೌಮ್ಯ ಮುಖದ ತಿಳಿನಗೆಯ ಮರೆಯಲ್ಲಿ, ತಾಯ ಮಡಿಲಲ್ಲಿ ಸೆರಗನ್ನು ಮುಖಕ್ಕೆ ಮರೆಮಾಡಿ ಕುಳಿತು, ಓರೆಗಣ್ಣಿನಲ್ಲಿ ಆಗಾಗ ಇಣಕಿ ನೋಡುವ ಕಳೆಮೊಗದ ಹಸುಳೆಯಂತಿದೆ. ಹೀಗೆ ಬುದ್ಧಿಯ ಪ್ರೌಢಿಮೆಗೂ ವ್ಯಾವಹಾರಿಕ ದಕ್ಷತೆಗೂ ಸ್ವಲ್ಪವೂ ಕುಂದನ್ನು ತರದೆ ತನ್ನನ್ನು ತಾನು ಪ್ರಕಟಿಸಿಕೊಳ್ಳುತ್ತಿರುವ ಈ ಶೈಶವ ಕೋಮಲತೆ ಕಣವಿಯವರಿಗೆ ದೇವರು ಕೊಟ್ಟಿರುವ ವರ. ಇದರಿಂದಲೆ ಅವರು ಸಕಲಜನ ಪ್ರಿಯರಾಗಿದ್ದಾರೆ. ಅವರ ಕಾವ್ಯಕ್ರಿಯೆಯ ಮೂಲ ಪ್ರೇರಕವೂ ಇದೆ. ಅವರದು ಪ್ರೇಮಲ ಮನಸ್ಸು, ರಸಿಕ ಹೃದಯ.

ಕಣವಿಯವರನ್ನು ನಾನು ಧಾರವಾಡದಲ್ಲಿ ಮೊದಲು ಕಂಡಾಗ ಅವರಿಗೆ ಎಳಹರೆಯ; ಆಗ ತಾನೆ ಮದುವೆಯಾಗಿ ಸಂಸಾರ ಹೂಡಿದ್ದರು. ಅವರಿಬ್ಬರದೂ ಆದರ್ಶದಾಂಪತ್ಯ. ಅವರ ಮನೆಯಲ್ಲಿ ನನಗೆ ಅಪೂರ್ವವಾದ ಒಂದು ಭಕ್ಷ್ಯವೂ ಸಿಕ್ಕಿತು. ನಾವಿಬ್ಬರೂ ಗೆಳೆಯರಾಗಿ ಬಿಟ್ಟೆವು. ಅವರು ನನ್ನಲ್ಲಿ ಒಂದೇ ಸಮನಾಗಿರುವ ವಿಶ್ವಾಸವನ್ನು ಇಂದಿಗೂ ಇಟ್ಟಿದ್ದಾರೆ, ಇದೊಂದು ವಿಶೇಷ ಎನ್ನಬೇಕು, ನನ್ನ ಮಟ್ಟಿಗೆ ಹೇಳಬೇಕಾದರೆ. ನನಗೆ ಅವರ ಕಾವ್ಯವನ್ನು ಕಂಡರೆ ತುಂಬ ಮೆಚ್ಚಿಗೆ, ಏಕೆಂದರೆ ಅದರಲ್ಲಿ ಲೋಕೋತ್ತರ ಸ್ಫುರಿತಗಳಿವೆ. ಇಂಥ ಸ್ಫುರಿತಗಳಿಂದಲ್ಲವೆ ಬದುಕು ಜೀವಂತ ಎನ್ನಿಸುವದು ?

ನಮ್ಮ ನಾಡಿನ ಹಿರಿಯ ಕಾವ್ಯಜಿಜ್ಞಾಸುಗಳು ಕವಿ–ಸಹೃದಯರೊಟ್ಟುಗೂಡಿ ಕಾವ್ಯ ರಚಿಸುತ್ತಾರೆ, ಎನ್ನುತ್ತಾರೆ. ಈ ಮಾತು ಸತ್ಯ. ಕವಿಯ ಸ್ವಾಂತ ಸ್ಪಂದನಗಳೂ ಸಹ ಆತನು ಬದುಕುತ್ತಿರುವ ಸಾಮಾಜಿಕ ಪರಿಸರಾವಲಂಬಿ. ಆತನ ಕಾವ್ಯಕ್ಕೆ ಆಕಾರ ಕೊಡುವ ರೂಪ, ರೀತಿ ಅಲಂಕಾರಾದಿ ತಂತ್ರಗಳನ್ನು ಆ ಕಾಲದ ಸಹೃದಯರು ನಿಶ್ಚಯಿಸಿಬಿಡುತ್ತಾರೆ. ಸತ್ವಶಾಲಿಯಾದವನು ತನ್ನ ಕಾವ್ಯ ವಿಷಯದಲ್ಲಿ ಸ್ವಲ್ಪಮಟ್ಟಿಗೆ ಸ್ವಾತಂತ್ರ್ಯವನ್ನು ಪಡೆದಾನು. ಕಣವಿಯವರಲ್ಲಿ ಅಂಥ ಸ್ವಾತಂತ್ರ್ಯವನ್ನು ನಾವು ಆಗಾಗ ಕಾಣಬಹುದಾಗಿದೆ. ಅವರು ಸಂಪೂರ್ಣವಾಗಿ ಇಂಗ್ಲೀಷಿನ ಓದಿನಲ್ಲಿ ಮುಳುಗಿ ತೇಲದೆ ಇರುವುದೂ ಪ್ರಾಚೀನ ಕಾವ್ಯ ಸಂಪ್ರದಾಯಗಳ ಮರ್ಮವನ್ನರಿತಿರುವುದೂ

ಒಂದು ಸುಯೋಗ ಎನ್ನಿಸುತ್ತದೆ ನನಗೆ. ಅದಕ್ಕೆಯೇ ಇವರದೂ ಶಿವರುದ್ರಪ್ಪನವರದೂ ಒಂದು ಬೇರೆ ದಾರಿಯಾಯಿತು.

ನನಗೆ ದಿನ-ನಿತ್ಯದ ವ್ಯವಹಾರಗಳನ್ನು ಕುರಿತಾಡುವ ಕಾವ್ಯದಲ್ಲಿ ಅಭಿರುಚಿ ಇಲ್ಲ ಎಂದಲ್ಲ. ಅವು ಜಡಮನಸ್ಸಿಗೆ ಚುರುಕು ಮುಟ್ಟಿಸಿ ಬೇಸರ ಕಳೆಯುತ್ತವೆ. ಮನುಷ್ಯ ಆಗಾಗ ಇತರರನ್ನು ಕುರಿತಾಡುವದೂ ತನ್ನ ಸದ್ಯದ ಪರಿಸ್ಥಿತಿಯಲ್ಲಿ ಗೊಣಗಾಡುವುದೂ ಕೆರಳುವದೂ ಮನಸ್ಸಿನ ಆರೋಗ್ಯಕ್ಕೆ ಒಳ್ಳೆಯದು. ಕಣವಿಯವರೂ ಈಗಿನ ಕಾಲದ ಮಿಕ್ಕವರಂತೆ ಇಂಥ ಪದ್ಯಗಳನ್ನು ಬರೆದಿದ್ದಾರೆ. ಆದರೆ ನಾವು ಕವಿಯಲ್ಲಿ ಅರಸುವದು ಆತನ ಅಂತರಾಳದ ಗಾಢ ಪ್ರಜ್ಞೆಯನ್ನು, ಆತನ ಊರ್ಜಸ್ವೀ ಸತ್ವದ ಉತ್‌ಸ್ಫೂರ್ಜನಗಳನ್ನು, ಆತನ ಹೃದಯ ಕೋಮಲತೆಯ ಸೂಕ್ಷ್ಮ ಚಲನವಲನಗಳನ್ನು. ಆದರೆ ಈಗಿನ ಕಾಲ ಕವಿ-ಸಹೃದಯರಿಬ್ಬರಿಗೂ ಈ ವಿಷಯದಲ್ಲಿ ಸಹಕಾರಿಯಾಗಿಲ್ಲ. ಇಲ್ಲಿನ ಮೂಲ ಶ್ರುತಿ ಬೇಸರ. ನವ್ಯ ಕಾವ್ಯದ ಪ್ರವೃತ್ತಿ ಈ ಬೇಸರವನ್ನು ಮುರಿಯುವುದರಲ್ಲಿ ಸಾಕಷ್ಟು ತೊಡಗಿದೆ. ಈ ಪ್ರವೃತ್ತಿಯಿಂದಲೂ ಸಮಾಜಕ್ಕೆ ಕ್ಷೇಮ. ಆದರೆ ಇದರ ಜತೆಗೆ ಕವಿಗಳು ಮನುಷ್ಯನ ಬಾಳುವೆಯ ಆಳದಲ್ಲಿರುವ ರಸವಂತಿಕೆಯನ್ನು ಆಗಾಗ ಒಳ್ಳೆ ಹಬ್ಬದುಡಿಗೆ ತೊಡಿಗೆಯ ಉಲ್ಲಾಸದಲ್ಲಿ ಮೆರೆಸಬೇಕೆಂದೂ ನನಗನ್ನಿಸುತ್ತದೆ. ಬರಿ ಹೊಗಳಿಕೆಯಿಂದ ಹೇಗೆ ಸುಖವಿಲ್ಲವೋ ಹಾಗೆಯೇ ತೆಗಳಿಕೆಯಿಂದಲೂ ಸುಖವಿಲ್ಲ. ಕಣವಿಯವರು ತಮ್ಮ ಕಾವ್ಯ ಸಮುದಾಯದಲ್ಲಿ ಮಾನವನಹೃದಯ ತಲದ ಈ ರಸವಂತಿಕೆಯನ್ನೂ ಮೆರೆದಿದ್ದಾರೆ. ಇದು ಇವರ ಪ್ರಕೃತಿವರ್ಣನೆಯಲ್ಲೂ ಹಿರಿಯ ಚೇತನಗಳನ್ನು ಕುರಿತ ಈತನ ನಮ್ರ ಪ್ರಣಾಮುಗಳಲ್ಲೂ, ಉಲ್ಲಾಸಕರವಾದ ಕೌಟುಂಬಿಕ ಸಲ್ಲಾಪಗಳಲ್ಲೂ ಸಿಕ್ಕುತ್ತವೆ. ಉದಾಹರಣೆಗೆ ಇವೆರಡು ಪದ್ಯಗಳನ್ನು ನೋಡಿ :

ಗೌರಿ ಹುಣ್ಣಿಮೆ ಹಾಲ್ಗುಡಿದು ಬಿಳಿ ಜೋಳ ಧ್ವಜವನ್ನೆತ್ತಿತು.
ಗೋದಿ ಹೊಡೆಗಚ್ಚಿರಲು ಕಡಲೆಯ ಮಡಿಲು ಹೂ–ಮಿಡಿ ತುಂಬಿತು.
ಕುಸುಬೆ ಹೂಗಳ ಜರದ ಪೀತಾಂಬರವ ಹಬ್ಬಕೆ ಉಟ್ಟಿತು.
ಮೊದಲೆ ದೀಪಾವಳಿಗೆ ಒಲುಮೆಯು ದೀಪ ಬೆಳಗಿಸಿಕೊಂಡಿತು.

೦ ೦ ೦ ೦ ೦ ೦

ಬಿಸೀ ಚರುಮುರಿ ಕಡಲೆ ಮಾರುವ ಮುದುಕಿ ಬಂದರೆ ಕರೆಯಿರಿ :
ಮಕ್ಕಳೊಂದಿಗೆ ಕುಳಿತು ಕುರುಕುರು ತಿಂದು ಹೊರಜಗ ಮರೆಯಿರಿ
ಅಷ್ಟು ಮಿಕ್ಕೀ ಬೇಸರಾದರೆ ರೇಡಿಯೊ ಕಿವಿ ತಿರುವಿರಿ
ರಾತ್ರಿಯಾಗಲು ಊಟ ತೀರಿಸಿ ಜತೆಗೆ ಬೆಚ್ಚಗೆ ಮಲಗಿರಿ

—'ನೆಲ–ಮುಗಿಲು' ಪುಟ 12–13

ಈ ಸಾಲುಗಳು ಅವರ ಮನಃಪ್ರವೃತ್ತಿಗಳ ಎರಡು ದಿಕ್ಕುಗಳನ್ನು ಸಾಂಕೇತಿಕವಾಗಿ ದ್ಯೋತಿಸುತ್ತವೆ. ಕಣವಿಯವರು ಮೂಲತಃ ಸಂತೋಷ ಸಮಾಧಾನಗಳುಳ್ಳರಸಿಕರು.

ಜತೆಗೆ ಅವರು ಅಧ್ಯಾತ್ಮ ಸಂಪನ್ನರೂ ಅಹುದು. ಅಧ್ಯಾತ್ಮ ಎಂಬ ಪದ ಏಕೋ ಈಗೀಗ ತನ್ನ ಹೊಳಪನ್ನು ಕಳೆದುಕೊಂಡು ಸವಕಲಾಗುತ್ತಿದೆ. ಆದಕ್ಕೆ ಬೇರೆ ಹೆಸರನ್ನು ಕೊಡುವುದು ಉಚಿತ. ಈ ಮನಃ ಪ್ರವೃತ್ತಿಯನ್ನು ನಾವು"ಲೋಕೋತ್ತರಸ್ಫುರಿತ"ಗಳೆಂದು ಕರೆಯಬಹುದು. ಹಿಂದೆ ಹೇಳಿದಂತೆ ಇವುಗಳಿಲ್ಲದೆ ಬದುಕು ನಿರರ್ಥಕ, ಕಟ್ಟಿಗೆ ಸಮಾನ. (ಸಂಸ್ಕೃತದ ಸುಭಾಷಿತವೊಂದು ಹೀಗೆ ಹೇಳುತ್ತದೆ). ಕಣವಿಯವರಲ್ಲಿ ಈ ಸ್ಫುರಿತಗಳನ್ನು ಕಂಡು ನಾನು ಚಕಿತನಾಗಿದ್ದೇನೆ. ಬಿಸಮಿಲ್ಲರ ಶಹನಾಯಿ ವಾದ್ಯವನ್ನು ಆಲಿಸಿ ಬರೆದ ಈ ಸಾಲುಗಳನ್ನು ನೋಡಿರಿ :

............ನಾದದ ಕೂದಲೆಳೆಯಲಿ
ಪೃಥ್ವಿ ತೂಗಿರೆ, ಸೂರ್ಯಚಂದ್ರರಿಗು ಜೋಕಾಲಿ,
ಪಾತಾಳಗವಿಗೆ ತೆರೆದವು ನೂರು ಬೆಳಕಿಂಡಿ

.................................
ಹೊಕ್ಕುಳ ಹುರಿಯ ಕತ್ತರಿಸಿ ಮುಗಿಯೆ ಶಹನಾಯಿ
ಆಗಸದ ಚಿಪ್ಪೊಡೆದು ಜೀವ ತೆರೆಯಿತು ಬಾಯಿ.

ಅಮೋಘವಾದ ಅನುಭವ. ರಸಾರ್ದ್ರವಾದ ಉಜ್ವಲ ಮನಸ್ಸಿನ ಸಂಪರ್ಕ ನಮಗಿಲ್ಲಿ ಸಿಕ್ಕಿ ನಾವು ಒಂದು ತೆರದ ಅಲೌಕಿಕವಾದ ಉಲ್ಲಾಸವನ್ನು ಪಡೆಯುತ್ತೇವೆ. ನಮ್ಮಲ್ಲಿ ಅಸ್ಪಷ್ಟ ವಾಗಿ ಅಲೆಯುತ್ತಿದ್ದ ಮೂಕ ಸಂವೇದನಗಳಿಗೆ ಇಲ್ಲೊಂದು ದಿವ್ಯ ನೆಲೆ ಸಿಕ್ಕಿತೆಂಬ ಸಂತೋಷ, ಸತ್ಕಾವ್ಯದಲ್ಲಿ ನಮಗೆ ದೊರೆಯುವ ಅನುಭೂತಿಗಳು ಭವಾನುಭೂತಿಗಳ ಪರ್ಯಾಯವಲ್ಲ. ಕವಿಯ ಆತ್ಮೋರ್ಜೆ ನಮಗೆ ಸಂಕ್ರಮಿಸುವ ಮಾಧ್ಯಮ ಅದು-(accession of spiritual energy).

ಈ ಕವಿಯ ಐವತ್ತನೆಯ ಹುಟ್ಟುಹಬ್ಬವನ್ನು ಧಾರವಾಡ ಸಂಭ್ರಮದಿಂದ ಆಚರಿಸುತ್ತಿರುವುದು ಆ ಪುಣ್ಯಪತ್ತನದ ಹೃದಯವಂತಿಕೆಯನ್ನು ತೋರಿಸುತ್ತದೆ. ಶ್ರೀ ಕಣವಿಯವರಿಗೆ ನನ್ನ ಹಾರ್ದ ಅಭಿನಂದನೆಗಳು. ಅವರು ನನ್ನ ಕುರಿತು ಬರೆದಿರುವ ಸುನೀತದಲ್ಲಿ ಆಗಾಗ ನನ್ನ ಅಂತರಂಗದ ಮುಖವನ್ನು ನೋಡಿಕೊಳ್ಳುತ್ತೇನೆ ; ಮುಖ ಚೆನ್ನಾಗಿದೆ ಪರವಾಗಿಲ್ಲ ಎಂದುಕೊಳ್ಳುತ್ತೇನೆ. ಮನುಷ್ಯನಿಗೆ ಪ್ರೀತಿಗಿಂತ ಅಧಿಕವಾದ ಕೊಡಿಗೆ ಮತ್ತೇನುಂಟು ? ಈಚೆಗೆ ನೋಡಿದಾಗ (ಅವರನ್ನು ಕುರಿತು ಮಾನಸ ಗಂಗೋತ್ರಿಯ ಒಂದು ಸಮಾರಂಭದಲ್ಲಿ ನಾನು ಅಭಿನಂದನ ಭಾಷಣ ಮಾಡಿದಾಗ) ಕಣವಿಯವರ ಆರೋಗ್ಯ ಅಷ್ಟು ಚೆನ್ನಾಗಿರುವಂತೆ ಕಾಣಲಿಲ್ಲ. ತಮ್ಮ ಮಿತ್ರ ಮತ್ತು ಸಹೃದಯ ವರ್ಗದ ಈ ಪ್ರೀತಿ ಅವರ ಎಲ್ಲ 'ಜಡ್ಡು'ಗಳನ್ನೂ ಹೊಡೆದೋಡಿಸೀತು. ಶ್ರೀ ದೇವರ ಅನುಗ್ರಹ ಅವರ ಮೇಲೂ ಅವರ ಕುಟುಂಬವರ್ಗದವರ ಮೇಲೂ ಸದಾ ಇರಲೆಂದು ಹಾರೈಸುತ್ತೇನೆ. ಅವರ ಕಳೆವೆತ್ತ ಹಸನ್ಮುಖ ಎಂದೂ ಕಂದದಿರಲಿ. ಅವರ ವಿಷಯದಲ್ಲಿ ಸಹೃದಯರ ಪ್ರೀತಿ ಇತೋಪ್ಯಧಿಕವಾಗಿ ವರ್ಧಿಸಲಿ.

ಸಿಂಪಿ ಲಿಂಗಣ್ಣ

# ಸಮತೋಲನದ ನಿಲವು

ಜ್ಞಾನದ ಸಿರಿಪಂತಿಕೆಯಿದ್ದರೂ ಪರಿಶುದ್ಧ ಜೀವನಕ್ಕಾಗಿ ಹಂಬಲಿಸುವ, ಪ್ರಾಥಮಿಕ ಶಾಲಾಶಿಕ್ಷಕರಾದ ತಂದೆ, ಕರ್ತವ್ಯದಕ್ಷತೆಯ ತಾಯಿ. ಹುಟ್ಟಿದ್ದು ಚಿಕ್ಕ ಹಳ್ಳಿಯಲ್ಲಿ. ಬೆಳೆದದ್ದು ಕಪ್ಪತ ಗುಡ್ಡದ ಸೆರಗಿನಲ್ಲಿ. ಅಂತೆಯೇ ಕಣವಿಯವರು ತಮ್ಮ ಬಾಲ್ಯವು ಅಳಿಸಲಾರದ ಮಧುರ ಭಾವಗೀತೆಯೆಂದು ಹೇಳುತ್ತಾರೆ.

ಕಪ್ಪತ ಗುಡ್ಡದ ಸೆರಗನ್ನು ಓಸರಿಸಿ ಬಾಲಕನು ಮುಲಕೀ ಪರೀಕ್ಷೆಗೆ ಧಾರವಾಡಕ್ಕೆ ಹೋದರೆ ಅಲ್ಲಿ 'ಮಲೆನಾಡ ಸೆರಗಿನ ಬೆರಗು', ಮುಂದಿನ ಹೆಜ್ಜೆಯೇ ಅಲ್ಲಿಯ ಮುರುಘಾ ಮಠದ ಪ್ರಸಾದ ನಿಲಯ ; ಪ್ರಶಾಂತ ವಸತಿ, ಅದರೊಡನೆ ಕಟ್ಟುನಿಟ್ಟಿನ ದಿನನಿತ್ಯದ ಆಚರಣೆ, ಇಷ್ಟೆಲ್ಲ ಆಗುವಷ್ಟರಲ್ಲಿ ಅವರ ಅಡ್ಡ ಹೆಸರಿನೊಳಗಿನ 'ಣ' ಲೋಪವಾಗಿ ಕಣವಿ ಕವಿಯಾದರು.

ಕಣವಿಯವರ ಸ್ವಭಾವವೊಂದೇ ಮೃದುವಲ್ಲ ; ನಡೆ, ನುಡಿ, ನಗೆ-ಒಟ್ಟಾರೆ ಅವರ ಪ್ರಕೃತಿಯೇ ಮೃದು. ಆ ಕಾರಣದಿಂದ ಅವರ ಕೃತಿ, ಧೃತಿ, ಪ್ರತಿ ಕೃತಿಗಳೆಲ್ಲ ಮೃದುತರ ವಾಗಿಯೆ ಪರಿಣಮಿಸಿದವು.

ಚೆನ್ನವೀರನಿಗೆ ಶಾಂತಕ್ಕ ಅರ್ಧಾಂಗಿ. ಕವಿ-ಕತೆಗಾರ್ತಿಯರ ಸೇರುವೆ ಆ ದಾಂಪತ್ಯ. ಗದ್ಯಪದ್ಯಗಳ ಗಂಗೋತ್ರಿ ಆ 'ಚೆಂಬೆಳಕು.'!

ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ-ಪ್ರಕಟನ ವಿಭಾಗದ ವಿಸ್ತಾರವಾದ ಕಾರ್ಯ ವ್ಯಾಪ್ತಿ. ಅವರ ಬಾಳು ಕಣಿವೆಯಿಂದ ಬೆಟ್ಟಕ್ಕೆ, ಬೆಟ್ಟದಿಂದ ಘಟ್ಟಕ್ಕೆ ಏರುತ್ತ ಹೋಮಾ ಪಕ್ಷಿಯಂತೆ ಮುಗಿಯದ ಮುಗಿಲಿನಲ್ಲಿ ವಿಹರಿಸುತ್ತಿದೆ. ಹಾಕಿದ ತತ್ತಿ ಕೆಳಗಿಳಿಯುತ್ತಿರು ವಾಗಲೇ ಒಡೆದು ಮರಿಯಾಗಿ, ಗರಿಗೆದರಿ ಅವೂ ಗಗನದತ್ತ ನೆಗೆಯುತ್ತಿವೆ,

ಹುಟ್ಟಿದ ಕೂಡಲೆ ಹುಲಿಗೆಜ್ಜೆ ಕಟ್ಟಿದಂತೆ ಮೊಟ್ಟಮೊದಲಿನ ಕವನ ಸಂಕಲನ ಹೊರ ಬಿದ್ದಾಗಲೇ ಬೇಂದ್ರೆಯವರಂಥ ದ್ರಷ್ಟಾರ ಕವಿಗಳಿಂದ "ಇದು ಹೊಸ ನೀರು. ಇದರಲ್ಲಿ ಹಳ್ಳದ ರಭಸವಿಲ್ಲ. ಹೊಳೆಯ ಗಾಂಭೀರ್ಯವಿದೆ" ಎಂಬ ಸೈನುಡಿ ಸಿಕ್ಕಿದ್ದು ಬೆಳೆಯ ಸಿರಿಯನ್ನು ಕುರಿತು ಕಣಿ ಹೇಳಿದಂತಲ್ಲವೆ ?

ಕವಿತೆ ಬರೆಯುವಾಗ ಮಾತ್ರ ಕವಿಯಾಗಿರದೆ, ನಿತ್ಯಜೀವನದ ನೂರೆಂಟು ನಡೆವಳಿಕೆ ಯಲ್ಲಿಯೂ ಅವರು ಕವಿಯಾಗಿರುತ್ತಾರೆ. ಆದರೆ, ಆಡಳಿತಕ್ರಮದಲ್ಲಿ ಸೂಕ್ತ ಒಂದಿಷ್ಟು ವಿಮರ್ಶಕರೂ ಆಗಿರುತ್ತಾರೆ.

ಅದೊಂದು ಸೂಕ್ತ ಸಾಮರಸ್ಯ. ಅವರ ಸದುವಿನಯವೇ ಅವರ ಅಂತಸ್ಸತ್ವ. ಅದೇ ಅವರಿಗೆ ಸದಾಶಿವನ ಒಲುಮೆ. ಒಳ್ಳೆಯದನ್ನು ಮೆಚ್ಚಿಕೊಳ್ಳುವ ಹಾಗೂ ಅದನ್ನು ಸುತ್ತು ಮುತ್ತಿನವರಿಗೆ ಹಂಚಿಕೊಡುವ, ಸಂಕೀರ್ಣವಾತಾವರಣದಲ್ಲಿಯೂ ತಮ್ಮದೇ ಆದ ಸಮತೋಲನದ ನಿಲವನ್ನು ಕಾಯ್ದುಕೊಳ್ಳುವ ರೀತಿ ಅಪೂರ್ವವಾದದ್ದೆನಿಸುತ್ತದೆ. ಹುಡುಕಿದರೂ ಸಿಗಲಾರದ ಇಂಥ ವ್ಯಕ್ತಿ ನಮ್ಮ ಮಧ್ಯದಲ್ಲಿರುವುದೇ ನಮಗೊಂದು ಹೆಮ್ಮೆ ; ಇಂಥವರಿಂದಲೇ ನಾಡಿಗೂ ನುಡಿಗೂ ಕೀರ್ತಿ, ಗೌರವ.

**ವಿ. ಕೃ. ಗೋಕಾಕ**

# ಸೂಕ್ಷ್ಮಾಂತಃಕರಣದ ಪ್ರಜ್ಞೆ

ಶ್ರೀಮಾನ್ ಚೆನ್ನವೀರ ಕಣವಿಯವರ ಕಾವ್ಯವನ್ನೂ ವ್ಯಕ್ತಿತ್ವವನ್ನೂ ಕುರಿತು ನಾನು ಈ ಮೊದಲೆ ಬರೆಯಬೇಕಾಗಿತ್ತು. ಕಾವ್ಯ-ವ್ಯಕ್ತಿತ್ವಗಳ ಬಗ್ಗೆ ಅವಸರವಸರವಾಗಿ ಬರೆಯಬೇಕೆ ? ಎಂದು ವಿಚಾರ ಬಂದಾಗೆಲ್ಲ ನಾನು ಮನಸ್ಸನ್ನು ಹರಿಬಿಡುತ್ತಿದ್ದೆ. ಈ ಅಂಥ ಸ್ಥಿತಿಯಲ್ಲಿಯೇ ಬರೆಯಬೇಕಾಗಿದೆ.

ವಿನಯ–ಸೌಜನ್ಯಗಳ ಮೂರ್ತಿಯಾದ ಕಣವಿಯವರು ಎಲ್ಲರಂತೆ ಜೀವನದ ಸುಖ-ದುಃಖದೊಳಗಿಂದ ಹಾಯ್ದಿದ್ದಾರೆ. ಕೆಲವರಿಗೆ ಇಂಥ ಅನುಭವ ವಿಕೃತ ಮನೋಧರ್ಮಗಳನ್ನು ತಂದೊಡ್ಡಿ ನಿರಾಶಾವಾದಿ ಇಲ್ಲವೆ ಸಿನಿಕರನ್ನಾಗಿ ಮಾಡುತ್ತದೆ, ಬೇರೆ ಕೆಲವರನ್ನು ಅಂತರ್ಮುಖಿಗಳನ್ನಾಗಿಸುತ್ತದೆ. ಇದರೊಳಗಿಂದ ಹಾಯ್ದು ಸಮತೂಕವನ್ನು ಕಾಯ್ದುಕೊಂಡವರು ವಿರಳ. ಇಂತಹ ವಿರಳರಲ್ಲಿ ಶ್ರೀ ಕಣವಿಯವರೂ ಒಬ್ಬರಾಗಿದ್ದಾರೆ.

ಹೀಗೆಂದರೂ ಅವರು ಬಾಹ್ಯಜಗತ್ತಿನ ಚಟುವಟಿಕೆಗಳಿಂದ ಹೆಚ್ಚಾಗಿ ಆಕರ್ಷಿತರೆಂದು ಹೇಳಲಾಗುವುದಿಲ್ಲ. ತಮ್ಮ ಮನೆ, ವ್ಯಾಸಂಗ ವಿಸ್ತರಣ-ಪ್ರಕಟನ ಕಾರ್ಯಕಲಾಪಗಳು, ತಮ್ಮ ಪರಿಮಿತ ಸ್ನೇಹ ವರ್ತುಲ ಹಾಗೂ ಸಾಂಸ್ಕೃತಿಕ ಜೀವನ; ಇವುಗಳನ್ನು ಸಹಸಾ ಅವರು ಅತಿಕ್ರಮಿಸುವದಿಲ್ಲ. ಶ್ರೀ ಅರವಿಂದ ಮಂಡಲಗಳೊಳಗಿಂದ ಅನೇಕ ಸಲ ಅವರು ಹಾಯ್ದಿದ್ದಾರೆ. ಅವರೆ ಅವರು ಶ್ರೀ ಅರವಿಂದರ ಅನುಯಾಯಿಗಳೆಂದು ಹೇಳಲಾಗುವುದಿಲ್ಲ. ಹೀಗೆ ತಮ್ಮದೇ ಆದ ಒಂದು ಕಣವಿ ವರ್ತುಲವನ್ನು ಅವರು ಗುರುತಿಸಿದ್ದಾರೆ. ಅಲ್ಲಿಯ ಕೇಂದ್ರ ಬಿಂದುವಿನಲ್ಲಿ ಸದಾ ಜಾಗ್ರತರಾಗಿರುವುದೇ ಅವರ ನಿತ್ಯದ ಬದುಕಾಗಿದೆ.

ಈ ಸೂಕ್ಷ್ಮಾಂತಃಕರಣದ ಪ್ರಜ್ಞೆಯೇ ಅವರ ಕಾವ್ಯಸ್ಫೂರ್ತಿಯ ನೆಲೆಯಾಗಿದೆ. ಎಚ್ಚರತಪ್ಪಿ, ಹವಣು ತಪ್ಪಿ, ಸ್ತುತಿಯಾಗಲಿ ನಿಂದೆಯಾಗಲಿ ಅವರಿಂದ ಬರುವುದಿಲ್ಲ. ಅತೃಪ್ತಿಯನ್ನು ಸೂಚಿಸುವುದರ ಜೊತೆಗೆ ಒಂದು ಮಿದು ಮುಗುಳು ನಗೆಯೂ ಅವರ ತುಟಿಯ ಮೇಲೆ ಸುಳಿದಿರುತ್ತದೆ. ಈ ಸೂಕ್ಷ್ಮಪ್ರಜ್ಞೆಯ ಭಾವಗತಿಯೇ ಅವರ ಕಾವ್ಯ. ಅದರ ಬೆಳಕಿನಲ್ಲಿಯ ವಿವರಣೆಯೇ ಅವರ ವಿಮರ್ಶೆಯಾಗಿದೆ. ಸಾಹಿತ್ಯದ ಸೌಹಾರ್ದ ಹಾಗೂ ವಾತಾವರಣ ಅವರಿಗೆ ತುಂಬ ಪ್ರಿಯವಾದುದು. ಅವರ ಸುದೈವದಿಂದ ಅವರ ಶ್ರೀಮತಿಯವರಲ್ಲಿಯೂ ಸಾಹಿತ್ಯಿಕ ಸೃಜನಶೀಲತೆ ಚುರುಕಾಗಿ ಹಲವು ಕೃತಿಗಳನ್ನಿತ್ತಿದೆ. ಅವರ ಆಪ್ತೇಷ್ಟ ವರ್ಗ ತನ್ನ ಸಾಹಿತ್ಯಾಭಿರುಚಿಯಿಂದ ತುಂಬ ಮಧುರವೆನಿಸಿಕೊಂಡಿದೆ.

ಈ ಸೂಕ್ಷ್ಮಾತ್ಮೀಕರಣ ಪ್ರಜ್ಞೆಯಲ್ಲಿಯೇ ಕಣವಿಯವರ ಕಾವ್ಯದ ಉಗಮಸ್ಥಾನ ವಿದೆ. ಅವರ ಆಂತರಿಕ ಹಾಗು ಸಾಮಾಜಿಕ ಸ್ಪಂದನಗಳು ಇಲ್ಲಿಂದ ಉದ್ಭವಿಸುತ್ತವೆ ಅವರ ಪ್ರತಿಮೆ ಸಂಕೇತಗಳನ್ನು ಈ ಪ್ರಜ್ಞೆಯೇ ಒದಗಿಸಿಕೊಡುತ್ತದೆ.

ಹೀಗಾಗಿ ತಮ್ಮದೇ ಆದ ಒಂದು ದನಿಯನ್ನು ಕಣವಿಯವರು ಇಂದಿನ ಕನ್ನಡದ ಮೇಳಸ್ವರಕ್ಕೆ ಕೂಡಿಸಿದ್ದಾರೆ. ಅವರ ಶೈಲಿಯಲ್ಲಿ ಕಾಣಿಸಿಕೊಂಡಂತೆ ಹಿತ-ಮಿತ-ಮಾರ್ದವಗಳು ಅವರು ಕವನವನ್ನು ಓದುವ ರೀತಿಯಲ್ಲಿಯೂ ಕಾಣಿಸಿಕೊಳ್ಳುತ್ತವೆ.

ಶ್ರೀ ಕಣವಿಯವರ ಸೂಕ್ಷ್ಮಕಾವ್ಯಪ್ರಜ್ಞೆ ಸುಂದರವಾಗುತ್ತ ನಡೆದು, ಅವರಿಂದ ದೀರ್ಘಕಾಲ ಸೇವೆ ಸಂದು, ಅವರಿಂದ ಕನ್ನಡಕ್ಕೆ ದೊರೆತ ಕಾಣಿಕೆ ಇನ್ನಿಷ್ಟು ಸಮೃದ್ಧ ವಾಗಲಿ.

ಜಿ. ಆರ್. ಪಾಂಡೇಶ್ವರ

# ನವನವೋನ್ಮೇಷ ಪ್ರತಿಭಾ ವಿಲಾಸ

ಇಪ್ಪತ್ತೈದು ವರ್ಷಗಳ ಹಿಂದೆ, ಹುಬ್ಬಳ್ಳಿಯ ಸುಪ್ರಸಿದ್ಧ 'ಕರ್ಮವೀರ' ವಾರ ಪತ್ರಿಕೆಯ ದೀಪಾವಳಿ ವಿಶೇಷಾಂಕದಲ್ಲಿ ದಿವಂಗತ ಅಮಾಯಿಕ (quileless) ಸಾಹಿತಿ ಶ್ರೀ ದ. ಬಾ. ಕುಲಕರ್ಣಿಯವರು ತಮ್ಮ ಮೆಚ್ಚಿನ ಕೆಲವು ಕವಿಗಳ ಕುರಿತು ಬರೆದಿದ್ದ ರಸವತ್ತಾದ ಲೇಖನದಲ್ಲಿ ಕಣವಿಯವರನ್ನು 'ನಯ ನಾಜೂಕಿನ ಕಣವಿ' ಎಂಬ ಶೀರ್ಷಿಕೆಯಿಂದ ಪ್ರಶಂಸಿಸಿದ್ದರು. ಕಣವಿಯವರ ವ್ಯಕ್ತಿತ್ವದ ವೈಶಿಷ್ಟ್ಯವನ್ನಿದು ಯಥಾವತ್ತಾಗಿ ಕನ್ನಡಿಸುತ್ತದೆನ್ನಬೇಕು. 'ನಯ'ದಲ್ಲಿ ನಮ್ರತೆಯೂ ಸಭ್ಯತೆಯೂ ಅಡಕಗೊಂಡಿದ್ದರೆ, 'ನಾಜೂಕಿ'ನಲ್ಲಿ ಸ್ವಚ್ಛತೆ ಮತ್ತು ಶಿಸ್ತು ಹುದುಗಿಕೊಂಡಿರುತ್ತವೆ. ಕಣವಿಯವರ ಹೃನ್ಮನಗಳು ಕೋಮಲತೆಯೊಂದಿಗೆ ನಿಷ್ಕಪಟತೆಯನ್ನು ತುಂಬಿಕೊಂಡಿರುತ್ತವೆ. ಕವಿಗೆ (ನನ್ನೊಂದು ಅಷ್ಟಷಟ್ಪದಿಯಲ್ಲಿ ಹೇಳಿರುವಂತೆ) ಪ್ರೇಮ-ತಾರುಣ್ಯಗಳೇ ಕಣ್ಣುಗಳು. ಅವಿಲ್ಲದ ಕವಿಯು, ಎಷ್ಟು ಬರೆದರೂ, ಏನು ಬರೆದರೂ, ಕುರುಡನೇ. ಸರಿ ! ಕವಿಶ್ರೇಷ್ಠ ಕಣವಿಯವರಲ್ಲಿ ಈ ಅಕ್ಷಿದ್ವಯ ತೇಜೋಭರಿತವಾಗಿ ಹೊಳೆಯುತ್ತಿದೆ. ಆದ್ದರಿಂದಲೇ "ಕವಿಗೆ ಕವಿ ಮುನಿವಂ" ಎಂಬ ಹಳಗನ್ನಡ ಹಿರಿಯ ಕವಿಯ ಮಾತನ್ನವರು ಸುಳ್ಳಾಗಿಸುವಂತಹ ಅಜಾತಶತ್ರು, ಕವಿಪುಂಗವರಾಗಿ ಸರ್ವಾದರಣೀಯರಾಗಿ ಬೆಳಗುತ್ತಿದ್ದಾರೆ.

1947ರಲ್ಲಿ ನಾನು ಹುಬ್ಬಳ್ಳಿಯ 'ನವಯುಗ' ದಿನಪತ್ರಿಕೆಯ ಸಂಪಾದಕತ್ವದಲ್ಲಿದ್ದಾಗ, ಶ್ರೀ ಕಣವಿ (ಅದೆ ಆಗ ಕಾಲೇಜು ವಿದ್ಯಾರ್ಥಿಯಾಗಿದ್ದಿರಬೇಕು)ಯವರ ಪ್ರಥಮ ಪರಿಚಯ ನನಗಾಯಿತು. ಅವರ ಒಂದು ಸುಂದರ ಕವನವನ್ನು [ಸ್ವಾತಂತ್ರ್ಯಯೋಧರನ್ನು ಕುರಿತ 'ನೆನೆವುದೊಂದಗ್ಗಳಿಕೆ'] ಮೆಚ್ಚಿ ನಾನು 'ನವಯುಗ'ದಲ್ಲಿ ಪ್ರಕಟಿಸಿದಂತೆ ನೆನಪು. ಸದಾ ಹಸನ್ಮುಖಿಯಾಗಿ, ನಿರ್ಮಲ ಚಿತ್ತದವರಾಗಿ ನಡೆಯುತ್ತಿದ್ದ ಈ ತರುಣ, ವಿಚಾರವಂತರೆಲ್ಲರಿಗೂ ಪ್ರೀತಿಯ ವ್ಯಕ್ತಿಯಾಗಿ ಬೆಳೆದರು.

1952ರ ವೇಳೆ ನಾನು 'ಜಯಕರ್ನಾಟಕ' ವಾರ–ಮಾಸ ಪತ್ರಿಕೆಗಳ ಸಂಪಾದಕತ್ವ ಹೊತ್ತು ಧಾರವಾಡಕ್ಕೆ ಬಂದು ನೆಲಸಿದ ಮೇಲೆ ಅವರ–ನನ್ನ ಪರಿಚಯ, ಸ್ನೇಹ-ಸಮಾಗಮ, ಮತ್ತಷ್ಟು ಗಾಢವೂ ಮಧುರವೂ ಆಗಿ ಬೆಳೆದವು. ಅವರು ಮೊಳಮಡ್ಡಿಯಲ್ಲಿ ತಮ್ಮ ಸಹಪಾಠಿಗಳೊಡನೆ ಒಂದು ಕೊಟಡಿಯಲ್ಲಿ ವಾಸಿಸುತ್ತಿದ್ದರು. ಅದಕ್ಕೆ 'ಚೆಂಬೆಳಕು' ಎಂದು ನಾಮಕರಣ ಮಾಡಿದ್ದರು. 'ಜಯಕರ್ನಾಟಕ' ಕಾರ್ಯಾಲಯಕ್ಕೆ ಹೋಗುತ್ತ ನಾನೊಮ್ಮೆ ಆವರ ಆಮಂತ್ರಣದ ಮೇರೆಗೆ, ಅಲ್ಲಿಗೆ ಹೋಗಿ, ಚಹ ಸ್ವೀಕರಿಸುತ್ತ "ನಿಮ್ಮೀ ವಸತಿ ಸ್ಥಾನಕ್ಕೆ ಈ ಹೆಸರನ್ನು ಹೇಗಿಟ್ಟಿರಿ ?" ಎಂದು ಕೇಳಿದೆ.

"ನೀವು ನಿಮ್ಮ ಒಂದು ಕವನ ಸಂಕಲನಕ್ಕೆ 'ಚೆಂಗಲವೆ' ಎಂದು ಹೆಸರಿಟ್ಟಂತೆಯೇ ನಾವು ನಮ್ಮ ವಸತಿಗೆ ಸಂಜೆ-ಮುಂಜಾವುಗಳ ಚೆಲುವಾದ ಚೈತನ್ಯದಾಯಕವಾದ ಬೆಳಕಿನ ಹೆಸರನ್ನಿಟ್ಟೆವು. ನಿಮಗೆ ಸರಿಯೆನಿಸುವುದೆ ?" ಎಂದವರು ಮರುಪ್ರಶ್ನೆ ಮಾಡಿದ್ದರು !

ಆಗಲೇ ಅವರು ಕನ್ನಡನಾಡಿನ ಕವಿ ಪಂಕ್ತಿಯಲ್ಲೊಬ್ಬ ಅಸಾಧಾರಣ ಪ್ರತಿಭೆಯ ಕವಿಯಾಗಿ ಗಣಿತವಾಗಿದ್ದರು. ಅವರ ಪ್ರಾರಂಭದ ಕೃತಿ "ಭಾವಜೀವಿ" ಯನ್ನು ನಮ್ಮ ನಾಡಿನ ಮಹೋಜ್ವಲ ಸಾಹಿತಿ-ವಿಮರ್ಶಕ ಶ್ರೀ ಗೋಕಾಕರು ಕೊಂಡಾಡಿ ಮುನ್ನುಡಿ ಬರೆದು ಹರಸಿದ್ದರೆಂದ ಮೇಲೆ ಹೆಚ್ಚೇನು ಹೇಳಬೇಕು ?

ಅವರು ಆಕಾಶವಾಣಿಗೆ ಕೆಲವು ಸುಂದರ ಗೀತ ರೂಪಕಗಳನ್ನು ಬರೆದೊದಗಿಸಿದ್ದರು. ಅವುಗಳ ನಿರರ್ಗಳ ಕಾವ್ಯಧಾರೆ ಹಾಗೂ ಪ್ರತಿಭೆಯ ಮಿಂಚಿಗೆ ಮಾರುಹೋದ ನಾನು ಅವುಗಳನ್ನು ಒತ್ತಾಯಮಾಡಿ ಪಡೆದು 'ಜಯಕರ್ನಾಟಕ'ದಲ್ಲಿ ಪ್ರಕಟಿಸುತ್ತಿದ್ದ ನನ್ನ ಧನ್ಯತೆಯನ್ನು ಸದಾ ಸ್ಮರಿಸುತ್ತಿರುವೆನು.

ವಿವಾಹಿತ ಕವಿ ಕಣವಿಯವರ ದಾಂಪತ್ಯ ಜೀವನವನ್ನು ಅಡಿಗಡಿಗೆ ಕಂಡು ಆನಂದಿಸುವ ಸೌಭಾಗ್ಯ ನನಗೊದಗಿದ್ದಿತು. ಅವರು ಸಾರಸ್ವತಪುರದಲ್ಲಿ ವಾಸಿಸುತ್ತಿದ್ದಾಗ ನನ್ನ ವಸತಿಯೂ ತೀರ ಸಮೀಪದಲ್ಲೇ ಇರುತ್ತಿದ್ದು ನಮ್ಮೊಳಗಿನ ನಂಟು ಮತ್ತಷ್ಟು ನಿಕಟಗೊಂಡಿತು. ಅವರು ಒಂದು ದಿನವಾದರೂ ಅಹಂಕಾರದ 'ಹಿರಿಮೆ'ಯನ್ನು ತೋರಲಿಲ್ಲ ; ಹೊರಗಿನ ಗಾಳಿ-ಬೆಳಕುಗಳಿಗೆ ಸಣ್ಣಕಿಟಕಿ ಮಾಡಿಕೊಳ್ಳಲಿಲ್ಲ ! ಅವರ ನಿಷ್ಕಪಟ, ನಿರ್ಮಲ ಆಚಾರ-ವಿಚಾರಗಳು ಅವರ ಸಮಸಾಮಯಿಕ ಕವಿ-ಸಾಹಿತ್ಯಿಕರ ಪ್ರೇಮಾದರ, ಪ್ರಶಂಸೆಗಳನ್ನು ಅಕ್ಷುಣ್ಣವಾಗಿಯೇ ಮುಂದರಿಸಿಕೊಂಡು ಬಂದಿವೆ. 'ನವ್ಯ ವಿರಲಿ' 'ನವೋದಯ'ವಿರಲಿ, ಕವಿ ಕಣವಿಯವರ 'ನವನವೋನ್ಮೇಷ' ಪ್ರತಿಭಾವಿಲಾಸವೂ, ಅದರೊಳಗಿನ ಸ್ವಾನುಭಾವ ವಿಜ್ಞಾನವೂ, ಸರಳ-ಸುಂದರ ಅಜಸ್ರ ಶೈಲಿಯೂ, ಎಂತಹ ಟೀಕಾಕಾರರನ್ನಾದರೂ ಮಣಿವಂತೆ ಮಾಡುತ್ತವೆ. ಇಂದಿನ ಶ್ರೇಷ್ಠಕವಿಗಳ ಪಂಕ್ತಿಯಲ್ಲಿ ಶ್ರೀ ಕಣವಿಯವರ ಸ್ಥಾನ ಅದ್ವಿತೀಯವಾಗಿದ್ದು, ಅವರಿಗೆ ನನ್ನ ಹೃತ್ಪೂರ್ವಕ ಪ್ರೇಮ-ಗೌರವದ ವಂದನೆ ಸಲ್ಲಿಸುತ್ತೇನೆ.

ಡಿ. ಎಸ್. ಕರ್ಕಿ

# ಚೆಂಬೆಳಕಿನ ಕವಿ

ಅರುಣೋದಯುದರುಣ ದ್ಯುತಿ
ಗಿರಿಕಟಕದ ಪಳುಕಿನಲ್ಲಿ ಬಿಂಬಿಸಿ ಕಾಣು-
ತ್ತರುಣ ಜಲಂಗೆತ್ತಲ್ಲಿಯು
ಹರಿಣಾರಿಯ ಮಱಿಗಳೈದೆ ನೆಕ್ಕುತ್ತಿರ್ಕುಂ

—ಷಡಕ್ಷರದೇವ

ಬೆಳಕು ಭುವನದ ಭಾಗ್ಯ. ಜಗದ ಜೀವನಕ್ಕೆ ಅದರಲ್ಲೂ ಮಾನವ ಜೀವನಕ್ಕೆ ಬೆಳಕೆಂಬುದು ವಿಶೇಷ ಭಾಗ್ಯ. ಪ್ರಕಾಶ ಹಾಗು ಅದು ಪ್ರೇರಿಸುವ ಪ್ರಯತ್ನಗಳು ಜೀವನ ವಿಕಾಸದ ದಿಶೆಯಲ್ಲಿ ವಹಿಸುವ ಪಾತ್ರ ಪ್ರಮುಖವಾದುದು ಎಂದು ಹೇಳಬಹುದು. ಎಲ್ಲೆಡೆಯಲ್ಲಿ ಹಬ್ಬಿ ಹರಡುವ ಹೊರ ಬೆಳಕಿಗೆ ಮಾನವನ ಬುದ್ಧಿಭಾವಗಳ ಒಳಬೆಳಕು ಬೆರೆದಷ್ಟೂ ಜೀವನ ವಿಕಾಸದ ದಾರಿ ಸುಗಮವಾಗುತ್ತದೆ. 'ಕಿಟಕಿಯನ್ನು ತೆರೆಯಿರಿ ; ಇನ್ನಿಷ್ಟು ಬೆಳಕು ಬರಲಿ' ಎಂದು ಜರ್ಮನ್ ಕವಿ ಗಯಟೆ ತನ್ನ ಇಹಜೀವನದ ಕೊನೆಯ ಗಳಿಗೆಯಲ್ಲಿ ನುಡಿದ ಅನುಭವದ ನುಡಿ ಇಲ್ಲಿ ನೆನಪಾಗದಿರದು. ಬೆಳಕು ಬಾಳಿಗೆ ಅತ್ಯಂತ ಆವಶ್ಯಕ, ಆರೋಗ್ಯಕರ, ಆನಂದದಾಯಕ, ಚೇತೋಹಾರಿಯಂತೂ ಸರಿಯೇ ಸರಿ.

ಮನದ ಒಳಬೆಳಕಿನ ಮಾತಂತಿರಲಿ, ಹೊರ ಜಗದ ಬೆಳಕಿನಲ್ಲೂ ಪ್ರಕೃತಿಯನ್ನು ಅರಳಿಸುವ ಗುಣವುಂಟು. ಬೆಳಕಿನಿಂದ ನಿಸರ್ಗವು ದಿನದ ಚೇತನ ಪಡೆಯುತ್ತದೆ. ಗಿಡಬಳ್ಳಿಗಳು ಋತುಗತಿಗನುಸಾರವಾಗಿ ಚಿಗುರಿ ಕುಡಿಚಾಚುತ್ತವೆ ; ಹೊಗರೇರುತ್ತವೆ, ಮೊಗ್ಗು ಬಿರಿದು ಹೂ ಹೂವು ಅಂದವಡೆಯುತ್ತವೆ.

ಇನ್ನೊಂದು ಚೆನ್ನ ಗುಣವೂ ಉಂಟು ಬೆಳಕಿನಲ್ಲಿ. ಜಗಕ್ಕೆ ಬಣ್ಣವಿಟ್ಟು ಬೆಡಗುಗೊಳಿಸುವ ಗುಣವದು. ಹಸಿರು ಹುಲ್ಲು, ವಿವಿಧ ವರ್ಣಗಳ ಕುಸುಮ ಸಂಕುಲ, ನೀಲಾಕಾಶ, ಚೊಕ್ಕಟ ಬಿಳಿ ಹೊಳಪಿನ ಚಿಕ್ಕೆ ಸಂಜೆ ಮುಂಜಾವುಗಳಲ್ಲಿ ಪಡುವಣದ ಹಾಗು ಮೂಡಣದ ಬಾನು ಕಣ್ಣಿಗೆತ್ತಿ ತೋರುವ ಹೊಂಬೆಳಕು ಹಾಗು ಚೆಂಬೆಳಕು ವಿರಳವಾಗಿಯಾದರೂ ಸಪ್ತವರ್ಣಗಳನ್ನು ಸುಮನೋಹರವಾಗಿ ಎತ್ತಿತೋರುವ ಮಳೆ ಬಿಲ್ಲು ಇವೆಲ್ಲ-ಬಣ್ಣ ಬೆಡಗುಗಳ ಸಕೀಲ ಸಂಬಂಧವನ್ನು ಸುಳುಹುಗಾಣಿಸುವ ದೃಶ್ಯಗಳು.

ಬೆಳಗಿನಲ್ಲಿ ನೇಸರನು ಉದಯಿಸುವ ಮುನ್ನ ಮೂಡಣದಿಗಂತದಲ್ಲಿ ಹೊಮ್ಮಿ ಬರುವ ಕೆಂಪುಕಾಂತಿಯ ಅಂದದ ನೋಟ ನಮಗಿಲ್ಲಿ ಪ್ರಸ್ತುತ. ಅರುಣೋದಯವೆಂದೂ,

ಅರುಣರಾಗವೆಂದೂ ಅದನ್ನು ಕರೆಯುವುದುಂಟು, ಕಲ್ಪಕತೆಯೊಡನೆ ಈ ನೋಟವನ್ನು ಬಗೆಗೊಳಿಸುವ ರಮ್ಯರೂಪಕವೊಂದಿದೆ. 'ಬೆಳಗಿನ ರಾಣಿ ಉಷಾದೇವಿ (the goddess of dawn) ನಸುಕಿನಲ್ಲಿ ಪ್ರಸನ್ನ ವದನಳಾಗಿ ಎದ್ದು, ತನ್ನ ಹೊಂಬೆರಳ ಹಸ್ತದಿಂದ ಇರುಳಿನ ತೆರೆಯನ್ನು ಓಸರಿಸಿ ನೇಸರನ ಆಗಮನವನ್ನು ಮುಮ್ಮೊದಲೆ ಘೋಷಿಸುತ್ತಾಳೆ.

ಸರಿ, ಸಂಜೆಯಲ್ಲಿ ಪಡುವಣ ದಿಸೆ ಈ ಬಗೆಯ ರಂಗುರಂಗಿನ ಸೊಬಗನ್ನು ಮತ್ತೆ ಬಗೆಗೆತ್ತಿ ತೋರಬಲ್ಲದು. ಗರಿಮೋಡಗಳ ಸಂಪರ್ಕದಿಂದ ಸಂಜೆಗೆಂಪು ಹೆಚ್ಚು ಮನೋಹರವಾಗಿ ಪರಿಣಮಿಸುತ್ತದೆ. ಜೊತೆಗೆ ಅದು ವರ್ಣವೈವಿಧ್ಯವನ್ನು ಚೆನ್ನಾಗಿ ಎತ್ತಿತೋರುವುದೂ ಉಂಟು.

ಸಂಜೆ-ಮುಂಜಾವುಗಳ ಈ ವರ್ಣ ಮನೋಹರ ಕಾಂತಿಗೆ 'ಚೆಂಬೆಳಕು' ಎಂಬ ಸಮುಚಿತವಾದ ಅಚ್ಚಗನ್ನಡ ಶಬ್ದ ಇತ್ತೀಚೆಗೆ ಬಳಕೆಗೊಂಡಿದೆ. ಈ ಸಮಸ್ತಪದವನ್ನು ಕೆಚ್ಚನೆ (ಕೆಂಪು) ಬೆಳಕೆಂದು ಬಿಡಿಸಿದರೂ ಸರಿ ; ಚೆನ್ (ಚೆನ್ನ) ಬೆಳಕು ಎಂದು ಬಿಡಿಸಿದರೂ ಸರಿ. ಮೇಲಾಗಿ, ಅಂದವಾಗಿ ಬಾಯ್ತುಂಬ ಬರುವ ನಾದಮಯ ಪದ 'ಚೆಂಬೆಳಕು'.

ಅದು ಅಂತಿರಲಿ ; ಚೆಂಬೆಳಕಿನ ಬಗೆಗೆ ವಿಶೇಷವಾಗಿ ಹೇಳಬೇಕಾದ ಮಾತೊಂದಿದೆ. ೧೯೫೦ರ ಒಳಹೊರಗೆ ಉದಯೋನ್ಮುಖ ಕವಿಯೊಬ್ಬನು ಬಿ. ಎ. ಪರೀಕ್ಷೆಗಾಗಿ ಓದುತ್ತಿದ್ದ ತನ್ನ ಅಧ್ಯಯನದ ಕೋಣೆಗೆ 'ಚೆಂಬೆಳಕು' ಎಂದು ಇಟ್ಟಿದ್ದ ಹೆಸರು ನನ್ನ ಗಮನಕ್ಕೆ ಬಂತು. ಆತನು ತನ್ನ ಕವಿತೆಗಳ ಬಗೆಗೆ ಮೊದಲೇ ಮೂಡಿಸಿದ್ದ ಭರವಸೆ ಸತ್ಯವಾಗಿದೆ. ಈಗ ಅವರು ಒಬ್ಬ ಸುವಿಖ್ಯಾತ ಕವಿ. ಆಗ ಅಧ್ಯಯನದ ಕೋಣೆಗೆ ಇಟ್ಟ ಹೆಸರು ಈಗ ಅವರು ವಾಸಿಸುತ್ತಿರುವ ಸ್ವಂತ ಮನೆಗೆ ಯೋಗ್ಯವಾಗಿ ಮೂಡಿ ಬಂದಿದೆ ; ಚೆಂಬೆಳಕಿಗೆ ಬಾಗಿಲು ತೆರೆದಿದೆ. ನನ್ನ ಗಮನಕ್ಕೆ ಬಂದ ಮಟ್ಟಿಗೆ 'ಚೆಂಬೆಳಕು' ಎಂಬ ಶಬ್ದ ಪ್ರಪ್ರಥಮವಾಗಿ ಬಳಕೆಗೊಂಡುದು ಕವಿ ಕಣವಿ ಅವರ ಕವಿತೆಗಳಲ್ಲಿ ೧೯೪೯ರಲ್ಲಿ ; ಕವಿಯ ಎಳವಯದಲ್ಲಿ, ಪ್ರಥಮ ಮುದ್ರಣ ಕಂಡ ಅವರ ದ್ವಿತೀಯ ಕವನ ಸಂಗ್ರಹ 'ಭಾವಜೀವಿ' ಯಲ್ಲಿಯೇ ಚೆಂಬೆಳಕು ಸುಳಿದು ಬಂದ ಸಂಗತಿ ಇಲ್ಲಿ ಗಮನಾರ್ಹ.

"ಕಾವ್ಯ ಕಲೆ ಸಂಸ್ಕೃತಿಯ ಹೊಳಹು ತೆರೆ ಹೊಡೆದಂತೆ  
'ಭಾವಜೀವಿ'ಯ ಮನವು ಮುಂದೋಡಿತು.

ಮೂಡಣದ ಚೆಂಬೆಳಕು ಉಷೆಯ ದರ್ಶನವೀಯೆ  
ಎದೆಯ ಬಟ್ಟಲು ತುಂಬಿ ತುಳುಕುತಿತ್ತು.

ಬೆಳಗಿನ ಅರುಣ ದೀಪ್ತಿಯಲ್ಲಿ ಹೇಗೋ ಹಾಗೆ ಸಂಜೆಗೆಂಪಿನ ನೋಟದಲ್ಲೂ ಕವಿ ಚೆನ್ನವೀರ ಕಣವಿ ಅವರಿಗೆ ಮೊದಲಿನಿಂದಲೂ ಆಸಕ್ತಿ, ಅಭಿರುಚಿ. ಅವರ 'ಭಾವಜೀವಿ'

ಇದಕ್ಕೆ ನಿದರ್ಶನ. ಆ ತರುವಾಯದ ಅವರ ಅನೇಕ ಕವನಗಳಲ್ಲಿ ಚೆಂಬೆಳಕು ಚೇತೋಹಾರಿಯಾಗಿ ಮೂಡಿಬಂದುದುಂಟು.

ಪ್ರಕೃತಿ-ಮಾತೆಯ ಮಡಿಲ ಹಸುರು ಕುಸುರಿನ ಮೃದುಲ
ತಲ್ಪದಲಿ ಹಾಯಾಗಿ ಮೈ ಚಾಚಿರೆ
ಪಡುವಣದ ಬಾನದೇಗುಲದೆದುರು ಕಿರುಮೋಡ
ಮೌನದಲಿ ತಲೆಬಾಗಿ ಕೈ ಮುಗಿದಿರೆ
ಪೊಂಜೊಡರು ತೂಗಿದೊಲು ನೆಲಬಾನ ತಳ್ಕೆಯಲಿ
ನೇಸರನು ಬಿಡುಗಣ್ಣನಾಗುತಿರಲು
ಸಿಂಗರದ ಬಂಗಾರದಂಗಾರ ಹರಡಿದೊಲು
ಹೊಂಬೆಳಕು ಹೊಡಕರಿಸಿ ಹೊಮ್ಮುತಿರಲು
ಮನಸಿನೇಕಾಂತದಲಿ ಹಗಲುಗನಸಿನ ಸ್ವರ್ಣ
ಮಂದಿರದ ಛಾಯೆಯೊಲು ಬೆಟ್ಟ ಕಾನು ॥

ಕವಿ ಕಣವಿ ಅವರ ದೃಷ್ಟಿಯಲ್ಲಿ ಹೊಂಬೆಳಕಾಗಲಿ, ಚೆಂಬೆಳಕಾಗಲಿ ಕೇವಲ ಹೊರಗಣ ಬೆಳಕಲ್ಲ. ಎದೆಯ ಅಂತಃಕರಣವನ್ನು ಬಿಂಬಿಸುವ ಪ್ರತಿಮೆಗಳವು ; ಅವರು ನಮ್ಮ ಹೊಸಕಾವ್ಯದ ಚೆಂಬೆಳಕು.

ಸ.ಸ. ಮಾಳವಾಡ

# ವಯಸ್ಸಿಗೆ ಮೀರಿದ ಪ್ರೌಢಿಮೆ

ಶ್ರೀ ಚೆನ್ನವೀರ ಕಣವಿ ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿ ಪ್ರವೇಶ ಪಡೆದದ್ದು 1946 ರಲ್ಲಿ. ಅದಕ್ಕೆ ಒಂದೆರಡು ವರುಷ ಪೂರ್ವದಲ್ಲಿಯೇ ನನಗೆ ಅವರ ಸಂಪರ್ಕವುಂಟಾಗಿತ್ತು. ಒಮ್ಮೆ ನಾನು ಧಾರವಾಡದ ಆರ್. ಎಲ್. ಎಸ್. ಹಾಯ್ ಸ್ಕೂಲಿಗೆ ಅತಿಥಿಯಾಗಿ ಹೋಗಿದ್ದೆ. ಅಂದಿನ ಕಾರ್ಯಕ್ರಮದಲ್ಲಿ ಅವರ ಸ್ವರಚಿತ ಕವನ ವಾಚನ ಕೇಳಿದೆ. ಆ ಚಿಕ್ಕ ವಯಸ್ಸಿನಲ್ಲಿ ಅವರು ತೋರಿದ ವಿಚಾರ-ಭಾವ-ಭಾಷೆಗಳ ಪ್ರೌಢಿಮೆಯು ನನ್ನಲ್ಲಿ ಗಾಢವಾದ ಸಂವೇದನೆಯನ್ನುಂಟು ಮಾಡಿತು.

ಮುಂದೆ ಅವರು ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿ ಪ್ರವೇಶ ಪಡೆದಾಗ ನನಗೆ ಬಹಳ ಸಂತೋಷವೆನಿಸಿತು. ಕನ್ನಡದಲ್ಲಿ ಆಸ್ಥೆ-ಸಾಮರ್ಥ್ಯವುಳ್ಳ ಮತ್ತು ಅವೇ ಪ್ರಧಾನ ಲಕ್ಷಣವಾಗಿರುವ ವಿದ್ಯಾರ್ಥಿಗಳ ಸಂಖ್ಯೆ ಆಗ ಬಹಳ ಚಿಕ್ಕದಾಗಿತ್ತು. ಆದುದರಿಂದ ಕಣವಿಯವರ ಬಗೆಗೆ ನನಗೆ ಅಭಿಮಾನವೆನಿಸಿತ್ತು. ತಮ್ಮ ಸವಿಯಾದ ಮಾತು, ಎಲ್ಲರೊಂದಿಗೆ ಹೊಂದಿಕೊಂಡು ಹೋಗುವ ಜಾಣ್ಮೆ, ಸ್ವಭಾವ, ಸಮತೂಕದ ವರ್ತನೆಗಳಿಂದಾಗಿ, ಅವರು ವಿದ್ಯಾರ್ಥಿಗಳಿಗೆ, ಪ್ರಾಧ್ಯಾಪಕರಿಗೆ ಅಚ್ಚುಮೆಚ್ಚಿನವರಾದರು. ವಯಸ್ಸಿಗೆ ಮೀರಿದ ಪ್ರೌಢಿಮೆಯು ಅವರ ಕವನಗಳಲ್ಲಿ, ಅವರ ಸಾರ್ವಜನಿಕ ವರ್ತನೆಯಲ್ಲಿ ಆಗ ನನಗೆ ಕಂಡುಬಂದವು.

ಕಟ್ಟುನಿಟ್ಟಿನ ಗಂಭೀರ ಸ್ವಭಾವ ನನಗೆ ವಾಡಿಕೆಯಾದುದು. ಅಂತೆಯೆ ಹಲವು ವಿದ್ಯಾರ್ಥಿಗಳು ನನ್ನಿಂದ ಕೆಲವೊಂದು ಅಂತರದಲ್ಲಿಯೇ ಉಳಿಯುತ್ತಿದ್ದರು. ಆದರೆ ಅಭ್ಯಾಸ, ಸ್ವಭಾವಗಳಿಂದ ನನಗೆ ಮೆಚ್ಚಿಗೆಯಾಗುವ ಕಿರಿಯ ಸಂಖ್ಯೆಯ ವಿದ್ಯಾರ್ಥಿಗಳನ್ನು ನಾನಾಗಿಯೇ ಸಲಿಗೆಯಿಂದ ಹತ್ತಿರಕ್ಕೆ ಬರಮಾಡಿಕೊಳ್ಳುತ್ತಿದ್ದೆ. ಅಂಥವರಲ್ಲಿ ಶ್ರೀಕಣವಿ ಆಗ ಪ್ರಮುಖರಾಗಿದ್ದರು. ವಿದ್ಯಾರ್ಥಿಗಳ ಅಂದಿನ ಸಾಮಾನ್ಯ ಪ್ರಲೋಭನೆಗಳಿಂದ ದೂರ ಉಳಿದು ಪಾಠ, ಸಾಹಿತ್ಯೋಪಾಸನೆ, ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ಅವರು ಹೆಚ್ಚಿನ ಆಸ್ಥೆ ತೋರಿಸುತ್ತಿದ್ದರು. ಅಂತೆಯೆ ಅವರು ನನಗೆ ಸಲಿಗೆಯ ವಿದ್ಯಾರ್ಥಿಯಾಗಿದ್ದರು.

1947 ಅಗಸ್ಟ 15 ನೇ ದಿನಾಂಕವು ಭಾರತ ಸ್ವಾತಂತ್ರ್ಯೋದಯದ ಸಂಭ್ರಮವನ್ನು ನಮ್ಮೆಲ್ಲರಿಗೆ ತಂದಿತು. 14ನೆಯ ದಿನಾಂಕ ರಾತ್ರಿಯೆಲ್ಲ ನಾವು ಕೆಲವು ಪ್ರಾಧ್ಯಾಪಕರು, ವಿದ್ಯಾರ್ಥಿಗಳು ಧಾರವಾಡದಲ್ಲಿ ಸುತ್ತಾಡಿದೆವು. ಆ ಸುತ್ತಾಟದಲ್ಲಿ ನಾನು ಕಣವಿಯವರನ್ನು ಸೇರಿಸಿಕೊಂಡಿದ್ದೆ. ಕರ್ನಾಟಕ ಕಾಲೇಜಿನ ಬಯಲಿನಲ್ಲಿ ಸ್ವಾತಂತ್ರ್ಯೋತ್ಸವದ

ದಿನವನ್ನು ಅಂದು ನಾವು ವಿಜೃಂಭಣೆಯಿಂದ ಆಚರಿಸಿದಾಗ 'ಆಗಸ್ಟ 15' ಎಂಬ ತಮ್ಮ ಕವಿತೆಯನ್ನು ಶ್ರೀ ಕಣವಿ ಸಭೆಯಲ್ಲಿ ಓದಿದರು. ಆ ಕವಿತೆ ಸಭಿಕರನ್ನು ರೋಮಾಂಚನಗೊಳಿಸಿತು.

ಕಾಲೇಜಿನ ಕರ್ನಾಟಕ ಸಂಘದ ಚಟುವಟಿಕೆಗಳಲ್ಲಿ ಶ್ರೀ ಕಣವಿ ಮಹತ್ವದ ಪಾತ್ರ ವಹಿಸಿದರು. ಉತ್ಸಾಹ ಹೆಚ್ಚಿದ್ದು, ಸಾಧನ ಸಂಪತ್ತಿಯ ಅಭಾವವಿದ್ದ ಕರ್ನಾಟಕ ಸಂಘಕ್ಕೆ ಕಣವಿಯಂತಹ ಕಾರ್ಯಕರ್ತರು ದೊರೆತದ್ದು ಒಳ್ಳೆಯದಾಯಿತೆಂದು ನಾನು ಭಾವಿಸಿದೆ. ವಿದ್ಯಾರ್ಥಿಗಳ ವಿಭಿನ್ನ ಸ್ವಭಾವದಿಂದಾಗಿ ಕರ್ನಾಟಕ ಸಂಘದ ಚಟುವಟಿಕೆಗಳಲ್ಲಿ ಕೆಲವೊಂದು ಘರ್ಷಣೆಗಳೂ ಕಂಡು ಬರುತ್ತಿದ್ದವು. ಇಂತಹ ಸಂದರ್ಭಗಳನ್ನು ಕಣವಿ ತಮ್ಮ ಸವಿನುಡಿಯಿಂದ, ವಿನೋದ ಬುದ್ಧಿಯಿಂದ ಸುಗಮಗೊಳಿಸುತ್ತಿದ್ದರು. ಸಂಘದ ಚಟುವಟಿಕೆಗಳಿಗಾಗಿ ವಿದ್ಯಾರ್ಥಿಗಳಲ್ಲಿ ಕಾರ್ಯಾಸಕ್ತಿಯನ್ನು ಹೆಚ್ಚಿಸುವ ಹೊಣೆಯನ್ನು ಕಣವಿಯವರಿಗೆ ವಹಿಸಿಕೊಟ್ಟು ತಣ್ಣಗೆ ಕೂಡುವದು ನನಗೆ ಸಾಧ್ಯವಾಯಿತು.

ಬಿ. ಎ. ವರ್ಗದ ಕನ್ನಡ ಆನರ್ಸ್ ವಿದ್ಯಾರ್ಥಿಗಳ ಗುಂಪಿನ ಮುಖಂಡತ್ವ ಸಹಜವಾಗಿಯೇ ಕಣವಿಯವರಿಗೆ ದೊರೆಯಿತು. ಪರೀಕ್ಷೆಯಲ್ಲಿಯೂ ಮೇಲಿನ ಸ್ಥಾನವನ್ನುಗಳಿಸಿದರು. ಐಚ್ಛಿಕ ವಿಷಯದಲ್ಲಿ ಎಲ್ಲರಿಗಿಂತ ಹೆಚ್ಚಿನ ಗುಣಾಂಕ ಬಂದಿದ್ದರೂ ನಿಯಮಾವಳಿಯನ್ನು ಹೊಸ ಬಗೆಯಾಗಿ ಅನ್ವಯಿಸಿದ ಮೂಲಕ ಆ ವರುಷದ ದಕ್ಷಿಣಾಫೆಲೋಶಿಪ್ ಸ್ವಲ್ಪದರಲ್ಲಿಯೇ ಅವರಿಗೆ ತಪ್ಪಿದಂತಾಯಿತು. ಪದವೀ ಪೂರ್ವದ ಸಾಹಿತ್ಯ ಸ್ಪರ್ಧೆಗಳಲ್ಲಿ ಇವರು ಮೇಲ್ಮಟ್ಟದ ಪಾರಿತೋಷಕಗಳನ್ನೂ ಪಡೆದರು.

ಇವರ 'ಕಾವ್ಯಾಕ್ಷಿ', 'ಭಾವಜೀವಿ' ಕವನ ಸಂಕಲನಗಳು ಪ್ರಕಟಗೊಂಡುದು ವಿದ್ಯಾರ್ಥಿ ದೆಸೆಯಲ್ಲಿಯೇ. ವಿದ್ಯಾರ್ಥಿಗಳ ಪುಸ್ತಕ ಪ್ರಕಟನೆಗೆ ಅಂದಿನ ಕಾಲವು ಅನುಕೂಲವಾಗಿರಲಿಲ್ಲವೆಂಬುದನ್ನೂ ಗಮನಿಸಿದಾಗ ಅವುಗಳಿಗೆ ದೊರೆತ ಮನ್ನಣೆ ಇನ್ನೂ ಹೆಚ್ಚಿನ ಮಹತ್ವದ ಮಾತಾಗಿದೆ. ಅಂದಿನ ಮನ್ನಣೆಯನ್ನು ಈಗಲೂ ಕಾಯ್ದುಕೊಂಡು, ಅವರು ಕ್ರಮಶಃ ಹೆಚ್ಚಿನ ಎತ್ತರಕ್ಕೂ ಏರುತ್ತ ಬಂದಿರುವದು ಅಭಿಮಾನದ ಸಂಗತಿಯಾಗಿದೆ.

ಅಂದಿನ ವಿದ್ಯಾರ್ಥಿಗಳಲ್ಲಿ ಯಾರೂ ಕೈಕೊಳ್ಳದಂತಹ ಒಂದು ವಿಶೇಷ ಬಗೆಯ ಸಂಘಟನೆಯನ್ನು ಕಿರಿಯ ವಿದ್ಯಾರ್ಥಿ ಕಣವಿ ಯೋಜಿಸಿ, ನಿರ್ವಹಿಸಿದ್ದು ಅವರ ವ್ಯಕ್ತಿತ್ವದ ಸಂಕೇತವಾಗಿದೆ. ತಾವು ವಾಸಿಸುತ್ತಿದ್ದ ಬಾಡಿಗೆಯ ಕೋಣೆಯಲ್ಲಿ 'ಕಾವ್ಯಾನುಭವ ಮಂಟಪ'ವನ್ನು ನಿರ್ಮಿಸಿ, ಅಲ್ಲಿ ಕಾವ್ಯವಾಚನ, ಕಾವ್ಯ ವಿಮರ್ಶೆಯ ಕಾರ್ಯಕ್ರಮವನ್ನು ಅವರು ನಿಯಮಿತವಾಗಿ ನೆರವೇರಿಸುತ್ತಿದ್ದರು. ಸ್ನೇಹ ಜೀವಿಯಾದ ಅವರು ಸಮವಯಸ್ಸಿನ ಹಲವರನ್ನು ಅಲ್ಲಿ ಸೇರಿಸುತ್ತಿದ್ದರು. ಕರ್ನಾಟಕ ಕಾಲೇಜಿಗೆ, ಧಾರವಾಡಕ್ಕೆ ಆಗಮಿಸಿದ ಹಿರಿಯ ಸಾಹಿತಿಗಳನ್ನು ಅವರು 'ಕಾವ್ಯಾನುಭವ ಮಂಟಪ'ಕ್ಕೆ ಆಮಂತ್ರಿಸುತ್ತಿದ್ದರು. ಗೋಕಾಕ, ಬೇಂದ್ರೆ, ಮುಗಳಿ, ಸಿಂಪಿ ಲಿಂಗಣ್ಣ, ಜೀಜಿ ಮುಂತಾದವರು ಅವರಿಗೆ ಸಲಿಗೆ

ಯುವರಾಗಿದ್ದನ್ನು ನಾನು ಆಗ ಕಂಡುಕೊಂಡೆ. ರನ್ನ ಮಹಾಕವಿಯ ಸಹಸ್ರ ಸಾಂವತ್ಸರಿಕೋತ್ಸವವು ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ನಡೆದಂತೆ 'ಕಾವ್ಯಾನುಭವ ಮಂಟಪ'ದಲ್ಲಿಯೂ ನಡೆದದ್ದು ಗಮನಾರ್ಹವಾಗಿದೆ.

ತಮ್ಮ ವಾಸದ ಕೋಣೆಯನ್ನು ಚೊಕ್ಕಟವಾಗಿ, ಅಚ್ಚುಕಟ್ಟಾಗಿ ಇಡುವಲ್ಲಿ ಅವರ ಕಲಾಭಿರುಚಿ ವ್ಯಕ್ತವಾಗುತ್ತಿತ್ತು. ಬೇಂದ್ರೆ, ಕುವೆಂಪು ಅವರ ಭಾವಚಿತ್ರಗಳೊಂದಿಗೆ ಶೆಲ್ಲಿ-ಕೀಟ್ಸರ ಭಾವಚಿತ್ರಗಳೂ ಸೇರಿದ್ದವು. ನಿತ್ಯವೂ ಸುಂದರ ಗುಲಾಬಿ ಹೂಗಳು ಅವರ ಹೂದಾಸಿಯಲ್ಲಿ ಕಂಪು ಬೀರುತ್ತಿದ್ದವು. ಒಳಗೆ ಹೂವಿನ ಪರಿಮಳ ಹಾಗೂ ಕಾವ್ಯಾನುಭವ ನಮ್ಮನ್ನು ಆಕರ್ಷಿಸುತ್ತಿದ್ದವು. ಇದೆಲ್ಲವೂ ಬಾಡಿಗೆಯ ಒಂದು ಚಿಕ್ಕ ಕೋಣೆಯಲ್ಲಿ, ಕರ್ನಾಟಕ ಕಾಲೇಜಿನ ವಿದ್ಯಾರ್ಥಿಗಳ ಬಗೆಗೆ ಆಗ ಮನೆಯ ಮಾಲಿಕರು ಸದಭಿಪ್ರಾಯ ವಿಟ್ಟುಕೊಂಡಿರಲಿಲ್ಲ (ಈಗ ಹೇಗಿದೆಯೊ ?) ಆದರೆ ಕಣವಿ ತಮ್ಮ ಸುಮಧುರ ಸ್ವಭಾವದಿಂದ ಮನೆಯ ಮಾಲಿಕರಿಗೆ ಆತ್ಮೀಯರಾಗಿದ್ದುದು ನನಗೆ ನೆನಪಿದೆ.

ಕಾಲೇಜಿಗೆ, ಕರ್ನಾಟಕ ಸಂಘಕ್ಕೆ ಅತಿಥಿಗಳಾಗಿ ಬರುತ್ತಿದ್ದ ಹಿರಿಯ ಕನ್ನಡ ಸಾಹಿತಿಗಳ ಧಾರವಾಡ ವಾಸ್ತವ್ಯದ ಯೋಗಕ್ಷೇಮಕ್ಕಾಗಿ ನಾನು ಶ್ರೀ ಕಣವಿಯವರನ್ನೇ ನಿಯೋಜಿಸುತ್ತಿದ್ದೆ. ಅಂತಹ ಹಿರಿಯ ಸಾಹಿತಿಗಳು ಕಣವಿಯವರ ಶ್ರದ್ಧೆ, ಪರಿಶ್ರಮಗಳನ್ನು ಮೆಚಿಕೊಂಡು ನನಗೆ ಹೇಳುತ್ತಿದ್ದರು. ಹಾಗೆ ಹೇಳುತ್ತಿದ್ದವರಲ್ಲಿ ಡಾ. ಮಾಸ್ತಿಯವರು ಮುಖ್ಯರಾಗಿದ್ದರು. ದಿ. ಶ್ರೀ ಶಿವಮೂರ್ತಿಶಾಸ್ತ್ರಿಗಳು 'ಸ್ವಯಂಸೇವಕ ಅವಸ್ಥೆ'ಯ ಕಣವಿಯವರನ್ನು ಕೊನೆಯವರೆಗೂ ಸ್ಮರಿಸಿಕೊಳ್ಳುತ್ತಿದ್ದರು.

ಕನ್ನಡ ಆನರ್ಸ್ ವರ್ಗದಲ್ಲಿ ಕಣವಿ ಶ್ರದ್ಧಾಯುಕ್ತ ವ್ಯಾಸಂಗ, ಸದಭಿರುಚಿ, ಸೂಕ್ಷ್ಮ ನಿರೀಕ್ಷಣೆ, ಚಿಕಿತ್ಸಕ ವಿಮರ್ಶಾದೃಷ್ಟಿಗಳನ್ನು ತೋರ್ಪಡಿಸುತ್ತಿದ್ದರು. ಅಂತೆಯೆ ಅವರು ಮುಂದೆ ಒಳ್ಳೆಯ ಕವಿಯಾಗಿ, ವಿಮರ್ಶಕರಾಗಿ, ವಾಗ್ಮಿಯಾಗಿ ರೂಪುಗೊಂಡದ್ದು ನನಗೆ ಸಹಜವೆನಿಸಿದೆ. ಅಂದಿನ ನಿರೀಕ್ಷೆ ಇಂದು ಫಲಪ್ರದವಾದ ಸಂತೃಪ್ತ ಭಾವನೆಯೂ ನನ್ನದಾಗಿದೆ.

ಒಂದು ವರುಷ ಎಂ.ಎ. ದ ವ್ಯಾಸಂಗ ಮುಗಿದಾಗ ನಾನು ಅವರನ್ನು ಮುಂದಿನ ವಿದ್ಯಾಭ್ಯಾಸಕ್ಕಾಗಿ ದಿ. ಪ್ರೊ. ತೀ. ನಂ. ಶ್ರೀಕಂಠಯ್ಯನವರಿಗೆ, ಮುಂದೆ ಬಾಳಿನ ವಿದ್ಯಾಭ್ಯಾಸಕ್ಕಾಗಿ ಶ್ರೀಮತಿ ಶಾಂತಾ ಕಣವಿಯವರಿಗೆ ಚೆನ್ನವೀರರನ್ನು ಒಪ್ಪಿಸಿದಾಗ ನನ್ನಲ್ಲಿ ಕೃತಾರ್ಥತೆಯ ಭಾವವಿತ್ತು. ಒಪ್ಪಿಸಿಕೊಡುವ ಈ ಕೆಲಸ ಎರಡು ಸಲಕ್ಕೆ ಮುಗಿಯಲಿಲ್ಲ, ಮೂರನೆಯ ಸಲವೂ ಒದಗಿ ಬಂದಿತು. ಅದೆಂದರೆ, ಕರ್ನಾಟಕದ ವಿಶಾಲ ವಿದ್ಯಾವ್ಯಾಸಂಗ. ಸಂಸ್ಕೃತಿ ಸಂವರ್ಧನೆಗಳ ವೇದಿಕೆಯಾಗಿ ಈಗ ಪರಿಣಮಿಸಿದ ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ-ಪ್ರಕಟನ ಶಾಖೆಗೆ (ಆ ಹೆಸರಿನ ಸಲಹೆಯೂ ನನ್ನದೆಂಬುದನ್ನು ಇಲ್ಲಿ ಸೂಚಿಸುವುದು ಪ್ರಸ್ತುತವಾದೀತು) ಒಪ್ಪಿಸಿಕೊಟ್ಟದ್ದು. ಈ ಸಲ್ಲಿಕೆಯು ಅದೆಷ್ಟು ಸಮರ್ಪಕವೆಂಬುದನ್ನು ಈಗ ಇಡಿಯ ಕರ್ನಾಟಕವೇ ಅರಿತುಕೊಂಡಿದೆ.

ಕನ್ನಡಿಗರ ಅಭಿಮಾನಧನ ಪ್ರೊ. ಗೋಕಾಕರು 1949 ರಲ್ಲಿ ಕಣವಿಯವರ ಬದುಕಿಗೆ ಆಳವನ್ನು, ವ್ಯಕ್ತಿತ್ವಕ್ಕೆ ಎತ್ತರ ಬಿತ್ತರಗಳನ್ನು, ನುಡಿಗೆ ಸಮುಚಿತ ವೈಭವವನ್ನು ಕೋರಿ 'ಭಾವಜೀವಿ'ಯ ಮುನ್ನುಡಿಯಲ್ಲಿ ನಾಲ್ಕು ಮಾತು ಬರೆದಿದ್ದರು. ಈಗ ಫಲ ರೂಪಕ್ಕೆ ತಿರುಗಿದ ಆ ಗುಣಗಳಿಗೆ ಇನ್ನೂ ಹೆಚ್ಚಿನ ಸಮೀಚೀನತೆಯು ಒದಗಿ ಬರಲಿ ಯೆಂದು ಹಾರೈಸುತ್ತೇನೆ. ಕಣವಿ ಬಾಳ ಬಂಗಾರದ ಗೆರೆಯು ಸದೃಢವಾಗಿ ಸಾಗಿ ವಜ್ರ ಪ್ರಭೆಯಲ್ಲಿ ಮುಂದುವರಿದು ಶತ ಶರದಗಳ ಶುಭೋದಯವನ್ನು ತಲುಪಲಿ.

## ಎಚ್. ದೇವೀರಪ್ಪ

# ಜ್ಞಾನದಾಸೋಹಿ, ಭಾವಜೀವಿ

ಕರ್ನಾಟಕ ವಿಶ್ವವಿದ್ಯಾಲಯದ 'ವ್ಯಾಸಂಗವಿಸ್ತರಣ ಮತ್ತು ಪ್ರಕಟಣ ವಿಭಾಗ'ವನ್ನು ಜ್ಞಾಪಿಸಿಕೊಂಡಕೂಡಲೇ ಅದರ ನಿರ್ದೇಶಕರಾಗಿರುವ ಶ್ರೀ ಚೆನ್ನವೀರ ಕಣವಿಯವರ ನೆನಪೂ ಸಹಜವಾಗಿಯೇ ಮೂಡಿಬರುವುದು. ಆ ಸಂಸ್ಥೆಗೂ ಇವರಿಗೂ ಇವರನ್ನು ಬಿಟ್ಟು ಅದಿಲ್ಲ, ಅದನ್ನು ಬಿಟ್ಟು ಇವರಿಲ್ಲ ಎನ್ನುವಷ್ಟು ಅವಿನಾಭಾವ ಸಂಬಂಧ. ಆ ಸಂಸ್ಥೆಯ ಸಿದ್ಧಿಗಳಿಗೂ ವೈಶಿಷ್ಟ್ಯ ವೈಭವಗಳಿಗೂ ಶ್ರೀ ಕಣವಿಯವರೇ ಮೂಲ ಕಾರಣಕರ್ತರು ಎಂಬುದು ಎಲ್ಲರೂ ಅರಿತಿರುವ ಸಂಗತಿ. ಆ ಸಂಸ್ಥೆಯನ್ನು ಬೆಳೆಸಿ ಬಲಿಸಿ ಅದಕ್ಕೆ ಸಾರಸ್ವತಲೋಕದಲ್ಲಿ ಸ್ಥಾನ ಮಾನ ಪ್ರಭಾವ ಪ್ರತಿಷ್ಠೆಗಳನ್ನು ತಂದುಕೊಟ್ಟ ಇವರ ವ್ಯಕ್ತಿತ್ವ ಘನತೆ ಗೌರವಗಳನ್ನು ಆ ಸಂಸ್ಥೆಯೂ ಬೆಳೆಸಿ ಬೆಳಗುತ್ತಿರುವುದು.

ವ್ಯಾಸಂಗ ವಿಸ್ತರಣ ವಿಭಾಗ ಆರಂಭವಾಗಿ ಇಂದಿಗೆ ಸುಮಾರು ಇಪ್ಪತ್ತಾರು ವರ್ಷಗಳಾಗಿರಬಹುದು. ಅದರ ಕಾರ್ಯದರ್ಶಿಯಾಗಿ ಕೆಲಸವನ್ನು ಆರಂಭಿಸಿದ ಶ್ರೀ ಕಣವಿಯವರು ಅತ್ತಿತ್ತ, ಅಧ್ಯಾಪಕ ವೃತ್ತಿಯ ಕಡೆಗೋ ಇನ್ನೂ ಹೆಚ್ಚಿನ ಸಂಬಳ ಸಾರಿಗೆಗಳನ್ನು ತರುವ ಸರ್ಕಾರಿ ಹುದ್ದೆಗಳ ಕಡೆಗೋ, ಕಣ್ಣೆತ್ತಿಯೂ ನೋಡಲಿಲ್ಲವೆಂದು ತೋರುತ್ತದೆ. ತಮಗೆ ವಹಿಸಿದ ಪಾತ್ರವನ್ನೇ ನಿಸ್ಪೃಹತೆಯಿಂದ ದಾಸೋಹ ಭಾವದಿಂದ ಅವಿರತವಾಗಿ ನಿರ್ವಹಿಸುತ್ತ ಬಂದರು. "ಕೊಟ್ಟಕುದುರೆಯನೇರಲರಿಯದೆ ಮತ್ತೊಂದು ಕುದುರೆಯ ಬಯಸುವರು ವೀರರೂ ಅಲ್ಲ, ಧೀರರೂ ಅಲ್ಲ" ಎಂದರು ಅಲ್ಲಮದೇವರು. ಈ ಮಾತು ಶ್ರೀ ಚೆನ್ನವೀರ ಕಣವಿಯವರ ಮೇಲೆ ಪ್ರಭಾವ ಬೀರಿರುವುದೋ, ಈ ತೆರನ ಮನೋಧರ್ಮವು ಅವರ ಸಂಸ್ಕಾರದ ಫಲವೋ ತಿಳಿಯದು. ಅದು ಹೇಗೇ ಇರಲಿ ಇದೇ ಅವರ ಗೆಲವಿನ ಗುಟ್ಟು.

ವಿದ್ಯಾರ್ಥಿಗಳಿಗಾಗಿ, ಪ್ರೌಢರಿಗೆ, ಪ್ರೌಢರಲ್ಲದವರಿಗೆ ವೈಜ್ಞಾನಿಕ, ಮಾನವಿಕ ಹಾಗೂ ಸಾಹಿತ್ಯಕ ವಿಷಯಗಳನ್ನು ಒಳಗೊಂಡ ಸಣ್ಣದೊಡ್ಡ ಹೊತ್ತಗೆಗಳನ್ನು ನಿಯತಕಾಲಿಕಗಳನ್ನೂ ಕನ್ನಡದಲ್ಲಿ, ಇಂಗ್ಲಿಷಿನಲ್ಲಿ ಬರೆಯಿಸಿ ಪ್ರಕಟಿಸುವುದೂ ಅವುಗಳ ಮಾರಾಟಕ್ಕೆ ಏರ್ಪಾಡು ಮಾಡುವುದೂ ವಿಶ್ವವಿದ್ಯಾನಿಲಯಗಳ 'ಪ್ರಸಾರಾಂಗ'ಗಳ ಕರ್ತವ್ಯ. ಈ ಸಂಸ್ಥೆಯ ಪ್ರಕಟನೆಗಳ ಪಟ್ಟಿಯನ್ನು ನೋಡಿದರೆ ಶ್ರೀ ಕಣವಿಯವರ ಕಾರ್ಯದಕ್ಷತೆಯೂ ವಿಶ್ವವಿಶಾಲದೃಷ್ಟಿಯೂ ವ್ಯಕ್ತವಾಗುತ್ತವೆ. ಅವರು ಎಲ್ಲೆಲ್ಲಿ ಯಾರಾರಲ್ಲಿ ಪ್ರತಿಭೆಯನ್ನು ಪಾಂಡಿತ್ಯವನ್ನು ಕಂಡಿರುವರೋ ಅವರೆಲ್ಲರನ್ನೂ ಆಹ್ವಾನಿಸಿ ಈ ಜ್ಞಾನದಾಸೋಹ ಕಾರ್ಯದಲ್ಲಿ ಭಾಗಿಗಳಾಗುವಂತೆ ಮಾಡಿರುವರು. ವಿಷಯ ವೈವಿಧ್ಯಕ್ಕೆ ಉಪನ್ಯಾಸ

ಗ್ರಂಥಮಾಲೆಯೊಂದರಲ್ಲೇ ಸುಮಾರು 300 ಪುಸ್ತಿಕೆಗಳನ್ನು ಹೆಸರಿಸಬಹುದು.

ವಿಶ್ವವಿದ್ಯಾಲಯದ ಕೇಂದ್ರಗಳಲ್ಲಿ ನಡೆಸುವ ವಿಶೇಷೋಪನ್ಯಾಸ ಮಾಲೆಗಳು, ಉತ್ತರ ಕರ್ನಾಟಕದ ಬೇರೆ ಬೇರೆ ನಗರಗಳಲ್ಲಿ ಮಾತ್ರವಲ್ಲದೆ, ಮುಂಬಾಯಿ, ಹೈದರಾಬಾದು, ಸೊಲ್ಲಾಪುರ, ಆದವಾನಿ ಮುಂತಾದೆಡೆಗಳಲ್ಲಿ ಅಲ್ಲಿರುವ ಕನ್ನಡಿಗರಿಗಾಗಿ ಏರ್ಪಡಿಸುವ ಉಪನ್ಯಾಸ ಮಾಲೆಗಳು, ವಿಶ್ವವಿದ್ಯಾಲಯದ ವ್ಯಾಪ್ತಿಗೆ ಒಳಪಟ್ಟ ಎಂಟೂ ಜಿಲ್ಲೆಗಳ ಊರೂರುಗಳಲ್ಲಿ ಪ್ರತಿತಿಂಗಳೂ ತಪ್ಪದೆ ನಡೆಸುವ ಉಪನ್ಯಾಸ ಶಿಬಿರಗಳು ಎಲ್ಲವೂ ಯೋಜನಾಬದ್ಧವಾಗಿರುವುವೆಂದೂ ತುಂಬ ಜನಪ್ರಿಯತೆಯನ್ನು ಪಡೆದಿರುವುವೆಂದೂ ಕೇಳಿದ್ದೇನೆ. ಈಗಾಗಲೇ ಮುನ್ನೂರು ಹಳ್ಳಿಗಳಿಗೆ ಹಬ್ಬಿಕೊಂಡಿರುವ ಸಂಚಾರಿ ವಾಚನಾಲಯ ಯೋಜನೆಯು ಹಳ್ಳಿಯ ಜನರಲ್ಲಿ ವಾಚನಾಭಿರುಚಿಯನ್ನು ಬೆಳೆಸಲು ಅನುವಾಗುವುದೆಂಬುದರಲ್ಲಿ ಸಂದೇಹವಿಲ್ಲ.

ಈ ಎಲ್ಲಾ ಕಾರ್ಯಕ್ರಮಗಳಿಗೂ ಕಿರೀಟವಿಟ್ಟಂತೆ, ಕವಿಗಳ ಹಾಗೂ ಸಂತರ ಜಯಂತ್ಯುತ್ಸವಗಳನ್ನು ಅವರವರಿಗೆ ಸಂಬಂಧಪಟ್ಟ ಕ್ಷೇತ್ರಗಳಲ್ಲಿಯೇ ಏರ್ಪಡಿಸುವುದು. ಇದರಿಂದ ಆ ಸ್ಥಳದ ಜನತೆಯಲ್ಲಿ ಜಾಗೃತಿ ಉಂಟಾಗುವುದಲ್ಲದೆ ವಿಶ್ವವಿದ್ಯಾಲಯದ ಬಗೆಗೆ ಆದರ ಅಭಿಮಾನಗಳೂ ಮೂಡುವುವು.

ಆದರೆ —

ಕರ್ನಾಟಕದ ದಕ್ಷಿಣದ ಮೂಲೆಯಲ್ಲಿರುವ ವಿದ್ಯಾರ್ಥಿಯನ್ನೋ ಸಾಮಾನ್ಯ ಓದುಗನನ್ನೋ ಶ್ರೀ ಚೆನ್ನವೀರಕಣವಿಯವರು ಯಾವ ಹುದ್ದೆಯಲ್ಲಿದ್ದಾರೆ? ಎಂದು ಪ್ರಶ್ನಿಸಿದರೆ ಅವನು ಸರಿಯಾದ ಉತ್ತರವನ್ನು ಕೊಡುವನೋ ಇಲ್ಲವೋ ಹೇಳುವುದು ಕಷ್ಟ. ಶ್ರೀ ಕಣವಿಯವರು ಕವಿಗಳು ಎಂದು ಹೇಳಿಯಾನು. ಅಷ್ಟಲ್ಲದೆ ಅವರು ಕರ್ನಾಟಕ ರಾಜ್ಯ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ ಮಾತ್ರವಲ್ಲ; ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ ಆಯ್ಕೆ ಯಾಗುತ್ತಿದ್ದರೆ? ಎಂದು ಅವನು ನಮ್ಮನ್ನೇ ಪ್ರಶ್ನಿಸಿಯಾನು. ಅವರ ಪತ್ನಿ ಶ್ರೀ ಮತಿ ಶಾಂತಾದೇವಿ ಕಣವಿ ಅವರು ಒಳ್ಳೆಯ ಕತೆಗಾರ್ತಿಯರು. ಇಬ್ಬರೂ ಒಬ್ಬರಿಗೊಬ್ಬರು ಸ್ಫೂರ್ತಿ ಸಹಕಾರಗಳನ್ನು ನೀಡುತ್ತಿರುವರು ಎಂದು ಹೆಚ್ಚಿನ ಮಾಹಿತಿಯನ್ನೂ ಒದಗಿಸಿಯಾನು. ಆದರೆ ಶ್ರಿ ಕಣವಿ ಅವರು 'ವ್ಯಾಸಂಗವಿಸ್ತರಣ ಪ್ರಕಟನ ವಿಭಾಗ'ದ ನಿರ್ದೇಶಕರಾಗಿದ್ದಾರೆಂದು ದೇವರಾಣೆ ಹೇಳುವುದಿಲ್ಲ. ನಿಜವಾಗಿಯೂ ಕೊನೆಗೆ, ಕೊನೆತನಕ ಉಳಿಯುವುದು ಕವಿ ಚೆನ್ನವೀರ ಕಣವಿಯೇ.

ಶ್ರೀ ಚೆನ್ನವೀರ ಕಣವಿ ಅವರು ಹುಟ್ಟಿದ್ದು ಧಾರವಾಡ ಜಿಲ್ಲೆಯ ಹೊಂಬಳ ಎಂಬ ಊರಿನಲ್ಲಿ. ಆ ಗ್ರಾಮವು ಶಾಸನಗಳಲ್ಲಿ ಪೊಂಬೊಳಲ್ ಎಂದು ಹೊಗಳಲ್ಪಟ್ಟಿದೆ. ಪೊನ್ + ಪೊಳಲ್ ಎಂದರೆ ಹೊನ್ನಿನ ಪಟ್ಟಣ ಎಂದು ತಾನೆ ಅರ್ಥ? ಆ ಊರಿನಲ್ಲಿ ಸದಾಕಾಲವೂ ಹೊನ್ನಿನ ಹೊಗೆ ಹಾಯುತ್ತಿರಲಿ ಎಂಬುದು ಅದನ್ನು ಕಟ್ಟಿ ಹೆಸರಿಟ್ಟ ಹಿರಿಯ ಸಜ್ಜನರ ಹಾರೈಕೆಯಾಗಿದ್ದಿರಬೇಕು. ಹೊನ್ನಿನ ನಿಯಂತ್ರಣವಿರುವ

ಈ ಕಾಲದಲ್ಲಿ ಆ ಊರಿನಲ್ಲಿ ಹೊನ್ನಿನ ಹೊಗೆ ಹಾಯುತ್ತಿದೆಯೋ ಇಲ್ಲವೋ ನಾವರಿಯೆವು. ಆದರೆ ಅದೇ ಊರಿನಲ್ಲಿ ಹುಟ್ಟಿದ ಶ್ರೀ ಕಣವಿ ಅವರ ಕವನಗಳು ಹೊಂಬೆಳಕನ್ನು ಬೀರುತ್ತಿರುವುದೇನೂ ಸುಳ್ಳಲ್ಲ. ಈ ಕವಿಗಳು ತಮ್ಮ ತಂದೆಯುವರಾದ ಲಿಂ. ಶ್ರೀ.ಸಕ್ಕರೆಪ್ಪನವರಿದ್ದ ಶಿರುಂಜ ಎಂಬ ಹಳ್ಳಿಯಲ್ಲಿ ತಮ್ಮ ಬಾಲ್ಯದ ಬಹುಭಾಗವನ್ನು ಕಳೆದರೆಂದು ಗೊತ್ತಾಗುತ್ತದೆ. ಅವರಿನ್ನೂ ಎಳೆಯರಾಗಿದ್ದಾಗ

" ತಂದೆ ನಸುಕಿನೊಳೆದ್ದು ಅನುಭವಾಮೃತ ಓದೆ
ಸಕ್ಕರೆಯ ನಿದ್ದೆಯಲಿ ಸವಿಯುತಿದ್ದೆ ;
ಮುಂಜಾವ ತನ್ನ ಗುಂಜಾರವದಿ ಕಿವಿ ತುಂಬೆ
ನಾದಲಹರಿಯ ನೂಲನೆಳೆಯುತಿದ್ದೆ ".

—ಎಂದು 'ಭಾವ ಜೀವಿ' ಎಂಬ ಕವನದಲ್ಲಿ ಹೇಳಿ ಕೊಂಡಿದ್ದಾರೆ. ಲಿಂ. ಶ್ರೀಸಕ್ಕರೆಪ್ಪ ಕಣವಿ ಅವರು "ಪ್ರಾಥಮಿಕ ಶಾಲೆಯ ಶಿಕ್ಷಕರಾಗಿದ್ದ ಅವರಿಗೆ ಧರ್ಮನಿಷ್ಠೆ, ಕಾವ್ಯಾಸಕ್ತಿ ಸಹಜವಾಗಿದ್ದುವು. ಅವರು ತಮ್ಮ ಗುರುಗಳು ಹೇಳಿದ ಪದ ಪದ್ಯಗಳನ್ನು ಅತ್ಯಂತ ಭಕ್ತಿಯಿಂದ ತಮ್ಮ ಮುತ್ತಿನಂತಹ ಬರವಣಿಗೆಯಲ್ಲಿ ಸಂಗ್ರಹಿಸಿಕೊಂಡು ಬಂದರು" ಎಂದು ಡಾಕ್ಟರ್ ಸುಂಕಾಪುರ ಅವರು 'ಶ್ರೀ ಚನ್ನವೀರೇಶ್ವರಶತಕ'ದ ಪ್ರಸ್ತಾವನೆಯಲ್ಲಿ ಬರೆದಿದ್ದಾರೆ. ಈ ಎರಡೇ ವಾಕ್ಯಗಳಿಂದ ಲಿಂ. ಸಕ್ಕರೆಪ್ಪನವರ ವ್ಯಕ್ತಿತ್ವವನ್ನು ಊಹಿಸಿಕೊಳ್ಳಬಹುದು. ಅವರು ತಮ್ಮ ಪಾಡಿಗೆ ತಾವು ತಮ್ಮದೇ ಆದ ರಾಗದಲ್ಲಿ ಮಹಲಿಂಗರಂಗನ ಅನುಭವಾಮೃತವನ್ನು "ಓದೆ" ಮಗನು ಅದನ್ನು ಕೇಳುತ್ತ "ನಾದಲಹರಿಯ ನೂಲನೆಳೆಯುತಿದ್ದು" ಮುಂದೆ ಕವಿಯಶಾಗಿ 'ಬದುಕುವ'ನೆಂಬುದನ್ನು ಕನಸು ಕಂಡಿದ್ದರೇನು ? ಅಂತೂ ತಾಯಿ ಪಾರ್ವತಮ್ಮನವರ ತವರು ಮನೆಯ ವಾತಾವರಣ, ತಂದೆಯ ಪವಿತ್ರ ಪ್ರೇಮಮಯ ಸಾನ್ನಿಧ್ಯ ಎರಡರ ಪ್ರಭಾವವನ್ನೂ ಶ್ರೀ ಕಣವಿ ಅವರ ಕವನಗಳಲ್ಲಿ ಕಾಣಬಹುದು. ಅವರ ಕವನ ಸಂಕಲನಗಳನ್ನೂ ಇತರ ಕೃತಿಗಳನ್ನೂ ಕುರಿತು ರಸಿಕ ವಿಮರ್ಶಕರು ಸುದೀರ್ಘವಾಗಿ ವಿಮರ್ಶೆ ಮಾಡಿರುವುದರಿಂದ ಆ ಬಗೆಗೆ ಇಲ್ಲಿ ಹೆಚ್ಚು ಹೇಳುವುದು ಸೂಕ್ತವಲ್ಲ ಎನ್ನಿಸುತ್ತದೆ.

ಅವರಿಗೆ ವಿಶ್ವವಿದ್ಯಾಲಯದವರು ವಹಿಸಿರುವ ಕಾರ್ಯಭಾರವು ನಿಜವಾಗಿಯೂ ಭಾರವಾಗಿದ್ದರೂ ಅದರ ಬಗ್ಗೆ ಅವರು ಎಂದೂ ಬೇಸರವನ್ನು ತೋರ್ಪಡಿಸಿದವರಲ್ಲ. ಆದರೆ ಇವರು ಕವನರಚನೆ ಮಾಡುವುದು ಯಾವಾಗ ಮತ್ತು ಹೇಗೆ? ಈ ಪ್ರಶ್ನೆಗೆ ಶ್ರೀ ಕಣವಿಯವರು ಏನು ಉತ್ತರ ಹೇಳುವರೋ ತಿಳಿಯದು. ಕಾವ್ಯವು ಇವರ ಜೀವ ಜೀವಾಳವೇ ಆಗಿರುವುದರಿಂದ ಅದು ತನ್ನ ಕೆಲಸವನ್ನು ಇವರಿಂದ ಹೇಗೋ ಮಾಡಿಸಿ ಕೊಳ್ಳುತ್ತದೆ ಎಂದು ನನ್ನ ಎಣಿಕೆ. ಅದು ಇವರ ಅಂತರಂಗದಲ್ಲಿಯೇ ರೂಪುಗೊಂಡು ಹೊರಕ್ಕೆ ಬರಲು ಹವಣಿಸುತ್ತಿರುವಾಗ ಅದಕ್ಕೆ ಮಾತಿನರೂಪು ಕೊಡದಿದ್ದರೆ ಇವರಿಗೆ ಊಟ ರುಚಿಸುವುದಿಲ್ಲ, ನಿದ್ರೆ ಬರುವುದಿಲ್ಲ ಎಂದು ತೋರುತ್ತದೆ.

ಹೀಗೆಯೇ ಶ್ರೀ ಚೆನ್ನವೀರ ಕಣವಿ ಅವರು ಜ್ಞಾನದಾಸೋಹ ಕಾರ್ಯವನ್ನು ಮಾಡುತ್ತ ಉನ್ನತ ಮಟ್ಟದ ಕವನಗಳನ್ನು ರಚಿಸುತ್ತ 'ಭಾವದ ಕಾಣ್ಕೆ'ಯನ್ನು ನೀಡುತ್ತ ನೂರು ಕಾಲ ಬಾಳಲಿ; ಕನ್ನಡ ಜನಮನವನ್ನು ಸದಾಕಾಲವೂ ಬೆಳಗುತ್ತಿರಲಿ.

## ಜಿ. ವೆಂಕಟಸುಬ್ಬಯ್ಯ

# ಮಿತ ನುಡಿ, ಹಿತಪಾಕ

ನಾನು ಕಣವಿಯವರನ್ನು ಕಾಣುವದಕ್ಕಿಂತ ಮುಂಚೆಯೇ ಅವರ ಕವನ ಸಂಕಲನಗಳನ್ನು ಓದಿದ್ದೆ. ಅವರ ಮೊದಲ ಸಂಕಲನವನ್ನು ಓದಿದಾಗಲೆ ಸಮರ್ಥನಾದ ಕವಿಯ ಆವಿಷ್ಕಾರವನ್ನು ಗಮನಿಸಿದ್ದೆ. ಅವರ 'ಕಾವ್ಯಾಕ್ಷಿ'ಗೆ ದೂರದ ದೃಷ್ಟಿಯಿರುವುದೂ ಭಾವದ ಬೆಳವಣಿಗೆಗೆ ಬೇಕಾದ ಹದವಿರುವುದೂ ನನ್ನ ಗಮನಕ್ಕೆ ಬಂದಿದ್ದಿತು. 'ಭಾವಜೀವಿ', 'ಆಕಾಶ ಬುಟ್ಟಿ', 'ಮಧುಚಂದ್ರ'ಗಳು ಪ್ರಕಟವಾಗಿ ಬಂದಂತೆಲ್ಲ ಅವರ ಕಾವ್ಯದ ಬಗ್ಗೆ ನನ್ನ ಆಸ್ಥೆ ಅಧಿಕವಾಯಿತು, ದೂರದಿಂದಲೇ ಅವರ ಅಭಿವೃದ್ಧಿಯನ್ನು ಮೆಚ್ಚುತ್ತ ಬಂದವರಲ್ಲಿ ನಾನೂ ಒಬ್ಬ.

ಈಚೆಗಂತೂ ಹೊಸದಾರಿಯಲ್ಲಿ ಬರೆದ ಕವಿತೆಗಳಲ್ಲಿ ಬರಿಯ ನವ್ಯತೆಯ ಸೋಗು ಇರದೆ ಸತ್ವ ತುಂಬಿರುವುದನ್ನು ಗಮನಿಸಿದ್ದೇನೆ. ಅವರ ವಿಮರ್ಶಾಲೇಖನಗಳು ಪುಸ್ತಕವಾಗಿ ಬಂದಾಗ ನಾನದನ್ನು ವಿದ್ಯಾರ್ಥಿಗಳಿಗೆ ಪರಿಚಯಮಾಡಿದ್ದುಂಟು. ನನ್ನ ಅಧ್ಯಾಪನ ಸಮಯದಲ್ಲಿ ಅವರ ಕೆಲವು ಕವನಗಳನ್ನು ವಿಶ್ಲೇಷಿಸಿದ್ದುಂಟು.

ಮನೆಯಲ್ಲಿ ಮಗುವಿನ ಬಾಲಲೀಲೆಯನ್ನು ಕುರಿತ ಕವನ ನನಗೆ ತುಂಬ ಪ್ರಿಯವಾದುದು. 'ಕೊನೆಯ ನಿರ್ವಾಣ' ಎಂಬ ಅವರ ಕವನ ಒಂದನ್ನೇ ಕುರಿತು ನಾನೊಮ್ಮೆ ಒಂದು ಗಂಟೆ ಮಾತನಾಡಿದೆ. ಸಭೆಯಲ್ಲಿದ್ದವರು ಕೊನೆಗೆ ಈ ಕವಿಯ ಇತರ ಕವನಗಳ ಬಗ್ಗೆ ಪ್ರಶ್ನೆಗಳನ್ನು ಕೇಳಿದ್ದು ನೆನಪಿದೆ. ಕ್ರೈಸ್ತಮತೀಯ ವ್ಯಕ್ತಿಯನ್ನು ಕುರಿತ ಕವನದಲ್ಲಿರುವ ವಿಶಾಲ ದೃಷ್ಟಿ, ಮಾನವೀಯ ಮೌಲ್ಯಗಳನ್ನು ಕುರಿತ ದೃಢವಾದ ನಂಬಿಕೆಗಳನ್ನು ನಾನು ಮನಸಾರ ಗೌರವಿಸಿದ್ದೇನೆ.

ನಾನು ಅವರ ಕವನ ರಚನಾ ಕೌಶಲವನ್ನು ಕುರಿತು ಮಾಡಿದ್ದ ಟಿಪ್ಪಣಿ ನನ್ನ ಕೈಗೆ ಕೂಡಲೆ ಸಿಕ್ಕಿದ್ದರೆ ಈ ಸಮಯಕ್ಕೆ ಒಂದು ದೀರ್ಘಲೇಖನವನ್ನೇ ಬರೆಯಬಹುದಾಗಿತ್ತು. ನನ್ನ ಗ್ರಂಥಗಳ ಅಡಕಿಲುಗಳ ನಡುವೆ ಈಗ ನನಗದು ಕಷ್ಟವಾಗಿದೆ.

ಆದರೆ ವ್ಯಕ್ತಿ ಕಣವಿ ನನಗೆ ಪರಿಚಯವಾದ ಮೇಲೆ—ಶ್ರೀ ಶಿವರುದ್ರಪ್ಪನವರ ಜೊತೆ ನಾನು ಅವರನ್ನು ಮೊದಲು ಕಂಡದ್ದು – ನನಗೆ ಅವರ ಮೇಲಿನ ವಿಶ್ವಾಸ ಮತ್ತಷ್ಟು ಗಾಢವಾಯಿತು. ಹೀಗಾಗಿ ನಾನು ಧಾರವಾಡಕ್ಕೆ ಹೋದಾಗಲೆಲ್ಲ ನಾನವರ ಮನೆಗೆ ಹೋಗಿ ಬಂದಿದ್ದೇನೆ. ಶ್ರೀಮತಿಯವರ ಆತಿಥ್ಯವನ್ನು ಸ್ವೀಕರಿಸಿ ಆನಂದಿಸಿದ್ದೇನೆ.

ಕಣವಿಯವರದು ಬಹು ಮೃದು ಸ್ವಭಾವ. ಗಟ್ಟಿಯಾಗಿ ಮಾತನಾಡಿದರೆ ಯಾರು ನೊಂದುಕೊಳ್ಳುತ್ತಾರೊ ಎಂಬಂತೆ ಮಾತನಾಡುತ್ತಾರೆ. ಆರೋಗ್ಯವನ್ನು ವಿಚಾರಿಸುವಾಗಲೂ ಅದೇ ಸೌಜನ್ಯವಿದೆ. ಇತರರ ಬಗ್ಗೆ ಮಾತನಾಡುವಾಗ ಅವರ ಗುಣಗಳ ಕಡೆಗೆ ಬೆರಳು ಮಾಡಿ ತೋರಿಸುವ ವಿಶಾಲ ದೃಷ್ಟಿ, ಒಳಿತನ್ನು ಚಿಂತಿಸುವ, ನುಡಿಯುವ, ಬರೆಯುವ, ಮಾಡುವ ಸಹೃದಯತೆ ಇವುಗಳಿಂದ ಅವರು ನಮ್ಮ ಆಧುನಿಕ ಸಾಹಿತಿಗಳಲ್ಲಿ ತುಂಬ ಸ್ನೇಹಪರರಾಗಿ ನಡೆದುಕೊಳ್ಳುತ್ತಾರೆ.

ಆದರೆ ಅವರ ಚಿಂತನೆಯ ಬಗ್ಗೆ ಅನಿರ್ಧಾರದ ಸೋಂಕು ಎಲ್ಲಿಯೂ ಇಲ್ಲ.

“ ಮಿಡಿಗಾಯನೊತ್ತಿಟ್ಟು ಹಿಸುಕಿ ಹಣ್ಣಿಸಬಹುದೆ ?
ಹಸಿ–ಬಿಸಿಯು ರಸಪಾಕವಾಗಬಹುದೆ ? ”

ಎಂದು ಎಳೆತನದಲ್ಲಿ ಕೇಳಿಕೊಂಡ ಪ್ರಶ್ನೆ—ಅವರೇ ಕೇಳಿಕೊಂಡ ಪ್ರಶ್ನೆ—ಅದಕ್ಕೆ ಈಗ ಉತ್ತರವನ್ನು ಅವರು ನೀಡುತ್ತಿದ್ದಾರೆ. ಮಧುರ ರಸ, ಹಿತಪಾಕ, ಸವಿಯಾದ ಶೈಲಿ, ಸುದೂರ ಕರೆದೊಯ್ಯುವ ರಸಿಕ ದೃಷ್ಟಿ ಇವುಗಳಿಂದ ಕನ್ನಡಕ್ಕೆ ಹಿರಿಮೆಯನ್ನು ತರುತ್ತಿದ್ದಾರೆ ಕಣವಿಯವರು.

3 ಅವರಿಂದ ದೇವರು ಈ ರಸಸೇವೆಯನ್ನು ಬಹುಕಾಲ ಸ್ವೀಕರಿಸುತ್ತಿರಲಿ.

ವಿ. ಎಂ. ಇನಾಂದಾರ

# ಅನ್ವರ್ಥಕ

ಶ್ರೀ ಚೆನ್ನವೀರ ಕಣವಿಯವರಿಗೆ ಅರ್ಪಿಸಬೇಕೆಂದ ಸಂಭಾವನಾಗ್ರಂಥಕ್ಕಾಗಿ ಅವರ ವ್ಯಕ್ತಿತ್ವವನ್ನು ಕುರಿತು ಕೆಲವು ಮಾತುಗಳನ್ನು ಬರೆಯಬೇಕೆಂಬ ಸೂಚನೆ ಬಂದಾಗ ನಾನು ತತ್‌ಕ್ಷಣ ಒಪ್ಪಿಕೊಂಡೆ. ಹೀಗೆ ಒಪ್ಪಿಕೊಳ್ಳುವುದಕ್ಕೆ ಕಾರಣಗಳನ್ನು ನನ್ನಲ್ಲಿಯೇ ನಾನು ಹುಡುಕುತ್ತಿದ್ದಾಗ ಅವರ ವ್ಯಕ್ತಿತ್ವದ ಎರಡು ಮುಖಗಳು ಮೊದಲಿನಿಂದಲೂ ನನ್ನ ಮನಸ್ಸಿನಲ್ಲಿ ಅಚ್ಚಾಗಿ ನಿಂತಿವೆ ಎಂದು ಕಂಡಿತು. ಒಂದು ಮೂವತ್ತುವರ್ಷಗಳ ಹಿಂದಿನ ಚಿತ್ರ, ಇನ್ನೊಂದು ಇಂದಿನದು. ಮೂವತ್ತು ವರ್ಷಗಳ ಅಂತರವಿರುವ ಈ ಎರಡೂ ಚಿತ್ರಗಳು ಕೆಲವೊಂದು ವಿವರಗಳಲ್ಲಿ ಬೇರೆಯಾಗಿರುವುದು ಸ್ವಾಭಾವಿಕ; ಅನಿವಾರ್ಯ. ಮೂವತ್ತು ವರ್ಷಗಳೆಂದರೆ ಒಂದು ತಲೆಮಾರು ಎನ್ನುತ್ತಾರೆ. ಅಂದು ಯುವಕ ವಿದ್ಯಾರ್ಥಿಯಾಗಿದ್ದವರು ಇಂದು ನಡುವಯಸ್ಸಿನ ಅಧಿಕಾರಿಗಳಾಗಿದ್ದಾರೆ. ಅಂದು ಕಾಣಿಸಿಕೊಳ್ಳಲೋ ಬೇಡವೋ ಎಂದುಕೊಳ್ಳುತ್ತಿದ್ದ ಅವರ ಕವಿಹೃದಯ ಇಂದು ಅರಳಿ ಹತ್ತಾರು ಬಗೆಗಳಲ್ಲಿ ಕಾಣಿಸಿಕೊಂಡಿದೆ. ಕಾಲಪುರುಷನ ಕೈ ಬೆರಳುಗಳು ಎಲ್ಲರ ಮೇಲಿನ ಹಾಗೆ ಅವರ ಮೈ ಮುಖಗಳ ಮೇಲೆಯೂ ತಮ್ಮ ಗುರುತುಗಳನ್ನು ಮೂಡಿಸಿವೆ.ಆದ್ದರಿಂದ ಹೊರನೋಟಕ್ಕೆ ಎರಡು ಬೇರೆ ಬೇರೆಯಾದ ಚಿತ್ರಗಳು ಕಾಣುತ್ತವೆಯಾದರೂ ಆ ಎರಡೂ ಚಿತ್ರಗಳ ಹಿಂದಿನ ವ್ಯಕ್ತಿತ್ವ ಒಂದೇ ಆಗಿ ಉಳಿದಿದೆ, ತನ್ನತನವನ್ನು ಉಳಿಸಿಕೊಂಡು ಬೆಳೆದಿದೆ. ಹಾಗೆಂದೇ ಬೇರೆಯಾದರೂ ಅದೇ ಆಗಿ ಉಳಿದಿದೆ. ಬೆಳೆದದ್ದರಿಂದ ಬೇರೆಯಾಗಿ ಕಾಣುತ್ತದೆ. ಬೆಳೆಯುತ್ತಿರುವಾಗಿನಿಂದಲೂ ನೋಡಿದವರಿಗೆ ಇದೇ ಅದು ಎಂದು ಹೇಳಲಾಗದಿದ್ದರೂ ಅದೇ ಬೆಳೆದು ಇದಾಗಿದೆ ಎಂದು ಗುರುತಿಸುವುದು ಸಾಧ್ಯ. ಹಾಗೆ ಗುರುತಿಸಬಲ್ಲ ಅವಕಾಶ ನನ್ನದಾಗಿದ್ದರಿಂದ ಅವರ ವಿಷಯದಲ್ಲಿ ಕೆಲವು ಮಾತುಗಳನ್ನು ಹೇಳಬಹುದಾಗಿದೆ.

ಮೂವತ್ತು ವರ್ಷಗಳ ಹಿಂದೆ ಕರ್ನಾಟಕ ಕಾಲೇಜಿನಲ್ಲಿ ನಾನು ಇಂಗ್ಲೀಷ್ ಅಧ್ಯಾಪಕನಾಗಿದ್ದಾಗ ಕಣವಿಯವರು ವಿದ್ಯಾರ್ಥಿಗಳಾಗಿದ್ದರು. ಇಂಗ್ಲಿಷನ್ನು (ಎರಡು ಪೇಪರುಗಳ ಮಟ್ಟಿಗೆ ಎಂದು ಕಾಣುತ್ತದೆ) ಅವರು ಐಚ್ಛಿಕ ವಿಷಯವೆಂದು ಆಯ್ದುಕೊಂಡಿದ್ದರಿಂದ ಗಾತ್ರದ ದೃಷ್ಟಿಯಿಂದ ದೊಡ್ಡದಾಗಿರದ ತರಗತಿಯಲ್ಲಿ ಅವರನ್ನು ನೇರವಾಗಿ ತಿಳಿಯುವುದು ಸಾಧ್ಯವಿದ್ದಿತು. ಒಂದು ವರ್ಷ ಲಿಟನ್‌ಸ್ಟ್ರಾಚಿಯ "ರಾಣಿ ವಿಕ್ಟೋರಿಯಾ" ಎಂಬ ಜೀವನ ಚರಿತ್ರೆಯನ್ನು, ಮತ್ತೊಂದು ವರ್ಷ ಯಾವುದೋ ಒಂದು ನಾಟಕವನ್ನು ಪಾಠ ಹೇಳುತ್ತಿದ್ದೆನೆಂದು ಕಾಣುತ್ತದೆ. ಕಂಪಲ್ಸರಿ ಇಂಗ್ಲಿಷ್ ತರಗತಿಯಲ್ಲಿ ಹಾರ್ಡಿಯ

''ವುಡ್‌ಲ್ಯಾಂಡರ್ಸ್'' ಕಾದಂಬರಿಯನ್ನು ಕಲಿಸುತ್ತಿದ್ದೆ. ಆದರೆ ಅದು ದೊಡ್ಡ ತರಗತಿ. ಸುಮಾರು ಇನ್ನೂರು ವಿದ್ಯಾರ್ಥಿಗಳು. ಆದ್ದರಿಂದ ಕಣವಿಯವರ ಪರಿಚಯ ನನಗೆ ಮೊದಲಾದದ್ದು ಐಚ್ಛಿಕ ಇಂಗ್ಲಿಷ್ ತರಗತಿಯಲ್ಲಿಯೇ. ಯಾವಾಗಲೂ ಶುಭ್ರವಾದ ಖಾದಿ ನೆಹರುಶರ್ಟು, ಮತ್ತು ಪಂಚೆ ; ತೀರ ಸರಳವಾದ ಉಡುಪು. ಮುಖದಲ್ಲಿ ಅದೇ ಸರಳವಾದ ಎಳೆತನ ಸೌಜನ್ಯ. ಒಂದು ದಿನವೂ ತರಗತಿಗೆ ತಡ ಮಾಡಿ ಬರುವವರಲ್ಲ; ತಪ್ಪಿಸುವವರಂತೂ ಅಲ್ಲವೇ ಅಲ್ಲ. ದನಿ ಎತ್ತಿ ಮಾತನಾಡಿದ್ದಿಲ್ಲ. ವಿನೋದದ ಸಂದರ್ಭ ದಲ್ಲಿಯೂ ಗಟ್ಟಿಯಾಗಿ ನಕ್ಕದ್ದಿಲ್ಲ. ತಾನಾಯಿತು, ತರಗತಿಯಲ್ಲಿ ನಡೆದ ಪಾಠವಾಯಿತು. ಅಗತ್ಯವೆನಿಸಿದಾಗ ಟಿಪ್ಪಣಿಗಳನ್ನು ಬರೆದುಕೊಳ್ಳುತ್ತಿದ್ದರು. ಒಟ್ಟಿನಲ್ಲಿ ಒಬ್ಬ ಅತ್ಯಂತ ಸೌಮ್ಯ ಸ್ವಭಾವದ, ಉದ್ಯೋಗ ಶೀಲ, ಸಾಹಿತ್ಯದಲ್ಲಿ ತುಂಬು ಆಸಕ್ತಿಯುಳ್ಳ, ಒಬ್ಬ ವಿದ್ಯಾರ್ಥಿ ಅವರಾಗಿದ್ದರು. ಒಳ್ಳೆಯದಾದ್ದನ್ನು ವಿವರಿಸಿದಾಗ, ಹೊಸ ವಿಷಯವನ್ನು ತಿಳಿಸಿದಾಗ, ಅವರಲ್ಲುಂಟಾದ ಪ್ರತಿಕ್ರಿಯೆಯನ್ನು, ಅವರು ಪಡೆದ ಸಂತೋಷವನ್ನು, ಅವರ ಮುಖದಲ್ಲಿಯೇ ಗುರುತಿಸಬಹುದಾಗಿತ್ತು. ತರಗತಿಯಲ್ಲಿ ಎಲ್ಲರೂ ಇಂಗ್ಲಿಷನ್ನು ಐಚ್ಛಿಕ ವಿಷಯವಾಗಿಸಿಕೊಂಡವರೇ ಇರುತ್ತಿದ್ದರೂ ಎಲ್ಲರ ಆಸಕ್ತಿಯೂ ಒಂದೇ ಬಗೆಯ ದಾಗಿರುತ್ತಿರಲಿಲ್ಲ, ಸಾಹಿತ್ಯದ ಪಾಠವನ್ನು ಹೇಳುವ ಅಧ್ಯಾಪಕನಿಗೆ ತನ್ನ ವಿದ್ಯಾರ್ಥಿಗಳಲ್ಲಿ ನಿಜವಾಗಿಯೂ ಸಾಹಿತ್ಯದ ವಿಷಯದಲ್ಲಿ ಆಸಕ್ತಿ ಇದ್ದವರು ಯಾರು ಎನ್ನುವುದನ್ನು ಗುರುತಿಸುವುದು ಕಷ್ಟವೇನಲ್ಲ. ಅಂಥ ಆಸಕ್ತಿ ತೀವ್ರವಾಗಿದ್ದ ವಿದ್ಯಾರ್ಥಿಗಳಲ್ಲಿ ಕಣವಿಯ ವರೊಬ್ಬರಾಗಿದ್ದರು ಎನ್ನುವುದನ್ನು ಸಹಜವಾಗಿಯೇ ನಾನು ಗುರುತಿಸಿದ್ದೆ. ಅಷ್ಟರಲ್ಲಿಯೇ ನಾನಾದರೂ ಜನಪ್ರಿಯವಾಗಿದ್ದ ಮೂರುನಾಲ್ಕು ಕಾದಂಬರಿಗಳನ್ನು ಬರೆದಿದ್ದೆನಾದ್ದ ರಿಂದ ಬಹುಶಃ ಕಣವಿಯವರು ನನ್ನ ಉಪನ್ಯಾಸಗಳನ್ನು ವಿಶೇಷವಾದ ಆಸ್ಥೆಯಿಂದ ಕೇಳು ತ್ತಿದ್ದಿರಬೇಕು. ನಮ್ಮಿಬ್ಬರ ನಡುವಿನ ''ಅವ್ಯಕ್ತ'' ಸ್ನೇಹ ಅಲ್ಲಿಯೇ ಮೊದಲಾದದ್ದು, ವಿದ್ಯಾರ್ಥಿಯಾಗಿ ಅವರು ನಡೆದುಕೊಳ್ಳುತ್ತಿದ್ದ ಬಗೆಯಲ್ಲಿ, ನಾನಾದರೂ ಇಂಗ್ಲಿಷ್ ಸಾಹಿತ್ಯವನ್ನು ಪಾಠ ಹೇಳುವ ಅಧ್ಯಾಪಕ ಮಾತ್ರವಾಗಿರದೆ ಕನ್ನಡದಲ್ಲಿ ಬರೆಯುತ್ತಿದ್ದ ವರಲ್ಲಿ ಒಬ್ಬನಾಗಿದ್ದೆ ಎನ್ನುವುದರಲ್ಲಿಯೂ.

ಮೂರು ದಶಕಗಳ ನಂತರವೂ ಕಣವಿಯವರಲ್ಲಿ ನಾನು ವಿದ್ಯಾರ್ಥಿದೆಸೆಯಲ್ಲಿ ಕಂಡು ಗುರುತಿಸಿದ ಗುಣವಿಶೇಷಗಳನ್ನೇ ಕಂಡಿದ್ದೇನೆ. ಅದೇ ವಿನಯದ ನಡೆ; ಅದೇ ಮೆಲು ಮಾತಿನ ರೀತಿ; ಅದೇ ಸೌಹಾರ್ದಯುತವಾದ ಸ್ನೇಹದ ಮನೋವೃತ್ತಿ; ಹಿರಿಯರ, ಅಧ್ಯಾಪಕರ ಬಗೆಯಲ್ಲಿ ಅದೇ ಗೌರವ-ವಿಶ್ವಾಸಗಳ ಬಗೆ. ಆಡಂಬರ-ಅಟ್ಟಹಾಸ ಅವರಿಂದ ಬಹಳ ದೂರ. ಇಂದಿನ ಕನ್ನಡ ಕವಿಗಳಲ್ಲಿ ಒಂದು ಗಣ್ಯವಾದ ಸ್ಥಾನವನ್ನು ತಮ್ಮದಾಗಿಸಿ ಕೊಂಡ ಅವರು, ವಿಶ್ವವಿದ್ಯಾನಿಲಯದ ಒಂದು ಅಧಿಕಾರಸ್ಥಾನದಲ್ಲಿದ್ದ ಅವರು, ಅಂಥ ಸ್ಥಾನಮಾನಗಳ ಹಿಂದೆಯೇ ಬಂದು ಬಿಡುವ ಬಿಗುಮಾನದ ರೀತಿ ನೀತಿಗಳನ್ನು ಅವರು ದೂರವಿರಿಸಿದ್ದಾರೆನ್ನುವುದು ಅವರ ಸ್ವಭಾವಸತ್ವದ ಲಕ್ಷಣವೆಂದೇ ಹೇಳಬೇಕಾಗುತ್ತದೆ.

ವಿದ್ಯಾರ್ಥಿಯಾಗಿದ್ದಾಗಿನ ವಿನಯಸೌಜನ್ಯಗಳು, ವಿಕಾರ, ವಿಪರೀತ, ವಿಕೋಪಗಳಿಗೆ ಎಂದಿಗೂ ಎಡೆಗೊಡದ ಅವರ ಸ್ವಸ್ಥ ಚಿತ್ತವೃತ್ತಿ ಇಂದು ಬೆಳೆದು ಅದೇ ಅವರ ಮನೋಧರ್ಮವಾಗಿ ನಿಂತಿದೆ. ಕವಿಹೃದಯದ ಸಂವೇದನಶೀಲತೆಯನ್ನು ಸಮತೂಕದ ದೃಷ್ಟಿಗೆ ಒಳಪಡಿಸಿ ನವ್ಯಕಾವ್ಯದ ಆಕ್ರೋಶಗಳ ಮಧ್ಯದಲ್ಲಿಯೂ ತಮ್ಮ ವಿವೇಕದ ದನಿಯ ವೈಶಿಷ್ಟ್ಯವನ್ನು ಕಾಯ್ದುಕೊಂಡು ಹೋಗುವಂತೆ ಮಾಡಿದೆ. ಅವರ ಕಾವ್ಯವಿಮರ್ಶೆ ನನ್ನ ಕೆಲಸವಲ್ಲವಾದರೂ ಒಂದು ವಿಷಯವನ್ನು ಹೇಳಿಬಿಡಬಹುದು. ಅವರದು ಮಧ್ಯಮ ಮಾರ್ಗ.ಹಳೆಹೊಸತಂಗಳೆರಡರಲ್ಲಿಯೂ ಒಳ್ಳೆಯದಾಗಿದ್ದುದರ ಸಮನ್ವಯವನ್ನು ಅವರಲ್ಲಿ ನಾವು ಕಾಣಬಹುದಾಗಿದೆ. ಸಮತೂಕ ಅವರ ಮನಸ್ಸಿನ, ಅಂತೆಯೆ ಅವರ ಬರವಣಿಗೆಯ ಲಕ್ಷಣ. ಹಾಗೆಂದೇ ಅವರು ಎಂದಿಗೂ ''ಇವು ನನ್ನ ಹಾಡೆಂಬ ಹಗರಣದಿ ಮೈಮರೆತು ಅಹಮಿಕೆಯ ದರ್ಶನ'' ವನ್ನು ಮಾಡಿದವರಲ್ಲ. ''ಚೆಲುವಿನೊಲವಿನ ವಿವಿಧ ವಿನ್ಯಾಸಗಳನಾಂತು, ಹೆಜ್ಜೆಯಿಡುತಿರಲದರ ಹಲವಾರು ಹವಣಿಕೆಯ ಕರಣಿಕನು'' ಎಂದು ಮಾತ್ರವಲ್ಲದೆ ''ಚೆಲುವಿಕೆಯ ಸತ್ಯತೆಯ ದಾಸಾನುದಾಸ'' ಎಂದು ತಮ್ಮಲ್ಲಿಯ ಕವಿಹೃದಯದ ಬಗ್ಗೆ ಪ್ರಥಮ ಸಂಗ್ರಹದಲ್ಲಿಯೇ ಹೇಳಿಕೊಂಡಿದ್ದಾರೆ. ಹೇಳಿಕೊಂಡಿದ್ದಾರೆ ಮಾತ್ರವಲ್ಲ, ನಡೆಯಲ್ಲಿ, ನುಡಿಯಲ್ಲಿ, ತಮ್ಮ ಸಾಹಿತ್ಯಸಾಧನೆಯಲ್ಲಿ ಆ ಮಾತುಗಳ ಯಥಾರ್ಥತೆಯನ್ನು ತೋರಿಸಿ ಕೊಟ್ಟಿದ್ದಾರೆ.

'ಕಾವ್ಯಾಕ್ಷಿ'ಯಿಂದ 'ನಗರದಲ್ಲಿ ನೆರಳು'ವರೆಗೆ ಕಣವಿಯವರ ಕಾವ್ಯಾವಾಹಿನಿ ಹರಿದಿದೆ. ಕಾಲಕ್ರಮದಲ್ಲಿಯ ಅನಿವಾರ್ಯ ಪ್ರಭಾವಗಳಿಗೆ ಜೀವಂತವಾಗಿ ಪ್ರತಿಕ್ರಿಯೆಯನ್ನು ತೋರಿ ಪಡೆದ ಜೀವನಾನುಭವ ಆಳವಾಗುತ್ತ, ಹೊಸರೂಪಗಳನ್ನು ತಾಳಿ ಅನುಗುಣವಾದ ಕಾವ್ಯಾಭಿವ್ಯಕ್ತಿಯನ್ನು ಸಾಧಿಸಿದೆ. ಒಂದೊಂದು ಕವನ ಸಂಗ್ರಹದಲ್ಲಿಯೂ ಮುನ್ನಡೆಯ ಅವರ ಹೆಜ್ಜೆ ಗುರುತುಗಳನ್ನು ಮೂಡಿಸಿದೆ. ಕಾವ್ಯ ನಿರ್ಮಿತಿಯ ಜೊತೆಯಲ್ಲಿ ಕಾವ್ಯವನ್ನು ಕುರಿತಾದ ಚಿಂತನೆಯಲ್ಲಿ, ವಿವಿಧ ರೀತಿಯ ರಸಗ್ರಹಣದಲ್ಲಿಯೂ ತೊಡಗಿದ್ದಾರೆ. ಅನೇಕ ಸಮಕಾಲೀನ ಹಿರಿಕಿರಿಯರ ಕಾವ್ಯದಲ್ಲಿಯ ಸೊಗಸುಗಳನ್ನು ವಿವರಿಸಿದ್ದಾರೆ. ಬಸವಣ್ಣನವರ ವಚನಗಳ ಸಾಹಿತ್ಯಿಕ ಮೌಲ್ಯದಂತೆ ಜನಪದ ಕಾವ್ಯದಲ್ಲಿಯ ಪ್ರತಿಮಾ ವಿಧಾನವನ್ನು ಚರ್ಚಿಸಿದ್ದಾರೆ. ಅವರ ಕವಿಹೃದಯದ ಮಿಡಿತ ಕಾವ್ಯಮಾತ್ರವಾಗದೆ, ಕಾವ್ಯ ಚಿಂತನೆಯೂ ಆಗಿ ಕಾವ್ಯಾನುಸಂಧಾನವೂ ಆಗಿ ಯಥೋಚಿತವಾದ ಅಭಿವ್ಯಕ್ತಿಯನ್ನು ಪಡೆದಿದೆ. ಆದರೆ ಈ ಎಲ್ಲ ಆವಿಷ್ಕಾರಗಳ ಹಿಂದುಗಡೆಯಲ್ಲಿ ಒಂದು ಸಮಾನಾಂಶವನ್ನು ಗುರುತಿಸಬಹುದಾಗಿದೆ. ಬರೆದದ್ದು ಪದ್ಯವೇ ಇರಲಿ, ವಿಮರ್ಶೆ ವಿವರಣೆಗಳೇ ಇರಲಿ, ಕಣವಿಯವರ ಗಮನ ಹರಿದದ್ದು ಯಾವಾಗಲೂ ಚೆಲುವಾಗಿದ್ದರ ಕಡೆಗೆಯೇ. ಚೆನ್ನಾದುದರ ಅನುಭವ ಕಾವ್ಯವಾಗಿದೆ ; ಚೆನ್ನಾದುದರ ರಸಾನುಭವ ವಿಮರ್ಶೆಯಾಗಿದೆ. ಜೀವನದಲ್ಲಿ, ಹಾಗೆಯೆ ಸಾಹಿತ್ಯದಲ್ಲಿ, ಯಾವ ಯಾವುದು ಚೆನ್ನವೋ ಅಂಥದರ ಬಗೆಯಲ್ಲಿಯ ಆಕರ್ಷಣೆ, ಆಸಕ್ತಿ, ಅವರ ವ್ಯಕ್ತಿತ್ವದ ಒಂದು ಮುಖ್ಯ ಲಕ್ಷಣ ಎಂದೆನಿಸಿದೆ

ನನಗೆ. ಸಾಹಿತ್ಯ ಕ್ಷೇತ್ರದಲ್ಲಿಯ ನಿರ್ಮಿತಿ ವಿಮರ್ಶೆಗಳ ಜೊತೆಯಲ್ಲಿ ವಿವಿಧ ಜ್ಞಾನ ಕ್ಷೇತ್ರಗಳಲ್ಲಿಯೂ ಚೆನ್ನಾದುದಕ್ಕೆ ಪ್ರಸಾರ ಪ್ರಚಾರಗಳನ್ನು ಒದಗಿಸುವುದನ್ನೇ ತಮ್ಮ ಕಾಯಕವನ್ನಾಗಿಸಿಕೊಂಡಿದ್ದಾರೆ. ಹಾಗೆಂದೇ ಅವರ ಹೆಸರು ನನಗೆ ಅನ್ವರ್ಥಕವಾಗಿ ಕಂಡಿದೆ, ಚೆನ್ನ-ವೀರ ಅಲ್ಲವೆ ಕಣವಿಯವರು ?

## ಕೆ. ಎಸ್. ನರಸಿಂಹಸ್ವಾಮಿ

# ನಾನು ಮತ್ತು ಕಣವಿ

ನಾನು ಕಣವಿಯವರನ್ನು ಕಾಣುವುದಕ್ಕೆ ಎಷ್ಟೋ ಮೊದಲೆ ಅವರ ಕವಿತೆಯನ್ನು ಕಂಡಿದ್ದೆ. ಅವರನ್ನು ಮೊದಲ ಸಲ ಕಂಡದ್ದು ಇಪ್ಪತ್ತನಾಲ್ಕು ವರುಷಗಳ ಹಿಂದೆ. ಆಗ ತಾನೆ ನನ್ನದೊಂದು ಕವನ ಒಂದು ಪತ್ರಿಕೆಯಲ್ಲಿ ಅಚ್ಚಾಗಿತ್ತು. ಅವರು ಅದನ್ನು ಜ್ಞಾಪಿಸಿ ಕೊಂಡು, ಮೈಸೂರಿನಿಂದ ಧಾರವಾಡಕ್ಕೆ ಹಿಂದಿರುಗುವ ಮಾರ್ಗದಲ್ಲಿ ಬೆಂಗಳೂರಿನಲ್ಲಿ ಇಳಿದು, ಗೃಹ ನಿರ್ಮಾಣ ಮಂಡಲಿಯ ಕಾರ್ಯಾಲಯದಲ್ಲಿ ನನ್ನನ್ನು ಕಂಡು ಹೋದರು. 'ಒಮ್ಮೆ ಧಾರವಾಡಕ್ಕೆ ಬನ್ನಿ' ಎಂದು ಕರೆದರು. ಅಲ್ಲಿಂದೀಚೆಗೆ ನಾವು ಹಲವಾರು ಸ್ಥಳ ಗಳಲ್ಲಿ ನಡೆದ ಕವಿ ಸಮ್ಮೇಳನಗಳಲ್ಲಿ ಭಾಗವಹಿಸಿದ್ದೇವೆ.

ನನಗೆ ಅವರ ವಿಳಾಸ ಗೊತ್ತಿರಲಿಲ್ಲವೆಂದಲ್ಲ; ಆದರೂ ಅವರ 'ಚೆಂಬೆಳಕಿ'ಗೆ ಮೊದಲ ಸಲ ತಲಪಿದ್ದೇ ಒಂದು ಮಧುರವಾದ ಅನುಭವ. ಮನೆ ಹುಡುಕಲು ನನಗೆ ನೆರವಾಗಲು ಬಂದ ಗೆಳೆಯ ನನ್ನನ್ನು ಕಣವಿಯವರ ಮನೆಗೆ ತಲಪಿಸುವ ಬದಲು ಕಣವಿಯವರ ಮಾವ ನವರ ಮನೆಗೆ ಮುಟ್ಟಿಸಿದ! ಬಾಗಿಲು ತಟ್ಟಿ ನಾನು ಇಂಥವನೆಂದು ಹೇಳಿಕೊಂಡಾಗ ಅವರು ನನ್ನನ್ನು ತುಂಬಾ ಆದರದಿಂದ ಬರಮಾಡಿಕೊಂಡರು. ತಮ್ಮ ಮನೆಯವರಿಗೆ ನನ್ನ ಪರಿಚಯ ಮಾಡಿಕೊಟ್ಟರು. ಚಹಾಪಾನದ ನಡುವೆ ತಮ್ಮ ಪುಸ್ತಕ ಭಂಡಾರದಲ್ಲಿ ನನ್ನ 'ಮೈಸೂರು ಮಲ್ಲಿಗೆ'ಯ ಕವನಗಳನ್ನೊಳಗೊಂಡ 'ಪ್ರಬುದ್ಧ ಕರ್ನಾಟಕ'ದ ಒಂದು ಪ್ರತಿ ಇರುವುದನ್ನು ತಿಳಿಸಿದರು. ನಾನು ಹಿಗ್ಗಿ ಹೋದೆ, ಮಾವನವರ ಜತೆಯಲ್ಲಿ ಅಳಿಯನ ಮನೆಗೆ ಹೋದೆ.

ಅಲ್ಲಿಂದೀಚೆಗೆ ನಾನು ಅವರ ಮನೆಗೆ ನಾಲ್ಕೈದು ಸಲ ಹೋಗಿದ್ದೇನೆ. ಅವರ ಮನಸ್ಸು ಹಸಿರು ಬಾಡದ ಧಾರವಾಡದಂತೆ; ಅವರ ಮಾತು ಹಸಿರೆಲೆಗಳ ಮೇಲಿನ ಎಳ ಬಿಸಿಲಂತೆ. ಈಗ್ಗೆ ಎರಡು ವರುಷಗಳ ಹಿಂದೆ ನಾವಿಬ್ಬರೂ ಧಾರವಾಡದ ಜೆ. ಎಸ್. ಎಸ್ ಕಾಲೇಜಿನಲ್ಲಿ ಕಾವ್ಯವಾಚನ ಮಾಡಿದೆವು. ಅಂದಿನ ಶ್ರೋತೃಗಳು ಇಂದಿಗೂ ಅದರ ಸವಿ ಯನ್ನು ನೆನೆಯುತ್ತಾರೆ.

1977ರ ಡಿಸೆಂಬರಿನಲ್ಲಿ ಅಂದರೆ ಕೇಂದ್ರ ಸಾಹಿತ್ಯ ಅಕಾಡಮಿ ನನ್ನದೊಂದು ಕವನ ಸಂಗ್ರಹಕ್ಕೆ ರಾಷ್ಟ್ರೀಯ ಪ್ರಶಸ್ತಿ ನೀಡಲಿರುವ ಸುದ್ದಿ ಬಾನುಲಿಯಲ್ಲಿ ಬಿತ್ತರ ಗೊಂಡ ಮರುದಿನ ನಾನು ಧಾರವಾಡಕ್ಕೆ ಹೋದೆ. ಆಗ ಅಲ್ಲಿನ ಆಕಾಶವಾಣಿ ಕೇಂದ್ರ ಒಂದು ಸಂದರ್ಶನ ಕಾರ್ಯಕ್ರಮವನ್ನು ಏರ್ಪಡಿಸಿತು. ಅದನ್ನು ನಡಸಿಕೊಟ್ಟವರು ಕಣವಿ ಯವರು. ಆ ಸಂದರ್ಭದಲ್ಲಿ ಮುಂಚಿನ ಮಾತು ಕಥೆಗಾಗಿ ನಾನು ಅವರ ಮನೆಗೆ ಹೋದೆ.

ಆಗ ಅಲ್ಲಿಗೆ ಕಣವಿಯವರ ಮಾವನವರೂ, ಡಾ। ಸಿದ್ಧಯ್ಯಪುರಾಣಿಕರೂ, ಹಿರಿಯರಾದ ಮಾಳವಾಡರೂ ಬಂದಿದ್ದರು. ಕಣವಿ ದಂಪತಿಗಳು ನನ್ನನ್ನು ಅಭಿನಂದಿಸಿ ಸಿಹಿ ಹಂಚಿದರು. ನನ್ನ ಕಣ್ಣು ಕೃತಜ್ಞತೆಯಿಂದ ತುಂಬಿತು.

1978ರ ಮಾರ್ಚಿ ತಿಂಗಳಲ್ಲಿ ನಾನು ಹೈದರಾಬಾದಿಗೆ ಹೋಗಿ ಆ ಪ್ರಶಸ್ತಿಯನ್ನು ಪಡೆದು, ಮತ್ತೆ ಧಾರವಾಡಕ್ಕೆ ಬಂದೆ. ವಿದ್ಯಾವರ್ಧಕ ಸಂಘ, ವಿಶ್ವವಿದ್ಯಾಲಯ ಕನ್ನಡ ಸಂಘ, ಮತ್ತು ಇತರ ಕಾಲೇಜುಗಳ ವಿದ್ಯಾರ್ಥಿ ಸಂಘಗಳು ಸನ್ಮಾನ ಸಮಾರಂಭಗಳನ್ನು ಏರ್ಪಡಿಸಿದ್ದುದು ಕಾರಣ. ಅಂದಿನ ಸಮಾರಂಭದಲ್ಲಿ ಕಣವಿಯವರು ಭಾಗವಹಿಸಿ ಕವಿ ಸಹಜ ಶೈಲಿಯಲ್ಲಿ ನನ್ನ ಕವನಗಳ ಬಗೆಗೆ ಮಾತನಾಡಿದರು. ಹಿಂದಿನ ಸಂಜೆ ಕಿಟ್ಟೆಲ್ ಕಾಲೇಜಿನಲ್ಲಿ ನನ್ನ ಅಧ್ಯಕ್ಷತೆಯಲ್ಲಿ 'ಕಣವಿ ಐವತ್ತು' ಎಂಬ ಸಹೃದಯಗೋಷ್ಠಿ ನಡೆಯಿತು. ಕಣವಿ ದಂಪತಿಗಳು ಅದರಲ್ಲಿ ಭಾಗವಹಿಸಿದ್ದರು. ಆ ಸಮಾರಂಭದ ಆತ್ಮೀಯತೆ ಬಹುಕಾಲ ನೆನೆಯುವಂಥಾದ್ದು.

ಈ ಸವಿ ನೆನಪುಗಳನ್ನು ಸರಗಟ್ಟಲು ಅವಕಾಶ ನೀಡಿದ ಗೆಳೆಯರಿಗೆ ನನ್ನ ವಂದನೆಗಳು. ಕಣವಿಯವರಿಗೆ ಮತ್ತು ಅವರ ಮನೆಯ ಎಲ್ಲರಿಗೆ ನನ್ನ ಹೃತ್ಪೂರ್ವಕ ಶುಭಾಶಯಗಳು.

## ಎಂ. ಗೋಪಾಲಕೃಷ್ಣ ಅಡಿಗ

# ಸುಸಂಸ್ಕೃತ ಸಹೃದಯ ಸ್ನೇಹಿತ

ಹೊಸಗನ್ನಡದ ಒಳ್ಳೆಯ ಕವಿಗಳಲ್ಲಿ ಸುಪ್ರಸಿದ್ಧರಾದ ಶ್ರೀ ಚೆನ್ನವೀರ ಕಣವಿಯವರಿಗೆ ಐವತ್ತು ತುಂಬುತ್ತಿರುವ ಸುಸಮಯದಲ್ಲಿ ಅವರು ಕನ್ನಡ ಕಾವ್ಯಕ್ಕೆ ಸಲ್ಲಿಸಿರುವ ಸೇವೆಯನ್ನು ನೆನೆದು ಆ ಬಗ್ಗೆ ನಮ್ಮ ಜನ ಅವರಿಗೆ ಕೃತಜ್ಞತೆ ವ್ಯಕ್ತಪಡಿಸುವುದು ಅತ್ಯಂತ ಉಚಿತವಾದ ಕೆಲಸ. ಈ ಸಂದರ್ಭದಲ್ಲಿ ಒಂದು ಸಂಭಾವನ ಗ್ರಂಥ ಹೊರ ಬರುತ್ತಿರುವುದು ತಿಳಿದು ಸಂತೋಷವಾಯಿತು. ಈ ಗ್ರಂಥಕ್ಕಾಗಿ ನಾನು ಪ್ರೀತಿಯಿಂದಲೂ ಶುಭಾಶಂಯುಗಳೊಡನೆಯೂ ಈ ಕೆಳಗಿನ ಕೆಲವು ಮಾತುಗಳನ್ನು ಬರೆಯುತ್ತಿದ್ದೇನೆ.

ನಾವು ಬರೆಯುವ ಕಾವ್ಯ ತನ್ನ ಅಂತಃಸತ್ವದಿಂದ ಬದುಕಬೇಕಾದುದು. ಆ ಬಗ್ಗೆ ನಾವಾಗಲೀ ನಮ್ಮ ಸ್ನೇಹಿತರಾಗಲೀ ಏನನ್ನೂ ಮಾಡಲು ಸಾಧ್ಯವಿಲ್ಲ. ನಿಷ್ಠುರವಾದ ಕಾಲ ತನ್ನ ತಕ್ಕಡಿಯಲ್ಲಿ ನಮ್ಮ ಕೃತಿಗಳನ್ನು ತೂಗುತ್ತಲೇ ಇರುತ್ತದೆ. ಆದರೆ ಈ ನಿಷ್ಠುರ ನ್ಯಾಯಾಧಿಪತಿಯ ತೂಕದಲ್ಲೂ ತೂಕಕ್ಕೆ ಸರಿ ಹೋಗುವ ಅನೇಕ ಕವನಗಳನ್ನು ಗೆಳೆಯರಾದ ಕಣವಿ ಬರೆದಿದ್ದಾರೆಂದು ನಾನು ಭಾವಿಸುತ್ತೇನೆ. ಆದರೆ ಇನ್ನೂ ಚಿಕ್ಕವರೇ ಆಗಿರುವ ಶ್ರೀಯುತರು ಇನ್ನೂ ಇನ್ನೂ ಉತ್ತಮವಾದ ಕೃತಿಗಳನ್ನು ರಚಿಸುವರೆಂದು ನನಗೆ ಭರವಸೆಯಿದೆ. ಸ್ವಭಾವತ: ಸೌಜನ್ಯಪೂರ್ಣರೂ ಕೋಮಲಾಂತಃಕರಣವುಳ್ಳವರೂ ಆದ ಕಣವಿಯವರು ತಮ್ಮ ಅನುಭವಕ್ಕೂ ತಮ್ಮ ಸ್ವಭಾವಕ್ಕೂ ತಕ್ಕ ರೀತಿಯಲ್ಲಿ ಕಾವ್ಯ ರಚನೆಯನ್ನು ಮುಂದುವರಿಸಿ ಹೆಚ್ಚಿನ ಶ್ರೇಯಸ್ಸನ್ನೂ ಕೀರ್ತಿಯನ್ನೂಗಳಿಸಲಿ ಎಂದು ನಾನು ತುಂಬು ಹೃದಯದಿಂದ ಹಾರಯಿಸುತ್ತೇನೆ.

ಕಾವ್ಯದ ಮಾತನ್ನು ಮರೆತರೂ ಒಬ್ಬ ಮನುಷ್ಯ ಎನ್ನುವ ದೃಷ್ಟಿಯಿಂದಲೂ ಶ್ರೀ ಕಣವಿಯವರು ತುಂಬ ಗಣ್ಯರಾದ ವ್ಯಕ್ತಿ. ಪ್ರೀತಿಯಲ್ಲಿ ಸೌಜನ್ಯದಲ್ಲಿ ವಿನಯದಲ್ಲಿ ಇವರಿಗೆ ಎಣೆಯಾದವರನ್ನು ನಾನು ಬೇರೆ ಕಂಡಿಲ್ಲ. ಇವರೊಡನೆ ಜಗಳಾಡುವುದಾಗಲೀ ಇವರು ಹತ್ತಿರದಲ್ಲಿರುವಾಗ ಕಠೋರವಾದ ಮಾತುಗಳನ್ನು ಆಡುವುದಾಗಲೀ ತುಂಬ ಕಷ್ಟದ ಕೆಲಸ. ಸದಾ ಕಾಲವೂ ಪ್ರಸನ್ನ ಮುಖದಿಂದ ನಮ್ಮನ್ನು ಸ್ವಾಗತಿಸುತ್ತ ನಮ್ಮ ಕಷ್ಟ ಸುಖಗಳನ್ನು ಪ್ರೀತಿಯಿಂದ ಕೇಳುತ್ತ ನಮ್ಮ ತಪ್ಪುಗಳನ್ನು—ದೌರ್ಜನ್ಯಗಳನ್ನು ಕೂಡಾ—ಕ್ಷಮಿಸಿ ಸದಾ ಪ್ರೀತಿ ತೋರುವ ಒಬ್ಬ ಸಜ್ಜನನ ಚಿತ್ರ ಕಣವಿಯವರನ್ನು ನೆನೆದಾಗಲೆಲ್ಲ ನನ್ನ ಕಣ್ಣ ಮುಂದೆ ಬಂದು ನಿಲ್ಲುತ್ತದೆ. ಕನ್ನಡದ ಸಾಹಿತಿಗಳಲ್ಲಿ ನನಗೆ ಅತ್ಯಂತ ಪ್ರಿಯರಾದ ನಾಲ್ಕೈದು ಮಂದಿ ಸ್ನೇಹಿತರಲ್ಲಿ ಕಣವಿಯವರೊಬ್ಬರು. ಅವರ ಬಗ್ಗೆ ಎಂದೂ ಮೃದು ಭಾವನೆಯನ್ನಲ್ಲದೆ ಕಠೋರಭಾವಗಳನ್ನು ತಳೆಯುವದು ನನಗೆ

ಸಾಧ್ಯವಾಗಿಲ್ಲ. ನನ್ನ ಮತ್ತು ಅವರ ಸ್ವಭಾವ ತೀರ ವಿರುದ್ಧವೆನಿಸಬಹುದಾದರೂ ನಮ್ಮಿಬ್ಬರ ಸ್ನೇಹಕ್ಕೆ ಎಂದೂ ಚ್ಯುತಿ ಬಂದಿಲ್ಲ. ಇದಕ್ಕೆ ಕಾರಣ ಬಹುಶಃ ನಿರ್ಮತ್ಸರ ಬುದ್ಧಿ, ಒಂದು ರೀತಿಯ ದೈವಿಕ ಎನ್ನಬಹುದಾದ ಮುಗ್ಧತೆ ಮತ್ತು ಈ ಲೋಕದ ಪದವಿ ಪ್ರತಿಷ್ಠೆಗಳ ಬಗ್ಗೆ ಇರುವ ನಿರಪೇಕ್ಷೆ ಎಂದು ಭಾವಿಸಬಹುದು.

ಇಂಥ ಸುಸಂಸ್ಕೃತ ಸಹೃದಯ ಸ್ನೇಹಿತರಿಗೆ ಶುಭವನ್ನು, ಮುಖ್ಯವಾಗಿ ಮನಸ್ಸಿಗೆ, ಬಾಳ ಬದುಕಿಗೆ ಸಂಬಂಧಪಟ್ಟ ಶುಭಶಾಂತಿಗಳನ್ನು ಹೃತ್ಪೂರ್ವಕವಾಗಿ ಕೋರುತ್ತೇನೆ. ಅವರ ನಿರ್ಮಲವಾಗಿರುವ ಬದುಕು ಕೃತಿಪೂರ್ಣವೂ ಕೃತಾರ್ಥವೂ ಆಗಲೆಂದು ಸರ್ವದಾ ಹಾರಯಿಸುತ್ತೇನೆ.

**ಸಿದ್ದಯ್ಯ ಪುರಾಣಿಕ**

# ಲೇಸಿನ ಉಪಾಸಕ

೧೯೫೭ ಇರಬಹುದು. ನಾನಾಗ ಯಾದಗಿರಿಯಲ್ಲಿ ಡೆಪ್ಯುಟಿ ಕಲೆಕ್ಟರನಾಗಿದ್ದೆ. ಗೆಳೆಯ ಕಣವಿ ಅವರು ಅಲ್ಲಿ ಒಂದು ವ್ಯಾಸಂಗ ವಿಸ್ತರಣೋಪನ್ಯಾಸವನ್ನು ಏರ್ಪಡಿಸಿದರು. ನನಗೆ ಹಿಗ್ಗೋ ಹಿಗ್ಗು—ಅದುವರೆಗೆ ದೂರದಿಂದ ನೋಡಿದ್ದ ಕಣವಿಯವರನ್ನು ಹತ್ತಿರದಿಂದ ನೋಡುವ, ಅವರೊಡನೆ ಒಂದೆರಡು ದಿನ ಒಡನಾಡುವ ಅವಕಾಶ ಸಿಕ್ಕುವುದೆಂದು. ಕಣವಿಯವರೊಡನೆ ಅಲ್ಲಿ ಕಳೆದ ಎರಡು ದಿನಗಳ ಸವಿನೆನಪುಗಳ ಸುರುಳಿಯನ್ನು ಬಿಚ್ಚಿದಾಗ ಅವುಗಳ ಅಚ್ಚತೆ, ತಾಜಾತನಗಳನ್ನು ಕಂಡು ನನಗೇ ಅಚ್ಚರಿ. ಆ ಸಾಹಿತ್ಯ ಸಲ್ಲಾಪ, ತಲೆ ಹರಟೆ, ವ್ಯಂಗ್ಯ ವಿನೋದಗಳು, ನಾನಾ ವಿಷಯಗಳ ಬಗ್ಗೆ ಚಿಂತನ-ಮಂಥನಗಳು, ಗೇಲಿ-ಗೇನಿಕೆಗಳು, ಸತ್ಕಾರ ಕೂಟಗಳು-ಎರಡು ದಿನಗಳನ್ನು ಎರಡು ಗಳಿಗೆಗಳನ್ನಾಗಿ ಪರಿವರ್ತಿಸಿದ್ದುವು.

ಅದು ಬೇಸಿಗೆ-ಅದೂ ಯಾದಗಿರಿಯ ಬೇಸಿಗೆ! ಯಾದಗಿರಿಯ ಪಕ್ಕದಲ್ಲಿಯೇ ಇರುವ ಕಲ್ಲಿನ ಕೋಟೆಯಿಂದ ಶುಭ್ರ ಮಯೂಖಗಳು ಬಂದು ಮೈಯನ್ನಿರಿದಾಗ 'ಹಾ' ಎನ್ನದಿರಲು ಆಗುತ್ತದೆಯೇ ? ಧಾರವಾಡದ ಹಿತಮಿತವಾದ ಹವೆಯಲ್ಲಿ ಬೆಳೆದಿದ್ದ ಕಣವಿಯವರಿಗಂತೂ ಇದು ಸಹಿಸಲಾಗದ ತಾಪವಾಗಿದ್ದಿತು. ಬಿಸಿಲಿನಿಂದ ತಲೆ ಕಾದಿದ್ದರೂ ಕವಿ ಹೃದಯ ಜಾಗೃತವಾಗಿದ್ದಿತವರಲ್ಲಿ. 'ಯಾದಗಿರಿ ಎದೆ ನೋವಿನಿಂದ ಮಲಗಿದೆ; ಈ ದುರ್ಗ ಅದರ ಎದೆಯ ಮೇಲಿಟ್ಟ ಬಿಸಿನೀರಿನ ಬ್ಯಾಗಿನಂತಿದೆ (Hot water bag) ಎಂದು ಉಪಮಿಸಿ ಹಾಸ್ಯದ ಚಟಾಕಿಯನ್ನು ಹಾರಿಸಿದರು. ಅದು ಪುಟಿಸಿದ ನಗೆಯ ಹೊನಲಿನಲ್ಲಿ ಜಳ ಜುಳ, ಜುಳು ಹರಿದು ಹೋದಂತೆನಿಸಿತು ನಮಗೆ.

ಆವಾಗ ಗೊತ್ತಾಯಿತು-ಆಗ-ಈಗಲೂ ಕೂಡ! ಇನ್ನೂ ಹಾಯ್‌ಸ್ಕೂಲ್ ವಿದ್ಯಾರ್ಥಿಯಂತೆ ಕಾಣುತ್ತಿದ್ದ ಈ ತೆಳು ಮೈಯ ಎಳೆ ಮೊಗದ 'ಹುಡುಗ ಪೊಟ್ಟ್ಯಾ' ಬಹುಕಾಲ ಬಾಳಬಲ್ಲ ಕವಿತೆಗಳನ್ನು ಬರೆಯಬಲ್ಲನಷ್ಟೇ ಅಲ್ಲ, ನವುರಾದ ನಗೆಯ ನೂರೆಲೆಯನ್ನು ಅರಳಿಸಲೂ ಬಲ್ಲ, ನಾನಾ ವಿಷಯಗಳ ಬಗ್ಗೆ ತರ್ಕಬದ್ಧವಾಗಿ ಚರ್ಚಿಸಲೂ ಬಲ್ಲ, ತನ್ನ ಕೃತಿಗಳ ಬಗ್ಗೆ 'ದಿವ್ಯನಿರ್ಲಕ್ಷ್ಯ'ವನ್ನು ತೋರಿ ಅನ್ಯರ ಕೃತಿಗಳ ಗುಣಗ್ರಹಣ ಮಾಡಲೂ ಬಲ್ಲ, ವಸ್ತುನಿಷ್ಠ ತಾತ್ವಿಕ ವಿಮರ್ಶೆಯ ಎತ್ತರಕ್ಕೂ ಏರಬಲ್ಲನೆಂಬುದು. ತಾವಾಗಿ ಮೇಲೆಬಿದ್ದು ಮಾತನಾಡದಿದ್ದರೂ ಯಾರಾದರೂ ಆತ್ಮೀಯತೆಯನ್ನು ತೋರಿ ಮಾತಿಗೆ ಎಳೆದರೆ ಕಣವಿಯವರು ನೆನಪಿಟ್ಟು ಮೆಲುಕು ಹಾಕುವಂತಹ ಮಾತುಗಳ ಬುತ್ತಿ ಬಿಚ್ಚುತ್ತಾರೆ; ಜೊತೆಗೆ ತಮ್ಮ ಮಾತುಗಳಿಂದ ಯಾರಿಗೂ ನೋವಾಗದಂತೆ

ಎಚ್ಚರಿಕೆ ವಹಿಸುತ್ತಾರೆ; ಮತ್ತು ಆ ಮಾತುಗಳಲ್ಲಿ ಮಮಕಾರ ಮೂಡದಂತೆ ಜಾಗರೂಕರಾಗಿರುತ್ತಾರೆ. ಕೆಲವರಿರುತ್ತಾರೆ: ಅವರನ್ನು ಒಮ್ಮೆ ನೋಡಿದರೆ ಇನ್ನೊಮ್ಮೆ ನೋಡಬೇಕೆನ್ನಿಸುವುದಿಲ್ಲ; ಅವರೊಡನೆ ಒಮ್ಮೆ ಮಾತನಾಡಿದರೆ ಇನ್ನೊಮ್ಮೆ ಮಾತನಾಡಲು ಮನಸ್ಸಾಗುವುದಿಲ್ಲ. ಕಣವಿಯವರ ವ್ಯಕ್ತಿತ್ವದ ವೈಶಿಷ್ಟವೆಂದರೆ ಅವರನ್ನು ಮತ್ತೆ ಮತ್ತೆ ನೋಡಬೇಕೆನ್ನಿಸುತ್ತದೆ, ಅವರೊಡನೆ ಮತ್ತೆ ಮತ್ತೆ ಮಾತನಾಡಬೇಕೆನ್ನಿಸುತ್ತದೆ. ಅಷ್ಟು ಸರಳರು, ಸ್ನೇಹಪರರು, ಸವಿಬಗೆಯುವರು ಅವರು.

ಪ್ರಾರಂಭದಿಂದಲೇ ಪಂಡಿತವರ್ಯ ಪ್ರಾಧ್ಯಾಪಕ ಮಾಳವಾಡರ, ಅವರ ಧೀಮಂತ ಧರ್ಮಪತ್ನಿ ಶಾಂತಕ್ಕನವರ, ಮಹಾಕವಿ ಬೇಂದ್ರೆಯವರ, ಮಹಾಸಾಹಿತಿ ಗೋಕಾಕರ ಪ್ರಭಾವಳಿಯಲ್ಲಿ ಬೆಳೆದ ಇವರಲ್ಲಿ ಸಂಸ್ಕೃತಿ ಮನೆಮಾಡಿರುವುದು, ನಿರಹಂಕೃತಿ ನೆಲೆಸಿರುವುದು, ಸತ್ಕೃತಿರಚನಾ ಶಕ್ತಿ ವಿಕಸಿತವಾಗುತ್ತಲೇ ನಡೆದಿರುವುದು ಅರಿದೇನಲ್ಲ. ಮಹಾಶಿವಯೋಗಿ ಮೃತ್ಯುಂಜಯಪ್ಪಗಳ ಅನುಗ್ರಹಕ್ಕೆ ಪಾತ್ರರಾದ ಇವರಲ್ಲಿ ಸಮತ್ವ, ಔದಾರ್ಯ, ದುರ್ವ್ಯಸನರಾಹಿತ್ಯ, ಪೂರ್ಣತೆಯ ಹಂಬಲಗಳು ಕಂಗೊಳಿಸುತ್ತಿರುವುದು ಆಶ್ಚರ್ಯವೇನಲ್ಲ. ಆಶ್ಚರ್ಯವಾಗುವುದು ಇವರ ಪ್ರಚಾರವಿಮುಖತೆಗೆ, ಕೀರ್ತಿನಿರಪೇಕ್ಷತೆಗೆ, ಸದ್ದುಗದ್ದಲ ಬಯಸದ ಶುದ್ಧ ಸ್ವಾತ್ಮಸಂತೃಪ್ತಿಗೆ.

ರಾಜಕೀಯ ರಂಗದಲ್ಲಿ, ಸಾರ್ವಜನಿಕ ಜೀವನದಲ್ಲಿ, ಸಾಹಿತ್ಯ ಕ್ಷೇತ್ರದಲ್ಲಿ, ಎಲ್ಲೆಡೆಗಳಲ್ಲಿ 'ನಾನು ಶ್ರೇಷ್ಠ, ನಾನು ಶ್ರೇಷ್ಠ' ನಾನೇ ಶ್ರೇಷ್ಠನೆಂದು ಹೆಚ್ಚು ಹೆಚ್ಚಾಗಿ ಕೊಚ್ಚಿಕೊಳ್ಳುವವರಿಗೇ ಹಿರಿಮೆಯ ಮಣೆ ದೊರೆಯುತ್ತಿರುವ ಈ ಕಾಲದಲ್ಲಿ ಕಣವಿಯವರಂಥ 'ಬಾಯಿ ಸತ್ತವರಿಗೆ' ಅವರಿಗೆ ಸಲ್ಲಬೇಕಾದ ಸ್ಥಾನಕ್ಕಿಂತಲೂ ಸ್ವಲ್ಪ ಕೆಳಗಿನ ಸ್ಥಾನ ಸಿಕ್ಕುವುದು ಅನಿವಾರ್ಯವೇನೋ! ಈಗ ಕಣವಿಯವರಿಗೆ ಅಪ್ರಯತ್ನಿತವಾಗಿಯೇ ಸಿಕ್ಕಿರುವ ಸ್ಥಾನ ಸಣ್ಣದೇನಲ್ಲ. ಆದರೂ ಅವರು ನಿಲ್ಲಬೇಕಾದ ಮೆಟ್ಟಲಿಗಿಂತ ಒಂದು ಮೆಟ್ಟಲು ಕೆಳಗೇ ನಿಂತಿರುವುದು, ಹೀಗಿದ್ದು ಅವರು ಮನಸ್ಸನ್ನು ಕಹಿಮಾಡಿಕೊಳ್ಳದಿರುವುದು ತಮ್ಮ ಕವಿತೆಯ ಕಾಯಕವನ್ನು ತ್ರಿಕರಣಶುದ್ಧಿಯೊಡನೆ ಮುಂದುವರಿಸಿರುವುದು, ಅದರಲ್ಲಿ ಹೊಸ ಹೊಸ ಹೂಗರನ್ನು ತೋರುತ್ತಲೇ, ಬೀರುತ್ತಲೇ ನಡೆದಿರುವುದು ಅವರ ಪರಿಪಕ್ವತೆಗೆ ಸಾಕ್ಷಿ ನುಡಿಯುತ್ತಿವೆ.

ಕಣವಿಯಂಥವರ ಕಾಲವೂ ಬರುತ್ತದೆ. ಆಗ ಟೊಳ್ಳಾವುದು, ಗಟ್ಟಿಯಾವುದು ಎಂಬುದು ಜನರಿಗೆ ಗೊತ್ತಾಗುತ್ತದೆ. ಈಗ ಹುಸಿ ಪ್ರಚಾರದಿಂದ ಗದ್ದುಗೆಯೇರಿದವರು ಬಿದ್ದುರುಳಿ, ಆಗ ನಿಜವಾದ ಅರ್ಹತೆಗೆ, ಯೋಗ್ಯತೆಗೆ, ಪ್ರತಿಭೆಗೆ, ಪ್ರಾವೀಣ್ಯಕ್ಕೆ, ಚಾರಿತ್ರ್ಯಕ್ಕೆ, ಪಾವಿತ್ರ್ಯಕ್ಕೆ, ಸ್ವಂತಿಕೆಗೆ, ಸ್ವೋಪಜ್ಞತೆಗೆ ಬೆಲೆ ಬರುತ್ತದೆ. ಆ ಕಾಲ ಬೇಗ ಬರಲಿ!

ಅದುವರೆಗೆ, ಲೇಸಿನ ಉಪಾಸಕರಾಗಿಯೇ ಬೆಳೆದು ಬಂದಿರುವ ಕಣವಿಯವರು 'ಕಡೆತನಕ ಬರುವ ಲೇಸಿಗೆ ತಲೆದೂಗುತ್ತ,' ಲೇಸಿಗೆ ಬಾಗುತ್ತ, ಲೇಸನೇ ಅರಸಿ, ಆದರಿಸಿ,

ಆಚರಿಸಿ, ಅದಕ್ಕೇ ತಮ್ಮ ಕೃತಿಗಳಲ್ಲಿ ರೂಪವನ್ನೀಯುತ್ತ ಮುಂದೆ ಸಾಗಲಿ. ಇಂದಿನ ಕಿವಿ ಕೇಳಲೆಂದು ಬರೆಯುವವರು ಬರೆಯಲಿ; ಒಂದು ವರ್ಗದ-ಪಂಥದ-ಪ್ರಭೇದದ ಪ್ರಣಾಲಿಯ ಕಿವಿ ಕೇಳಲೆಂದು ಬರೆಯುವವರು ಬರೆಯಲಿ; ತಾವು ಕಟ್ಟಿಕೊಂಡ ಹಣೆ ಪಟ್ಟಿಗೆ ತಕ್ಕಂತೆ ಬರೆಯುವವರೂ ಬರೆಯಲಿ, ಎಲ್ಲರೂ ತಂತಮ್ಮ ನಂಬಿಕೆ ಹಂಬಲಗಳಿಗೆ ತಕ್ಕಂತೆ ಬರೆಯಲಿ. ಆದರೆ ಈಗ ಇಂಥದಕ್ಕೆ ಬೇಡಿಕೆಯೋ, ಬೆಲೆಯೋ, ಮನ್ನಣೆಯೋ ಹೆಚ್ಚಿದೆಯೆಂದು ಹುಚ್ಚಿನಿಂದ ತಮ್ಮ ಅಂತಃ ಪ್ರವೃತ್ತಿ, ಸಹಜ ಸ್ವಭಾವಕ್ಕೆ ವಿರುದ್ಧವಾಗಿ ಬರೆಯದಿರಲಿ. ಕಣವಿಯವರು ಈ ಕೆಚ್ಚನ್ನು ತೋರಿದ್ದಾರೆ, ಯಾರೇನೇ ಎನ್ನಲಿ-ತಮ್ಮ ದಾರಿಯಲ್ಲಿ ದಿಟ್ಟ ಹೆಜ್ಜೆಗಳನ್ನಿಡುತ್ತ ಬಹುದೂರ ಬಂದಿದ್ದಾರೆ. ಈಗ ಗುರಿ ದೂರ ಉಳಿದಿಲ್ಲ. ಅವರು ತಮ್ಮ ದಾರಿಯಲ್ಲಿಯೇ ನಡೆದು ಗುರಿ ಮುಟ್ಟುವರೆಂಬ ನಂಬಿಕೆ ನನಗಿದೆ.

ಬಹಿರ್ಘಟನೆಗಳ ಮಾನದಂಡದಿಂದಲೇ ಒಬ್ಬ ಕವಿಯ ಜೀವನವನ್ನೋ, ವ್ಯಕ್ತಿತ್ವ ವನ್ನೋ ವಿಶ್ಲೇಷಿಸುವುದು, ಅಳೆಯುವುದು ಅವ್ಯಾಪಾರೇಷು ವ್ಯಾಪಾರವಾಗುತ್ತದೆ. ಅವನ ಬಹಿರಂಗ ಜೀವನದಲ್ಲಿ ನಡೆವ ಘಟನೆಗಳು ತೀರ ಸಾಮಾನ್ಯವಾದುವುಗಳು. ಆದರೆ ಅವನ ಆಂತರಂಗದಲ್ಲಿ ನಡೆವ ಘಟನೆಗಳೋ ಅದ್ಭುತವಾದುವುಗಳು. ಅವನ ಕೃತಿಗಳಲ್ಲಿ ಇವುಗಳಲ್ಲಿ ಕೆಲವು ಪಡಿಮೂಡುತ್ತವೆ, ಕೆಲವು ಮೂಡುವುದೇ ಇಲ್ಲ. ಅವುಗಳ ವಿಷಯ ಕವಿ ಗೊಬ್ಬನಿಗೇ ಗೊತ್ತು. ಕವಿ ತನ್ನ ಆತ್ಮಚರಿತ್ರೆ ಬರೆದರೂ ಅವೆಲ್ಲವನ್ನೂ ಅದರಲ್ಲಿ ವಿವರಿ ಸುವನೆಂದು ಹೇಳಲಾಗದು. ಹೀಗೆ ಕೆಲವು ಅಂತರ್ಘಟನೆಗಳು ಅವ್ಯಕ್ತವಾಗಿಯೇ ಉಳಿ ಯುತ್ತವೆ. ಅಷ್ಟರಮಟ್ಟಿಗೆ ಮಾನವಕುಲ ಬಡವಾಗುತ್ತದೆ. ಕಣವಿಯವರ ಬಹಿರಂಗ ಜೀವನವನ್ನು ನೋಡಿ 'ಎಲ್ಲರಂತೆ ಇವರೊಬ್ಬರಲ್ಲವೆ ?' ಎನ್ನುವವರು ಇವರ ಕೃತಿಗಳನ್ನೋ ದಿದರೆ 'ಇವರೇ ಇವುಗಳನ್ನು ಬರೆದವರೆ ?' ಎಂದು ಬೆರಗಾಗದಿರರು; ಅವರ ಅಂತರಂಗ ದಲ್ಲಿ ನಡೆದ ಘಟನೆಗಳ ಪರಿಚಯವಾದಾಗ ನಿಬ್ಬೆರಗಾಗದಿರರು.

ನಾನಂತೂ ಅವರ ಸದ್ದಿರದ ಸಾಧನೆಗೆ ಬೆರಗಾಗಿದ್ದೇನೆ. ಬಹಳ ಬರೆಯಬೇಕೆನ್ನುವ ಸರ್ವಸಹಜ ಚಪಲವನ್ನು, ಬೇಗ ಪ್ರಸಿದ್ಧಿ ಪಡೆಯಬೇಕೆನ್ನುವ ತವಕವನ್ನು, ಸುಲಭ ಯಶಸ್ಸು ಸಂಪಾದಿಸಬೇಕೆಂಬ ಲವಲವಿಕೆಯನ್ನು ತಡೆದು ಹಿಡಿದು, ತೂಕ ತಪ್ಪದಂತೆ– ಮಟ್ಟ ತಗ್ಗದಂತೆ ಬರೆವ ಅವರ ಸಂಯಮಕ್ಕೆ ಬೆರಗಾಗಿದ್ದೇನೆ; ಬರೆದುದರ ಬಗ್ಗೆ ಬಡಾಯಿ ಕೊಚ್ಚಿಕೊಳ್ಳದ ಅವರ ವಿನಯವಂತಿಕೆಗೆ ಬೆರಗಾಗಿದ್ದೇನೆ; ಬೇರೆಯವರು ಬರೆದುದರಲ್ಲಿ ಬೆಲೆಯುಳ್ಳುದು ಕಂಡಾಗ ಅಮತ್ಸರತ್ವದೊಡನೆ ಅದನ್ನು ಮೆಚ್ಚುವ ಅವರ ಗುಣಗೌರವ ಬುದ್ಧಿಗೆ ಬೆರಗಾಗಿದ್ದೇನೆ; ತತ್ಕಾಲೀನತೆಯ ಒತ್ತಡಕ್ಕೆ ಮಣಿದು ಪಥಾಂತರಕ್ಕೆ ಒಪ್ಪದ ಅವರ ಸ್ವಮಾರ್ಗ ನಿಷ್ಠೆಗೆ ಬೆರಗಾಗಿದ್ದೇನೆ. ಅವರು ಹೀಗೆಯೇ ಬೆಳೆದು ಹಿರಿಮೆಯ ಗಿರಿ ಯನ್ನು ಹತ್ತಿ ನಿಲ್ಲಲೆಂಬುದೇ ನನ್ನ ಹಾರೈಕೆ.

## ದೇ. ಜವರೇಗೌಡ

# ಸುಸಂಸ್ಕೃತ ಚೇತನ

ಚೆನ್ನವೀರ ಕಣವಿಯವರನ್ನು ನಾನು ಮೊಟ್ಟಮೊದಲು ನೋಡಿದ್ದು ಎರಡು ದಶಕಗಳ ಹಿಂದೆ, ಧಾರವಾಡದಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಲನದ ಸಮಯದಲ್ಲಿ. ಆ ಹೊತ್ತಿಗಾಗಲೇ ಭವಿಷ್ಯದ ಭರವಸೆಯನ್ನು ಹುಟ್ಟಿಸಿದ್ದ ಕವಿಯೆಂದು ಅವರು ಕನ್ನಡ ಲೋಕದಲ್ಲಿ ಹೆಸರುವಾಸಿಯಾಗಿದ್ದರು. ದೇಹಾವಯವಗಳ ಮಾಟಕೂಟಗಳಿಂದ, ಅವುಗಳ ಹೊಂದಾಣಿಕೆಯಿಂದ, ಹರೆಯದ ದೀಪ್ತಿಯಿಂದ ಅವರು ತರುಣರ ಗುಂಪಿನಲ್ಲಿ ಎದ್ದು ಕಾಣುತ್ತಿದ್ದರು. ನಡೆನುಡಿನೋಟಗಳಲ್ಲಿ ಕಾವ್ಯತನ ಉಕ್ಕುತ್ತಿದ್ದುದರಿಂದ ಅವರೆಲ್ಲಿದ್ದರೂ ಹೆಮ್ಮೆಯ ವ್ಯಕ್ತಿಯಾಗಿ ಆಕರ್ಷಕವಾಗಿದ್ದರು. ಅವರನ್ನು ಮಾತಾಡಿಸಿದಾಗ ಕಣ್ಣಿನಲ್ಲಿ ಕಳಂಕರಹಿತವಾದ ಕಾಂತಿಯೂ, ಮೂಗಿನ ತುದಿಯಲ್ಲಿ ಸುಸ್ನಿಗ್ಧ ಛಾಯೆಯೂ, ಮಾತಿನಲ್ಲಿ ನಯಗಾರಿಕೆಯೂ, ನಗುವಿನಲ್ಲಿ ನಿಷ್ಕಾಪಟ್ಯವೂ ಹೊರಸೂಸುತ್ತ, ಅವರ ಸುಸಂಸ್ಕೃತ ಚೇತನಕ್ಕೆ ಸಾಕ್ಷಿಯಾಗಿದ್ದುವು.

ಮಾತನ್ನು ಕುರಿತು ಅವರೊಂದು ಸುಂದರ ಕವನ ರಚಿಸಿದ್ದಾರೆ. ನಾವು ಆಡುವ ಮಾತು, ಹೇಗಿರಬೇಕೆಂಬುದನ್ನು ಕಾವ್ಯಭಾಷೆಯಲ್ಲಿ ವಿವರಿಸಿದ್ದಾರೆ. 'ಪಾರಿಜಾತವು ಹೂವು ಸುರಿಸಿದಂತೆ,' 'ಸೃಷ್ಟಿ ಸಂಪೂರ್ಣತೆಯ ಬಿಂಬಿಸಿದಂತೆ' 'ಮೆಲ್ಲೆದೆಯ ಸವಿಯೊಲುಮೆ ಕರಗಿ ಕಂಬನಿಯಾಗಿ ಹೆಣ್ಣ ಕಣ್ಣಂಚಿನಲ್ಲಿ ತುಳುಕುವಂತೆ' 'ಮರವನಪ್ಪಿದ ಬಳ್ಳಿ ಬಳುಕುವಂತೆ' ಅದು ಮುಗಮುಗಿಸುತ್ತಿರಬೇಕೆಂದು ನುಡಿಯುವಲ್ಲಿ ಮಾತು ನಯನಾಜೂಕುಗಳ, ಪ್ರೇಮ ಪವಿತ್ರತೆಗಳ ಶುಭ್ರ ಮಾಧುರ್ಯಗಳ, ಸೌಂದರ್ಯ ಸಂವೇದನೆಗಳ, ಒಟ್ಟಿನಲ್ಲಿ ಸುಸಂಸ್ಕೃತಿಯ ಅಭಿಜ್ಞಾನವಾಗಿರಬೇಕೆಂದು ಅವರು ಬಯಸಿದಂತಿದೆ. ಮಾತಿನ ಈ ಲಕ್ಷಣಗಳಿಗೆ ಅವರ ಮಾತೇ ಲಕ್ಷ್ಯವೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಅವರ ಕವನಗಳಲ್ಲಿಯೂ ಇದೇ ಭಣಿತೆಯನ್ನು ಗುರುತಿಸಬಹುದು.

ಕಣವಿಯವರನ್ನು ಸಮನ್ವಯ ಕವಿಗಳೆಂದು ವಿಮರ್ಶಕರು ಹೆಸರಿಸುವದುಂಟು. ರೊಮ್ಯಾಂಟಿಕ್ ಮತ್ತು ನವ್ಯಕಾವ್ಯ ಸಂಪ್ರದಾಯಗಳ ಸಾರಸತ್ತ್ವ ಸಮ್ಮಿಶ್ರಣದ ಪರಿಣಾಮವೇ ಸಮನ್ವಯತೆಯೆಂದು ಹೇಳುವುದುಂಟು. ಕಾವ್ಯಕ್ಷೇತ್ರದಲ್ಲಿ ಆ ಪಂಥ ಈ ಪಂಥಗಳ ವರ್ಗೀಕರಣ ಅಸ್ಪಷ್ಟಮಾತ್ರವಲ್ಲ, ಕೃತಕವೂ ಅಹುದು. ರೊಮ್ಯಾಂಟಿಕ್ ಕಾವ್ಯ ದಲ್ಲಿ ನವ್ಯತೆಯ, ನವ್ಯಕಾವ್ಯದಲ್ಲಿ ರೊಮ್ಯಾಂಟಿಕತೆಯ ಗುಣಗಳಿಲ್ಲದಿಲ್ಲ. ವಾಸ್ತವತಾ, ಅಸ್ಮಿತಾ. ಮಾನವತಾದಿ ಪಂಥಗಳ ಲಕ್ಷಣಗಳಿಂದಲೂ ಅವು ಸಂಪೂರ್ಣವಾಗಿ ಮುಕ್ತ ವಾದಂತಿಲ್ಲ. ಅದೂ ಇರಲಿ, ಕಣವಿಯವರಿಗೆ ಪಂಥ ಪಕ್ಷಗಳೆಂದರಾಗದು. ಅವುಗಳ ಕೋಲಾ

ಹಲದಿಂದ ಉದ್ಭವವಾಗುವುದು ಹಾಲಾಹಲವೇ ಹೊರತು, ಅಮೃತವಲ್ಲವೆಂಬುದೂ ಅವರಿಗೆ ಗೊತ್ತು. ನಿರ್ಮಲಾಂತಃಕರಣದ ಪೂಜೆಯೇ ಸರಸ್ವತಿಗೆ ಮೆಚ್ಚು. ಕಲ್ಮಷ ಮನಸ್ಸಿನ ಕಾವ್ಯೋಪಾಸನೆ ವರ್ಜ್ಯ. ಅಂಥ ಪರಿಸರದಲ್ಲಿ ಮೂಡಿದ ಕಾವ್ಯ ಉತ್ಕೃಷ್ಟ ವಾಗಲಾರದು. ಸಹೃದಯರ ಮನಸ್ಸನ್ನು ರಮಿಸಲಾರದು. ಪಂಥಾತೀತರಾಗಿರುವುದ ರಿಂದಲೇ ಕಣವಿಯವರ ಕವನಗಳು ಸರ್ವಾಸ್ವಾದನೀಯವಾಗಿವೆ, ಸರ್ವಶ್ಲಾಘನೆಗೆ ಪಾತ್ರವಾಗಿವೆ.

ಕಾವ್ಯಕ್ಷೇತ್ರದಲ್ಲಿ ಮಾತ್ರವಲ್ಲ, ಜೀವನ ಕ್ಷೇತ್ರದಲ್ಲಿಯೂ ಅವರು ಸಮನ್ವಯ ಶೀಲರು. ಕಾವ್ಯದೇವಾಯತನದ ರೂಹಾರಿಯಾಗಿ, ಭಾವ ದೇವಾಲಯದ ಪೂಜಾರಿ ಯಾಗಿ ಸದಾ ರಸಗಂಗೆಯಲ್ಲಿ ಮೀಯುತ್ತಿರುವ ಈ ಶುದ್ಧ ಚೇತನರಿಗೆ 'ಹೆಚ್ಚು ಕಡಮೆಯು ಹೆಮ್ಮೆ ದೈನ್ಯದ ವಿಭೇದ'ವಿಲ್ಲ. ಅಂಥವರು ಲೋಕದ ಜಂಜಾಟಗಳಿಂದ ದೂರ ಸರಿದು, ಸಾಕ್ಷೀಭೂತರಾಗಿ ಅವುಗಳನ್ನವಲೋಕಿಸುತ್ತಾರೆ. ಅವರ ಬಳಿ ದರ್ಪಾಟ್ಟಹಾಸ ಗಳಾಗಲೀ, ಕೀಳು ಮೇಲುಗಳ ಭೇದಭಾವವಾಗಲೀ, ದ್ವೇಷ ಮಾತ್ಸರ್ಯಾದಿ ಆಸುರೀ ಗುಣಗಳಾಗಲೀ ಸುಳಿಯುವುದಿಲ್ಲ. ಅವರಲ್ಲಿ ನಡೆನುಡಿಗಳ ಸಮನ್ವಯ, ಆಚಾರ ವಿಚಾರಗಳ ಸಾಂಗತ್ಯ, ಮತಿಕೃತಿಗಳ ಸಾಮರಸ್ಯಗಳು ಸಹಜವಾಗಿ ಸಿದ್ಧಿಸುತ್ತವೆ. ರಸ-ಧ್ವನಿ-ಔಚಿತ್ಯ ಪ್ರಜ್ಞೆಯಿರುವೆಡೆ ಕಾವ್ಯಮಾತ್ರವಲ್ಲ, ಜೀವನವು ಹಸನಾಗುತ್ತದೆ ; ಸಾರ್ಥಕ ವಾಗುತ್ತದೆ, ಪರಿಪೂರ್ಣವಾಗುತ್ತದೆ. ಜೀವನವೆಲ್ಲ ಹೋಲಸೆನ್ನುವ ಶಠತನವೂ ಸಲ್ಲ, ಅದು ಪೂರ್ಣ ಲೇಸೆನುವ ಹಠವೂ ಹೊಲ್ಲ ; ಬುದ್ಧ ಬೋಧಿಸಿದ ಸುವರ್ಣಮಾಧ್ಯಮವೇ ಇವರ ಜೀವನ ಮೀಮಾಂಸೆಯ ರಹಸ್ಯವಾಗಿದೆಯೆನ್ನುವುದು ಇವರ ಕವನಗಳನ್ನೋದಿ ದವರಿಗೆ ವೇದ್ಯವಾಗದಿರದು.

ನಿರ್ಮಲಾಂತಃಕರಣದ ಸಮನ್ವಯ ದೃಷ್ಟಿಯ ಕವಿ ಪ್ರತಿಭೆಗೆ ವಿಶ್ವಸತ್ಯಗಳು ತಾವಾಗಿಯೇ ಗೋಚರಿಸುತ್ತವೆ. ನಿಸರ್ಗ ಸಹ ತನ್ನ ರಹಸ್ಯವನ್ನು ತೆರೆದು ತೋರಿಸುತ್ತದೆ ; ಸಾಮಾನ್ಯ ಜನತೆಯ ಕಣ್ಣಿಗೆ ಬೀಳದ ಗಾಂಧಿ, ಬಸವನಾಳ, ಮಧುರಚೆನ್ನರ ಬಾಳಿನ ಸೂಕ್ಷ್ಮಸಂಗತಿಗಳು ಕವಿಯ ಬಿಂಬಗ್ರಾಹಕ ಮನಸ್ಸಿನ ಮೇಲೆ ಅಚ್ಚೊತ್ತುತ್ತವೆ ; ಪರಿಸರದ ಒಂದೊಂದು ಗಿಡವು ಜೇಂಗೊಡವಾಗಿ, ಬೆಳುದಿಂಗಳು ಹಾಲಾಗಿ, ಮೋಡ ಬೆಣ್ಣೆಯಾಗಿ ಕಾಣುತ್ತವೆ. ಶಿಲಾರೂಪದ ಭಾವ ಅಹಲ್ಯೆ ಕವಿ ರಾಮಚಂದ್ರನ ಪಾದ ಸೋಂಕಿನಿಂದ ಜಾಗೃತವಾಗುತ್ತವಂತೆ ; ಸಾಮಾನ್ಯರ ಚರಣ ಸಂಸ್ಪರ್ಶದಿಂದ ಸಾಧ್ಯವಿಲ್ಲ. 'ನೀನಿಂದು ಬದುಕಿದ್ದರೊಂದು ವೇಳೆ, ಗರತಿಯಾಗಬಹುದಿತ್ತೇನೊ ರಾಜಕಾರಣದ ಸೂಳೆ'–ಗಾಂಧಿಯ ಬಗೆಗಿನ ಇದೊಂದು ಪ್ರತಿಮೆ ನಾಡಿನ ಇಂದಿನ ಸ್ಥಿತಿಗತಿಗಳನ್ನು ಪರಿಪೂರ್ಣವಾಗಿ ಪ್ರತಿಬಿಂಬಿಸುತ್ತದೆ. ನೂರು ಭಾಷ್ಯ ಭಾಷಣಗಳು ಬೀರಲಾರದ ಪರಿಣಾಮವನ್ನು ಒಂದೇ ಒಂದು ರೂಪಕ ಉಂಟುಮಾಡಬಲ್ಲುದು.

ಕವಿಜೀವನ ಮತ್ತು ವ್ಯಕ್ತಿಜೀವನ ಕಣವಿಯವರಲ್ಲಿ ಅಪ್ರತ್ಯೇಕವಾಗಿರುವುದರಿಂದ ಅವರು ಸರ್ವರಿಗೂ ಬೇಕಾದವರಾಗಿದ್ದಾರೆ. ಅವರ ಕಣ್ಣು ಬಾಯಿಗಳಿಂದ ಸೂಸುವ ನಗು ಸುತ್ತ ಮುತ್ತಣ ಗೆಳೆಯರನ್ನು ಬಾಚಿ ತಬ್ಬುತ್ತದೆ; ಅವರ ಒಂದೊಂದು ಮಾತೂ ಸುಳಿ ಗಾಳಿಯಂತೆ ಅವರ ಮನವನ್ನರಳಿಸುತ್ತದೆ. ಶರಣರ ಧರ್ಮವನ್ನು ರಕ್ತಗತವಾಗಿಸಿ ಕೊಂಡಿರುವ ಅವರ ನುಡಿ ಮನದ ಮೈಲಿಗೆಯನ್ನು ತೊಲಗಿಸಿ,ಬಹು ಬೇಗನೆ ತಮ್ಮವರನ್ನಾಗಿ ಮಾಡಿಕೊಳ್ಳುತ್ತದೆ. 'ಇವನಾರವ ಇವನಾರವ ಇವನಾರವನೆಂದೆನಿಸದೆ' 'ಇವ ನಮ್ಮವ ಇವ ನಮ್ಮವ ಇವನಮ್ಮವನೆಂದೆನಿಸುವ' ಸೌಹಾರ್ದ ಅದರ ಬಸಿರಲ್ಲಡಗಿದೆ. ಅವರ ಕವನಗಳಲ್ಲಿರುವ ಆತ್ಮೀಯತೆ ಅವರ ನಡೆನುಡಿಗಳಲ್ಲಿಯೂ ಸ್ಪಷ್ಟಗೋಚರ ವಾಗುತ್ತದೆ.

ಕಣವಿಯವರು ನಿಜಕ್ಕೂ ಭಾಗ್ಯವಂತರು. ಅವರು ಭಾಗ್ಯವಂತರಾಗಿರುವುದು ಆಸ್ತಿಪಾಸ್ತಿಗಳಿಂದಲ್ಲ, ದ್ರವ್ಯದಿಂದಲ್ಲ, ಅವರು ಪಡೆದಿರುವ ಯಮಳ ವನಿತೆಯರಿಂದ. ಅವರು ಅನುರೂಪೆಯರಾದ ಕಳಾಪ್ರಪೂರ್ಣೆಯರು: ಒಬ್ಬರು ಕಾವ್ಯವನಿತೆ, ಮತ್ತೊಬ್ಬರು ಶಾಂತಾವನಿತೆ, ಅವರಿಬ್ಬರಲ್ಲಿ ಸವತಿ ಮಾತ್ಸರ್ಯವಿಲ್ಲ; ಇಬ್ಬರೂ ಸ್ಫೂರ್ತಿ ದಾಯಿಗಳಾಗಿ, ಅವರ ಬಾಳ ಬೆಳಕಾಗಿದ್ದಾರೆ. ಶಾಂತಾದೇವಿಯವರು ಸ್ವಯಂ ಸಾಹಿತಿಗಳು, ಗಾನಕಲಾವಿದೆ; ಅವರ ಗಾನಕಲೆ ಕಣವಿಯವರ ಕಾವ್ಯಶಕ್ತಿಯಾಗಿ ವಿಕಾಸ ಗೊಂಡಿದೆಯೋ, ಇವರ ಕಾವ್ಯ ಪ್ರತಿಭೆ ಅವರ ಗಾನಕಲೆಯಾಗಿ ಪರಿಣಮಿಸಿದೆಯೋ ಹೇಳುವುದು ಕಷ್ಟ. ಇಂಥ ದಾಂಪತ್ಯ, ಸಾಂಗತ್ಯ ಸಾಮರಸ್ಯಗಳು ''ಮದುವೆಗಳು ಸ್ವರ್ಗದಲ್ಲಿ ನಡೆಯುತ್ತವೆ'' ಎಂಬ ಆಂಗ್ಲ ಕವಿವಾಣಿಯನ್ನು ನೆನಪಿಗೆ ತರುತ್ತವೆ. ಅವರಿಬ್ಬರೂ ಕಲಾದೇವಿಯ ಎರಡು ಕುಡಿಗಳಂತಿದ್ದಾರೆ, ಕಣ್ಣುಗಳಂತಿದ್ದಾರೆ, ಸಂಸ್ಕೃತಿಯ ಬಾಹುಗಳಂತಿದ್ದಾರೆ. ಅವರದು ಕೇವಲ ಭೌತಿಕ ದಾಂಪತ್ಯವಲ್ಲ. ಭಾವದಾಂಪತ್ಯ, ಬೌದ್ಧಿಕ ದಾಂಪತ್ಯ, ಕಲಾದಾಂಪತ್ಯ. ಇದರಿಂದಾಗಿ ಅವರ ಬಾಳು ಪೂರ್ಣ, ಸಾರ್ಥಕ. ಆದ್ದರಿಂದ ಅವರಿಬ್ಬರನ್ನು ಪ್ರತ್ಯೇಕವಾಗಿ ನೆನೆಯುವದೇ ಕಷ್ಟ. ನಿಜಕ್ಕೂ ಅವರು ಪುಣ್ಯಶಾಲಿಗಳು!

ಸುಸಂಸ್ಕೃತ ಕವಿಯ ಮನಸ್ಸು ನಾನಾ ರೂಪದಲ್ಲಿ ಮೂರ್ತತ್ವ ಪಡೆಯುತ್ತ ದೆನ್ನುವುದಕ್ಕೆ ಅವರ ಮನೆಯೇ ಸಾಕ್ಷಿ. ಗೃಹಿಣಿಯಿಂದ ಗೃಹವೆಂಬುದೂ ನಿಜ. ಇಬ್ಬರು 'ಗೃಹಿಣಿ'ಯರಿರುವಾಗ ಆ ಮನೆಯ ಸೌಭಾಗ್ಯಕ್ಕೆಣೆಯುಂಟೆ? ಗೋಡೆಯ ಮೇಲಣ ಚಿತ್ರಗಳಿಂದ ಹಿಡಿದು, ಊಟದ ಮನೆಯ ಸಾಮಾನುಗಳವರೆಗೆ ಒಪ್ಪ ಓರಣಗಳು ಕಣ್ಣಿಗೆ ಕಟ್ಟಿದಂತಿರುತ್ತವೆ, ಮನಸ್ಸನ್ನು ಮುಟ್ಟುವಂತಿರುತ್ತವೆ. ಊಟದಲ್ಲಿಯೂ ಅಷ್ಟೇ ಅಚ್ಚುಕಟ್ಟು. ಅವರ ಮನೆಯಲ್ಲಿ ಅವರೊಡನೆ ಭೋಜನಕ್ಕೆ ಕುಳಿತಾಗ ಅಥವಾ ಕಾವ್ಯ ಕ್ಷೇತ್ರವನ್ನು ಪ್ರವೇಶಿಸಿದಾಗ ಕಣ್ಣು ಕಿವಿ ಮೂಗು ನಾಲಗೆಗಳೊಂದೊಂದೂ ಅದ್ವೈತ ಸಿದ್ಧಿಯ ನೆಲೆಯನ್ನು ಮುಟ್ಟಿದಂತೆ, ಮೂರ್ಛೆಯಲ್ಲದ್ದಂತೆ, ಮಾಧುರ್ಯದ ಮಾದಕತೆ

ಯಿಂದ ಮತ್ತವಾದಂತೆ, ಒಮ್ಮೊಮ್ಮೆ ಎಲ್ಲವೂ ಒಂದೆಯಾದಂತೆ, ದ್ವಂದ್ವಾತೀತವಾದ ರಸಾನಂದ ಹೊರತಾಗಿ ಬೇರಾವ ಜಂಜಡವೂ ಇಲ್ಲದ ಲೋಕದಲ್ಲಿದ್ದಂತೆಭಾಸವಾಗುತ್ತದೆ. ಇಂಥ ರಸಲೋಕವನ್ನು ಸೃಷ್ಟಿಸಿರುವ, ಸೃಷ್ಟಿಸುತ್ತಿರುವ ಮುದ್ದಣ ಮನೋರಮೆಯ ರಿಂದ ಕನ್ನಡ ನುಡಿ ಮಾನ್ಯ, ಕನ್ನಡ ನಾಡು ಧನ್ಯ.

## ಬಸವರಾಜ ಕಟ್ಟೀಮನಿ

# ಚೆಂಬೆಳಕಿನ ಚೆನ್ನ

೧೯೪೫ :

೧೯೭೯ :

೩೪ ವರ್ಷಗಳ ಸ್ನೇಹ.

ಸ್ನೇಹ ಬೇರೆ, ಪರಿಚಯ ಬೇರೆ.

ಸ್ನೇಹವೆಂದರೆ ಅಕೃತ್ರಿಮವಾದ, ವಿಶುದ್ಧವಾದ, ಸ್ವಾರ್ಥರಹಿತವಾದ ಒಲುಮೆ.

ಕೃಷ್ಣಾರ್ಜುನರ ಸ್ನೇಹ, ಕರ್ಣ–ದುರ್ಯೋಧನರ ಸ್ನೇಹ, ರಾಮ–ಲಕ್ಷ್ಮಣರ ಸ್ನೇಹ, ಶೆಲ್ಲಿ-ಬೈರನ್ ಸ್ನೇಹ......

ಇಂಥ ಸುಮಧುರ ಸ್ನೇಹ ಅಪರೂಪದ್ದು ಈ ಲೋಕದಲ್ಲಿ,

ಎಂತಲೇ, ನಾನೂ ಇಂಥ ಸ್ನೇಹ ಅನುಭವಿಸಿದ್ದು ಕಡಿಮೆ.

ಬೇರೆಯವರ ಅನುಭವ ಬೇರೆ ಇರಬಹುದು.

ನನಗಂತೂ 'ಪರಿಚಿತ'ರ ಪರಿಚಯವೇ ಹೆಚ್ಚು.

ನಿಜವಾದ ಸ್ನೇಹಿತರು ಕಡಿಮೆ ; ಮೂರುನಾಲ್ಕು ಜನ ಇರಬಹುದು, ಅಷ್ಟೆ.

ಅರುವತ್ತು ಸಂವತ್ಸರಗಳ ದೀರ್ಘಾವಧಿಯಲ್ಲಿ ಕೇವಲ ಮೂರುನಾಲ್ಕು ಜನ ಮಾತ್ರ 'ಸ್ನೇಹಿತ'ರಾಗಿರುವುದು ವಿಸ್ಮಯದ ವಿಚಾರವೆನಿಸಬಹುದು.

ಆದರೆ, ಇದು ಸತ್ಯಾಂಶ.

ಸ್ನೇಹಕ್ಕೂ ವಯಸ್ಸಿಗೂ ಸಂಬಂಧವಿಲ್ಲ. ಓರಗೆಯವರು ಮಾತ್ರ ಗೆಳೆಯರಾಗುವರೆಂಬ ಮಾತು ಸರಿಯಲ್ಲ.

'ಸಮಾನಶೀಲೇ ವ್ಯಸನೇಷು ಸಖ್ಯಂ', ಎನ್ನುತ್ತಾರೆ.

ಶ್ರೀ ಚೆನ್ನವೀರ ಕಣವಿ ನನಗಿಂತ ಹತ್ತು ವರ್ಷಗಳಿಗೆ ಕಿರಿಯರು. ಆದರೆ, ವಿದ್ಯೆ, ಜ್ಞಾನ, ವಿದ್ವತ್ತು, ಪಾಂಡಿತ್ಯ ಇತ್ಯಾದಿ ವಿಚಾರಗಳಲ್ಲಿ ನನಗಿಂತ ಹಿರಿಯರು. ಅವರ ಸಂಯಮ, ಸಹನಶೀಲತೆ, ಶಾಂತವೃತ್ತಿ, ಸಮತೂಕದ ದೃಷ್ಟಿ ನನಗಿಲ್ಲ. ನನ್ನದು ಹುಟ್ಟಾ ದುಡುಕು ಸ್ವಭಾವ. ಕಣವಿ ಯಾವಾಗಲೂ ಸಮಾಧಾನಿ, ಬಿರುನುಡಿಗಳನ್ನಾಡುವುದು ಅವರಿಗೆ ಗೊತ್ತೇ ಇಲ್ಲ.

ಇಂಥ ಹಲವು ವ್ಯತ್ಯಾಸಗಳಿದ್ದೂ ನಾವಿಬ್ಬರೂ ಸ್ನೇಹಿತರಾದದ್ದು ನನಗೊಂದು ಅಚ್ಚರಿಯ ವಿಷಯ.

o o o o

ಕಣವಿಯವರ ಪ್ರಥಮ ಪರಿಚಯವಾದದ್ದು ಎಲ್ಲಿ ? ಹೋಟಲಿನಲ್ಲಿ !

ನಿಜ ಹೇಳುವುದಾದರೆ ಕಣವಿಯವರಿಗೂ ಹೋಟಲುಗಳಿಗೂ ಆಗಿಬರುವುದಿಲ್ಲ. ಅವರೊಬ್ಬರೇ ಇದ್ದಾಗ ಹೋಟಲುಗಳಿಗೆ ಪ್ರವೇಶಿಸುವುದೇ ಇಲ್ಲ. ಆಗಲೂ ಅಷ್ಟೆ. ಈಗಲೂ ಅಷ್ಟೆ. ಗೆಳೆಯರ ಒತ್ತಾಯದಿಂದ ಎಂದಾದರೊಮ್ಮೆ ಬರುವುದುಂಟು. ಬಂದರೂ ಸಹ ತಿಂಡಿ ಗಿಂಡಿ ತಿನ್ನುವವರಲ್ಲ. ಸ್ವಲ್ಪ ಚಹ ಅಥವಾ ಕಾಫಿ ಕುಡಿಯಬಹುದು, ಅಷ್ಟೆ.

ಎಲ್ಲದರಲ್ಲೂ ಮಿತಿ, ಸಂಯಮ.

ಅದು ಕಣವಿಯವರ ವೈಶಿಷ್ಟ್ಯ.

ಕವಿಗಳಿಗೂ ಕಾದಂಬರಿಕಾರರಿಗೂ ಅನೇಕ ಚಟಗಳಿರುವುದುಂಟು, ಕವಿ ಕಣವಿ ಮಾತ್ರ ಮೊದಲಿನಿಂದಲೂ ಚಟಗಳಿಂದ ಹರದಾರಿ ದೂರ.

ಇಂಥವರು ಹೋಟಲಿನಲ್ಲಿ ನನಗೆ ಪರಿಚಿತರಾದರೆಂದರೆ ಸೋಜಿಗದ ಸಂಗತಿಯೇ ಸರಿ.

ನಾನು ಅದೇತಾನೆ 'ಉಷಾ'ಗೆ ಬಿಡುಗಡೆಯ ಚೀಟಿಕೊಟ್ಟು "ಸ್ವತಂತ್ರ"ನಾಗಿ ಸಂಚಾರ ಹೊರಟು ಧಾರವಾಡಕ್ಕೆ ಬಂದಿದ್ದೆ, ಎರಡು ವರ್ಷಗಳ ಕಾಲ ಹಗಲಿರುಳೂ ದುಡಿದು ಪತ್ರಿಕೆಯನ್ನು ಕಟ್ಟಿ ಬೆಳೆಸಿ, ಆ ಕಾಲದ ಏಕಮಾತ್ರ ಪ್ರಖ್ಯಾತ ಮಾಸಿಕವೆಂಬ ಹೆಸರು ದೊರಕಿಸಿ ಕೊಟ್ಟು, ಇದ್ದುದಿದ್ದಂತೆಯೇ ಅದನ್ನು ತ್ಯಜಿಸಿ ಹೊರಡಬೇಕಾಗಿ ಬಂದುದರಿಂದ ಮನಸ್ಸು ಕ್ಷುಬ್ಧವಾಗಿದ್ದಿತು.

ಇಂಥ ಸ್ಥಿತಿಯಲ್ಲಿ, ಧಾರವಾಡದ ಪೇಟೆಯಲ್ಲಿರುವ ಹೋಟಲಿನಲ್ಲಿ ತಿಂಡಿ ತಿನ್ನುತ್ತ ಕುಳಿತಿದ್ದಾಗ ವಿದ್ಯಾರ್ಥಿಗಳಿಬ್ಬರು ನನ್ನನ್ನು ಹುಡುಕಿಕೊಂಡು ಬಂದರು.

ಅವರಲ್ಲೊಬ್ಬರು ನನ್ನಷ್ಟೇ ಎತ್ತರದ, ತೆಳ್ಳಗಿನ ಶರೀರದ, ಮುಗ್ಧ ಮೊಗದ, ಹೊಳಪುಗಣ್ಣುಗಳ ಹುಡುಗ. ಅವರೇ ಕಣವಿ. ಇನ್ನೊಬ್ಬರು ಅವರ ಗೆಳೆಯ ಅನಾಡ.

ಇಬ್ಬರೂ ಅತ್ಯಂತ ಭಾವಜೀವಿಗಳೆಂಬುದನ್ನು ಅವರ ಮುಖಮುದ್ರೆ ವ್ಯಕ್ತಗೊಳಿಸುತ್ತಿತ್ತು.

ಕೊಂಚ ಸಂಕೋಚದಿಂದಲೇ ನನ್ನೆದುರು ಕುಳಿತು ಅವರು ಕೇಳಿದರು.

"ನೀವು ಕಟ್ಟೀಮನಿಯವರಲ್ಲವೇ ?"

ಹೊಸಬರನ್ನು ಕಂಡರೆ ನನಗೂ ಸಂಕೋಚವೇ. ಪೂರಿಪಲ್ಯ ನುಂಗುತ್ತ ನಾನು ಹೇಳಿದೆ :

"ಹೌದು. ನೀವು ?"

ಅವರು ತಮ್ಮ ಪರಿಚಯ ಮಾಡಿಕೊಟ್ಟರು. ತಾವು 'ಉಷಾ'ದ ಅಭಿಮಾನೀ ವಾಚಕರೆಂದೂ ಹೇಳಿದರು.

"ನೀವಿಲ್ಲಿ ಇರುವಿರಂತ ಪುಸ್ತಕದಂಗಡಿಯವರಿಂದ ಗೊತ್ತಾಯ್ತು. ಧಾರವಾಡಕ್ಕೆಂದು ಬಂದಿರಿ ?"

"ಧಾರವಾಡಕ್ಕೇದೇ ಬಂದೀನಿ," ನಾನು ಒಳಗಿನ ಅಳು ನುಂಗಿ ನಗುತ್ತ ಹೇಳಿದೆ.

ಅರ್ಥಾತ್—ಅದರ ಪೂರ್ಣಾರ್ಥ ಆವರಿಗೆ ಹೊಳೆಯಲಿಲ್ಲ.

"ನೀವು ನಮ್ಮ ಕೋಣೆಗೆ ಬಂದು ಹೋಗಬೇಕು. ನಿಮ್ಮ ಬಗ್ಗೆ ನಮಗೆ ಬಹಳ ಅಭಿಮಾನ."

"ಬಂದು ಹೋಗೋದಷ್ಟೇ ಯಾಕೆ ? ಜಾಗಾ ಇದ್ದರೆ ಅಲ್ಲೇ ಇದ್ದುಬಿಡ್ತೀನಿ !" ಎಂದು ನಗುತ್ತಲೇ ಹೇಳಿದೆ.

ಆಗಲೂ ಅವರಿಗೆ ಏನೂ ತಿಳಿಯಲಿಲ್ಲ.

"ಉಷಾ ಚೆನ್ನಾಗಿ ನಡೆದಿದೆಯೇ ? ಆರ್ಥಿಕ ಸ್ಥಿತಿ ಹೇಗಿದೆ ?" ಎಂದು ಕೇಳಿದರು.

"ಚೆನ್ನಾಗೇ ನಡೆದಿದೆ. ಚೆನ್ನಾಗೇ ಇದೆ. ನನ್ನ ಸ್ಥಿತಿ ಮಾತ್ರ ಈಗ ಚೆನ್ನಾಗಿಲ್ಲ" ಎಂದು ಹೇಳಿ, ನಾನು ಗಟ್ಟಿಯಾಗಿ ನಕ್ಕುಬಿಟ್ಟೆ.

ಆ ಮುಗ್ಧ ಹುಡುಗರ ಮೊಗಗಳ ಮೇಲೆ ವಿಷಾದದ ಮೋಡ ಮೂಡಿದುವು.

"ಏನಾತ್ರೀ ?" ಎಂದರು.

"ಉಷಾ ನನ್ನನ್ನು ಬಿಟ್ಟಷ್ಟು. ಈಗ ನಾನು ಸ್ವತಂತ್ರ !"

ಅವರಿಗೆ ಆಘಾತವಾದಂತಾಯಿತು.

"ಯಾಕ್ರೀ ? ಏನಾಯ್ತು ?"

"ಏನೂ ಇಲ್ಲ...ಏನೇನೋ ಆಯ್ತು, ನನಗೆ ಸಂಬಳ ಕೊಡುವಂಥ ಆರ್ಥಿಕಸ್ಥಿತಿ ಅವರಿಗಿಲ್ಲ, ಮಂಗಳೂರಿನ ಗೆಳೆಯನೊಬ್ಬ ನನಗೆ ಗೊತ್ತಾಗದಂತೆ ಸಂಚು ಮಾಡಿದ, ನನಗಿಂತ ಕಡಿಮೆ ಸಂಬಳಕ್ಕೆ ತಾನು ಕೆಲಸ ಮಾಡುವುದಾಗಿ ಹೇಳಿದ, ಸರಿ. ನನಗೆ ಸೋಡ ಚೀಟೀ ಸಿಕ್ಕಿತು."

"ಮುಂದೆ ?"

"ಮುಂದೆ ? ಇನ್ನೊಂದು ಪತ್ರಿಕೆ ಮಾಡಬೇಕು. ಅದರ ತಯಾರಿ ಮಾಡ್ತಾ ಇದೀನಿ. ಸದ್ಯಕ್ಕಂತೂ ದೇವರೇ ಆಧಾರ...ಆದರೆ, ದೇವರಲ್ಲೂ ನನಗೆ ನಂಬಿಕೆಯಿಲ್ಲ, ಸ್ವಂತ ಸಾಮರ್ಥ್ಯದಲ್ಲೇ ನಂಬಿಕೆ....".

ಅಲ್ಲಿಂದ ಹೊರಟು ಆಗ ಕೋಟೆಯು ಮೇಲಿದ್ದ ಅವರ ಕೋಣೆಗೆ ಹೋದದ್ದು. ಆಳವಾದ ಕಂದಕದ ಮೇಲೆ, ಬೀಸುಗಾಳಿಗೆ ಮೈದೆರೆದು ನಿಂತಿದ್ದ ಆ ಕೋಣೆಯಲ್ಲಿ ಹಲವು ಗುಂಟೆಗಳ ಕಾಲ ಕಳೆದದ್ದು, ಅವರ ಕವಿತೆಗಳನ್ನು ಓದಿದ್ದು, ಅನೇಕ ವಿಚಾರಗಳ ಬಗೆಗೆ ಹರಟೆ ಹೊಡೆದದ್ದು...ಧಾರವಾಡದ ದಿವ್ಯ ಸೃಷ್ಟಿ ಸೌಂದರ್ಯದ ತುದಿಯ ಮೇಲೆ ನಿಂತಂತಿದ್ದ ಆ ಸ್ಥಳದಲ್ಲಿ ಕಳೆದ ಆ ಕಾಲ ಈಗಲೂ ನೆನಪಿನಲ್ಲಿದೆ.

ಕಣವಿ ಆಗ ಪ್ರೀವಿಯಸ್ ವಿದ್ಯಾರ್ಥಿ. ಕರ್ನಾಟಕ ಕಾಲೇಜಿನಲ್ಲಿ ವಿದ್ಯಾಭ್ಯಾಸ. ಸಭೆಗಳಿಂದ ಬಲುದೂರ ಇರುತ್ತಿದ್ದ ನನ್ನನ್ನು ಆಗ್ರಹಮಾಡಿ ಕರದೊಯ್ದು ಆರ್. ಎಲ್. ಎಸ್. ಹೈಸ್ಕೂಲಿನಲ್ಲಿ ಭಾಷಣವನ್ನೂ ಮಾಡಿಸಿದರು. ಅಲ್ಲಿ ಚಿಕ್ಕಮಕ್ಕಳ ಕೋಲಾಹಲವೋ ಕೋಲಾಹಲ. ನನ್ನ ಭಾಷಣ ಯಾರಿಗೂ ತಿಳಿಯಲಿಲ್ಲ.

ಅದೂ ಒಂದು ಸ್ವಾರಸ್ಯಕರವಾದ ನೆನಪು.

o o o

ಹಾಗೆ ಆರಂಭವಾದದ್ದು ಕಣವಿಯವರ ಒಡನಾಟ.

ನಾನು 'ಸ್ವತಂತ್ರ' ಪತ್ರಿಕೆ ಹೊರಡಿಸಿದೆ. ಆದರೆ, ಒಂದೇ ವರ್ಷದಲ್ಲಿ ಅದರ ಅಂತ್ಯವೂ ಆಯಿತು. ಲಿಮಿಟೆಡ್ ಕಂಪನಿ ಮಾಡಿ ಅಲ್ಲಿಂದಲೂ ಹೊರಬಿದ್ದು ಧಾರವಾಡಕ್ಕೆ ಬಂದು ಸಾಧನಕೇರಿಯಲ್ಲಿ ಬೀಡು ಬಿಟ್ಟಾಗ ಕಣವಿಯವರ ಸ್ನೇಹ ಗಾಢವಾಯಿತು. ಅವರು ಆಗ ಪದವೀ ತರಗತಿಯ ವಿದ್ಯಾರ್ಥಿ. ಜೋಗ ಬಂಗಲೆಯಲ್ಲಿನ ದೊಡ್ಡ ಕೋಣೆಯೊಂದರಲ್ಲಿ ಆಗ ಅವರ ವಾಸ.

ಅದೇ "ಚೆಂಬೆಳಕು !"

ಹೆಸರಿಗೆ ಸರಿಯಾಗಿ ಚೆನ್ನವಾದ ಬೆಳಕು ಚೆಲ್ಲವರಿಯುವ ಕೋಣೆ. ಪೂರ್ವದಿಕ್ಕಿನಲ್ಲಿದ್ದುದು ಕೇವಲ ಕಿಟಕಿಗಳ ಗೋಡೆ. ಅದರಾಚೆ ಮಲ್ಲಿಗೆ, ಸೇವಂತಿಗೆ, ಗುಲಾಬಿಗಳ ಗಿಡ ಬಳ್ಳಿಗಳು. ಸದಾ ನೆರಳು ಕೊಡುವ, ತಂಪು ಸೂಸುವ ಗಿಡಗಳು. ಕೋಣೆಯಲ್ಲಿ ಎಲ್ಲವೂ ವ್ಯವಸ್ಥಿತ. ಕೆಲ್ಲಿ, ಕೀಟ್ಸ್, ಬೇಂದ್ರೆ, ಕುವೆಂಪು ಇತ್ಯಾದಿ ಕವಿಗಳ ಚಿತ್ರಗಳು. ಅವುಗಳ ಹತ್ತಿರ ಹೂವುಗಳು. ಹೂದಾನಿಗಳಲ್ಲೂ ನಿತ್ಯ ಅರಳಿರುವ ತಾಜಾ ಪುಷ್ಪಗಳು. ಮಂದಾನಿಲ, ಪುಷ್ಪ ಸಂಕಲ, ತುಂಬಿ ವಿಂಡುಗಳು ನಡುವೆ ಯುವಕವಿಯ ಪ್ರಶಾಂತ ಜೀವನ. ಸಮಾನ ಶೀಲ ಗೆಳೆಯರ ಆಗಮನ, ನಿರ್ಗಮನ. ಭಾವುಕ ಕವಿ ಶಿವೇಶ್ವರನ ತಂಗುದಾಣ. ಶಿವೇಶ್ವರ–ಕಣವಿ ಅವಳಿ ಜವಳಿ ಸೋದರರಂತೆ ಕಾಣುತ್ತಿದ್ದರು. ಆ ಸಖ್ಯ, ಆ ಬಾಂಧವ್ಯ, ಆ ಪ್ರೀತಿ, ಆ ಒಲವು, ಅದರ ಚೆಲುವು. . . .ಅದು 'ಕಾವ್ಯಾನುಭವ ಮಂಟಪ'.

"ಸ್ವರ್ಗದೊಳಗೀ ಸ್ನೇಹ ದೊರೆವುದೇನು. ?" ಎಂದು ನನಗೆ ವಿಸ್ಮಯ. ಕೀಟ್ಸ್ನಂತೆ ಶಿವೇಶ್ವರನದೂ ಅಲ್ಪಾಯುಷ್ಯ. ಆತನಂಥದೇ ದುರಂತ. ಸಿದ್ದಣ್ಣ ಮಸಳಿ, ಕುರ್ತಕೋಟಿ, ಕೋಡಮಗ್ಗಿ, ಅನಾಡ, ಮೈಸೂರುಮಠ, ಕಲ್ಮಠ ಇತ್ಯಾದಿ ಗೆಳೆಯರ ಗುಂಪು.

ಕೋಣೆಯಲ್ಲಿಯೇ ಆಗಾಗ ಸಣ್ಣ ಪ್ರಮಾಣದ 'ಕವಿ ಸಮ್ಮೇಳನ'ಗಳು. ಗೋಕಾಕ, ಮುಗಳಿ, ಬೇಂದ್ರೆ, ಮೆನೆಜಿಸ್‌ರವರಂಥ ಹಿರಿಯ ಕವಿಗಳ ಭೆಟ್ಟಿ. ಕವಿ ಕಾವ್ಯ ವಿಮರ್ಶೆ. ಅದರಲ್ಲೆಲ್ಲ ಆಗಾಗ ನಾನೂ ಭಾಗಿ...ಕಣವಿಯವರ ಕಾವ್ಯಲತೆ ಅದೇ ತಾನೆ ಕುಡಿಯೊಡೆಯುತ್ತಿತ್ತು. 'ಕಾವ್ಯಾಕ್ಷಿ' ಪ್ರಕಟವಾಗಿತ್ತು. 'ಭಾವಜೀವಿ'ಯೊಡನೆ ಅವರು 'ಕವಿ' ಪಟ್ಟವನ್ನೂ ಏರಿದರು. ಅವರ ಬಾಲ್ಯ-ಯೌವನಗಳ ಕಾಲವನ್ನು ಸುಕುಮಾರವಾದ ಭಾಷೆಯಲ್ಲಿ ಚಿತ್ರಿಸುವ ಆ ಖಂಡ ಕಾವ್ಯವನ್ನು ಓದಿ ಮೆಚ್ಚಿಕೊಂಡು, ಯಥಾಪ್ರಕಾರ ಅವಸರವಸರದಿಂದ ನನ್ನ ಅಂದಿನ ಅಲ್ಪಾಯುಷೀ ಗ್ರಂಥಮಾಲೆಯಲ್ಲಿ ಪ್ರಕಟಿಸಿದೆ. "ಇರುಳು ಕಳೆದು ಬೆಳಗಾಗುವುದರೊಳಗಾಗಿ" ಕಣವಿ ಪ್ರಖ್ಯಾತರಾದರು. "ಭಾವಜೀವಿ"ಯಂಥ ಸುಂದರ ಖಂಡಕಾವ್ಯ ಅನಂತರ ಇನ್ನೊಂದು ಬರಲಿಲ್ಲ.

o o o

ಮಲಾಮರಡಿಯಿಂದ ಧಾರವಾಡಕ್ಕೆ ಬಂದಾಗಲೆಲ್ಲ 'ಚೆಂಬೆಳಕಿ'ನಲ್ಲಿಯೇ ನನ್ನ ಬಿಡಾರ. ಕಣವಿಯವರ ಸ್ನೇಹ ಗಟ್ಟಿಗೊಂಡಿತು. ಸಾಯಂಕಾಲ ಅವರೊಡನೆ ದೂರ ದೂರದವರೆಗೆ ವಾಯುವಿಹಾರ. ಆಗಾಗ, ಪೇಟೆಯಲ್ಲೂ ನಮ್ಮ ಗೆಳೆಯರ ಗುಂಪು. ಸಣ್ಣ ಮನಸ್ಸಿನ ಜನರು ಅಸೂಯೆ ಪಡುವಷ್ಟು ಚೆಂದವಾಗಿತ್ತು ನಮ್ಮ ಗುಂಪು. ಕಾವ್ಯವಾಚನ, ವಿಮರ್ಶೆ, ಕಾಡುಹರಟೆ, ನಗೆ, ಕೇಕೆ. 'ಚೆಂಬೆಳಕಿ'ನಲ್ಲಿ ಕಳೆದ ದಿನಗಳು ನನ್ನ ಜೀವನದಲ್ಲಿಯೇ ಅತ್ಯಂತ ಸುಖದ ದಿನಗಳು.

ಕಣವಿಯವರ ಅಪೂರ್ವ ತಾಳ್ಮೆಯನ್ನೂ ಸಖ್ಯವನ್ನೂ ಪ್ರಕಟಿಸುವ, ನನ್ನ ವಿಚಾರಗೇಡಿತನವನ್ನು ಪ್ರದರ್ಶಿಸುವ, ನೆನಪಾದಾಗಲೆಲ್ಲ ಕರುಳು ಕೊರೆಯುವ ಪ್ರಸಂಗವೊಂದು :

ಅಪರಾಹ್ನದ ಸಮಯ, ಮಲಾಮರಡಿಯಿಂದ ರೈಲಿನಲ್ಲಿ ಬಂದಿದ್ದೆ. ಜನದಟ್ಟಣೆಯಿಂದಾಗಿ ಸ್ಥಳ ಸಿಕ್ಕದೆ ನುಗ್ಗು ನುಗ್ಗಾಗಿ, ಹಸಿದು ಬಸವಳಿದು ಬಂದಿದ್ದೆ. ಕಣವಿ ಆಗ ತಾನೆ ಊಟ ಮುಗಿಸಿಕೊಂಡು ಬಂದು 'ಚೆಂಬೆಳಕಿ'ನಲ್ಲಿ ವಿರಮಿಸುವುದರಲ್ಲಿದ್ದರು. ಮೇ ತಿಂಗಳಿನ ಬಿರು ಬಿಸಿಲು, ಭಯಂಕರ ಸೆಕೆ. ಹೊರಗೆ ಹೋಗುವುದಕ್ಕೂ ಮನಸ್ಸಾಗದು.

"ಊಟ ?" ಎಂದರು ಕಣವಿ.

"ಎಲ್ಲಿಯ ಊಟ ? ಲೋಂಡಾದಲ್ಲಿ ಎರಡು ಇಡ್ಲಿ ತಿಂದೆ ಅಷ್ಟೆ."

"ನಡೀರಿ. ಊಟ ಮಾಡಿ ಬಂದೀರಂತೆ."

ಪೇಟೆಯಲ್ಲಿದ್ದ ಖಾನಾವಳಿಯೊಂದರಲ್ಲಿ ಆಗ ಅವರು ಊಟ ಮಾಡುತ್ತಿದ್ದರು.

"ಬಹಳ ದಣಿವಾಗಿದೆ. ಊಟ ಬೇಡ. ಮೊದಲು ಸ್ವಲ್ಪ ವಿಶ್ರಾಂತಿ...."

"ಛೆ, ಛೆ, ಊಟವಿಲ್ಲದೆ ಎಂಥ ವಿಶ್ರಾಂತಿ ? ಏಳಿರಿ. ಹೋಗೋಣ" ಎಂದು ಹೇಳುತ್ತ ಅವರು ಬಟ್ಟೆ ಧರಿಸತೊಡಗಿದರು.

ಆ ಕೆಟ್ಟ ಬಿಸಿಲಿನಲ್ಲಿ ಅಷ್ಟು ದೂರ ಹೋಗಲು ನನಗಿಷ್ಟವಿರಲಿಲ್ಲ. ಹಸಿವೂ ವಿಪರೀತವಾಗಿದ್ದಿತು. ಹಾಗೇ ಇರಲೂ ಶಕ್ಯವಿರಲಿಲ್ಲ ಎಂತಲೇ, ಹಿಂದು ಮುಂದಿನ ವಿಚಾರ ಮಾಡದೆ ಹುಂಬತನದಿಂದ ಹೇಳಿದೆ :

"ನಾನು ಸ್ವಲ್ಪ ಮಲಗಿರ್ತೀನಿ. ನೀವು ಸೈಕಲ್ ಮೇಲೆ ಹೋಗಿ ಊಟ ತಂದರೆ..."

ಅವರ ಮುಖ ಸ್ವಲ್ಪ ಕಳೆಗುಂದಿದಂತಾಯಿತು. ಅವರು ಮತ್ತೊಂದು ಮಾತನಾಡದೆ ಸೈಕಲ್ ತೆಗೆದುಕೊಂಡು ಹೋಗಿ ಊಟ ಕಟ್ಟಿಕೊಂಡು ಬಂದರು. ಅವರ ಶರೀರದಿಂದ ಬೆವರು ಸುರಿಯುತ್ತಿತ್ತು. ಅದನ್ನು ನೋಡಿ ನನ್ನ ಕರುಳಿನಲ್ಲಿ ಕುಮುಲವಾಯಿತು. ಊಟ ರುಚಿಸಲಿಲ್ಲ, ಆದರೂ, ಯಾಂತ್ರಿಕವಾಗಿ ತಿಂದು ಮುಗಿಸಿದೆ. ಅನ್ನದೇವರ ಈ ಆರಾಧನೆಯನ್ನು ಸಮಾಧಾನದಿಂದಲೇ ನೋಡುತ್ತ ಕಣವಿ ವಿರಾಮ ಕುರ್ಚಿಯಲ್ಲೊರಗಿದ್ದರು. ಅಸಮಾಧಾನದ ಗುರುತು ಕೊಂಚವೂ ಇರಲಿಲ್ಲ ಅವರ ಮುಖದಲ್ಲಿ,

ಅವರಿಗೆ ಅಂಥ ಕೆಲಸ ಹೇಳಿದುದಕ್ಕೆ ನನ್ನನ್ನು ನಾನೇ ಹಳಿದುಕೊಂಡದ್ದು ಸಾವಿರ ಬಾರಿ. ಆದರೆ, ಆ ಕುರಿತು ಅವರ ಹತ್ತಿರ ಮಾತನಾಡಲಿಲ್ಲ, ಅವರೂ, ಅಂಥ ವಿಚಾರ ಪ್ರಸ್ತಾಪಿಸುವವರಲ್ಲ.

ಅವರೊಡನೆ ಮತ್ತೊಮ್ಮೆ ಆ ರೀತಿ ನಡೆದುಕೊಳ್ಳಲಿಲ್ಲ, ಅಷ್ಟೆ.

o o o

ಬಿ.ಎ. ತರಗತಿಯಲ್ಲಿ ಪ್ರಥಮ ದರ್ಜೆ ದೊರಕಿಸಿ ಪಾಸಾದರು ಕಣವಿ. ಆ ನಿಮಿತ್ತವಾಗಿ ಅವರನ್ನು ಅಭಿನಂದಿಸಲು ನಗರ ಸಭಾ ಭವನದಲ್ಲಿ 'ಸತ್ಕಾರ ಕೂಟ' ಏರ್ಪಡಿಸಿದುದೂ ಸ್ವಾರಸ್ಯಕರವಾದ ಪ್ರಸಂಗ. ದಿವಂಗತ ಬಸವನಾಳರವರನ್ನು ಆ ಸಭೆಗೆ ಒತ್ತಾಯ ಮಾಡಿ ಕರೆದುಕೊಂಡು ಬಂದಿದ್ದೆ. ಅವರು ಮೌನವಾಗಿ ಕುಳಿತಿದ್ದರು. ಮಾತನಾಡಲಿಲ್ಲ. ನಾವು ಮೂರು ನಾಲ್ಕು ಜನ ಮಾತನಾಡಿದೆವು. "ಗೋಕಾಕರಂತೆ ಕಣವಿಯವರೂ ಆಕ್ಸ್‌ಫರ್ಡಿಗೆ ಹೋಗಿ ಪದವಿ ಪಡೆದು ಬರಲಿ" ಎಂದು ನಾನು ಹಾರೈಸಿದೆ. ಅದು ಕೇವಲ 'ಹಾರೈಕೆ'ಯಾಗಿಯೇ ಉಳಿಯಿತು. ಗೋಕಾಕರಿಗಿರುವ ಅನುಕೂಲತೆ ಕಣವಿಯವರಿಗಿರಲಿಲ್ಲ. ಅವರದು ಅಂಥ ಸ್ಥಿತಿವಂತ ಮನೆತನವಲ್ಲ. ತಂದೆ ಸಕ್ಕರೆಪ್ಪನವರು ಕನ್ನಡ ಶಾಲಾ ಶಿಕ್ಷಕರಾಗಿದ್ದವರು. ಅಣ್ಣನೂ ಶಿಕ್ಷಕರೇ. ಶಿಷ್ಯವೃತ್ತಿಗಳ ನೆರವಿನಿಂದ, ಪ್ರಸಾದ ನಿಲಯದಲ್ಲಿದ್ದುಕೊಂಡು ವಿದ್ಯಾಭ್ಯಾಸ ಮಾಡಿದವರು ಕಣವಿ. ಮನೆಯಿಂದ ಸಹಾಯ ಲಭಿಸುವಂತಿರಲಿಲ್ಲ.

ಇಂಥ ಸ್ಥಿತಿಯಿರುವಾಗ ಆಕ್ಸ್‌ಫರ್ಡ್ ಕನಸಿನ ಮಾತು. ವಿದೇಶೀಯ ಪದವಿಯಿಲ್ಲದಿರುವುದರಿಂದ ಕಣವಿಯವರಿಗೂ ಏನೂ ಕೊರತೆಯೆನಿಸಲಿಲ್ಲ.

o o o

೧೯೫೦ರ ಬೇಸಗೆಯಲ್ಲಿ ಅವರು ವಿಜಾಪುರಕ್ಕೆ ಹೋಗಿದ್ದರು. ಅಲ್ಲಿ ಅವರ ಮಾವನ ಮನೆಯಿತ್ತು. ಮಾವ ಎಂದರೆ, ಅಕ್ಕನ ಪತಿ. ಅವರು ಶಿಕ್ಷಣ ಇಲಾಖೆಯಲ್ಲಿ ಅಧಿಕಾರಿ.

ವಿಜಾಪುರದಲ್ಲಿ ಎರಡುವಾರ ಇರುವುದಾಗಿಯೂ ಆ ನಗರವನ್ನು ನೋಡಲು ಬಂದು ಹೋಗಬೇಕೆಂದೂ ಕಣವಿಯವರಿಂದ ಪತ್ರ ಬಂದಿತು. ಸರಿ, ಮಲಾಮುರಡಿಯಿಂದ ರಬಕವಿ ಕುಡಚಿ ಮಾರ್ಗವಾಗಿ ವಿಜಾಪುರಕ್ಕೆ ಹೋದೆ. ಒಂದೆರಡು ದಿನಗಳ ಕಾಲ ಆ ಐತಿಹಾಸಿಕ ನಗರ ನೋಡಿದುದಾಯಿತು. ದಿ. ನಾರಾಯಣರಾವ್ ಕುಲಕರ್ಣಿಯವರು ನಮ್ಮ ಕೆಲವು ಭಾವಚಿತ್ರಗಳನ್ನೂ ತೆಗೆದರು.

ಕಂದಾಯ ಇಲಾಖೆಯ ಹಿರಿಯ ಅಧಿಕಾರಿಯಾಗಿದ್ದ ಶ್ರೀ ಗಿಡ್ನವರ್ ಅವರು ಆಗ ವಿಜಾಪುರದಲ್ಲಿದ್ದರು. ಅವರದು ಅತ್ಯಂತ ಸುಸಂಸ್ಕೃತವೂ ಸಾಹಿತ್ಯಪ್ರೇಮಿಯೂ ಆದ ಕುಟುಂಬ. ಏಳೆಂಟು ಜನ ಮಕ್ಕಳು. ಎಲ್ಲರಿಗೂ ಪುಸ್ತಕ–ಪತ್ರಿಕೆಗಳ ಗೀಳು. ಸ್ವತಃ ಶ್ರೀ. ಗಿಡ್ನವರ್ ಅವರೂ ಸಾಹಿತ್ಯದ ಹುಚ್ಚು ಅಂಟಿಸಿಕೊಂಡು ಸಾವಿರಾರು ಅಮೂಲ್ಯ ಗ್ರಂಥಗಳನ್ನು ಸಂಗ್ರಹಿಸಿದ್ದರು. ಕಂದಾಯ ಇಲಾಖೆಗೆ ಸೇರಿಕೊಳ್ಳದೆ ಶಿಕ್ಷಣ ಇಲಾಖೆಗೆ ಸೇರಿಕೊಂಡಿದ್ದಲ್ಲಿ ಅವರೂ ಸಾಹಿತಿಗಳಾಗಿ ಹೆಸರು ಮಾಡುತ್ತಿದ್ದುದು ಖಂಡಿತ. ಅವರು ಬಸವೇಶ್ವರ, ಅರವಿಂದರ ಭಕ್ತರು. ಹೆಣ್ಣು ಮಕ್ಕಳೆಲ್ಲರೂ ಸಂಗೀತ ಕಲಿತಿದ್ದರು.

ಒಂದು ದಿನ ಕಣವಿಯವರು ನನ್ನನ್ನು ಗಿಡ್ನವರ್ ಅವರ ಮನೆಗೆ ಕರೆದೊಯ್ದರು. ಅಲ್ಲಿ ಲಭಿಸಿದ ಆದರಾತಿಥ್ಯದಿಂದ ನಾನು ಬೆರಗಾಗಿ ಹೋದೆ. "ಸದುವಿನಯವೇ ಸದಾಚಾರವಯ್ಯಾ" ಎಂಬ ವಚನವನ್ನು ಅವರೆಲ್ಲರೂ ಅನುದಿನದ ಆಚರಣೆಯಲ್ಲಿ ಅಳವಡಿಸಿಕೊಂಡಿದ್ದರು.

ಕುಮಾರಿ ಶಾಂತಾದೇವಿ ಮತ್ತು ಆಕೆಯ ಸಹೋದರಿ ಇಬ್ಬರೂ ಕೂಡಿ ಕಣವಿಯವರ ಕೆಲವು ಕವನಗಳನ್ನು ಹಾಡಿತೋರಿಸಿದರು. ಶಾಂತಾದೇವಿಗೆ ಆಗ ಹದಿನಾರು ಇರಬಹುದು. ಅದೇ ತಾನೆ ಮ್ಯಾಟ್ರಿಕ್ ಆಗಿದ್ದಿತಂತೆ. ಆಕೆಯನ್ನು ಕಣವಿಯವರಿಗೆ ಮದುವೆ ಮಾಡಿಕೊಡುವ ವಿಚಾರ ನಡೆದಿದ್ದುದು ಅನಂತರ ತಿಳಿಯಿತು. ಕಣವಿಯವರಿಗೆ ಶಾಂತಾದೇವಿ ಅನುರೂಪ ವಧುವೆಂದು ನನಗೂ ಮನವರಿಕೆಯಾಯಿತು.

ನಾನು ಊರಿಗೆ ಮರಳಿದೆ. ಮತ್ತೆ ಹಲವು ದಿನ ವಿಜಾಪುರದಲ್ಲಿಯೇ ಇದ್ದು, ನಿಶ್ಚಯ ಕಾರಣ ಮುಗಿಸಿಕೊಂಡೇ ಧಾರವಾಡಕ್ಕೆ ಬಂದರು ಕಣವಿ. ಎಂ.ಎ. ಮುಗಿದ ನಂತರ ವಿವಾಹವೆಂದು ಗೊತ್ತಾಯಿತು.

೦ ೦ ೦

೧೯೫೨ರಲ್ಲಿ ಕಣವಿಯವರ ವಿವಾಹ ಧಾರವಾಡದಲ್ಲಿಯೇ ನಡೆಯಿತು. ಶಾಂತಾದೇವಿ ಅವರ ಸಹಧರ್ಮಿಣಿಯಾಗಿ ಬಂದರು. ವಿಶ್ವವಿದ್ಯಾಲಯದಲ್ಲಿ ಕಣವಿಯವರಿಗೆ ಕೆಲಸವೂ ಸಿಕ್ಕಿತು. ಮಾಳಮಡ್ಡಿಯಲ್ಲಿ ಮನೆ ಮಾಡಿ ಅವರು ಹೊಸ ಸಂಸಾರ ಆರಂಭಿಸಿದರು. ಅವರ ತಂದೆಯವರೂ ತಾಯಿಯವರೂ ಬಂದು ಅಲ್ಲಿಯೇ ನೆಲಸಿದರು.

ಕಣವಿಯವರ ತಂದೆಯವರೂ ಅವರಂತೆಯೇ ತುಂಬ ಶಾಂತ ಸ್ವಭಾವದ ವ್ಯಕ್ತಿ. ಪ್ರಾಥಮಿಕ ಶಾಲಾ ಶಿಕ್ಷಕರಾಗಿದ್ದು ನಿವೃತ್ತರಾಗಿದ್ದ ಅವರು ತಮ್ಮಷ್ಟಕ್ಕೆ ತಾವಿದ್ದುಕೊಂಡು

ಸಮಾಧಾನದ ಜೀವನ ನಡೆಸುತ್ತಿದ್ದರು. ಅವರ ಪೂಜೆ, ಗ್ರಂಥವಾಚನ, ವಾಯುವಿಹಾರ, ಹಿತಮಿತವಾದ ಮಾತು ಎಲ್ಲವೂ ಅದ್ಭುತವಾಗಿತ್ತು. ತಾಯಿಯವರದೂ ಅಂಥದೇ ಸ್ವಭಾವ. ಮಗನ ಗೆಳೆಯರೆಲ್ಲರನ್ನೂ ಸ್ವಂತ ಮಕ್ಕಳಂತೆಯೇ ನೋಡಿಕೊಳ್ಳುವ ರೀತಿ. ನಾನಂತೂ ಅವರ ಮನೆಯವರಲ್ಲೊಬ್ಬನಂತೆಯೇ ಇದ್ದೆ. ತಿಂಗಳಿಗೊಮ್ಮೆಯಾದರೂ ಧಾರವಾಡಕ್ಕೆ ಬಂದು ಎರಡು ಮೂರು ದಿನ ಅವರಲ್ಲಿದ್ದು, ಮನಸೋಕ್ತವಾಗಿ ಹರಟೆ ಹೊಡೆದು, ಮನಸ್ಸು ಹಗುರು ಮಾಡಿಕೊಂಡು ಹೋಗುತ್ತಿದ್ದೆ. ಹೊಸದರಲ್ಲಿ ಶಾಂತಾ ದೇವಿಯ ಬಗೆಗೆ ಏನೋ ಸಂಕೋಚವೆನಿಸುತ್ತಿತ್ತು, ಆದರೆ, ಅವರೂ ನನ್ನನ್ನು ಅಣ್ಣನೆಂದು ಭಾವಿಸಿ ಆತ್ಮೀಯತೆಯಿಂದ ವರ್ತಿಸತೊಡಗುತ್ತಲೂ ಆ ಸಂಕೋಚ ಮಾಯವಾಯಿತು.

೦ ೦ ೦

"ಕಣವಿ ಮೊದಲಿನ ಹಾಗಿಲ್ಲ. ಮದುವೆಯಾದನಂತರ ಬದಲಾಗಿದ್ದಾರೆ" ಎಂದೆಲ್ಲ ತಕರಾರು ಕೇಳಿ ಬರುತ್ತಿತ್ತು. ಕಣವಿಯವರೊಬ್ಬರೇ ಅಲ್ಲ, ಮದುವೆಯಾದ ನಂತರ ಎಲ್ಲರೂ ಅಷ್ಟಿಷ್ಟು ಬದಲಾಗಿಯೇ ಆಗುತ್ತಾರೆ. ಮದುವೆಯ ಮೊದಲು ಸ್ನೇಹಿತರಿಗೆ ಮಾತ್ರ ಮೀಸಲಾಗಿರುತ್ತಿದ್ದ ಒಲವು, ಮದುವೆಯಾದ ನಂತರ ಮಡದಿಯ ಕಡೆಗೆ ಹೊರಳಿ ಸ್ನೇಹಿತರಿಗೆ ಕೊಂಚ ಕಿರಿಕಿರಿಯಾಗುವುದು ಸಹಜ. ಈ ರಹಸ್ಯ ವಿವಾಹಿತರಿಗೆ ಮಾತ್ರ ತಿಳಿಯುತ್ತದೆ.

ನವ ವಿವಾಹಿತರನ್ನು ಎರಡು ವರ್ಷಗಳವರೆಗಾದರೂ ಅವರಷ್ಟಕ್ಕೇ ಬಿಟ್ಟು, ಸ್ನೇಹಿತರು ಕೊಂಚ ದೂರವಿರುವುದೇ ಒಳ್ಳೆಯದು.

ಆ ವಿಚಾರ ಬರುತ್ತಲೂ ನಾನು ಕಣವಿಯವರಲ್ಲಿಗೆ ಹೋಗುವುದನ್ನೇ ತ್ಯಜಿಸಿ, ನಮ್ಮಣ್ಣನವರ ಮನೆಯಲ್ಲಾಗಲಿ, ಮುಸಳಿಯವರ ಕೋಣೆಯಲ್ಲಾಗಲಿ ಇಳಿದುಕೊಳ್ಳ ತೊಡಗಿದೆ.

ಇದು ಗೊತ್ತಾಗುತ್ತಲೂ ಕಣವಿ ನಮ್ಮಣ್ಣನವರ ಮನೆಗೇ ಬಂದು, ನನ್ನನ್ನು ಒತ್ತಾಯದಿಂದ ಕರೆದೊಯ್ಯುತ್ತಿದ್ದರು. "ಕಣವಿಯಂಥ ಸ್ನೇಹಿತರು ವಿರಳ. ಅವರ ಸ್ನೇಹ ಬಿಡಬೇಡ" ಎಂದು ನಮ್ಮಣ್ಣನವರೂ ಹೇಳುತ್ತಿದ್ದರು.

ಒಂದು ರಾತ್ರಿ ಒಂಬತ್ತು ಗಂಟೆಯ ಸುಮಾರಿಗೆ ಮಲಾಮರಡಿಯಿಂದ ಬಂದು ಕಣವಿಯವರ ಮನೆಗೆ ಹೋದೆ. ಬಾಗಿಲು ಮುಚ್ಚಿತ್ತು. ಎಷ್ಟು ತಟ್ಟಿದರೂ ತೆರೆಯಲಿಲ್ಲ. ನನಗೆ ಬೇಸರವಾಗಿ, ಅಲ್ಲಿಂದ ಹೊರಟು ಮುಸಳಿಯವರ ಕೋಣೆಗೆ ಹೋಗಿ ಅವರಲ್ಲಿದ್ದ ಉಂಡಿ-ಖಾರಾ ತಿಂದು ನೀರು ಕುಡಿದು ಮಲಗಿದೆ.

ನಾನು ಬಂದ ಸುದ್ದಿ ತಿಳಿಯುತ್ತಲೂ ಮಾರನೆಯ ದಿನ ಕಣವಿಯವರ ಅಕ್ಕನ ಮಗ ನನ್ನನ್ನು ಕರೆಯಲು ಬಂದ. ನಾನು ಹೋಗಲಿಲ್ಲ. ರಾತ್ರಿ ನನಗೆ ಬಾಗಿಲು ತೆರೆಯಲಿಲ್ಲವಲ್ಲ! ಎಂಬ ಮುನಿಸು ತುಂಬಿಕೊಂಡಿತ್ತು. ಕಣವಿಯವರನ್ನು ನೋಡದೇನೇ ಊರಿಗೆ ಹೊರಟು ಹೋದೆ.

ಅವರು ಆ ರಾತ್ರಿ ಬಾಗಿಲು ತೆರೆಯದಿದ್ದುದರ ಕಾರಣ ಅನಂತರ ತಿಳಿಯಿತು. ಆ ಭಾಗದಲ್ಲಿ ಕಳ್ಳರ ಹಾವಳಿ ವಿಪರೀತವಾಗಿದ್ದಿತಂತೆ. ರಾತ್ರಿಯಾಗುತ್ತಲೂ ಬಾಗಿಲು ತಟ್ಟಿ ಒಳಹೊಕ್ಕು ಕೈಗೆ ಸಿಕ್ಕಿದುದನ್ನು ಎತ್ತಿಕೊಂಡು ಹೋಗುತ್ತಿದ್ದರಂತೆ. ಎಂತಲೇ, ಅವರು ರಾತ್ರಿಯಾಗುತ್ತಲೂ ಬಾಗಿಲು ಭದ್ರಗೊಳಿಸಿ ಮಲಗಿಬಿಡುತ್ತಿದ್ದರಂತೆ. ಬಾಗಿಲು ತಟ್ಟಿದವನು ನಾನು—ಎಂಬುದೂ ಅವರಿಗೆ ಗೊತ್ತಾಗಿರಲಿಲ್ಲ. ಅದು ನನ್ನದೇ ತಪ್ಪು. ನನ್ನ ಹೆಸರು ಕೂಗಿ ಹೇಳಿದ್ದರೆ ಬಾಗಿಲು ತೆರೆಯುತ್ತಿದ್ದರು.

ಸ್ನೇಹದಲ್ಲಿ ಹೀಗೆ, ಹಲವಾರು ಬಾರಿ ತಪ್ಪು ಕಲ್ಪನೆಗಳ ಮೂಲಕ ವ್ಯತ್ಯಾಸ ಬರುವುದುಂಟು. ಆದರೆ, ಅದು ಬಹುಕಾಲ ಉಳಿಯುವುದಿಲ್ಲ.

೦ ೦ ೦

ಕಣವಿಯವರೂ ಅವರ ಶ್ರೀಮತಿಯವರೂ ಹಲವಾರು ಬಾರಿ ಮಲಾಮರಡಿಗೂ ಬಂದು ಹೋಗಿದ್ದಾರೆ. ಆನಂದ, ಚಂದ್ರ, ರಂಜನಾ ಇವರೆಲ್ಲರೂ ಹುಟ್ಟಿದ್ದು, ಬೆಳೆದದ್ದು, ದೊಡ್ಡವರಾದದ್ದು ನಮ್ಮ ಕಣ್ಣೆದುರಿಗೇ ನಡೆದ ಸಂಗತಿಗಳು. ಆನಂದ ಕೂಸಾಗಿದ್ದಾಗ, ನಾನು ಸಿಗರೇಟು ಸೇದುವುದನ್ನು ಅನುಕರಣೆ ಮಾಡುತ್ತಿದ್ದುದಿತ್ತು, ರಂಜನಾ ಮಗುವಾಗಿದ್ದಾಗ ಕಣವಿ ಬರೆದ,

"ರಂಜನಾ,
ಮನೆಯೆಲ್ಲ ಹರಿದಾಡಿ ಮರಿದುಂಬಿ ಗುಂಜನಾ!
ಕಣ್ಣು ನೀಲಾಂಜನಾ
ಕರಗಿಸಿದ ನಕ್ಷತ್ರ ...." ಎಂಬ ಸುಂದರ ಕವನದ ಸಾಲುಗಳು ಈಗಲೂ ನೆನಪಿನಲ್ಲಿ ಅಚ್ಚಳಿಯದೆ ಉಳಿದಿವೆ.

"ಹೇಗೆ ಹೇಗೋ ಹೆಗಲುಗೊಟ್ಟು ಬಂದಿರೆ ಗೆಳೆಯ—
ರೊಂದೆ ಕೊಂಬೆಯ ಹಲವು ಹೂಗಳಂತೆ" ಎಂಬುದು 'ಭಾವಜೀವಿ' ಯಲ್ಲಿನ ಇನ್ನೊಂದು ಅವಿಸ್ಮರಣೀಯ ಸಾಲು.

ಕಣವಿ ಈಗ ಖ್ಯಾತ ಕವಿ. 'ನವ್ಯ'ದಲ್ಲೂ ಅವರ ಪಾಲು ಮಹತ್ವದ್ದು. 'ಸಮನ್ವಯ ಕವಿ'ಯೆಂದೂ ಅವರನ್ನು ಕರೆಯಲಾಗುತ್ತದೆ. ಇವೆಲ್ಲ ತಾತ್ಕಾಲಿಕವಾದ ವಿಶೇಷಣಗಳು. ನವೋದಯವೊ, ನವ್ಯವೊ, ಸಮನ್ವಯವೊ ಎನ್ನುವುದು ಮುಖ್ಯವಲ್ಲ. ಕಾವ್ಯ ಮುಖ್ಯ. ಹಾಗೆ ನೋಡಿದಾಗ ಎದ್ದುಕಾಣುವುದು ಕಣವಿಯವರ ನಿಜವಾದ ಕಾವ್ಯ.

ಇಂದು, ಅಷ್ಟು ಎತ್ತರಕ್ಕೆ ಬೆಳೆದಿದ್ದರೂ, ಮೊದಲಿನ ಸೌಜನ್ಯ, ನಮ್ರತೆ, ಸದು ವಿನಯಗಳೇ ಇಂದಿಗೂ ಕಣವಿಯವರ ವಿಶೇಷಗಳು.

ಕಲ್ಯಾಣನಗರದಲ್ಲಿ ಅವರು ಕಟ್ಟಿಸಿರುವ ಸ್ವಂತ ಮನೆಗೂ 'ಚೆಂಬೆಳಕು' ಎಂದೇ ಹೆಸರು.

ಇದು ಧಾರವಾಡದ ಚೆಂಬೆಳಕು, ಕರ್ನಾಟಕದ 'ಚೆಂಬೆಳಕು'.

ರಾ. ಯ. ಧಾರವಾಡಕರ

# ಸೂಕ್ಷ್ಮ ಸಂವೇದನಾಶೀಲ

ಶ್ರೀ ಚೆನ್ನವೀರರು ಕೇವಲ ಕವಿಗಳಾಗಿಯೇ ಬಾಳಿದವರು. ಅವರು ಪ್ರಕಟಿಸಿದ ಹತ್ತಾರು ಕವನಸಂಕಲನಗಳು ಅವರ ಹೃದಯದ ಶ್ರೀಮಂತಿಕೆಯನ್ನು, ಅದಕ್ಕೂ ಹೆಚ್ಚು ಸೂಕ್ಷ್ಮ ಸಂವೇನನೆಯನ್ನು, ಮಾರ್ದವತೆಯನ್ನು ಅರುಹುತ್ತವೆ. ಕಠೋರ, ಕರ್ಕಶತೆ, ವಿರಸ, ರೋಷ- ಅವರ ಆಸು-ಪಾಸಿನಲ್ಲಿ ಕೂಡ ಹಾಯ್ದಿಲ್ಲ, ಅವರು ಯಾರಿಗಾದರೂ ಎಂದಾದರೂ ಬಿರುಸು ಮಾತನಾಡಿದ್ದನ್ನು ನಾನು ಕೇಳಿಲ್ಲ. ಅದೇ ನಯ ; ಅದೇ ವಿನಯ ; ಅದೇ ಮುಗುಳು ನಗೆ. ಶ್ರೀ ಕಣವಿಯವರು ನೊಂದು ಸೈರಿಸಿಯಾರಿಯೇ ಹೊರತು, ಕೆಡೆನುಡಿದು ನೋವನ್ನುಂಟು ಮಾಡಿದವರಲ್ಲ. ನಮ್ಮ ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಪ್ರಕಟನ ವಿಭಾಗ ಸ್ಥಾಪಿತವಾದ ಹೊಸದರಲ್ಲಿ ಶ್ರೀಯುತರು ಅನೇಕ ದೈಹಿಕ ಕಷ್ಟ-ನಿಷ್ಠುರಗಳನ್ನು ಸಹಿಸಿಯೂ ಆ ವಿಭಾಗವನ್ನು ಬೆಳೆಸಿದುದನ್ನು ನಾನು ಪ್ರತ್ಯಕ್ಷವಾಗಿ ಅರಿತವನಾಗಿದ್ದೇನೆ. ಕಣವಿ ಆ ವಿಭಾಗದ ನಿರ್ದೇಶಕ ರಾಗಿರದೆ ಯಾವುದಾದರೂ ಕಾಲೇಜಿನಲ್ಲಿ ಬೋಧಕರಾಗಿದ್ದರೆ ಅವರ ಪ್ರತಿಭೆ, ಚಾರಿತ್ರ್ಯ, ಸಂಪನ್ನತೆ, ನಯ-ವಿನಯಗಳ ಲಾಭ ಹೊಸ ಪೀಳಿಗೆಯ ವಿದ್ಯಾರ್ಥಿಗಳಿಗೆ ಹೆಚ್ಚಾಗಿ ಸಿಗುತ್ತಿದ್ದುವೇನೊ ಎಂದು ಹಲವಾರು ಸಲ ಅಂದುಕೊಂಡಿದ್ದೇನೆ.

ಕಣವಿಯವರ ಕಾವ್ಯ ದಿನದಿಂದ ದಿನಕ್ಕೆ ಸತ್ವಪೂರ್ಣವಾಗಿ ಬೆಳೆದು ಬಂದುದನ್ನು ಕಂಡು ಸಂತೋಷಪಟ್ಟಿದ್ದೇನೆ. ಪರಮಾತ್ಮನು ಅವರಿಗೆ ಆಯುರಾರೋಗ್ಯ ಸಂಪತ್ತನ್ನು ದಯಪಾಲಿಸಲೆಂದು ಹಾರೈಸುತ್ತೇನೆ.

ಕೆ. ಕೃಷ್ಣಮೂರ್ತಿ

# ಕಣವಿ ವ್ಯಕ್ತಿತ್ವ: ಕೆಲವು ಅನಿಸಿಕೆಗಳು

ನಾನು ಮೊದಲು ಕವಿ ಕಣವಿ ಅವರ ಕಾವ್ಯವನ್ನು ಓದಿ ಸವಿದದ್ದು ಮೈಸೂರಲ್ಲಿ : 1950 ರ ಸುಮಾರಿಗೆ. ಬಳಿಕ ಅವರನ್ನು ಪ್ರತ್ಯಕ್ಷವಾಗಿ ಕಂಡದ್ದು, ಒಂದೆರಡು ದಿನ ಒಡನಾಡಿದ್ದು ಕಾರವಾರದಲ್ಲಿ, 1952ರ ಸುಮಾರಿಗೆ. ಆಗ ತಾನೆ ಅವರು ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಹಾಗು ಪ್ರಕಟಣಶಾಖೆಯ ಮುಖ್ಯಸ್ಥರ ಹುದ್ದೆಯನ್ನು ಗಳಿಸಿ, ಕಾರವಾರದಲ್ಲಿ ಒಂದು ಪ್ರಸಾರೋಪನ್ಯಾಸಮ್ಯಾಲೆಯನ್ನು ಏರ್ಪಡಿಸಿದ್ದರು. ಅದರಲ್ಲಿ 'ಭವಭೂತಿ' ಯ ಬಗೆಗೆ ನಾನು ಉಪನ್ಯಾಸಮಾಡುವ ಪ್ರಸಂಗವೊದಗಿತ್ತು. ಆಗ ಕುಮಟಾದ ಕೆನರಾ ಕಾಲೇಜಿಂದ ನಾನು ಮೊದಲಬಾರಿಗೆ ಕಾರವಾರಕ್ಕೆ ಹೋಗಿದ್ದೆ. ಆ ಮೂರು ದಿನಗಳಲ್ಲಿ ಉಪನ್ಯಾಸಶಿಬಿರದವರೆಲ್ಲ ಒಂದು ಮನೆಯವರಂತಾಗಿಬಿಟ್ಟರು. ಕಾರಣ–ಕಣವಿ ಅವರ ಪ್ರಸನ್ನ ಹಸನ್ಮುಖ ಮತ್ತು ಅವ್ಯಾಜಮೈತ್ರಿ ;ಸರಸ ಹೃದಯ ಮತ್ತು ಮಾತಿನ ಮಾಧುರ್ಯ. ಅವರ ಬಿಚ್ಚುಮನಸ್ಸು, ತೆರೆದ ಅಂತಃಕರಣ, ಚೆಲುವಿನ ನಿಲುವು. ಮಾತಿನಿಂದ ಯಾರನ್ನಾದರೂ ಕ್ಷಣಾರ್ಧದಲ್ಲಿ ತಮ್ಮತ್ತ ಸೆಳೆದುಕೊಳ್ಳುವಂತಹ ಸ್ವಭಾವ, ಒಮ್ಮೆ ಗೆಳೆಯರಾದವರನ್ನು ಎಂದೆಂದಿಗೂ ಗೆಳೆಯರಾಗಿಯೇ ಉಳಿಸಿಕೊಳ್ಳುವ ಮನೋವೃತ್ತಿ, ಎಲ್ಲಕ್ಕಿಂತ ಹೆಚ್ಚಾಗಿ ಕನ್ನಡ ಸಾಹಿತ್ಯದ ಸಕಲ ಮುಖಗಳ ಸಾರವತ್ತಾದ ಅಧ್ಯಯನದಿಂದ ಮೂಡಿಬಂದ ಸಹಜ ರಸಸಂವೇದನೆ ; ಸಂಸ್ಕೃತವಿರಲಿ, ಇಂಗ್ಲಿಷೇ ಇರಲಿ, ಎಲ್ಲ ಸಾಹಿತ್ಯಗಳಲ್ಲಿಯೂ ಒಳ್ಳೆಯದನ್ನು ತಮ್ಮದಾಗಿಸಿಕೊಳ್ಳುವ ಉತ್ಸಾಹಪೂರ್ಣ ಲವಲವಿಕೆ, ನಾನಾ ಸಾಹಿತ್ಯ ವಿಮರ್ಶನ ಪ್ರಕಾರಗಳ ಸೂಕ್ಷ್ಮ ಪರಿಜ್ಞಾನ ಮತ್ತು ಇನ್ನೂ ಆಳವಾಗಿ ಅರಿಯಬೇಕೆಂಬ ಹುಮ್ಮಸಕ್ಕೆ ಕಳಸವಿಟ್ಟಂತಹ ವಿನಯಶೀಲತೆ ಇಷ್ಟೂ ಅವರಲ್ಲಿದ್ದುದನ್ನು ಕಂಡು ನಾನು ಮೊದಲು ಬೆರಗಾದೆ. ಇವರಿಂದ ಹೊಸಗನ್ನಡದ ಸೃಜನಶೀಲ ಸಾಹಿತ್ಯಕ್ಕೆ ಸಂಸ್ಮರಣೀಯ ವೆನಿಸುವ ಕೊಡುಗೆ ಖಂಡಿತವಾಗಿಯೂ ಸಲ್ಲಬಹುದೆಂಬ ಭಾವನೆ ಆಗ ನನ್ನ ಮನಸ್ಸಿನಲ್ಲಿ ತಲೆದೋರಿತು. ಅದು ದಿಟವಾದುದನ್ನು ಧಾರವಾಡದಲ್ಲೇ ನಾನೂ ಎರಡು ದಶಕಗಳ ಕಾಲ ಬಂದು ನೆಲಸಿ ಸಮೀಪದಿಂದಲೇ ನೋಡಿ ಸಂತಸಪಡುತ್ತಿದ್ದೇನೆ. ಸಮಕಾಲೀನ ಸಾಹಿತ್ಯ ಕ್ಷಿತಿಜದಲ್ಲಿ ಅವರಷ್ಟು ಬಹು ಜನಪ್ರಿಯತೆಯನ್ನು ಗಳಿಸಿರುವವರು ಕಡಿಮೆಯೇ ಅವರ ಕವಿತೆಗಳು ಸಹೃದಯರು ಮತ್ತೆ ಮತ್ತೆ ಓದಿ ಆಸ್ವಾದಿಸಲು ತಕ್ಕ ಅರ್ಥಪುಷ್ಟಿ ಯನ್ನು ಹೊಂದಿರುವುದಲ್ಲದೆ ಮೊದಲ ಓದಿಗೇ ಸಾಮಾನ್ಯರನ್ನು ಮೆಚ್ಚಿಸುವಂತಹ ಶಬ್ದ ಸೌಂದರ್ಯವನ್ನು ಒಳಗೊಂಡಿರುತ್ತವೆ. ಅವರ ಸಾಹಿತ್ಯವಿಮರ್ಶೆಗಳು ಅಭ್ಯಾಸಪೂರ್ಣ·

ವಿರುವಂತೆ ಉಲ್ಲಾಸನಿರ್ಭರವೂ ಆಗಿರುತ್ತವೆ. ಜೀವನದಲ್ಲಿ ಮಾರ್ಮಿಕವಾದ ರಸಸಂವೇದನೆ, ಚೇತೋಹಾರಿಯಾದ ಅಭಿವ್ಯಕ್ತಿ, ಜಾನಪದ ಕನ್ನಡದಲ್ಲಿ ಹುದುಗಿರುವ ಮಾತಿನ ಮಾಣಿಕ್ಯಗಳ ಸಮಯೋಚಿತ ಬಳಕೆ, ಭಾವಾವೇಶದ ಅತಿಗಾಗಲಿ ವೈಚಾರಿಕತೆಯ ಅತಿಗಾಗಲಿ ಬಲಿಯಾಗದೆ ಸುವರ್ಣಮಾಧ್ಯಮವನ್ನು ಮೆಚ್ಚಿ ಬಿಚ್ಚಳಿಸುವ ಅಚ್ಚಗನ್ನಡದ ಅಚ್ಚುಕಟ್ಟು ಇವು ಅವರ ಕವಿತೆಗಳಲ್ಲಿ ಹೇಗೋ ಅವರ ವಿಮರ್ಶೆಗಳಲ್ಲಿಯೂ ಎದ್ದು ಕಾಣುವ ಗುಣಗಳಾಗಿವೆ,

ಕವಿಯ ವೈಯಕ್ತಿಕ ಜೀವನದಲ್ಲಿ ಅಂತರಂಗ ಹಾಗು ಬಹಿರಂಗ ಶುದ್ಧಿ ಸಿದ್ಧಿಸಿದ್ದಾದರೆ ಅವನ ಕಾವ್ಯಸೃಷ್ಟಿಯಲ್ಲಿ ಪಡಿಮೂಡುವ ಜೀವನಚಿತ್ರ ಕೂಡ ಪ್ರಾಸಾದಿಕವೂ ಆಗುವುದೆಂಬ ಹಳೆಯ ಮಾತಿಗೆ ಕಣವಿ ಅವರ ರಚನೆಗಳನ್ನು ನೂತನ ನಿದರ್ಶಗಳೆನ್ನ ಬಹುದು. ಪ್ರತಿಭೆಯ ಉದಯ ದೈವದತ್ತವೆಂದು ಒಪ್ಪುವ ಪ್ರಾಚೀನ ಲಾಕ್ಷಣಿಕರು ಕೂಡ ಒಳ್ಳೆಯ ಕಾವ್ಯನಿರ್ಮಾಣಕ್ಕೆ ಅದರಷ್ಟೇ ಪಾಂಡಿತ್ಯ ಹಾಗು ಅಭ್ಯಾಸಗಳ ಅಗತ್ಯ ವನ್ನು ಎತ್ತಿ ತೋರಿಸಿದ್ದಾರೆ, "ಪ್ರತಿಭಾನಂ ಕಾವ್ಯವಿದ್ಯಾಪ್ರಚಯಪರಿಚಯಂ ವೃದ್ಧ ಸೇವಾನುರಾಗಂ" ಎಂಬುದು ಕಾವ್ಯಕ್ರಿಯೆಯ ಸಾರ್ವಕಾಲಿಕ ಮೂಲಸೂತ್ರ. ಇಂದಿನ ಎಷ್ಟೋ ಲೇಖಕರಲ್ಲಿ ಒಂದಿದ್ದರೆ ಇನ್ನೊಂದಿರುವುದಿಲ್ಲ. ಪ್ರತಿಭೆ ಹಾಗು ಬಹುಮುಖ ಪಾಂಡಿತ್ಯ ಹೀಗೆ ಈ ಎರಡು ಸಮ್ಮಿಳಿತವಾಗುವುದೇ ದುರ್ಲಭ. ನಾನು ನೋಡಿದಂತೆ "ವೃದ್ಧ ಸೇವಾನುರಾಗ" ಇಂದು ಎಲ್ಲೂ ಗೋಚರಿಸದಂತೆ ಕಣ್ಮರೆಯಾಗಿದೆ. ಪರಂಪರೆ ಯಲ್ಲಿರುವ ಗ್ರಾಹ್ಯ ಅಂಶಗಳ ಅಂತರ್ದರ್ಶನವಿಲ್ಲದೆ ನೂತನ ಪ್ರಯೋಗ ಕೂಡ ಯಶಸ್ವಿಯಾಗಲಾರದೆಂಬ ಸೌಜನ್ಯ ಹಾಗು ಪರಿಜ್ಞಾನ ಕೂಡ ಕಣವಿ ಅವರ ಕಾವ್ಯ ಸಿದ್ಧಿಯ ಒಂದು ಅಂಗವೆಂದು ನನ್ನ ಅನಿಸಿಕೆ. ಬೋಧಕನಾಗಬಯಸುವವನು ಸಾಧಕನೂ ಆಗದೆ ಗತ್ಯಂತರವಿಲ್ಲ. ಪ್ರವಾದಿಯಾಗುವ ಮುನ್ನ ವಾದಿ, ಅನುವಾದಿ. ಸಂವಾದಿಗಳ ಸ್ತರವನ್ನೂ ಅವನು ಸ್ಪರ್ಶಿಸಬೇಕಾಗುತ್ತದೆ.

ಒಂದು ಕಾಲಕ್ಕೆ ಧರ್ಮವೇ ಉತ್ತಮ ಜೀವನದ ಸಾರಸರ್ವಸ್ವವೆನಿಸಿತ್ತು. ಸಾಹಿತ್ಯ ಅದರ ಪಡಿನೆಳಲಾಗಿ ಅಡಿಯಿಡುತ್ತಿತ್ತು. ಇಂದು ಧರ್ಮದ ಹಿರಿಮೆ ಹಿಂದಾಗಿ ಮಾನವೀಯತೆಯ ಮೌಲ್ಯಗಳು ಮುಂದಾಗುತ್ತಿವೆ. ಕವಿತೆಯ ಸಂದೇಶ ಕೇವಲ ತಾತ್ಕಾಲಿಕವಾದರೆ ಸಾಕೆಂಬ ಮನೋಭಾವವೂ ಅಲ್ಲಲ್ಲಿ ಕಾಣಬರುತ್ತಿದೆ. ಆದರೆ ಕವಿತೆಯ ಜೀವನಾಡಿ ಅದರ ಸಾರ್ವಕಾಲಿಕ ಜೀವನದರ್ಶನವೇ ಎಂಬ ಶ್ರದ್ಧೆ ಪ್ರಬುದ್ಧ ಮಾನವತೆಯ ಒಂದು ಲಕ್ಷಣ. ಅದರ ಅಭಿವ್ಯಕ್ತಿಗೆ ತಕ್ಕ ಶಬ್ದಶಿಲ್ಪ ಒಬ್ಬ ಕವಿಗೆ ಶಕ್ಯವಾಗುವುದು ಅವನ ವಾಙ್ಮಯ ತಪಸ್ಸಿನಿಂದಲೇ. ಪರಿವರ್ತನಶೀಲ ಯುಗದ ಬಹು ಸಂಕೀರ್ಣ ಜೀವನದ ಪ್ರತಿನಿಧಿಯಾಗಬೇಕಾದ ಕವಿಯ ಕಾವ್ಯಕಲೆ ಕೂಡ ಅಪೂರ್ವ ಹಾಗು ಅನ್ಯಾದೃಶವಾದ ಚಮತ್ಕಾರಪ್ರಕಾರಗಳನ್ನು ಅನ್ವೇಷಿಸಿಕೊಳ್ಳಬೇಕಾಗುತ್ತದೆ. 'ಶ್ವಾಸ ವಿರುವವರೆಗೆ ಪ್ರಾಸ ತಪ್ಪಿಸುವುದಿಲ್ಲ'ವೆಂದು ಒಬ್ಬ ಸಂಸ್ಕೃತ ಕವಿ ಹೇಳಿಕೊಂಡಿದ್ದಾನೆ.

ಆದರೆ ಅಂತಹ ಪ್ರಾಸಕ್ಕಾಗಿ ಬರೆದ ಪ್ರಾಸಗಳು ಕೃತಕತೆಯ ಕುರುಹುಗಳಾಗಿ ತ್ರಾಸ ದಾಯಕವಾಗುವುದೇ ಹೆಚ್ಚು. ರಮ್ಯದಂತೆ ಜುಗುಪ್ಸಿತ ವಿಷಯಗಳೂ ಜೀವನದ ಅಂಗ ವಾಗಿರುವಾಗ, ರಸದೃಷ್ಟಿ ಎಲ್ಲಕ್ಕೂ ಸಮವಾದ ಪ್ರಾತಿನಿಧ್ಯ ಕಲ್ಪಿಸಲೇಬೇಕಾಗುತ್ತದೆ. ರಮ್ಯವರ್ಣನೆಗೆ ಉಚಿತವೆನಿಸುವ ಕಾವ್ಯತಂತ್ರ ಜುಗುಪ್ಸಿತವರ್ಣನೆಗೆ ನಿರುಪಯುಕ್ತವಾಗ ಬಹುದು. ಅನಂತಮುಖವಾದ ನಿಸರ್ಗ, ಮಾನವಜೀವನದ ಅನಂತ ಪ್ರಕಾರಗಳು—ಇವೇ ಎಂದಿನಿಂದಲೂ ಕಾವ್ಯವಸ್ತುಗಳು. ಆದರೆ ಕಾವ್ಯಕಲೆ ಅಥವಾ ಕಾವ್ಯತಂತ್ರ ಮಾತ್ರ ಹೊಸ ಹೊಸ ಹಾದಿಗಳನ್ನು ಹುಡುಕುತ್ತಲೇ ಇರುತ್ತದೆ. ಈ ಅನ್ವೇಷಣೆಯ ಸಾಹಸದಲ್ಲಿ ಕಣವಿ ಅವರು ತಮ್ಮದೇ ದಟ್ಟಡಿಗಳನ್ನಿಟ್ಟು ಅಭಿನಂದನೀಯರಾಗಿದ್ದಾರೆ. ಹಿಂದಿನ ಧ್ವನಿ ವಾದಿಗಳ ಸಾಹಸಕ್ಕೆ ಸರಿದೊರೆಯಾದ ನವ್ಯ ಧ್ವನಿವಾದ ಇವರದು.

ಕೇವಲ ಆತ್ಮಾಭಿಮಾನದ ಹಮ್ಮು ಬಿಮ್ಮುಗಳಿಗೆ ಪರವಶರಾಗಿ, ತಮ್ಮನೇ ಹೊಗಳುವ ವಿಮರ್ಶಕರ ಒಂದು ಪಂಗಡವನ್ನು ಕಟ್ಟಿ ಬೆಳೆಸತೊಡಗಿ, ಮಿಕ್ಕೆಲ್ಲ ಸಮ ಕಾಲೀನ ಸಾಹಿತಿಗಳನ್ನೂ ಕುಂದಿಡುವಂತಹ ಮನೋವೃತ್ತಿ ಒಂದು ಸಾಹಿತ್ಯದ ಆರೋಗ್ಯಕ್ಕೆ ಹಾನಿಕಾರಕ. ಕವಿಗಳ ವಿಮರ್ಶೆಗೂ ಮೊದಲು ವಿಮರ್ಶೆಯ ಸೂತ್ರಗಳ ವಿಮರ್ಶೆ ಅಗತ್ಯವಾಗುತ್ತದೆ. ಈ ಕಾರ್ಯವನ್ನೂ ಕಣವಿ ಅವರು ಕೇಂದ್ರ ಹಾಗು ರಾಜ್ಯ ಸಾಹಿತ್ಯ ಅಕಾಡಮಿಗಳ ಸದಸ್ಯರಾಗಿ ನಿಷ್ಪಕ್ಷಪಾತ ವಸ್ತುನಿಷ್ಠ ದೃಷ್ಟಿಯಿಂದ ನಿರ್ವಹಿ ಸುತ್ತಿರುವುದು ನನ್ನ ಗಮನವನ್ನು ಸೆಳೆದಿದೆ, ಅವರ ಬಗ್ಗೆ ನನ್ನ ಗೌರವವನ್ನು ಹೆಚ್ಚಿಸಿದೆ. ಇಷ್ಟೇ ಅಲ್ಲ ; ಅವರು ಉತ್ತಮ ಭಾಷಣಕಾರರೆಂದು ಖ್ಯಾತಿ ಗಳಿಸಿದ್ದಾರೆ ; ಒಳ್ಳೆಯ ಅಧಿಕಾರಿಗಳೆಂದು ಹೆಸರು ಪಡೆದಿದ್ದಾರೆ. ಬಿಡುವಿಲ್ಲದೆ ಕಚೇರಿಯ ಬಹುಮುಖವಾದ ಹೊಣೆಗಾರಿಕೆಯ ಕೆಲಸವನ್ನು ಸುಸೂತ್ರವಾಗಿ ನಿರ್ವಹಿಸುತ್ತಿರುವಾಗಲೇ ತಮ್ಮ ಅಮೋಘ ಸಾಹಿತ್ಯಸೇವೆಯನ್ನು ವ್ರತನಿಷ್ಠೆಯಿಂದ ಮುಂದುವರೆಸುತ್ತಿರುವ ಕಣವಿ ಅವರ ಸಾಹಸ ಯಾರನ್ನಾದರೂ ತಲೆದೂಗಿಸುವಂತಿದೆ. ಸದಭಿರುಚಿ, ಸಮನ್ವಯ ಪ್ರವೃತ್ತಿ, ಗುಣ ಗ್ರಹಣಶಕ್ತಿ, ಕ್ರಿಯಾಶೀಲ ಪ್ರತಿಭೆ ಇವುಗಳ ಕೂಡಲ ಸಂಗಮವಾದ ಕಣವಿ ಅವರಿಂದ ಕನ್ನಡ ಸರಸ್ವತಿಯ ಶ್ರೀಮಂತಿಕೆ ಮತ್ತೂ ಸಮೃದ್ಧವಾಗಲೆಂದು ಹಾರೈಸುತ್ತೇನೆ. ಕರ್ನಾಟಕ ವಿಶ್ವವಿದ್ಯಾಲಯದ ಪದವೀದಾನ ಸಮಾರಂಭದ ನಾಂದಿಯ ಗೀತೆ ಅವರ "ವಿಶ್ವವಿನೂತನ ವಿದ್ಯಾಚೇತನ..." ಅದರ ಪರಿಣತಫಲಗಳು ನಾಡಿಗೆಲ್ಲ ಅವರಿಂದ ಲಭಿಸಲಿ. ಈ ಕಾರ್ಯದಲ್ಲಿಅನುಕೂಲ ದಾಂಪತ್ಯದ ಸೌಭಾಗ್ಯವನ್ನು ಅವರಿಗೆ ಒದಗಿಸಿರುವ ಶ್ರೀಮತಿ ಶಾಂತಾದೇವಿ ಅವರು ಎಂದಿನಂತೆ ಸಹಕರಿಸಿ ಪ್ರೋತ್ಸಾಹಿಸಲಿ ! "ಭದ್ರಂ ಶುಭಂ ಮಂಗಳಂ".

ಪಾಟೀಲ ಪುಟ್ಟಪ್ಪ

# ಬದುಕಿಗೆ ಬೆಲೆ ತಂದುಕೊಟ್ಟ ಕವಿ

ಕವಿ ಚೆನ್ನವೀರ ಕಣವಿಯವರು "ಹೋಳಿಯ ಗಾಂಭೀರ್ಯವನ್ನು ಹೊತ್ತ" ತಮ್ಮ ಕವಿತೆಯಿಂದ, ಕೊಳ್ಳದವರಿಗೆ ಬೆಟ್ಟದವರಿಗೆ ಬಯಲಿನವರಿಗೆ ಹಾಗೂ ಸಮುದ್ರ ತೀರದ ವರಿಗೆ, ಎಲ್ಲರಿಗೂ ಗೊತ್ತು. ಅವರಿಗೆ, ಈಗ ಐವತ್ತು ಆಗಿರಬಹುದು : ನಾಳೆ ಅರವತ್ತು ಆಗಬಹುದು. ವಯಸ್ಸು ಬೆಳೆದಂತೆ ಈ ದಶಕಗಳೂ ಉರುಳಿ ಹೋಗುತ್ತವೆ. ಆದರೆ ಅವರ ಕವಿತೆ ಮಾತ್ರ ನವನವೋನ್ಮೇಷಶಾಲಿನಿ. ಚಿರಂತರ ಯೌವನ ಪಡೆದ ನಿತ್ಯ ಷೋಡಶಿ. ಓದಿದಂತೆಲ್ಲ ಅದರಲ್ಲಿ ಮೆರಗು ಕಾಣಿಸುತ್ತದೆ. ತೇಯ್ದಂತೆ ಗಂಧದ ಕೊರಡು ಗಮ ಗಮ ಎನ್ನುತ್ತದೆ. ಅನೇಕರ ಕವಿತೆಯಲ್ಲಿಲ್ಲದ ಯಾವುದೋ ಒಂದು ಅನಿರ್ವಚ ನೀಯ ಗಮ್ಮತ್ತು ಕಣವಿಯವರ ಕವಿತೆಯಲ್ಲಿದೆ.

ಚೆನ್ನವೀರ ಕಣವಿಯವರೇ ಕವಿತೆಯ ಕಡೆಗೆ ಮುಖಮಾಡಿ ಹೋದರೋ, ಇಲ್ಲವೆ ಕವಿತೆಯೇ ಅವರ ಕಡೆಗೆ ಮುಖಮಾಡಿ ಬಂದಿತೋ, ವಿಂಗಡಿಸಿ ಹೇಳುವುದು ಕಷ್ಟ. ಸಕ್ಕರೆ ಯಲ್ಲಿ ಹಾಲು ಬೆರೆಯಲಿ, ಹಾಲಿನಲ್ಲಿ ಸಕ್ಕರೆ ಬೆರೆಯಲಿ ಎರಡೂ ಒಂದೇ. ಅಲುಗುವ ಎಲೆ, ಉಲಿಯುವ ಹಕ್ಕಿ, ಚಲಿಸುವ ಮೋಡ- ಎಲ್ಲವೂ ಅವರ ಕವಿ ಹೃದಯವನ್ನು ಅರಳಿಸಿ, ಅವರ ಕಾವ್ಯಕ್ಕೆ ಕಣ್ಣನ್ನೂ, ಅವರ ಅಭಿವ್ಯಕ್ತಿಗೆ ಧ್ವನಿಯನ್ನೂ ಒದಗಿಸಿ ಕೊಟ್ಟಿವೆ. ಕವೀಂದ್ರ, ರವೀಂದ್ರರಿಗೆ ಬಂದಂತೆ, ಕವಿತೆ ಅವರಿಗೆ, ನಿಸರ್ಗ ಸುಭಗವಾಗಿ ಬಂದಿದೆ. ಧ್ವನಿ ಎತ್ತುತ್ತಲೇ ಸಂಗೀತದಲ್ಲಿ ಪ್ರಭುತ್ವ ತೋರಿಸುವ ಸಂಗೀತ ರತ್ನರಂತೆ, ಕಣವಿಯವರು, ತಮ್ಮ ಆರಂಭದ ಕವನಗಳಲ್ಲಿಯೇ ಪ್ರಬುದ್ಧತೆಯನ್ನು ತೋರಿಸಿ ಕೊಟ್ಟಿದ್ದಾರೆ. ಅವರ ಪ್ರಥಮ ಕವನ ಸಂಕಲನವಾದ 'ಕಾವ್ಯಾಕ್ಷಿ'ಗೆ ಮುನ್ನುಡಿಯ ಕಿರೀಟವಿಟ್ಟು ಕಳಿಸಿದ ಬೇಂದ್ರೆಯವರು, ಕಣವಿಯವರ ಕವನದಲ್ಲಿ 'ಜೀವಂತ ಗತಿ' ಇರುವುದನ್ನು ಗುರುತಿಸಿ ಕೊಂಡಿದ್ದಾರೆ. ಇಂಥ ರಸಾನುಭೂತಿಯ ಭರವಸೆಯನ್ನು ತಮ್ಮ ಪ್ರಥಮ ಪ್ರಯತ್ನ ದಲ್ಲಿಯೇ ತೋರಿಸಿದವರು ಕನ್ನಡದಲ್ಲಿಯೇ ಏಕೆ ಬೇರೆ ಭಾಷೆಗಳಲ್ಲಿಯೂ ಹೆಚ್ಚು ಜನರಿಲ್ಲ.

ಕವಿ ಕುಮಾರವ್ಯಾಸನ ಸೀಮೆಗೆ ಸೇರಿದ ಕಣವಿಯವರಲ್ಲಿ 'ಹಲಗೆ ಬಳಪವ ಹಿಡಿಯ ದೊಂದು ಅಗ್ಗಳಿಕೆ' ಎನ್ನುವ ರೀತಿಯಲ್ಲಿ ಕವಿತೆ ಬಂದು ಕಾಣಿಸಿಕೊಂಡಿದೆ. ಜೋಗುಳವನ್ನು ಆಡಿಸಿ, ಜನಪದ ಗೀತೆಗಳನ್ನು ಕೇಳಿ, ಜನರ ಹೊಕ್ಕು ಬಳಕೆಯಿಂದ, ಅವರ ಕಾವ್ಯ ಶಕ್ತಿ ಹದಗೊಂಡಿದೆ. ಅವರ ಕಲ್ಪನೆಗೆ ಬೇಕಾದ ಮಾತುಗಳು ಅವರನ್ನೇ ಹುಡುಕಿಕೊಂಡು

ಬರುತ್ತಿರುವಂತೆ ತೋರುತ್ತದೆ. ಅವರ ಅಭಿವ್ಯಕ್ತಿಗೆ ಶಬ್ದಗಳ ಕೊರತೆ ಎಂದೂ ಆಗಿಲ್ಲ. ಜನರ ಬಾಯಿಂದ ಬಿದ್ದ ಮಾತುಗಳನ್ನು ಅವರು ಮಿಸುನಿಯಂತೆ ಉಪಯೋಗಿಸಿದ್ದಾರೆ. ಕಾಡು ಕಲ್ಲು ಶಿಲ್ಪಿಯ ಕೈಯಲ್ಲಿ ಸುಂದರ ವಿಗ್ರಹವಾಗುವಂತೆ, ಸಾಮಾನ್ಯರ ಬಾಯಿಂದ ಬಂದ ಮಾತುಗಳನ್ನು, ಕಣವಿಯವರು ತಮ್ಮವನ್ನಾಗಿ ಮಾಡಿಕೊಂಡು, ಅಸಾಮಾನ್ಯ ರೀತಿಯಿಂದ ಉಪಯೋಗಿಸಿದ್ದಾರೆ. ಅವರ ಒಳದನಿ, 'ಜಗದ ಮೊರೆಕರೆಗಳಿಗೆ, ಚೆಲುವು ಚಿನ್ನಾಟಕ್ಕೆ ದನಿಗೂಡಿ' ಕನಸಿನಲ್ಲಿಯೂ ಕೂಡ ಹಾಡುತ್ತಿದೆ.

ಈ ಚೆನ್ನವೀರರ ನುಡಿ ಚೆನ್ನ, ನಡೆ ಚೆನ್ನ. ಅವರ ಕೃತಿಯಲ್ಲಿ ವಿಕೃತಿ ಯಾವುದೂ ಇಲ್ಲ. ಪ್ರಕೃತಿಯೇ ತುಂಬಿಕೊಂಡಿದೆ. ನಿಸರ್ಗದ ಅನೇಕ ಮುಖಗಳನ್ನು, ಅವರ ಅನೇಕ ಆಕರ್ಷಣೆಗಳೊಂದಿಗೆ ಬೇಂದ್ರೆ ಕುವೆಂಪು ತೋರಿಸಿಕೊಟ್ಟಿದ್ದಾರೆ. ಆದರೆ, ತಾವು ಕಂಡದ್ದನ್ನು ಬೇರೆ ಯಾರೂ ಕಂಡಿಲ್ಲ ಎನ್ನುವಂತೆ ಕಣವಿಯವರು ನಿಸರ್ಗವನ್ನು ಅವರ್ಣನೀಯ ಎನ್ನುವಂತೆ ಅಪೂರ್ವ ರೀತಿಯಲ್ಲಿ ಚಿತ್ರಿಸಿದ್ದಾರೆ. ಹೃದಯವನ್ನು ನಲಿಸುವಂಥ ಚಿತ್ರಗಳನ್ನು ರೇಖಿಸಿದ್ದಾರೆ. ಅವುಗಳನ್ನು ಯಾವನೇ ಓದಲಿ, ಆಹ ಎನ್ನುವ ಉದ್ಗಾರ ಅವನ ಬಾಯಿಂದ ಹೊರಡುತ್ತದೆ. ಬರೆಯಲು ಬಂದಿದ್ದರೆ, ತಾನು ಕವಿಯಂತೆಯೇ ಬರೆಯುತ್ತಿದ್ದೆನೆನ್ನುವ ಭಾವನೆ, ಆ ಕವಿತೆಯನ್ನು ಓದಿದ ವ್ಯಕ್ತಿಗಳಿಗೆ ಬರಬೇಕು. ಕವಿಯ ಸಾರ್ಥಕತೆ ಅಂಥ ಭಾವನೆ ಮೂಡಿಸುವುದರಲ್ಲಿಯೇ ಅದೆ. ಕವಿ ಕಣವಿಯವರು ಇದರಲ್ಲಿ ಅನನ್ಯಸಾಧಾರಣ ಯಶಸ್ಸನ್ನು ಸಂಪಾದಿಸಿದ್ದಾರೆ.

ಧಾರವಾಡಕ್ಕೆ ಬಂದವರು ಅನೇಕ ಪ್ರಭಾವಗಳಿಗೆ ಒಳಗಾಗುತ್ತಾರೆ. ಕಣವಿಯವರು, ಕ್ಷಣಕ್ಷಣಕ್ಕೆ ಬದಲಾಗುತ್ತಿರುವ ನಿಸರ್ಗದ ದೃಶ್ಯಾವಳಿಗಳನ್ನು ಜನಜೀವನದ ಪ್ರಜ್ಞೆಗಳನ್ನು, ಅನಿಸಿಕೆಗಳನ್ನು, ಹಸಿವುದಾಹಗಳನ್ನು, ಕಷ್ಟ ನಿಷ್ಠುರಗಳನ್ನು, ಪ್ರೇಮವಾತ್ಸಲ್ಯಗಳನ್ನು ತಮ್ಮಲ್ಲಿ ತುಂಬಿಕೊಂಡು, ಅವುಗಳಿಂದ ಪ್ರಭಾವಿತರಾದರು. ಸತ್ಯಂ ಶಿವಂ ಸುಂದರಂ ಎನ್ನುವುದು ಅವರ ಮೇಲೆ ಮಂತ್ರದಂತೆ ಕೆಲಸ ಮಾಡಿ, ಅವರ ಜೀವನಕ್ಕೆ ಶ್ರೀಕಾರ ಬರೆದಿದೆ. ತಮ್ಮ 'ಬಿನ್ನಹ'ದಲ್ಲಿ ಬರೆದ ಮಾತು ಅವರ ಜೀವನದ ಪಲ್ಲವಿಯೇ ಆಗಿದೆ : 'ಅಲ್ಲ ಸಲ್ಲದ ವಿಷಮ ವಿಪರೀತ ಭಾವನೆಯ ವಿಷಗಾಳಿ ಎನ್ನ ಬಳಿ ಸುಳಿಯದಿರಲಿ, ಸೊಲ್ಲು ಸೊಲ್ಲಿಗೆ ಪರರನಣಕಿಸುವ ಕೆಣಕಿಸುವ ಅ-ಶಿವ ನುಡಿ ಎನ್ನ ಕಿವಿ ಸೇರದಿರಲಿ.'

ಚೆನ್ನವೀರ ಕಣವಿಯವರು ಸಕ್ಕರೆಯಂಥ ಮನುಷ್ಯ ಆಗಿರುವುದೊಂದೇನೂ ದೊಡ್ಡದಲ್ಲ. ಅವರು ಹೇಳಿ ಕೇಳಿ, ಸಕ್ರೆಪ್ಪನವರ ಪುತ್ರರು ಅನುಭವಾಮೃತ ಕುಡಿದು ಬೆಳೆದವರು. ಮೃತ್ಯುಂಜಯ ಶ್ರೀಗಳ ಕೃಪೆಯಿಂದ ಬೆಳೆದು ಅವರಿಗೆ ನೈವೇದ್ಯ ಅರ್ಪಿಸಿದವರು. ಅವರ ಮನೆ ಸಂಸ್ಕೃತಿಯ ನಿವಾಸ. ಅವರ ಕಳ್ಳುಬಳ್ಳಿ ಮಧುರ ಜೇನುಗೂಡು. ಇಲ್ಲದುದನ್ನು ಅರಿಯದು. ಸದಾಕಾಲವೂ ಉನ್ನತ ಆಲೋಚನೆಯಲ್ಲಿ, ಕಾವ್ಯದ ಆಲಾಪನೆಯಲ್ಲಿ, ಸತ್‌ಸಹವಾಸದಲ್ಲಿ, ಉದ್ಗ್ರಂಥಗಳ ಪಠನದಲ್ಲಿ ನಿಮಗ್ನರಾಗಿರುವ ಅವರು ಶಾಶ್ವತ ಬೆಲೆಗಳ ಚಿಂತನೆಯಲ್ಲಿಯೇ ತಲ್ಲೀನರಾಗಿರುತ್ತಾರೆ.

ಕಣವಿಯವರ ಕವಿತಾ ಸಂಗ್ರಹಗಳ ಶೀರ್ಷಿಕೆಗಳನ್ನು ನೋಡಿದರೆ, ಅವರು ಆಸಕ್ತರಾಗಿರುವ ವಿಷಯಗಳೇನು ಎನ್ನುವುದು ಗೊತ್ತಾಗುತ್ತದೆ : ಕಾವ್ಯಾಕ್ಷಿ, ಭಾವಜೀವಿ, ನೆಲ ಮುಗಿಲು, ಆಕಾಶಬುಟ್ಟಿ, ಮಧುಚಂದ್ರ, ದೀಪ ಧಾರಿ, ಮಣ್ಣಿನ ಮೆರವಣಿಗೆ, ಎರಡು ದಡ, ನಗರದಲ್ಲಿ ನೆರಳು. ಕಣವಿಯವರು ನಿಃಸಂದೇಹವಾಗಿಯೂ ಶ್ರೇಷ್ಠ ನಿಸರ್ಗ ಕವಿ. ಅವರ ವಿಪುಲ ವೈವಿಧ್ಯಮಯ ನಿಸರ್ಗದ ವರ್ಣನೆ ನಮಗೆ ಕೀಟ್ಸ್ ವರ್ಡ್ಸ್‌ವರ್ತರ ನೆನಪನ್ನು ತಂದುಕೊಡುತ್ತದೆ. ಕಣವಿಯವರು ನಿಸರ್ಗವನ್ನು ದಪ್ಪಕುಂಚದಿಂದ, ಸೂಕ್ಷ್ಮ ಕುಂಚದಿಂದ, ಹೇಗೆ ಬೇಕೋ ಹಾಗೆ ಸೃಷ್ಟಿಸಿ, ತಮ್ಮ ಮೋಹಕ ಮಾತುಗಳಲ್ಲಿ ಸೆರೆಹಿಡಿದಿದ್ದಾರೆ. ಅವರು ಕೊಡುವ ಹೋಲಿಕೆ, ನೀಡುವ ಸಾಮತಿ, ಸೃಷ್ಟಿಸುವ ಪ್ರತಿಮೆ, ಯಾರಂತೆ ಎಂದು ಕೇಳಿದರೆ ನಾವು ನಿರುತ್ತರರಾಗುತ್ತೇವೆ. ಯಾಕೆಂದರೆ, ಅವರು ಆಯ್ದುಕೊಂಡಿರುವ ಈ ಕ್ಷೇತ್ರದಲ್ಲಿ ಅವರಿಗೆ ಸರಿದೊರೆ ಎನಿಸುವವರೇ ಇಲ್ಲ.

ಮಳೆ, ಬಿಸಿಲು, ನೆರಳು, ಮೋಡ, ಹೂವು, ಹಳ್ಳ, ಚಂದ್ರೋದಯ- ಯಾವುದೇ ಇದ್ದರೂ ಪ್ರತಿಯೊಂದರ ಮೇಲೆಯೂ ಕಣವಿಯವರ ಮುದ್ರೆ ಬಿದ್ದುದನ್ನು ನಾವು ಕಾಣುತ್ತೇವೆ. ಚಂದ್ರೋದಯವು ಅವರಿಗೆ 'ಹೊಂಗನಸು ಹೂತಿರುವ ಭರಣಿಯಂತೆ' ಕಾಣಿಸುತ್ತದೆ. ಚಂದ್ರೋದಯದ ಪ್ರಭಾವಕ್ಕೆ 'ಬನ ಬಯಲು ಗಿರಿಸಾನು ಊರು ದೂರದ ಕಾನು, ಮಧು ಕುಡಿದು ಮತ್ತೇರಿ ಮಲಗಿರುವವು' ಎಂದು ಕವಿ ಕಣವಿ ಹೇಳುತ್ತಾರೆ.

ಯಾರೂ ಒಮ್ಮೆ ಕೂಡ ಓದಲಿಲ್ಲದಂಥ ಕವಿತೆಯನ್ನು ಎಷ್ಟೋ ಜನರು ಬರೆದಿದ್ದಾರೆ, ಬರೆಯುತ್ತಿದ್ದಾರೆ. ಆದರೆ, ಕಣವಿಯವರ ಕವಿತೆ ಹಾಗಲ್ಲ. ಓದಿದಂತೆಲ್ಲ ಮತ್ತೆ ಮತ್ತೆ ಓದಬೇಕೆನ್ನುವ ಆಸೆಯನ್ನು ಅದು ಮೂಡಿಸುತ್ತದೆ. ಅವರ ಕವಿತೆಯಲ್ಲಿರುವ ಪದ ಲಾಲಿತ್ಯ, ಧ್ವನಿ, ಅರ್ಥ ವಿನ್ಯಾಸ, ಇವು ಕಣವಿಯವರ ಕಾವ್ಯ ಸೃಷ್ಟಿಗೆ ಅಮೃತತ್ವವನ್ನು ತಂದುಕೊಟ್ಟಿವೆ. ಕಾವ್ಯವು ನವ್ಯವೋ ಭವ್ಯವೊ ದಿವ್ಯವೋ ಎನ್ನುವುದು ಅದರಲ್ಲಿರುವ ಓದಿಸಿಕೊಳ್ಳುವಂಥ ಶಾಶ್ವತ ಗುಣಧರ್ಮವನ್ನೇ ಅವಲಂಬಿಸಿದೆ. ಯಾರಿಗೂ ಕಾಣದೇ ಇರುವುದನ್ನು ಕವಿ ಕಾಣುತ್ತಾನೆ, ಮತ್ತು ಅದನ್ನು ಅವನು ಯಾರೂ ಹೇಳದೇ ಇರುವ ರೀತಿಯಲ್ಲಿ ಹೇಳುತ್ತಾನೆ. ಈ ಅನ್ಯಾದೃಶ ಗುಣ ಕಣವಿಯವರ ಅನೇಕ ಕವಿತೆಗಳಲ್ಲಿದೆ.

ಕಣವಿಯವರು ಜನರ ಮಧ್ಯದಿಂದ ಬಂದಿರುವ, ಜನರ ಕವಿಯಾದುದರಿಂದ ಅವರು ಜನರ ಧ್ವನಿಗೆ ತಮ್ಮ ಕವಿತೆಯಲ್ಲಿ ಬಹು ದೊಡ್ಡ ಅಭಿವ್ಯಕ್ತಿಯನ್ನು ಒದಗಿಸಿಕೊಟ್ಟಿದ್ದಾರೆ. ಜನರನ್ನು ತುಡಿಯುತ್ತಿರುವ ಹಾಗೂ ಜನರನ್ನು ತುಳಿಯುತ್ತಿರುವ ವ್ಯಗ್ರಗಳನ್ನೂ, ಶೋಷಣೆಯನ್ನೂ, ಕಂಡು, ಸೌಮ್ಯ ಚೇತನರಾದ ಅವರು ಸಿಡಿದೆದ್ದಿದ್ದಾರೆ: "ಅನ್ನದ ನ್ಯಾಯದಲಿ, ಕರುಳು ಕುದಿದೇಳುತಿದೆ. ಸದೆಬಡೆಯಲುದ್ವೇಗ ಕೆರಳುತಿಹುದು ; ವಿಧಿ ನಿಷೇಧದ ಕಟ್ಟು ಕಟ್ಟಳೆಯ ಹುಟ್ಟಳಿಸಿ, ಹೊಸ ಸಮಾಜವ ಕಟ್ಟಿ ತೋರಬಹುದು."

ಜೀವಿ ಜೀವಿಯ ನುಂಗಿ ಬದುಕುತ್ತಿರುವ ಜೀವನದ ಮೇಲೆ, ಅವರು ಮಿಂಚು ಝಳಪಿಸುವಂತೆ ಬೆಳಕು ಚೆಲ್ಲಿದ್ದಾರೆ.

ಆಧುನಿಕ ಕನ್ನಡದ ಆರೆಂಟು ಜನ ಪ್ರಾತಿನಿಧಿಕ ಕವಿಗಳು ಯಾರು ಎನ್ನುವ ಪ್ರಶ್ನೆ ಬಂದಾಗ, ಕವಿ ಕಣವಿಯವರ ಹೆಸರು ಬೇಂದ್ರೆ, ಕುವೆಂಪು ಅವರ ಸಾಲಿನಲ್ಲಿ ನಿಂತಿದೆ ಎನ್ನುವುದು ನಿರ್ವಿವಾದ. ಕಣವಿಯವರ ಕವಿತೆಯಲ್ಲಿ ಬದುಕುವ ಹಾಗೂ ಬದುಕಿರುವ ಸಾಮರ್ಥ್ಯ ಇರುವುದರಿಂದ ಅದಕ್ಕೆ ಚಿರಂತನತೆ ಇದೆ. ಈ ಕವಿ ನಮ್ಮ ಮಧ್ಯದಲ್ಲಿ ಬದುಕಿರುವನೆಂದು ಬೆಳೆದಿರುವನೆಂದು ನಮಗೆ ಧನ್ಯತೆ ಇದೆ. ಸಮಕಾಲೀನ ಜೀವನಕ್ಕೆ ಸಾರ್ಥಕತೆ ಇದೆ. ಬದುಕಿಗೆ ಬೆಲೆ ತಂದು ಕೊಟ್ಟಿರುವ ಈ ಕವಿ ನೂರು ಕಾಲ ಬಾಳಬೇಕು. ತನ್ನ ಶ್ರೀಮಂತ ಕಾಣಿಕೆಗಳಿಂದ ಕನ್ನಡ ತಾಯಿಯ ಸಿರಿ ಉಡಿಯನ್ನು ತುಂಬಬೇಕು.

ಆರ್. ಸಿ. ಹಿರೇಮಠ

# ಅರಿತ ಕವಿ–ನುರಿತ ಯೋಜಕ

ಎಳನಗೆಯ ಬೆಳುದಿಂಗಳವನ್ನು ಪಸರಿಸುವ ಹಾಲುಗಲ್ಲದ ಹಸುಳೆ. ಆರ್. ಎಲ್. ಎಸ್. ಹೈಸ್ಕೂಲಿನಲ್ಲಿ ಅಭ್ಯಾಸ ಮಾಡುತ್ತಿದ್ದ. ಮುತ್ತಿನಂತಹ ಅಕ್ಷರಗಳಲ್ಲಿ ಹೆಣೆದ ಹೂಮಾಲೆಯಂತಹ ಕವನವೊಂದು ಕೈ ಬರೆಹದ ಪತ್ರಿಕೆಯೊಂದರಲ್ಲಿ ಪ್ರೇಕ್ಷಕರನ್ನು ಕೈ ಮಾಡಿ ಕರೆಯುತ್ತಿತ್ತು. ಯಾರು ಬರೆದವರು ಎಂದು ಕೂತೂಹಲದಿಂದ ಕೇಳಿದಾಗ ಆಗಿನ (೧೯೪೫) ಹೆಡ್‌ಮಾಸ್ತರರು ಎಳೆಯ ಬಾಲಕನನ್ನು ತಂದು ನಮ್ಮೆದುರು ನಿಲ್ಲಿಸಿದರು. ಅಕ್ಕರೆಯ ಬಾಲಕ. ಕಾವ್ಯ ವನಿತೆ ತನ್ನ ಅನಂತ ಲೀಲೆಗಳಲ್ಲಿ ಈ ರೂಪಧಾರಣ ಮಾಡಿ ಬಂದಂತೆ ಭಾಸವಾಗುತ್ತಿತ್ತು. ಮಾತನಾಡಿದರೆ ಹೂವರಳಿದಂತೆ ಆಯಿತು. ಅಂದಿನ ಆ ಬಾಲಕ ಇಂದಿನ ಚೆನ್ನವೀರ ಕಣವಿ. ಕನ್ನಡದ ಒಬ್ಬ ಶ್ರೇಷ್ಠ ಕವಿ ಇಲ್ಲಿ ಉದಯ ವಾಗಿದ್ದಾನೆ ಎಂಬ ಭಾವನೆ ಆಗ ನಮ್ಮೆಲ್ಲರಲ್ಲಿ ಮೂಡಿತು. ಇಂದಿಗೆ ಆ ಮಾತು ಪೂರ್ಣ ಸತ್ಯವಾಗಿದೆ.

ಕಾಲೇಜಿನಲ್ಲಿ ಓದುವಾಗಲೇ ಕಣವಿಯವರ 'ಭಾವಜೀವಿ' ಎಂಬ ದೀರ್ಘಕವನ ಪ್ರಕಟವಾಯಿತು. ಅಲ್ಲಿ ಬರುವ ಗುಡ್ಡದ ಓರೆ, ಕಮ್ಮಾರ ಮಾನಪ್ಪ ಮುಂತಾದವರ ಚಿತ್ರ ಭಾವದೀಪ್ತಿಯಲ್ಲಿ ಬೆಳಗುತ್ತಿವೆ. ನವೋದಯ ಕಾವ್ಯದಲ್ಲಿ ಹೊಸ ದಿಸೆ ಮೂಡಿದಂತೆ ಭಾವಜೀವಿ ಬೆಳಗಿತು, ಚೆನ್ನವೀರ ಕಣವಿ ಎಂಬ ಹೆಸರು ಕನ್ನಡದಲ್ಲಿ ಶಾಶ್ವತವಾಗಿ ಉಳಿಯಿತು.

ಕಣವಿ ಜನ್ಮತಃ ಕಾವ್ಯ ಜೀವಿ ; ಭಾವ ಜೀವಿ ; ಅವರಿರುವ ಕೋಣೆ, ಮನೆಗಳಿಗೆ ಇಟ್ಟ ಚೆಂಬೆಳಕು ಎಂಬ ಸುಂದರನಾಮ ಅವರಲ್ಲಿ ಕಾವ್ಯ ಹೇಗೆ ಜೀವ ಜೀವಾಳ ವಾಗಿತ್ತೆಂಬುದನ್ನು ಸ್ಪಷ್ಟಪಡಿಸುತ್ತದೆ.

ಕಾವ್ಯದ ಕಾವು ಕವಿಯ ಬದುಕು ಬೆಳೆದಂತೆ ಬೆಳೆಯತೊಡಗಿತು. ಆ ಸಂವೇದನೆ ಕವಿ ಕೈಕೊಂಡ ವೃತ್ತಿ, ವ್ಯವಸಾಯಗಳನ್ನು ಲೆಕ್ಕಿಸದೆ ಕಾವ್ಯವನ್ನು ಕುದುರಿಸುತ್ತಿದೆ. ಕಣವಿ ಯವರು ಕರ್ನಾಟಕ ವಿಶ್ವವಿದ್ಯಾಲಯದ ಪ್ರಕಟನ ವಿಭಾಗದ ಡಾಯರೆಕ್ಟರರಾದರು. ದೊಡ್ಡ ಶಾಖೆಯನ್ನು ಪ್ರಾರಂಭಿಸಿ ಅದನ್ನು ಅಭಿವೃದ್ಧಿಪಡಿಸುವ ಗುರುತರ ಹೊಣೆಯನ್ನು ಹೊತ್ತು ಅದನ್ನು ಭಾರತೀಯ ವಿಶ್ವವಿದ್ಯಾಲಯಗಳಿಗೆ ಮಾದರಿಯಾಗುವಂತೆ ಮಾಡಿದರು. ಕನ್ನಡದಲ್ಲಿ ಮಾತನಾಡಲು ಬಾರದು; ಮಾತನಾಡಿದರೆ ಪಾಪ ಎನ್ನುವಂತಹ ಕಾಲವೊಂದಿತ್ತು ಕರ್ನಾಟಕದಲ್ಲಿ. ಆಗ ಕಣವಿಯವರು ವಿಶ್ವವಿದ್ಯಾಲಯದ ಜ್ಞಾನಭಂಡಾರ ಗ್ರಾಮೀಣ

ಪ್ರದೇಶವನ್ನು ಮುಟ್ಟಬೇಕೆಂಬ ಘನ ಉದ್ದೇಶದಿಂದ ಪ್ರಚಾರೋಪನ್ಯಾಸ ಮಾಲೆಯನ್ನು ಪ್ರಾರಂಭಿಸಿದರು. ಕರ್ನಾಟಕದ ಹಳ್ಳಿ ಪಳ್ಳಿಗಳಿಗೆ ವಿಶ್ವವಿದ್ಯಾಲಯದ ಪ್ರಾಧ್ಯಾಪಕರನ್ನು ಕರೆದೊಯ್ಯತೊಡಗಿದರು. 'ಯೋಜಕಸ್ತತ್ರ ದುರ್ಲಭಃ' ಎಂದು ಹೇಳುವುದುಂಟು. ಕೇವಲ ಹಣದಿಂದ ಕಾರ್ಯ ಪೂರೈಸುವುದಿಲ್ಲ. ಅದಕ್ಕೆ ಯೋಗ್ಯರಾದ ಯೋಜಕರು ಬೇಕು ಎಂದು ಇದರರ್ಥ. ಸುದೈವದಿಂದ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಕಣವಿಯವರಂತಹ ಕವಿ-ಯೋಜಕರು ಆ ವಿಭಾಗಕ್ಕೆ ದೊರೆತರು. ಮಾತನಾಡಲು ಬಾರದ ಮೂಕರನ್ನು ವಾಚಾಲರನ್ನಾಗಿ ಮಾಡಿದರು. ವಿವಿಧ ವಿಷಯಗಳನ್ನು ತಿಳಿಗನ್ನಡದಲ್ಲಿ ಗ್ರಾಮೀಣ ಜನರಿಗೆ ತಿಳಿಯುವಂತೆ ಮಾತನಾಡುವ ಕನ್ನಡದ ಶೈಲಿಯೊಂದು ಆಗತಾನೆ ಉದಯವಾಯಿತು. ಪ್ರಕಟನ ಶಾಖೆಯ ಪ್ರಚಾರೋಪನ್ಯಾಸಮಾಲೆಯ ಕಿರು ಹೊತ್ತಿಗೆಗಳು ರಾಶಿ ರಾಶಿಯಾಗಿ ಬರತೊಡಗಿದುವು. ಇಂದು ಅವನ್ನೆಲ್ಲ ವೀಕ್ಷಿಸಿದರೆ ಕಣವಿಯವರು ಕನ್ನಡದ ಜ್ಞಾನ ಭಂಡಾರಕ್ಕೆ ನೀಡಿದ ಕಾಣಿಕೆಯ ಕಲ್ಪನೆ ಸ್ಪಷ್ಟವಾಗುತ್ತದೆ. ಸ್ಥಳಗಳನ್ನು ಆಯ್ಕೆಮಾಡುವಲ್ಲಿ, ವಿದ್ವಾಂಸರನ್ನು ಆಹ್ವಾನಿಸುವಲ್ಲಿ, ವಿಷಯಗಳನ್ನು ಆಯ್ಕೆಮಾಡುವಲ್ಲಿ ಕಣವಿಯವರು ತೋರಿಸುವ ಜಾಣ್ಮೆ, ಕಲೆ, ವೈವಿಧ್ಯಗಳು ಅಪ್ರತಿಮ. ಕಣವಿಯವರ ಆದರದ ಕರೆಯನ್ನು ನಿರಾಕರಿಸುವ ದಾರ್ಢ್ಯ ಯಾವ ವಿದ್ವಾಂಸರಿಗೂ ಇಲ್ಲ. ಅಷ್ಟೊಂದು ಆತ್ಮೀಯತೆ ಅವರ ಬಗೆಗೆ ಉಂಟು ವಿದ್ವಾಂಸರಿಗೆ. ಕಣವಿ ಅಜಾತ ಶತ್ರು, ಬಿರುಸುಮಾತು, ಕೊಂಕುನುಡಿ ಅವರ ಹತ್ತಿರ ಸುಳಿಯದು. ಹೀಗೆ ಜನಮನವನ್ನು ಆಕರ್ಷಿಸಿದ ಕಣವಿಯವರು ಕೈಕೊಂಡ ಯೋಜನೆಗಳೆಲ್ಲ ಯಶಸ್ವಿಯಾಗಿ ವಿಶ್ವವಿದ್ಯಾಲಯಕ್ಕೆ ದೊಡ್ಡ ಹೆಸರನ್ನು ತಂದುಕೊಟ್ಟಿವೆ. ಭಾರತೀಯ ವಿಶ್ವವಿದ್ಯಾಲಯಗಳಲ್ಲಿ ಪ್ರಕಟನ ವಿಭಾಗವನ್ನು ಅಭಿವೃದ್ಧಿಪಡಿಸಿದ ಕೆಲವೇ ಕೆಲವು ವಿಶ್ವವಿದ್ಯಾಲಯಗಳಲ್ಲಿ ಕರ್ನಾಟಕ ವಿಶ್ವವಿದ್ಯಾಲಯವೂ ಒಂದು. ಅಲ್ಲಿ ಪ್ರಕಟಗೊಂಡ ಸುಮಾರು ೫೦೦ ಕ್ಕೂ ಮಿಕ್ಕಿದ ಗ್ರಂಥಗಳು ಗುಣದಲ್ಲಿ, ಮುದ್ರಣದಲ್ಲಿ ವೈಶಿಷ್ಟ್ಯವನ್ನು ಪಡೆದು ಕೀರ್ತಿಯನ್ನು ಪಡೆದಿವೆ, ಅನೇಕ ಪ್ರಶಸ್ತಿಗಳನ್ನು ಗಳಿಸಿವೆ. ಇದಕ್ಕೆ ಯೋಜಕರಾಗಿ ಕಾರ್ಯ ಪೂರೈಸಿದ ಡೈರೆಕ್ಟರ ಕಣವಿಯವರನ್ನು ಯಾರೂ ಮರೆಯುವಂತಿಲ್ಲ. Nonformal Education ವಯಸ್ಕರ ಶಿಕ್ಷಣ ಯೋಜನೆಗಳ ಬಗೆಗೆ ಈಗ ಮಾತೆದ್ದಿವೆ. ಆದರೆ ಈ ಯೋಜನೆಗಳನ್ನು ಕಣವಿ ಮೌನವಾಗಿ ಬಹುದಿನಗಳ ಹಿಂದೆಯೇ ಪೂರೈಸಿರುವುದು ಸಂಸ್ಮರಣೀಯ.

ಕಣವಿ ಕಾವ್ಯಕ್ಷೇತ್ರದಲ್ಲಿ ಕಾಲಿಟ್ಟಂದಿನಿಂದ ಇಂದಿನವರೆಗೆ ನವೋದಯ, ನವ್ಯ ಅತಿನವ್ಯ ಮುಂತಾದ ಕಾವ್ಯ ಮಾರ್ಗಗಳು ತಲೆದೋರಿವೆ. ಚೆನ್ನವೀರ ಕಣವಿ ಈ ಎಲ್ಲ ಕಾವ್ಯ ಮಾರ್ಗಗಳಲ್ಲಿಯೂ ಕೃತಿ ರಚಿಸಿ ತಮ್ಮ ವೈಶಿಷ್ಟ್ಯವನ್ನು ಉಳಿಸಿಕೊಂಡು ಬಂದಿರುವರು. ಕಾವ್ಯಾಕ್ಷಿ, ಭಾವಜೀವಿ, ಆಕಾಶಬುಟ್ಟಿ, ಮಧುಚಂದ್ರ ಈ ಕವನ ಸಂಗ್ರಹಗಳು ನವೋದಯ ಮಾರ್ಗದ ಶ್ರೇಷ್ಠ ಕೃತಿಗಳೆನಿಸಿವೆ. ಅಲ್ಲಿ ಭಾವದ ತೀವ್ರತೆ, ಭಾಷೆಯ ಹೊಂದಿಕೆ, ಲಯ ಮಾಧುರ್ಯಗಳು ಮೈವೆತ್ತು ನಮ್ಮ ನಾಗಚಂದ್ರ ಹೊಸಗನ್ನಡದ ಚೆನ್ನವೀರನಾಗಿ

ವ್ಯೈವೆತ್ತು ಬಂದಂತೆ ಭಾಸವಾಯಿತು. ನವೋದಯ ಹಿಂದಕ್ಕೆ ಸರಿದು ಹೊಸ ಮಾರ್ಗ ಉದಯವಾಗುವ ಕಾಲ ಸನ್ನಿಹಿತವಾಯಿತು; ಗೋಕಾಕ, ಕಣವಿ ಇವರಿಬ್ಬರೂ 'ನವ್ಯಧ್ವನಿ' ಎಂಬ ಹೆಸರಿನ ಕವನ ಸಂಗ್ರಹವನ್ನು ಪ್ರಕಟಿಸಿ ಹೊಸಮಾರ್ಗದ ನಾಂದಿಯನ್ನು ಹಾಡಿದರು. ಕಣವಿಯವರ ಕಾವ್ಯಶೈಲಿ ನವೋದಯದಿಂದ ನವ್ಯಕ್ಕೆ ತಿರುಗಿತು. ಮಾರ್ಗ ಯಾವುದಾದರೇನು ? ಕವಿ, ಕವಿಯೇ. ನವ್ಯದಲ್ಲಿಯೂ ಕಣವಿಯವರ ಹೆಸರನ್ನು ಶಾಶ್ವತಗೊಳಿಸಿವೆ 'ದೀಪಧಾರಿ'; 'ಮಣ್ಣಿನ ಮೆರವಣಿಗೆ', 'ನೆಲ ಮುಗಿಲು', 'ಎರಡುದಡ', ನಗರದಲ್ಲಿ ನೆರಳು. ಈ ಹೆಸರುಗಳೇ ನವ್ಯವನ್ನು ಧ್ವನಿಸುತ್ತಿವೆ. ಕಾವ್ಯವನ್ನು ಮಿಡಿಯುತ್ತಿವೆ. ಸುನೀತ (ಸೊನೆಟ್) ಗಳನ್ನು ಕಣವಿಯವರು ಬರೆದರೆ ಕೈಲಾಸ ದೇವಾಲಯವನ್ನು ಕೆತ್ತಿದಂತೆ. ನವೋದಯ ನವ್ಯ ಎಲ್ಲೆಲ್ಲಿಯೂ ಕಣವಿ ಹಿತವಾಗಿ, ಮಿತವಾಗಿ ಶೈಲಿಯನ್ನು ಹದಗೊಳಿಸಿ ಕಾವ್ಯವನ್ನು ಸಹಜ ಸುಂದರ ಶೈಲಿಯಲ್ಲಿ ಸೃಷ್ಟಿಸಿದರು.

ಧ್ವನಿ ಕಣವಿಯವರ ಕಾವ್ಯದ ಉಸಿರು. ಮಾತಿನ ಚಾಕಚಕ್ಯತೆ, ವೈಚಿತ್ರ್ಯ ಅಲ್ಲಲ್ಲಿ ಪಂಪನನ್ನು ನೆನಪಿಗೆ ತಂದು ಕೊಡುತ್ತಿದೆ. ಆ ಸಂಪ್ರದಾಯ, ಈ ಸಂಪ್ರದಾಯ, ಆ ಗುಂಪು ಈ ಗುಂಪು ಇವುಗಳ ಯಾವ ಗಲಭೆಗೂ ಸೇರದೆ ತಮ್ಮ ಸ್ವಂತಿಕೆಯನ್ನು ಬೆಳೆಸಿಕೊಂಡು ಕಾವ್ಯವನ್ನು ಉಳಿಸಿಕೊಂಡು ಕಣವಿಯವರು ಬಹು ದೊಡ್ಡ ಕವಿಯಾಗಿ ನಮ್ಮೆಲ್ಲರ ಮಧ್ಯದಲ್ಲಿರುವುದು ಒಂದು ಹೆಮ್ಮೆಯ ವಿಷಯ. ಅವರು ನೂರು ವಸಂತಗಳನ್ನು ಕಾಣಲಿ ಎಂದು ಹಾರೈಸುತ್ತೇನೆ.

## ಸು. ರಂ. ಎಕ್ಕುಂಡಿ

# ಭಾವಜೀವಿ

34 ವರ್ಷಗಳ ಹಿಂದಿನ ಒಂದು ಮಾತು, ತಬೀಬ್ಲ್ಯಾಂಡಿನ ಪರಿಸರದಲ್ಲಿ ಹುಬ್ಬಳ್ಳಿಯಲ್ಲಿ ಕಮ್ಯೂನಿಸ್ಟ್ ಪಾರ್ಟಿಯ ಕಚೇರಿಯು ರಾಜಕೀಯದ ಜೊತೆಗೆ ಸಾಂಸ್ಕೃತಿಕವಾದ ಚಟುವಟಿಕೆಗಳಲ್ಲೂ ವಿಶೇಷವಾಗಿ ತೊಡಗಿರಲು ಅಲ್ಲಿನ ಸ್ಫೂರ್ತಿಕೇಂದ್ರ ಆಗಿದ್ದ ಶ್ರೀ ಕುಳುಕುಂದ ಶಿವರಾಯ ನಿರಂಜನರೇ ಮುಖ್ಯ ಕಾರಣವಾಗಿದ್ದರು. ಒಂದು ದಿನ ಮುಂಜಾನೆ ನಾವು ಅವರ ಕಚೇರಿಯಲ್ಲಿ ಕುಳಿತು ಸಾಹಿತ್ಯಕ್ಷೇತ್ರದಲ್ಲಿ ಪ್ರಗತಿಶೀಲ ಶಕ್ತಿಗಳನ್ನು ಒಂದುಗೂಡಿಸುವ ಕುರಿತು ಚರ್ಚಿಸುತ್ತಿದ್ದೆವು. ಆಗ ಪಾರ್ಟಿಯ ವತಿಯಿಂದ ಕನ್ನಡದಲ್ಲಿ 'ಜನಶಕ್ತಿ'ಯೆಂಬ ಒಂದು ವಾರಪತ್ರಿಕೆಯು ಪ್ರಕಟವಾಗುತ್ತಿತ್ತು. ಆ ಪತ್ರಿಕೆಯು ಶ್ರೀ ನಿರಂಜನರ ಸಂಪಾದಕತ್ವದಲ್ಲಿ ತುಂಬಾ ಚಟುವಟಿಕೆಯಿಂದ ಜನಪ್ರಿಯತೆಯನ್ನು ಗಳಿಸತೊಡಗಿತ್ತು. ಮುಖ್ಯವಾಗಿ ದುಡಿಯುವ ಜನರ ಬೆಂಬಲದಿಂದ ಮತ್ತು ರಾಜಕೀಯ ಜಾಗೃತಿಯ ಪ್ರಗತಿಶೀಲ ಹಿನ್ನೆಲೆಯಿಂದ 'ಜನಶಕ್ತಿ'ಯು ಹೆಚ್ಚು ಹೆಚ್ಚು ಪ್ರಭಾವಿಯಾಗತೊಡಗಿತ್ತು.

ಅಂದು ಮುಂಜಾನೆ ಇಬ್ಬರು ಯುವಕರು ಕಚೇರಿಯಲ್ಲಿ ಪ್ರವೇಶಿಸಿದೊಡನೆ ನಿರಂಜನರು 'ಓಹೋ! ಬನ್ನಿ ಶಿವೇಶ್ವರ್; ಇವತ್ತು ನೀವು ಬಂದದ್ದು ತುಸು ಬೇಗನೇ ಆಯಿತು!' ಎಂದು ಉದ್ಗರಿಸಿದರು. ಆಗ ಶಿವೇಶ್ವರ ತನ್ನ ಸಂಗಡಯಿದ್ದ ತರುಣರನ್ನು ನಿರಂಜನ್‌ರಿಗೂ, ನನಗೂ ಪರಿಚಯಿಸುತ್ತ ಹೇಳಿದರು. 'ಇವರೇ 'ಜನಶಕ್ತಿ'ಯಲ್ಲಿ ಮೊನ್ನೆ ಪ್ರಕಟವಾದ ರೈತರ ಜೀವನದ ಬಗೆಗೆ ಇದ್ದ ಕಥೆಯ ಬರಹಗಾರ–ಚೆನ್ನವೀರ ಕಣವಿ" ಎಂದರು. ಹಾಗೆಯೇ ಕಣವಿಯವರತ್ತ ತಿರುಗಿ "ಇವರು ನಮ್ಮ ಸಂಪಾದಕ ಶ್ರೀ ಕುಳಕುಂದ ಶಿವರಾಯ ನಿರಂಜನರು; ಇವರು ಸು. ರಂ. ಎಕ್ಕುಂಡಿಯವರು". ಆಗ ಶ್ರೀ ಚೆನ್ನವೀರ ಕಣವಿಯವರು ಮುಗುಳ್ನಕ್ಕು ಕೈಜೋಡಿಸಿದರು. ನಮ್ಮ ಈ ಮೊದಲ ಪರಿಚಯವನ್ನು ನಾವೆಲ್ಲರೂ ಆ ಕ್ಷಣದಲ್ಲಿಯೇ ಒಂದು ಕಪ್ಪು ಚಹ ಕುಡಿದು ವಿಜೃಂಭಣೆಯಿಂದ ಆಚರಿಸಿದೆವು.

ತುಸು ತೆಳ್ಳನೆಯ ಎತ್ತರವಾದ ನಿಲುವು; ಕನ್ನಡಕಗಳು; ಓರಣವಾಗಿ ಬಾಚಿದ ಕ್ರಾಪು; ಕನ್ನಡಕದ ಮರೆಯಲ್ಲಿ ಹೊಳೆಯುತ್ತಿರುವ ಭಾವಪೂರ್ಣವಾದ ಕಣ್ಣುಗಳು; ಒಳಗಿನ ಕಾವ್ಯಸತ್ವವು ಪಲ್ಲವಿಸಿ ಬಂದಂಥ ಒಂದು ಮುಗುಳು ನಗೆ. ಶ್ರೀ ಕಣವಿಯವರ ಈ ಮೊದಲ ಭೇಟಿಯ ನೆನಪು ನನ್ನಲ್ಲಿ ಈಗಲೂ ನಿಚ್ಚಳವಾಗಿದೆ. ನಮ್ಮಿಬ್ಬರಲ್ಲೂ ಸ್ನೇಹ ಸೇತುವೆಯನ್ನು ಕಟ್ಟಿದ ಶ್ರೀ ಶಿವೇಶ್ವರ ದೊಡ್ಡಮನಿ, ಈಗ ಇಲ್ಲ; ನವಿಲೂರಿನ ನಮ್ಮ

ಆ ಗೆಳೆಯನು ಎಳೆಯ ವಯಸ್ಸಿನಲ್ಲಿಯೇ ಅಕಾಲ ಮರಣಕ್ಕೆ ತುತ್ತಾದದ್ದು ಕನ್ನಡದ ಕಾವ್ಯ ಮತ್ತು ವಿಮರ್ಶೆಗಳ ಪ್ರಪಂಚಕ್ಕೆ ತುಂಬಬಾರದ ಹಾನಿಯಾಗಿದೆ. ಶಿವೇಶ್ವರ ದೊಡ್ಡಮನಿ ಹಳ್ಳಿಹಳ್ಳಿಗಳಲ್ಲೂ ತಿರುಗಿ, ಜನಪದ ಗೀತೆಗಳನ್ನು ಅಪಾರವಾಗಿ ಸಂಗ್ರಹಿಸಿದ್ದರು. ಅಂದಿನ ಪ್ರತಿಷ್ಠಿತ ಪತ್ರಿಕೆಯಾದ ಮಾಸ್ತಿಯವರ 'ಜೀವನ'ದಲ್ಲಿ ಗೆಳೆಯ ಶಿವೇಶ್ವರ ಜನಪದ ಸಾಹಿತ್ಯದಲ್ಲಿ ಜೀವನ ಸೌಂದರ್ಯವೆಂಬ ಲೇಖಮಾಲೆಯನ್ನು ಬರೆದು ಜನಪದ ಸಾಹಿತ್ಯದಲ್ಲಿದ್ದ ಸೌಂದರ್ಯ ಶಕ್ತಿಗಳನ್ನು ಬಹಳ ಸಮರ್ಥವಾಗಿ ನಿವೇದಿಸಿದ್ದರು.

ಅವರ ಮೂಲಕ ಅಂದು ಪರಿಚಯವಾದ ಶ್ರೀ ಚನ್ನವೀರ ಕಣವಿ ಧಾರವಾಡದಲ್ಲಿ ಆಗಿನ್ನೂ ವಿದ್ಯಾರ್ಥಿಯಾಗಿದ್ದರು. ಅವರಿದ್ದ ರೂಮಿಗೆ 'ಚೆಂಬೆಳಕು' ಎಂದು ಕರೆಯುತ್ತಿದ್ದರು. ಆ ಕೋಣೆಯು ಅಂದಿನ ಮತ್ತು ಅಲ್ಲಿಯ ಹಾಗೂ ಸುತ್ತಮುತ್ತಲಿನ ಕವಿಗಳ ಮತ್ತು ಬರಹಗಾರರ ಪರಿಚಯ ಮತ್ತು ಚರ್ಚೆಗಳ ಕೇಂದ್ರವಾಗಿತ್ತು. ಮೂಲತಃ ಹಳ್ಳಿಯಿಂದ ಬಂದ, ಹಳ್ಳಿಯ ಬದುಕಿನೊಂದಿಗೆ ಸಮರಸಗೊಂಡ, ಹಳ್ಳಿಯ ಸೌಂದರ್ಯ ಸತ್ವಗಳನ್ನೆಲ್ಲ ಮೈಗೂಡಿಸಿಕೊಂಡ ಚೆನ್ನವೀರ ಕಣವಿಯವರು ತಮ್ಮ ಕಾವ್ಯಾನುಭವಗಳನ್ನೆಲ್ಲ 'ಭಾವಜೀವಿ'ಯೆಂಬ ಸುದೀರ್ಘ ಕವನದಲ್ಲಿ ವ್ಯಕ್ತಪಡಿಸಿರುವರು. ಅವರು ಧಾರವಾಡದಲ್ಲಿ ಕಾವ್ಯಾನುಭವ ಮಂಟಪವನ್ನು ಕಟ್ಟಿ ವಾರವಾರವೂ ಅಲ್ಲಿ ಕಾವ್ಯ, ಸಾಹಿತ್ಯ, ವಿಮರ್ಶೆ, ಸಂಸ್ಕೃತಿಗಳನ್ನೆಲ್ಲ ಕುರಿತು ಚರ್ಚಿಸುತ್ತಿದ್ದರು. ವಿಚಾರವಿನಿಮಯ ಮಾಡುತ್ತಿದ್ದರು. ಚಳಿಗಾಲದ ಮಂಜು ಬೆಳಕು ಹರಿದಂತೆ ಮೆಲ್ಲಮೆಲ್ಲನೆ ಕರಗಿ ನೆಲದಿಂದ ಎದ್ದೆದ್ದು ನೆಲಕ್ಕೆ ಇಂಗಿ ಹೋಗುವಂತೆ ಭಾವಾವೇಶದಲ್ಲಿ ಎಲ್ಲೆಲ್ಲೂ ವಿಹರಿಸಿದ ಕಾವ್ಯಪಕ್ಷಿಯು ಮತ್ತೆ ನೆಲದ ಗೂಡನ್ನೇ ಆಶ್ರಯಿಸುವುದು ಸಹಜ. ಆ ಕಾರಣದಿಂದಲೇ ಚೆನ್ನವೀರ ಕಣವಿಯವರು 'ಕಮ್ಯುನಿಸಮ್'ನ ಪ್ರಗತಿಶೀಲ ಸಾಹಿತ್ಯಕ್ಕೆ ಆ ದಿನಗಳಲ್ಲಿ ಕೆಲಮಟ್ಟಿಗೆ ಒಲಿದಿದ್ದುದು. ಎಂಥ ಪ್ರವಾಹ ಬಂದರೂ 'ಎರಡು ದಡ'ಗಳ ಮಧ್ಯದಲ್ಲೇ ಹೊಳೆಯು ಮುನ್ನಡೆಯುವಂತೆ ಶ್ರೀ ಕಣವಿಯವರು ರಾಜಕೀಯದ ಯಾವ ಆವೇಶಕ್ಕೂ ಕೊಚ್ಚಿಹೋಗದೇ ತಮ್ಮ ಸುಸಂಸ್ಕೃತವಾದ, ಕೋಮಲವಾದ, ನಯವಾದ, ನುಣುಪಾದ ಭಾವನೆಗಳನ್ನು ಅಷ್ಟೇ ಮೃದುವಾದ, ನಯವಾದ, ನುಣುಪಾದ ನುಡಿಗಳಲ್ಲಿ ಮೂಡಿಸುವ ಕಲೆಯನ್ನೂ, ಶಕ್ತಿಯನ್ನೂ ಅರಗಿಸಿಕೊಂಡರು. ಶ್ರೀ ಚೆನ್ನವೀರ ಕಣವಿಯವರ ವೈಶಿಷ್ಟ್ಯ ಇಂಥ ರಸ ಮತ್ತು ಭಾವ ಮತ್ತು ನುಡಿಗಳ ಸಮರ್ಥ ಸಂಗಮದಲ್ಲಿದೆ. ಅವರು ಬರೆದ ಒಂದು ಕವಿತೆಯಲ್ಲಿ ಸುಂದರವಾದ ಉದಾಹರಣೆ ಕೊಟ್ಟಿದ್ದಾರೆ. ಧಾರವಾಡದಲ್ಲಿ ಕರ್ನಾಟಕ ಕಾಲೇಜಿಗೆ ಹೋಗುವ ಟಾರು ರಸ್ತೆ ಉದ್ದಕ್ಕೂ ಮೈಚಾಚಿ ಮಲಗಿದೆ; ಆಗ ಇನ್ನೂ ಸಿಟಿ ಬಸ್‌ಗಳ ಓಡಾಟ ಶುರುವಾಗಿರಲಿಲ್ಲ; ಆ ದಾರಿಗುಂಟ ದನಕಾಯುವ ಹುಡುಗರು ತಮ್ಮ ಎಮ್ಮೆಗಳನ್ನು ಹೊಡೆದುಕೊಂಡು ಹೋಗುವ ದೃಶ್ಯ ಸಾಮಾನ್ಯವಾಗಿತ್ತು. ಒಬ್ಬ ಬಡ ಹಳ್ಳಿಯ ಹುಡುಗ ಆ ರಸ್ತೆಯಗುಂಟ ಆ ಹಗಲಿನ ನಿರ್ಜನ ಮೌನದಲ್ಲಿ ಎಮ್ಮೆಯ ಮೇಲೆ ಸುಖವಾಗಿ ಮಲಗಿಕೊಂಡು ಹೋಗುತ್ತಿರುವ ದೃಶ್ಯವನ್ನು ಶ್ರೀ ಕಣವಿಯವರು ಬಹಳ ಸುಂದರವಾಗಿ ವರ್ಣಿಸಿದ್ದಾರೆ. ಎಮ್ಮೆಯ

ನುಣುಪಾದ ಬೆನ್ನಮೇಲೆ ಚೆನ್ನಾಗಿ ನಿದ್ರೆ ಹತ್ತಿ ಆ ಹುಡುಗ ತನ್ನ ಅಜ್ಞಾನ, ಬಡತನ, ಆಸೆಗಳನ್ನು ಸಂಪೂರ್ಣ ಮರೆತು ಆ ಕಾಲೇಜು ದಾರಿಯಲ್ಲಿ ಸುಖವಾಗಿ ಹೊರಟಿದ್ದಾನೆ. ಶ್ರೀ ಚೆನ್ನವೀರ ಕಣವಿಯವರ ಕವಿತೆಯಲ್ಲಿ ಈ ಸಾಮಾನ್ಯ ದೃಶ್ಯದ ಒಂದು ಅಸಾಮಾನ್ಯ ರಸ ದೃಷ್ಟಿಯನ್ನು ಆ ನಿರ್ಜನ ಮೌನದಲ್ಲಿ ಇವನೂ, ಇವನ ಎಮ್ಮೆಯೂ ಮೆಲ್ಲ ಮೆಲ್ಲನೆ ಸರಿದು ಹೋಗುತ್ತಿರುವ ಆ ಗತಿಶೀಲ ಚಿತ್ರದ ಕುಶಲತೆಯೂ, ತುಂಬಾ ಪ್ರಭಾವಿಯಾಗಿದೆ.

ಶ್ರೀ ಕಣವಿಯವರ ಕವಿತೆಗಳಲ್ಲಿ ಈ ಜೀವನದ ಅನುಕಂಪ, ಪ್ರಕೃತಿಯ ಅನುಬಂಧ ಮತ್ತು ಭಾವಪೂರ್ಣ ಅನುಭವಗಳ ಸಂಗಮವನ್ನು ನಾವು ಕಾಣಬಲ್ಲೆವು. ಅವರ ಎಲ್ಲ ಕವನಸಂಗ್ರಹಗಳಲ್ಲೂ ಅವರ ಈ ಕಾವ್ಯ ಸತ್ವದ ಮೂರು ದಲಗಳನ್ನು ಕಾಣುವೆವು. ಅವರು ನೈಜಜೀವನದಲ್ಲಿ ಕಂಡುಬರುವ ಸಂಗತಿಗಳನ್ನೆಲ್ಲ ತಮ್ಮ ಪದ್ಯಗಳಲ್ಲಿ ಸರಳ, ಸುಂದರವಾಗಿ ಚಿತ್ರಿಸುವಲ್ಲಿ ಸಂಪೂರ್ಣ ಯಶಸ್ವಿಯಾಗಿದ್ದಾರೆ.

**ಶಾಂತಾದೇವಿ ಮಾಳವಾಡ**

# ಕಣವಿ ದಂಪತಿಗಳು

ಎತ್ತರದ ನಿಲುವು, ಗೋದಿಗೆಂಪು ಬಣ್ಣ, ಮಂದಸ್ಮಿತದ ಮುಖ. ಶುಭ್ರ ಬಿಳಿಯ ನೆಹರೂ ಶರ್ಟುಧರಿಸಿ ಬಿಳಿಯ ಧೋತರವನ್ನುಟ್ಟ ಕಣವಿಯವರನ್ನು ನಾನು ಕಂಡದ್ದು 30 ವರುಷಗಳ ಹಿಂದೆಯೇ ! ಶುಭ್ರ ಬಟ್ಟೆ ಧರಿಸುತ್ತಿದ್ದ ಕಣವಿಯವರು !— "ನಡೆ ಶುದ್ಧ. ನುಡಿ ಶುದ್ಧ. ತನು ಶುದ್ಧ, ಮನ ಶುದ್ಧ, ಭಾವ ಶುದ್ಧ" ವಾಗಿರುವವರೆಂಬುದು ಬಹು ಬೇಗನೆ ಗೊತ್ತಾಯಿತು, ಆಗ ಬಿ. ಎ. ಪರೀಕ್ಷೆಗೆ ಕನ್ನಡ ತೆಗೆದುಕೊಳ್ಳುವ ವಿದ್ಯಾರ್ಥಿಗಳು ಬೆರಳೆಣಿಕೆಯಲ್ಲಿರುತ್ತಿದ್ದರು. ಬಿ. ಎ. ಕೊನೆಯ ವರುಷದಲ್ಲಿ ಓದುತ್ತಿದ್ದ ವಿದ್ಯಾರ್ಥಿಗಳು ಮೇಲಿಂದ ಮೇಲೆ ನಮ್ಮ ಮನೆಗೆ, ನನ್ನ ಯಜಮಾನರ ಭೆಟ್ಟಿಗೆ ಬರುತ್ತಿದ್ದರು, ಪರೀಕ್ಷೆ ಹತ್ತಿರ ಬಂದಾಗ ಅಂತಿಮ ಬಿ. ಎ. ವಿದ್ಯಾರ್ಥಿಗಳನ್ನು ಚಹ ಕೂಟಕ್ಕೆ ಆಹ್ವಾನಿಸುವ ಸಾಂಪ್ರದಾಯವನ್ನು ನನ್ನವರು ಅನೇಕ ವರುಷಗಳಿಂದ ನಡೆಸಿಕೊಂಡು ಬಂದಿದ್ದರು. ಕನ್ನಡ ವಿದ್ಯಾರ್ಥಿಗಳಲ್ಲಿ ಹಲವರು, ನಮ್ಮಿಬ್ಬರ ಪಾಲಿಗೆ ಕೇವಲ ವಿದ್ಯಾರ್ಥಿಗಳಾಗದೇ ಆತ್ಮೀಯ ಸೋದರರಂತಿದ್ದರು. ಮಾಳವಾಡರ ಕಟ್ಟುನಿಟ್ಟಿನ ಸ್ವಭಾವಕ್ಕಂಜಿ ಹಲವರು ದೂರ ದೂರ ಓಡಾಡುತ್ತಿದ್ದರೂ ಸಹ ಕೆಲವರು ನನ್ನೊಂದಿಗೆ ಆತ್ಮೀಯ ಸೋದರರಂತೆ ನಡೆದುಕೊಳ್ಳುತ್ತಿದ್ದರು. ಕಣವಿ, ಸಿ. ಕೆ. ದೀಕ್ಷಿತ, ಯೋಗೀಶ ಹಾಗೂ ಸೋದರಿ ಪ್ರಭಾ ಬೆಂಡಿಗೇರಿ ಅವರಲ್ಲಿ ಮುಖ್ಯರಾಗಿದ್ದರು.

ಯೋಗೀಶ ಮನೆಯ ಹುಡುಗನಂತೆಯೆ ಇದ್ದ. ಯೋಗೀಶ, ಕಣವಿಯವರು ರೂಮ್ ಮೇಟ್ಸ ಆಗಿದ್ದುದರಿಂದ ಇಬ್ಬರೂ ಜೊತೆಯಾಗಿ ನಮ್ಮ ಮನೆಗೆ ಹಲವಾರು ಸಲ ಬರುತ್ತಿದ್ದರು. ಅದರಿಂದಾಗಿ ಕಣವಿಯವರ ಪರಿಚಯ ನನಗೆ ಹೆಚ್ಚಾಗಿ ಆಯಿತು. ಹೆಣ್ಣರುಳಿನ ಸೌಮ್ಯಸ್ವಭಾವದ ಕಣವಿ ತಮ್ಮನಂತೆ ನಡೆದುಕೊಳ್ಳುತ್ತಿದ್ದರು.

ಕವನಗಳನ್ನು ರಚಿಸುವ ಹವ್ಯಾಸ ಕಣವಿಯವರಿಗೆ ವಿದ್ಯಾರ್ಥಿದೆಸೆಯಲ್ಲಿಯೇ ಬೆಳೆದು ಬಂದಿತ್ತು. ಕರ್ನಾಟಕ ಕಾಲೇಜಿನ ಕರ್ನಾಟಕ ಸಂಘದ ಚಟುವಟಿಕೆಯಲ್ಲಿ ಆಸ್ಥೆಯಿಂದ, ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಕಣವಿಯವರು ತಮ್ಮ ಹಿತ-ಮಿತ ಭಾಷೆ, ಸದು ವಿನಯ ಸದ್ಭಾವಗಳಿಂದ ಸತತಾಭ್ಯಾಸ, ಕಾವ್ಯ ಪ್ರತಿಭೆಯಿಂದ ವಿದ್ಯಾರ್ಥಿಗಳಿಗೆ, ಪ್ರಾಧ್ಯಾಪಕರಿಗೆ ಅಚ್ಚುಮೆಚ್ಚಿನರಾಗಿದ್ದರು. ಚೆಂಬೆಳಕು, ಚೆನ್ನವೀರರಿಗೆ, ಚೆಂಬೆಳಕು. ಚೆಂಗುಲಾಬಿಯ ಮೇಲೆ ಬಲುಪ್ರೀತಿ. ಉಳವಿಗುಡ್ಡದಲ್ಲಿ ತಾವಿರುವ ಕೋಣೆಗೆ ಚೆಂಬೆಳಕು ಎಂದು ನಾಮಕರಣ ಮಾಡಿದ್ದರು. ಇಂದು ಅವರು ಕಟ್ಟಿಸಿದ ಸುಂದರ ಮನೆಯ ಹೆಸರೂ

"ಚೆಂಬೆಳಕು". ವಿದ್ಯಾರ್ಥಿದೆಸೆಯಲ್ಲಿ ತಾವಿರುವ ಕೋಣೆ "ಚೆಂಬೆಳಕ"ನ್ನು ಸಾಹಿತಿಗಳ ಯಾತ್ರಾಸ್ಥಳವನ್ನಾಗಿಸಿದ್ದರು.

ಮಾಳವಾಡರ ಮೆಚ್ಚಿನಕಾವ್ಯ ಹರಿಹರನ ಗಿರಿಜಾಕಲ್ಯಾಣವನ್ನು ಬಾನುಲಿಗೆ ಅಳವಡಿಸಿ, ನಾವೆಲ್ಲರೂ ಅದರ ಪ್ರಸಾರದಲ್ಲಿ ಪಾಲ್ಗೊಂಡಿದ್ದೆವು. ನಾವಿಬ್ಬರು, ಮಳಗಿ ದಂಪತಿಗಳು, ಕಣವಿ, ಭಾರತಿ ಕುರ್ತಕೋಟಿ, ಹಾಗೂ ಇನ್ನು ಕೆಲ ವಿದ್ಯಾರ್ಥಿಗಳು ಕೂಡಿ ಪ್ರಸಾರಗೊಳಿಸಿದ "ಗಿರಿಜಾ ಕಲ್ಯಾಣ" ಕೇಳುಗರ ಮೆಚ್ಚುಗೆ ಪಡೆದಿತ್ತು. ಕಣವಿಯವರ ಧ್ವನಿ ಅದಕ್ಕೆ ಹೆಚ್ಚಿನ ಮೆರುಗನ್ನು ತಂದಿತ್ತು.

ಒಂದು ಸಲ ಹೊಸಪೇಟೆಯ ನಾಡಹಬ್ಬ ಸಮಿತಿಯವರು ನಮ್ಮಿಬ್ಬರನ್ನು ನಾಡಹಬ್ಬಕ್ಕೆ ಆಹ್ವಾನಿಸಿದ್ದರು. ನಮ್ಮ ಆಪ್ತರೊಬ್ಬರು ಅಲ್ಲಿ ಗಣ್ಯವ್ಯಕ್ತಿಗಳಾಗಿದ್ದರು. ೭-೮ ಜನರಿಗೆ ಊಟ ವಸತಿಗಳ ಏರ್ಪಾಡು ಮಾಡಿ, ಹಂಪಿಯನ್ನು ತೋರಿಸುವುದಾದರೆ ನಾವು ಬರುತ್ತೇವೆ ಎಂದು ಮಾಳವಾಡರು ಹೇಳಿದ್ದರು. ಅದನ್ನು ಅವರು ಸಂತಸದಿಂದ ಒಪ್ಪಿಕೊಂಡರು. ಆಗ ಕೊನೆಯ ವರುಷದ ವಿದ್ಯಾರ್ಥಿಗಳಾಗಿದ್ದ ಕಣವಿ, ಯೋಗೀಶ, ಕೋಕಿಲಾ ಹಾಗೂ ಪ್ರಾಧ್ಯಾಪಕರಾದ ಪ್ರೊ. ಗಿಡಿಯನ್, ಟಿ.ಜಿ. ಪಾಟೀಲ. ಭಾಸ್ಕರರು ಕೂಡಿ ಹೊಸಪೇಟೆಗೆ ಹೊರಟೆವು. ಜೊತೆಗೆ ಸಾಕಷ್ಟು ತಿಂಡಿ, ಹಣ್ಣು ಕಟ್ಟಿಕೊಂಡಿದ್ದೆವು. ರೈಲಿನಲ್ಲಿ ರಾತ್ರಿ ಮಲಗಲು ಸ್ಥಳವಿರಲಿಲ್ಲ. ಕುಳಿತುಕೊಂಡೇ ಪ್ರಯಾಣ ಮಾಡಬೇಕಾಯಿತು. ನಿದ್ರೆಯಿಲ್ಲದೆ ರಾತ್ರಿ ಕಳೆಯಲು ಕಣವಿ ಸಂಗಡಿಗರು ಹಾಡು ಹೇಳುತ್ತ ಹೊರಟರು. ಗಿಡಿಯನ್ ಪ್ರೊಫೆಸರರೂ ಕಿರಿಯರ ಜೊತೆಗೂಡಿದರು. ಆ ಕಂಪಾರ್ಟಮೆಂಟಿನಲ್ಲಿ ಕುಳಿತ ಪ್ರವಾಸಿಗರಿಗೆಲ್ಲ ಸಂತಸ, ಸಂಭ್ರಮ. ಕಣವಿಯವರು ಎಲ್ಲಿದ್ದರೂ ಸುತ್ತಲಿನ ಜನರನ್ನು ತಮ್ಮ ತಿಳಿ ಹಾಸ್ಯದಿಂದ, ಕಾವ್ಯ ಪ್ರತಿಭೆಯಿಂದ ನಕ್ಕು ನಲಿಸುವದುಂಟು.

ಕಣವಿಯವರ ಸದ್ಗುಣ, ಸೌಮ್ಯಸ್ವಭಾವವನ್ನರಿತ ನಮ್ಮಿಬ್ಬರ ಮನಸ್ಸಿನಲ್ಲಿ ವಿಚಾರವೊಂದು ಸುಳಿಯಿತು. ನನ್ನ ಚಿಕ್ಕಮ್ಮನ ಮಗಳು, ಸಾಹಿತ್ಯ ಪ್ರೇಮಿ ಶಾಂತಾ-ಚೆನ್ನವೀರರು ಬಾಳ ಸಂಗಾತಿಗಳಾದರೆ, ಅವರ ದಾಂಪತ್ಯ ಜೀವನ ಹಾಲು-ಜೇನು ಸೇರಿದಂತಾದೀತು ಎಂದು. ನನ್ನ ಚಿಕ್ಕಪ್ಪನವರ ಸಾಹಿತ್ಯ ಪ್ರೇಮ, ಅವರ ಮನೆಯಲ್ಲಿದ್ದ ಕನ್ನಡ, ಇಂಗ್ಲೀಷ ಪುಸ್ತಕಗಳ ಅಪಾರ ಸಂಗ್ರಹ ಕಂಡು ಕಣವಿಯವರಿಗೆ ಆನಂದವಾಯಿತು. ಅವರ ಮನೆಯ ಸುಸಂಸ್ಕೃತ ವಾತಾವರಣ ಕಣವಿಯವರ ಮನಸ್ಸಿಗೆ ಹಿಡಿಸಿತು. ಗಿಡ್ನವರ ಮೂರನೆಯ ಮಗಳು ಶಾಂತಾ ಅವರ ಹೃದಯಕ್ಕೂ ಒಪ್ಪಿಗೆಯಾದಳು. ಎಂ.ಎ. ಪರೀಕ್ಷೆಯಾದೊಡನೆ ಚೆನ್ನವೀರ-ಶಾಂತಾ ಅವರ ವಿವಾಹವಾಯಿತು.

ನಿನ್ನ ಕಂಡು ಚಣದೊಳೆನ್ನ
ಕಂಗಳ ಬರ ಹಿಂಗಿತು,
ನೂರು ನೋವನೆಲ್ಲ ಮರೆಸಿ
ಸ್ವರ್ಗ ಹೂವ ಸುರಿಸಿತು.

ಸುಳಿವ ಗಾಳಿ ಅಳಿಯದಂಥ
ಪ್ರೀತಿ ಗಂಧ ತಂದಿತು
ಜೀವ ಬಯಸಿದಂಥ ಜೇನಿ-
ನಲ್ಲಿ ಆತ್ಮ ಮಿಂದಿತು.

ಎಂಬ ಕಣವಿಯವರ ಕವಿವಾಣಿ, ಅವರ ವೈವಾಹಿಕ ಜೀವನದ ಸವಿಗತೆಯನ್ನುಸುರಿದೆ, ಕಣವಿಯವರ ಭಾವ ಗೀತೆಗಳಿಗೆ ಶಾಂತಾ ತನ್ನ ಇಂಪಾದ ಕಂಠವನ್ನು ಕೊಟ್ಟಿದ್ದಾಳೆ.

ಪಡುವಣದ ಸಂಜೆವೆಣ್ ನಡುಮನೆಗೆ ಬಂದಂತೆ
ರಾಗಪುಲಕಿತೆ ಎದೆಯನಾಳುತಿಹಳು–
ಮಳೆಬಂದ ಮರುಚಣದ ಇಳೆಯ ಹೊಸತನದಂತೆ
ಅಡಿಗಡಿಗು ಈ ಬಾಳ ಬೆಳಗುತಿಹಳು

ಎಂಬ ನುಡಿ ಈ ಸಂದರ್ಭವನ್ನು ಬೆಳಗಿಸಿ ತೋರಿಸಿದೆ.

ನಾಲ್ವರು ಗಂಡು ಮಕ್ಕಳು, ಒಬ್ಬಳು ಹೆಣ್ಣು ಮಗಳನ್ನು ಪಡೆದ ಕಣವಿ ದಂಪತಿಗಳು ಮಕ್ಕಳಿಗೆ ಯೋಗ್ಯ ಶಿಕ್ಷಣ ಕೊಟ್ಟಿದ್ದಾರೆ. ಸುಶಿಕ್ಷಿತರನ್ನಾಗಿ ಮಾಡುವುದರ ಜೊತೆಗೆ ಸುಸಂಸ್ಕೃತರನ್ನೂ ಮಾಡಿದ್ದಾರೆ. ಸಾಹಿತ್ಯ, ಸಂಗೀತ, ಆಟಗಳಲ್ಲಿ ಮಕ್ಕಳೆಲ್ಲ ಬಲ್ಲಿದರಾಗುವಂತೆ ಅವಕಾಶ ಕಲ್ಪಿಸಿಕೊಟ್ಟಿದ್ದಾರೆ. ಮಕ್ಕಳ ವ್ಯಕ್ತಿತ್ವ ಚೆಂಗುಲಾಬಿಯಂತೆ ಸೌರಭ ಬೀರುವಂತಾಗಿದೆ. ಕಣವಿಯವರು ಗಂಡನೆಂಬ ದರ್ಪವನ್ನು ಹೆಂಡತಿಗೆ ಎಂದೂ ತೋರಿದವರಲ್ಲ. ಮಕ್ಕಳನ್ನು ಗದರಿಸಿ ಅಂಜಿಕೆಯ ಆವರಣದಲ್ಲಿಟ್ಟವರಲ್ಲ. ಹೆಂಡತಿ, ಮಕ್ಕಳೊಂದಿಗೆ, ಸದಾ ಸರಸ ಸಂಭಾಷಣೆಗೈಯ್ಯುತ್ತ ಅವರ ಒಳ್ಳೆಯ ಹವ್ಯಾಸಗಳಿಗೆ ಪ್ರೋತ್ಸಾಹಕೊಡುತ್ತಿರುತ್ತಾರೆ. ಆಫೀಸಿನಲ್ಲಿ ಸಹೋದ್ಯೋಗಿಗಳೊಂದಿಗೆ, ಕೈಕೆಳಗೆ ಕೆಲಸ ಮಾಡುವವರೊಂದಿಗೂ ಸವಿನಯದಿಂದ ನಡೆದುಕೊಳ್ಳುವದನ್ನು ಕಂಡು ಅವರೊಂದಿಗೆ ಕೆಲಸಮಾಡುವವರು "ನಮ್ಮ ಕಣವಿ ಸಾಹೇಬರು ಬಹಳ ಒಳ್ಳೆಯವರು, ಎಂದೂ ಬಿರಸು ಮಾತನಾಡಿದವರಲ್ಲ" ಎಂದು ಗುಣಗೌರವ ಪಾಡುವುದನ್ನು ನಾನು ಅನೇಕ ಸಲ ಕೇಳಿದ್ದೇನೆ.

ಅವರ ಜೀವನಕ್ಕೆ ಸಾಹಿತ್ಯಕ್ಕೆ ಶಾಂತಾ ಪೂರಕ ಶಕ್ತಿಯಾಗಿದ್ದಾಳೆ. ಸದಾ ಮನೆಗೆಲಸ, ಪತಿಯ ಹಾಗೂ ಮಕ್ಕಳ ಹಿತಚಿಂತನೆಗಾಗಿ ಕಾರ್ಯಗೈಯ್ಯುತ್ತಿರುವ ಶಾಂತಾ ಆದರ್ಶ ಪತ್ನಿ, ಆದರ್ಶ ತಾಯಿಯಾಗಿದ್ದಾಳೆ. ಮಕ್ಕಳ ಅಭಿವೃದ್ಧಿಗಾಗಿ, ಚಂದನದಂತೆ ದೇಹವನ್ನು ಸವೆಯಿಸುವ ಆಕೆಯನ್ನು ಕಂಡರೆ ಎಲ್ಲರಿಗೂ ಗೌರವವೆನಿಸುತ್ತದೆ. ಬಿಡುವಿನ ವೇಳೆಯಲ್ಲಿ ಎಂದೂ ಹಾಳು ಹರಟೆ ಹೊಡೆದವಳಲ್ಲ. ಸದಾ ಸಾಹಿತ್ಯ ವ್ಯಾಸಂಗ ಸಾಹಿತ್ಯದ ಚಿಂತನ, ಮಂಥನ ನಡೆಸುವ ಶಾಂತಾ ಒಳ್ಳೆಯ ಕತೆಗಾರ್ತಿಯಾಗಿದ್ದಾಳೆ. ಬಾಲ್ಯದಿಂದಲೂ ಕಥೆ, ಕಾದಂಬರಿಗಳನ್ನೋದುವುದರಲ್ಲಿ ಊಟ, ನಿದ್ರೆಗಳನ್ನೇ ಮರೆಯುತ್ತಿದ್ದ ಶಾಂತಾ,

ತಂದೆಯ ಮನೆಯ ಗ್ರಂಥ ಭಂಡಾರ ಬಿಟ್ಟು ಬರುವುದರಲ್ಲಿ, ಪತಿಯ ಮನೆಯಲ್ಲಿಯೂ ಸಾಹಿತ್ಯ ಸಂಪತ್ತನ್ನು ಕಂಡು ಸಂತಸ ಪಟ್ಟಳು. ಆ ಸಂಪತ್ತಿನ ಸದುಪಯೋಗಮಾಡಿ ಕೊಂಡಳು. ಕಣವಿ ದಂಪತಿಗಳ ಒಲವಿನ, ನಲವಿನ, ಸಂತೃಪ್ತ ಜೀವನದಿಂದ ಕನ್ನಡಿಗರ ಮನವನ್ನರಳಿಸುವಂಥ ಸತ್ವಯುತ ಸಾಹಿತ್ಯ ನಿರ್ಮಾಣವಾಗುತ್ತಿದೆ. ಕಣವಿಯವರ ಬಾಳಿನ ಬಂಗಾರದ ಹಬ್ಬದ ವೇಳೆಗಾಗಲೆ ಅವರ ಮದುವೆಯ ಬೆಳ್ಳಿಯ ಹಬ್ಬ ಆಚರಿಸಲಾಯಿತು. ಕಣವಿಯವರ ಮದುವೆಯ ಬಂಗಾರದ ಹಬ್ಬದ ವೇಳೆಗೆ ಅವರ ವಜ್ರಮಹೋತ್ಸವ ಆಚರಿಸುವ ಭಾಗ್ಯ ಕನ್ನಡಿಗರದಾಗಲಿ, ಎಂದು ಅಂತಃಕರಣ ಪೂರ್ವಕ ಹಾರೈಸುತ್ತೇನೆ.

ಗೀತಾ ಕುಲಕರ್ಣಿ

# ಚೆನ್ನವೀರ ಕಣವಿ—ನಾನು ಕಂಡಂತೆ

ಮೊನ್ನೆ ಮೊನ್ನೆ ಅಂದರೆ ಸೆಪ್ಟಂಬರ್ 25 ರಂದು ಕರ್ನಾಟಕ ವಿದ್ಯಾವರ್ಧಕ ಸಂಘ ಶ್ರೀ ಚೆನ್ನವೀರ ಕಣವಿಯವರ 50 ನೆಯ ಹುಟ್ಟು ಹಬ್ಬವನ್ನು ಬಹು ವಿಜೃಂಭಣೆಯಿಂದ ಆಚರಿಸಿತು.

ಸಂಘದ ಹೊರಾಂಗಣದ ಭವ್ಯವೇದಿಕೆಯಲ್ಲಿ ವಿದ್ವಾಂಸರ ನಡುವೆ ಕಣವಿ ಕುಳಿತಿದ್ದಾರೆ ಖುರ್ಚಿಗಂಟಿಕೊಂಡು—"ಇಷ್ಟೆಲ್ಲ ವಿದ್ವನ್ಮಣಿಗಳು ತನ್ನ ಬಗ್ಗೆ ಆಡುವ ಮಾತುಗಳನ್ನು ತಾನು ಕಿವಿಯಾರೆ ಕೇಳಬೇಕಲ್ಲ!" ಎನ್ನುವ ಸಂಕೋಚ ಅಲ್ಲಿ ಮೂಡಿ ನಿಂತಿತ್ತು. ಎದುರಿಗೆ ಕಣ್ಣು ಚಾಚಿದಷ್ಟು ಕಣ್ಣು ತುಂಬಿ ಕುಳಿತ ಜನಸ್ತೋಮ ಕಂಡು ಇನ್ನಷ್ಟು ಮೈಮುದುಡಿಸಿ, ದೃಷ್ಟಿ ಕೆಳಕ್ಕಿರಿಸಿ ಕುಳಿತ ಕಣವಿಯವರ ಆ ನೋಟ ಇನ್ನೂ ಹಾಗೇ ಮಾಸದೆ ಉಳಿದಿದೆ.

ಆ ದಿನ ಅವರ ಬಗೆಗೆ ಆಡಿದ ಡಾ. ಹಾ.ಮಾ. ನಾಯಕ, ಕುಲಪತಿ ಡಾ. ಆರ್. ಸಿ. ಹಿರೇಮಠ, ಶ್ರೀ ಪಾಟೀಲ ಪುಟ್ಟಪ್ಪ, ಶ್ರೀ ದೇಶಪಾಂಡೆ, ಡಾ. ಕಲಬುರ್ಗಿ, ಅವರೆಲ್ಲರ ಮಾತುಗಳು ಯಾವುದೂ ಅತಿಶಯೋಕ್ತಿ ಎನಿಸಲಿಲ್ಲ. ಹೂಮಾಲೆಯಲ್ಲಿ ಮುಚ್ಚಿದ ಕಣವಿ ಭಾರವೆನಿಸಲಿಲ್ಲ; ತಕ್ಕಡಿಯಲ್ಲಿ ಒಂದೆಡೆ ಕಣವಿ ಇನ್ನೊಂದೆಡೆ ಅವರ ಬಗ್ಗೆ ಆಡಿದ ಬೆಲೆಯುಳ್ಳ ಮಾತುಗಳು ಸಮನಾಗಿ, ನಿಂತು ಕೇಳಿದವರಿಗೆಲ್ಲ ಹೌದೆಂದು ತಲೆ ಅಲ್ಲಾಡಿಸುವಂತಾಯಿತು.

ಕಾರ್ಯ ಕಲಾಪಗಳು ನಡೆದಿರುವಾಗಲೇ ಮೋಡ ಕವಿದಿದ್ದ ಬಾನು ಒಂದೇ ಬಾರಿಗೆ ಭೋರೆಂದು ರಭಸದ ಮಳೆಗರೆಯಿತು. ಗುಡುಗು-ಸಿಡಿಲಿನ ಅಬ್ಬರ-ಎಡೆ ಬಿಡದೆ ಸುರಿಯುವ ಮಳೆ! ಭಾಷಣ ಕೇಳುವ ಉತ್ಸುಕತೆಯಲ್ಲಿದ್ದ ಜನತೆಗೆ ಏಳುವ ಎಚ್ಚರವಿಲ್ಲದಿದ್ದರೂ ನೀರು ಮೈಯ ಬಟ್ಟೆ-ತಲೆಗೂದಲನ್ನು ಒದ್ದೆಯಾಗಿಸಿದಾಗ-ಒಂದೇ ಕ್ಷಣದಲ್ಲಿ ಸಂಘದ ಒಳಗಡೆ ಜನರ ನೂಕು ನುಗ್ಗಲು! ಒಳಗಿನ ಸಭಾಗೃಹ ತುಂಬಿ, ಹೊರಗಿನ ವೆರಾಂಡದಲ್ಲೂ ನಿಲ್ಲಲು ಸ್ಥಳ ಸಾಲದಾಯಿತು. ಇತ್ತ ವಿದ್ಯುತ್ತೂ ಕೈಕೊಟ್ಟಿತು! ಆದರೂ ತುಂಬಿದ್ದ ಜನತೆ ಮಳೆ ನೀರಲ್ಲಿ ತೊಯ್ದಿದ್ದ ಬಟ್ಟೆಯಲ್ಲಿ ಪೆಟ್ರೋಮ್ಯಾಕ್ಸಿನ ಬೆಳಕಿನಲ್ಲಿ ನಡೆಯುತ್ತಿದ್ದ ಕಾರ್ಯಕ್ರಮದಲ್ಲಿ ಏನೂ ತೊಂದರೆಯಾಗಿಲ್ಲ ಎನ್ನುವ ಉತ್ಸಾಹದಲ್ಲೇ ನಿಂತು, ಕೂತು ಕೇಳಿದರು.

ಒಬ್ಬ ಕವಿ, ಸಾಹಿತಿ, ವಿಮರ್ಶಕನ ಬಗ್ಗೆ ಇಷ್ಟೊಂದು ಆಸಕ್ತಿ, ವಿಶ್ವಾಸ, ಇರೋದು ನಿಜಕ್ಕೂ ಕನ್ನಡಿಗರು ಆ ಕವಿಯನ್ನು ಪ್ರೀತಿಸೋದಕ್ಕೆ ಸಾಕ್ಷಿಯಲ್ಲವೇ ? ಈ ಪ್ರೀತಿ

ಯನ್ನು ಪಡೆದ ಕಣವಿಯವರ ವ್ಯಕ್ತಿತ್ವವೇ ಅಂಥದ್ದು. ಅವರ ಕಾವ್ಯದಲ್ಲಿ ಸತ್ವ ಶಕ್ತಿ, ಸೌಂದರ್ಯ, ಚಿರಂತನ ಜೀವನದ ಪಸೌಲ್ಯ ಅಡಗಿದೆ.

ಚೆನ್ನವೀರ ಕಣವಿಯವರ ಕಾವ್ಯ ಹಿರಿಯ ಕವಿಗಳ ಸಾಲಿನಲ್ಲೂ ಮೊದಲ ವರ್ಗ ದಲ್ಲೇ ನಿಲ್ಲುತ್ತದೆ. ಹಾಗೆ ಇತ್ತೀಚೆಗಿನ ನವ್ಯ ಕಾವ್ಯದಲ್ಲೂ ಅವರ ಪಟ್ಟ ಭದ್ರವಾಗಿದೆ. ಈಗಿನ ಗುಂಪುಗಾರಿಕೆಯ ದಿನದಲ್ಲೂ ಅವರು ಯಾವ ಗುಂಪಿಗೆ ಸೇರಿದವರು ಎಂದು ಯಾರೂ ಬೆರಳು ಮಾಡಿ ತೋರಿಸುವಂತಿಲ್ಲ. ಎಲ್ಲರಲ್ಲೂ ಒಂದಾಗಿ, ಯಾರಿಗೂ ಕಹಿಯ ನ್ನಾಡದೆ, ಸದಾ ಕಾಲ ಮುಗುಳು ನಗೆಯನ್ನು ಹಸಿಯಾಗಿರಿಸಿಕೊಂಡ ಚೆನ್ನವೀರ ಕಣವಿ ತಮ್ಮ ಬದುಕಿನ 50 ವರ್ಷಗಳಲ್ಲಿ ನಡೆಸಿಕೊಂಡು ಬಂದ ಸುಹೃದಯಿ ಕವಿ !

ಎತ್ತರದ ನಿಲುವು ! ಒಪ್ಪವಾಗಿ ಬಾಚಿದ್ದ ಕ್ರಾಪು ! ಕಪ್ಪು ಫ್ರೇಮಿನ ಕನ್ನಡಕ ! ಕ್ಲೋಜ್ ಕಾಲರಿನ ಕೋಟು ! ಸೌಮ್ಯಮುಖದಲ್ಲಿ ತೂಕ ತಪ್ಪದೆ ನಗುತ್ತಲೇ ಸಂಭಾಷಣೆ ಯಲ್ಲಿ ತೊಡಗಿರುವ ಕಣವಿಯವರನ್ನು ನಾನು ಕಂಡಿದ್ದೇನೆ. ಉದ್ವೇಗ, ಸಿಟ್ಟು ಇನ್ನೊ ಬ್ಬರ ಬಗ್ಗೆ ಕುಹಕದ ಮಾತು ಆಡಿದ್ದನ್ನು ನಾನು ಕೇಳಿಲ್ಲ.

ಕವನ ಎಷ್ಟು ಚೆನ್ನಾಗಿ ಬರೆಯುತ್ತಾರೋ ಅಷ್ಟೇ ಚೆಲುವು ಅವರು ಕೊಡುವ ಉಪನ್ಯಾಸ, ಕೇಳುತ್ತ ಹೋದರೆ ಇನ್ನೂ ಕೇಳ ಬೇಕೆನ್ನುವ ಆಸೆ ಹುಟ್ಟುತ್ತದೆ.

ಚೆನ್ನವೀರ ಕಣವಿ ನನ್ನ ರಕ್ತಸಂಬಂಧಿಯಲ್ಲದಿದ್ದರೂ ಹಾಗೆ ನೋಡಿದರೆ ಒಂದು ಬಗೆಯ ಸೋದರ ಬಾಂಧವ್ಯ ನಮ್ಮದು ಎನ್ನಬೇಕು. ನಾನು ಅದೇ ಮಂಗಳೂರಿನಿಂದ ಬಂದ ಹೊಸದು. ಇಲ್ಲಿಯ ಎಲ್ಲ ಆಚಾರ-ವಿಚಾರವೂ ಹೊಸತೇ. ಸೌ. ಶಾಂತಕ್ಕ ಮಾಳ ವಾಡ ರೋಣದಲ್ಲಿದ್ದ ಅವರ ಚಿಕ್ಕಪ್ಪ, ಚಿಕ್ಕಮ್ಮ ಗಿಡ್ನವರ್ ದಂಪತಿಗಳ ಮನೆಗೆ ಕರೆದು ಕೊಂಡುಹೋದರು. ಆಗಿನ್ನೂ ಕಣವಿಯವರು ಗಿಡ್ನವರ್ ದಂಪತಿಗಳ ಅಳಿಯನಾಗಿರಲಿಲ್ಲ. ಅವರ ಮನೆಯಲ್ಲಿ ಈಗಿನ ಮಾತಿನಲ್ಲಿ ಹೇಳೋದಾದರೆ ಆರತಿ ಎತ್ತುವ ಸಂಖ್ಯೆಯೇ ಜಾಸ್ತಿಯಾಗಿತ್ತು. ಅದರಲ್ಲಿ ಹಿರಿಯ ಮಗಳು ಶಾಂತಕ್ಕ, ಎರಡನೆಯ ನಂಬರ್ ನನ್ನ ಪಾಲಿಗೆ. ಮುಂದಿನ ಅಂಕೆಗಳಲ್ಲಿ ಅವರ ಮಕ್ಕಳನ್ನು ಸಾಲಾಗಿ ಕುಳ್ಳಿರಿಸಿ, ದಿನವೂ ಬಗೆ ಬಗೆಯ ಅಡಿಗೆ ಮಾಡಿ "ಉತ್ತರ ಕರ್ನಾಟಕದ ಊಟದ ರುಚಿ ಹೀಗಿದೆ" ಎಂದು ಒತ್ತಾ ಯದಲ್ಲಿ ಉಣಿಸಿ, ಬದಲಾಗಿ ನನ್ನಿಂದ ತುಳು ಜಾನಪದ ಕಥೆ-ಹಾಡು ಕೇಳಿ ಸಂತೋಷ ಪಟ್ಟಂತೆ, ತಾಯಿ ಇಲ್ಲದ ನನಗೆ ತವರಿನ ಸುಖಕೊಟ್ಟರು. ಅಲ್ಲಿ ಕೆಲದಿನಗಳನ್ನು ಶಾಂತಕ್ಕ ನೊಂದಿಗೆ ತುಂಬ ಉಲ್ಲಾಸದಿಂದ ಕಳೆದಿದ್ದೆ. ಆ ದಿನಗಳನ್ನು ಎಂದೂ ಮರೆಯಲಾರೆ. ಗಿಡ್ನವರ್ ದಂಪತಿಗಳು ನನ್ನನ್ನು ಮಗಳಂತೆ ನೋಡಿಕೊಂಡರು.

ಅವರ ಮನೆಯಲ್ಲೊಂದು ಪುಟ್ಟ ಗ್ರಂಥಾಲಯ. ಆ ಗ್ರಂಥಾಲಯದಲ್ಲಿ ಒಂದು ಪುಸ್ತಕದ ಹುಳ ! ಊಟದ ಎಚ್ಚರವೂ ಇಲ್ಲದೆ ಪುಸ್ತಕದ ಪುಟಗಳನ್ನು ಕೊರೆಯುತ್ತಿದ್ದ ಹುಳ, ಅವಳೇ ನನ್ನ ತಂಗಿ ಶಾಂತಾ !ಗಿಡ್ನವರ್ ದಂಪತಿಗಳ ಮೂರನೆಯ ಮಗಳು, ಈಗ ಕವಿ ಕಣವಿಯವರ ಮುದ್ದುಮಡದಿ ಶಾಂತಾದೇವಿ ಕಣವಿ ! ಕವಿ ಎನ್ನುವ ಮಹಾವೃಕ್ಷದ

ಕೆಳಗೆ ಬೆಳೆದು ನಿಂತ ಕತೆಗಾರ್ತಿ. ಒಂದು ಮಾತು ಇದೆ–ದೊಡ್ಡಮರದ ಕೆಳಗೆ ಯಾವುದೇ ಇನ್ನಿತರ ಮರಗಳು ಬೆಳೆಯಲಾರದು ಎಂದು.

ಆದರೆ ಕಣವಿ ಆ ಜಾತಿಗೆ ಸೇರಿದವರಲ್ಲ. ತಾನು ಬೆಳೆದಂತೆ ತನ್ನ ಮನೆಯಂಗಳ ದಲ್ಲಿ ಬೆಳೆಯುತ್ತಿರುವ ಮಡದಿ, ಮಕ್ಕಳ ಬುದ್ಧಿಗೆ ಸ್ವಾತಂತ್ರ್ಯದ ನೀರು-ಗೊಬ್ಬರವನ್ನಿತ್ತು ಪ್ರೀತಿಯ ಆಸರೆ ಕೊಟ್ಟು-ಚಿಗುರಿಸಿ ಹಚ್ಚ ಹಸುರಾಗಿರಿಸುವ ಕೃಷಿಕನಾಗಿದ್ದಾರೆ.

ಅವರ ಮನೆಯೊಂದು ಮಧು ಬನ! ಅವರು ಕೃತಿಯಲ್ಲಷ್ಟೇ ಕವಿಯಲ್ಲ! ನಿಜ ಜೀವನದಲ್ಲೂ ಕವಿಯಾಗಿ, ಸ್ನೇಹಮಯಿ ಪತಿ, ಒಲವಿನ ಪಿತ, ಮುದ್ದಿನ ಅಳಿಯ, ಆತ್ಮೀಯ ಸ್ನೇಹಿತನಾಗಿ—ಎಲ್ಲರೊಂದಿಗೂ ನಡೆದು ಕೊಂಡು ಬಂದ ಚೆನ್ನವೀರ!

ಈ ಚೆನ್ನವೀರ ಬಹುಕಾಲ ಬದುಕಿ, ಬಾಳಿ, ಕನ್ನಡದ ಕೀರ್ತಿಯ ಕವಿಯಾಗಿ ಮೆರೆ ಯಲಿ—ಎಂದು ಈ ಸೋದರಿಯ ಶುಭ ಹಾರೈಕೆ.

## ಎಚ್. ತಿಪ್ಪೇರುದ್ರಸ್ವಾಮಿ

# ನಾ ಕಂಡ ಕಣವಿ

ಮಿತ್ರರಾದ ಶ್ರೀ ಚೆನ್ನವೀರ ಕಣವಿ ಅವರಿಗೆ ಐವತ್ತು ವರ್ಷ ತುಂಬಿತು ಎನ್ನುವುದು ಅವರ ಸತ್ಕಾರ ಸಮಾರಂಭದ ಆಹ್ವಾನ ಪತ್ರಿಕೆ ಬಂದಾಗಲೇ ನನಗೆ ತಿಳಿದದ್ದು. ಅವರು ನೋಡುವುದಕ್ಕೆ ಇನ್ನೂ ಚಿಕ್ಕವರಂತೆ ಕಾಣುತ್ತಾರೆ. ಆದರೆ ಸಾಧನೆಯ ದೃಷ್ಟಿಯಿಂದ ಚಿಕ್ಕವರಲ್ಲ. ಬಹುಶಃ ವಯಸ್ಸಿಗೆ ಮೀರಿದ ಹಿರಿತನ ಅವರದು. ಕವಿ ಮತ್ತು ವಿಮರ್ಶಕರಾಗಿ ಅವರ ಸಾಹಿತ್ಯ ಸಾಧನೆ ವಿವಾದಾತೀತವಾದದ್ದು. ಅದು ಯಾವುದೇ ಪಂಥದ ಹಣೆಪಟ್ಟಿಯನ್ನು ಅಂಟಿಸಿಕೊಳ್ಳದೆಯೂ, ಪ್ರಯೋಗಶೀಲವಾಗಿದೆ: ಸಮಕಾಲೀನ ಸಂವೇದನೆಗಳ ಪ್ರಾಮಾಣಿಕ ಅಭಿವ್ಯಕ್ತಿಯಾಗಿದೆ.

ಮಿತ್ರರಾಗಿ ಅವರನ್ನು ಬಹಳ ಹತ್ತಿರದಿಂದ ನೋಡಿದ್ದೇನೆ. ಅವರ ಮತ್ತು ಶ್ರೀಮತಿ ಶಾಂತಾದೇವಿ ಕಣವಿ ಅವರ ಆದರದ ಆತಿಥ್ಯವನ್ನು ನಾವು ಧಾರವಾಡಕ್ಕೆ ಹೋದಾಗಲೆಲ್ಲಾ ಪಡೆದಿದ್ದೇವೆ. ನಾಲಗೆಯ ರುಚಿಯೊಡನೆ ಸದಭಿರುಚಿಯನ್ನು ಸಂಗತಗೊಳಿಸುವಂತಹ ಅವರ ಸುಸಂಸ್ಕೃತ ಸ್ನೇಹಪರತೆಯ ಸ್ಮರಣೆಯೇ ಸಂತೋಷದಾಯಕವಾದದ್ದು. ಅವರ ಕಾವ್ಯದಲ್ಲಿ ತುಡಿಯುತ್ತಿರುವ ಭಾವನೆಗಳನ್ನು ಬಲ್ಲವರಿಗೆ ಅವರ ಜೀವನ ಆ ಎಲ್ಲಾ ತುಡಿತ ಮಿಡಿತಗಳನ್ನೂ ತನ್ನೊಳಗೆ ಅಡಗಿಸಿಕೊಂಡ ಮೌನದ ಮಹಾ ಸ್ಪಂದನವಾಗಿ ಕಾಣುತ್ತದೆ.

ತಮ್ಮನ್ನೂ ತಮ್ಮ ಕಾವ್ಯವನ್ನೂ ಅವರು ಎಂದೂ ಹೊಗಳಿಕೊಳ್ಳುವವರಲ್ಲ. ಹೊಗಳಿಕೆಯನ್ನು ನಿರೀಕ್ಷಿಸುವವರೂ ಅಲ್ಲ. ತಮ್ಮ ಕೃತಿಗಳನ್ನು ತಾವೇ ದೂರನಿಂತು ನೋಡಿಕೊಳ್ಳುವಷ್ಟು ನಿರ್ಲಿಪ್ತ ಮನೋಧರ್ಮ ಅವರದು. ಅವರ ಯಾವುದೇ ಒಂದು ಕವನವನ್ನು ನಾವೇ ಮೆಚ್ಚಿ ನುಡಿದಾಗ ಅವರಿಗೆ ಸಂತೋಷವೇನೋ ಆಗುತ್ತದೆ. ಆದರೆ ಅಲ್ಲಿ ಅಹಂಕಾರ ಇಣುಕುವುದಿಲ್ಲ. ಅದು ಅನುಭವದ ಸಂವಾದದಿಂದ ಲಭಿಸುವ ಕೃತಿಕಾರನ ಸಹಜ ತೃಪ್ತಿಯ ರೂಪದಲ್ಲಿ ಮುಗುಳು ನಗೆಯಾಗಿ ಮಿನುಗುತ್ತದೆ.

ಅವರ ಕಾವ್ಯ ದೊಡ್ಡದು ; ಅವರ ವ್ಯಕ್ತಿತ್ವ ಅದಕ್ಕಿಂತ ದೊಡ್ಡದು. ಅನೇಕ ವೇಳೆ ಕವಿಗಳಲ್ಲಿ ಕಾಣುವ ವ್ಯಕ್ತಿತ್ವದ ಬಿರುಕು ಇವರಲ್ಲಿಲ್ಲ. ಏನನ್ನು ಬರೆಯುತ್ತಾರೋ ಅದನ್ನು ಬದುಕುತ್ತಾರೆ. ಏನನ್ನು ಬದುಕುತ್ತಾರೋ ಅದನ್ನು ಬರೆಯುತ್ತಾರೆ. ಬಿರುಗಾಳಿಯಾಗಿ ಭೋರ್ಗರೆಯುವ ಅಬ್ಬರ ಇವರ ನಡೆಯಲ್ಲಿಲ್ಲ, ಅಂತೆಯೇ ನುಡಿಯೂ ಸಹ. ಸದ್ದುಗದ್ದಲವಿಲ್ಲದ ಈ ಬದುಕು ಮತ್ತು ಬರಹ ಎಲ್ಲರಿಗೂ ಮುದವನ್ನೀಯುವ ಮಂದ ಮಾರುತದಂತಹದು. ತಮ್ಮಟೆ ಹೊಡೆಯುತ್ತಾ ತಮ್ಮ ಅಸ್ತಿತ್ವವನ್ನು ಸ್ಥಾಪಿಸಿಕೊಳ್ಳುವ

ಸ್ವೋಪಜ್ಞತೆಯ ಗೀಳಿಗೆ ಇದು ಹೊರತಾದುದು. ಇತರರಂತೆ ಸಹಜವಾಗಿ ಬದುಕಿಯೂ ತನ್ನ ಎತ್ತರವನ್ನು ತೋರಿಸುವ ಸತ್ವವುಳ್ಳದ್ದು.

ಸಾರ್ವಕಾಲಿಕ ಮೌಲ್ಯಗಳ ಕಲಾತ್ಮಕ ಆವಿಷ್ಕಾರಕ್ಕೆ ಈ ಕವಿ-ಚೇತನ ಸದಾ ತುಡಿಯುತ್ತದೆ. ಇದರ ಹಲವು ಹಂತಗಳನ್ನು ಅವರ ಕಾವ್ಯಮಾರ್ಗದಲ್ಲಿ ಗುರುತಿಸಬಹುದು. ಅವರು ಒಳ್ಳೆಯ ವಿಮರ್ಶಕರೂ ಹೌದು. ಸದಭಿರುಚಿ, ಸರ್ವತೋಲನ, ಸೂಕ್ಷ್ಮವಿವೇಚನೆಗಳು ಅವರ ವಿಮರ್ಶೆಯಲ್ಲಿ ಮುಪ್ಪುರಿಗೊಳ್ಳುತ್ತವೆ. ಇದು ಅವರ ಇಡೀ ವ್ಯಕ್ತಿತ್ವಕ್ಕೇ ಅನ್ವಯಿಸುವ ಜೀವನ ದೃಷ್ಟಿಯೂ ಹೌದು. ಅವರು ತುಂಬಾ ಸರಳರು, ಸೌಜನ್ಯಶೀಲರು, ಸ್ನೇಹಪರರು. ಅಂತೆಯೇ ಅಧಿಕಾರಿಗಳಾಗಿ ಕರ್ತವ್ಯನಿಷ್ಠರು, ದಕ್ಷರು. ಕರ್ನಾಟಕ ವಿಶ್ವವಿದ್ಯಾಲಯದ ವ್ಯಾಸಂಗ ವಿಸ್ತರಣ ಮತ್ತು ಪ್ರಕಟನಾ ವಿಭಾಗದ ಕಾರ್ಯಸಾಧನೆಯೇ ಅದಕ್ಕೆ ಸಾಕ್ಷಿ. ಹೀಗೆ ಬಹುಮುಖ ಸಾಧನೆಯ ಹಿರಿತನವನ್ನು ಪಡೆದಿರುವ ಕವಿಚೇತನಕ್ಕೆ ಗೌರವವನ್ನರ್ಪಿಸುವ ಈ ಕಾರ್ಯ ಸ್ತುತ್ಯವಾದುದು. ಇದು ಇನ್ನೂ ಹೆಚ್ಚಿನ ಸೇವೆಯನ್ನು ನಾಡುನುಡಿಗಳಿಗೆ ಸಲ್ಲಿಸುವುದಕ್ಕೆ ಶ್ರೀ ಕಣವಿಯವರಿಗೆ ಪ್ರೋತ್ಸಾಹದಾಯಕವಾಗಲಿ ಎಂದು ಹಾರೈಸುತ್ತೇನೆ.

## ಪಿ. ಲಂಕೇಶ

# ಪ್ರಶಾಂತ ಬದುಕಿನಲ್ಲಿ ಒಂದೆರಡು ಅಲೆಗಳು

ಚೆನ್ನವೀರ ಕಣವಿಯವರ ನೆನಪು...ನಾನು ಹೈಸ್ಕೂಲಿನಲ್ಲಿದ್ದಾಗ ಅವರ ಗಾಂಧಿ ಕುರಿತ ಕವನವನ್ನು ಕಂಠಪಾಠ ಸ್ಪರ್ಧೆಯಲ್ಲಿ ಹೇಳಿ ಮೊದಲ ಬಹುಮಾನ ಪಡೆದಾಗಿನಿಂದ ಶುರುವಾಗುತ್ತದೆ. ಅದು ಅವರ ಸಾನೆಟ್. ಗಾಂಧೀಜಿಯ ಬಗ್ಗೆ ನನ್ನ ಅಭಿಮಾನ ಆ ಕವನ ದಿಂದ ಆರಂಭವಾಗಿದ್ದರೆ ಆಶ್ಚರ್ಯವಿಲ್ಲ. ಆಮೇಲೆ ಅವರ ಪುಸ್ತಕವೊಂದನ್ನು ನಾನು 'ಚಿತ್ರಗುಪ್ತ' ವಾರಪತ್ರಿಕೆಯಲ್ಲಿ ರಿವ್ಯೂ ಮಾಡಿದ್ದೆ. ನಾನು ಕಣವಿಯವರ ಭಾವನಾತ್ಮಕತೆ ಮತ್ತು ಸೌಂದರ್ಯ ಪಕ್ಷಪಾತವನ್ನು ಆ ರಿವ್ಯೂನಲ್ಲಿ ಟೀಕಿಸಿದ್ದೆ. ಸ್ವಾಭಾವಿಕವಾಗಿಯೇ ನನ್ನ ಮಾತುಗಳು ಅವರಿಗೆ ಹಿಡಿಸಿರಲಾರವು. ಆದರೆ ಅದರಿಂದ ಆದದ್ದೇನೆಂದರೆ-ನನ್ನ ಹೆಸರು ಅವರ ನೆನಪಿನಲ್ಲಿತ್ತು. ಡಾ। ಶಿವರುದ್ರಪ್ಪನವರು (ಆಗಿನ್ನೂ ಅವರು ಡಾಕ್ಟರಾಗಿರಲಿಲ್ಲ) ನನ್ನನ್ನು ಒಂದು ದಿನ ಕಣವಿಯವರನ್ನು ನೋಡಲು ಕರೆದೊಯ್ದರು. ಕಣವಿ ನಾನು ತಿಳಿದ ದ್ದಕ್ಕಿಂತ ಸ್ಫುರದ್ರೂಪಿಯಾಗಿದ್ದರು ; ನಾನು ಊಹಿಸಿದ್ದಕ್ಕಿಂತ ತಮಾಷೆ ಸ್ವಭಾವದವರಾಗಿ ದ್ದರು. ಅವತ್ತು ನಾನವರೊಂದಿಗೆ ಮಾತಾಡಿದ್ದು ನೆನಪಿಲ್ಲ ; ಮಾತಾಡಲು ನನ್ನ ಅವರ ನಡುವೆ ಅಂಥ ಸಾಮಾನ್ಯ ಅಂಶಗಳಾವುವೂ ಇರಲಿಲ್ಲ. ಅವರು ಮತ್ತು ಶಿವರುದ್ರಪ್ಪ ತುಂಬ ಸ್ನೇಹಿತರೆಂಬುದು ಮಾತ್ರ ನನಗೆ ಗೊತ್ತಾಯಿತು ; ಯಾಕೆಂದರೆ ಅವರಿಬ್ಬರೂ ಸೇರಿದಾಗ ಮಾತ್ರ ಮಾಡುವಂತೆ ಅವತ್ತೂ ಸಿಗರೇಟು ಹಚ್ಚಿ ಸೇದಿದರು. ನನಗೆ ನೆನಪಿರುವಂತೆ, ಇಬ್ಬರಿಗೂ ಸಿಗರೇಟನ್ನು ಹಿಡಿಯುವ ಶೈಲಿ ಕೂಡ ಗೊತ್ತಿಲ್ಲ (ಅಥವಾ ಗೊತ್ತಿರಲಿಲ್ಲ).

ನಾನು ಬಲ್ಲ ವ್ಯಕ್ತಿಗಳಲ್ಲಿ ಅತ್ಯಂತ ಋಜು ಸ್ವಭಾವದ ಮನುಷ್ಯ ಕಣವಿಯವರು. ಅವರು, ಅವರ ಪತ್ನಿ ಮತ್ತು ಮಕ್ಕಳು ಸದಾ ಸುಖ ಮತ್ತು ಶಾಂತಿಯಲ್ಲಿ ಸ್ಥಾಪಿತರಾದ ವರಂತೆ ನನಗೆ ಕಂಡರು. ನಾನು ನಾಲ್ಕೈದು ಸಲ ಧಾರವಾಡಕ್ಕೆ ಹೋದಾಗಲೆಲ್ಲಾ ಮನೆಗೆ ಕರೆದು ತಿಂಡಿ, ಹಣ್ಣು ಇತ್ಯಾದಿ ಕೊಟ್ಟರು. ಅತಿಥಿಗಳ ಬಗ್ಗೆ ಅವರ ಪ್ರೀತಿ, ಅಭಿಮಾನ ಮತ್ತು ಸಹನೆಯನ್ನು ನೋಡಿ ನನಗೆ ಅಸೂಯೆಯಾಯಿತು. ನಾನೊಬ್ಬ ಭಾರತದ ಪ್ರಧಾನಿಯೋ ಎಂಬಂತೆ ನನ್ನನ್ನು ತಮ್ಮ ಮನೆಯ ಕೋಣೆ ಕೋಣೆಗಳಿಗೆ ಕರೆದೊಯ್ದು ತೋರಿಸಿದರು. ಧಾರವಾಡದ ಸೊಂಪಾಗಿ ಬೆಳೆದ ಮರಗಿಡಗಳು, ಕಾಯಿಪಲ್ಲೆ, ನಡುವೆ ನಿಂತ ನಸುಗೆಂಪು ಬಣ್ಣದ (ಕಣವಿಯವರು ಬರೆಯುವ ಕೋಣೆಯುಳ್ಳ) ಮಹಡಿ ಇತ್ಯಾದಿ ಯನ್ನು ನಾನು ತಲೆದೂಗುತ್ತಾ ನೋಡಿದೆ. ಅಂದವಾಗಿ ಜೋಡಿಸಿದ ಪುಸ್ತಕಗಳು, ತುಂಬ ಬುದ್ಧಿವಂತರಾದ ಮಕ್ಕಳು, ಒಬ್ಬ ಭೌತಶಾಸ್ತ್ರದಲ್ಲಿ ಪರಿಣತ, ಇನ್ನೊಬ್ಬ ಕ್ರಿಕೆಟ್ ಆಟದಲ್ಲಿ ಚಾಣಾಕ್ಷ, ಇರುವ ಒಬ್ಬಳು ಮಗಳು ಮನೆಯವರೆಲ್ಲರ ಪ್ರೀತಿಯ ಹೆಣ್ಣು...

ಈ ಮನೆಯ ಸೌಖ್ಯ ಮತ್ತು ಶಾಂತಿಗೆ ಗಾಢವಾದ ಸಂಸ್ಕೃತಿ ಆಧಾರವಾಗಿತ್ತು. ಕೇವಲ ಭಾವನಾತ್ಮತೆಯನ್ನಾಗಲಿ, ಬೋಳೆತನವನ್ನಾಗಲಿ ಇಲ್ಲದೆ ಹೊಂದಿಕೊಂಡು ನಡೆಯುತ್ತಿದ್ದ ಸಂಸಾರದಲ್ಲಿ ನಾನು ಕಂಡ ಕಸಿವಿಸಿ— ಕಣವಿಯವರಿಗೆ ಕಾಮಾಲೆ ರೋಗ ಬಂದದ್ದು ಮತ್ತು ವರ್ಷವರ್ಷಕ್ಕೆ ಕಣವಿಯವರು ಸಪೂರಾಗುತ್ತ ಕೇವಲ ಒಳ್ಳೆಯತನವೇ ಓಡಾಡುತ್ತಿದ್ದಂತೆ ಕಾಣತೊಡಗಿದ್ದು, ಇದಕ್ಕೇನೆನ್ನುವುದು ? ಪ್ರಕೃತಿಯ ಸೇಡೆನ್ನುವುದೆ ? ಅನ್ಯಾಯವೆನ್ನುವುದೆ ? ಎಲ್ಲ ಸಾತ್ವಿಕ ಮನುಷ್ಯರಿಗಾಗಿ ವಿಧಿ (ಅದೇನದು ?) ಕಾಯ್ದಿರಿಸಿದ ನೋವೆನ್ನುವುದೆ ? ಅಂತೂ ಕಣವಿಯವರ ವರ್ಷಗಳು ಮತ್ತು ಕಾಯಿಲೆ ಅವರ ಸಂತೋಷವನ್ನಾಗಲಿ, ಒಳ್ಳೆಯತನವನ್ನಾಗಲಿ ಅಲ್ಲಾಡಿಸಲಿಲ್ಲ.

ಇಷ್ಟು ಹೇಳಲು ನಾನು ಈ ಪ್ರೀತಿಯ ವ್ಯಕ್ತಿಯ ಬಗ್ಗೆ ಬರೆಯಲು ತೊಡಗಬೇಕಾದ ಆಗತ್ಯವಿರಲಿಲ್ಲ, ಪದ್ಯಗಳನ್ನು ಚೆನ್ನಾಗಿ ಬರೆದು, ಪ್ರಶಾಂತವಾಗಿ ಸಂಸಾರ ಮಾಡಿ, ನಾಲ್ಕು ಜನಕ್ಕೆ ಸಹಾಯಕರಾಗಿದ್ದು, ಪ್ರಸಾರಾಂಗದಂಥ ಒಂದು ಇಲಾಖೆಯನ್ನು ಸಮರ್ಥವಾಗಿ ನೋಡಿಕೊಂಡು...ಒಬ್ಬ ಮನುಷ್ಯ ಇನ್ನೆಷ್ಟು ಮಾಡಲು ಸಾಧ್ಯ ? ಆದರೆ ತುಂಬಿದ ಸಂಸಾರದ ಕಣವಿಯವರ ಲೋಕದಲ್ಲಿ ಹೊಸ ಅನುಭವ, ಅನ್ಯತೆಗಳು ದಾಳಿ ನಡೆಸತೊಡಗಿದವು. ಸೊರಗಿದ ಕಣವಿಯವರು ಒಂದು ದಿನ ತಮ್ಮ ಮಗನೊಬ್ಬ ಇತ್ತೀಚೆಗೆ ಅಮೆರಿಕೆಯಿಂದ ಕ್ರಾಂತಿಯ ಕನಸು ತುಂಬಿದ ಪತ್ರಗಳನ್ನು ಬರೆಯುತ್ತಿರುವ ಬಗ್ಗೆ ಹೇಳಿದರು. ಈ ಹುಡುಗ ನನಗೂ ಪರಿಚಿತ. ನನ್ನ ಕತೆ, ಕಾದಂಬರಿ, ನಾಟಕ ಇತ್ಯಾದಿ ಕುರಿತು ದೀರ್ಘ ಪತ್ರ ಬರೆದು ಚರ್ಚಿಸಿದ್ದ. ಆತನ ನಿಲುವು ಹೇಗಿದ್ದರೂ ತುಂಬ ಬುದ್ಧಿವಂತ ಎಂಬ ಬಗ್ಗೆ ನನಗೆ ಅನುಮಾನವಿರಲಿಲ್ಲ. ಎಲ್ಲ ತಂದೆಯರ ಹಾಗೆಯೇ ಕಣವಿಯವರೂ ತಮ್ಮ ಮಗ ಅಮೆರಿಕೆಯಲ್ಲಿ ಚೆನ್ನಾಗಿ ಓದಿ, ಡಾಕ್ಟರೇಟ್ ಇತ್ಯಾದಿ ಪಡೆದು, ಮದುವೆಯಾಗಿ ಒಟ್ಟಿನಲ್ಲಿ ಹೆತ್ತವರಿಗೆ ತಲೆನೋವು ತಾರದಿದ್ದರೆ ಸಾಕೆಂದು ಲೆಕ್ಕಹಾಕಿದ್ದರು. ಆದರೆ ಮಗ ಅವರ ಎಲ್ಲ ಲೆಕ್ಕ ತಿರುವುಮುರುವು ಮಾಡಿದಂತೆ ಕಂಡ. ನಾನು ಹುಡುಗನ ಪರವಾಗಿ ಕಣವಿಯವರಿಗೆ ಬರೆದರೂ—ಕಣವಿಯವರು ಕಳೆದುಕೊಳ್ಳತೊಡಗಿದ್ದ ನೆಮ್ಮದಿ ನನ್ನನ್ನು ಅಲ್ಲಾಡಿಸಿತ್ತು. ಆಸ್ತಿಪಾಸ್ತಿ ಹಣಕಾಸು ಅಧಿಕಾರ ಯಾವುದಕ್ಕಾಗಿಯೂ ಹೋರಾಡದೆ ತಮಗೆನ್ನಿಸಿದ್ದನ್ನು ಬರೆದು ಸಜ್ಜನರಾಗಿ ಬದುಕಬೇಕೆಂಬ ವ್ಯಕ್ತಿಗಳಿಗೆ ಮಗನ ಹೊಸ ಭಾವನೆಗಳು ವಿಚಿತ್ರವಾಗಿ ಕಂಡವು. ನಿಜಕ್ಕೂ ಕಣವಿ ಜೀವನದ ವ್ಯವಹಾರದಲ್ಲಿ, ಸಾಧ್ಯತೆಗಳಲ್ಲಿ, ತಲ್ಲಣಗಳಲ್ಲಿ ಭಾಗವಹಿಸತೊಡಗಿದ್ದು ಈ 'ಪುತ್ರವ್ಯವಹಾರ'ದಿಂದಲೇ ಎಂದು ಕಾಣುತ್ತದೆ, ಆದರೆ ಈ ಪುತ್ರ ತಮ್ಮ ತಂದೆಯನ್ನು ಅನಗತ್ಯವಾಗಿ ಬೇಸರಪಡಿಸುವ ಆಗತ್ಯವಿಲ್ಲವೆಂದು ಆತನಿಗೆ ಒಂದು ಪತ್ರ ಹಾಕಿದೆ. ಆತ ಅದರಿಂದ ಬದಲಾದ ಹಾಗೆ ಕಾಣಲಿಲ್ಲವಾದರೂ ನನ್ನ ಕೆಲಸ ನಾನು ಮಾಡಿದ ತೃಪ್ತಿ ಪಡೆದೆ.

ಯಾವ ಸ್ನೇಹವಾಗಲಿ, ಸಂಸಾರವಾಗಲಿ, ಸಂಬಂಧವಾಗಲಿ, ಸ್ಥಗಿತಗೊಂಡ ಸ್ಥಿತಿಯಲ್ಲ. ನಿತ್ಯ ಒಳಗೊಳ್ಳಬೇಕಾದ, ಚಿಗುರೊಡೆದು ಬೆಳೆಯಬೇಕಾದ, ನೋವು ನಲಿವು

ಎರಡನ್ನು ಭರಿಸಬೇಕಾದ ಅಂಶ. ನಮ್ಮೆಲ್ಲರಿಗಿಂತ ಮುಂಚೆ ಕಣವಿಯವರಿಗೇ ಇದು ಗೊತ್ತಾಗಿದೆಯೆಂದು ನನ್ನ ನಂಬಿಕೆ. ಎಲ್ಲ ಅರ್ಥಮಾಡಿಕೊಳ್ಳುವಿಕೆಗೆ ಪ್ರೀತಿ ಮತ್ತು ನೋವು ಆಧಾರ. ಅದು ಕಣವಿಯವರಲ್ಲಿ ಅಲ್ಲದೆ ಮತ್ತೆಲ್ಲಿ ಕಾಣಲು ಸಾಧ್ಯ?

## ಎಚ್. ಎಂ. ಮರುಳಸಿದ್ಧಯ್ಯ

# ಬದುಕು—ಬರೆಹಗಳ ಸಮತೂಕ

ಹೀಗೇ ಅದೂ ಇದೂ ಮಾತನಾಡುತ್ತಾ ಇದ್ದಾಗ, "**ಬರ** ಮತ್ತು **ಬೇಕು** ಎಂಬ ಎರಡು ಶಬ್ದಗಳನ್ನು ಕೂಡಿಸಿ ಬರೆಯಬೇಕೊ, ಬಿಡಿಬಿಡಿಸಿ ಬರೆಯಬೇಕೊ ? ಯಾವುದು ಸರಿ ?" ಎಂದು ಚೆನ್ನವೀರ ಕಣವಿಯವರನ್ನು ಕೇಳಿದೆ. "**ಬರ** ನಿಮಗೆ **ಬೇಕು** ಎಂಬುದಾದರೆ ಅವನ್ನು ಬಿಡಿಬಿಡಿಸಿ ಬರೆಯಿರಿ; ಬೇರೆ ಏನಾದರೂ ನಿಮಗೆ ಬೇಕು ಎನ್ನು ವುದಾದರೆ ನಿಮಗೆ ಬೇಕಾದುದರ ಜೊತೆಗೆ ಈ ಎರಡು ಶಬ್ದಗಳನ್ನೂ ಹತ್ತಿರ ಹತ್ತಿರ ಬರೆಯಿರಿ" ಎಂದರು. "**ಬಿಡಿಸಿ** ಮತ್ತು **ಬರೆಯಿರಿ** ಈ ಎರಡನ್ನು **ಬಿಡಿಸಿ ಬರೆಯ ಬೇಕೊ,** ಅಥವಾ **ಕೂಡಿಸಿಬರೆಯಬೇಕೊ ?**" ಎಂದು ಉಪಪ್ರಶ್ನೆ ಹಾಕಿದೆ. "ಆ ಎರಡು ಕೂಡಿದಂತಿದ್ದರೂ ಬಿಡಿಬಿಡಿಯಾಗಿರಬೇಕು; ತೀರಾ ಬೇರೆ ಬೇರೆ ಎಂಬಷ್ಟು ದೂರವೂ ಅವು ಇರಬಾರದು, ಒಂದೇ ಎಂಬಷ್ಟು ಹತ್ತಿರವೂ ಇರಬಾರದು" ಎಂಬುದು ಅವರ ಉತ್ತರ.

ಇಂಗ್ಲಿಷ್ ಶಬ್ದಗಳ ಜೋಡಣೆಯ ಪರಿಯೇ ಬೇರೆ, ನೋಡಿ. ಇಂಗ್ಲಿಷ್ ಅಕ್ಷರ ಗಳನ್ನು ಕೂಡಿಸಿಯೇ ಬರೆಯುತ್ತೇವೆ ಒಂದು ಶಬ್ದವಾಗಲು. ಕೆಲವು ಶಬ್ದಗಳನ್ನು ಹೈಫನ್ ಹಾಕಿ ಬರೆಯುತ್ತೇವೆ. ಆದರೆ ಕನ್ನಡದಲ್ಲಿ ಯಾವ ಯಾವ ಶಬ್ದಗಳು ಕೂಡಿದ್ದರೆ ಚೆನ್ನು, ಬಿಡಿಬಿಡಿಯಾಗಿದ್ದರೆ ಸರಿ, ಎಂದು ಹೇಳುವುದು ಹಲವೊಮ್ಮೆ ಕಷ್ಟವಾಗುತ್ತದೆ, ನನಗಂತೂ. ನಿಮಗೆ ಹೇಗೊ ! ಬಹುಶಃ ಕಣವಿಯವರ ಪರಿಹಾರ ತೀರ ಬಿಟ್ಟೂ ಇರದ, ತೀರಾ ಕೂಡಿಯೂ ಇರದ ಸ್ಥಿತಿಯನ್ನು ಕಾಪಾಡಿಕೊಂಡು ಬರಬೇಕೆಂಬುದು. ಕಿಚ್ಚಿನೊಳಗೆ ಬೈಚಿಟ್ಟ ಕೋಲಿನಂತೆ, ಬಹುಶಃ.

ಕಣವಿಯವರ ಈ ದೃಷ್ಟಿ ಅವರ ಪ್ರತಿಯೊಂದು ಆಲೋಚನೆಗೆ, ಮಾತಿಗೆ, ಚರ್ಯೆಗೆ ಅಡಿಪಾಯವಾಗಿದೆ ಎಂದೆನಿಸುತ್ತದೆ.

ಕಣವಿಯವರು ಕರ್ನಾಟಕ ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗ, ಅವರಿವರು ಅವರ ಕಡೆ ಆಸೆಗಂಗಳಿಂದ ನೋಡಃವಾಗಿಸ ಪ್ರಾಯದಲ್ಲಿ, ಧಾರವಾಡದ ಉಳವಿಬಸಪ್ಪ ಗುಡ್ಡದ ಏರಿನ, ಅನ್ವರ ಮಾಲೀಕತ್ವದ ಬಾಡಿಗೆಯ ಖೋಲಿ—ತಾವೇ ಹೆಸರಿರಿಸಿಕೊಂಡ **'ಚೆಂಬೆಳಕು'** ಅವರ ವಾಸಸ್ಥಾನ. ಅಂದು (1949) ನಾನು ಕೊಟ್ಟೂರು ಹೈಸ್ಕೂಲಿನ ವಿದ್ಯಾರ್ಥಿ, ಹುಬ್ಬಳ್ಳಿಯ ಕುವೆಂಪು ಸಂಘದವರು ನಡೆಸಿದ ಕವಿತಾ ಸ್ಪರ್ಧೆಯಲ್ಲಿ ಭಾಗವ ಹಿಸಿ, ಬಹುಮಾನ ಪಡೆಯಲು ಹೋಗಿದ್ದಾಗ, ಅವರ ಪರಿಚಯದ ಅಂಕುರಾರ್ಪಣ ವಾಯಿತು. ಅದೇ ಧಾರವಾಡದ ಕಲ್ಯಾಣನಗರದ ಇಳಿಜಾರಿನಲ್ಲಿ ತಳವೂರಿದ ಅವರ

ಮಾಲೀಕತ್ವದ 'ಚೆಂಬೆಳಕು' ಮನೆಗೆ ಅವರು ಹೋಗಿ ವಾಸಿಸತೊಡಗಿದ್ದು 1972ರ ಅವಧಿಯಲ್ಲಿ. ಚೆನ್ನಬಸವಣ್ಣ ಕಲ್ಯಾಣವನ್ನು ಬಿಟ್ಟು ಉಳವಿಗೆ ಹೋದ; ಚೆನ್ನವೀರ ಉಳವಿಗುಡ್ಡ ಬಿಟ್ಟು ಕಲ್ಯಾಣ ನಗರಕ್ಕೆ ಹೋದ. ಆದರೆ ಇಬ್ಬರೂ ಕೊಂಡು ಒಯ್ದುದ್ದು ಸುಜ್ಞಾನ ಹಾಗೂ ಚೆಂಬೆಳಕು. ಈ ಎರಡು ದಶಕಗಳ ಅವಧಿಯಲ್ಲಿ ನಾನು ಕೊಟ್ಟೂರು ಬಿಟ್ಟು ಮೈಸೂರು, ದಿಲ್ಲಿ, ಕೊಯಂಬತ್ತೂರು, ಗುಲಬರ್ಗಾಗಳನ್ನು ವಿದ್ಯಾರ್ಜನೆಗಾಗಿ, ಅನ್ನಾರ್ಜನೆಗಾಗಿ ಅಂಡಲೆದು ಧಾರವಾಡ ಸೇರಿದ್ದೆ ; ಕಣವಿ ಧಾರವಾಡದಲ್ಲೇ ಕುಳಿತು ಹತ್ತು ದಿಕ್ಕುಗಳ ಮುತ್ತುರತ್ನಗಳನ್ನು ಸಂಪಾದಿಸಿ ಸಂಪನ್ನರಾಗಿದ್ದರು. 1949 ರಿಂದ 1959ರ ಅವಧಿ ಅವರ ನನ್ನ ಸಂಬಂಧವು ಪರಿಚಯದ ಸ್ತರದಲ್ಲೇ ಇತ್ತು ; 1959 ರಿಂದ ಅದು ಸ್ನೇಹದ ಸ್ತರಕ್ಕೆ ವಿಸ್ತರಿಸಿತು; ಪರಿಚಯದ ಮೊಗ್ಗು ಸ್ನೇಹವಾಗಿ ಅರಳಿತು.

(ಧಾರವಾಡದಲ್ಲಿ ನಾನಿದ್ದಾಗ) ಬೆಳಗಿನ ವಿಹಾರ, ಆಗೀಗ ಕೂಡಿದಾಗಿನ ಕುಶಲ ಮಾತುಕತೆ, ಭಾಷಣ ಕಾರ್ಯಕ್ರಮಗಳಿಗಾಗಿ ಆ ಈ ಊರುಗಳ ಅಲೆದಾಟ, ವಿಶ್ವ ವಿದ್ಯಾಲಯದ ಹಲವಾರು ಅಧಿಕೃತ, ಅಂತೆಯೇ ಅನಧಿಕೃತ, ಕಾರ್ಯಕಲಾಪಗಳಲ್ಲಿ ಪಾಲ್ಗೊಳ್ಳುವಿಕೆ—ಹೀಗೆಯೇ ಅನೇಕ ಸಮಯ ಸಂದರ್ಭಗಳಲ್ಲಿ ಅವರ ದೃಷ್ಟಿ—ನಡ ವಳಿಕೆಯನ್ನು, ಅವರ ಕೌಟುಂಬಿಕ ಮತ್ತಿತರ ಸ್ಥಿತಿಗತಿಗಳನ್ನು ಅವಲೋಕಿಸುವ, ಅನು ಭವಿಸುವ ಅವಕಾಶ ನನಗೆ ಒದಗುತ್ತಿತ್ತು ; ಈಗಲೂ ಈ ದೂರದಿಂದಲೂ, ಅಲ್ಪ ಪ್ರಮಾಣದಲ್ಲಾದರೂ, ಒದಗುತ್ತಿದೆ. ಈ ಎಲ್ಲ ಸಂದರ್ಭಗಳಲ್ಲೂ ನನ್ನ ಕಣ್ಮುಂದೆ ಬರುವ ಪ್ರತಿಮೆ 'ತೂಕ', 'ತಕ್ಕಡಿ'. ಅವರಿಗೆ ಇದನ್ನು ತಂದು ಒದಗಿಸಿದವರು ಬಹುಶಃ ಶ್ರೀಮತಿ ಶಾಂತಾದೇವಿ ಕಣವಿ. ಅರ್ಧಕಾಣಿಯ ಗೆಲ್ಲ, ಅರ್ಧಕಾಣಿಯ ಸೋಲ ನಮ್ಮ ಚೆನ್ನವೀರ ಶೆಟ್ಟಿ ! ಎಂದು ಆಗೀಗ ನನಗೆ ಅನ್ನಿಸುವುದುಂಟು.

ಕಣವಿಯವರ ಹೆಸರೇ ಎರಡು (ಬಹುಶಃ) ವಿರುದ್ಧ ಗುಣಗಳ ಪದಗಳನ್ನು ಹೊಂದಿದ ಸಂಯುಕ್ತ ಶಬ್ದ : '**ಚೆನ್ನ**' ಮತ್ತು '**ವೀರ**'. ಇವರ ಈ ಹೆಸರನ್ನು ಸ್ವಾರ ಸ್ಯವಾಗಿ ವ್ಯಾಖ್ಯಾನಿಸುವುದನ್ನು ಡಾ. ಡಿ. ಎಸ್. ಕರ್ಕಿಯವರ ಬಾಯಿಂದಲೇ ಕೇಳಬೇಕು. ವೀರಕ್ಕೂ ಒಂದು ಚೆಲುವನ್ನು, ಚೆಲುವಿಗೂ ಒಂದು ವೀರವನ್ನು ತಂದು ನವೀನ ಅರ್ಥ ಶಕ್ತಿಯನ್ನು ತರುವ ಸಮೀಕೃತ ಹೆಸರು ಇವರಿಗಿದೆ.

ಕಣವಿಯವರು ಕುಳ್ಳಲ್ಲ; ಸ್ವಲ್ಪ ಎತ್ತರವೇ ಅನ್ನಿ. ಅವರ ದೈಹಿಕ ಆರೋಗ್ಯ ಹಿಂದೆ,—ಅಂದರೆ ಇಪ್ಪತ್ತೈದು ಮೂವತ್ತು ವರ್ಷಗಳ ಹಿಂದೆ,—ಹೇಗಿತ್ತೊ ನಾನರಿಯೆ. ಈಗಂತೂ ಅವರು ಸದೃಢಕಾಯರೇನೂ ಅಲ್ಲ. ಹಾಗೆಂದು ನರಳುತ್ತ ಹಾಸಿಗೆ ಹಿಡಿದು ಸುಮ್ಮನೇ ಕಾಲಹರಣ ಮಾಡುವವರಲ್ಲ. ಅವರಿಗಿರುವ ಗ್ಯಾಸ್‌ಟ್ರಿಕ್ ಆಗಾಗ ಅವರ ಮೇಲೆ ಬೀರುತ್ತಿರುವ **ಟ್ರಿಕ್** ಬಗೆಗೆ ಅವರಿಂದಲೇ ವಿವರ ತಿಳಿಯಬೇಕು. ಆ ಗ್ಯಾಸ್ ಟ್ರಿಕ್ ತಮ್ಮ ಅಂಗ-ರಂಗದ ಒಳಹೊರಗೆ ದಶಾವತಾರದ ನಾಟಕವಾಡುವುದನ್ನು ಅವರು ಮ್ಲಾನವದನದಲ್ಲೂ ನಗು ನಗುತ್ತಲೇ ಬಣ್ಣಿಸುತ್ತಾರೆ. ಅವರ ಪ್ರಯೋಗ ಎಲ್ಲ ಔಷಧ

ಕ್ರಮಗಳ ಪಾಲನೆ—ಪ್ರತಿಪಾದನೆಯಲ್ಲಿ ಶ್ರದ್ಧಾಪೂರ್ಣವಾಗಿಯೇ ನಡೆಯುತ್ತಲೇ ಇದೆ : ದೇಶೀ ವೈದ್ಯ, ಆಯುರ್ವೇದ, ಅಲೋಪತಿ, ಹೋಮಿಯೋಪತಿ—ಯಾವ ಪತಿಯೂ ಇವರನ್ನು—ಅಂದರೆ, ಇವರ ರೋಗವನ್ನು—ಸಂಪೂರ್ಣವಾಗಿ ಅಂಕೆಯಲ್ಲಿ ಇರಿಸಲಾಗಿಲ್ಲ. ಇವರೂ ಹಾಗೆಯೇ ತಾನೆ ?

ಕಣವಿ ನಡೆದಾಡುವುದು ಕೋಲು ಅಲ್ಲಾಡದೆ ನಡೆಯುವಂತಲ್ಲ. ಎತ್ತರದ ಅಡಕೆ ತೂಗುತ್ತಿರುವಂತೆ. ಆದರೆ ಅವರ ಜೀವನ-ನಡೆ ಮಾತ್ರ ನೇರ; ಅಸ್ಪಷ್ಟವಲ್ಲ. ಅವರ ಮನೆಯವರು ಎನ್ನುವಂತೆ ತಾವೇ ಸಾಕಿ ಸಲಿಗೆ ಕೊಟ್ಟ ನಾಯಿ, ಮನು ಅವರ ಮಾತನ್ನೇನೂ ನಡೆಸಿದಂತೆ ಕಾಣುವುದಿಲ್ಲ. ತಮ್ಮ ಮಾತು ನಡೆಯಬೇಕೆಂಬುವ ಹಟದವ ರೇನೂ ಕಣವಿಯವರಲ್ಲ.

ಕಣವಿ ಓರಣಕ್ಕೆ, ಅಚ್ಚುಕಟ್ಟುತನಕ್ಕೆ, ಆಗಿನ ಕೆಲಸ ಆಗಲೇ ಮುಗಿಸುವುದಕ್ಕೆ, ಸ್ವಚ್ಛ ಕೈಗೆ ಹೆಸರಾದವರು. ಅವರ ಮನೆ ತುಂಬಿದೆ—ಪುಸ್ತಕ ಪತ್ರಿಕೆಗಳಿಂದ, ಅರಿವೆ ಅಂಚಡಿಗಳಿಂದ, ಸಾಮಗ್ರಿ-ಸರಂಜಾಮುಗಳಿಂದ, ಕುರ್ಚಿಮೇಜುಗಳಿಂದ, ಕಪಾಟು-ಪಲ್ಲಂಗ ಗಳಿಂದ, ಮಕ್ಕಳಿಂದ. ಆದರೆ, ಕಾಲಿಡಲಿಂಬಿಲ್ಲ ಎಂಬಲ್ಲಿಯೂ ಇಂಬು ಮಾಡುತ್ತಾರೆ; ಬಯಲು ಆಲಯದ ನಡುವಿನದನ್ನು ಗೆದ್ದುಕೊಂಡು ಸಮತೋಲನವನ್ನು ಕಾಪಾಡುವ ಸಾಮರ್ಥ್ಯವನ್ನು ಅವರು ಪಡೆದಿರುವುದರಿಂದ ಇದು ಅವರಿಗೆ ಸಾಧ್ಯವಾಗಿದೆ.

ಆನಂದ, ಚಂದ್ರ, ರಂಜನಾ, ಪ್ರಿಯ ಮತ್ತು ಕರುಣೆ—ಈ ಐವರ ಮಧ್ಯದಲ್ಲಿ ರಂಜನಾ, ಮಗಳು, (ಅಂದು) ಮರಿದುಂಬಿ ಗುಂಜನ :

ಆನಂದ ಬಂದರಿವಳಾಡಿಸುವನು
ಚಂದ್ರ ಒಂದೇ ಸವನೆ ಕಾಡಿಸುವನು
ಮೂವರೂ ಕೂಡಿದರೆ ಮೂರು ಲೋಕಕು ದಾಳಿ
ಯಾವ ದೇವರು ಬಂದು ಬಿಡಿಸುವವನು ?

ಈ ಪ್ರಶ್ನೆಗೆ ಉತ್ತರವಾಗಿ, ಉತ್ತರೋತ್ತರವಾಗಿ, ಬಹುಶಃ ಪ್ರಿಯ ಮತ್ತು ಕರುಣೆಯರನ್ನು ದೇವರು ಕಳಿಸಿದನೆಂದು ಕಾಣುತ್ತದೆ. ಆಗ ಸಮತೋಲನ ಬಂದು, ಆಚೀಚೆಗೆ ಇಬ್ಬಿಬ್ಬರು ಅಣ್ಣ—ತಮ್ಮಂದಿರನ್ನುಳ್ಳ **ತ್ರಾಸಿನ** ಮಧ್ಯಬಿಂದುವಾದಳು ರಂಜನಾ.

ಬಿರುಬಿಸಿಯ ಬಿಸಿಲ ಬೆಳಕಲ್ಲ, ಕಾಳ ರಾತ್ರಿಯ ಕಗ್ಗತ್ತಲೂ ಅಲ್ಲ. ಇದು ಚೆಂಬೆಳಕು, ಅವರ ಮನೆ. (ಮನೆ ಕಟ್ಟಿಸಿ ಮುಗಿಸಿದಾಗ ಅನೇಕರು ಸಾಲಿಗರು ಹಣ ಕೇಳದಿರಲೆಂದು ಇದಕ್ಕೆ 'ಋಣ' ಎಂದು ಹೆಸರಿಡುವುದಾಗಿ ಕಣವಿ ಹೆದರಿಸಿದರು !) ಇಲ್ಲಿಯೂ [illegible] ಹದ, ಒಂದು ತೂಕ.

ಇರುಳ ಮೌನಕೆ ಬೆಳಗು ತೊದಲು ನುಡಿದು ;
ಮೂಡ ಪಡುವಣದಲ್ಲಿ ಜೀವ ಒಡನುಡಿದು ;
ಬೆಳಕು-ಬಯಕೆಯ ಬಳ್ಳಿ ನಾಲ್ದೆಸೆಗು ಹಬ್ಬಿ
(ಮರಮರವನಾಡಿಸಿವೆ ತರತರದ ಗುಬ್ಬಿ)
ಹೂವ ಸೂಸಿದೆ ಸುತ್ತು ಪಾರಿಜಾತ
ಹಸುಳೆ ನಗೆ, ಹೂ ಬಿಸಿಲು ಓ ! ಎಂಥ ಚಿತ್ರ.

ಕಣವಿಯವರಿಗೆ ಎಲ್ಲದರ ಬಗೆಗೂ ನವುರಾದ ಪ್ರೀತಿ. ಮನೆ, ಮನೆಯ ಸುತ್ತು-ಮುತ್ತು, ಗಿಡ ಮರಗಳು. ಹೂ ಹಣ್ಣುಗಳು, ಕಾಯಿ ಪಲ್ಲೆಗಳು (ಅವರು ಕಾಯಿಪಲ್ಲೆ ಆರಿಸುವಲ್ಲಿ ಹೆಣ್ಣುಕೈ ಎಂಬುದು ನಮಗಂತೂ ಗೊತ್ತು)—ಎಲ್ಲವನ್ನೂ ಮನೆ ತುಂಬಿಸಿಕೊಳ್ಳಬೇಕೆಂಬ ಹಂಬಲ. ಮುಂಜಾನೆಯ ವಿಹಾರದಲ್ಲಿ ಇವರ ಕಣ್ ಬಿದ್ದ ಕಿರು ಹೂವೂ, (ದೊಡ್ಡ ಹೂಗೊಂಡೆಯ ಹೊಂಗೊಡಾದ ಮಾತಿರಲಿ), ಇವರ ಕೈಗೆ ಬಂದು, ಮನೆಯ ಹೂದಾನಿಯಲ್ಲಿ ವಿಜೃಂಭಿಸಿಯೇ ಬಿಡುತ್ತದೆ. ಇವರ ಮನೆಯ ತೋಟದಲ್ಲಿ ಇವರ ಕೈ ಆಡುತ್ತದೆ ಹೂವಿನ ಮಡಿ ಮಾಡಲು, ಗಿಡ ನಟ್ಟು ಸಂಪೋಷಿಸಲು ಮತ್ತು ಇವರ ನಾಯಿಯ ಕಾಲು ಹಾಳು ಮಾಡಿದುದನ್ನು ಸರಿಪಡಿಸಲು.

ಪ್ರಕೃತಿಯ ಮೇಲಣ ಕಣವಿಯವರ ಪ್ರೀತಿಯು ಅವರು ಶ್ರದ್ಧೆಯಿಂದ ಮಾಡಿ ನೋಡಿಕೊಂಡು ಬರುತ್ತಿರುವ, ಅನ್ವರ್ಥಕವಾದ ಅವರ ಕೈ–ತೋಟದಲ್ಲಿ ವ್ಯಕ್ತವಾಗಿದೆ:

......ಬಾಡಿರುವ
ಹೂಗಳ ತೆಗೆದು, ಒಣಗಿದೆಲೆಗಳ ಗುಡಿಸಿ, ಅಲ್ಲಲ್ಲಿ
ಅಸ್ತಿತ್ವಕ್ಕೆ ಧಕ್ಕೆ ಬಾರದ ಹಾಗೆ ಬೆಳೆದ ಕಸ-ಕಳೆಯ
ಕೆತ್ತಿ, ಕುರುಪಿಯಾಡಿಸಿ, ಜರಜರಿಯಿಂದ ನೀರೆರೆಯುವಲ್ಲಿ
ನನಗೆ ಸುಖವುಂಟು, ನಿಮಗೆ ಗೊತ್ತಿಲ್ಲ, ನಮ್ಮ ನಾಯಿ
ಮಣ್ಣು ಕೆದರಿ ತಣ್ಣಗೆ ಮಲಗಿ, ಅಕ್ಕ ಪಕ್ಕದ ಹೂ
ಗಿಡವ ಮುರಿದು ಮುದುಡಿಸಿದೆ,—ಅದಕೆ ಸಲಿಗೆ
ಕೊಟ್ಟವನು ನಾನೇ ಎಂದು ಈಕೆಯ ಸ್ಪಷ್ಟ ಹೇಳಿಕೆ,
ನೋಡಿ ಅದನೆಲ್ಲ ಈಗ ಸರಿಪಡಿಸಬೇಕು ; ಬಿಡುವಿಲ್ಲ.

ಹೀಗೆ ಅವರು ತಮ್ಮ 'ಕಾಯಕ'ವನ್ನೂ ಕಾವ್ಯ ರಚನೆಯನ್ನೂ ಶ್ರದ್ಧಾಪೂರ್ಣವಾಗಿ ಮಾಡುತ್ತಾರೆ. ಇವರ ಕೈ ಆಡಿದಲ್ಲೆಲ್ಲಾ ಹೂ, ಹಸುರು ಕುಲುಕುಲು ನಕ್ಕು, ಹರಡುತ್ತವೆ.

ಕಣವಿಯವರ ಸ್ನೇಹಿತರ ಬಳಗ ಕರ್ನಾಟಕದ ಒಳಗೂ ಹೊರಗೂ ಹಬ್ಬಿ ಹರಡಿರುವುದು ನಿಜವಾದರೂ ಅವರ ನಿಕಟ ಸ್ನೇಹಿತರೆಂದರೆ ಆರಿಸಿದ ಕೆಲವರು ಮಾತ್ರ ಎಂದೆನಿಸುತ್ತದೆ. ಎಲ್ಲರೊಡನೆಯೂ ಸ್ನೇಹದಿಂದಿರುತ್ತಾರಾದರೂ ತಮ್ಮ ಒಳಗಿನೊಳಗನ್ನು

ಹಂಚಿಕೊಳ್ಳುವುದು ಕೇವಲ ನಾಲ್ಕಾರು ಗೆಳೆಯರಲ್ಲಿ. ಆದರೆ, ಯಾರೊಡನೆಯಾದರೂ ಇರಿಸಿಕೊಂಡ ಕೆಳೆಯನ್ನು ಕಳೆದುಕೊಳ್ಳುವವರಲ್ಲ, ಏನೆಂಥ ಪ್ರಸಂಗ ಬಂದರೂ. ಬಹುಶಃ ಅವರ ನಯವಾದ ನುಡಿ-ನಡೆಯೂ ಅವರ ಸ್ನೇಹಕ್ಕೆ ಚ್ಯುತಿ ತರದಂಥಹದು. ಅವರ 'ಮಾತು' ಎಂತಹದು ಎಂಬುದು ನಿಮಗೆ ಗೊತ್ತಲ್ಲ! ಅದು,

ಮುಟ್ಟಿದರೆ ಮಾಸುತಿಹ ಮಂಜುಹನಿ— ಮುತ್ತು,
ಮೌನ ಮೊಗ್ಗೆಯನೊಡೆದು ಅರಳಿ ಬಂದದ್ದು,
ಮೂಲೋಕ ಗೆಲ್ಲುವ ಮೃದು ವಚನ

ಅವರ ಮಾತು-ಕತೆಯ ಅನುಭವ ನನಗೆ ಸಾಕಷ್ಟು ಆಗಿದೆ. ತಿಳಿಹಾಸ್ಯ, ಮನ ನೋಯಿಸದ ಮಾತು, ಕುಳಿತು ಇನ್ನೂ ಕೆಲವು ಹೊತ್ತು ಹೀಗೆಯೇ ಕಳೆಯಬೇಕೆನ್ನು ವಂತಹ ಸಲ್ಲಾಪ.

ಆದರೂ ಒಮ್ಮೊಮ್ಮೆ ಅವರು ಕಠೋರವಾಗಿಯೂ ಮಾತನಾಡುತ್ತಾರೆಂಬುದು ನನಗೆ ಅರಿವಾದದ್ದು ಒಂದು ಪ್ರಸಂಗದಲ್ಲಿ ;

ನಾನು ಕರ್ನಾಟಕ ವಿಶ್ವವಿದ್ಯಾನಿಲಯವನ್ನು ಬಿಟ್ಟು ಬೆಂಗಳೂರು ವಿಶ್ವ ವಿದ್ಯಾಲಯಕ್ಕೆ ಬರುವ ಸಂದರ್ಭದ ಬೀಳ್ಕೊಡುಗೆಯ ಚಿಕ್ಕ ಸಭೆಯಲ್ಲಿ ಕಣವಿ ಈ ರೀತಿ ಆಡಿದರು:

"ಈಚಲಕ್ಕೂ, ತೆಂಗಿಗೂ ವ್ಯತ್ಯಾಸವನ್ನರಿಯದವರು ನಮ್ಮ ಜನ ; ಬಳ್ಳಿ ಹೂ ಹೊತ್ತರೆ ಮುಳ್ಳಿಗೆ ಈರ್ಷೆ ; ಬಳ್ಳಿಯ ಹೂವೆಲ್ಲಾ ಸುರಿದು ಒಣಗಿ ಹಾಳಾದರೇನಂತೆ, ಮುಳ್ಳು ವಿಜೃಂಭಿಸಿದರಾಯಿತು, ಎಂಬುವದು ಈ ಜನದ ಪ್ರವೃತ್ತಿ"

ಈ ಮಾತನ್ನಾಡುವಾಗ ಕಣವಿಯವರು ಭಾವಾವೇಶದಿಂದಿದ್ದರು. ಸ್ನೇಹದ ಪರೆ ಬಂದಿತ್ತು ಎಂದುಕೊಂಡರೂ, ಗುಣಗ್ರಹಣ ಮಾಡದಂತಹ ಪರಿಸ್ಥಿತಿಯನ್ನು ಅವರು ಬಹುಶಃ ತೀವ್ರತರದಲ್ಲಿ ವೀಕ್ಷಿಸಿದ್ದರೆಂದು ಕಾಣುತ್ತದೆ. ಹೀಗೆ ಅವರು ಆಡುವ ಪ್ರಸಂಗ ಗಳು ಅತ್ಯಂತ ವಿರಳ. ಆದರೆ, ಅವರು ಕಠೋರ ಸತ್ಯವನ್ನು ಹೇಳದೇ ಇರುವುದಿಲ್ಲ, ನಯವಾದ ಸುಳ್ಳನ್ನು ಹೇಳಲು ಪ್ರಯತ್ನಿಸುವುದಿಲ್ಲ. ಕಠಿಣವಾದುದನ್ನೂ ಮೃದುವಾಗಿ ಹೇಳುವ ನೈಪುಣ್ಯ, ಸಾಮರ್ಥ್ಯ ಅವರಲ್ಲಿರುವುದನ್ನು ಕಣ್ತೆರೆದು ನೋಡಿದರೆ, ಕಿವಿಯಿಟ್ಟು ಕೇಳಿದರೆ ಯಾರೂ ಅರಿಯಬಹುದು.

ಚಳಿಯಿರಲಿ, ಮಳೆಯಿರಲಿ,— ಹಾಸಿಗೆ ಬಿಟ್ಟು ಏಳಲಾರದಂಥ ಸ್ಥಿತಿಯನ್ನು ಹೊರತು, ಡಾಕ್ಟರರು ಮನೆಯ ಹೊರಗಡೆ ಹೋಗಬೇಡಿ ಎಂದು ಸೂಚಿಸಿದ ಸಂದರ್ಭವನ್ನು ಹೊರತು,— ಕಣವಿಯವರು ಬೆಳಗಿನ ವಿಹಾರ ಎಂದೂ ಬಿಡದವರು. ಜೊತೆಗೆ ಯಾರಾದರೂ ಇರಲಿ, ಬಿಡಲಿ, ಅವರು ಅಲೆದಾಡಲು ಹೊರಡುವವರೆ, ಗುಡ್ಡ ಗಳನ್ನು ಏರಿ ಇಳಿದು ಬರುವವರೇ. ಅವರೊಡನೆ ನಾನೂ ಕೆಲವು ದಿನ ನಡೆದದ್ದುಂಟು.

ಅವರಷ್ಟೇ ನಾನೂ ಎಚ್ಚರಸ್ಥನೆಂದು ತೋರಿಸಲು, ನನಗಿಂತಲೂ ಸೋಮಾರಿಗಳಿದ್ದಾರೆ ಈ ಜಗತ್ತಿನಲ್ಲಿ ಎಂದು ಕಾಣಿಸಲು ನಾನು ಅವರೊಡನೆ ಕೆಲವು ದಿನ ಬೆಳಗಿನ ವಿಹಾರ ಹೋಗಿ, ಸುತ್ತುಮುತ್ತಲ ಸ್ನೇಹಿತರನ್ನು ಬಡಿದೆಬ್ಬಿಸಿ, ಅವರಿಂದ (ಅಂದರೆ, ಅವರ ಮನೆಯವರಿಂದ) ಚಹಾ ಮಾಡಿಸಿ, ಅದನ್ನು ಹೀರಿ ಬರುತ್ತಿದ್ದ ನೆನಪು ಈಗಲೂ ಹಸಿರು ಹಸಿರಾಗಿಯೇ ಇದೆ. ನಾಳೆ ಯಾರ ಮನೆಯಲ್ಲಿ ಚಹಾ ಎಂಬುದನ್ನು ಇಂದೇ ನಿರ್ಧರಿಸುತ್ತಿದ್ದುದರಿಂದ ನಮ್ಮ ಮಬ್ಬು ಬಹು ಬೇಗನೆ ಹರಿಯುತ್ತಿತ್ತು. ಅದರಲ್ಲೂ ಶ್ರಾವಣದಲ್ಲಿ ಉಂಡಿಯನ್ನು ಚಹಾದ ಜೊತೆಗೆ ನುಂಗಬಹುದೆಂಬುದಂತೂ ಬಡಿದೆಬ್ಬಿಸುವ ಕೋಲಾಗಿತ್ತು.

ಆ ದಿನಗಳಲ್ಲಿ ಕಣವಿಯವರೊಡನೆ ಆಗುತ್ತಿದ್ದ ವಿಹಾರ ಬಹು ಸುಖಕರವೂ ಮೋಜಿನದೂ ಆಗಿರುತ್ತಿತ್ತು. ಕರ್ನಾಟಕ ವಿಶ್ವವಿದ್ಯಾಲಯದ ಸುತ್ತು-ಮುತ್ತೆಲ್ಲಾ ಹಸುರು ಹಬ್ಬಿ ಹರಡಿರುತ್ತಿತ್ತು. ಟೈವಾಕ್ ಗಡಿಯಾರ ಕಾರ್ಖಾನೆಯ ಗುಡ್ಡದಿಂದ ಹಿಡಿದು ಇಂಡಿಯನ್ ಪ್ಲೈಉಡ್ ಕಾರ್ಖಾನೆಯವರೆಗಿನ ಓರೆಯವರೆಗೆ, ಮತ್ತೆ ಅದರಾಚೆಯ ಹತ್ತೀ ಕೊಳ್ಳದವರೆಗೆ ಉಬ್ಬುತಗ್ಗುಗಳ ಶ್ರೇಣಿ, ಅದನ್ನಾವರಿಸಿದ ಹಸುರು ಮಕಮಲ್ಲು, ಮಕಮಲ್ಲಿನ ಮೇಲೆ ಸುರಿದ ಮಂಜುಹನಿ-ಮುತ್ತು ; ಮಾವಿನ ಹೂ ಸುಗ್ಗಿಯಲ್ಲಿ ಜೊಂಪೆ ಜೊಂಪೆಯಾಗಿ ತೂಗುವ ಹೂಜೇಂಗೊಡ. ಅವುಗಳ ನಡುವೆ ನಡೆದಾಡುವ ನಾವು. ಕಣವಿ ತಮ್ಮ ಹಳೆಯ ಅನುಭವಗಳನ್ನೆಲ್ಲಾ ಮೆಲುಕು ಹಾಕುತ್ತಾ ನಮಗೆಲ್ಲಾ ತೆರೆದು ತೋರಿಸುತ್ತಿದ್ದರು : ಅವರು,

ಭಾವದುನ್ಮಾದದಲಿ ಬೆರಗು ನಿಬ್ಬೆರಗಿನಲಿ
ವರುಷಗಳು ಹರುಷದಲಿ ಕಂಡ ಕನಸು

ನನಗೆ ನನಸಿನನುಭವವಾಗುವಂತೆ ವಿವರಿಸುತ್ತಾರೆ. 'ನಾಗರಿಕ ನಾಗರವು ಹುತ್ತು ಕಟ್ಟದ' ಅವರ ಹಳ್ಳಿ, ಆ ಊರಗುಡ್ಡದೋರೆ, ಅದರ ಬದಿಯ ಕಿರುಹಳ್ಳ, ಸುವಿಶಾಲ ಆಲ, ಎಲೆವಳ್ಳಿ ತೋಟ, ಕೆಮ್ಮರಡಿ-ಎಲ್ಲವೂ ಬರುತ್ತವೆ. ಎರೆಯ ಹೊಲದಲ್ಲಿ, ಬೆಳುದಿಂಗಳ ರಾತ್ರಿಯಲ್ಲಿ, ಜೋಳದ ಸುಗ್ಗಿನ ನಡುವೆ ರೈತರು ಬಾಳುತ್ತಿರುವುದನ್ನೂ ತಮಗೆ ಆದ ಅನುಭವವನ್ನೂ ಬಣ್ಣಿಸುತ್ತಾರೆ. ತಾಂಡೆಯಿಂದಲಿ ಬರುವ ಲಂಬಾಣಿ ಹೆಂಗಸರು, ಕಮ್ಮಾರ ಮಾನಪ್ಪ, ಕುಂಬಾರ ಮಲ್ಲಣ, ಮಾದರ ದುರುಗ, ದನಕಾಯುವ ಲಿಂಗ, ಕೆಲಸಿಗರ ಕೆಂಚ ಅಥವಾ ಅವರ ಪ್ರತಿನಿಧಿಗಳು ಅವರ ನೆನಹಿನ ಸಂಪುಟದಿಂದ ಜೀವತಳೆದು ನಮ್ಮ ಮುಂದೆಲ್ಲಾ ಸುಳಿದಾಡುತ್ತಾರೆ. ಅವರ,

ಬಾಳ ಸಂಪುಟದಲ್ಲಿ ಬಾಲ್ಯವೆಂಬುವುದೊಂದು
ಅಳಿಸಲಾರದ ಮಧುರ ಭಾವಗೀತ ;
ಮುಂದೆ ಬಹ ಅನುಭವದ ಕಹಿಫಲವನುಣ್ಣುತಿರೆ
ಮರುಕಳಿಸಿ ನೆನೆಯುವುದೆ ನಮ್ಮ ಸ್ವಾರ್ಥ!

ಆ ಸ್ವಾರ್ಥ ನಮ್ಮ ಸ್ವಾರ್ಥವೂ ಎಂಬಂತೆ ಅವರ ಆ ಅನುಭವವನ್ನು ನಮ್ಮೊಡನೆ ಅವರು ಹಂಚಿಕೊಳ್ಳುತ್ತಿರುವುದು ನನಗಂತೂ 'ಮರೆಯಲಾರದ ಮಧುರ ಭಾವಗೀತ'.

ಕಣವಿಯವರಲ್ಲಿ ಒಂದು ದೊಡ್ಡ ಗುಣವನ್ನು ಕಾಣಬಹುದು. ಅದು ಅಮತ್ಸರತ್ವ. ವಿಬುಧರಲ್ಲಿ ಮತ್ಸರ ಅವರ ವ್ಯಕ್ತಿತ್ವದ ಅವಿಭಾಜ್ಯ ಅಂಗವೆಂಬುದು ಸಾಮಾನ್ಯ ನಂಬುಗೆ. ಆದರೆ, ಕಣವಿಯವರು ಇದಕ್ಕೆ ಹೊರತು. ಎಲ್ಲಿಯೇ ಇರಲಿ ಗುಣವನ್ನು ಗಮನಿಸುತ್ತಾರೆ, ಗಣಿಸುತ್ತಾರೆ, ಮೆಚ್ಚುತ್ತಾರೆ, ಪ್ರೋತ್ಸಾಹಿಸುತ್ತಾರೆ. ಹಿರಿಯರಲ್ಲಿ ಅವರಿಗೆ ಅಗಾಧ ಗೌರವ. ತಮ್ಮ ತಾಯಿಯವರನ್ನು ತುಂಬು ಪ್ರೀತಿಯಿಂದ ನೋಡಿಕೊಳ್ಳುತಿದ್ದಾರೆ, ತಮ್ಮ ತಂದೆ ಸಕ್ಕರೆಪ್ಪನವರನ್ನು ಬಹುವಾಗಿ ನೆನೆಯುತ್ತಾರೆ, ಅವರು ತಮಗೆ ನೀಡಿದ ಆದರ್ಶ ಮಾರ್ಗದರ್ಶನ ತಮ್ಮನ್ನು ಮುಂದೆ ಒಯ್ಯುತ್ತಿದೆ ಎಂದೆನ್ನುತ್ತಾರೆ ; ಅವರ ಹಳ್ಳಿಯ ಗುರುಗಳ ಬಗ್ಗೆ ಪೂಜ್ಯಭಾವ ಹಾಗೆಯೇ ಭದ್ರವಾಗಿದೆ. ತಮ್ಮ ತಂದೆಯವರ ಗುರುಗಳ ಬರೆಹವನ್ನು ಬೆದಕಿ, ಮುದ್ರಿಸುವವರೆಗೂ ಅವರು ತಮ್ಮ ಅತುಳ ಗೌರವವನ್ನು ಪ್ರಕಟ ಪಡಿಸಿದರು. ಕವಿವರ ಬೇಂದ್ರೆ, ಹಿರಿಯ ಗೋಕಾಕ, ಮಧುರ ಚೆನ್ನ—ಎಲ್ಲರ ಬಗೆಗೂ ಅವರಿಗೆ ಆತ್ಮೀಯ ಗೌರವ. ಅಂತೆಯೇ ಕಿರಿಯ ಲೇಖಕರ ಬಗೆಗೂ, ಕಿರಿಯರೆಂದಾಕ್ಷಣ ಅವರ ದೃಷ್ಟಿ ಕಿರಿದಾದುದಿಲ್ಲ. ಅವರಿಂದ ಕಿರಿಯ ಕವಿಗಳು ಪ್ರೋತ್ಸಾಹದ ರಸವನ್ನುಣ್ಣದೆ ಹೋದುದಿಲ್ಲವೆಂಬುದು ನನ್ನ ಅನಿಸಿಕೆ ; ಅನಿಸಿಕೆಗೆ ಅನುಭವವೇ ಆಧಾರ.

ಕಣವಿಯವರು ಹೇಳಬೇಕಾದುದನ್ನು ಹೇಳುತ್ತಾರೆ, ನಿಜ ; ಆದರೆ, ಹೇಳುವ ರೀತಿ ನವುರಾದದ್ದು ; ಅವರು ಮಾಡುವ ಕೆಲಸವನ್ನು ಮಾಡದೆ ಬಿಡುವುದಿಲ್ಲ, ನಿಜ ; ಆದರೆ, ಮಾಡುವ ರೀತಿ ನಾಜೂಕಾದದ್ದು ಮೇಲಿನವರು ಹಾಕಿದ ಕಸಕಡ್ಡಿಯನ್ನು ಅವರು ಎತ್ತಿ ಹೊರಗಡೆ ಹಾಕುವುದನ್ನು ನೀವು ನೋಡಿಲ್ಲವೆ ?

"ಬೆಳಗಾಯಿತೋ—
ಕಿಟಕಿ ಬಾಗಲಿನಿಂದ ಹೊರಗೆ ಚೆಲ್ಲುತ್ತಾರೆ :
ಕಸಕಡ್ಡಿ, ಹಾಳೆ, ಹಣ್ಣಿನ ಸಿಪ್ಪೆ, ಸುಡುಗಾಡು ಶುಂಠಿಯ ಕೊಂಬು
ಎಮ್ಮ ಮನೆಯಂಗಳದಿ ಬೆಳೆಯುವುದು ತಿಪ್ಪೆ ;
ಇದು ಅವರ ತಪ್ಪೆ ?

ಅತ್ತಿತ್ತ ನೋಡಿ, ಯಾರೂ ಕಾಣುವುದಿಲ್ಲವೆಂದಾಗ
ಅವರನುಗ್ರಹಿಸಿದ ಮೌಲ್ಯ ಬದುಕನೆಲ್ಲ ಒಂದೂ ಬಿಸುಡದಂತೆ ಬಳಿದು
ಬೇಲಿಯಾಚೆಗೆ ಒಗೆದು
ಕೈ ತೊಳೆದು
ಕೃತಾರ್ಥನಾಗುತ್ತೇನೆ—
ಇಲ್ಲ ; ಅಪಾರ್ಥಕಡೆಯಾಗುತ್ತೇನೆ."

ಕಣವಿ ರಸಿಕ ಕವಿ. ತಾನು, ಸುತ್ತಣವರು, ಇಡಿಯ ಪ್ರಕೃತಿ—ಎಲ್ಲರೂ ಎಲ್ಲವೂ ಸೊಗಸಾಗಿಯೇ ಇರಬೇಕೆನ್ನುವವರು, ಇರುವುದನ್ನು ಹದವಮಾಡಿಕೊಂಡು ಸುಖವಾಗಿರ

ಬೇಕೆಂಬುದೇ ಅವರ ಮಂತ್ರ, ಇತರರಿಗೆ ಸೂಚನೆ. ಧಾರವಾಡದಲ್ಲಿ ಮಳೆ ಬಂದಾಗ ಅವರು ಏನು ಮಾಡುತ್ತಾರೊ ಅದನ್ನು ನೀವೂ ಮಾಡಿ ಎಂದು ಹೇಳುತ್ತಾರೆ :

"ಬಿಸೀ ಚುರುಮುರಿ ಕಡಲೆ ಮಾರುವ ಮುದುಕಿ ಬಂದರೆ ಕರೆಯಿರೀ,
ಮಕ್ಕಳೊಂದಿಗೆ ಕುಳಿತು ಕುರುಕುರು ತಿಂದು ಹೊರಜಗ ಮರೆಯಿರಿ,
ಅಷ್ಟು ಮಿಕ್ಕೀ ಬೇಸರಾದರೆ ರೇಡಿಯೋ ಕಿವಿ ತಿರುವಿರಿ.
ರಾತ್ರಿಯಾಗಲು ಊಟ ತೀರಿಸಿ ಜೊತೆಗೆ ಬೆಚ್ಚಗೆ ಮಲಗಿರಿ."

ಎರಡು ದಡಗಳ ನಡುವಿನ ಕವಿ ಕಣವಿಯವರ ಬಗೆಗೆ ಆಲೋಚಿಸುವಾಗ, ಬರೆಯುವಾಗ 'ತೂಕ' ಹೇಗೋ ಹಾಗೆ ಸುವರ್ಣ ಮಾಧ್ಯಮವೂ ನೆನಪಿಗೆ ಬರುತ್ತದೆ. ಯಾಕೆಂದರೆ, ಅದು ಅವರ ಪ್ರತಿಯೊಂದು ಜೀವನ ಪ್ರಸಂಗದಲ್ಲಿ, ನಡೆ-ನುಡಿಯಲ್ಲಿ, ವಿಚಾರ ಸ್ತರದಲ್ಲಿ ಎದ್ದು ಕಾಣುತ್ತದೆ. ಇವರನ್ನು ನವೋದಯ (ರಮ್ಯ) ಹಾಗೂ ನವ್ಯ ಪಂಥಗಳನ್ನು ಬೆಸೆಯುವ ಬಂಗಾರದ ಕೊಂಡಿ ಎಂದವರುಂಟು ; ಸಂಪ್ರದಾಯವನ್ನು ದೂರೀಕರಿಸದ, ಆಧುನಿಕತೆಯ ಅಮಲನ್ನು ಹೀರಿ ದಾರಿ ತಪ್ಪದ , ಆದರೆ ಅವೆರಡನ್ನೂ ಸಮನ್ವಯಗೊಳಿಸಿಕೊಂಡವರು, ಎಂದೂ ಒಂದು ಅಂಬೋಣ ; ಅವರಿಗೆ ಪದ್ಯಂ ಹೃದ್ಯಂ ಅಂದರೂ ಗದ್ಯಂ ವಧ್ಯಂ ಎಂದು ಅವರೇನೂ ಅಂದವರಲ್ಲ : ಪದ್ಯಗದ್ಯಗಳಲ್ಲಿರುವ ತೆಳು ಪರೆಯನ್ನು ಪಾರದರ್ಶಕವನ್ನಾಗಿ ಮಾರ್ಪಡಿಸಿಕೊಂಡವರು. ಅತೀ ಎತ್ತರಕ್ಕೆ ಏರುವ ಸಾಮರ್ಥ್ಯವನ್ನು ಮೆರೆಯುತ್ತಿರುವಂತೆಯೇ ತೀರಾ ಕೆಳಗಿನ ತಳತಳದ ಅರಿವನ್ನೂ ಅನುಭವವನ್ನೂ ಇವರು ಉಳ್ಳವರು, ನೆಲ–ಮುಗಿಲುಗಳನ್ನು ಬೆಸೆಯುವವರು, ಧಾರವಾಡ ನಗರವೊ, ಹಳ್ಳಿಯೊ ಎಂದು ಕೇಳಿದರೆ, ಏನು ಹೇಳುವುದು ? ಗ್ರಾಮನಗರವೆಂದು ಅದಕ್ಕೆ ಹೇಳ ಬಹುದೇನೋ ! ಅದರಲ್ಲಿರುವ ಕಣವಿಯವರ ಬಗೆಗೆ ? ಅವರು ಗ್ರಾಮ ಜೀವನವನ್ನು ಅರಗಿಸಿಕೊಂಡು ರಕ್ತಮಾಡಿಕೊಂಡು, ಅದನ್ನು ನಗರದ ನರಗಳಲ್ಲಿ ಹರಿಯ ಬಿಟ್ಟವರು. ತಮ್ಮ ಕವಿತೆಗಳಲ್ಲಿ, ಪ್ರಬಂಧಗಳಲ್ಲಿ, ಭಾಷಣಗಳಲ್ಲಿ, ಮಾತು-ಕತೆಗಳಲ್ಲಿ ಎರಡು ತುದಿಗಳ ನಡುವನ್ನು ಹಿಡಿದು ಸಮತೋಲನ ಕಾಯ್ದುಕೊಂಡವರು. ಎಷ್ಟು ಬೇಕೊ ಅಷ್ಟು, ಎಷ್ಟು ದೂರ_ಹತ್ತಿರವೊ ಅಷ್ಟು ದೂರ–ಹತ್ತಿರ.

ಬಿ. ಎ. ಸನದಿ

# ಸ್ನೇಹ—ಸಂಪದ

ಉಪ್ಪಿಗಿಂತಲು ರುಚಿಯು ತಾಯಿಗಿಂತಲು ಬಂಧು
ಇಲ್ಲೆಂಬ ಗಾದೆನುಡಿ ಕೇಳಿರುವೆನು
ಗೆಳೆತನದ ರುಚಿ-ಶುಚಿಯು ಅದಕು ಮಿಗಿಲಾಗಿಹುದು
ಎಂಬ ಸಾಹಸ ಮಾಡೆ ದೋಷವೇನು ?
ಕಂಡಕಂಡವರೇನು ಬಲ್ಲರಿದನು
ಉಂಡವನೆ ಕಂಡಿಹನು ಇದರ ಹದನು !

ಇದು ಗೆಳೆತನದ ಮಹತಿಯನ್ನು ಕುರಿತು ಕವಿ ಕಣವಿಯವರು ಮೊದಲಿನಿಂದಲೂ ತಳೆದ ನಿಲುವು, ಉಪ್ಪಿಗಿಂತಲೂ ರುಚಿಯೆನಿಸಬಲ್ಲ ಗೆಳೆತನ, ತಾಯಿಗಿಂತಲೂ ಹತ್ತಿರದವನಾಗಿರಬಲ್ಲ ಗೆಳೆಯನ ಬಗೆಗೆ ಮುದ್ದು ಮುದ್ದಾದ ಹೇಳಿಕೆ ನೀಡಿ ಬಿಡುವುದೇನು ಸಾಹಸದ ಮಾತಲ್ಲ, ನಿಜ. ಆದರೆ, 'ಕಂಡಕಂಡವರೇನು-ಬರಿಯ ಕಂಡವರೇನು-ಬಲ್ಲರಿದನು, ಉಂಡವನೆ ಕಂಡಿಹನು ಇದರ ಹದನು' ಎಂದು ಉಗ್ಘಡಿಸುವಲ್ಲಿ ಆ ಕಲ್ಪಕತೆಯ ಹೇಳಿಕೆಗೆ ಸ್ವಾನುಭವದ ಮತ್ತು ಸ್ವಾನುಭೂತಿಯ ನೆಲೆ ಹತ್ತುತ್ತದೆ ; ಕವಿ ಮನಸ್ಸಿನ ಭಾವನಾಪರವಶತೆ ವಾಸ್ತವಿಕತೆಯ ನೆಲೆಗಟ್ಟಿನ ಮೇಲೆ ದೃಢಗೊಳ್ಳುತ್ತದೆ. ವೈಯಕ್ತಿಕ ಪ್ರತಿಷ್ಠೆಯ ಮೇರೆ ಮೀರಿ ನಿಲ್ಲಬಲ್ಲ ಸ್ನೇಹಧರ್ಮದ ಪರಾಕಾಷ್ಠೆಯನ್ನು ಕಂಡುಂಡವರ ಬದುಕಿಗೆ ಸಾರ್ಥಕತೆಯು ಪರಿಘವನ್ನು ವಿಸ್ತರಿಸಿಕೊಳ್ಳುತ್ತಲೇ ಇರುತ್ತದೆ. ಇಂಥ ಸಾರ್ಥಕ ಸ್ನೇಹಸಂಕುಲದ ವಿಸ್ತಾರಕ್ಕೆ ಪ್ರಸ್ತಾರ ಹಾಕುವ ಜೀವನ ಕೌಶಲ್ಯದ ಮೇಲೆ 'ಖಾಯಂ ಕಬ್ಜಾ' ಸಾಧಿಸಿ ಅದನ್ನು ಉಳಿಸಿಕೊಂಡು, ಬೆಳೆಸಿಕೊಂಡು ಹೋಗುವುದು ಖಂಡಿತವಾಗಿಯೂ ಸಾಹಸದ ಮಾತು. ಈ ಸಾಹಸದಲ್ಲಿ ಗೆದ್ದವರು ಕಣವಿ. 'ಕಂಡಕಂಡವರೇನು ಬಲ್ಲರಿದನು, ಉಂಡವನೆ ಕಂಡಿಹನು ಇದರ ಹದನು !'

1952 ರಲ್ಲಿ ನಾನಿನ್ನೂ ಬೆಳಗಾವಿಯ ಲಿಂಗರಾಜ ಕಾಲೇಜಿನಲ್ಲಿ ಇಂಟರ್‌ಮೀಡಿಯೆಟ್ ವಿದ್ಯಾರ್ಥಿ. ಬೆಳಗಾವಿಯ ಯುವಕ ಕಲಾವೃಂದದ ಪರವಾಗಿ ಎಂ. ಟೀ. ಚುಟುಕುಗಳ ಸಂಕಲನವೊಂದನ್ನು ಪ್ರಕಟಿಸುವ ವಿಚಾರದೊಡನೆ ಮೊಟ್ಟ ಮೊದಲ ಸಲ ನಾನು ಧಾರವಾಡಕ್ಕೆ ಹೋದ ಸಂದರ್ಭದಲ್ಲಿ ಆಗಷ್ಟೆ ಬೆಳಕಿಗೆ ಬಂದಿದ್ದ 'ಕಾವ್ಯಾಕ್ಷಿ' 'ಭಾವಜೀವಿ'ಗಳ ಕಣವಿಯವರ ಪರಿಚಯವಾಯಿತು. ಹೊಸಬರನ್ನೂ ಆತ್ಮೀಯತೆಯಿಂದ, ವಿಶ್ವಾಸದಿಂದ ಹತ್ತಿರ ಮಾಡಿಕೊಂಡು, ಅನುಮಾನದ ಮಂಜುಪರದೆ ಸರಿಸಿ, ಸದುವಿನಯದ ಸ್ನೇಹ-ಸಲಿಗೆಗೆ ದಾರಿ ಮಾಡಿಕೊಡುವ ಕಣವಿಯವರ ಗುಣ ಇಂದಿಗೂ ಗುಣಾಕಾರ

ಪಡೆಯುತ್ತ ಬಂದಿರುವುದನ್ನು ಅಂದಿನಿಂದಲೂ ನಾನು ಕಂಡಿದ್ದೇನೆ. ನನ್ನಂತೆ, ಈ ಅನುಭವ ಪಡೆದವರ ಸಂಖ್ಯೆ ಬಲು ದೊಡ್ಡದೆಂಬುದೂ ನನಗೆ ಗೊತ್ತು. ಕವಿ ಕಣವಿಯವರ ವ್ಯಕ್ತಿತ್ವದ ಬಹುಮುಖ್ಯ ಅಂಶವೆಂದರೆ ಅವರ ಸ್ನೇಹದೃಷ್ಟಿ. ಈ ಸ್ನೇಹಪರತೆಯ ಗುರುತ್ವಾಕರ್ಷಣೆಗೊಳಗಾಗಿ ಕಣವಿಯವರ ಸ್ನೇಹವಲಯದಲ್ಲಿ ಪ್ರವೇಶ ಪಡೆದವರು ಅದರ ಆಜೀವ ಸದಸ್ಯರಾಗಿ ಬಿಡುವುದುಂಟು. ಇಂಥ ಸದಸ್ಯತ್ವ ಹೊಂದಿದವರಲ್ಲಿ ಬಹಳಷ್ಟು ಜನ ತರುಣರು, ತರುಣ ಮನಸ್ಸಿನವರು. ಬೇರೆ ಬೇರೆ ಸಂದರ್ಭಗಳಲ್ಲಿ ಕಣವಿಯವರನ್ನು ಕಂಡವರು, ಹತ್ತಿರ ಬಂದು ಹರಟೆ ಹೊಡೆದವರು, ಸಾಹಿತ್ಯಕೃಷಿಯನ್ನು ಕುರಿತು ಕುಶಲ ಸಂಭಾಷಣೆ ನಡೆಸಿದವರು, ವೈಚಾರಿಕ ಪಾತಳಿಯ ಮೇಲೆ ಚರ್ಚಿಗೈದವರು, ಅಷ್ಟೇ ಏಕೆ, ಸಭೆ-ಸಮಾರಂಭಗಳಲ್ಲಿ ಕೊಂಚ ಕಾಲ ಔಪಚಾರಿಕ ಮಾತುಕತೆಯಾಡಿ ತಮ್ಮ ತಮ್ಮ ಉದ್ಯೋಗ-ಧಂದೆಗಳಲ್ಲಿ ನಿರತರಾದರು ಕೂಡ ಅವರ ಸ್ನೇಹಪ್ರಭಾವಲಯದಲ್ಲಿ ಸೇರಿಕೊಂಡಿರುತ್ತಾರೆ; ಅವರ ಸ್ನೇಹ-ಸಂಪರ್ಕದ ಅರ್ಕವನ್ನು ಸವಿಯುತ್ತಿರುತ್ತಾರೆ. ಒಂದೊಂದು ಸಲ ಕೆಲವೊಂದು ವಿಷಯಗಳಲ್ಲಿ ಭಿನ್ನಾಭಿಪ್ರಾಯಗಳಿರಬಹುದಾದರೂ ಕಣವಿಯವರ ಸ್ನೇಹ-ಸೌಜನ್ಯಗಳ ಬಗ್ಗೆ ಯಾರಲ್ಲಾದರೂ ಭಿನ್ನಾಭಿಪ್ರಾಯವಿರಬಹುದೆಂದು ನನಗೆನಿಸುವದಿಲ್ಲ. 'ಬಾಳ ಸಂಪುಟದಲ್ಲಿ ಬಾಲ್ಯವೆಂಬುವುದೊಂದು ಅಳಿಸಲಾರದ ಮಧುರ ಭಾವಗೀತ' ಎಂದು ಹಾಡಿಕೊಂಡ ಕವಿ ಮುಂದಿನ ದಿನಗಳಲ್ಲಿ ತಮ್ಮ ಸ್ನೇಹ ಸಂಹಿತೆಗೆ ಅದಕ್ಕೂ ಹೆಚ್ಚಿನ ಮಹತ್ವವಿತ್ತಿರುವುದನ್ನು ಅನೇಕರು ಅನುಭವಿಸಿದ್ದಾರೆ.

"ಸಮಾನ ವ್ಯಸನೇಷು ಸಖ್ಯಂ" ಎಂಬುದು ಸ್ನೇಹಾದರ್ಶದ ಅತ್ಯಂತ ಸರಳೀಕೃತ ಪ್ರಮಾಣ. 'ವಿಭಿನ್ನ ವ್ಯಸನೇಷು ಅಪಿ ಸಖ್ಯಂ' ಎಂದರೂ ಸಲ್ಲುವಂಥ ವಾತ್ಸಲ್ಯಭಾವವುಳ್ಳ ಭಾವಜೀವಿಗೆ ಹಲವೊಂದು ಬಗೆಯ ರುಚಿ–ಅಭಿರುಚಿಯುಳ್ಳವರೂ ಸ್ನೇಹಿತರಾಗಿರಬಲ್ಲರು, ತಮ್ಮ ತಮ್ಮ ಭಿನ್ನರುಚಿ, ಭಿನ್ನ ಕ್ರಿಯಾಕರ್ಮಗಳ ನಡುವೆಯೂ ತಿಳಿವಳಿಕೆಯ ಅಂಶಗಳನ್ನು ಗುರುತಿಸಿ, ಅವರವರ ಶಕ್ತ್ಯಾನುಸಾರವಾಗಿ ಸಾಧಿಸುವ ಯಶಾಪಯಶಗಳ, ಸುಖ-ದುಃಖಗಳ ಸಿಹಿ-ಕಹಿ ಅನುಭವಗಳಲ್ಲಿ ಸಮಭಾಗಿಗಳಾಗಿರಬಲ್ಲರು. ಸಮಾನವ್ಯಸನಗಳ ವ್ಯಾಖ್ಯೆಯನ್ನು ಮೀರಿ ನಿಲ್ಲುವ ಒಂದು ಮನೋಧರ್ಮವನ್ನು ಕವಿ ಕಣವಿಯವರು ದಕ್ಷತೆಯಿಂದ ಹದಗೊಳಿಸಿಕೊಂಡಿದ್ದರಿಂದ ಅವರಿಂದ ಭಿನ್ನ ಪ್ರಕೃತಿಯುಳ್ಳ ಕವಿ-ಕಲಾವಿದರನ್ನೂ ಒಂದು ಭರವಸೆಯ ಪಾತಳಿಯ ಮೇಲೆ ನಡೆಸಿಕೊಂಡು ಹೋಗುವುದು ಅವರಿಗೆ ಸಾಧ್ಯವಾಗಿದೆ. ಅಂತೆಯೇ ಭಿನ್ನಾಭಿಪ್ರಾಯ ಬಂದೊಡನೆ ಸಿಡಿದು ದೂರಾಗುವ ಮನೋಭಾವವುಳ್ಳ ತರುಣರು ಕೂಡ ಕಣವಿಯವರ ಮಂದಹಾಸದ ಮುದಾನಿಲ ಬೀಸಿದೊಡನೆ ಮೃದುಗೊಳ್ಳುತ್ತಾರೆ; ಮತಭೇದಕ್ಕಿಂತಲೂ ಸ್ನೇಹಬೋಧ ಹೆಚ್ಚು ಮಹತ್ವದ್ದೆಂದು ಅರಿತುಕೊಳ್ಳುತ್ತಾರೆ. ಒಂದೊಂದು ಸಲ, ಒಬ್ಬೊಬ್ಬರ ನಡೆ-ನುಡಿಗಳಿಂದಾಗಿ ಕಣವಿಯವರ ಮನ ನೋಯುವ ಸಂದರ್ಭ ಬಂದಾಗಲೂ, ತಮ್ಮ ನೋವನ್ನು ಕಂಡಕಂಡಲ್ಲೆಲ್ಲ ತೋಡಿಕೊಳ್ಳದೆ ತಣ್ಣಗಿರುವ 'ಮೌನಸಂಧಾನ'ದಿಂದಾಗಿ ಅವರ ಸ್ನೇಹ ಸಂಪದ ಅಬಾಧಿತವಾಗಿ

ಉಳಿದುಬಂದಿದೆ ; ಬೆಳೆಯುತ್ತಲೇ ನಡೆದಿದೆಯೆನ್ನಬೇಕು. ಇನ್ನೊಬ್ಬರಿಂದುಂಟಾದ ಮಾನಸಿಕ 'ವ್ಯಸನ'ವನ್ನು ನುಂಗಿಕೊಂಡು ಮಾನವೀಯ ಸಂಬಂಧಗಳನು ಸುರಕ್ಷಿತವಾಗಿಟ್ಟುಕೊಳ್ಳುವ ಆದರ್ಶವುಳ್ಳವರಿಗೆ 'ಸಮಾನ ವ್ಯಸನೇಷು ಸಖ್ಯಂ' ಎಂಬ ಮಾತು ತೀರಾ ಸಾಮಾನ್ಯವೆನಿಸಿ ಬಿಡುತ್ತದೆ. ಕಣವಿಯವರ ಗೆಳೆತನದ ರುಚಿ-ಶುಚಿಯನ್ನು ಕಂಡುಂಡವರಿಗೆಲ್ಲ ಈ ಅನುಭವ ಬಂದಿರಲು ಸಾಕು. ಭಿನ್ನಾಭಿಪ್ರಾಯಗಳನ್ನು ಪರಸ್ಪರರನ್ನು ದೂರಿ ದೂರಿಡುವುದಕ್ಕೇ ಬಳಸಿಕೊಳ್ಳಬೇಕೆಂದು ನಿಯಮವೆಲ್ಲಿದೆ ? ಪರಸ್ಪರರ ವಿಚಾರ ಧಾರೆಗಳಿಗೆ ಸಾಣೆ ಹಿಡಿಯುವ ಕೆಲಸಕ್ಕೂ ಭಿನ್ನಾಭಿಪ್ರಾಯಗಳನ್ನು ದುಡಿಸಿಕೊಳ್ಳುವ ರೀತಿ ಕಣವಿಯವರದು.

ಬಡ ಶಿಕ್ಷಕರ ಮಗನಾಗಿ ಹುಟ್ಟಿ, ಹೊಂಬಳದ ಹೊಂಬೆಳಕಿನಿಂದ ಧಾರವಾಡದ ಚೆಂಬೆಳಕಿಗೆ ಬಂದು ನೆಲೆಸಿದ ತರುಣದಲ್ಲಿ ಕಣವಿಯವರಿಗೆ ಅನೇಕಾನೇಕ ಹಿರಿಯರ ವಾತ್ಸಲ್ಯದಾಶ್ರಯ ದೊರೆತ ಅಂಶವನ್ನಿಲ್ಲಿ ಗಮನಿಸಬಹುದು. ಧಾರವಾಡದಲ್ಲಿ ಅವರು ಕಲಿತ ಶಾಲೆ ಕಾಲೇಜಿನ ಅಧ್ಯಾಪಕರು, ಕಾವ್ಯ ಪ್ರಪಂಚದಲ್ಲಿಯ ಪ್ರಮುಖರು, ಸಾಮಾಜಿಕ ಮತ್ತು ಸಾಂಸ್ಕೃತಿಕ ಕಾರ್ಯಕ್ಷೇತ್ರಗಳಲ್ಲಿ ದುಡಿದ ಮುಂದಾಳುಗಳು ಕಣವಿಯವರನ್ನು ಬಲು ಪ್ರೀತಿಯಿಂದ, ವಿಶ್ವಾಸದಿಂದ ನೋಡಿಕೊಂಡು ಅವರ ತರುಣ ಮನಸ್ಸಿನಲ್ಲಿ ಹೊಸ ಭರವಸೆಗಳನ್ನು ಕುದುರಿಸಿದ ಸಂಗತಿಯನ್ನು ಅವರು ಅಭಿಮಾನದಿಂದ ಸ್ಮರಿಸಿಕೊಳ್ಳುವುದುಂಟು. ಹಿರಿಯರಿಂದ ವಿಪುಲವಾಗಿ ತಮಗೆ ದೊರೆತ ಈ ಪ್ರೀತಿ-ವಿಶ್ವಾಸಗಳನ್ನಿಂದು ಕಣವಿಯವರು ತಮ್ಮ ತರುಣ ಮಿತ್ರರಿಗೆ ಧಾರಾಳವಾಗಿ ಹಂಚಿಕೊಡುತ್ತಾರೆ. ತಮಗೆ ದೊರೆತ ಆಸ್ತಿಯನ್ನು ಇತರರಿಗೆ ಹಂಚಿಕೊಡುವುದಕ್ಕೂ ದೊಡ್ಡ ಮನಸ್ಸು ಬೇಕು ; ವಿಶಾಲ ದೃಷ್ಟಿ ಬೇಕು. ಹಂಚಿಕೊಟ್ಟಷ್ಟೂ ಬೆಳೆಯುತ್ತ ಹೋಗುವ ಸ್ನೇಹಸಂಪದದ ಸಮಾನವಿತರಣೆ ಕಣವಿಯವರ ದೊಡ್ಡ ಸಾಧನೆಗಳಲ್ಲೊಂದು. ಸ್ವಭಾವತಃ ಅವರು ಸಮಾಜವಾದಿ ಸೌಮ್ಯ ಸಮಾಜವಾದಿ. 'ಸರ್ವರಿಗು ಸಮಪಾಲು ಬೆಳುದಿಂಗಳು !' ಎಂಬುದು ಈ ಸಮಾಜವಾದಿಯ ಒಂದು ಸೂತ್ರ. ಪರಸ್ಪರ ಸ್ನೇಹ ವಿಶ್ವಾಸಗಳ ಪೋಷಣೆಯೊಳಗಂತೂ ಇವರದು ಪರಿಪೂರ್ಣ ಜಾತ್ಯತೀತವಾದ ನಿಲುವು.

ತಮ್ಮ ಜೀವನದಲ್ಲಾಗಲಿ, ಕಾವ್ಯಪ್ರಪಂಚದಲ್ಲಾಗಲಿ ಅತಿರೇಕಗಳ ದಾರಿ ಹಿಡಿಯುವುದು ಕಣವಿಯವರಿಗೆ ಸಲ್ಲದ ವಿಷಯ. ಕ್ರಮಕ್ರಮವಾಗಿ ಹೆಜ್ಜೆಯಿಟ್ಟು ಸೇತುವೆ ದಾಟಿ ಮುನ್ನಡೆಯುವ ಧೋರಣೆ ಇವರದು. ಅಂತೆಯೇ ಹಳಬರನ್ನು ಹಳಿಯದೆ, ಹೊಸಬರನ್ನು ಜಬರಿಸಿಕೊಳ್ಳದೆ ಒಂದು ಸಮತೂಕದಲ್ಲಿ ಮಾರ್ಗಕ್ರಮಣ ಮಾಡುವ ಹದ ಸಾಧಿಸಿಕೊಂಡ ಕಣವಿಯವರಿಗೆ ಹತ್ತು ಕಡೆಗಳಲ್ಲಿ ಹರಡಿಕೊಂಡಿರುವ ತರುಣ ಮಿತ್ರರ ಒಲವೂ ವಿಪುಲವಾಗಿ ದೊರೆಯುತ್ತದೆ, ಹಿರಿಯರ ಬೆಂಬಲವೂ ಹೇರಳವಾಗಿ ದೊರೆಯುತ್ತದೆ. ವಿಶ್ವವಿದ್ಯಾಲಯದ ವಿಸ್ತರಣ ಸೇವೆಯ ಶಿಬಿರಗಳಲ್ಲಿ, ಪುಸ್ತಕ ಪ್ರದರ್ಶನಗಳಲ್ಲಿ, ಕವಿ—ಸಮ್ಮೇಳನಗಳಲ್ಲಿ, ಸಾಹಿತ್ಯಿಕ ಮತ್ತು ಸಾಂಸ್ಕೃತಿಕ ಸಭೆ–ಸಮಾರಂಭಗಳಲ್ಲಿ ಕಣವಿ

ಯುವರ ವ್ಯಕ್ತಿತ್ವ, ಮಾತುಗಾರಿಕೆ, ಕಾವ್ಯವಾಚನಗಳಿಗೆಲ್ಲ ಮಾರು ಹೋಗುವ ತರುಣರು ಅವರ ಮೈತ್ರಿಗಾಗಿ ಹಾತೊರೆಯುತ್ತಾರೆ. (ನಂಬಿ ಕರೆದೊಡೆ ಓ ಎನ್ನನೇ ಶಿವನು ?) ಮಮತೆಯಿಂದ ಮುಂದೆ ಬರುವವರಿಗೆ ಕಣವಿಯವರ ಮಮತೆಯ ಪಾಲೂ ದೊರೆತೇ ದೊರೆಯುತ್ತದೆ. ಕನ್ನಡ ಕಾವ್ಯದಲ್ಲಿಯೂ, ಇತರ ಸಾಹಿತ್ಯ ಕೃತಿಗಳಲ್ಲಿಯೂ ನಡೆಯುವ ಪ್ರಯೋಗಗಳು ವಾಚಕರ ಇಲ್ಲವೆ ರಸಿಕರ ಮನ ತಟ್ಟುವಂತಾಗಲು, ಇಲ್ಲವೆ ಅವರ ವಿಚಾರಧಾರೆಗೆ ಸಾಣೆ ಹಿಡಿಯುವಂತಾಗಲು ಈ ತರುಣ ಮನಗಳನ್ನು ಹದಗೊಳಿಸುವುದು ಬಹು ಮುಖ್ಯ ಕಾರ್ಯವೆಂದು ಕಣವಿಯವರ ದೃಢವಾದ ನಂಬಿಕೆ. ಪ್ರಾಯಶಃ ಈ ವಿಷಯ ದಲ್ಲಿ ಯಾರ ಭಿನ್ನಾಭಿಪ್ರಾಯವಿರಲಾರದಾದರೂ, ಕಣವಿಯವರಂತೆ ತರುಣರನ್ನು ಆತ್ಮೀ ಯತೆಯಿಂದ, ಅಕ್ಕರತೆಯಿಂದ ತಮ್ಮ ಸ್ನೇಹವಲಯದಲ್ಲಿ ಸೇರಿಸಿಕೊಂಡು ತರುಣರಲ್ಲಿಯೂ ತರುಣರಾಗಿ ಬಾಳುವ ಹದ ಮಾತ್ರ ಎಲ್ಲರಿಗೂ ಸಾಧಿಸಲಾರದು. 'ಕಂಡಕಂಡವರೇನು ಬಲ್ಲರಿದನು, ಉಂಡವನೆ ಕಂಡಿಹನು ಇದರ ಹದನು'.

ದೇಶಪಾಂಡೆ ಸುಬ್ಬರಾಯ

# ಕಿರಿಯರೊಂದಿಗೆ ಕಣವಿ: ಒಂದು ನೆನಪಿನೆಳೆಗುಂಟ

೧೯೬೭ರ ಪ್ರಾಯಶಃ ಮಧ್ಯಭಾಗ. ನನ್ನ 'ನಾಲ್ಕು ಹಿಡಿ ಬೆಂಕಿ' ಕವನ ಸಂಗ್ರಹ ಪ್ರಕಟನೆಗೆ ಸಿದ್ಧವಾಗಿತ್ತು. ಆಗ ಎಲ್ಲಕ್ಕೂ ಮುಂಚೆ ಇದಕ್ಕೊಬ್ಬರು ಪ್ರಕಾಶಕರು ಬೇಕಾ. ಗಿದ್ದರು. ಆದರೆ, ನಾನು ಬೇಕು ಎನ್ನುವುದಕ್ಕೆ ಮುಂಚೆಯೇ ಸಿಕ್ಕರು, ಪ್ರೊ. ಕೆ. ಎಸ್. ಶರ್ಮ ಇದಕ್ಕಾಗಿ ಒಬ್ಬ ಮುನ್ನುಡಿಕಾರರು ಬೇಕು ಎಂಬ ಸಮಸ್ಯೆ ಎದುರಾಯಿತು. 'ಕಣವಿ' ಎಂದು ನಾನೆಂದೆ. ಹೌದು 'ಕಣವಿ' ಎಂದು ಶರ್ಮರೂ ಅಂದರು. ಎಂದರೆ ಹೆಸರು ಸಿಕ್ಕಿತು. ಆದರೆ ವ್ಯಕ್ತಿ ಸಿಗಲಿಲ್ಲ. ಏಕೆಂದರೆ ವೈಯಕ್ತಿಕವಾಗಿ ನನಗೆ ಕಣವಿ ಗೊತ್ತಿರಲಿಲ್ಲ. ವೈಯಕ್ತಿಕವಾಗಿ ಶರ್ಮರಿಗೆ ಪುರುಸೊತ್ತಿರಲಿಲ್ಲ. ಮತ್ತು ಈಗಿನಷ್ಟು ಸಥಿ ಶರ್ಮ ರೊಂದಿಗೆ ಕೂಡ ಆಗ ನನಗಿರಲಿಲ್ಲ. ಹೀಗಾಗಿ ಶರ್ಮರನ್ನು ಈ ಬಗ್ಗೆ ಹೆಚ್ಚು ಒತ್ತಾಯ ಪಡಿಸುವುದಕ್ಕೆ ನನಗೆ ಒಳಗೊಳಗೇ ಸಂಕೋಚ ; ಬಹಳ ಸಲ ಅನೇಕ ವ್ಯಕ್ತಿಗಳೊಂದಿಗೆ ಸರಳವಾಗಿ ಬೆರೆಯಲು ಅನೇಕ ಬಗೆಯಲ್ಲಿ ಅಡ್ಡಿಯನ್ನೊಡ್ಡುವ ನನ್ನ ಸ್ವಭಾವ ದೋಷದ ಸಂಕೋಚ. ಎಂತಲೇ ಮುನ್ನುಡಿಯ ವಿಷಯದಲ್ಲಿ ನಾನೇ ಮುಂದುವರೆಯಬೇಕಾಗಿತ್ತು.

ಆಗ ನಾನು ಕಣವಿಯವರಿಗೆ ಒಂದು ಪತ್ರ ಬರೆದೆ; ನನ್ನ ಮೊದಲ ಪತ್ರ. 'ನನ್ನ ಹೆಸರು ದೆಸೆಗಳು ಹೀಗೀಗೆ. ನನ್ನ ಒಂದು ಕವನ ಸಂಕಲನ ಪ್ರಕಟವಾಗಲಿದೆ. ಅದಕ್ಕೆ ನೀವು ಮುನ್ನುಡಿ ಬರೆಯಬೇಕೆಂದು ನನ್ನ ಅಪೇಕ್ಷೆ. ಬರೆಯಲು ಸಾಧ್ಯವೇ ; ದಯವಿಟ್ಟು ತಿಳಿಸಿ' ಎಂದು.

ಪತ್ರ ಹೋಗಿ ತಿಂಗಳಾಯಿತು. ಕಣವಿ ಉತ್ತರಿಸಲಿಲ್ಲ. ಮತ್ತೊಂದು ಪತ್ರ ಬರೆದೆ. ಉತ್ತರವಿಲ್ಲ, ಮತ್ತೊಂದು ಬರೆದೆ, ಈ ಸಲ ಉತ್ತರ ಬಂತು. 'ನನ್ನ ಆರೋಗ್ಯ ಸರಿ ಇರಲಿಲ್ಲ. ನಿಮ್ಮ ಮೊದಲ ಪತ್ರಗಳಿಗೆ ಕಾರಣಾಂತರಗಳಿಂದ ಉತ್ತರಿಸಲಿಲ್ಲ. ನನ್ನ ಆರೋಗ್ಯ ಸುಧಾರಿಸಿದ ನಂತರ ನಿಮ್ಮ ಸಂಕಲನವನ್ನು ನೋಡುತ್ತೇನೆ. ಆಗಬಹುದಲ್ಲವೆ ?"*

*ಇದು ನನಗೆ ಬಂದ ಕಣವಿಯವರ ಮೊದಲಪತ್ರ, ನೋಡಿದೆ : ಎಲ್ಲಕ್ಕೂ ಮೊದಲು ಎದ್ದು ಕಂಡದ್ದು ಅವರ ಅಕ್ಷರಗಳು. ಇದಕ್ಕೂ ಕಾರಣ ನನ್ನ ಇನ್ನೊಂದು ಚಟ ; ಅಕ್ಷರಗಳನ್ನು ನೋಡಿ ವ್ಯಕ್ತಿಯ ಗುಣಾವಗುಣಗಳನ್ನು ತರ್ಕಿಸುವ ನನ್ನ ವಿಶಿಷ್ಟ ಚಟ. ಆ ಅಕ್ಷರಗಳ ದುಂಡುತನ, ಜೋಡ ಣೆಯ ವೈಶಿಷ್ಟ್ಯ, ಸಾಲುಗಳ ಶಿಸ್ತು, ಈ ಶಿಸ್ತು ಒತ್ತಾಯಪೂರ್ವಕವಾಗಿ ತಂದದ್ದಲ್ಲ ಎನ್ನುವ ಸರಳತೆ ಈ ಬರೆಯುವ ಕೈಯಲ್ಲಿ, ಕೈಯನ್ನು ಹೊಂದಿದ್ದ ಮೈಯಲ್ಲಿ, ಮೈಯನ್ನು ಹೊಂದಿದ ಮಾನಸು–ತಲೆ ಗಳಲ್ಲಿ ತುಂಬ ಸ್ವಾಭಾವಿಕವಾದದ್ದು ಎಂದು ತೋರಿಸುವ Strokes ; ಕೆಲವು ವಿಶಿಷ್ಟ ಪದಗಳು-ಪದ ಪುಂಜಗಳು—-ಸನ್ನಿವೇಶದ ಒತ್ತಾಸೆ ಎಷ್ಟೋ ವ್ಯಕ್ತಿಯ ಒತ್ತಾಸೆಯೂ ಹೌದು.

'ಖಂಡಿತವಾಗಿ' ಎಂದುಕೊಂಡೆ· ಅವರ ಆರೋಗ್ಯ ಸುಧಾರಣೆಗಾಗಿ ಕಾದೆ. ಈ ವೇಳೆಯ ಸುಮಾರಿಗೆ ಅವರ ಆರೋಗ್ಯ ಸಾಕಷ್ಟು ಸುಧಾರಿಸಬಹುದು ಎಂದು ನನಗನಿಸುವವರೆಗೂ ಕಾದು ನಂತರ ಮತ್ತೊಂದು ಪತ್ರ ಬರೆದೆ,

ಈ ಸಲ ಉತ್ತರ ಬಂದದ್ದು ಹುಬ್ಬಳ್ಳಿಯ ಕೆ. ಎಂ. ಸಿ.ಯಿಂದ :

'ಅನಾರೋಗ್ಯ ಹೆಚ್ಚಾಗಿದೆ. ಸದ್ಯಕ್ಕಂತೂ ಮುನ್ನುಡಿ ಬರೆಯಲಿಕ್ಕೆ ಆಗಲಿಕ್ಕಿಲ್ಲ. ನಿಮಗೆ ತಡವೂ ಆಗಬಹುದು. ಆದ್ದರಿಂದ ಈ ಕಾರ್ಯವನ್ನು ನೀವು ಬೇರೆ ಯಾರಿಂದಲಾದರೂ ಮುಗಿಸಿಕೊಂಡರೆ ಒಳ್ಳೆಯದಾದೀತಲ್ಲವೆ'

'ಕ್ಷಮಿಸಿ, ನನ್ನ ಈ ಸಂಗ್ರಹಕ್ಕೆ ನೀವೇ ಮುನ್ನುಡಿಯನ್ನು ಬರೆಯಬೇಕು ಎಂದು ನಾನು ನಿರ್ಧರಿಸಿಕೊಂಡಿದ್ದೇನೆ. ನಿಮ್ಮ ಆರೋಗ್ಯ ಪೂರ್ಣವಾಗಿ ಸುಧಾರಿಸಿದ ನಂತರವೇ ಬರೆಯುವಿರಂತೆ. ನಂತರ ಬರೆಯುತ್ತೇನೆ.'—ನನ್ನ ಉತ್ತರ.

ನಂತರ ಸಾಕಷ್ಟು ಸಮಯದ ನಂತರವೇ ನಾನು ಪತ್ರ ಬರೆದೆ.

'ಇನ್ನ ೧೫-೨೦ ದಿನಗಳು ತಡೆದರೆ ಆಗಬಹುದಲ್ಲವೇ' ಎಂದರು ಅವರು.

ತಡೆದೆ. ಈ ಅವಧಿಯ ನಂತರ ಮತ್ತೆ ಬರೆದೆ,

'ಈಗ ಕಳಿಸಿ, ನಾನು ಬರೆಯಬಲ್ಲೆ'.

ಅಂತೂ ಸಮಯ ಬಂದಿತ್ತು; ಕಳಿಸಿದೆ, 'ನಿಮಗೆ ಅನಿಸಿದ್ದನ್ನೂ ಸ್ಪಷ್ಟವಾಗಿ ಬರೆಯಿರಿ' ಎಂದೂ ತಿಳಿಸಿದೆ.

ಕೆಲವು ದಿನಗಳು ಕಳೆದವು. ಈ ಮಧ್ಯೆ ಕಣವಿ ಯಾರ್ಯಾರನ್ನು ಭೆಟ್ಟಿಯಾಗಿದ್ದರೋ ಏನೇನನ್ನು ನನ್ನ ಬಗ್ಗೆ ವಿಚಾರಿಸಿದ್ದರೋ ಗೊತ್ತಿಲ್ಲ. ಬಹುಶಃ, ಈ ಮುಂಚೆ ನನ್ನ ಕೆಲವು ಕವನಗಳು ಪ್ರಕಟವಾದದ್ದು ಅವರಿಗೆ ತಿಳಿದಿರಬೇಕು. ಅಂತಲೇ ಅವರು ನನಗೊಂದು ಪತ್ರ ಬರೆದರು, ಪತ್ರದ ಸಾರಾಂಶ :

'ನಿಮ್ಮ ಕೆಲವು ಕವನಗಳು ಈ ಮುಂಚೆ ಪ್ರಕಟವಾಗಿವೆ ಎಂದು ತಿಳಿದಿದ್ದೇನೆ. ಅವುಗಳನ್ನು ಒಮ್ಮೆ ನೋಡಿದರೆ, ನಿಮ್ಮ ಈ ಕೈಯಲ್ಲಿರುವ ಸಂಗ್ರಹ ಕುರಿತಂತೆ ಬರೆಯಲು ಅನುಕೂಲವಾದೀತೇನೋ. ಆ ಕವನಗಳನ್ನು ತೆಗೆದುಕೊಂಡು ಬರ್ರಿ. ಎಂದರೆ

---

ಎನಿಸುವ ವಿನೀತ ನಿಲುವು ; ಒಂದೇ ಎರಡೇ, ಆ ಅಕ್ಷರಗಳನ್ನು ನೋಡಿ ಹೊಳೆದದ್ದು ಹಲವಾರು ವಿಷಯಗಳು. ನನ್ನ ತರ್ಕ ಸತ್ಯಕ್ಕೆ ಎಷ್ಟು ಸಮೀಪ ಎನಿಸಿದ್ದು ; ಮುಂದೆ ವೈಯಕ್ತಿಕವಾಗಿಯೂ ಕಣವಿಯವರನ್ನು ಸಮೀಪದಿಂದ ನೋಡಿದಾಗ,

ಸಮೀಪದಿಂದ ನೋಡಿದಾಗ ಎಂದಾಗ ಇನ್ನೊಂದು ಸಂಗತಿಯನ್ನು ಹೇಳಬೇಕು. ಯಾರಾದರೂ ಶಿಷ್ಯನೆನಿಸುವ ವ್ಯಕ್ತಿ (ಅಥವಾ ಅಂದುಕೊಳ್ಳುವ ವ್ಯಕ್ತಿ ಎಂದೂ ಅನ್ನೋಣವೇ ?) ಮೊದಲ ಸಲ ಭೆಟ್ಟಿಯಾದಾಗ ಅವರೊಂದಿಗೆ ಮಾತುಕತೆಯಾಡುತ್ತಲೇ ವ್ಯಕ್ತಿಯಾಗಿ ಅವರನ್ನು ಪೂರ್ತಿಯಾಗಿ ಮತ್ತು ಪ್ರತ್ಯೇಕವಾಗಿ ಅಭ್ಯಸಿಸುವುದೂ ನನ್ನ ಇನ್ನೊಂದು ಅಭ್ಯಾಸವಾಗಿಬಿಟ್ಟಿದೆ. ಅವರು

ವೈಯುಕ್ತಿಕ ಪರಿಚಯುದೊಂದಿಗೆ ಕಾವ್ಯ ಕುರಿತಂತೆ ಕೆಲವು ಮಾತುಗಳನ್ನು ಆಡಬಹುದಲ್ಲವೇ !'

ಈಗ, ಇಲ್ಲಿ ನಾನೊಂದು ಮಾತನ್ನೂ ಹೇಳಬೇಕು. ಅದೆಂದರೆ, ನನ್ನ ಕೆಲವು ಕವನಗಳು ಈ ಮುಂಚೆ (೧೯೬೭) ಪ್ರಕಟವಾದದ್ದು ನಿಜ. ಅವುಗಳಲ್ಲಿ ಕೆಲವಾದರೂ ಹಲವು ಒಳ್ಳೆಯ ಗುಣಗಳನ್ನು ಹೊಂದಿದ್ದು ನಿಜ. (ಅಂತಲೇ ಅಮೂಲಾಗ್ರವಾಗಿ ನನ್ನ ಕಾವ್ಯದ ಬೆಳವಣಿಗೆಯನ್ನು ಅಭ್ಯಸಿಸುವವರಿಗೆ ಅನುಕೂಲವಾಗಲೆಂದು ಅಲ್ಲಿಯ ಕೆಲವು ಪ್ರಾತಿನಿಧಿಕ ಕವನಗಳನ್ನು ಈಗ ಎರಡನೆಯ ಮುದ್ರಣಕ್ಕೆ ಅಣಿಗೊಳಿಸುತ್ತಿದ್ದೇನೆ. ಇರಲಿ,) ಆದರೆ ನನ್ನ ಪ್ರಸಕ್ತ ಕವನ ಸಂಗ್ರಹ 'ನಾಲ್ಕು ಹಿಡಿ ಬೆಂಕಿ'ಯ ಕವನಗಳು ಮುಂಚಿನ ಕವನಗಳಿಗಿಂತ ತೀರ ಭಿನ್ನವಾಗಿದ್ದವು. ತೀರ ಭಿನ್ನವಾದ ಪರಿಸರದಲ್ಲಿ. ವ್ಯಕ್ತಿತ್ವ'ದಲ್ಲಿ, ಅಭಿವ್ಯಕ್ತಿಯಲ್ಲಿ ಬರೆಯಲ್ಪಟ್ಟಿದ್ದವು. ಒಂದು ದೃಷ್ಟಿಯಿಂದ ನನ್ನ ಕಾವ್ಯದ ಬದುಕಿನಲ್ಲಿ ಅವಶ್ಯಕವಾದ ಒಂದು ಹೊರಳುವಿಕೆಗೆ ಈ ಕವನಗಳು ಸಂಕೇತವಾಗಿದ್ದವು. ಎಂತಲೇ ಆ ಕವನಗಳನ್ನು ನನ್ನ ಇನ್ನಾವುದೇ ಹಿಂದಿನ ಕವನಗಳ ಬದಿಗಿತ್ತು ನೋಡುವದೂ, ನನಗೆ ಬೇಡವಾಗಿತ್ತು. (ಅಷ್ಟೇ ಏಕೆ, ನನ್ನ ಮುಂದಿನ ಅನೇಕ ಕವನಗಳನ್ನು ಇದರ ಬದಿಗಿತ್ತು ನೋಡುವುದೂ ಕೆಲವಾದರೂ ದೃಷ್ಟಿಗಳಿಂದ ತಪ್ಪಾಗಬಹುದೇನೋ. ಏಕೆಂದರೆ ಆ ಕವಿತೆಗಳ ತುಡಿತವೇ ತೀರ ಭಿನ್ನವಾದದ್ದು.) ಎಂತಲೇ ಕಣವಿಯವರ ಮೇಲಿನ ಪತ್ರಕ್ಕೆ ಉತ್ತರವಾಗಿ ನಾನೊಂದು ಕಾಗದ ಬರೆದೆ. ಈಗ, ಸುಮಾರು ಹತ್ತುವರ್ಷಗಳನಂತರ, ಈಗ, ನಾನೂ ಆ ಸಂಗತಿಯನ್ನು ನೆನಪಿಸಿಕೊಳ್ಳುತ್ತಿರುವ ಸಂದರ್ಭದಲ್ಲಿ ಆ ಕಾಗದದ ಪೂರ್ತಿ, ಒಕ್ಕಣಿ ನೆನಪಿಲ್ಲವಾದರೂ ಪದಪುಂಜಗಳು ನನಗಿನ್ನೂ ನೆನಪಿವೆ. ಆ ಪತ್ರಬಹುಶಃ ಹೀಗಿತ್ತು :

'ಮಾನ್ಯರೆ,

ನಾನು ನಿಮಗೆ ಮುನ್ನುಡಿಯನ್ನು ಬರೆಯಲು ಕೇಳಿಕೊಂಡದ್ದು ಸದ್ಯ ನಿಮ್ಮ ಕೈಯಲ್ಲಿರುವ ಕವನಗಳಿಗೆ ಮಾತ್ರ; ನನ್ನ ಹಿಂದಿನ ಕವನಗಳಿಗಲ್ಲ. ಆದ್ದರಿಂದ ಅವುಗಳನ್ನು ನಿಮಗೆ ಕಳಿಸುವ ಅಗತ್ಯ ನನಗೆ ಕಾಣಿಸುವುದಿಲ್ಲ.

ಎರಡನೆಯದಾಗಿ ನನಗೆ ಬರಲು ತಿಳಿಸಿದ್ದೀರಿ. ನಿಮ್ಮ ಆಮಂತ್ರಣಕ್ಕೆ ಕೃತಜ್ಞ. ಆದರೆ, ನನ್ನ ಕವನಗಳಿಗೆ ಮುನ್ನುಡಿ ಬರೆಯುವ ಸಂದರ್ಭದಲ್ಲಿ ಸ್ವತಃ ನಾನೇಕೆ ಹಾಜರಿರಬೇಕೊ ತಿಳಿಯಲಿಲ್ಲ.

---

ಮಾತಾಡುವ ರೀತಿ, ಇನ್ನೊಬ್ಬರ ಮಾತುಗಳನ್ನು ಕೇಳಿಕೊಳ್ಳುವ ರೀತಿ, ಮಾತಾಡುವಾಗಿನ ಹಾವಭಾವಗಳು, ಸ್ವರಖಚಿತತೆಗಳು, ಸ್ವರಲೋಪಗಳು, ದೈಹಿಕ ಪ್ರಕ್ರಿಯೆಗಳು; ಕೂತ ಅಥವಾ ನಿಂತ ಭಂಗಿ. ಭಂಗಿಯ ಬದಲಾವಣೆಗಳು, ಹುಬ್ಬು, ರೆಪ್ಪೆ, ಮೋರೆಯ ಗೆರೆಗಳ ಚಲನ ವಲನಗಳು ಇವನ್ನೆಲ್ಲ ಪ್ರತ್ಯೇಕವಾಗಿ ಎತ್ತಿ ಎತ್ತಿ ನೋಡುತ್ತೇನೆ. ಏಕೆಂದರೆ ಎಷ್ಟೋ ಸಲ ಮಾತುಗಳಲ್ಲಿಯೂ ಬರಹಗಳಲ್ಲಿಯೂ ಸಿಗಲಾರದ ಒಬ್ಬ ವ್ಯಕ್ತಿಯ ಸ್ವಭಾವನೇಕಾದಿಗಳು ಇಂಥಲ್ಲಿ ಸ್ಪಷ್ಟವಾಗಿ ಎದ್ದು ಕಾಣುತ್ತವೆ. ಇದನ್ನೆಲ್ಲ ಇಷ್ಟೊಂದ ವಿವರವಾಗಿ ಹೇಳಲು ನನಗಿರುವ ಕಾರಣ ಒಂದೇ; ಎಷ್ಟು ಆಯಾಮಗಳಿಂದ ಸಾಧ್ಯವೋ

ಖರೇ ಮಾತೆಂದರೆ ; ನನ್ನ ಹಿಂದಿನ ಕವನಗಳನ್ನು ನಿಮಗೆ ತೋರಿಸುವದೂ, ಅವುಗಳಿಗೆ ಬಂದ ಕೆಲವಾದರೂ ಸ್ತುತಿಪರ ವಿಮರ್ಶೆಗಳನ್ನು ನಿಮ್ಮೆದುರು ಮಂದಸ್ಮಿತನಾಗಿ ವಿವರಿಸುವದೂ, ಮತ್ತು ಸ್ವತಃ ನಾನೇ ಹಾಜರಿದ್ದು ನನ್ನ ಮಾತು-ಕತೆ, ಹಾವ ಭಾವಾದಿಗಳಿಂದ, ಪ್ರಾಯಶಃ ನನ್ನ ಪ್ರಸ್ತುತ ಕವನಗಳಲ್ಲಿ ಇಲ್ಲದೇ ಇರಬಹುದಾದ ಒಂದು ಪ್ರಭಾವವನ್ನು ನಿಮ್ಮ ಮೇಲೆ ಬೀರುತ್ತ ಒಂದು ಬಗೆಯ ಅವಾಸ್ತವ, ಅವಿಮರ್ಶಾತ್ಮಕ ಬಲೆಯನ್ನು ಹೆಣೆಯುವುದೂ—ಇವೆಲ್ಲವೂ ನಾನು ಅಂದುಕೊಂಡಂತಹ ಒಂದು ತೀರ ತೀರ ಶುದ್ಧ ನಿಲುವಿಗೆ ಧಕ್ಕೆ ತಂದುಬಿಡಬಹುದೇ ಎಂಬ ಭಯ ನನಗಿದೆ. ಆದ್ದರಿಂದ ನಾನು ನಿಮ್ಮಲ್ಲಿಗೆ ಬರುವದೂ ಇಲ್ಲ. ಮತ್ತು ನನ್ನ ಹಿಂದಿನ ಕವನಗಳನ್ನು ನಿಮ್ಮಲ್ಲಿಗೆ ತರುವದೂ ಇಲ್ಲ. ನೀವು ಮುನ್ನುಡಿಯನ್ನು ಬರೆಯುವುದೇ ಆದಲ್ಲಿ ಈಗಿರುವ ಕವನಗಳನ್ನು ಕುರಿತಷ್ಟೇ ಬರೆಯಬೇಕು. ಪರಿಸ್ಥಿತಿಯ ವಿವರಣೆ ಇಷ್ಟು. ಇನ್ನು ಬರೆಯುವುದು ಬಿಡುವುದೂ ನಿಮಗೆ ಬಿಟ್ಟ ವಿಷಯ.

ನಿಮ್ಮ

ದೇಶಪಾಂಡೆ ಸುಬ್ಬರಾಯ

ವಿ. ಸೂ : ಅಕಸ್ಮಾತ್ತಾಗಿ, ಯಾವುದೇ ಕಾರಣದಿಂದಾಗಿ ಮುನ್ನುಡಿ ಬರೆಯುವುದು ಆಗದು ಎನಿಸಿದಲ್ಲಿ ಯಾವುದೇ ಮುಲಾಜಿಲ್ಲದೆ ನನ್ನ ಕವನಗಳ ಹಸ್ತ ಪ್ರತಿಯನ್ನು ಕೂಡಲೇ ವಾಪಸು ಕಳಿಸಿ ಬಿಡಬಹುದು.'

......ಬಿಡಬಹುದೇನು, ತಿರುಗಿ ಕಳಿಸಿಯೇ ಬಿಡುತ್ತಾರೆ ಎಂದು ನಾನೂ ಅಂದು ಕೊಂಡಿದ್ದೆ ; ಇದ್ದ, ಒಬ್ಬಿಬ್ಬರೇ ಆದ ನನ್ನ ಸ್ನೇಹಿತರು ಅಂದು ಕೊಂಡಿದ್ದರು ; ಮೇಲಿನ ನನ್ನ ಪತ್ರ ನೋಡಿ.

ಆದರೆ, ಆಶ್ಚರ್ಯವೆಂದರೆ ಮುಂದೆ ಕೆಲವೇ ದಿನಗಳಲ್ಲಿ ಕಣವಿಯವರ ಪತ್ರ ಬಂತು. ಒಳಗೆ ಕವನಗಳ ಹಸ್ತ ಪ್ರತಿ ಇತ್ತು. ಹಸ್ತಪ್ರತಿಯೊಂದಿಗೆ ಮುನ್ನುಡಿಯೂ ಇತ್ತು. ಆದಕ್ಕೆ ಅವರು 'ಕೃತಿ ಪರಿಚಯ' ಎಂದಿದ್ದರು. ಕೃತಿಯ ಬಗ್ಗೆ ತುಂಬ ನಿರ್ವಿಕಾರವಾಗಿ ನಿರ್ದುಷ್ಟವಾಗಿ ಅಭ್ಯಸಿಸಿ ಬರೆದಿದ್ದರು. 'ಕೃತಿಕಾರನ ಪರಿಚಯವಾಗದೆ ಹೆಚ್ಚಿಗೇನು ಹೇಳಲಿ' ಎಂದು ಮುಗಿಸಿದ್ದರು. ಆ 'ಹೆಚ್ಚಿಗೆ ಏನಾದರೂ' ಹೇಳುವದೇ ನನಗೆ ಬೇಡವಾಗಿತ್ತಲ್ಲವೆ ?

---

ಅಷ್ಟೆಲ್ಲ ಆಯಾಮಗಳಿಂದಲೂ ಎದುರಿಗಿರುವ ಮನುಷ್ಯನನ್ನು ಅಭ್ಯಸಿಸಬೇಕು; ಮನುಷ್ಯನೊಬ್ಬ ಹರಡಿಕೊಳ್ಳಲು ಸಾಧ್ಯವಾಗಬಹುದಾದ ಎಲ್ಲ ಹರಹುಗಳನ್ನು ಅದರ ಸಮಗ್ರ ವಿಶಿಷ್ಟತೆಗಳೊಂದಿಗೆ ಅಭ್ಯಸಿಸಬೇಕು ಎನ್ನುವ ಒಂದು ಕುತೂಹಲದಾಯಕ ತವಕ. ಹೀಗೆ ನನ್ನ ಪುಟ್ಟ ಅಭ್ಯಾಸದ ಮಿತಿಯಲ್ಲಿ ನಾನು ತರ್ಕಿಸಿಕೊಂಡ ಮತ್ತು ಆಮೇಲೆ ಬೇರೆ ಬೇರೆ ಕೋನಗಳಿಂದ ಪ್ರಮಾಣಿಸಿಕೊಂಡ ವ್ಯಕ್ತಿತ್ವಗಳನ್ನು. ಬರೆಯುತ್ತ ಕೂತರೆ ಅದೊಂದು ದೊಡ್ಡ ಮಹಾಭಾರತವೇ ಆಗಬಹುದು, ಎಲ್ಲ ದೃಷ್ಟಿಗಳಿಂದ ಅಂತಲೇ ಅಂಥ ದುಃಸಾಹಸಕ್ಕೆ ಈಗ ಕೈ ಮುಗಿದು ಸದ್ಯಕ್ಕೆ ಕಣವಿಯವರ ಬಗ್ಗೆ ಮಾತ್ರ ಇಷ್ಟು ಹೇಳಬಲ್ಲೆ.

ಸರಿ. ಮುಂದಿನದೆಲ್ಲ ಸುಖಾಂತವೇ. ಪುಸ್ತಕ ಬಂತು. ಮುನ್ನುಡಿಯೂ ಬಂತು. ಮುದ್ರಣವೆಲ್ಲಾ ಮುಗಿದು ಪುಸ್ತಕದ ಬಿಡುಗಡೆಯೂ ಆಯಿತು, ಮಾಡಿದವರೂ ಅವರೇ. ಆಗ, ಪುಸ್ತಕ ಕುರಿತಾಗಿ ಇನ್ನೂ ಕೆಲವು ಬೆಲೆಯುಳ್ಳ ಮಾತು ಗಳನ್ನು ಆಡಿದರು ಕಣವಿ. ಅಷ್ಟೇ ಏಕೆ; ನನ್ನ ಪುಸ್ತಕ ಕುರಿತಾಗಿ ತಾವು ಬರೆದ ಮಾತುಗಳನ್ನು ತಮ್ಮ ವಿಮರ್ಶಾತ್ಮಕ ಸಂಕಲನ 'ಸಮಾಹಿತ' ದಲ್ಲಿಯೂ ಸೇರಿಸಿಕೊಂಡರು; ನನ್ನ ಪುಸ್ತಕದ ಮೌಲ್ಯವನ್ನು ಹೆಚ್ಚಿಸಿದರು. ಅದೆಲ್ಲ ಇಲ್ಲಿ ಅಪ್ರಸ್ತುತ. ಇಲ್ಲಿ ನನ್ನ ಕೃತಿ ಉತ್ತಮವಾಗಿತ್ತೋ ಅಥವಾ ಕೃತಿ ಪರಿಚಯ ಉತ್ತಮವಾಗಿತ್ತೊ ಎಂಬುದಾಗಲೀ ಅಥವಾ ಅಷ್ಟು ದಿನವೂ ಕಾದು ಕೂತ ನನ್ನ ತಾಳ್ಮೆ ದೊಡ್ಡದಾಗಿತ್ತೋ ಅಥವಾ ನನ್ನ ಅಹಂಕಾರವನ್ನು ತಾಳಿಯೂ ಸಹಕರಿಸಿದ ಕಣವಿಯವರ ನಿಸ್ಪೃಹತೆ ದೊಡ್ಡದಾಗಿತ್ತೋ ಎಂಬುದಾಗಲಿ ಇಲ್ಲಿ ಮುಖ್ಯವಲ್ಲ. ಆದರೆ ಮುಖ್ಯವೆನಿಸುವದು ಈ ಪ್ರಸಂಗದ ಹಿನ್ನೆಲೆಯ ಉಲ್ಲೇಖ : ಅದರ ಹಿಂದೆ ತುಡಿದ ಪ್ರಾಮಾಣಿಕ ಮತ್ತು ನಿಸ್ಪೃಹ ಸಂಬಂಧಗಳ,—ನಮ್ಮ ಪ್ರಸಕ್ತ ಸಾಹಿತ್ಯಕ ಜಗತ್ತಿಗೆ ತುಂಬ ಅಗತ್ಯವಾಗಿ ಬೇಕಾಗಿರುವ ನೆಲೆಗಟ್ಟಿನ ನೈತಿಕ ಸಾಹಿತ್ಯ ಸಂಬಂಧಗಳ ಮೌಲ್ಯಾತ್ಮಕ ಸಂವೇದನೆ. ಅಂದು ಸುವಹನಗೊಳ್ಳಲು ಆರಂಭವಾದ ಆ ಒಂದು ಪ್ರಾಮಾಣಿಕ ನೆಲೆಗಟ್ಟಿನ ಸಂವೇದನೆ ಇಂದಿಗೂ ಅದೇ ನಿಸ್ಪೃಹತೆಯೊಂದಿಗೆ. ಅದೇ ನೈತಿಕ ನಿಲುವುಗಳ ಪಾತಳಿಯಲ್ಲಿ ಅದೇ ಸ್ನಿಗ್ಧತೆಯೊಂದಿಗೆ ನಮ್ಮಿಬ್ಬರ ಮಧ್ಯ ಹರಿಯು ತ್ತಲೇ ಬಂದಿದೆ. ಸಂದರ್ಭಗಳನೇಕವು ನಮ್ಮನ್ನು ಮತ್ತೆ ಮತ್ತೆ ಒಟ್ಟುಗೂಡಿಸಿವೆ. ನನ್ನ ಬಗ್ಗೆ ಅವರು, ಅವರ ಬಗ್ಗೆ ನಾನು ಆಗಾಗ ಮಾತಾಡಿದ್ದೇವೆ, ಬರೆದಿದ್ದೇವೆ. ಒಟ್ಟೊಟ್ಟಿಗೆ ಕೂತು ಕಾವ್ಯ, ಸಾಹಿತ್ಯ, ಚರ್ಚೆ ಇತ್ಯಾದಿ ಮಾತುಗಳನ್ನಾಡಿದ್ದೇವೆ. ಆದರೆ ಈ ನಿಕಟತೆ ಎಂದೂ ನಮ್ಮಿಬ್ಬರ ಮಧ್ಯದ ನೈತಿಕತೆಯ ವರವನೇನ್ನೊಡೆದಿಲ್ಲ ; ಒಬ್ಬರೊಬ್ಬರ ಬಗ್ಗೆ ತೆಳುವು ಅಥವಾ ದಪ್ಪ ಮಾತುಗಳನ್ನಾಡಿಸಿಲ್ಲ. ಸುಳ್ಳು ಸ್ತುತಿಗಳನ್ನು ಎದುರಿಸಿಲ್ಲ. ಸಂದರ್ಭಕ್ಕೆಷ್ಟೊ ಅಷ್ಟೇ ಸಂಗತಿ : ಅಗತ್ಯಕ್ಕೆಷ್ಟೋ ಅಷ್ಟೇ ಮಾತು : ಹೀಗಿದ್ದೂ ಕಾರ್ಯಕ್ರಮ ಅಷ್ಟೊ ಪೂರ್ಣ ಯಶಸ್ವಿ ; ಇದು ಕಣವಿ ಸಹಚರ್ಯ.

ವಯಸ್ಸಿನಲ್ಲಿ ಕಣವಿ ಹಿರಿಯರು, ನಾನು ಚಿಕ್ಕವ. ಆದರೆ ಅವರೆಂದೂ ಆ ಹಿರಿತನ ತೋರಿಸಿಲ್ಲ. ಕವಿಗಳಾಗಿ ಅವರದು ದೊಡ್ಡ ಹೆಸರು, ನನ್ನದು ಸಣ್ಣದು. ಆದರೆ ಆ ದೊಡ್ಡ ಸ್ಥಾನ ಅವರಲ್ಲೆಂದೂ ಕಾಣಿಸಿಲ್ಲ. ಅಷ್ಟೇ ಏಕೆ, ತಮ್ಮ ಆಫಿಸಿಯಲ್ ಕುರ್ಚಿಯ ಮೇಲೆ ಕೂತಾಗಲೂ ಕೂಡ, ಆ ಹುದ್ದೆಯ ಎತ್ತರ ಅವರ ಚಹರೆಯ ಗೆರೆಗಳನ್ನು ಬಿರುಸು

---

ಕೇವಲ ಕಾವ್ಯ, ಬರಹ, ಮಾತು ಮಾತ್ರಗಳಿಂದಲ್ಲ, ವ್ಯಕ್ತಿತ್ವದ ಎಲ್ಲ ಬಗೆಯ ಸಾಮಾಜಿಕ ಅಭಿವ್ಯಕ್ತಿ ಗಳಿಂದಲೂ ನನ್ನ ಗೌರವಾದರಗಳನ್ನು ಗೆದ್ದುಕೊಂಡ ಕೆಲವೇ ಜನರಲ್ಲಿ ಇವರು ಒಬ್ಬರು. ನಮ್ಮ ಸಂಸ್ಕೃ ತಿಯ ಸುಕುಮಾರತೆಯ ಸಂಕೇತವಾದ ಇಂಥ ವ್ಯಕ್ತಿಗಳು ನಿರ್ಮಿಸಬಹುದಾದ ಪರಿಸರಗಳು ಕೂಡ ಎಂಥ ಒಂದು ಮೌಲ್ಯಾತ್ಮಕ ಔನ್ನತ್ಯಕ್ಕೇರಬಲ್ಲವು ಎಂಬ ಅರಿವು ನನಗಿರುವುದರಿಂದಲೇ ನಾನು ಈ ಮಾತುಗಳನ್ನೆಲ್ಲ ಹೇಳಬೇಕಾಯಿತಷ್ಟೆ, ಇಂಥವೇ ಮಾತುಗಳ ಕಾಲಂಶವನ್ನಾದರೂ ನಮ್ಮ ಕೆಲವಾದರೂ

ಗೊಳಿಸಿದ್ದನ್ನು ನೋಡಿಲ್ಲ. ಹತ್ತು ವರ್ಷಗಳಿಂದಲೂ ನಾನು ನೋಡುತ್ತಿದ್ದೇನೆ ; ಆ ಕಣವಿ, ಆ ಸಜ್ಜನಿಕೆ, ಆ ಸರಳತನ, ಆ ಆತ್ಮೀಯತೆ.

ಆದರೆ ಈ ಮಧ್ಯ, ಹತ್ತು ವರ್ಷಗಳ ದೀರ್ಘಾವಧಿಯ ಈ ಎಲ್ಲವುಗಳ ಮಧ್ಯ ನಾನಂತೂ ಬೇಕಾದಷ್ಟು ಬದಲಾಗಿದ್ದೇನೆ, ಬೆಳೆದಿದ್ದೇನೋ ಇಲ್ಲವೋ ಗೊತ್ತಿಲ್ಲ : ಆದರೆ ಬದಲಂತೂ ಆಗಿದ್ದೇನೆ, ಬೇಕಾದಷ್ಟು ಬರೆದಿದ್ದೇನೆ, ಪ್ರಕಟಿಸಿದ್ದೇನೆ. ಮಾತಾಡಿದ್ದೇನೆ, ಆಡಿಸಿದ್ದೇನೆ, ಜಗಳಾಡಿದ್ದೇನೆ, ಪ್ರೀತಿಸಿದ್ದೇನೆ, ಬೈದಿದ್ದೇನೆ, ಬೈಸಿ ಕೊಂಡಿದ್ದೇನೆ. ಬದಲಾಗುವ ಜಗತ್ತಿನೊಂದಿಗೆ. ಗುದ್ದಾಡುತ್ತ, ಕಿತ್ತಾಡುತ್ತ, ನೋಯುತ್ತ. ಬೇಯುತ್ತ ನನ್ನ (ದುಂಡಗಾದರೂ) ಗಂಟಾದ ಮುಖವನ್ನು ಮತ್ತೂ ಮತ್ತೂ ಗಟು ಮಾಡಿಕೊಳ್ಳುತ್ತಲೇ ಇದ್ದೇನೆ.

ಈ ಗದ್ದಲಗಳ ಮಧ್ಯವೂ ಕಣವಿ ಆಗೀಗ ಕಾಣಿಸುತ್ತಲೇ ಇರುತ್ತಾರೆ. ವಿಶ್ವವಿದ್ಯಾಲಯದ ಸಭೆಗಳಲ್ಲೋ, ವಿದ್ಯಾವರ್ಧಕ ಕಟ್ಟಡದಲ್ಲಿಯ ಜಗಳವರ್ಧಕ ಚಟುವಟಿಕೆಗಳಲ್ಲೋ, ಆಸಿಗ್ಗೊಮ್ಮೆ ಬ್ಯಾಸಿಗ್ಗೊಮ್ಮೆಯ ಹುಬ್ಬಳ್ಳಿಯ ಕಾರ್ಯಕ್ರಮಗಳಲ್ಲೋ ; ಕೊನೆಯ ಪಕ್ಷ ಸುಭಾಸ್ ರೋಡಿನಲ್ಲಿ ಕಾಯಿಪಲ್ಲೆ ಖರೀದಿ ಮಾಡುತ್ತಿರುವಾಗಲೋ ಕಾಣಿಸುತ್ತಾರೆ ಕಣವಿ. ಮೊದಲು ಎದುರಾಗುವುದು ಅವರ ಮುಗುಳ್ನಗೆ ನಂತರ ಅವರ ಧ್ವನಿ. 'ಬರ್ರಿ' ಎನ್ನುತ್ತಾರೆ ; ಇಲ್ಲ 'ಏನಂತೀರಿ' ಎನ್ನುತ್ತಾರೆ; ಇಲ್ಲ; 'ಭಾಳ ದಿವಸ ಕಂಡೇ ಇಲ್ಲಲ' ಎನ್ನುತ್ತಾರೆ; ಅದೆಲ್ಲಾ ಸಂದರ್ಭಾನುಸಾರ. 'ಹೌದ್ರೀ, ಇತ್ಲಾ ಕಡೆ ಬಂದೇ ಇಲ್ಲ ಎನ್ನುತ್ತೇನೆ, 'ಮತ್ತೇನಂತೀರಿ' ಎನ್ನುತ್ತಾರೆ ; ಕ್ರಮೇಣ ಮಾತುಗಳು ಸುರುವಾಗುತ್ತವೆ. ಕ್ರಮೇಣ ಮನಸ್ಸುಗಳು ಬಿಚ್ಚತೊಡಗುತ್ತವೆ. ಕ್ರಮೇಣ ಕಣವಿಯವರ ಅರ್ಥವತ್ತಾದ ವ್ಯಕ್ತಿತ್ವ ಹರಡಿಕೊಳ್ಳಲು ಆರಂಭಿಸುತ್ತದೆ.

ನೋಡುತ್ತೇನೆ : ಆ ಆತ್ಮೀಯತೆ, ಆ ಸೌಹಾರ್ದ, ಆ ಬಂಧುರತೆ, ಆ ಸರಳತೆ. ಹೋದಸಲ ಬೆಟ್ಟಿಯಾದಾಗಲೂ ಕಂಡದ್ದೇ ; ಆಚೆ ಸಲ ಬೆಟ್ಟಿಯಾದಾಗಲೂ ಕಂಡದ್ದೇ. ಅದೇ ಕಣವಿ, ಅದೇ ಸಜ್ಜನಿಕೆ, ಅದೇ ಸರಳತನ, ಅದೇ ಆತ್ಮೀಯತೆ ; A finished gentleman from top to toe. ಇಲ್ಲಿ gentleman ಎಂಬುದನ್ನು ತೆಗೆದು ಹಾಕಿ poet ಎಂದಿಟ್ಟರೂ ಅಷ್ಟೇ, critic ಎಂದಿಟ್ಟರೂ ಅಷ್ಟೇ ; orater ಎಂದಾಗಲೀ, friend ಎಂದಾಗಲೀ, officer ಎಂದಾಗಲೀ, ಏನಿಟ್ಟರೂ ಅಷ್ಟೇ. ಆಯಾ ವ್ಯಕ್ತಿತ್ವದ ಅಭಿವ್ಯಕ್ತಿಯ ತೂಕ ಬದಲಾಗದು.

A finished any thing from top to toe.
ನೆನಪಾಗುತ್ತದೆ ; ಡೆನ್‌ಹ್ಯಾಂನ 'ಕೂಪರ್ಸ್‌ಹಿಲ್.'

---

'ಶ್ರೇಷ್ಠ' ಬರಹಗಾರರ ಬಗ್ಗೆ ಹೇಳಬಹುದಾಗಿದ್ದರೆ! ಈ 'ರೆ' ಯ ಉದ್ಗಾರದ ಅನಿವಾರ್ಯತೆಯೇ ಪ್ರಾಯಶಃ, ನಮ್ಮ ಸಾಹಿತ್ಯಕ ಮತ್ತು ಸಾಮಾಜಿಕ ಅನ್ಯೋನ್ಯವಾದ ಅಭಾವಕ್ಕೆ ಒಂದು ಕಾರಣ ಎಂಬ

Though deep, yet clear ;
Though gentle, yet not dull ;
Strong without rage ;
without o'er flowing, full.

---

ಗುಮಾನಿ ನನಗಿದೆ. ಏನಿದ್ದರೂ ಇಂಥ ಒಂದು ಸಾಮಾಜಿಕ, ಸಾಹಿತ್ಯಕ ಮತ್ತು ವ್ಯಕ್ತಿತ್ವಗಳ ಬಿರುಕುಗಳ ಮಧ್ಯದಲ್ಲಿಯೂ, ಸರ್ವ ರಂಗಗಳ 'ಸಮಗ್ರೀಕರಣ ಬಲ'ದಿಂದ 'ಏಕ'ವಾಗಿ ಕಂಗೊಳಿಸುವ ಕಣವಿಯವರಿಗೆ ಕೃತಜ್ಞತೆಯನ್ನು ಹೊರತುಪಡಿಸಿ ಇನ್ನೇನನ್ನು ತಾನೇ ಕೊಡಬಹುದು ?

## ಶಾಂತಾದೇವಿ ಕಣವಿ

# ಜೀವನ ಸಂಗಾತಿ

ಪತಿದೇವ ಎನ್ನುವದಕ್ಕಿಂತಲೂ ಜೀವನ ಸಂಗಾತಿ ಎನ್ನುವ ಪದ ನನಗೆ ಹೆಚ್ಚು ಪ್ರಿಯವಾದದ್ದು. ಕಳೆದ ಇಪ್ಪತ್ತೈದು ವರ್ಷಗಳಿಂದ ಕಣವಿಯವರ ಸಂಗಾತಿಯಾಗಿ ಅವರನ್ನು ಎಷ್ಟರ ಮಟ್ಟಿಗೆ ಅರ್ಥಮಾಡಿಕೊಂಡಿದ್ದೇನೆ ಎನ್ನುವದರ ವಿಶ್ಲೇಷಣೆಗೆ ಈ ಪುಟ್ಟಲೇಖನ.

ತಾಳ್ಮೆ—ಮುಂಗೋಪ, ಔದಾರ್ಯ—ಜಿಪುಣತನ, ಸ್ನೇಹಪರತೆ–ವಿಮುಖತೆ, ಮೃದುತ್ವ–ಕಠಿಣತೆ ಹೀಗೆ ಅನೇಕ ಗುಣಗಳ ಮಧುರ ಸಮ್ಮಿಲನವೇ ಕಣವಿಯವರ ವ್ಯಕ್ತಿತ್ವ. ಇದೆಂಥ ವಿರೋಧಾಭಾಸ ಎಂದು ಆಶ್ಚರ್ಯವಾಯಿತೆ ? ಅದಕ್ಕೆ ವಿವರಣೆಯೂ ಇದೆ :

ಯಾವುದೇ ಕೆಲಸವನ್ನು ವಹಿಸಿಕೊಂಡರೂ ಅದು ಸಂಪೂರ್ಣ ಯಶಸ್ಸು ಪಡೆಯುವವರೆಗೆ ಸತತ ಶ್ರಮಪಡುವುದರಲ್ಲಿ ಕಣವಿಯವರಿಗೆ ಬಹಳ ತಾಳ್ಮೆ. ಲೇಖನವಂತೂ ಸರಿಯೆ, ಒಂದು ಸಣ್ಣ ಪತ್ರವನ್ನು ಬರೆದರೂ ತೂಕ ಮಾಡಿದಂತೆ ಶಬ್ದಗಳನ್ನು ಉಪಯೋಗಿಸಿರುತ್ತಾರೆ. ಕೆಲಸ, ಲೇಖನಗಳಂತೆಯೇ ಮನೆಯ ಅಲಂಕಾರ, ತೋಟಗಾರಿಕೆ, ಅತಿಥಿ ಸತ್ಕಾರ ಇತ್ಯಾದಿ ಉಳಿದ ಕೆಲಸಗಳಲ್ಲಿಯೂ ಅಷ್ಟೇ ಸಹನೆಯಿಂದ ನಮಗೆ ಸಲಹೆ-ಸೂಚನೆಗಳನ್ನು ಕೊಡುತ್ತಾರೆ. ಅವಶ್ಯ ಬಿದ್ದರೆ ಕೆಲಸಕ್ಕೂ ಕೈ ಹಚ್ಚುತ್ತಾರೆ.

ಅಚ್ಚುಕಟ್ಟುತನವನ್ನು, ಸರಳ ಸೌಂದರ್ಯವನ್ನು ಅಪೇಕ್ಷಿಸುವ ಕಣವಿಯವರು ಮನೆಯಲ್ಲಿ ಅವ್ಯವಸ್ಥೆ ಕಂಡರೆ, ತೋಟದ ಹೂಗಿಡಗಳಿಗೆ ನೀರು ಹಾಕದಿದ್ದರೆ, ಅವರ ಪ್ರೀತಿಯ ನಾಯಿ 'ಮನು'ವನ್ನು ಕಾಡಿಸಿದರೆ ಮನೆಯವರ ಮೇಲೆ ಕವಕ್ಕನೆ ಹರಿಹಾಯುತ್ತಾರೆ. ಆಗ ಮಕ್ಕಳೆಲ್ಲ 'ಅಪ್ಪಾ ಅವರ ಹೊಟ್ಟೆ ಕೆಟ್ಟಿದೆ'ಯೆಂದು ಅರ್ಥಮಾಡಿಕೊಳ್ಳುತ್ತಾರೆ.

ಆರ್ಥಿಕ ಅಡಚಣೆಗಳನ್ನು ಕಣವಿಯವರು ಎಂದೂ ಲಕ್ಷ್ಯಕ್ಕೆ ತರುವವರಲ್ಲ. ಕೂಡಿಡಬೇಕು ಎನ್ನುವ ಮನೋಭಾವ ಅವರದಲ್ಲ. ಆಸ್ತಿ–ಪಾಸ್ತಿಗೆ ತಲೆಕೆಡಿಸಿಕೊಳ್ಳುವದಿಲ್ಲ. "ಇಂದಿಂಗೆಂತು ನಾಳಿಂಗೆಂತು ಎಂದು ಚಿಂತಿಸಲೇಕೆ, ತಂದಿಕ್ಕುವ ಶಿವಂಗೆ ಬಡತನವೇ ಎನ್ನುವದನ್ನು ನೀವು ಗಟ್ಟಿಯಾಗಿ ನಂಬಿದ್ದೀರಿ" ಎಂದು ನಾನು ಚೇಷ್ಟೆ ಮಾಡುತ್ತೇನೆ. ಹಣದ ವಿಷಯದಲ್ಲಿ ಖರ್ಚುವೆಚ್ಚ ಲೆಕ್ಕ ಹಾಕುವವರಲ್ಲ. 'ಹಣ ಇರುವದೇ ಖರ್ಚು ಮಾಡುವದಕ್ಕಾಗಿ' ಎನ್ನುತ್ತಾರೆ. ಹಣದ ಬಗ್ಗೆ ತುಂಬ ಉದಾರರಾಗಿರುವ ಕಣವಿಯವರ ಜಿಪುಣತೆ ಕಂಡು ಬರುವದು ಹೂವುಗಳ ವಿಷಯದಲ್ಲಿ, ಮನೆಯ ಮುಂದಿನ ತೋಟದಲ್ಲಿ

ಹೂವು, ಹಣ್ಣುಗಳ ಗಿಡಗಳನ್ನು ಹಚ್ಚಿ ಕೈಯಾರೆ ಜೋಪಾನ ಮಾಡುತ್ತಾರೆ. ಆದರೆ ಅವರ ಅನುಮತಿಯಿಲ್ಲದೆ ಒಂದು ಹೂವನ್ನೂ ನಾವು ಗಿಡದಿಂದ ತೆಗೆಯುವಂತಿಲ್ಲ. ಬೇರೆ ಬೇರೆ ತರದ ಮಲ್ಲಿಗೆ, ಗುಲಾಬಿ, ಸಂಪಿಗೆ ಹೂವುಗಳು ಅರಳಿ ನಳನಳಿಸುತ್ತಿರುವಾಗ 'ಹೂವುಗಳು ನೋಡುವವರ ಕಣ್ಣು ಮನ ತುಂಬಲು ಗಿಡದಲ್ಲಿಯೇ ಇರಬೇಕು' ಎನ್ನುತ್ತಾರೆ. ಹೂವುಗಳಂತೆಯೇ ಶಬ್ದಗಳ ಬಗ್ಗೆಯೂ ಅವರು ಜಿಪುಣರು. ಬೇರೆಯವರನ್ನು ಹೊಗಳುವ ಪ್ರಸಂಗದಲ್ಲಿ 'ನೀನೇ ಇಂದ್ರ, ನೀನೇ ಚಂದ್ರ' ಎನ್ನುವವರಲ್ಲ. ವ್ಯಕ್ತಿಗಳನ್ನು, ಅವರ ಕೆಲಸವನ್ನು, ಅಥವಾ ಸಾಹಿತ್ಯವನ್ನು ಕುರಿತು ಬರೆಯುವಾಗ, ಮಾತನಾಡುವಾಗ ಶಬ್ದಗಳ ಮೋಹಕ್ಕೆ ಸಿಲುಕದೆ, ಅವರವರಯೋಗ್ಯತೆಯ ಮೇರೆಗೆ ಹಿತ, ಮಿತವಾಗಿ ಸಹೃದಯತೆಯಿಂದ ಶಬ್ದಗಳನ್ನು ಬಳಸುತ್ತಾರೆ. ಅನಾವಶ್ಯಕವಾಗಿ ಯಾರನ್ನಾದರೂ ಪ್ರಶಂಸೆ ಮಾಡುವದಾಗಲಿ, ತೆಗಳುವುದಾಗಲಿ ಅವರಿಂದಾಗದು.

ಕಣವಿಯವರದು ತುಂಬ ಸ್ನೇಹಪರ ಸ್ವಭಾವ ಎನ್ನುವದು ಅವರನ್ನು ಹತ್ತಿರದಿಂದ ಬಲ್ಲ ಎಲ್ಲರಿಗೂ ಗೊತ್ತಿದೆ. ಸ್ನೇಹ ಹಸ್ತವನ್ನು ಚಾಚಿ ಬಂದವರನ್ನು ಅವರು ಪ್ರೀತಿಯಿಂದ ಬರಮಾಡಿಕೊಳ್ಳುತ್ತಾರೆ. ಮುಖತಿರುಗಿಸಿ ಅಡ್ಡಾಡುವವರ ಬಗ್ಗೆ ಯೋಚಿಸಿ ತಲೆ ಕೆಡಿಸಿಕೊಳ್ಳುವದಿಲ್ಲ, ತಾವಾಗಿ ಮೇಲೆ ಬಿದ್ದು ಸ್ನೇಹ ಬೆಳೆಸಿಕೊಳ್ಳಲೂ ಹೋಗುವದಿಲ್ಲ. ಆದರೆ ಅವರ ಸ್ವಭಾವ ಸರಳ ಮತ್ತು ಮೃದು. ಅವರ ಸ್ನೇಹಕ್ಕೆ ಅಂತಸ್ತುಗಳ ಚಿಂತೆಯಿಲ್ಲ. ಒಂದು ಸಲ ಟ್ರೇನಿನಲ್ಲಿ ಹೊರಟಾಗ ಕಣವಿಯವರು ಹೆಣ್ಣುಮಕ್ಕಳ ಡಬ್ಬಿಯ ಹತ್ತಿರ ಯಾರ ಜೊತೆಗೊ ಮಾತನಾಡುತ್ತ ಪ್ಲ್ಯಾಟ್ ಫಾರಂ ಮೇಲೆ ನಿಂತಿದ್ದರು. ಹಾಲು—ಮೊಸರು ಮಾರುವ ಒಬ್ಬ ಹೆಣ್ಣುಮಗಳು ಡಬ್ಬಿಯಲ್ಲಿದ್ದಳು. ಅವಳ ರೊಟ್ಟೀ ಕಟ್ಟಿದ ಅರಿವೆ ಗಾಳಿಗೆ ಹಾರಿ ಕಿಡಕಿಯಿಂದ ಹೊರಗೆ ಬಿದ್ದಿತು. ಅದನ್ನು ನೋಡಿ ಕಣವಿಯವರು ಧಾವಿಸಿ ಹೋಗಿ ಅದನ್ನು ಹಿಡಿದೆತ್ತಿ ತಂದು ಅದರ ಒಡತಿಗೆ ಮುಟ್ಟಿಸಿದಾಗ, ಅವಳು ಕೃತಜ್ಞತೆಯಿಂದ "ಯಪ್ಪಾ ನೀ ದೊಡ್ಡ ಸಾಹೇಬ ಆದೀ, ನನ್ನ ಹೊಲಸ ಅರಿವೀ ಮುಟ್ಟಿದಿಯಲ್ಲಪ್ಪಾ, ದೊಡ್ಡ ಮನಿಶ್ಯಾ ಆದೀ ನೀನು" ಎಂದು ಬಾಯ್ತುಂಬ ಹರಸಿದಾಗ ನಮಗೆಲ್ಲ ಎಷ್ಟು ಸಂತೋಷ! ಅವಳೊಡನೆ, ಅವಳಂಥ ಇತರ ವಯಸ್ಸಾದ ಹಳ್ಳಿಯ ಹೆಣ್ಣು ಮಕ್ಕಳೊಡನೆ ಅವರ ಸುಖ-ದುಃಖ ಮಾತನಾಡುವದೆಂದರೆ ಅವರಿಗೆ ತುಂಬಾ ಪ್ರೀತಿ.

ಇನ್ನೊಂದು ದಿನ ಆಫೀಸಿನಿಂದ ಬೇಗ ಬೇಗ ನಡೆದು ಮನೆಗೆ ಬಂದು, ಕೈಕಾಲು ತೊಳೆದುಕೊಳ್ಳದೆ ಮತ್ತೆ ಸ್ಟೇಶನ್ ರೋಡಿಗೆ ಹೊರಟರು. ಹೋಗಿ ಬಂದ ಮೇಲೆ ಹೇಳಿದರು. "ದಾರಿಯೊಳಗ ಬರೂ ಮುಂದ ಒಂದ ಹಣ್ಣ ಹಣ್ಣ ಮುದುಕಿ ಕಾಲ ಎಳೆದು ಹಾಕ್ಕೋತ ಹೊರಟಿತ್ತು, ಎಲ್ಲಿಗೆ ಹೋಗ್ತಿಯಬೇ ಅಂದೆ, ಮನಸೂರಿಂದ ಬಂದೆ; ಟೇಸನ್‌ಕ ಹೋಗಿ ಗಾಡಿ ಹಿಡದು ಕುಂದಗೋಳಕ್ಕ ಹೋಕ್ಕಿನಿ ಅಂದ್ಳು. ಒಬ್ಬಾಕೆ ಯಾಕ ಬಂದೀ ಈ ವಯಸ್ಸಿನ್ಯಾಗ ಅಂದೆ, ನಾಲತ್ತು ವರ್ಸಾತು ಆ ಮ್ಯಾಲಿನ ಶಿವನ್ನ ಬಿಟ್ಟರ

ನನಗ ಯಾರೂ ದಿಕ್ಕಿಲ್ಲಪಾ ಅಂದ್ಳು. ಗಾಡಿಗೆ ಟಿಕೇಟಿಗೂ ರೊಕ್ಕ ಇದ್ದಿದ್ದಿಲ್ಲಾ ಆಕೀ ಹತ್ತರ, ಅದಕ್ಕs ಮನೀಗೆ ಬಂದು ರೊಕ್ಕಾ ಒಯ್ದು ಕೊಟ್ಟು ಬಂದೆ'' ಅಂದರು. ಬಡವರನ್ನು, ದಿಕ್ಕಿಲ್ಲದವರನ್ನು, ವಯಸ್ಸಾದವರನ್ನು ಕಂಡರೆ ಅವರ ಮನಸ್ಸು ಕರಗಿ ನೀರಾಗುತ್ತದೆ.

ಕಣವಿಯವರು ಒಳ್ಳೆಯ ಕವಿಯಾಗಿದ್ದಂತೆ ಉತ್ತಮ ವಿಮರ್ಶಕರೂ ಆಗಿದ್ದಾರೆ. ಆದರೆ ಅವರ ವಿಮರ್ಶೆ ಕಟುವಾಗಿ ತೀಕ್ಷ್ಣವಾಗಿರುವುದಿಲ್ಲ, ಒಳ್ಳೆಯದನ್ನು ಎತ್ತಿ ಹೇಳಿ ಲೇಖಕರು ತಿದ್ದಿಕೊಳ್ಳಬೇಕಾದ ಅಂಶಗಳನ್ನು ನಯವಾಗಿ ಹೇಳಿರುತ್ತಾರೆ. ಅಂಥ ವಿಮರ್ಶೆಯಿಂದ ಹೊಸ ಲೇಖಕ ಬೆಳೆಯಬಲ್ಲ ಎಂದು ನನ್ನ ಅನಿಸಿಕೆ. ಪ್ರಾರಂಭದಲ್ಲಿಯೇ ತಲೆ ಎತ್ತದಂತೆ ಹಿಚುಕಿ ಬಿಟ್ಟರೆ ಮೊಳಕೆಯೊಡೆದು ಚಿಗುರದೆ ಅದು ಕಮರಿಯೇ ಹೋಗಬಹುದು. ಸ್ವತಃ ನನ್ನ ಅನುಭವವನ್ನೇ ಹೇಳಬೇಕೆಂದರೆ ನಾನು ಮೊದಲು ಬರೆದ ಕತೆಗಳನ್ನು ಅವರಿಗೆ ತೋರಿಸಲು ಬಹಳ ಹೆದರುತ್ತಿದ್ದೆ. ನನ್ನದು ಸ್ವಲ್ಪ ನಾಚಿಕೆ, ಸಂಕೋಚದ ಸ್ವಭಾವ ನನ್ನ ಕತೆಗೆ ಏನನ್ನುತ್ತಾರೊ ಎಂದು ಅಂಜಿ ಹಾಗೆಯೇ ಮುಚ್ಚಿ ಮುಚ್ಚಿ ಇಡುತ್ತಿದ್ದೆ. ಕೊನೆಗೆ ೧೯೫೭ ರಲ್ಲಿ 'ನಡೆದು ಬಂದ ದಾರಿ'ಗೆ ಒಂದು ಕತೆ ಕೊಡಿರೆಂದು ಜಿ. ಬಿ. ಜೋಶಿಯವರು ಕೇಳಿದಾಗ ಬಹಳ ಧೈರ್ಯಮಾಡಿ ನಾನು ಬರೆದ ಕತೆಯನ್ನು ಕಣವಿಯವರ ಮುಂದೆ ಹಿಡಿದೆ. ಉತ್ತರ ಪತ್ರಿಕೆ ತಿದ್ದಿಸಿಕೊಳ್ಳುವ ವಿದ್ಯಾರ್ಥಿಯಂತೆ ನನ್ನ ಸ್ಥಿತಿ ಆಗಿತ್ತು. ಅದಕ್ಕೆ ಅವರು ನೂರಕ್ಕೆ ಐವತ್ತು ಗುಣಗಳನ್ನು ಕೊಟ್ಟಾಗ ನೆಮ್ಮದಿಯ ಉಸಿರನ್ನು ಬಿಟ್ಟೆ. ಅಲ್ಲಿಗೆ ಮುಗಿಯಲಿಲ್ಲ ನನ್ನ ಕತೆಯ ಕತೆ. ಅದು ಪ್ರಕಟವಾದ ಮೇಲೆ ಉತ್ಸಾಹದಿಂದ ಆಗಾಗ ಕತೆ ಬರೆಯತೊಡಗಿದೆ. ಅವುಗಳಿಗೆ ಮೊದಲ ಓದುಗರು ಕಣವಿಯವರೇ. ಓದಿದೊಡನೆಯೇ ಕತೆ ಚೆನ್ನಾಗಿದೆ ಎನ್ನುತ್ತಿದ್ದರು. ನಾನು ಹಿಗ್ಗುತ್ತಿದ್ದೆ. ಮುಂದೆ 'ಮತ್ತೆ ಮತ್ತೆ ನೀನೇ ಓದಿ ವಿಚಾರ ಮಾಡು, ನಿನ್ನ ತಪ್ಪು-ದೋಷಗಳು ನಿನಗೇ ತಿಳಿಯುತ್ತವೆ' ಎನ್ನುತ್ತಿದ್ದರು. ನನಗೂ ತಿಳಿಯದೆ ಉಳಿದ ದೋಷಗಳನ್ನು ಮನಸ್ಸು ನೋಯದಂತೆ ತಾವೇ ತೋರಿಸಿಕೊಡುತ್ತಿದ್ದರು. ಹೀಗೆ ನನ್ನ ವಿಮರ್ಶಕ ಬುದ್ಧಿಯನ್ನೂ ಎಚ್ಚರಿಸಿದರು. ಅವಶ್ಯ ಬಿದ್ದಾಗ, 'ಈ ರೀತಿ ಬೇಡ ಇದೇ ವಸ್ತುವನ್ನು ಬೇರೆ ತಂತ್ರದಲ್ಲಿ ಬರೆಯುವದು ಸಾಧ್ಯವಾಗುತ್ತದೆಯೇನೋ ನೋಡು' ಎನ್ನುತ್ತಿದ್ದರು. ಈ ರೀತಿ, ವಿಮರ್ಶಕ ಕಣವಿಯವರ ನೆರಳಿನಲ್ಲಿ ಬೆಳೆಯುತ್ತಿರುವ ಕತೆಗಾರ್ತಿ ನಾನು.

ಮನೆಯಲ್ಲಿ ಮಕ್ಕಳಿಗೆ, ನನಗೆ ಕಣವಿಯವರು ವಾಕ್‌ಸ್ವಾತಂತ್ರ್ಯ ವಿಚಾರ ಸ್ವಾತಂತ್ರ್ಯ ಕೊಟ್ಟಿದ್ದಾರೆ. ವ್ಯಕ್ತಿ ವಿಕಾಸಕ್ಕೆ ಇವೆಲ್ಲ ಅಗತ್ಯ ಎನ್ನುತ್ತಾರೆ. ಯಾರ ಮೇಲೂ ಯಾವದೆ ವಿಷಯಕ್ಕೆ ಒತ್ತಾಯ ತರುವುದಿಲ್ಲ. ಅದು ನಿಜ, ಮಕ್ಕಳು ಈಗ ಪ್ರಬುದ್ಧರಾಗಿದ್ದಾರೆ ತಮಗೆ ಯಾವದು ಹಿತ ಯಾವದು ಯೋಗ್ಯ ಎನ್ನುವದನ್ನು ತಿಳಿದು ಕೊಳ್ಳಬಲ್ಲವರಾಗಿದ್ದಾರೆ. ಆದರೆ ಮಕ್ಕಳು ಚಿಕ್ಕವರಿರುವಾಗ, ಬುದ್ಧಿ ಬಲಿಯದೇ

ಇರುವಾಗ ಅವರಿಗೆ ಪೂರ್ಣ ಸ್ವಾತಂತ್ರ್ಯ ಕೊಡದೆ ಕಟ್ಟುನಿಟ್ಟಾಗಿ ಬೆಳೆಸಬೇಕು ಎನ್ನುವವಳು ನಾನು. ಮಕ್ಕಳು, ಹಿರಿಯರು ಹೇಳಿದ ಹಾಗೆ ಕೇಳಬೇಕು, ವಿಧೇಯತೆ ಪಾಲಿಸಬೇಕು, ಕೇವಲ ಹಕ್ಕು ಬಾಧ್ಯತೆಗಳಿಗೆ ಹೋರಾಡದೆ ನಿಮ್ಮ ಕರ್ತವ್ಯವನ್ನೂ ತಿಳಿದುಕೊಳ್ಳಬೇಕು ಎಂದು ನಾನು ಉಪದೇಶ ಮಾಡಿದರೆ ಮಕ್ಕಳಿಗೆ ಸ್ವಾಭಾವಿಕ ವಾಗಿಯೇ ಅದು ರುಚಿಸುತ್ತಿರಲಿಲ್ಲ. ಆಗೆಲ್ಲ ಅತ್ತು ಕರೆದು ಹಟ ಮಾಡಿದರೆ ನಾನು ಅವರಿಗೆ ಕೊಡುವ ಕಠಿಣ ಶಿಕ್ಷೆ ಎಂದರೆ 'ಅಂಗಿ-ಚೊಣ್ಣ ಕಳೆದು ಮನೆ ಬಿಟ್ಟು ಹೊರಗೆ ಹೋಗು' ಎನ್ನುತ್ತಿದ್ದೆ. ನನ್ನ ಕಠೋರ ಸ್ವಭಾವ ಅರಿತ ಕಣವಿಯವರು ಈ ಎಲ್ಲ ಜಗಳ ವನ್ನು ನೋಡುತ್ತ ಸುಮ್ಮನಿರುತ್ತಿದ್ದರು. ಒಳಗೊಳಗೇ ಅವರ ಮನಸ್ಸು ಚಡಪಡಿಸುತ್ತಿತ್ತೇನೋ. ಆದರೆ ನನ್ನ ಇಲಾಖೆಯಲ್ಲಿ ಅವರು ಕೈ ಹಾಕುತ್ತಿರಲಿಲ್ಲ. ಮಕ್ಕಳು ಅವರ ಹತ್ತಿರ ಹೋಗಿ ನನ್ನ ವಿರುದ್ಧ ಚಾಡಿ ಹೇಳುತ್ತಿದ್ದರು. ಆಗ ಅವರು "ನಿಮ್ಮ ತಾಯಿ ಹೇಳಿದಾಂಗ ಕೇಳಬೇಕಪ್ಪಾ. ಎಲ್ಲಾ ನಿಮ್ಮ ಹಿತಕ್ಕs ಹೇಳತಾಳ. ನನ್ನ ನಿಮ್ಮ ಜಗಳದೊಳಗ ಎಳೀಬ್ಯಾಡಾ, ಇಲ್ಲಾಂದರ ನಿಮ್ಮ ಕೂಡ ನನ್ನೂ...... ಹೊರಗ ಹಾಕತಾಳ ಆಕಿ", ಎಂದು ಹೇಳಿ ಎಲ್ಲರನ್ನೂ ನಗಿಸಿ, ಕಾವೇರಿದ್ದ ವಾತಾವರಣ ವನ್ನು ತಂಪಾಗಿಸುತ್ತಿದ್ದರು. ಈಗ ಪ್ರಬುದ್ಧರಾದ ಮಕ್ಕಳೆಲ್ಲ ಕೂಡಿ ಚಿಕ್ಕಂದಿನ ನೆನಪು ಗಳನ್ನು ಮೆಲುಕಾಡಿಸಿ ನಕ್ಕು ಮೋಜು ಮಾಡುತ್ತಾರೆ. ನನ್ನ ಐದು ಜನ ಮಕ್ಕಳ ಜೊತೆಗೆ ಮುಗ್ಧ ಮನಸ್ಸಿನ, ಶಾಂತಸ್ವಭಾವದ, ನಿಸರ್ಗ ಪ್ರೇಮಿ, ಕವಿ ಕಣವಿಯವರು ಆರನೆಯ ಮಗುವಿನಂತಿದ್ದಾರೆ.

ಈ ಎಲ್ಲ ಸುಖ, ನೆಮ್ಮದಿಯ ನಡುವೆ ನಮ್ಮೆಲ್ಲರಿಗೆ ಇರುವ ಒಂದೇ ಒಂದು ಚಿಂತೆ ಎಂದರೆ ಕಣವಿಯವರ ಹೊಟ್ಟೆಯ ಚಿಂತೆ. ತುಂಬಿಸುವದಲ್ಲ ಮತ್ತೆ ! ಹೊಟ್ಟೆಯ ಅನಾರೋಗ್ಯದ ಚಿಂತೆ. ಅವರ ಹೊಟ್ಟೆಯ ತೊಂದರೆಯನ್ನು ಗುಣ ಮಾಡುವ ಧನ್ವಂತರಿ ಇನ್ನೂ ಹುಟ್ಟಿ ಬಂದಿಲ್ಲವೇನೋ ಎಂದು ನನಗೆ ಒಮ್ಮೊಮ್ಮೆ ಅನಿಸುತ್ತದೆ.

ಲೇಖನದ ಪ್ರಾರಂಭದಲ್ಲಿ ಸ್ನೇಹಪರತೆಯ ಜೊತೆಜೊತೆಗೆ ವಿಮುಖತೆ ಎನ್ನುವ ಮಾತೂ ಬಂದಿತು. ಅವರ ಎದುರಿನಲ್ಲಿಯೇ ಯಾರಾದರೂ ಅವರನ್ನು ಹೊಗಳಿದರೆ ಕಣವಿಯವರು ಸಂಕೋಚದಿಂದ ಮುದುಡಿ ಮುದ್ದೆಯಾಗುತ್ತಾರೆ. ಅಲ್ಲಿಂದ ಓಡಿಹೋಗ ಬೇಕು ಅನಿಸುತ್ತದಂತೆ ಅವರಿಗೆ. ಪರನಿಂದೆ, ಆತ್ಮಪ್ರಶಂಸೆ ಎರಡರಿಂದಲೂ ಕಣವಿಯವರು ವಿಮುಖರು. ೧೯೭೪ ರಲ್ಲಿ ಮೈಸೂರು ಮಾನಸ ಗಂಗೋತ್ರಿಯ ಕನ್ನಡ ಸಂಘ ರಾಜ್ಯೋದಯದ ದಿನ ಅವರಿಗೆ ಸತ್ಕಾರ ಮಾಡಿದಾಗ ಉತ್ತರ ರೂಪವಾಗಿ 'ಅಭಿವಂದನೆ' ಎನ್ನುವ ಪದ್ಯವನ್ನು ಓದಿದರು. ಅದರ ಕೊನೆಯ ಎರಡು ಸಾಲುಗಳು ಹೀಗಿವೆ :

"ಸ್ನೇಹ, ಪ್ರೀತಿ, ವಿಶ್ವಾಸ, ಹಾಸ, ಮಧುಮಾಸ ತುಂಬಿದೊಸಗೆ-
ವಧುವಿನಂತೆ ನಸು ನಾಚಿ, ನಮಿಸಿ, ಈ ಜೀವ ಬಂತು ಹಸೆಗೆ".

ರಂಜನಾ ಕಣವಿ

# ನಮ್ಮ ತಂದೆ

ಈ ಗ್ರಂಥದ ಸಂಪಾದಕರು 'ನಿಮ್ಮ ತಂದೆಯವರ ಬಗೆಗೆ ಬರೆಯಿರಿ' ಎಂದು ಕೇಳಿದಾಗ ನನಗೊಂದಿಷ್ಟು ಗಾಬರಿಯೇ ಆಯಿತು, ಒಬ್ಬ ವ್ಯಕ್ತಿಯ ಬಗೆಗೆ ಪ್ರೀತಿ ಆತ್ಮೀಯತೆ ಗೌರವಗಳಿರುವಾಗ ಅವರ ಬಗೆಗೆ ವಸ್ತುನಿಷ್ಠವಾಗಿ ಏನನ್ನಾದರೂ ಬರೆಯಲು ಸಾಧ್ಯವೆ ? ಭಾವನೆಗಳ ಸಂಬಂಧ ಬಂದಾಗ ವಸ್ತುನಿಷ್ಠತೆ ದೂರಸರಿಯುತ್ತದೆ. ಆದರೂ ನಮ್ಮ ತಂದೆಯವರ ಬಗೆಗೆ ನನ್ನ ಅನಿಸಿಕೆಗಳನ್ನು ಪ್ರಾಮಾಣಿಕವಾಗಿ ಬರೆಯಲು ಇಲ್ಲಿ ಪ್ರಯತ್ನಿಸಿದ್ದೇನೆ.

ನಮ್ಮ ತಂದೆ ತಾಯಿಗಳಿಗೆ ನಾವು ಐದು ಜನ ಮಕ್ಕಳು. ಈಗಿನ ಕಾಲಕ್ಕೆ ಸಂಖ್ಯೆ ಒಂದಿಷ್ಟು ಹೆಚ್ಚಾಯಿತು. ಆದರೆ ಪ್ರತಿಯೊಬ್ಬರು ಹುಟ್ಟಿದಾಗಲೂ ನಮ್ಮ ತಂದೆ ಸಂತಸದಿಂದ ಪೇಡೆ ಹಂಚಿದ್ದಾರೆ. ಮಕ್ಕಳ ಲಾಲನೆ ಪಾಲನೆಯನ್ನು ತಾಯಿ ಮಾಡಿದಂತೆ ತಂದೆ ಮಾಡಲಾರ ಎಂಬುದು ಎಲ್ಲರ ಕಲ್ಪನೆ. ಆದರೆ ನಮ್ಮ ತಂದೆ ಇದಕ್ಕೆ ಅಪವಾದ. ನಮ್ಮ ತಾಯಿಯಷ್ಟೇ ವಾತ್ಸಲ್ಯವನ್ನು ಅವರು ನಮ್ಮ ಮೇಲೆ ಎರೆದಿದ್ದಾರೆ. ಚಿಕ್ಕವರಿದ್ದಾಗ ಅಕ್ಕರೆಯಿಂದ ಎತ್ತಿ ಆಡಿಸಿದ್ದಾರೆ. ರೋಗರುಜಿನಗಳಾದಾಗ ತಾಯಿಯಷ್ಟೇ ಆರೈಕೆಮಾಡಿದ್ದಾರೆ. ಒಂದು ರೀತಿಯಲ್ಲಿ ನಮ್ಮ ತಂದೆ ನಮಗೆ ತಾಯಿಯೂ ಹೌದು. ಅವರಿಗೆ ಚಿಕ್ಕ ಮಕ್ಕಳೆಂದರೆ ಬಹಳ ಪ್ರೀತಿ. ಸದ್ಯ ಮನೆಯಲ್ಲಿದ್ದ ಮಕ್ಕಳೆಲ್ಲಾ ದೊಡ್ಡವರಾಗಿದ್ದಾರೆ. ಆದರೆ ಮನೆಗೆ ಬರುವ ಪ್ರತಿಯೊಂದು ಚಿಕ್ಕಮಗುವನ್ನೂ ಅವರು ಮಾತನಾಡಿಸದೇ, ಆಡಿಸದೇ ಬಿಡುವುದಿಲ್ಲ, ಮಗು ಅತ್ತು ಹಟ ಮಾಡುತ್ತಿದ್ದರೆ ತಮ್ಮ ಚೇಷ್ಟೆಯಿಂದ ಅವರು ರಮಿಸುವದು ನೋಡುಗರಿಗೂ ಒಂದು ಮನರಂಜನೆ.

ತಂದೆಯವರಿಗೆ ಮರೆವು ಬಹಳ. ಯಾರಾದರೂ ಸ್ನೇಹಿತರು ಮನೆಗೆ ಬಂದಾಗ ಮಕ್ಕಳು ಏನು ಓದುತ್ತಿದ್ದಾರೆ ಎಂದು ಕೇಳಿದರೆ ಇವರು ಸಂದಿಗ್ಧಕ್ಕೆ ಒಳಗಾಗುತ್ತಾರೆ. ನಾವು ಇನ್ನೂ ಹೈಸ್ಕೂಲಿನಲ್ಲಿ ಓದುತ್ತಿದ್ದಾಗಲಂತೂ ಅವರಿಗೆ ಯಾರು ಯಾವ ಕ್ಲಾಸಿನಲ್ಲಿ ಕಲಿಯುತ್ತಿದ್ದಾರೆ ಎಂಬುದೇ ಸರಿಯಾಗಿ ನೆನಪಿರುತ್ತಿರಲಿಲ್ಲ. ಎಷ್ಟೋ ಸಲ ಅವರ ಸಾಹಿತಿ-ಮಿತ್ರರು ಮನೆಗೆ ಬಂದಾಗ, ನಾನು ಪಿಯುಸಿಯಲ್ಲಿ ಓದುತ್ತಿದ್ದಾಗ ಬಿ.ಎ. ಓದುತ್ತಿರುವೆನೆಂದೂ ಬಿ. ಎ. ಓದುತ್ತಿದ್ದಾಗ ಪಿ. ಯು. ಸಿ. ಓದುತ್ತಿರುವೆನೆಂದೂ ಹೇಳಿ ಪರಿಚಯ ಮಾಡಿಕೊಡುತ್ತಿದ್ದರು. ನನಗೆ ಕೋಪಿಸಿಕೊಳ್ಳಬೇಕೋ ಇಲ್ಲ ಸುಮ್ಮನೇ ನಕ್ಕು ಬಿಡಬೇಕೊ ಎಂಬುದೇ ತಿಳಿಯುತ್ತಿರಲಿಲ್ಲ. ಇಷ್ಟು ಮರವೆಯಿದ್ದರೂ ಅವರಿಗೆ ನಮ್ಮ ಓದು ಹಾಗೂ ಚಟುವಟಿಕೆಗಳಲ್ಲಿ, ಬಹಳ ಆಸಕ್ತಿ. ಅವರು ತಮ್ಮ ಆಫೀಸು ಹಾಗೂ

ಸಾಹಿತ್ಯ ರಚನೆಯಲ್ಲಿ ನಮ್ಮನ್ನೆಂದೂ ಕಡೆಗಣಿಸಿಲ್ಲ. ಕ್ಲಾಸ್‌ರೂಮಿನಲ್ಲಿ, ಆಟದ ಮೈದಾನದಲ್ಲಿ, ಉಳಿದ ರಂಗಗಳಲ್ಲಿ ನಮ್ಮ ಪ್ರಗತಿಯ ಬಗೆಗೆ ಸಾಕಷ್ಟು ವಿಚಾರಿಸುತ್ತಾರೆ. ನಮ್ಮ ಸಣ್ಣ ಪುಟ್ಟ ಸಾಧನೆಗಳ ಬಗೆಗೆ ಅಭಿಮಾನ ಪಟ್ಟುಕೊಳ್ಳುತ್ತಾರೆ.

ಮನೆಯಲ್ಲಿ ಪ್ರತಿಯೊಬ್ಬರ ಆರೋಗ್ಯದ ಬಗೆಗೂ ಅವರಿಗೆ ಬಹಳ ಕಾಳಜಿ. ಮನೆಯಲ್ಲಿ ಯಾರಾದರೂ ಅನಾರೋಗ್ಯದಿಂದ ಮಲಗಿದರೆ, ಅವರ ಔಷಧ ಪಥ್ಯ ಎಲ್ಲದರ ಬಗೆಗೂ ಅವರಿಗೆ ಬಹಳ ಲಕ್ಷ್ಯ. ಆಫೀಸಿನಿಂದ ಎಷ್ಟೇ ದಣಿದು ಬಂದರೂ ಮೊದಲು ಮಲಗಿದವರ ಕ್ಷೇಮ ಸಮಾಚಾರ. ಆದರೆ ಈ ಅತಿ ಕಾಳಜಿ ಒಂದೊಂದು ಸಲ ಹುಡುಗರಿಗೆ ಬಂಗಾರದ ಪಂಜರವಾಗುತ್ತದೆ. ಅದನ್ನು ತಿನ್ನ ಬೇಡ, ಇದನ್ನು ತಿನ್ನಬೇಡ, ತಣ್ಣೀರು ಕುಡಿಯಬೇಡ, ಸ್ವೆಟರ್ ಹಾಕಿಕೊ-ಇತ್ಯಾದಿ ಅವರ ಪ್ರೀತಿಯ ನಿರ್ಬಂಧಗಳು ನಮಗೆ ಒಂದಿಷ್ಟು ಕಸಿವಿಸಿಯನ್ನುಂಟುಮಾಡುತ್ತವೆ. ತಮ್ಮ ಆರೋಗ್ಯ ಬಹಳ ನಾಜೂಕಾದುದರಿಂದ ಎಲ್ಲರೂ ತಮ್ಮಂತೆಯೇ ಎಂದು ಅವರು ಭಾವಿಸುತ್ತಾರೆ.

ನಮ್ಮ ತಂದೆ ಒಬ್ಬ indulgent father. ಮಕ್ಕಳ ಬೇಡಿಕೆಗಳನ್ನೆಲ್ಲ ಪೂರೈಸಬೇಕು, ಅವರಿಗೆ ಯಾವುದರ ಕೊರತೆಯೂ ಆಗಬಾರದು, ಅವರು ಸುಖದಿಂದಿರಬೇಕು ಎಂದು. ಆದರೆ ಮನೆಯ ಆಯಕ್ಕೆ ವ್ಯಯವನ್ನು ಹೊಂದಿಸಿಕೊಂಡು ಹೋಗುವ ಜವಾಬ್ದಾರಿ ಯಾವಾಗಲೂ ತಾಯಂದಿರಿಗೆ ಇರುತ್ತದೆ. ಮಕ್ಕಳ ಬೇಡಿಕೆಗಳೆಲ್ಲ ನ್ಯಾಯವಾದುವೇ ? ಯಾವುದು ಎಷ್ಟರ ಮಟ್ಟಿಗೆ ಅವಶ್ಯ ? ಎಂದು ವಿವೇಚಿಸುವವರು ತಾಯಂದಿರೇ. ಏಕೆಂದರೆ ಮನೆಯ ಖರ್ಚನ್ನು ತೂಗಿಸುವ ಚಿಂತೆ ಅವರದಾಗಿರುತ್ತದೆ. ಸಾಮಾನ್ಯವಾಗಿ ನನಗೆನಿಸುವವಮಟ್ಟಿಗೆ ಎಲ್ಲ ತಂದೆಗಳೂ ಹೀಗೆಯೆ. ಮಕ್ಕಳ ಬೇಡಿಕೆಗಳಿಗೆಲ್ಲ ಗೋಣು ಹಾಕಿ, ಅವರ ಕಣ್ಣಲ್ಲಿ ಒಳ್ಳೆಯವರಾಗಿ ಬಿಡುತ್ತಾರೆ. ನಮಗೆ ಸಂಬಂಧಿಸಿದ ಯಾವುದೇ ವಿಷಯದ ಬಗ್ಗೆ ನಮ್ಮ ತಂದೆಯವರ ಮನ ಒಲಿಸುವದು ಅತಿಸುಲಭದ ಕೆಲಸ. ಆದರೆ ನಮ್ಮೆಲ್ಲರ ಮೇಲೆ ನಮ್ಮ ತಾಯಿಯವರ ಶಿಸ್ತಿನ ಕಡಿವಾಣವಿರದಿದ್ದರೆ ನಾವೆಲ್ಲ ಏನಾಗುತ್ತಿದ್ದೆವೋ.

ತಂದೆಯವರಿಗೆ ಅತಿ ಸಂತೋಷವನ್ನುಂಟುಮಾಡುವ ವಸ್ತುಗಳು ಎರಡು. ಒಂದು: ನಮ್ಮ ಮನೆಯ ಸುತ್ತಲೂ ಅವರು ಮಾಡಿದ ತೋಟ. ಎರಡು: ಮನು—ಎಂದರೆ ನಮ್ಮ ನಾಯಿ. ಅದನ್ನು ಎಲ್ಲರೂ ಕಣವಿಯವರ ಆರನೆಯ ಮಗ ಎಂದು ಚೇಷ್ಟೆ ಮಾಡುತ್ತಾರೆ. ಮನುವಿನ ಮೇಲೆ ಅವರಿಗೆ ಬಹಳ ಪ್ರೀತಿ. ಅದರೊಡನೆ ಆಟವಾಡುವುದು, ಮಾತನಾಡುವುದು, ಉಳಿದ ಬೀದಿ ನಾಯಿಗಳೊಡನೆ ಕಾದಾಡಿ ಗಾಯಗಾಳುವಾಗಿ ಮನೆಗೆ ಬಂದಾಗ ಅದಕ್ಕೆ ಮುಲಾಮು ಹಚ್ಚಿ ಉಪಚರಿಸುವುದು.-ಇವೆಲ್ಲವೂ ಅವರಿಗೆ ಅತಿ ಪ್ರಿಯವಾದ ಕಾರ್ಯಗಳು. ಇವರ ಅಚ್ಚಾದಿಂದ ಅದು ಒಂದಿಷ್ಟು ತಲೆಗೇರಿದೆ ಎಂಬುದು ಬೇರೆಯ ಮಾತು. ನಾವು ಎಲ್ಲಿ ಹೊರಟರೂ ಅದು ನಮ್ಮನ್ನು ಹಿಂಬಾಲಿಸಿ ಗೊಂದಲವೆಬ್ಬಿಸಿಬಿಡುತ್ತದೆ. ಇದರ ವರ್ತನೆಯಿಂದ ನಮಗಂತೂ ಒಂದೊಂದು ಸಲ ಬಹಳ ಬೇಸರವಾಗುತ್ತದೆ.

ಆದರೂ ಅದನ್ನು ತಂದೆಯವರು ಅಕ್ಕರೆಯಿಂದ ಮುದ್ದುಮಾಡುವುದನ್ನು ನೋಡಿದಾಗ ನನಗೆ ಬಹಳ ಅಸೂಯೆ, ಕೋಪ ಎಲ್ಲವೂ ಉಂಟಾಗುತ್ತದೆ. ಅದೇನು ತಪ್ಪು ಮಾಡಿದರೂ "ಪಾಪ ಮೂಕ ಪ್ರಾಣಿ, ಅದಕ್ಕೇನು ತಿಳಿಯುತ್ತದೆ" ಎಂದು ಸಮರ್ಥಿಸಿಕೊಂಡು ಬಿಡುತ್ತಾರೆ. ಅವರ ಮೂಡು ಚೆನ್ನಾಗಿರದಿದ್ದರೆ ಇಲ್ಲವೆ ಅವರ ಮನವೊಲಿಸಬೇಕಾದಾಗ ನಾವೆಲ್ಲ 'ಮನು'ವಿನ ಆಶ್ರಯವನ್ನು ಪಡೆಯುತ್ತೇವೆ. ಅದು ಮಾಡುವ ಸಾಹಸಗಳನ್ನು, ಪರಾಕ್ರಮಗಳನ್ನು ಅವರೆದುರು ಪ್ರಶಂಸಿಸಿ ಬಿಟ್ಟರೆ ಸಾಕು, ಅವರ ಮುಖ ಆನಂದದಿಂದ ಅರಳಿ ನಾವು ಕೇಳಿದ್ದಕ್ಕೆಲ್ಲಾ ಸಮ್ಮತಿ ದೊರಕಿಬಿಡುತ್ತದೆ. ಮನುವನ್ನು ಹೊಗಳಿದರೆ ಸಾಕು ಕೆಲಸ ಆಗುತ್ತದೆ ಎಂಬುದು ಮನೆಯಲ್ಲಿ ಎಲ್ಲರಿಗೂ ತಿಳಿದ ಮಾತು.

ನಮ್ಮ ತಂದೆಯವರಿಗೆ ಹೂಗಳೆಂದರೆ ಬಹಳ ಪ್ರೀತಿ. ಆದುದರಿಂದ ಅವರೇ ಮಾಡಿದ ನಮ್ಮ ಕೈತೋಟದಲ್ಲಿ ಎಲ್ಲ ತರಹದ ಸುಂದರ ಹೂಗಿಡಗಳಿಗೇ ಪ್ರಮುಖ ಸ್ಥಾನ. ತೋಟಮಾಡುವದು ಅವರ ಅತಿಪ್ರೀತಿಯ ಹವ್ಯಾಸ. ಆಫೀಸಿನಿಂದ ಬಂದ ಮೇಲೆ ತೋಟದಲ್ಲಿ ಅಡ್ಡಾಡಿ, ಗಿಡಗಳಿಗೆ ನೀರೆರೆಯುವುದರಲ್ಲಿ ತಮ್ಮ ಆಯಾಸವನ್ನು ಕಳೆದು ಕೊಳ್ಳುತ್ತಾರೆ. ಎಲ್ಲಿಯಾದರೂ ಒಂದು ಹೊಸ ಹೂವಿನ ಗಿಡ ದೊರೆತರೆ ಅಮೂಲ್ಯ ನಿಧಿ ದೊರೆತಂತೆ ಹಿಗ್ಗುತ್ತಾರೆ. ಹೂವಿನ ಗಿಡಗಳ ಮೇಲೆ ಅವರಿಗಿರುವ ವಿಶೇಷ ಪ್ರೀತಿ ನಮಗೆಲ್ಲರಿಗೂ ಗೊತ್ತಿದ್ದ ವಿಷಯ. ಆದುದರಿಂದ ಅವುಗಳಿಗೆ ಒಂದುನಾಲ್ಕು ಕೊಡ ನೀರೆರೆದು ನನ್ನ ಚಾಲಾಕು ತಮ್ಮಂದಿರು ತಂದೆಯವರ ಹತ್ತಿರ ತಮ್ಮ ಕೆಲಸ ಸಾಧಿಸಿ ಕೊಂಡು ಬಿಡುತ್ತಾರೆ.

ಕಣವಿಯುವರು ಹಾಗು ಕೋಪ ಒಂದಕ್ಕೊಂದು ಸಂಬಂಧವಿಲ್ಲದವುಗಳು ಎಂಬುದು ಬಹುಜನರ ಭಾವನೆ. ಆದರೆ ನನಗೇನು ಹಾಗೆನಿಸುವುದಿಲ್ಲ. ನಮ್ಮ ತಂದೆ ಒಮ್ಮೊಮ್ಮೆ ಬಹು ಬೇಗ ತಾಳ್ಮೆ ಕಳೆದುಕೊಳ್ಳುತ್ತಾರೆ (ಮನೆಯಲ್ಲಿ). ಅವರದು ಬಹಳ ಶಿಸ್ತಿನ ಜೀವನ, ಅಚ್ಚುಕಟ್ಟಿಗೆ ಬಹಳ ಮಹತ್ವ ಕೊಡುತ್ತಾರೆ. ಮನೆಯಲ್ಲಿ ಎಲ್ಲ ಸಾಮಾನುಗಳು ಅವುಗಳ ಸ್ಥಳದಲ್ಲೇ ಇರಬೇಕು. ಆದರೆ ನಮ್ಮಗಳ ಕೈಯಲ್ಲಿ ಮನೆಯ ಶಿಸ್ತೆಲ್ಲಾ ಅಸ್ತವ್ಯಸ್ತ. ಇದನ್ನು ಕಂಡು ಅವರು ನಮ್ಮ ಮೇಲೆ ಕೋಪಿಸಿಕೊಳ್ಳುವುದುಂಟು. ಆದರೆ ಅವರ ಕೋಪವನು ಕೋಪವೆನ್ನುವುದಕ್ಕಿಂತ ರೇಗುವುದು ಎಂದು ಕರೆಯುವುದು ಉತ್ತಮ. ಅವರು ರೇಗುವುದು ಸಾಮಾನ್ಯ [ಒಮ್ಮೊಮ್ಮೆ ಬೇಕಂತಲೇ ನಾವು ಅವರನ್ನು ರೇಗಿಸುತ್ತೇವೆ]. ಅವರು ಎಷ್ಟು ಬೇಗ ರೇಗುತ್ತಾರೋ ಅಷ್ಟೇ ಬೇಗ ಮರೆತೂ ಬಿಡುತ್ತಾರೆ. ಆದುದರಿಂದ ಅವರ ಕೋಪದ ಕಾವು ನಮ್ಮನ್ನು ತಟ್ಟುವುದೇ ಇಲ್ಲ. ಅವರು ಕೋಪಿಸಿಕೊಂಡಾಗಲೆಲ್ಲಾ ನಾವು ತಮಾಷೆ ಮಾಡಿ ನಕ್ಕು ಬಿಡುವುದರಿಂದ ವಾತಾವರಣ ಕೂಲಾಗಿಬಿಡುತ್ತದೆ. ಯಾವಾಗಲೂ ಸ್ವಚ್ಛವಾಗಿ ನೀಟಾಗಿ ಇರಬೇಕೆನ್ನುವ ನಮ್ಮ ತಂದೆಯವರಿಗೆ ಈಗಿನ ಹುಡುಗರ ಬಟ್ಟೆ ಬರೆ, ವೇಷಭೂಷಣ, ಕೂದಲು ಇತ್ಯಾದಿಗಳನ್ನು ಕಂಡರೆ ಅಷ್ಟು ಸೇರುವದಿಲ್ಲ. ನಮ್ಮ ಮನೆಯಲ್ಲಿ ಹುಡುಗರದೇ ಮೆಜಾರಿಟಿಯಾದುದರಿಂದ ಈ ವಿಷಯಗಳ ಬಗೆಗೆ ಮನೆಯಲ್ಲಿ

ಆಗಾಗ ಸ್ವಲ್ಪ ತಿಕ್ಕಾಟ, ಬಿಸಿ ಬಿಸಿ ವಾತಾವರಣ. ಆದರೆ ಇವು ಅನೇಕ ಬಾರಿ ಹಾಸ್ಯದ ಹೊನಲನ್ನು ಹರಿಸಿಬಿಡುತ್ತವೆ.

ತಂದೆ ಸ್ವತಃ ಆಟಗಾರರಲ್ಲದಿದ್ದರೂ ಮಕ್ಕಳು ಆಡುವ ಎಲ್ಲ ಆಟದಲ್ಲೂ ಅವರಿಗೆ ಬಹಳ ಆಸಕ್ತಿ. ಬಿಡುವಿದ್ದಾಗ ನಮ್ಮೊಡನೆ ಇಸ್ಪೀಟು, ಕೇರಮ್ ಆಡಲು ಬರುವುದುಂಟು. ಕ್ರಿಕೆಟ್ಟಿನ ಹುಚ್ಚೂ ಬಹಳ. ಕಾಮೆಂಟ್ರಿ ಕೇಳುವುದನ್ನೆಂದೂ ತಪ್ಪಿಸುವುದಿಲ್ಲ. ಮಕ್ಕಳು ಆಟಗಳಲ್ಲಿ ಹೆಚ್ಚು ಭಾಗಿಯಾಗಲು ಅವರು ಪ್ರೋತ್ಸಾಹಿಸುತ್ತಾರೆ. ಬರೀ ಓದುವುದಕ್ಕಿಂತಲೂ. ಆಟ ಆಡುವುದು ಮೇಲು : ಆಟದಿಂದ ದೇಹ ದೃಢವಾಗುತ್ತದೆ, ಆರೋಗ್ಯ ಉತ್ತಮವಾಗುತ್ತದೆ, ತಮ್ಮ ಆರೋಗ್ಯ ಸೂಕ್ಷ್ಮವಾದಂತೆ ಮಕ್ಕಳದು ಆಗುವುದು ಬೇಡ, ಅವರು ಚೆನ್ನಾಗಿ ಆಡಲಿ-ಎಂದು ಹೇಳುತ್ತಾರೆ. ಅದರ ಪರಿಣಾಮವಾಗಿ ಮನೆಯಲ್ಲಿ ಕ್ರಿಕೆಟ್ ಆಟಗಾರರು ತಯಾರಾಗುತ್ತಿದ್ದಾರೆ. ನನ್ನ ಅಣ್ಣ ತಮ್ಮಂದಿರು ಎಲ್ಲಿಯಾದರೂ ಮ್ಯಾಚ್ ಆಡಲು ಹೋದರೆ ನಮ್ಮ ತಂದೆ ಅಷ್ಟೇ ಉತ್ಸಾಹದಿಂದ ನೋಡಲು ಹೋಗುತ್ತಾರೆ.

ನಮ್ಮ ತಂದೆಗೆ ಸಿನೇಮಾ ನಾಟಕದ ಚಟ ಅಷ್ಟಾಗಿ ಇಲ್ಲ. ಯಾವಾಗಾದರೊಮ್ಮೆ ಆಯ್ಕೆಮಾಡಿ ನೋಡುವುದುಂಟು. ನಮ್ಮ ಒತ್ತಾಯಕ್ಕೆ ಹಿಂದೀ ಸಿನೇಮಾ ನೋಡಲು ಬಂದರೆ ಅದರಲ್ಲಿಯ ಸೊಂಪಾದ ಹಾಡುಗಳಿಗೆ ಕೆಲವು ಸಲ ನಿದ್ದೆ ಹೋಗಿಬಿಡುತ್ತಾರೆ!

ನನಗೆ ತಿಳುವಳಿಕೆ ಬಂದಾಗಿನಿಂದ, ನನಗೆ ನೆನಪಿರುವಂತೆ ನಮ್ಮ ತಂದೆ ತಾವು ಬರೆದ ಹೊಸ ಕವಿತೆಯನ್ನು ಮೊದಲು ಓದುವುದು ಮನೆಯ ಮಂದಿಯ ಎದುರಿಗೆ. ನಮಗೆ ಅದೊಂದು ರಸದೌತಣ. ಎಷ್ಟೋಜನ ಕವಿಗಳಿಗೆ ತಮ್ಮ ಕವಿತೆಗಳನ್ನು ಸುಂದರವಾಗಿ ಓದುವ ಕೌಶಲ್ಯವಿರುವುದಿಲ್ಲ. ಆದರೆ ನಮ್ಮ ತಂದೆ ಇದರಲ್ಲಿ ಪರಿಣತರು, ನಮ್ಮಷ್ಟಕ್ಕೆ ನಾವು ಓದುವುದಕ್ಕಿಂತಲೂ ಅವರ ಬಾಯಿಯಿಂದ ಕೇಳುವುದರಲ್ಲಿ ನಮಗೆ ಹೆಚ್ಚಿನ ಆನಂದ ಹಾಗು ರಸಾನುಭೂತಿ. ತಮ್ಮ ಕವಿತೆಗಳನ್ನಷ್ಟೇ ಅಲ್ಲದೆ, ತಮಗೆ ಹಿಡಿಸಿದ ಬೇರೆಯವರ ಕವಿತೆಗಳನ್ನೂ ಪ್ರಬಂಧಗಳನ್ನೂ ಅವರು ನಮ್ಮೆದುರು ಸಂತೋಷದಿಂದ ಓದುತ್ತಾರೆ.

ನಮ್ಮ ತಂದೆಯವರ ಬಗೆಗೆ ನಮಗೆಲ್ಲಾ ತುಂಬಾ ಗೌರವವಿದೆ. ಆದರೆ ಇದು ಭೀತಿಯಿಂದ ಉತ್ಪನ್ನವಾದುದಲ್ಲ. ಅವರೊಂದಿಗೆ ನಾನೆಂದೂ ಭಯಪಟ್ಟುಕೊಂಡಿಲ್ಲ. ಇದಕ್ಕೆ ಕಾರಣ ಅವರು ನಮ್ಮನ್ನು ಸ್ನೇಹಿತರಂತೆ ಕಾಣುತ್ತಾರೆ. ನಮ್ಮ ಮೇಲೆ ಅವರೆಂದೂ ತಂದೆಯ ಅಧಿಕಾರ ಚಲಾಯಿಸಿಲ್ಲ. ನಮಗೆ ಸಂಬಂಧಿಸಿದ ವಿಷಯಗಳ ಬಗೆಗೆ ಸಲಹೆ ಸೂಚನೆ ನೀಡಿದರೂ 'ಹಾಗೇ ಮಾಡು' 'ಹೀಗೇ ಮಾಡು' ಎಂದು ಎಂದೂ ನಿರ್ದೇಶಿಸಿಲ್ಲ. ಎಲ್ಲ ಮಕ್ಕಳಿಗೂ ಅವರಿಗೆ ಸಂಬಂಧಿಸಿದ ವಿಷಯಗಳ ಬಗೆಗೆ ಸಂಪೂರ್ಣ ಸ್ವಾತಂತ್ರ್ಯವಿದೆ. ತಮ್ಮ ವಿಚಾರ ಆಶೆಗಳನ್ನೆಂದೂ ಅವರು ಮಕ್ಕಳ ಮೇಲೆ ಹೇರಿಲ್ಲ. ಈಗಿನ ಹುಡುಗರು ಸಾಕಷ್ಟು ತಿಳುವಳಿಕೆಯುಳ್ಳವರು ಎಂಬುದು ಅವರ ಅಭಿಪ್ರಾಯ. ನಮ್ಮಲ್ಲಿ ಸ್ವತಂತ್ರ ವ್ಯಕ್ತಿತ್ವ ವಿಚಾರಗಳು ಬೆಳೆಯುವಲ್ಲಿ ತಂದೆ ತಾಯಿಗಳಿಬ್ಬರೂ ಸಹ

ಕಾರಿಯಾಗಿದ್ದಾರೆ. ನಮ್ಮೊಡನೆ ಸಾಕಷ್ಟು ಚರ್ಚಿಸುತ್ತಾರೆ. ಪ್ರತಿಯೊಬ್ಬರ ಅಭಿಪ್ರಾಯ ವಿಚಾರಗಳಿಗೆ ಮನ್ನಣೆ ನೀಡುತ್ತಾರೆ. ಆದುದರಿಂದ ನಮ್ಮ ತಂದೆಯಲ್ಲಿ ನಮಗೆಲ್ಲಾ ಸಲುಗೆ ಇದೆ. ಆತ್ಮೀಯತೆ ಇದೆ. ನಾವೆಲ್ಲ ಅವರನ್ನು ನಮ್ಮ ಸರೀಕರಂತೆ ರೇಗಿಸುವುದು. ಕೀಟಲೆಮಾಡುವುದು ಉಂಟು.

ಒಂದೊಂದು ಸಲ ತಾಯಿ ಅನಾರೋಗ್ಯದಿಂದ ಮಲಗಿದಾಗ ಒಬ್ಬಳೇ ಹುಡುಗಿಯಾದ ನನ್ನ ಮೇಲೆ ಮನೆಯ ಎಲ್ಲ ಜವಾಬ್ದಾರಿಗಳು ಬೀಳುವುದು ಸಾಮಾನ್ಯ. ಆಗ ನಮ್ಮ ತಂದೆ, "ನಾನು ಏನಾದ್ರು ಸಹಾಯ ಮಾಡಲೇನಮಾ" ಎಂದು ಅಡುಗೆಮನೆಯಲ್ಲಿ ಬಂದು ಕೇಳುವದುಂಟು. ಇದನ್ನು ಕೇಳಿದಾಗ, ಮಹಿಳಾ ಸ್ವಾತಂತ್ರ್ಯಕ್ಕೆ ಹೋರಾಡುವವರ ಬಗೆಗೆ ನನಗೆ ನಗೆ ಬರುತ್ತದೆ.

ತಂದೆಯವರ ಸಾಹಿತಿಮಿತ್ರರೊಬ್ಬರು ನಮ್ಮ ಮನೆಗೆ ಬಂದಾಗ ಒಂದು ಸಲ ನನಗೆ, "ನೋಡಿ, ನಿಮಗೆ ಕಣವಿಯವರಂಥ ಅಪ್ಪ ಸಿಕ್ಕಿದ್ದಾರೆ. ನೀವು ಬಹಳ lucky" ಎಂದಿದ್ದರು. ಇದರಲ್ಲಿ ಅತಿಶಯೋಕ್ತಿಯೇನೂ ಇಲ್ಲ. ಇಂಥ ತಂದೆಯನ್ನು ಪಡೆದ ನಾವೆಲ್ಲ ಬಹಳ ಅದೃಷ್ಟವಂತರು. ಆದರೂ ಒಮ್ಮೊಮ್ಮೆ ಅವರ ಅತಿ ಮೆತ್ತಗಿನ ಮನಸ್ಸು, ಮೃದು ಸ್ವಭಾವ, ನಾಜೂಕಾದ ಆರೋಗ್ಯ ಕಂಡಾಗ ನಾವೆಲ್ಲ ಒರಟರಾಗಬೇಕೆನಿಸುತ್ತದೆ.

ದಿನಕರ ದೇಸಾಯಿ

# ಕವನ ಕಾಣಿಕೆ

ಧಾರವಾಡದ ಕಣವಿ ಅಪ್ರತಿಮ ಕವಿಯು.
ಇವನ ಕವಿತೆಗಳಲ್ಲಿ ಸಕ್ಕರೆಯ ಸವಿಯುಂ.
ಇಂಥ ಸವಿ ನಮ್ಮ ಕನ್ನಡದಲ್ಲಿ ವಿರಳ.
ಈ ಸವಿಯ ಸವಿಸವಿದು ನಾನಾದೆ ಮರುಳ.

* * *

ಕಣವಿಯರ ಕವಿತೆಯೊಳಗುಂಟು ಲಾಲಿತ್ಯ.
ಲಾಲಿತ್ಯದೊಂದಿಗೇ ಅರಳುತಿದೆ ಸತ್ಯ.
ಈ ತರದ ಕವಿತೆಗಳ ನಾ ರಚಿಸಲಾರೆ.
ಕಣವಿಯರ ಒಂದೊಂದು ಕವಿತೆಯೂ ತಾರೆ.

* * *

ನವ್ಯ ಲೇಹದ ಒಳಗೆ ಶುಂಠಿ ಪ್ರಾಚೀನ.
ಬೆರಸಲಿಕೆ ಶ್ರೀ ಕಣವಿಯರು ಬಹಳ ನಿಪುಣ.
ಇಂಥ ನಿಪುಣತೆ ಕಾವ್ಯ ಲೋಕದಲಿ ವಿರಳ.
ವಿರಳವಿದ್ದಂತೆಯೇ ಅದು ಬಹಳ ಸರಳ.

* * *

ಚೆನ್ನವೀರನ ಕವಿತೆಯೂ ಬಹಳ ಚೆನ್ನ.
ಸಾಹಿತ್ಯ ಲೋಕದಲಿ ಇದಕೆಂಬೆ ಹೊನ್ನ.
ಈ ಹೊನ್ನಿನಿಂದ ಮಾಡಿದರೆ ಆಭರಣ.
ಮತ್ತಷ್ಟು ಚೆಂದಗಾಂಬುದು ಈ ಸುವರ್ಣ.

* * *

ಕಣವಿ ಕವಿ ಹುಟ್ಟಿದ್ದು ಕನ್ನಡದ ಭಾಗ್ಯ.
ಇವನಿಂದ ಒಳಿತಾಯ್ತು ನಮ್ಮ ಆರೋಗ್ಯ.
ಇವನು ಬರೆಯುವ ವಿಡಂಬನಕುಂಟು ಧಾರೆ.
ಈ ಧಾರೆ ತೋರುವುದು ಪ್ರತಿಯೊಂದು ಸಾರೆ.

* * *

ಚೆನ್ನವೀರನ ಕವಿತೆಗಿರುವ ರಸಪಾಕ.
ಬಹಳ ರುಚಿಕರವೆಂದು ಸಾರುತಿದೆ ಲೋಕ.
ಇಂಥ ರುಚಿಕರ ಪಾಕ ಲಭಿಸುವುದು ಕಷ್ಟ
ಸವಿದ ಪ್ರತಿಯೊಬ್ಬನೂ ಪೂರ್ಣ ಸಂತುಷ್ಟ.

*　　　*　　　*

ಕಣವಿಯವರ ಬರವಣಿಗೆಯಲಿ ವಿಡಂಬನವು
ಚೆನ್ನಾಗಿ ಒಡಮೂಡಿ ಸುಖಿಸುವುದು ಮನವು.
ಇದರ ಖಾರದ ರುಚಿಗೆ ಮರುಳಾಗಿ ನಾನು.
ಖಾರವೇ ಬೇಕೆಂಬೆ, ಸಾಕೆಂಬೆ ಜೇನು.

*　　　*　　　*

ಚೆನ್ನವೀರನ ಕವಿತೆಗಳ ನೋಡಿ ನಾನು
ಚಂದ್ರನಿಗೆ ಮೊನ್ನೆ ಮಾಡಿದೆನು ಟೆಲಿಫೋನು
ಹೇಳಿದೆನು : ಚಂದಿರನೆ ನೀನಿರುವ ವರೆಗೆ
ಈ ಕವಿತೆಗಳು ಹಿಟ್ಟು ಚೆಲ್ಲುವವು ಧರೆಗೆ.

ಸದಾಶಿವ ಒಡೆಯರ

# ಚೆನ್ನವೀರ ಕಣವಿ : ಕವಿ ಮತ್ತು ವ್ಯಕ್ತಿ

ಶ್ರೀ ಕಣವಿಯವರು ಕಾಲೇಜಿನ ವಿದ್ಯಾರ್ಥಿಯಾಗಿದ್ದಾಗಿನಿಂದಲೇ ನನಗೆ ಪರಿಚಿತರು. ಅವರು ನನಗಿಂತ ಕೆಲವೇ ವರ್ಷಗಳಿಂದ ಕಿರಿಯರು. ಆಗಲೇ ಅವರು ಉದಯೋನ್ಮುಖ ಕವಿಗಳಾಗಿ ಹೆಸರು ಪಡೆದಿದ್ದರು. ಕನ್ನಡ ಸಾಹಿತ್ಯವನ್ನು—ವಿಶೇಷವಾಗಿ ಕಾವ್ಯವನ್ನು ಅವರು ಚೆನ್ನಾಗಿ ಓದಿಕೊಂಡವರಾಗಿದ್ದರು. ಇದಕ್ಕೂ ಹೆಚ್ಚಾಗಿ ಅವರು ಉತ್ತಮ ಕಾವ್ಯಸಂವೇದನಾಶೀಲರಾಗಿದ್ದರು. ಅವರ ಆರಂಭದ ಕವಿತೆಗಳು ಈ ಮನೋಧರ್ಮದೊಂದಿಗೆ ಕಲ್ಪನಾಶಕ್ತಿ ಹಾಗೂ ನಾದಮಾಧುರ್ಯವನ್ನು ಪ್ರಕಟಪಡಿಸಿದ್ದವು. ಜೀವನದಲ್ಲಿ ಒಳಿತಿನ ಬಗ್ಗೆ ಹಾಗೂ ಚೆಲುವಿನ ಬಗೆಗೆ ಸ್ವಾಭಾವಿಕವಾದ ಪ್ರೀತಿ ಅವರಲ್ಲಿ ಕಂಡು ಬರುತ್ತಿತ್ತು. ಅವರು ತಮ್ಮ ವ್ಯಾಪಕವಾದ ಸಾಹಿತ್ಯವ್ಯಾಸಂಗದಿಂದ ಜೀವನದ ಈ ಮೌಲ್ಯಗಳನ್ನು ರೂಢಿಸಿಕೊಂಡಿದ್ದರು.

ಕಣವಿ ತಮ್ಮ ಇಪ್ಪತ್ತೈದರ ಪ್ರಾಯದಲ್ಲಿಯೇ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ತುಂಬ ಪ್ರಸಿದ್ಧಿಯನ್ನು ಪಡೆದಿದ್ದು ಯುವ ಪೀಳಿಗೆಯ ಪ್ರೀತ್ಯಾದರಗಳಿಗೆ ಪಾತ್ರರಾಗಿದ್ದರು. ನಾನು ಅವರ ಎಲ್ಲ ಕವನಸಂಗ್ರಹಗಳನ್ನೂ ಓದಿದ್ದೇನೆ; ಅವರ ಕಾವ್ಯದ ರಸಾರ್ದ್ರತೆಗೂ ನಾದಲಯಕ್ಕೂ ನಾನು ಮಾರುಹೋಗಿದ್ದೇನೆ. ಅವರ ಮುಖ್ಯ ಸ್ವತ್ವಾದ—ದೃಢವಾದ ಜೀವನಮೌಲ್ಯಗಳಿಂದ ಪೋಷಿತಗೊಂಡ—ಸ್ವಾಭಾವಿಕವಾದ ಒಳ್ಳೆಯತನ ನನ್ನ ಮೇಲೆ ಹೆಚ್ಚು ಪರಿಣಾಮವನ್ನು ಬೀರಿದೆ. ಸೌಂದರ್ಯಾನಂದವನ್ನುಂಟುಮಾಡುವ, ಮನುಷ್ಯನ ವಿಚಾರಗಳನ್ನು ಉನ್ನತಗೊಳಿಸುವ ಸಾಹಿತ್ಯ ಉತ್ತಮ ಸಾಹಿತ್ಯವೆಂದು ಮ್ಯಾಥ್ಯು ಅರ್ನಾಲ್ಡ್ ಹೇಳಿದ್ದುಂಟು. ಈ ಮಾನದಂಡದಿಂದ ಕಣವಿಯವರ ಬರೆವಣಿಗೆಯನ್ನು, ವಿಶೇಷವಾಗಿ ಕಾವ್ಯವನ್ನು ಗಮನಿಸಿದರೆ ಅದರ ಅತ್ಯುತ್ತಮ ಮಾದರಿಯಾಗಿ ಅದು ಕಂಗೊಳಿಸುತ್ತದೆ. ಕೆಲಮಟ್ಟಿಗೆ ಆತ್ಮಚರಿತ್ರೆಯಾಗಿರುವ ಅವರ ನೀಳ್ಗವಿತೆ 'ಭಾವಜೀವಿ' ಸೊಬಗನ್ನು ಸಂತೈಸಿ, ನಮ್ಮ ವಿಚಾರಗಳನ್ನು ಮೇಲೆತ್ತುವ ಈ ಬಗೆಯ ಹಲವಾರು ಸುಂದರ ಪದ್ಯಗಳನ್ನು ಒಳಗೊಂಡಿದೆ.

ಕಣವಿಯವರು ಮೇಲಾದ ಸಾಹಿತ್ಯವಿಮರ್ಶಕರೆಂದೂ ಹೆಸರು ಗಳಿಸಿದ್ದಾರೆ. ಎಂದಿನಿಂದಲೂ ಸಾಹಿತ್ಯ ಅವರ ಪ್ರಥಮ ಪ್ರೀತಿಯ ವಿಷಯ. ಅವರು ತಮ್ಮ ಬಹಳಷ್ಟು ಸಮಯ ಹಾಗೂ ಶಕ್ತಿಯನ್ನು ಸಾಹಿತ್ಯ ವ್ಯಾಸಂಗಕ್ಕಾಗಿ ಹಾಗೂ ಸಾಹಿತ್ಯಿಕ ಹವ್ಯಾಸಗಳಿಗಾಗಿ ವಿನಿಯೋಗಿಸುತ್ತ ಬಂದಿದ್ದಾರೆ. ಉನ್ನತ ವೈಚಾರಿಕ ಶಕ್ತಿಯನ್ನು ಪಡೆದಿರುವ ಹಾಗೂ ಕನ್ನಡ ಮತ್ತು ಇಂಗ್ಲಿಷ್ ಸಾಹಿತ್ಯಗಳ ವ್ಯಾಪಕವಾದ ವ್ಯಾಸಂಗದ ಹಿನ್ನೆಲೆ

ಯುಳ್ಳ ಶ್ರೀ ಕಣವಿಯವರು ಉತ್ತಮವಾದ ತೀಕ್ಷ್ಣ ಬುದ್ಧಿಯ ಹಾಗೂ ಆಳವಾದ ಒಳನೋಟವುಳ್ಳ ವ್ಯಕ್ತಿಯಾಗಿ ವಿಕಾಸಗೊಂಡಿರುವುದರಲ್ಲಿ ಆಶ್ಚರ್ಯವೇನೂ ಇಲ್ಲ. ಸಾಹಿತ್ಯದ ಮೌಲ್ಯಮಾಪನ ಮಾಡುವಾಗ ಅವರ ವಸ್ತುನಿಷ್ಠತೆ ಹಾಗೂ ಸಮತೋಲನ ದೃಷ್ಟಿ ಒಡೆದು ಕಾಣುತ್ತವೆ. ಆದುದರಿಂದಲೇ ಉಳಿದವರ ಕೃತಿಗಳ ಬಗ್ಗೆ ಅವರು ಮಾತನಾಡುವಾಗ ಇಲ್ಲವೆ ಬರೆಯುವಾಗ ಅದಕ್ಕೊಂದು ಹೆಚ್ಚಿನ ತೂಕ ಹಾಗೂ ಬೆಲೆ ಒದಗಿರುತ್ತದೆ; ಅಂತೆಯೇ ಅವರ ಅಭಿಪ್ರಾಯದ ಬಗ್ಗೆ ಜನತೆಗೆ ಹೆಚ್ಚಿನ ವಿಶ್ವಾಸ ಹಾಗೂ ಆದರ.

ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಕೆಲಸಕ್ಕೆ ಸೇರಿದಾಗ ಇನ್ನೂ ಯುವಕರಾಗಿದ್ದ ಕಣವಿಯವರು ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ವಿಭಾಗವನ್ನು ಕಟ್ಟಿ ಬೆಳೆಸುವಲ್ಲಿ ತಮ್ಮ ಪ್ರತಿಭೆ ಮತ್ತು ಸಾಮರ್ಥ್ಯವನ್ನೆಲ್ಲ ಅದಕ್ಕೆ ಧಾರೆಯೆರೆದಿದ್ದಾರೆ. ಈ ಕಾರ್ಯಕ್ಕೆ ಕಣವಿಯವರಿಗಿಂತ ಉತ್ತಮ ವ್ಯಕ್ತಿಯನ್ನು ಪಡೆಯುವದು ವಿಶ್ವವಿದ್ಯಾಲಯಕ್ಕೆ ಸಾಧ್ಯವಿರಲಿಲ್ಲ. ಸಾಹಿತ್ಯ ಮತ್ತು ಸಾಹಿತ್ಯೇತರ ವಿಷಯಗಳಲ್ಲಿ ಉತ್ಕೃಷ್ಟವಾದ ಗ್ರಂಥಗಳನ್ನು ಪ್ರಕಟಿಸಿದ ಶ್ರೇಯಸ್ಸು ವಿಶ್ವವಿದ್ಯಾಲಯಕ್ಕಿದೆ. ವಿಶ್ವವಿದ್ಯಾಲಯದ ವ್ಯಾಸಂಗವಿಸ್ತರಣ ಕಾರ್ಯಕ್ರಮಗಳಂತೂ ಅತ್ಯಂತ ಜನಪ್ರಿಯವಾಗಿ ಪ್ರಸಿದ್ಧಿಯನ್ನು ಪಡೆದಿವೆ. ಕರ್ನಾಟಕದ ತುಂಬ ಹಾಗೂ ಹೊರಗಡೆಯಲ್ಲಿ ವಿಶ್ವವಿದ್ಯಾಲಯವು ಪಡೆದಿರುವ ಕೀರ್ತಿಗೆ ವ್ಯಾಸಂಗವಿಸ್ತರಣ ಹಾಗೂ ಪ್ರಕಟನ ವಿಭಾಗದಲ್ಲಿ ನಡೆದಿರುವ ಉತ್ತಮ ಕಾರ್ಯವೇ ಬಹುಮಟ್ಟಿಗೆ ಕಾರಣವಾಗಿದೆಯೆಂದರೆ ತಪ್ಪಾಗದು. ಇದರ ಶ್ರೇಯಸ್ಸು ಮುಖ್ಯವಾಗಿ ಈ ಕಾರ್ಯಗಳನ್ನು ಉತ್ತಮ ರೀತಿಯಲ್ಲಿ ಸಂಘಟಿಸುವ, ಹಾಗೂ ಪ್ರಕಟನ ಯೋಜನೆಗಳನ್ನು ಹಮ್ಮಿಕೊಂಡು ಯಶಸ್ವಿಯಾಗಿ ಈಡೇರಿಸುವ ಶ್ರೀ ಕಣವಿಯವರಿಗೆ ಸಲ್ಲುತ್ತದೆ.

ಇವೆಲ್ಲಕ್ಕಿಂತ ಮಿಗಿಲಾಗಿ, ಒಳ್ಳೆಯ ವ್ಯಕ್ತಿಯಾಗಿ ಕಣವಿಯವರನ್ನು ನಾನು ಮೆಚ್ಚಿಕೊಂಡಿದ್ದೇನೆ. ಶ್ರೇಷ್ಠ ಹಾಗೂ ಮಹತ್ವದ ಸಾಹಿತ್ಯಕೃತಿಗಳಲ್ಲಿ ಪೋಷಿತವಾಗಿರುವ ಉನ್ನತ ಆದರ್ಶಗಳ ಜೀವನವನ್ನು ಬದುಕಲು ಅವರು ಯತ್ನಿಸಿದ್ದಾರೆ. ಅವರು ಯಾವಾಗಲೂ ಮೃದುಭಾಷಿ ಮತ್ತು ಮಿತಭಾಷಿ; ಯಾರ ಮನಸ್ಸನ್ನೂ ಎಂದೂ ನೋಯಿಸದವರು. ಅವರ ನಮ್ರತೆ ಮತ್ತು ಮೃದುಭಾಷಿತ್ವ ವಿಶ್ವವಿದ್ಯಾಲಯದ ಆವರಣದಲ್ಲಿ ಒಂದು ಸಾಮತಿಯಾಗಿದೆ. ತಮ್ಮ ಸ್ನೇಹಿತರ ಬಗ್ಗೆ ಅವರು ತುಂಬ ಸಹಾನುಭೂತಿಯುಳ್ಳವರಾಗಿದ್ದು ಅವರಿಗೆ ತಮ್ಮಿಂದಾದ ನೆರವನ್ನು ನೀಡಬಲ್ಲವರಾಗಿದ್ದಾರೆ. ಅವರು ಉಪಕಾರಶೀಲರಾಗಿದ್ದು, ತಾವು ವಹಿಸಿಕೊಂಡ ಕಾರ್ಯವನ್ನು ಆಸ್ಥೆಯಿಂದಲೂ ಹೊಣೆಗಾರಿಕೆಯಿಂದಲೂ ನಿರ್ವಹಿಸಬಲ್ಲವರಾಗಿದ್ದಾರೆ.

ಕಣವಿಯವರೊಡನೆ ಮಾತನಾಡುವದೆಂದರೆ ಸಾಂಸ್ಕೃತಿಕ ಶಿಕ್ಷಣವನ್ನು ಪಡೆದಂತೆ, ಯಾಕೆಂದರೆ ಅವರು ತಮ್ಮ ಮಾತು-ಕತೆಗಳಲ್ಲಿ ತಮ್ಮ ವ್ಯಾಸಂಗದ ಫಲವಾಗಿ ಹಲವಾರು

ಸ್ವಾರಸ್ಯಕರವಾದ ಸಂಗತಿಗಳನ್ನು ಅನುಭವದೊಡನೆ ವ್ಯಕ್ತಪಡಿಸುತ್ತಿರುತ್ತಾರೆ. ಅವರ ಸಂಭಾಷಣೆಯೂ ಕೂಡ ಕಲಾತ್ಮಕವಾಗಿರುತ್ತದೆ. ಇಂದಿನ ದಿನಗಳಲ್ಲಿ ಇಂಥವರು ತುಂಬ ಅಪರೂಪವೆಂದೇ ಹೇಳಬಹುದು. ಅವರಲ್ಲಿ ನಾನು ಮೆಚ್ಚಿಕೊಂಡ ಇನ್ನೊಂದು ಹೆಚ್ಚಿನ ಗುಣವೆಂದರೆ ಅವರ ಮನಸ್ಸಿನ ಪಕ್ವತೆ. ಈ ಸಂದರ್ಭದಲ್ಲಿ ಮೌಲಾನಾ ಅಬುಲ್ ಕಲಮ್ ಆಝಾದರ ಬಗ್ಗೆ ಹೇಳಲಾಗುತ್ತಿರುವ ಒಂದು ಕಥೆ ನೆನಪಾಗುತ್ತದೆ : ಅನೇಕ ಪ್ರತಿಷ್ಠಿತ ವ್ಯಕ್ತಿಗಳು ಸೇರಿದ ಒಂದು ಕಾಂಗ್ರೆಸ್ ಸಭೆಯಲ್ಲಿ ಯಾರೋ ಒಬ್ಬರು ಮೌಲಾನಾ ಅವರ ವಯಸ್ಸಿನ ಬಗ್ಗೆ ಕೇಳಿದರಂತೆ. ಅಲ್ಲಿಯೇ ಇದ್ದ ಕವಯಿತ್ರಿ ಸರೋಜಿನಿ ನಾಯುಡು ತಟ್ಟನೆ : "ನಿಮಗೆ ಮೌಲಾನಾ ಅವರ ವಯಸ್ಸು ಬೇಕಾಗಿದೆಯೆ ...ಅವರು ಹುಟ್ಟಿದಾಗಲೇ ಅವರಿಗೆ ಐವತ್ತು ವರ್ಷಗಳಾಗಿದ್ದವು" ಎಂದರಂತೆ. ಸರೋಜಿನಿ ನಾಯುಡು ಅವರ ಈ ಉತ್ತರ ಮೌಲಾನಾ ಅವರ ವಯಸ್ಸಿಗೆ ಮೀರಿದ ಪಕ್ವತೆಯನ್ನು ಎತ್ತಿ ತೋರಿಸುವದಾಗಿತ್ತು. ಇದೇ ಮಾತನ್ನು ಕಣವಿಯವರ ಬಗೆಗೂ ಹೇಳಬಹುದು,

ಅವರೊಬ್ಬ ವಾತ್ಸಲ್ಯಮಯಿಯಾದ ತಂದೆ, ಒಲುಮೆಯ ಪತಿ, ನೈಜ ಹಾಗೂ ಪ್ರಾಮಾಣಿಕ ಸ್ನೇಹಿತ ; ಎಲ್ಲಕ್ಕೂ ಮಿಗಿಲಾಗಿ ಒಳ್ಳೆಯ ಹೃದಯಸಂಪನ್ನ ವ್ಯಕ್ತಿ. ಕಣವಿಯವರನ್ನು ಭೆಟ್ಟಿಯಾಗುವದು, ಅವರೊಂದಿಗೆ ಮಾತನಾಡುವದು ಒಂದು ಸಂತಸದ ವಿಷಯ, ತಮ್ಮ ಹತ್ತಿರಕ್ಕೆ ಬಂದವರಲ್ಲಿ ನೆಮ್ಮದಿ ಹಾಗೂ ಸಂತೋಷವನ್ನು ಹೆಚ್ಚಿಸುವ ವ್ಯಕ್ತಿತ್ವ ಅವರದು. ಅವರ ಒಡನಾಟವೇ ಒಂದು ರೀತಿಯಿಂದ ಚೈತನ್ಯದಾಯಿ. ಇಂಥ ವ್ಯಕ್ತಿಗಳಿಂದಲೇ ಸಮುದಾಯದ, ಸಮಾಜದ ಹಾಗೂ ರಾಷ್ಟ್ರದ ಸಾಂಸ್ಕೃತಿಕ ಜೀವನ ಶ್ರೀಮಂತಗೊಳ್ಳಬಲ್ಲದು. ಇಂಥವರ ಸಂಖ್ಯೆ ಹೆಚ್ಚಾಗಿ ಕನ್ನಡದ ಕೀರ್ತಿ ಬೆಳಗುವಂತಾಗಲಿ ಎಂದು ಹಾರೈಸುತ್ತೇನೆ.

## ಜಿ. ಎಸ್. ಶಿವರುದ್ರಪ್ಪ

# ಕಣವಿಯವರ ಕಾವ್ಯದ ಜೀವಂತಗತಿ

'ಮುಖ್ಯ ಬೇಕಾದದ್ದು ಜೀವಂತಗತಿ, ಹೊಸನೆತ್ತರಿನ ಕೊಡುಗೆ'—ಎಂದು 1965 ರಲ್ಲಿ ಪ್ರಕಟವಾದ 'ನೆಲ-ಮುಗಿಲು' ಕವನಸಂಗ್ರಹದ ಕವಿತೆಯೊಂದರಲ್ಲಿ ಹೇಳುವ ಕಣವಿಯವರ ಕಾವ್ಯ, ಕಳೆದ ಈ ಮೂವತ್ತು ವರ್ಷಗಳ ಅವಧಿಯಲ್ಲಿ ಈ ಮಾತನ್ನು ನಿಜ ಮಾಡಿದೆ. ಅವರ ಕಾವ್ಯದ 'ಜೀವಂತಗತಿ' ಮೊಟ್ಟಮೊದಲ ಸಂಗ್ರಹಗಳಾದ 'ಕಾವ್ಯಾಕ್ಷಿ ಮತ್ತು 'ಭಾವಜೀವಿ' ಗಳಲ್ಲಿ ಕಾಣಿಸಿಕೊಂಡದ್ದು, ಈ ಹಲವು ವರ್ಷಗಳ ನಡುವಣ ಕಾಲದ ಯಾವ ಕಾವ್ಯಪಂಥಗಳ ದಾಳಿಗೂ ಹೊಯ್ದಾಡದೆ ತನ್ನ ನಿಶ್ಚಿತ ನೆಲೆಯನ್ನು ಕಾಯ್ದುಕೊಂಡು, ಕನ್ನಡ ಕಾವ್ಯಶರೀರಕ್ಕೆ 'ಹೊಸನೆತ್ತರಿನ ಕೊಡುಗೆ' ಯನ್ನು ಕೊಟ್ಟಿದೆ.

ಒಟ್ಟು ಒಂಬತ್ತು ಕವನ ಸಂಕಲನಗಳ ಮೂಲಕ ಹಾದುಬಂದ ಕಣವಿಯವರ ಕಾವ್ಯಜೀವನ, ಮೂಲತಃ ಪರಿಸರ ಸಂವೇದಿಯಾದದ್ದು. ಬದುಕಿನ ಯಾವುದೇ ಒಂದು ಸಿದ್ಧಾಂತಕ್ಕೂ ಗಂಟು ಹಾಕಿ ಕೊಂಡು ಸ್ಥಗಿತವಾಗದೆ, ತನ್ನ ಅಭಿರುಚಿಗೆ ಹಾಗೂ ಕಾವ್ಯ ಪ್ರಜ್ಞೆಗೆ ಒಳಗಾದುದೆಲ್ಲಕ್ಕೂ ನಂಟುಹಾಕಿಕೊಳ್ಳುತ್ತ ಚಲನಶೀಲವಾಗಿ ತನ್ನ ಜೀವಂತಗತಿ ಯನ್ನು ಪ್ರಕಟಿಸಿಕೊಂಡಿದೆ. ಸಮಕಾಲೀನ ಕವಿ-ಕಾವ್ಯಗಳ ಪ್ರಭಾವದ ಬೆಳಕಿಗೆ ಮೈಯೊಡ್ಡಿದರೂ, ಮನಸ್ಸನ್ನು ಮಾತ್ರ ತಮ್ಮ ಸಹಜಾನುಭವದ ಕಮ್ಮಟವನ್ನಾಗಿ ಮಾಡಿಕೊಂಡು, ಮಾನವೀಯತೆ, ನಿಸರ್ಗಪ್ರಿಯತೆ, ಮೌಲ್ಯಪ್ರಜ್ಞೆ, ಅನುಭಾವಿಕತೆ ಇತ್ಯಾದಿ ಮೂಲ ದ್ರವ್ಯವನ್ನು ತಮ್ಮ ವ್ಯಕ್ತಿತ್ವದಲ್ಲಿ ಕರಗಿಸಿಕೊಂಡು, ತಮ್ಮ ಅಭಿವ್ಯಕ್ತಿಯನ್ನು ರೂಪಿಸಿ ಕೊಂಡವರು. ಹೆಜ್ಜೆಯಿಂದ ಹೆಜ್ಜೆಗೆ ಬದಲಾಗುತ್ತ, ಬೆಳೆದವರು.

ಅವರ 'ಕಾವ್ಯಾಕ್ಷಿ' ಮತ್ತು 'ಭಾವಜೀವಿ' ಸಂಕಲನಗಳು ಪ್ರಕಟವಾದದ್ದು 1949-50ರಂದು. ಈ ಕಾಲ ನವೋದಯದ ನಡು ಹಗಲಿನ ಕಾಲ. ಕುವೆಂಪು, ಬೇಂದ್ರೆ, ಪು.ತಿ.ನ. ಮಧುರಚೆನ್ನ ಇಂಥವರು ಹೊಸದಾಗಿ ಬರೆಯುವವರ ಪಾಲಿಗೆ ಸವಾಲುಗಳಾಗಿ ನಿಂತ ಕಾಲ. ಈ ಪರಿಸರದಲ್ಲಿ ಬಂದ ಕಣವಿಯವರ 'ಭಾವಜೀವಿ' ಮಧುರ ಚೆನ್ನರ 'ನನ್ನ ನಲ್ಲ' ಕ್ಕೆ ತಕ್ಕಮಟ್ಟಿಗೆ ಋಣಿಯಾದರೂ, ಅಂದಿನ ಯುವಕ ಕವಿ ಕಣವಿಯವರ ಕಾವ್ಯಜೀವನದ ಕಥೆಯು ಗಣಿಯಾಗಿದೆ. ತಾನು ಕವಿಯಾಗುತ್ತಿರುವುದನ್ನು ಕಂಡುಕೊಂಡ ಕವಿಜೀವವೊಂದರ ಸಂಭ್ರಮ, ಉಲ್ಲಾಸ, ಪರಿಶೀಲನೆ, ಇತ್ಯಾದಿಗಳೆ ಇದರ ವಸ್ತು. ತಾನು ಏನಾಗಿದ್ದೇನೆ, ಏನಾಗಬೇಕು ಎಂಬುದನ್ನು ಮನದಟ್ಟುಮಾಡಿಕೊಳ್ಳುವ ದಿಕ್ಕಿನಲ್ಲಿ, ತನಗೆ ತಾನೇ ಮಾತನಾಡಿಕೊಂಡಂತಿರುವ ಒಂದು ನಿರರ್ಗಳ ಭಾವನಾಲಹರಿ ಇದು. 'ನಾಗರಿಕ ನಾಗರವು ಹುತ್ತುಕಟ್ಟದ ಹಳ್ಳಿ'ಯ ವಾತಾವರಣದಲ್ಲಿ ಯಾವ ಯಾವ ನೆನಪುಗಳು,

ಯಾವ ಯಾವ ಅನುಭವಗಳು, ಯಾವ ಯಾವ ಪ್ರಭಾವಗಳು ಸಂಚುಹೂಡಿ ತಮ್ಮನ್ನು ಕವಿಯನ್ನಾಗಿ ರೂಪಿಸಿದವು— ಎಂಬುದನ್ನು ನಿರೂಪಿಸುವ ಈ ಕಥನದ 'ಜೀವಂತಗತಿ' ಆಶ್ಚರ್ಯಕರವಾಗಿದೆ. ಎಲ್ಲೂ, ಯಾವೊಂದು ಮಾತಿಗೂ ತಡಕಾಡದೆ, ಹಸುರು ಕಣಿವೆಯ ನಡುವೆ ಜುಳುಜುಳನೆ ಹರಿಯುವ ಹಳ್ಳದಂತೆ ತೋರುವ ಈ ಬರವಣಿಗೆ, ತನ್ನ ಸಹಜ ಪ್ರಸನ್ನ ಕವಿತಾಗುಣದಿಂದ ಚೇತೋಹಾರಿಯಾಗಿದೆ. ಮುಂದಿನ ಎಲ್ಲ ಕವನ ಸಂಗ್ರಹ ಗಳಲ್ಲೂ, ಇದೇ ನಿರಾಯಾಸ, ಪದರಚನಾ ಕೌಶಲ, ಕಣವಿಯವರು ಸಹಜಕವಿಯೆಂಬು ದನ್ನು ಸ್ಥಿರಪಡಿಸಿದೆ.

ಭಾವಜೀವಿ ಹಾಗೂ ಕಾವ್ಯಾಕ್ಷಿ ಎರಡರಲ್ಲೂ, ಕಣವಿಯವರ ಭಾವಜೀವನ ಅರಳುವ ಪರಿ ಚಿತ್ರಿತವಾಗಿದೆ. ಮೋಡಗಳ ಕರುಮಾಡದಿಂದ ಒರ್ವ ಯಕ್ಷಕನ್ಯೆ ಇಂದ್ರ ಚಾಪವನ್ನು ಕರಗಿಸುತ ಹನಿಯಾಗಿ ಸುರಿಸಿದಳಂತೆ : ಆಗ ಈ ಮುಗ್ಧ ಕವಿಯ ಕಾವ್ಯಾಕ್ಷಿ ತೆರೆಯಿತಂತೆ ; 'ತನಗೆ ತಾನೆ ತಿಳಿಯದಂತೆ ತುಳುಕಿತಹಹ ಭಾವನಾ'—ಇದು ಕಣ ವಿಯವರು ತಮ್ಮಲ್ಲಿ ಕಾವ್ಯೋದಯವಾದ ಬಗೆಯನ್ನು ವರ್ಣಿಸಿರುವ ರೀತಿ. ವಾಸ್ತವ ವಾಗಿ ಇದು ಇಂಗ್ಲಿಷ್ ರೊಮ್ಯಾಂಟಿಕ್ ಕವಿಗಳ ಹಾಗೂ ಕನ್ನಡ ನವೋದಯ ಕವಿಗಳ ಕಾವ್ಯಕಲ್ಪನೆ. ಈ ಕಾವ್ಯಾಕ್ಷಿಗೆ ಮುಖ್ಯವಾಗಿ ಕಾಣುವುದು ನಿಸರ್ಗ ರಮ್ಯತೆ,

ಶಿವನ ಕವನವು ಭುವನ, ಲಾಸ್ಯತಾಂಡವ ಮಿಲನ
ಪ್ರಕೃತಿಯೌಪಾಸನೆಯು ನಿತ್ಯವಿರಲಿ'

[ಕಾವ್ಯಾಕ್ಷಿ : ಪು. 17]

ಎಂಬ ಆಶಯದೊಂದಿಗೆ—

ದೈತ್ಯದರ್ಪದ ದುರುಳ ದಾರುಣದ ಹೋರಟೆಗೆ
ಎಂದೆಂದು ನನ್ನತಲೆ ಬಾಗದಿರಲಿ ;
ಸಾತ್ವಿಕರ ತಾತ್ವಿಕರ ಹಿರಿಜೀವದೌನ್ನತ್ಯ
ವಿಶ್ವಭಾವಾತ್ಮರಿಗೆ ನಮನವಿರಲಿ.

[ಅಲ್ಲೇ. ಪು. 17]

ಎಂಬ ತಾತ್ವಿಕ ನಿಲುವನ್ನೂ, ಕವಿ ಮೈಗೂಡಿಸಿಕೊಳ್ಳುತ್ತಾನೆ. ಮುಖ್ಯವಾಗಿ ಇದು ವ್ಯಕ್ತಿತ್ವ ನಿರ್ಮಾಣದ ಹಂತ; ಏನೇನು ಇದ್ದರೆ ತನ್ನ ವ್ಯಕ್ತಿತ್ವ ಮೌಲಿಕವಾದದ್ದಾಗುವುದೋ ಅದೆಲ್ಲವೂ ಮೈಗೂಡಲಿ ಎಂಬ ಆಶಯವೇ ಇಲ್ಲಿ ಪ್ರಧಾನ. ಈ ಕಾಲದ ಕವಿತೆಯಲ್ಲಿ,— ಒಂದರ್ಥದಲ್ಲಿ ಸ್ವಾತಂತ್ರ್ಯಪೂರ್ವ ಕವಿತೆಯಾದರೂ – ಸ್ವಾತಂತ್ರ್ಯಪೂರ್ವದ ಆಸೆ-ಕನಸು-ಆದರ್ಶಗಳು ಇನ್ನೂ ದನಿಗೊಡುತ್ತಲೇ ಇದ್ದುವೆಂಬುದನ್ನು ಇಲ್ಲಿ ಮರೆಯು ವಂತಿಲ್ಲ. 'ಭಾವಜೀವಿ'ಯಲ್ಲಿನ ಕವಿತೆಗಳಲ್ಲಿಯಂತೆ, 'ಕಾವ್ಯಾಕ್ಷಿ'ಯ ಕವಿತೆಗಳಲ್ಲೂ,

ಆನಂದನಂದನನೊ, ಚಂದನದಿ ಮಿಂದವನೊ
ಉದಯಗಿರಿ ಹೊಂದೇರನೇರಿದವನು

[ಕಾವ್ಯಾಕ್ಷಿ ಪು. 19]

ಎಂಬ ಚಂದ್ರೋದಯ ವರ್ಣನೆಯಲ್ಲಾಗಲಿ,

ಗಾಳಿಗೂಡಿ ಕಿರುಮೋಡವಾಗಿ ಬಾನೆಲ್ಲ ಅಲೆಯುವಾಸೆ
ಬಾನದೇಗುಲದಿ ನವ್ಯನಾಗಿ ಮೈದುಂಬಿ ನಿಲ್ಲುವಾಸೆ
ಮಳೆಯ ಬಿಲ್ಲ ಮೈದೊಡವ ಧರಿಸಿ ಮಣಿಹನಿಗಳಾಗುವಾಸೆ
ಚಂದ್ರನೆದೆಯ ತಿಳಿಯೊಲವನುಂಡು ಶ್ರೀಕಾಂತಿ ಪಡೆಯುವಾಸೆ
[ಕಾವ್ಯಾಕ್ಷಿ : ಪು. 44]

ಎಂದು 'ಮೇಘೋಪಾಸನೆ'ಯಲ್ಲಿ ಮೈದುಂಬಿನಿಲ್ಲುವ ಭಾವುಕತೆಗಳು. ಭಾವದ ರಮ್ಯತೆಗೆ, ಭಾಷೆಯ ಲಾಲಿತ್ಯಕ್ಕೆ ಸಾಕ್ಷಿಯಾಗುತ್ತ, ಈ ಕಾಲದ ಕನಸುಗಾರಿಕೆ, ಆದರ್ಶಪರತೆ. ಇತ್ಯಾದಿಗಳ ದಾಖಲೆಯಾಗಿವೆ.

ಕಣವಿಯವರ ಮುಂದಿನ ಕವನಸಂಗ್ರಹ 'ಆಕಾಶಬುಟ್ಟಿ' ಪ್ರಕಟವಾದದ್ದು 1953 ರಲ್ಲಿ. ಅದು ಸ್ವಾತಂತ್ರ್ಯೋತ್ತರ ಪರಿಸರದ ಉತ್ಸಾಹವಿನ್ನೂ ಬಿಸಿಯಾಗಿದ್ದ ಕಾಲ. ಹೊಸ ನಾಡನ್ನು ಕಟ್ಟುವ, ಪ್ರಜಾಪ್ರಭುತ್ವದ ಬಗೆಗೆ ಅಭಿಮಾನಪಟ್ಟುಕೊಳ್ಳುವ ಕಾಲ. ಈ ಕಾಲದ ಈ ಸಂಗ್ರಹದ ಮೊದಲ ಕವಿತೆ 'ಆಕಾಶಬುಟ್ಟಿ' ಹೊಸ ಆಸೆ, ಭರವಸೆಗಳನ್ನು ಮೇಲುನಾಡಿಗೆ ತೇಲಿಬಿಡುವ ಊರ್ಧ್ವಗಮನಾಭಿಲಾಷೆಯನ್ನು ಪ್ರಕಟಿಸಿದರೂ, ಈ ಸಂಗ್ರಹದ ಬಹುಪಾಲು ಕವಿತೆಗಳು ವಾಸ್ತವದ ಕಡೆಗೆ ಮುಖಮಾಡಿರುವುದು ಕಣವಿಯವರ ಕಾವ್ಯಜೀವನದ ಹೊಸ ತಿರುವನ್ನು ಸೂಚಿಸುತ್ತವೆ ಅನ್ನಬಹುದು. ಸ್ವಾತಂತ್ರ್ಯೋತ್ತರ ಪರಿಸರದ ಹೊಸಬಾಳನ್ನು ಒಪ್ಪಿಕೊಳ್ಳುವ ಹೊಸ ತರುಣರನ್ನು ಕುರಿತು—

ಹೊಸ ಜಗವು ರೂಪುಗೊಂಡಿಹುದೀಗ ; ಹೊಸ ಬಾಳು
ನಮ್ಮದಿದೆ, ಹೊಸತೆಲ್ಲ ನಮ್ಮದಿನ್ನು—
ಹಳೆಯಕಾಲದ ರೂಢಿ-ಜಡಮತೀಯರನೆಲ್ಲ
ಬಿಟ್ಟುಬಿಡಿ ಅವರವರ ಪಾಡಿಗಿನ್ನು—
[ಹೊಸಬಾಳು ನಮ್ಮದಿದೆ : ಪು. 3]

ಎಂದು ಉಪನ್ಯಾಸ ಕೊಡುವ, ಸಮಾಜದ ಹುಳುಕು ಕೊಳಕುಗಳನ್ನು ಕಂಡು, ಕನಲಿ. ಕೊಡಲಿ ಎತ್ತುವ (ಕೊನೆಯ ಎಚ್ಚರಿಕೆ ಪು. 8) ಉದ್ದೇಶದಿಂದ ಕಣವಿಯವರು ಬರೆದ ಈ ಕೆಲವು ಕವಿತೆಗಳು, ಅಂದು ಪ್ರಕರ್ಷಾವಸ್ಥೆಗೆ ಬಂದ ಪ್ರಗತಿಶೀಲ ಚಳುವಳಿಯ ಘೋಷಣೆಗಳಂತೆ ತೋರುತ್ತವೆಯೇ ವಿನಾ, ನಿಜವಾದ ಕಾವ್ಯವಾಗಿಲ್ಲ. ಯಾಕೆಂದರೆ, ವ್ಯಗ್ರತೆ ಕಣವಿಯವರ ವ್ಯಕ್ತಿತ್ವದ ಅಥವಾ ಕಾವ್ಯದ ಮೂಲದ್ರವ್ಯವಲ್ಲ. 'ಮೃದುವಚನ ಮೂಲೋಕ ಗೆಲ್ಲುವುದು ತಿಳಿಯು' (ಮಾತು. ಪು. 37) ಎಂಬ ಶ್ರದ್ಧೆಯಿರುವ ಕವಿಯಿಂದ ನಾವು ರೊಚ್ಚನ್ನು, ವ್ಯಗ್ರತೆಯನ್ನು ನಿರೀಕ್ಷಿಸುವುದು ಸರಿಯಲ್ಲ. ಆದರೆ ತಾತ್ವಿಕವಾಗಿ ಕಣವಿಯವರ ನಿಲುವು ಬದಲಾಗಿದೆ ಎಂಬುದನ್ನು ಈ ಕೆಲವು ಕವಿತೆಗಳು ಸೂಚಿಸುತ್ತವೆ ಎಂಬುದಂತೂ ನಿಜವೆ. ಅವರ 'ಪ್ರಜಾಪ್ರಭುತ್ವ' ಎಂಬ ಕವಿತೆ (ಪು. 24) ಈ

ನಿಲುವನ್ನು, ನಿಜವಾದ ಕಾವ್ಯರೂಪದಲ್ಲಿ ಹಿಡಿದಿರಿಸಿದೆ. ಊರು ಬೇಸಗೆಯ ಸಂಜೆಯ ಸೂರ್ಯ ಮುಳುಗಿ, ತಂಪಾದ ಇರುಳು ಹರಡಿಕೊಂಡ ಪರಿಯನ್ನು ಚಿತ್ರಿಸುವ ಈ ಕವಿತೆ, ಪ್ರಜಾಪ್ರಭುತ್ವ ನೆಲೆಗೊಂಡ ರೀತಿಯ ಸಂಕೇತವಾಗಿದೆ. ಲೋಗರೆಡೆ ಕೆಕ್ಕರಿಸಿ ನೋಡುತ್ತ ಮುಳುಗುವ ಮುದಿ ಸಿಂಹದಂಥ ಸೂರ್ಯ; ಸಂಜೆಯ ಮಬ್ಬು ಕಪ್ಪು ಬಾವುಟವೆತ್ತುವ ರೀತಿ; ಪಕ್ಷಿ ಸಂಕುಲದ ಜಯಕಾರ; ಹಗಲ ಉರಿಬಿಸಿಲ ಸಾಮ್ರಾಜ್ಯ ಪಡುಗಡಲಲ್ಲಿ ಹಡಗನ್ನೇರಿದ್ದು: ಬಿತ್ತರದ ಬಾನಿನಲ್ಲಿ ಚಿಕ್ಕೆಗಳ ಪ್ರಜಾಪ್ರಭುತ್ವ; ಬೇರೆ ಬೇರೆ ಗ್ರಹ ಮಂಡಲಗಳ ಮಂತ್ರಿಮಂಡಲ; ಸರ್ವರಿಗೂ ಸಮಪಾಲಾಗಿ ಸುರಿಯುವ ತಂಪಾದ ಬೆಳ್ದಿಂಗಳಿನ ಇರುಳು–ಇತ್ಯಾದಿಗಳಿಂದ, ಭಾರತೀಯ ಪರಿಸರದ ರಾಜಕೀಯ ಬದಲಾವಣೆಯನ್ನು ಒಂದು ಪ್ರತಿಮೆಯಲ್ಲಿ ಕಡೆದಿಟ್ಟಿರುವುದು ಈ ಕವಿತೆಯ ವಿಶೇಷವಾಗಿದೆ. ಇದರ ಜತೆಗೆ, 'ಪಥಿಕ' (ಪು. 60) 'ಸೃಷ್ಟಿ ನೋಂತು ನಿಂದಿದೆ' (ಪು. 65) 'ನಿಯಮೋಲ್ಲಂಘನ' (ಪು. 70) ಇಂಥ ಕವಿತೆಗಳಲ್ಲಿ ನಿಸರ್ಗ ಪರವಾದ ಪ್ರೀತಿ ಮಡುಗಟ್ಟಿದೆ. ಈ ಸಂಗ್ರಹದಲ್ಲಿ, ಸಾಮಾಜಿಕವಾದ ಎಚ್ಚರ ಕಾಣಿಸಿದರೂ, ಆ ಕಾರಣಕ್ಕೆ ತಮ್ಮ ಸುತ್ತಣ ನಿಸರ್ಗವನ್ನು ಕವಿಯ ಕಣ್ಣು ಮರೆಯುವುದಿಲ್ಲ. ಹಿಂದಿನ ಸಂಗ್ರಹಗಳಲ್ಲಿನ ಬೆರಗುಗಣ್ಣು, ತನ್ಮಯತೆ, ರಮ್ಯತೆಗಳು ಇಲ್ಲಿ ಇದ್ದರೂ, ನಿಸರ್ಗವನ್ನು ಸಮಕಾಲೀನ ಸಂದರ್ಭದಲ್ಲಿರಿಸಿ ನೋಡುವ ಪ್ರಯತ್ನದ ಜತೆಗೆ, ನಿಸರ್ಗವನ್ನು ಕುರಿತ ಚಿಂತನೆಗಳೂ ಹೊಳಹುದೋರಿವೆ. ವಾಸ್ತವವಾಗಿ ಕಣವಿಯವರ ನಿಲುವು ಈ ಲೋಕದ ಬಗೆಗೆ ಒಬ್ಬ ಪಥಿಕನದು. ದಾರಿ ನಡೆಯುವ ಪಥಿಕ, ದಾರಿನಡೆಯುತ್ತಲೇ ಎಲ್ಲವನ್ನೂ ನೋಡುತ್ತಾ, ಅನುಭವಗಳನ್ನು ಬುತ್ತಿಕಟ್ಟಿಕೊಳ್ಳುತ್ತಾ, ಹೋಗಬೇಕು––

ಪ್ರಕೃತಿ ತನ್ನೆದೆಯ ಮಧುವಾಟಿಕೆಯ ತೆರೆದಿರಲು
ಅದನು ತಣಿ ಹೀರದೆಯೆ ಸಾಗಬಹುದೆ?
ಯಾರಿಗೀ ಸುಂದರತೆ? ಯಾರಿಗೀ ಪರವಶತೆ?
ಯಾರ ಸುಖಕೀ ಸೃಷ್ಟಿ ನಿನಗಲ್ಲದೆ?

[ಪಥಿಕ: ಪು. 60]

ಎನ್ನುವ ಈ ಪ್ರಶ್ನೆ ಬೆಳೆಯುವ ಕವಿ, ಬದುಕಿನಿಂದ ಅತ್ತ ಇತ್ತ ಎಳೆಯುವ ಕವಿಗಳಿಗೆ ಹಾಕಿದ ಸವಾಲೂ ಆಗಿದೆ.

ಮತ್ತೆ ಮುಂದಿನ ಮೂರು ವರ್ಷಗಳ ಅವಧಿಯಲ್ಲಿ ಪ್ರಕಟವಾದ ಕವನ ಸಂಗ್ರಹಗಳು ಎರಡು. ಒಂದು 'ಮಧುಚಂದ್ರ' (    ) ಇನ್ನೊಂದು 'ದೀಪಧಾರಿ' (1956). 'ಮಧುಚಂದ್ರ' ಅದರ ಹೆಸರೇ ಸೂಚಿಸುವಂತೆ, ಪ್ರೇಮಗೀತೆಗಳನ್ನು ಪ್ರಧಾನವಾಗಿ ಉಳ್ಳ ಸಂಕಲನ ಈ ಸಂಗ್ರಹದ 'ಗಿರಿ ಗಿರಿ ಗಿಂಡಿ', ಬೇಂದ್ರೆಯವರ 'ಪಾತರಗಿತ್ತಿ ಪಕ್ಕಾ'ದ ನಂತರ ಬಂದ, ಅದೇ ಬಗೆಯ ಲವಲವಿಕೆಯುನ್ನುಳ್ಳ, ತುಂಬ ಖುಷಿ ಕೊಡುವ ಕವಿತೆಯಾಗಿದೆ. ಮನೆಯೊಳಗಣ ದಾಂಪತ್ಯ ಜೀವನದ ಹಲವು ಸೊಗಸಾದ ಚಿತ್ರಗಳು ಈ ಸಂಗ್ರಹದಲ್ಲಿವೆ. ಹಾಗೆಯೆ ಮಗುವನ್ನು ಕುರಿತ, ಈ ಸಂಗ್ರಹದ, ಹಾಗೂ ಮುಂದಿನ

ಸಂಗ್ರಹವಾದ 'ದೀಪಧಾರಿ'ಯಲ್ಲಿನ ಎರಡು ಕವಿತೆಗಳು ಬೇರೆಯಾಗಿಯೆ ಗಮನಿಸಬೇಕಾದವುಗಳು. ಈ ಬಗೆಯ ಕವಿತೆಗಳು, ಹೊಸಗನ್ನಡ ಕಾವ್ಯ ಸಂದರ್ಭದಲ್ಲಿ ತೀರಾ ವಿರಳ. ಪ್ರೀತಿ, ಪ್ರಣಯ, ವಾತ್ಸಲ್ಯ ಇತ್ಯಾದಿಗಳ ಕಡೆ ಕಣ್ಣು ಹಾಯಿಸಲು ವ್ಯವಧಾನವಿಲ್ಲದ ಒಂದು ಮನಃಸ್ಥಿತಿ, 'ದೀಪಧಾರಿ' ಪ್ರಕಟವಾಗುವ ವೇಳೆಗೆ--ಅಂದರೆ 1956ರ ವೇಳೆಗೆ--ಸಾಹಿತ್ಯದ ಸಂದರ್ಭದಲ್ಲಿ ಪ್ರಾಪ್ತವಾಗಿತ್ತು. ಕಾಮದ ಕಾವ್ಯ (poetry of Sex) ಪ್ರೇಮದ ಕಾವ್ಯ (Poetry of Love) ವನ್ನು ಹಿಂದೆ ಹಾಕತೊಡಗಿತ್ತು. ನಿಸರ್ಗ ಕೇಂದ್ರದಿಂದ, ಕಾವ್ಯ ನಗರ ಕೇಂದ್ರಕ್ಕೆ ಸ್ಥಳಾಂತರಿತವಾಗಿತ್ತು ; ಮೆಚ್ಚುವ ಕಾವ್ಯ ಚುಚ್ಚುವ ಕಾವ್ಯವಾಗಿ ಪರಿವರ್ತನೆಯಾಗತೊಡಗಿತ್ತು. ಉತ್ತಮ ಕಾವ್ಯ ನಿರ್ಮಿತಿಗಿಂತ, ರಚಿತವಾದ ಕಾವ್ಯದ ಸಮರ್ಥನೆ ಮುಖ್ಯವಾಗಿತ್ತು.

ಈ ಸಂದರ್ಭದಲ್ಲಿ ಪ್ರಕಟವಾಯಿತು ಕಣವಿಯವರ 'ದೀಪಧಾರಿ'. ಈ ಕಾಲ ಅಡಿಗರೂ ಮತ್ತು ಅವರ ನವ್ಯಕಾವ್ಯ ಪ್ರೇಮಿಗಳೂ, ನವ್ಯ ಕಾವ್ಯದ ಬಗೆಗೆ ಭಾಷ್ಯ ಬರೆಯುತ್ತಿದ್ದ ಕಾಲ. ನವೋದಯ ಕವಿಗಳ ಬಗೆಗೆ, ಕಾವ್ಯದ ಬಗೆಗೆ ಮತ್ತು ಅಂಥದೊಂದು ಮನೋಧರ್ಮದ ಬಗೆಗೇ ಅರುಚಿಯನ್ನು ಹುಟ್ಟಿಸುತ್ತಿದ್ದ ಕಾಲ. ಈ ಸಂದರ್ಭದಲ್ಲಿ ನವೋದಯ ಕಾವ್ಯ ಮಾರ್ಗದಿಂದ ಪುಷ್ಟರಾಗಿ, ಕಾವ್ಯ ಜೀವನವನ್ನು ಆರಂಭಿಸಿ, ನವೋದಯ ಕಾವ್ಯದ ಬಗೆಗೆ ರುಚಿಯನ್ನೂ, ನವೋದಯ ಕವಿಗಳ ಬಗೆಗೆ ಗೌರವವನ್ನೂ ಇರಿಸಿಕೊಂಡ ಕಣವಿಯವರಂಥ ಕವಿಗಳಿಗೆ, ಈ ಗುಂಪಿನಲ್ಲಿ ಗೋವಿಂದವಾಗದೆ, ತಮ್ಮ ನೆಲೆಯನ್ನು ಕಾಯ್ದು ಕೊಳ್ಳುವುದೇ ಮುಖ್ಯವಾದ ಸಮಸ್ಯೆ ಹಾಗೂ ಸವಾಲಾಗಿತ್ತು. ಮುಂದೆ ಹತ್ತು ವರ್ಷಗಳಕಾಲ ನವ್ಯಕಾವ್ಯದ ವಿಮರ್ಶಕರು ಮಾತೆತ್ತಿದರೆ 'ಅಡಿಗರು ಬರೆಯುವ ಸಂದರ್ಭದಲ್ಲಿ' ಎಂಬುದನ್ನೆ ವಿಮರ್ಶೆಯ ಮೂಲವಾಕ್ಯವನ್ನಾಗಿ ಮಾಡಿಕೊಂಡು, ಈ ಸಂದರ್ಭದಲ್ಲಿ ಅಡಿಗರಂತೆ ಬರೆಯದೆ ಬೇರೆಯಾದವರೂ ಇದ್ದರು ಎಂಬುದನ್ನೆ ಗಮನಕ್ಕೆ ತೆಗೆದುಕೊಳ್ಳದೆ, 'ಅಡಿಗರು ಬರೆಯುವ ಸಂದರ್ಭದಲ್ಲಿ' ಎಂಬುದನ್ನೆ ರಾಗ-ತಾನ-ಪಲ್ಲವಿಗಳಲ್ಲಿ ವಿಸ್ತರಿಸುತ್ತಾ ತಮ್ಮ ಜಾಣತನವನ್ನು ಪ್ರದರ್ಶಿಸಿದರು. ಅಂದರೆ ಈ ಒಂದು ಮಹಾವಾಕ್ಯದ ಉದ್ದೇಶ, 'ಅಡಿಗರು ಬರೆಯುವ ಸಂದರ್ಭ'ಎಂದರೆ ಬೇರೆ ಇನ್ನಾರೂ ಬರೆಯದ ಸಂದರ್ಭ, ಅಥವಾ ಬೇರೆಯವರು ಬರೆದರೂ ಅವರು ಅಡಿಗರ ಪ್ರಭಾವ ಅಥವಾ ಅನುಕರಣೆಗೆ ಒಳಗಾಗುವ ಸಂದರ್ಭ'—ಎಂಬುದನ್ನು ಸ್ಪಷ್ಟಪಡಿಸುವುದು. ಆದರೆ ವಾಸ್ತವ ಸ್ಥಿತಿಯನ್ನು ಬಲ್ಲವರಿಗೆ ಗೊತ್ತು, 'ಅಡಿಗರು ಬರೆಯುವ ಸಂದರ್ಭ'ದಲ್ಲಿ, ಅವರಿಗಿಂತ ಬೇರೆಯಾಗಿ ಬರೆಯುವ ಹಲವರು ಇದ್ದರು, ಅವರು ಇಂದೂ ಬರೆಯುತ್ತಿದ್ದಾರೆ ಎನ್ನುವುದು. ಹೀಗೆ ಬೇರೆಯಾಗಿ ಬರೆದವರಲ್ಲಿ ಮತ್ತು ಬರೆಯುತ್ತಿರುವವರಲ್ಲಿ ಕಣವಿಯವರೂ ಮುಖ್ಯರಾದವರು ಎಂಬುದನ್ನು ಗಮನಿಸಬೇಕಾಗಿದೆ. ಕಣವಿಯವರು ನವ್ಯಕಾವ್ಯದ ಈ ಪರಿಸರದಲ್ಲಿ 'ದೀಪಧಾರಿ'ಯನ್ನು

ಪ್ರಕಟಿಸುವುದರ ಮೂಲಕ, ತಾನು ಹಿಂದೆ ಬರೆದಿದ್ದಕ್ಕಿಂತ ಭಿನ್ನವಾಗಿ ಹಾಗೂ 'ಅಡಿಗರು ಬರೆಯುವ ಸಂದರ್ಭ'ದಿಂದಲೂ ಬೇರೆಯಾಗಿ ಬರೆದರೆಂಬುದನ್ನು ಇಲ್ಲಿ ಹೇಳಬೇಕಾಗಿದೆ. ನವ್ಯಕಾವ್ಯದಿಂದಾಗಿ ರೂಪುಗೊಂಡ ಮುಕ್ತಛಂದಸ್ಸು, ವಾಸ್ತವ ಮುಖತೆ, ಸಾಮಾಜಿಕ ಎಚ್ಚರ, ವ್ಯಂಗ್ಯ–ವಿಡಂಬನೆಗಳನ್ನು ಕಣವಿಯುವರ ಕವಿತೆ ಹಿಡಿದು ಕೊಂಡಿತಾದರೂ, ಕಣವಿಯುವರು ತಮ್ಮ ವ್ಯಕ್ತಿತ್ವದ ಮೂಲದ್ರವ್ಯಗಳಾದ ನಿಸರ್ಗಪ್ರಿಯತೆ ಮಾರ್ದವತೆ, ಅನುಭಾವಿಕ ದೃಷ್ಟಿ, ಮಾನವೀಯತೆ, ಮೌಲ್ಯಪ್ರಜ್ಞೆ— ಇತ್ಯಾದಿಗಳನ್ನು ಬಿಟ್ಟುಕೊಡಲಿಲ್ಲ. ಹೀಗಾಗಿ ಅವರೇ ಹೇಳಿಕೊಂಡಿರುವಂತೆ, 'ಭಾವಗೀತೆ ಹಾಗೂ ನವ್ಯ ಮಾರ್ಗಗಳ ನಡುವೆ ನಿರ್ಮಾಣಗೊಂಡಿರುವ ಕಂದರಕ್ಕೆ ಇದು ಸೇತುವೆ' (ದೀಪಧಾರಿ: ಮುನ್ನುಡಿ)ಯಾಯಿತು. ಹೀಗೆ ಕಣವಿಯುವರು ನವೋದಯ ಹಾಗೂ ನವ್ಯ ಮಾರ್ಗ ಗಳೆರಡರ ಸತ್ವವನ್ನು ಬೆಸೆಯುವುದರಲ್ಲಿ ಸಫಲರಾದರು. ನವ್ಯಕಾವ್ಯದ ನಗರ ಗೊಂದಲಗಳ ಅಬ್ಬರದ ನಡುವೆಯೂ—

ಸಾಲಾಗಿ ನವಿಲು ಗರಿಗೆದರಿ ನರ್ತಿಸಿದಂತೆ
ಮುಂಜಾವದಲಿ ಬೇಲಿ ತುಂಬ ನೀಲಿಯಂ ಹೂವು

(ದೀಪಧಾರಿ. ಪು 1)

ಗಳನ್ನು ಕಾಣುವ-ಕಣ್ಣನ್ನು ಹೊಸತನದ ಹೆಸರಿನಲ್ಲಿ ಮಾರಿಕೊಳ್ಳಲಿಲ್ಲ. 'ಮಧ್ಯಾಹ್ನದ ಮಜಲು' (ಪು.8) ಕವಿತೆ. ನಮ್ಮ ಪರಿಸರದ ಯಥಾವತ್ತಾದ ಚಿತ್ರಗಳನ್ನು, ನಿಸರ್ಗವನ್ನು ಕುರಿತ ಅವರ ಹಿಂದಿನ ಕವಿತೆಗಳಿಗಿಂತ ಭಿನ್ನವಾದ ಆಯಾಮದಲ್ಲಿ ಕೊಡುತ್ತದೆ. ಆಫೀಸು ಕಾರಕೂನನ ಕುರ್ಚಿ, ಹಸುರು ಜೊಂಡಿನ ಹೊಂಡದಲ್ಲಿ ಈಸುವ ಎಮ್ಮೆ, ಗೋಡೆಯಲ್ಲಿ ಶಿಲುಬೆಗೇರಿದ ಗಡಿಯಾರ. ಹೀಗೆ ಯಾವ ಆದರ್ಶೀಕರಣದ ಮಾತೂ ಇಲ್ಲದ ವಾಸ್ತವ ವನ್ನು ಒಂದು ಮೌಲ್ಯವೆಂಬಂತೆ ಒಪ್ಪಿಕೊಳ್ಳುತ್ತದೆ. 'ಸೇದಿ ಬೀಸಾಡಿರುವ ಸಿಗರೇಟು ತುಂಡಿನೊಲು ದೂರದಲಿ ಕಾಣಿಸಿತು ಮಂಕು ಚುಕ್ಕಿ'—ಎಂಬಂಥ ಮಾತಿನಲ್ಲಿ, ನವೋದಯದ 'ರಮ್ಯತೆ'ಯಿಂದ ಬೇರೆಯಾದ ಮನೋಧರ್ಮವನ್ನು ಕಣವಿಯುವರು ಪ್ರಕಟಿಸಿದರು. ಮನುಷ್ಯನ ವ್ಯಕ್ತಿತ್ವ ಹೇಗೆ ಬರಿಯ ನೆರಳಾಗಿದೆ ಎಂಬುದನ್ನು (ನೆರಳು. ಪು.21) ಹೇಳುತ್ತ, ಗತವೈಭವದ ಪರಂಪರೆಯ ಹಿನ್ನೆಲೆಯಲ್ಲಿ ವರ್ತಮಾನದ ವೈಫಲ್ಯದ ವಿವೇಚನೆಯನ್ನು 'ಪಣತಿ' (ಪು. 35) ಎಂಬ ಕವಿತೆಯಲ್ಲಿ ಮಾಡಿದ್ದಾರೆ. 'ಕೊನೆಯ ನಿಲ್ದಾಣ' (ಪು.41) ರೈಲುಗಾಡಿಯ ಪಯಣದ ಪ್ರತೀಕದಲ್ಲಿ, ಇಡೀ ವಾಸ್ತವ ಬದುಕಿನ ಅಸ್ತವ್ಯಸ್ತತೆ ಹಾಗೂ ಅರ್ಥಹೀನತೆಯನ್ನು ತುಂಬ ಸೊಗಸಾಗಿ ಚಿತ್ರಿಸುತ್ತದೆ. ಮಕ್ಕಳನ್ನು ಕುರಿತ ಎರಡು ಕವಿತೆಗಳು, 'ಋತುಸಂಸಾರ' 'ಕಾಲಾತೀತ' 'ಮನೆಕಿಟಕಿ' 'ಮಧುರ ಚನ್ನರ ನೆನಪಿಗೆ'—ಇವು ಈ ಸಂಗ್ರಹದ ಇತರ ಸಾರ್ಥಕ ಕವಿತೆಗಳು. ಒಟ್ಟಿನಲ್ಲಿ 'ಆಕಾಶಬುಟ್ಟಿ' ಯಲ್ಲಿ ಕಾಣಿಸಿಕೊಂಡ ಹೊಸ ತಿರುವು, 'ದೀಪಧಾರಿ' ಸಂಗ್ರಹದ ಅನೇಕ ಕವಿತೆಗಳಲ್ಲಿ ಬೇರೊಂದು ಹದವನ್ನು ಪ್ರಕಟಿಸಿಕೊಂಡಿದೆ.

ಕಣವಿಯವರ ಮುಂದಿನ ಹೆಜ್ಜೆಗಳಾದ 'ಮಣ್ಣಿನ ಮೆರವಣಿಗೆ' (1960) ಮತ್ತು 'ನೆಲಮುಗಿಲು' ಗಳನ್ನು (1965)ಒಟ್ಟಾಗಿಯೇ, ಅವರ ಕಾವ್ಯ ಜೀವನದ ಪರಿಣತ ಹಂತವೆಂದು ಪರಿಗಣಿಸಬೇಕು, ಈ ಹೊತ್ತಿಗಾಗಲೆ ನವ್ಯ ಕಾವ್ಯ ತನ್ನ ಅಬ್ಬರವನ್ನು ತಗ್ಗಿಸಿಕೊಂಡು, ಬಹುಮಟ್ಟಿಗೆ ಚಿಂತನಪರವಾಗತೊಡಗಿತ್ತು. ನವ್ಯ ಕಾವ್ಯದ ಕಾಲದಲ್ಲಿ ಕನ್ನಡ ಕಾವ್ಯದ 'ವಸ್ತು'ವಿಗೆ ಹೊಸ ಆಯಾಮಗಳು ಪ್ರಾಪ್ತವಾಯಿತೆಂಬುದು, ಗಮನಿಸಬೇಕಾದ ಸಂಗತಿ. ನಿಸರ್ಗವನ್ನು ಕುರಿತ ಪ್ರೀತಿ ಯಿಂದ ತಕ್ಕಮಟ್ಟಿಗೆ ಈ ಕಾವ್ಯ ವಿಮುಖವಾದರೂ, ವ್ಯಂಗ್ಯ-ವಿಡಂಬನೆ ಇತ್ಯಾದಿ, ಮಾಮೂಲು ಧೋರಣೆಗಳು ಸ್ವಲ್ಪ ಮಿತಿಮೀರಿತು ಅನ್ನಿಸಿದರೂ, ಮನುಷ್ಯನ ಅಂತರಂಗ ಪ್ರಪಂಚಕ್ಕೆ ಪಾತಾಳ ಗರುಡವನ್ನು ಇಳಿಸಿದ್ದು, ಮತ್ತು ವಾಸ್ತವದಾಚೆಯ ಗೂಢಗಳ ಅನ್ವೇಷಣೆಗೆ ತೊಡಗಿದ್ದು, ವಿಶೇಷದ ಸಂಗತಿ. ಇದೆಲ್ಲಕ್ಕಿಂತ ಮಿಗಿಲಾಗಿ, ಈ ಕಾಲದ ಕವಿತೆ ಮುಖ್ಯವಾಗಿ ಮೂರು ವಸ್ತುಗಳ ಮೇಲೆ ತನ್ನ ಗಮನವನ್ನು ಕೇಂದ್ರೀ ಕರಿಸಿದಂತೆ ತೋರುತ್ತದೆ. ಒಂದು, ಮನುಷ್ಯ ಮತ್ತು ಈ ಭೂಮಿ. (Earth and the Man), ಇನ್ನೊಂದು, 'ಕಾಲ ಮತ್ತು ಮನುಷ್ಯ' (Time and Man), ಮತ್ತೊಂದು, 'ಕಾಮ ಮತ್ತು ಮನುಷ್ಯ' (Sex and Man)—ಈ ಮೂರೂ ಈ ಕಾಲದ ಬಹುತೇಕ ಕವಿಗಳ ಚಿಂತನೆಯ ಮುಖ್ಯ ವಸ್ತುಗಳಾಗಿವೆ. ಈ ಮೂರು ವಸ್ತುಗಳನ್ನು ಮೂಲಮಾನವನ್ನಾಗಿರಿಸಿಕೊಂಡು ನವ್ಯ ಕಾವ್ಯದ ಸಾಧನೆ-ಸಿದ್ಧಿಗಳನ್ನು ವಿವೇಚಿಸುವ ಕೆಲಸ ಇನ್ನೂ ಆಗಬೇಕಾಗಿದೆ. ಅಡಿಗ, ಕೆ.ಎಸ್.ನ. ಕಣವಿ, ಶರ್ಮ, ಜಿ.ಎಸ್.ಎಸ್—ಇವರೆಲ್ಲರೂ* ಈ ಮೂರು ವಸ್ತುಗಳನ್ನು ಕುರಿತು ಬರೆದಿದ್ದಾರೆ. ಕಣವಿಯವರು 'ಮಣ್ಣಿನ ಮೆರವಣಿಗೆ' ಹಾಗೂ 'ನೆಲ-ಮುಗಿಲು'ಗಳಲ್ಲಿ ನೆಲ ಮತ್ತು ಮನುಷ್ಯನಿಗಿರುವ ಸಂಬಂಧವನ್ನು, (ಮಣ್ಣಿನ ಮೆರವಣಿಗೆ; ಶಿಶು ಕಂಡ ಕನಸು), ಮನುಷ್ಯ ಮತ್ತು ಕಾಲಕ್ಕೆ ಇರುವ ಸಂಬಂಧವನ್ನು (ಕಾಲ ನಿಲ್ಲುವುದಿಲ್ಲ ; ಕಾಲಪುರುಷನಲ್ಲಿ ಕವಿಗಳ ಕೋರಿಕೆ) ವಿವೇಚನೆ ಮಾಡಿದ್ದಾರೆ. 'ಮಣ್ಣಿನ ಮೆರವಣಿಗೆ'ಯ ಕೆಲವು ಕವಿತೆಗಳಲ್ಲಿ, ಮೊದಲು ಎಳೆಯ ಬೆರಗುಗಣ್ಣಿಗೆ ಪರಿಚಿತವಾದ ಈ 'ನೆಲ'ದ ಸೊಗಸುಗಳು, ಒಗಟು ಗಳು, ಬೆಳೆಬೆಳೆದಂತೆ ಅನುಭವಕ್ಕೆ ಬರುವ ಅದರ ವಾಸ್ತವಗಳು ಇತ್ಯಾದಿಗಳ ಜತೆಗೇ ತಾನು ನೆಲದ ಮೇಲೆ ನಿಂತ ಪರಿಸರ, ಈ ಅಪೂರ್ವ ಬೆಳಕುಗಳ, ವಿಶ್ವದ ಹಿನ್ನೆಲೆಯಲ್ಲಿ ಎಷ್ಟೊಂದು ಅಸ್ತವ್ಯಸ್ತವಾಗಿದೆ, ಶೋಚನೀಯವಾಗಿದೆ ಎಂಬುದನ್ನೂ ಗುರುತಿಸುವ 'ಸಮಗ್ರತೆ'—ಕಾಣಿಸುತ್ತದೆ. ಈ ಲೋಕದ ಬೆರಗುಗೊಳಿಸುವ ಚೆಲುವಿನಲ್ಲಿ ತಲ್ಲೀನವಾಗು ವುದರಲ್ಲಿಯೇ ತೃಪ್ತಿಯಿದೆ, ಎಂದುಕೊಳ್ಳುತ್ತಿದ್ದ ಹಿಂದಿನ ಆ ನಿಲುವು ಕೇವಲ ಭಾವಾತಿ

---

*ರಾಮಚಂದ್ರ ಶರ್ಮರು ಮುಖ್ಯವಾಗಿ ಭೂಮಿ ಮತ್ತು ಮನುಷ್ಯ ; ಕಾಮ ಮತ್ತು ಮನುಷ್ಯ, ಈ ಸಂಬಂಧವನ್ನು ಕುರಿತು ಬರೆದರೆ, ಉಳಿದವರು ಮುಖ್ಯವಾಗಿ, ಭೂಮಿ ಮತ್ತು ಮನುಷ್ಯ, ಕಾಲ ಮತ್ತು ಮನುಷ್ಯ ಇವುಗಳ ಸಂಬಂಧವನ್ನು ಕುರಿತು ಬರೆದರು.

ರೇಕದ್ದು ಎಂಬ ಅರಿವಾಗಿ, ಈ ಲೋಕದ ಬೆರಗು—ಚೆಲುವುಗಳ ನಡುವೆ, ಬದುಕನ್ನು ಕಲಕುವ ವಾಸ್ತವಗಳು, ನಂಬಿಕೆಗಳ ಬೇರನ್ನೆ ಅಲುಗಿಸುವ ಘಟನೆಗಳು ನಮ್ಮ ವ್ಯಕ್ತಿತ್ವದ ಒಂದು ಭಾಗವೆಂದು ಒಪ್ಪಿಕೊಳ್ಳುವ ಬೆಳವಣಿಗೆ ಈ ಹಂತದಲ್ಲಿ ಕಾಣಿಸಿಕೊಳ್ಳುತ್ತದೆ. 'ಒಟ್ಟಿನಲಿ ಪರಿಸ್ಥಿತಿ ತುಂಬಾ ಶೋಚನೀಯ' (ಪು. 4) 'ದಾರಿಯಲಿ ಬರುವ ಸೇತುವೆ ಯೆಲ್ಲ ಭದ್ರವೊ' (ಪು. 17)–ಎಂಬ ಭಯ-ಸಂಶಯಗಳು ಕವಿಯನ್ನು ಕಾಡುತ್ತವೆ. 'ನೆಲ-ಮುಗಿಲು' ಸಂಗ್ರಹದ 'ಕಾಲ ನಿಲ್ಲುವುದಿಲ್ಲ' ಎಂಬ ಕವಿತೆ, ಕಾಲ ಮತ್ತು ಮನುಷ್ಯನ ಸಂಬಂಧವನ್ನು ಕುರಿತದ್ದಾಗಿದೆ. ಕಾಲದ ಕಲ್ಪನೆಯುನ್ನು, ಬದುಕಿನ ವಿವಿಧ ನೆಲೆಗಳ ಹಿನ್ನೆಲೆಯಲ್ಲಿ, ವ್ಯಾಖ್ಯಾನಿಸಲಾಗಿದೆ. ಬದುಕಿನ ವಿವಿಧ ಪರಿವರ್ತನೆಗಳ ಮೂಲಮಾನದಲ್ಲಿ, ಕಾಲವೆಂಬ ಅಮೂರ್ತ ಕಲ್ಪನೆಯನ್ನು ಮೂರ್ತಗೊಳಿಸುವ ಈ ಕವಿತೆ, ನಿಜವಾದ 'ಕಾಲ'ದ ಅರಿವಿನಿಂದ ವ್ಯಕ್ತಿತ್ವಕ್ಕೆ ಬರುವ ಪರಿಣತಿಯನ್ನು ಚಿತ್ರಿಸುತ್ತದೆ. ನೆಲ ಮತ್ತು ಮನುಷ್ಯ, ಕಾಲ ಮತ್ತು ಮನುಷ್ಯ ಈ ಎರಡನ್ನು ಕುರಿತಂತೆ ಮಾತ್ರ ಅಲ್ಲ, ಬೇರೆಯ ಇನ್ನಿತರ ವಸ್ತುಗಳ ಬಗೆಗೂ ಕಣವಿಯವರು ಕಣ್ಣು ತೆರೆದು ನೋಡಿದ್ದಾರೆ. ಈ ಎರಡು ಕವನ ಸಂಗ್ರಹಗಳಲ್ಲಿ ಅವರ ಕಾವ್ಯ ಕೇವಲ ಅಂದಿನ ಸಾಹಿತ್ಯಕ ವಾತಾವರಣಕ್ಕೆ ಮಾತ್ರ ಬದ್ಧವಾಗದೆ, ಸಮಗ್ರ ದೇಶದ ವಾತಾವರಣಕ್ಕೆ ಪ್ರತಿಸ್ಪಂದಿಸಿದೆ. 1960 ರಿಂದ 1965ರ ಅವಧಿಯ ಈ ಕಾಲ, ನಾಡನ್ನು ಕಟ್ಟುವ ವಿವಿಧ ಕ್ರಿಯಾ ಚಟುವಟಿಕೆಗಳ ಕಾಲ; ಹಾಗೆಯೇ ಚೀನಾದೇಶದ ಧಾಳಿಯಿಂದ ಈ ರಾಷ್ಟ್ರ ತತ್ತರಿಸಿದ, ನೆಹರೂ ಅವರ ನಿಧನ ದಿಂದ ಆಘಾತಗೊಂಡ ಕಾಲ. ಈ ಪರಿಸರಕ್ಕೆ ಕಣವಿಯವರ ಕಾವ್ಯ ದನಿಗೊಟ್ಟಿದೆ. ಮಣ್ಣಿನ ಮೆರವಣಿಗೆ ಸಂಗ್ರಹದ 'ಅಪರಾವತಾರ' (ಪು. 10), 'ಲಾಗ' (ಪು. 32); ನೆಲ ಮುಗಿಲು ಸಂಗ್ರಹದ 'ಜಗದೇಕಮಲ್ಲ' (ಪು. 28) ಕವಿತೆಗಳಲ್ಲಿ ಸಮಕಾಲೀನ ರಾಜ ಕೀಯದ ಭ್ರಷ್ಟಾಚಾರಗಳನ್ನೂ, ರಾಜಕಾರಣಿಗಳನ್ನೂ ವಿಡಂಬಿಸಿದ್ದಾರೆ. ಹಾಗೆಯೆ 'ರಾಷ್ಟ್ರದ ಕರೆ,' 'ಇಂದೆ ಸೀಮೋಲ್ಲಂಘನ,' 'ನೆಹರೂ ಶ್ರದ್ಧಾಂಜಲಿ', 'ಭಾರತ ಸುಪುತ್ರನ ಕೊನೆಯ ಬಯಕೆ' (ನೆಲಮುಗಿಲು : ಪು. 45 ; 47 ; 50 ; 52) ಇತ್ಯಾದಿ ಕವಿತೆಗಳಲ್ಲಿ ಭಾರತೀಯ ಪ್ರಜಾಪ್ರಭುತ್ವಕ್ಕೆ ಒದಗಿದ ಆತಂಕ, ಆಘಾತಗಳನ್ನು ಚಿತ್ರಿಸಲು ಮರೆಯ ಲಿಲ್ಲ. ಜೊತೆಗೆ 'ಜೀರ್ಣೋದ್ಧಾರ,' 'ನಾಳಿನ ನವೋದಯ' (ಮಣ್ಣಿನ ಮೆರವಣಿಗೆ (ಪು 18; 26), ಹೊಸ ಬಾಳಿನ ಯೋಜನೆ (ನೆಲಮುಗಿಲು : ಪು. 18) ಈ ಕವಿತೆಗಳಲ್ಲಿ ರಾಷ್ಟ್ರ ನಿರ್ಮಾಣದ, ಹಾಗೂ ಈ ರಾಷ್ಟ್ರದ ಏಳು-ಬೀಳುಗಳ ಪರಿಯನ್ನು ಬಿಂಬಿಸಲಾಗಿದೆ. ಈ ಕವಿತೆಗಳಲ್ಲಿ ಎಷ್ಟೋ, ಕಾವ್ಯ ದೃಷ್ಟಿಯಿಂದ ಉತ್ಕೃಷ್ಟವಾಗಿಲ್ಲವೆಂಬುದು ನಿಜ; ಆದರೆ ಇವುಗಳು ಕಣವಿಯವರ ಕವಿ ಮನೋಧರ್ಮ ಈ ರಾಷ್ಟ್ರ ಜೀವನದೊಂದಿಗೆ ಸದಾ ಎಚ್ಚರವಾಗಿತ್ತೆಂಬುದನ್ನು ಗುರುತಿಸುವ ದಾಖಲೆಗಳಾಗಿವೆ. ಸ್ವಾತಂತ್ರ್ಯೋತ್ತರ ಪರಿಸರ ದಲ್ಲಿ ಈ ದೇಶದ ಆಗುಹೋಗುಗಳ ಬಗೆಗೆ ಒಂದು ರೀತಿಯಲ್ಲಿ ತುಟಿ ಬಿಗಿದುಕೊಂಡು, ಕೇವಲ ವ್ಯಂಗ್ಯ-ವಿಡಂಬನೆಗಳಿಗೆ ಮಾತ್ರ ಬಾಯಿ ತೆರೆಯಲು ಮುಂದಾಗುತ್ತಿದ್ದ 'ನವ್ಯ'ರ ನಡುವೆ, ಈ ದೇಶದ ಘಟನಾ ಪರಂಪರೆಗಳ ಬಗೆಗೆ ಸ್ಪಂದಿಸುತ್ತ, ಮೆಚ್ಚಬೇಕಾದುದನ್ನು

ಮೆಚ್ಚುತ್ತಾ, ಮೆಚ್ಚಲಾಗದ್ದನ್ನು ಚುಚ್ಚುತ್ತಾ ಕಣವಿಯವರ ಕಾವ್ಯ, ಉದ್ದಕ್ಕೂ ಪರಿಸರ ಪ್ರಜ್ಞೆಯನ್ನು ಪ್ರಕಟಿಸಿಕೊಂಡಿದೆ. ಅವರ ಮುಂದಿನ 'ಎರಡು ದಡ' ಹಾಗೂ 'ನಗರದಲ್ಲಿ ನೆರಳು' ಸಂಗ್ರಹಗಳ ಕೆಲವು ಕವಿತೆಗಳಲ್ಲಿಯೂ 1974ರವರೆಗಿನ ಅವಧಿಯಲ್ಲಿ ನಡೆದ ಈ ದೇಶದ ಹೊಯ್ದಾಟಗಳನ್ನು, ರಣವಿಕ್ರಮಗಳನ್ನು, ಲಾಲ್ ಬಹದೂರ್ ಶಾಸ್ತ್ರಿಯವರಂಥ ವ್ಯಕ್ತಿತ್ವದ ಬಗೆಗೆ ಪ್ರಶಂಸೆಯನ್ನೂ ಅಭಿವ್ಯಕ್ತಪಡಿಸಿದ್ದಾರೆ. ಆದರೆ ಈ ಪರಿಸರದ ನಡುವೆ ಅವರು ನಿಸರ್ಗದ ಬಗೆಗಿನ ರುಚಿಯನ್ನು ಕಳೆದುಕೊಳ್ಳುವುದಿಲ್ಲ ; ದೈನಂದಿನ ಪ್ರೀತಿ-ವಾತ್ಸಲ್ಯಗಳ ಬಗೆಗೆ ಮುಕ್ತ ಕಂಠದಿಂದ ದನಿಗೂಡದೆ ಇರುವುದಿಲ್ಲ. 'ನಿಂತಲ್ಲಿಯೇ ನೀಲಿಗಟ್ಟಿರುವ ಆಕಾಶ'ವನ್ನೂ, 'ಕಿಟಕಿಯಾಚೆಗೆ ದೂರ ಬೆಟ್ಟ ಬಯಲುಗಳಲ್ಲಿ ಮುಂಗಾರು ಮಳೆ ಬೆಳೆದ ಭಾವ ಮೇಳವನ್ನೂ', 'ದಿಗಂತದಲಿ ಇಳಿಬಿಟ್ಟಿರುವ ಗಿರಿಸಾನುಗಳ ನೀಲತೆರೆ ಮೇಲೆ ಚಂದ್ರನು ಬರಿಯ ದುಂಡುಗೆರೆ'ಯಾಗಿರುವುದನ್ನೂ ಕಾಣುವುದರ ಜತೆಗೆ,

> ಯುಗ ಯುಗದ ವಿಸ್ಮೃತಿಯ ಬಾವಿತಳದಿಂದ ಕಪ್ಪಲಿ ಹೊಡೆದು
> ಜೀವಕ್ಕೆ ನೀರು ಹಾಯಿಸುವ ಜುಳು ಜುಳು ನಿನಾದ
>
> [ಮಣ್ಣಿನ ಮೆರವಣಿಗೆ ಪು 35]

ವನ್ನೂ ಕೇಳ ಬಲ್ಲರು. ಮಗಳು 'ರಂಜನಾ'ಳ ಬಾಲಲೀಲೆಯ ಸೊಗಸನ್ನು ವರ್ಣಿಸುತ್ತಲೇ ಮಳೆಗಾಲವನ್ನು ಕುರಿತು ಮೈದುಂಬಿದ ಕವಿತೆಗಳನ್ನು ಬರೆಯುತ್ತಾರೆ. ಮಳೆಗಾಲವನ್ನು ಕುರಿತು 'ನೆಲಮುಗಿಲು' ಸಂಗ್ರಹದಲ್ಲೇ ಎರಡು ಕವಿತೆಗಳಿವೆ. ಇದಕ್ಕೆ ಹಿಂದಿನ ಮತ್ತು ಮುಂದಿನ ಸಂಕಲನಗಳಲ್ಲಿ ಇರುವ 'ಮಳೆಗಾಲ'ವನ್ನು ಕುರಿತ ಕವಿತೆಗಳನ್ನೆಲ್ಲ ಒಟ್ಟಿಗೆ ಇರಿಸಿಕೊಂಡು ನೋಡಬೇಕು. ಹೊಸಗನ್ನಡ ಕವಿಗಳಲ್ಲಿ ಮಳೆಗಾಲವನ್ನು ಕುರಿತು ಕಣವಿಯವರಂತೆ ತನ್ಮಯವಾಗಿ ಬರೆದವರಿಲ್ಲವೆಂದೇ ಹೇಳಬೇಕು, ಕುವೆಂಪು ಅವರಿಗೆ ಸೂರ್ಯೋದಯ, ಬೇಂದ್ರೆಯವರಿಗೆ ಶ್ರಾವಣ, ಕಣವಿಯವರಿಗೆ ಮಳೆಗಾಲ, ತುಂಬ ಅಚ್ಚು ಮೆಚ್ಚಿನ ಹಾಗೂ ತನ್ಮಯತೆಯ ವಸ್ತುಗಳಾಗಿವೆ. ಕಣವಿಯವರ ಕಾವ್ಯದ ಮತ್ತೊಂದು ವಿಶೇಷತೆ ಇರುವುದು ಅವರ ಸಾನೆಟ್‌ಗಳಲ್ಲಿ. 'ನೆಲಮುಗಿಲು' ಸಂಗ್ರಹದ 'ಪ್ರತಿಮೆ' 'ಪ್ರತಿಬಿಂಬ' ಎಂಬ ಭಾಗದಲ್ಲಿರುವ ಮತ್ತು ಮುಂದಿನ ಅವರ ಇನ್ನೆರಡು ಕವನ ಸಂಗ್ರಹಗಳಲ್ಲಿಯೂ ಕಾಣಿಸಿಕೊಳ್ಳುವ ಸಾನೆಟ್‌ಗಳು ಕಣವಿಯವರ ಕಾವ್ಯ ಶಿಲ್ಪದ ಮಾದರಿಗಳಾಗಿವೆ. ಶ್ರೀನಿವಾಸ, ಬೇಂದ್ರೆ, ಕುವೆಂಪು, ಮತ್ತು ಪು.ತಿ.ನ. ಅವರಿಗಿಂತಲೂ ಭಿನ್ನವಾದ ಹಾಗೂ ವಿಶಿಷ್ಟವಾದ ಸಾನೆಟ್‌ಗಳ ರಚನೆ ಕಣವಿಯವರದು. ಅವರ ಒಂದೊಂದು ಸಾನೆಟ್‌ಗಳೂ, ಹರಳುಗೊಂಡ ಭಾವದ ಪ್ರತಿಮೆಗಳಂತಿವೆ. ತಮ್ಮ ಪ್ರೀತಿ-ವಿಶ್ವಾಸ-ಅಭಿಮಾನ-ಗೌರವಗಳಿಗೆ ಪಾತ್ರರಾದ ವ್ಯಕ್ತಿಗಳ ಗುಣ-ಸ್ವಭಾವಗಳನ್ನು ಕುರಿತು ಕಣವಿಯವರು ಬರೆದಷ್ಟು 'ಸಾನೆಟ್.ಗಳನ್ನು,* ಬಹುಶಃ ಕನ್ನಡದಲ್ಲಿ ಬೇರೆಯಾರೂ

---

* ವ್ಯಕ್ತಿಗಳನ್ನು ಕುರಿತು ಸಾನೆಟ್‌ಗಳಲ್ಲದೆ, ಬೇರೆಯ ರೂಪದಲ್ಲೂ ಬರೆದ ಕವಿತೆಗಳು ಇನ್ನೂ ಇವೆ.

ಬರೆದಿಲಾರರೆಂದೇ ನನ್ನ ತಿಳಿವಳಿಕೆ. ಪ್ರೀತಿ ವಿಶ್ವಾಸ-ಗೌರವಗಳು ಮಾನವೀಯ ಸಂಬಂಧಗಳಲ್ಲಿ ತೀರಾ ಮೌಲಿಕವಾದವುಗಳೆಂಬ ಅಂಶವನ್ನು ಈ ರಚನೆಗಳ ಮೂಲಕ ಎತ್ತಿ ಹೇಳುವುದರ ಜತೆಗೆ, ಕಣವಿಯವರ ವ್ಯಕ್ತಿತ್ವದ ಲಕ್ಷಣವನ್ನೂ ಈ ಬಗೆಯ ಸಾನೆಟ್‌ಗಳು ತೆರೆದು ತೋರುತ್ತವೆ. ಕಣವಿಯವರ ಕಲೆಗಾರಿಕೆ (craftsmanship) ಈ ಸಾನೆಟ್‌ಗಳಲ್ಲಿ ಒಂದು ಪರಿಣತಿಯ ನೆಲೆಗೆ ನಿಂತಿದೆ.

ಮುಂದಿನ 'ಎರಡುದಡ' (1969) ಮತ್ತು 'ನಗರದಲ್ಲಿ ನೆರಳು' (1974)—ಈ ಸಂಗ್ರಹಗಳು, ಕಣವಿಯವರ ಕಾವ್ಯದ ಭಾಷೆ ಬೇರೊಂದು ಆಯಾಮವನ್ನು ಪಡೆಯುತ್ತಿರುವುದರ ದಾಖಲೆಗಳಾಗಿ ಮಾತ್ರ ಗಮನಾರ್ಹವಾಗಿವೆ. ಈ ಸಂಗ್ರಹಗಳಲ್ಲಿ 'ನಂಬಿಕೆ' (ಎರಡು ದಡ ; ಪು. 39), 'ನಗರದಲ್ಲಿ ನೆರಳು' 'ಗುಬ್ಬಿ' (ನಗರದಲ್ಲಿ ನೆರಳು' ಪು:1,22) ಇಂಥ ಕೆಲವು ಕವಿತೆಗಳು ಸಾರ್ಥಕವಾದವುಗಳೆನ್ನಿಸಿದರೂ, ಒಟ್ಟಿನ ಮೇಲೆ ತೀರಾ ವಿಶೇಷವಾದದ್ದೇನನ್ನೂ ಈ ಸಂಗ್ರಹಗಳು—ಆಗಲೇ ಪ್ರಸ್ತಾಪಿಸಿರುವಂತೆ ಕೆಲವು ಸಾನೆಟ್‌ಗಳನ್ನು ಹೊರತು ಪಡಿಸಿ—ಕೊಡುವಂತೆ ತೋರುವುದಿಲ್ಲ. ಹಾಗೆ ನೋಡಿದರೆ, ಕನ್ನಡ ಕಾವ್ಯವೇ, ಈ ಕಳೆದ ಹತ್ತು-ಹದಿನೈದು ವರ್ಷಗಳಿಂದ ತನ್ನ ಕಾವನ್ನು ತಕ್ಕಷ್ಟು ಕಳೆದುಕೊಂಡಿದೆ ; ಮತ್ತು ಹೊಸ ಸಾಧ್ಯತೆಗಳ ಅನ್ವೇಷಣೆಯಲ್ಲಿದೆ. ಹೀಗಿರುವಾಗ ಕಣವಿಯವರ 'ಎರಡು ದಡ'ಗಳ ನಡುವೆ ಅಷ್ಟೇನೂ ಹೊಸ ನೀರು ಹರಿದಂತೆ ತೋರದಿರುವುದು ಆಶ್ಚರ್ಯವೇನೂ ಅಲ್ಲ. ಆದರೆ, ಶಾಂತಿನಾಥ ದೇಸಾಯಿಯವರು ಹೇಳುವಂತೆ ಇದು 'ಇನ್ನೊಂದು ಸಾಧನೆಯ ಸಿದ್ಧತೆ' ಎಂಬುದನ್ನು ಗಮನಿಸಬೇಕು.* ಈಗಾಗಲೇ ತಮ್ಮ ಕಾವ್ಯದ ಸೊಗಸಿನಿಂದ, ಕನ್ನಡ ಜನಮನವನ್ನು ಗೆದ್ದುಗೊಂಡಿರುವ ಕಣವಿಯವರ ವ್ಯಕ್ತಿತ್ವ, ಸದಾ ನಿರಾತಂಕ ಮನಃಸ್ಥಿತಿಯ, ಯಾವ ಒಳ್ಳೆಯದರ ಬಗೆಗೂ ರುಚಿಯನ್ನು ಕಳೆದುಕೊಳ್ಳದ, ಯಾವ ರೋಚಕವಾದ ಪಕ್ಷ ಪಂಥಗಳಿಗೂ ತನ್ನನ್ನು ಗಂಟು ಹಾಕಿಕೊಂಡು ಸೀಮಿತಗೊಳಿಸಿಕೊಳ್ಳದ, ಮಾನವೀಯ ಸಂಬಂಧಗಳಲ್ಲಿ ನಂಬಿಕೆಯನ್ನು ಕಳೆದುಕೊಳ್ಳದ, ಮತ್ತು ಅದಮ್ಯವಾದ ಜೀವನ ಪ್ರೀತಿಯ— ನಿಲುವುಗಳಿಂದ, ಈಗಾಗಲೇ ಬದಲಾಗುತ್ತಿರುವ ಕಾವ್ಯ ಪರಿಸರದಲ್ಲಿ ಯಾವ ಹೊಸ ಹೆಜ್ಜೆಗಳನ್ನು ಮೂಡಿಸ ಬಲ್ಲದೆಂಬ ಬಗೆಗೆ ಕಾದು ನೋಡ ಬೇಕಾಗಿದೆ.

---

* 'ನಗರದಲ್ಲಿ ನೆರಳು' ಸಂಗ್ರಹದ ಒಳ ಪುಟಗಳಲ್ಲಿ.

ರಂ. ಶ್ರೀ. ಮುಗಳಿ

# ಕಣವಿಯವರ ಕಾವ್ಯದ ಬೆಳವಣಿಗೆ : ಎದ್ದು ಕಾಣುವ ಅಂಶಗಳು

ನನ್ನ ದೃಷ್ಟಿಯಲ್ಲಿ ಶ್ರೀ ಚೆನ್ನವೀರ ಕಣವಿಯವರ ಕಾವ್ಯದ ಬೆಳವಣಿಗೆಯಲ್ಲಿ ಎದ್ದು ಕಾಣುವ ಪ್ರಮುಖ ಅಂಶವೆಂದರೆ ಅವರು ತಮ್ಮ ಮೂಲ ಮನೋಧರ್ಮದಿಂದ ವಿಚಲಿತರಾಗದೆ ಕಾಲಮಾನದ ಜಟಿಲ ಅನುಭವಗಳಿಗೆ ತಮ್ಮ ಸ್ವಂತರೀತಿಯಲ್ಲಿ ಸ್ಪಂದಿಸುತ್ತಿದ್ದಾರೆ; ಪ್ರಾಮಾಣಿಕ ಅಭಿವ್ಯಕ್ತಿಯಲ್ಲಿ ಪಳಗುತ್ತಿದ್ದಾರೆ. ಸುಂಟರಗಾಳಿಗೆ ಸಿಕ್ಕ ತರಗೆಲೆಯಂತೆ ಸಿಕ್ಕ ಸಿಕ್ಕಲ್ಲಿ ಅವರ ಕಾವ್ಯ ವಿವಶವಾಗಿ ಹೋಗುವುದಿಲ್ಲ, ಆದರೆ ಎಲ್ಲ ಗಾಳಿಗೆ ಮೆಯ್ಯೊಡ್ಡಿ ರಸ-ಕಸ ಎರಡರ ಅನುಭವಸಾಮಗ್ರಿಯನ್ನು ಬಳಸಿ ತನ್ನದೇ ಆದ ಪಾಕವನ್ನು ಸಿದ್ಧಗೊಳಿಸುತ್ತದೆ. ಇಷ್ಟಾಗಿಯೂ ಅದು ಯಾವಾಗಲೂ ತನ್ನ ಸಮತೂಕವನ್ನು ಕಾಯ್ದುಕೊಂಡಿರುತ್ತದೆ ಎಂದು ಹೇಳಲಾರೆ. ಅಲ್ಲಿ ಇಲ್ಲಿ ಅದು ತನ್ನ ಜೀವಾಳಕ್ಕೆ ಸರಿಹೋಗದ ಭಾವ ಭಾಷೆಗಳ ಯುಕ್ತಿಗಳಿಗೆ ಮಾರುಹೋಗಿದೆ, ರಚನೆಯ ಒಟ್ಟಂದದಲ್ಲಿ ಕೆಲಮಟ್ಟಿಗೆ ಕೊರತೆಯನ್ನು ತಂದುಕೊಂಡಿದೆ. ಅವರು 'ಕಾವ್ಯಾಕ್ಷಿ'ಯಿಂದ ಮೊದಲುಮಾಡಿ, 'ನಗರದಲ್ಲಿ ನೆರಳು'ವರೆಗೆ ಪ್ರಕಟಿಸಿದ ತಮ್ಮ ಕಾವ್ಯಸಂಗ್ರಹಗಳಲ್ಲಿ ಮತ್ತು ಅವೆಲ್ಲವುಗಳಿಂದ ಕೆಲವನ್ನಾಯ್ದು ತಮ್ಮ ಕಾವ್ಯದ ಕೆನೆಯನ್ನು ಎತ್ತಿ ತೋರಿಸುವಂತೆ ಪ್ರಕಟಗೊಳಿಸಿದ 'ಚಿರಂತನ ದಾಹ'ದಲ್ಲಿ ನಾನು ಮೇಲೆ ಹೇಳಿದ ಮಾತುಗಳಿಗೆ ನಿದರ್ಶನಗಳನ್ನು ಪಡೆಯಬಹುದು, ವಿಸ್ತಾರವಾಗಿ ವಿಶ್ಲೇಷಿಸಬಹುದು. ಆದರೆ ಈ ಬಗೆಯ ಸಮಗ್ರವಿವೇಚನೆಯ ಉದ್ದೇಶ ಈ ಲೇಖನಕ್ಕಿಲ್ಲ. ದಿಗ್ದರ್ಶನಕ್ಕಾಗಿ ಕೆಲವನ್ನು ಎತ್ತಿ ಹೇಳಬಯಸುತ್ತೇನೆ.

ಈ ಕವಿಯ ಮೂಲಮನೋಧರ್ಮದಲ್ಲಿ, ತಟಸ್ಥಭೂಮಿಕೆಯಿಂದ ಸೃಷ್ಟಿ ಸೌಂದರ್ಯವನ್ನು, ಜೀವನಲೀಲೆಯನ್ನು ಕಣ್ಣಿಟ್ಟು ನೋಡಿ ಕುಸುರುಕುಸುರಾದ ಚಿತ್ರಗಳನ್ನು ಕಟ್ಟುತ್ತ ಬಣ್ಣಿಸಬೇಕು, ಎಷ್ಟು ನೋಡಿದರೂ ಬಣ್ಣಿಸಿದರೂ ಸಾಲದು ಎಂಬ ಸ್ಥಾಯಿಯಿದೆ. 'ಚಿರಂತನದಾಹ' ಎಂಬ ಕವಿತೆ ಇದಕ್ಕೊಂದು ನಿದರ್ಶನ. 'ಬೊಗಸೆಗಂಗಳ ತೆರೆದು ಮೊಗೆಮೊಗೆದು ಕುಡಿದರೂ ಈ ಪುರಾತನ ದಾಹ ತೀರದಲ್ಲಾ ! ಏನೊ ಅಸಮಾಧಾನ ಹೃದಯಾಂತರಾಳದಲಿ ಬಾಯ್ದೆರೆದು ಹೀರುತಿರೆ ತೃಪ್ತಿಯಿಲ್ಲ'. ಅಲ್ಲದೆ 'ಜಗವ ತುಂಬಿದ ಬೆಳಕು ನಮಗೇಕೋ ಸಾಲದಿದೆ ಎನಿತು ಮಾನವನೆದೆಯ ಆಳ ಅಗಲ !' ಬಂದಷ್ಟು ಇಂಗುತಿದೆ ಮತ್ತೆ ಬರಿದಾಗುತಿದೆ ಎಷ್ಟು ಸೆಲೆಯೊಡೆದರೂ ವಿಫಲ ವಿಫಲ !' ಹೀಗೆ ಆಸ್ವಾದನೆಯಲ್ಲಿ ಅತೃಪ್ತಿ ಆಕಲನ ಶಕ್ತಿಯ ಬಗೆಗೆ ಅತೃಪ್ತಿ ಇದರಿಂದ ಕವಿಯ ಆಕಾಂಕ್ಷೆ ಚಿರಂತನದಾಹವಾಗಿ ಉಳಿದಿದೆ. ಎಲ್ಲ ಕವಿಗಳಲ್ಲಿಯೂ ಈ ದಾಹ ಒಂದಿಲ್ಲೊಂದು

ಬಗೆಯಲ್ಲಿ ಇರುತ್ತದೆ, ಕಾವ್ಯಸ್ಫೂರ್ತಿಯ ಪ್ರಥಮ ಸ್ಪಂದನಗಳಲ್ಲಿಯಂತೂ ಇದು ತೀವ್ರವಾಗಿರುತ್ತದೆ. ಆಮೇಲೆ ಇದರ ಮೇಲಾಗುವ ಪರಿಸರದ ಪ್ರಭಾವದಿಂದ, ಆಂತರಿಕ, ವೈಚಾರಿಕ ಪರಿವರ್ತನದಿಂದ, ಇದು ಕಡಿಮೆಯಾಗಬಹುದು, ಹೊಸತಿರುವು ಪಡೆಯಬಹುದು. ಕಣವಿಯವರಲ್ಲಿ ಮಾತ್ರ ಎಂದಿನಂತೆ ಇಂದಿಗೂ ಈ ದಾಹ ಚಿರಂತನವಾಗಿಯೆ ಉಳಿದಿದೆ. ಇದು ಅವರ ಬೆಳವಣಿಗೆಯ ಒಂದು ಲಕ್ಷಣ, ಬದಲಾವಣೆಯೇ ಯಾವಾಗಲೂ ಬೆಳವಣಿಗೆಯಲ್ಲ. ಕವಿ ತನ್ನ ಸ್ಥಾಯಿಯನ್ನು ಗುರುತಿಸಿಕೊಂಡು ಅದಕ್ಕೆ ಎಂಥ ಸಂದರ್ಭದಲ್ಲಿಯೂ ನಿಷ್ಠನಾಗಿ ಉಳಿಯುವುದು ನಿಜವಾದ ಬೆಳವಣಿಗೆ. ಜೊತೆಗೆ ಅವನು ನಿಂತ ನೀರಾಗಿರುವುದಿಲ್ಲ. ಅವನ ಸುತ್ತಮುತ್ತಿನ ಜೀವನದಲ್ಲಿ, ಬರೆವಣಿಗೆಯ ದಾರಿಯಲ್ಲಿ ಆಗುತ್ತಿರುವ ಮಾರ್ಪಾಡುಗಳಿಗೆ ಅವನು ತನ್ನ ಬಗೆಯಲ್ಲಿ ಸ್ಪಂದಿಸುತ್ತಾನೆ, ತನ್ನ ಅಭಿವ್ಯಕ್ತಿಯಲ್ಲಿ ಹೊಸ ಎಳೆಗಳನ್ನು ಸೇರಿಸಿಕೊಳ್ಳುತ್ತಾನೆ, ತನ್ನದೇ ಆದ ಹೆಣಿಕೆಯನ್ನು ಹೆಣೆಯುತ್ತಾನೆ. ಆದರೆ ಇದೆಲ್ಲವೂ ತನ್ನ ಸ್ಥಾಯಿಗೆ ಸಂಚಾರಿಯಾಗಿ ಮಾತ್ರ. ಇದಕ್ಕೆ ಕಾಲಮಾನದ ಹಲವು ಆವಿಷ್ಕಾರಗಳನ್ನು ಕುರಿತು ಕಣವಿಯವರು ಬರೆದ ಕವನಗಳನ್ನು ಉದಾಹರಿಸಬಹುದು. ಮಣ್ಣಿನ ಮೆರವಣಿಗೆ, ಜೀರ್ಣೋದ್ಧಾರ, ಕಾಲಪುರುಷನಲ್ಲಿ ಕವಿಗಳ ಕೋರಿಕೆ, ಕಾಲನಿಲ್ಲುವುದಿಲ್ಲ, ಹೊಸವರುಷದ ಸ್ವಾ (ಸ್ವ)ಗತ ಭಾಷಣ ಇಂಥ ಕವನಗಳಲ್ಲಿ ಕವಿಯ ಸ್ಥಾಯಿ–ಸಂಚಾರಿಯ ಸಂಮಿಶ್ರರಚನೆಯ ಸಾರ್ಥಕ್ಯವಿದೆ, ನಾವು ತಿಳಿದಿರುವಂತೆ ಕಣವಿಯವರ ಬೆಳವಣಿಗೆಯ ಮುಖ್ಯಾಂಶವಿದೆ. ಈ ಕವನಗಳಲ್ಲಿ ಜೀವನಾನುಭವದ ವ್ಯಾಪ್ತಿ ಹೆಚ್ಚಿದೆ, ನಿರೀಕ್ಷಣೆ ನಿಶಿತವಾಗಿದೆ, ವ್ಯಂಗ್ಯಹರಿತವಾಗಿದೆ, ಸಹಜ ಕಲ್ಪಕತೆ ನವೋನವವಾಗಿದೆ, ಸ್ವಚ್ಛಂದಛಂದ ತನ್ನಲಯ ಪ್ರಾಸಗಳಲ್ಲಿ ಬೆರಗುಗೊಳಿಸುವಂತಿದೆ. ಬಹುಶಃ ಮತ್ತೆ ಮತ್ತೆ ಬರುವ ಮದುವೆಯ ನಿಬ್ಬಣದ ಪ್ರತಿಮೆ ಕವಿಯ ಮನದಲ್ಲಿ ಅಚ್ಚೊತ್ತಿದಂತಿರಬೇಕು.

ಈಗಾಗಲೆ ಇಂಥ ಸಮಕಾಲೀನಪ್ರಜ್ಞೆಯ ಕವನಗಳನ್ನು ಸೋದಾಹರಣವಾಗಿ ವಿಮರ್ಶಕರು ಮೆಚ್ಚಿದ್ದಾರೆ, ನನಗೆ ಇವುಗಳಲ್ಲಿ ಗುಣಾತಿಶಯವು ಕಂಡು ಬಂದಿರುವಂತೆ ಸಮುದಾಯ ಶೋಭೆಯನ್ನು ಕುಂದಿಸುವ ಕುಂದುಕೊರತೆಗಳೂ ಕಂಡುಬಂದಿವೆ. ಅವೆಂದರೆ ಹೊಸ ಒಂದು ಶೈಲಿಯ ಬೆಡಗೆಂದೋ ಅನುಕರಣೆಯೆಂದೋ ಅಲ್ಲಲ್ಲಿ ತೂರಿಕೊಂಡಿರುವ ಅಷ್ಟೇನು ಅರ್ಥವಾಹಿಯಲ್ಲದ, ಹೊಂದಿಕೊಳ್ಳದ ಅವತರಣಿಕೆಗಳು ಮತ್ತು ಪ್ರಾಸಕ್ಕಾಗಿ ವೈವಿಧ್ಯಕ್ಕಾಗಿ ಒಳಸಿರುವ ಶುದ್ಧಾಶುದ್ಧ ಪದಗಳ ಬೆರಕೆಗಳು. ಮಣ್ಣಿನ ಮೆರವಣಿಗೆಯಲ್ಲಿ (ದೇವರ ಬಂಗಾರದ ಕುಮರೆ), (ಚೆಂದಪ್ಪ ಚೆದಪ್ಪ ಚೆಲುವ, ಚುಂಗ ಬಿಟಗೊಂಡುಬರುವ) 'ಎಚ್ಚತ್ತು ತಾಯಿ ಎಂದಿ ಬಿಚ್ಚಿ ವಿಳಮ್ಮಾ ಮಲಗಿರುವ ತಾಯಿ ಪೃಥಿವೀ' ಇಂಥ ಅವತರಣಿಕೆಗಳನ್ನು ಗಮನಿಸಬೇಕು, 'ಮಣ್ಣಮಡಿಲೊಳು ನಿತ್ಯಯಾತನೆಯ ನೆಲಗುಮ್ಮ' ಈ ಭಾವದೊಡನೆ ಮಧುರಚೆನ್ನರು ಮಲಗಿರುವ ತಾಯಿ ಪೃಥಿವಿಯನ್ನು ಕುರಿತು ಬರೆದ ಅನುಭಾವಿಕ ಕವನದ ಸಾಲು ಹೇಗೆ ಹೊಂದಿಕೊಳ್ಳುತ್ತದೆ ತಿಳಿಯಲಿಲ್ಲ. ಶುದ್ಧಾಶುದ್ಧ ಪದಗಳ ಬೆರಕೆಗೆ 'ಅದರ ಅಡಿಗಲ್ಲಿವನ ಅಮೃತಹಸ್ತ (ಎಲ್ಲದಕ್ಕೂ ಬರಿಯ ಹಲ್ಲುಕಸ್ತ), ಇರುಳ ಕತ್ತಲೆಯೊಡನೆ ಬಿದ್ದು 'ತೆಕ್ಕೆಮುಕ್ಕಿ'—ನುಗ್ಗೆಹೂವಿಗೆ ಲಗ್ಗೆಯಿಟ್ಟು'ವೊರೆದಿವೆ,–

ದುಂಬಿ, ಕಣ್ಣೆದುರು ಕುಣಿಯುತಿವೆ ಕರ್ಪೂರಗೊಂಬಿ' ಮುಂತಾದುವನ್ನು ನೋಡಬಹುದು. ವಿಶಿಷ್ಟ ಉದಾಹರಣೆಗಳ ಪರಿಶೀಲನೆಯಲ್ಲಿ ಸಮರ್ಥನೀಯವಾದ ಕೆಲವನ್ನು ಎತ್ತಿ ತೋರಿಸಬಹುದು. ಆದರೆ ಒಟ್ಟಿನಲ್ಲಿ ಈ ಪ್ರವೃತ್ತಿ ಕವಿಯ ಮನೋಧರ್ಮಕ್ಕೆ ಮತ್ತು ರಚನಾ ವಿಧಾನಕ್ಕೆ ವಿಸಂಗತವೆಂದು ನನ್ನ ತಿಳಿವಳಿಕೆ.

ಹಲವು ವರ್ಷಗಳ ಹಿಂದೆ ತಮ್ಮ 'ನಡೆದು ಬಂದ ದಾರಿ'ಯ ಸಮೀಕ್ಷೆಯಲ್ಲಿ ಶ್ರೀ ಕುರ್ತಕೋಟಿಯವರು ಬರೆದರು, ಕಣವಿಯವರ ಕಾವ್ಯಮಾರ್ಗ ಯಾವುದೆಂಬುದು ಇನ್ನೂ ನಿರ್ದಿಷ್ಟವಾಗಿಲ್ಲ, ಹಳೆ-ಹೊಸ ಸಂಪ್ರದಾಯಗಳ ನಡುವೆ ಅವರು ಹೊಯ್ದಾಡುತ್ತಿದ್ದಾರೆ ಎಂದು. ಅಲ್ಲದೆ ಅವರ ಮೊದಲಿನ ಮೂರು ಸಂಗ್ರಹಗಳು ಸಂಪೂರ್ಣವಾಗಿ 'ರೊಮ್ಯಾಂಟಿಕ್' ಸಂಪ್ರದಾಯಕ್ಕೆ ಸೇರಿದವುಗಳಾಗಿದ್ದು ಇತ್ತೀಚಿನ ಅವರ ಕವಿತೆಗಳಲ್ಲಿ ಅವರ ಪ್ರಯತ್ನ ನವ್ಯತೆಯ ಕಡೆಗೆ ಸಾಗಿದೆ ಎಂದೂ ಈ ವಿಮರ್ಶಕರು ಹೇಳಿದ್ದಾರೆ. 'ಮುಖ್ಯ ವಾಗಿ ಅವರ ಕಾವ್ಯದೃಷ್ಟಿ ನಿಸರ್ಗದ, ಜೀವನದ ಚಲುವಿಗೆ ಆಕರ್ಷಿತವಾದ 'ರೊಮ್ಯಾಂಟಿಕ್' ದೃಷ್ಟಿಯಾಗಿದೆ' ಎಂದು ಇವರ ನಿಷ್ಕರ್ಷೆ. ಆ ಮೇಲಿನ ಕವನ ಸಂಗ್ರಹಗಳನ್ನು ನೋಡಿದ ಮೇಲೆ ಇವರ ಪ್ರತಿಕ್ರಿಯೆ ಭಿನ್ನವಾಗಿರಬಹುದು ಇಲ್ಲವೆ ಇದೇ ಅಭಿಪ್ರಾಯದ ವಿಸ್ತರಣೆ ಯಿರಬಹುದು. ಏನಿದ್ದರೂ ವ್ಯಾಪಕವಾದ ಅರ್ಥದಲ್ಲಿ ಕಣವಿಯವರ ಮನೋಧರ್ಮ ಹಾಗೂ ಕಾವ್ಯಮಾರ್ಗ 'ರೊಮ್ಯಾಂಟಿಕ್' ಎಂಬ ಅವರ ನಿಷ್ಕರ್ಷೆ ಸರಿಯೆಂದು ನನಗೆ ತೋರುತ್ತದೆ. ವ್ಯಾಪಕವಾದ ಅರ್ಥದಲ್ಲಿ ಎಂದು ಮಾತ್ರ ಒತ್ತುಕೊಟ್ಟು ಹೇಳಬೇಕು. ನಿಸರ್ಗದ ಹಾಗೂ ಜೀವನದ ಚಲುವಿಗೆ ಆಕರ್ಷಿತ ಎಂಬುದರ ಅರ್ಥ ಮೇಲುಮೇಲಿನ ಬೆಡಗಿಗೆ ಮಾರುಹೋಗಿ ಕ್ಷಣಿಕವಾದ ಖುಷಿಯನ್ನು ಹೊಂದಿ ಭಾವನಾವಶವಾಗಿ ಮಾತಿನ ಮಾಲೆಯನ್ನು ರಚಿಸುವುದಲ್ಲ. 'ರೊಮ್ಯಾಂಟಿಕ್' ಎಂದರೆ ಕೆಲವರು ಈ ಅರ್ಥದಲ್ಲಿ ಬಳಸಿ ಕೆಲವು ಕವಿಗಳ ಮೇಲೆ ಪುಷ್ಪವೇರಿಸಿದ್ದಾರೆ. ಕಣವಿಯವರ `ಚಿರಂತನ ದಾಹ' ಕವಿತೆಯಲ್ಲಿ ಅಭಿವ್ಯಕ್ತವಾಗಿರುವುದು 'ರೊಮ್ಯಾಂಟಿಕ್' ಎಂಬ ಮನೋಧರ್ಮದ ಒಂದು ಪ್ರಮುಖ ಲಕ್ಷಣ. ಅವರು ಹಳೆ–ಹೊಸ ಸಂಪ್ರದಾಯಗಳನಡುವೆ ಹೊಯ್ದಾಡಿಲ್ಲ, ಎರಡರಲ್ಲಿಯೂ ಹಾಯ್ದಾಡಿದ್ದಾರೆ. ಮುಕ್ತಮನದಿಂದ ಎಲ್ಲ ಅನುಭವ ಪ್ರಪಂಚಕ್ಕೆ ತಮ್ಮನ್ನು ಒಡ್ಡಿದ್ದಾರೆ. ಆದರೆ ತಮ್ಮ ಮೂಲ ನಿಲುವಿಗೆ ಅಪ್ರಾಮಾಣಿಕವಾಗದೆ ತಮ್ಮ ಅಭಿವ್ಯಕ್ತತಂತ್ರವನ್ನು ಬೆಳಸಿಕೊಂಡಿದ್ದಾರೆ. ಇದರಲ್ಲಿ ಏರುಪೇರುಗಳಾಗಿವೆ, ಆದರೆ ಅವು ಅವರ ಕಾವ್ಯದ ಸಾಧನೆ ಯನ್ನು ಒಟ್ಟಿನಲ್ಲಿ ಅಸ್ತವ್ಯಸ್ತಗೊಳಿಸಿಲ್ಲ, ಅಂದಗೆಡಿಸಿಲ್ಲ.

'ಮಣ್ಣಿನ ಮೆರವಣಿಗೆ'ಯ ಹಿನ್ನುಡಿಯಲ್ಲಿ ಶ್ರೀ ಗೌರೀಶಕೈಕಿಣಿಯವರು 'ಮೆರವಣಿ ಗೆಯ ಮುಂದೆ ಮಶಾಲು' ಹಿಡಿದು ಕಣವಿಯವರ ಕಾವ್ಯಪದ್ಧತಿಯ ಮೇಲೆ ಸಾಕಷ್ಟು ಬೆಳಕುಕೆಡವಲು ಯತ್ನಿಸಿದ್ದಾರೆ. 'ಆಧುನಿಕ ಭಾವಗೀತೆ ಹಾಗೂ ನವ್ಯಮಾರ್ಗಗಳ ನಡುವೆ ನಿರ್ಮಾಣಗೊಂಡಿರುವ ಕಂದರಕ್ಕೆ ಇದು ಸೇತುವೆಯಾದೀತು' ಎಂಬ ಅವರ ವಾಕ್ಯವನ್ನು ಪ್ರಮುಖವಾಗಿ ಎತ್ತಿ ತೋರಿಸಿ, ಅವರದು ಎರಡರ ನಡುವಿನ ಹೊಯ್ದಾಟವಲ್ಲ, ಸೇತುವೆ

ಎಂದು ಸಾರಿದ್ದಾರೆ. ಅಲ್ಲದೆ, 'ಕವಿ ಅಡಿಗರ ನವ್ಯಕಾವ್ಯದ ಪ್ರಪಾತಕ್ಕೆ ಪ್ರೇರಣೆಕೊಡುವ ಶಕ್ತಿಮಯ ಗತಿಮಯ ಹತಾಶೆಯನ್ನು (dynamic despair), ಅದರಂತೆ ಜೀವನದ ಹಿನ್ನೆಲೆ ಪಡೆಯದ, ಭಿನ್ನಪ್ರಕೃತಿಯ, ಹೆಚ್ಚು ಪ್ರಸನ್ನ ಮತ್ತು ಸೌಮ್ಯವ್ಯಕ್ತಿತ್ವದ ಈ ಕವಿಯಲ್ಲಿ ಅಪೇಕ್ಷಿಸುವಂತಿಲ್ಲ' ಎಂದಿದ್ದಾರೆ. ಒಬ್ಬರಂತೆ ಇನ್ನೊಬ್ಬರಿಲ್ಲ, ಇಲ್ಲದೆ ಇರುವುದೇನು ಕುಂದಲ್ಲ ಎಂಬ ಇಲ್ಲಿಯ ವಿಂಗಡಣೆ ಸರಿಯೆ. ಆದರೆನವ್ಯಕಾವ್ಯ ಅಂದರೆ 'ಗತಿಮಯ ಹತಾಶೆ' ಅಥವಾ ಇನ್ನೇನೋ ವೈಫಲ್ಯಮೂಲಿಕೆ, ವಿಚಾರ ಪ್ರಣಾಲಿ ಎಂಬುದೆಷ್ಟು ಸರಿ ಎಂಬುದು ಆಲೋಚ್ಯವಿಷಯ. ಒಂದು ಕ್ಷಣ ಅಂಥದೇನಾದರೂ ಇದ್ದರೂ ಕೂಡ ಭಿನ್ನ ಭಿನ್ನ ಕವಿ-ಗಳಲ್ಲಿ ಅವರವರ ಮನೋಧರ್ಮ ಮತ್ತು ವ್ಯಕ್ತಿತ್ವದಲ್ಲಿ ಅದು ಭಿನ್ನ ಭಿನ್ನವಾಗಿರುವುದು ಸಹಜವಲ್ಲವೇ? ನವೋದಯ, ನವ್ಯ ಮುಂತಾದ ಪದಗಳನ್ನು ಸೃಷ್ಟಿಸಿಕೊಂಡು ಕವಿಗಳನ್ನು ಆಯಾ ಗುಂಪುಗಳಲ್ಲಿ ಸೇರಿಸಿ, ಅವರವರಿಗೆ ಒಂದು ಕಟ್ಟು ನಿಟ್ಟಾದ ವಿಚಾರಧಾರೆ, ರಚನಾ ವಿಧಾನವನ್ನು ಕಲ್ಪಿಸಿ ಮಂತ್ರದೀಕ್ಷೆ ಕೊಟ್ಟಂತೆ ಮಾಡುವುದು ಸೂಕ್ತವೇ ಎಂಬುದು ಪ್ರಶ್ನೆ. ಇತ್ತೀಚೆಗಂತೂ ಹೊಸಪಂಥಗಳೂ ಹೊಸ ಮಂತ್ರಗಳೂ ಹುಟ್ಟಿಕೊಂಡು ಲೇಖಕರನ್ನು ಆಯಾ ಕೊಠಡಿಯಲ್ಲಿ ಕಟ್ಟಿಹಾಕುತ್ತಿರುವಂತೆ ಕಾಣುತ್ತದೆ.

ಶ್ರೀ ಗೌರೀಶ ಕೈಕಿಣಿಯವರು ನವ್ಯ ಕಾವ್ಯದ ವ್ಯಾವರ್ತಕ ಲಕ್ಷಣಗಳಲ್ಲಿ 'ಇತಿಹಾಸ ಪ್ರಜ್ಞೆ—ಮಾನವ ವಿಕಾಸದ ಐತಿಹಾಸಿಕ ಇಂಗಿತಜ್ಞತೆ' ಒಂದೆಂದು ಹೇಳಿ, 'ರೊಮ್ಯಾಂಟಿಕ್' ಸಂಪ್ರದಾಯ ಇತಿಹಾಸವನ್ನು ಮಾನವ ವಿಕಾಸದ ಕಾಲಕ್ರಮಾಗತ ಸಾಮಾಜಿಕ ಪ್ರಜ್ಞೆಯನ್ನು ಮರೆಯುತ್ತದೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಯಾವ ಮಾರ್ಗದ ಕವಿಯೇ ಇರಲಿ ಅವನು ಜೀವಂತ ಜಾಗೃತ ವ್ಯಕ್ತಿಯಾಗಿದ್ದರೆ ಕಾಲತ್ರಯದ ಅರಿವನ್ನು ಹೊಂದಿಯೇ ಇರುತ್ತಾನೆ. ಅದರಲ್ಲಿ ಇತಿಹಾಸ ಪ್ರಜ್ಞೆ ಒಂದು ಅವಶ್ಯಭಾಗ ವಾಗಿ ಇರುತ್ತದೆ. ಎಲ್ಲರಲ್ಲಿಯೂ ಇತಿಹಾಸದ ವಿಶಿಷ್ಟ ವಿವರಣೆ ಅಥವಾ ತತ್ತ್ವಜ್ಞಾನ ಇರಬೇಕಾಗಿಲ್ಲ. ಹಾಗಿದ್ದರೆ ಅದು ನವ್ಯಕಾವ್ಯ ಎಂದು ವಾದಿಸುವುದಾದರೆ ಅದು ನವ್ಯ ಕವಿಗೆ ಅನ್ಯಾಯಮಾಡುತ್ತದೆ, ರೊಮ್ಯಾಂಟಿಕ್ ಕವಿಗೂ ಅನ್ಯಾಯಮಾಡುತ್ತದೆ. ಘಂಟಾ ಘೋಷವಾಗಿ ಅತ್ಯಂತಬದ್ಧವಾದ ಕವಿ ಮಾತ್ರ ವಿಶಿಷ್ಟವಾದ ಇತಿಹಾಸಪ್ರಜ್ಞೆ ಮತ್ತು ಸಾಮಾಜಿಕ ಪ್ರಜ್ಞೆಯನ್ನು ಪಡೆದಿರುತ್ತಾನೆ.

ಶ್ರೀ ಕೈಕಿಣಿಯವರ ಅಭಿಪ್ರಾಯದಲ್ಲಿ 'ನವ್ಯಮಾರ್ಗದ ಇನ್ನೊಂದು ಲಕ್ಷಣ ದುರೂಹತೆ, ಅಭಿಜಾತ ನವ್ಯಕಾವ್ಯಕ್ಕೆ ದುರೂಹತೆ ಅಂಟಿಬಂದ ಬ್ರಹ್ಮಗಂಟು', ಆದರೆ ಕಣವಿಯವರ ಕಾವ್ಯದಲ್ಲಿ ಈ ದುರೂಹತೆ ಅಷ್ಟಿಲ್ಲ. ಯಾಕೆಂದರೆ 'ಶೈಲಿಯ ಸುಭಗತೆ' ಅರ್ಥದ ಸುಗಮತೆ ಸಹ ಕವಿಯ ಕೈಬಿಟ್ಟಿಲ್ಲ' ಎಂದವರು ಹೇಳಿದ್ದಾರೆ. ಅವರು ಅಭಿಪ್ರಾಯಿಸಿದಂತೆ ನವ್ಯ ಮಾರ್ಗದ ಲಕ್ಷಣ ಯಾರಿಗೂ ಅರ್ಥವಾಗದ ಅಥವಾ ತೀರಾ ಸ್ವಲ್ಪ ಜನಕ್ಕೆ ಅರ್ಥವಾಗುವ ಕ್ಲಿಷ್ಟತೆ ಎಂಬರ್ಥದಲ್ಲಿ ದುರೂಹತೆ ಇದ್ದರೆ ಅದು ಸುಲಕ್ಷಣವಲ್ಲ ಎನ್ನಬೇಕಾಗುತ್ತದೆ. ಅಂಥ ದುರೂಹತೆಯಿಂದ ಕಣವಿಯಂತವರ ಕಾವ್ಯ ದೂರವಾಗಿರುವುದು ಒಳ್ಳೆಯದೇ. ಆದರೆ ಯಾವ ಕಾವ್ಯಮಾರ್ಗವಿರಲಿ, ಅದರಲ್ಲಿ ಸಂದರ್ಭಾನುಸಾರ ಪ್ರಸನ್ನತೆಯನ್ನು ಮೂಲ

ಭೂತವಾಗಿ ಅಲ್ಲಗಳೆಯದ, ಸಹೃದಯರನ್ನು ಅಲಕ್ಷಿಸದ, ಪ್ರಗಲ್ಭತೆಯಿದ್ದರೆ ಅದು ಸುಲಕ್ಷಣವೇ ಆಗುತ್ತದೆ. ಬೇಕಾದರೆ ನವ್ಯಮಾರ್ಗದ ವಿಶೇಷ ಲಕ್ಷಣವಾಗಿ ಇದು ಆಗಾಗ ಕಂಡುಬರುತ್ತದೆ ಎಂದರೆ ತಪ್ಪಲ್ಲ. ಆದರೆ ಅದು ಅನಿವಾರ್ಯ ಎಂದು ನಮಗೆನಿಸುವುದಿಲ್ಲ. 'ಕೊನೆಯದಾಗಿ, ನವ್ಯಕಾವ್ಯದ ಮಾಧ್ಯಮ ವಾಚ್ಯಾರ್ಥವಲ್ಲ ...ಪ್ರತೀಕಗಳೇ ನವ್ಯ ಮಾಧ್ಯಮ...ಕಣವಿಯವರ ಶೈಲಿ ಈ ಕಸುಬನ್ನು ತುಂಬ ಕೈಗೂಡಿಸಿಕೊಂಡಿದೆ' ಎಂದು ಅವರು ಎತ್ತರದ ಪ್ರಶಂಸೆಯೊಡನೆ ಕಣವಿಯವರು ಬಳಸಿದ ಹಲವಾರು ಸೂಕ್ತಪ್ರತಿಮೆ ಗಳನ್ನು ಉದಾಹರಿಸಿದ್ದಾರೆ, ತರತರದ ಅಲಂಕಾರಗಳ ರೂಪ ತಾಳಿ ಪ್ರತೀಕಗಳು ಎಂದಿ ನಿಂದಲೂ ಕಾವ್ಯದ ಮಾಧ್ಯಮವಾಗಿರುತ್ತವೆ; ನವ್ಯದಲ್ಲಿ ಅವು ನವಜೀವನದ ಜಟಿಲಪರಿಸರ ದಿಂದ ಎತ್ತಿದವುಗಳಾದ್ದರಿಂದ ವೈಶಿಷ್ಟ್ಯವನ್ನು ಪಡೆಯುತ್ತವೆ ಎಂದುನನಗೆ ತೋರುತ್ತದೆ.

೧೯೭೪ರ 'ಸಾಹಿತ್ಯ ವಾರ್ಷಿಕ'ದಲ್ಲಿ ಬಂದಿರುವ 'ನಗರದಲ್ಲಿ ನೆರಳು' ಈ ಸಂಗ್ರಹದ ವಿಮರ್ಶೆಯಲ್ಲಿ ಕಣವಿಯವರ ಕವಿತಾರಚನೆಯನ್ನು ಮೆಚ್ಚಿ ಇಷ್ಟೆಲ್ಲ ಒಳ್ಳೆಯ ಅಂಶಗಳಿ ದ್ದರೂ-ಈ ಸಂಕಲನದಲ್ಲಿ ಅಖಂಡ ಜೀವನ ದೃಷ್ಟಿಕೋನವೊಂದು ಕಾಣುತ್ತಿಲ್ಲವಲ್ಲ, ಕಾವ್ಯಕ್ಕೆ ಹುಟ್ಟನ್ನು ಕೊಟ್ಟ ಜೀವನದ ಅನಿವಾರ್ಯ ಸವಾಲುಗಳ ಬಗ್ಗೆ ಈ ಕವಿ ಅಷ್ಟಾಗಿ ಗಾಢವಾಗಿ ಯೋಚಿಸುತ್ತಿಲ್ಲವಲ್ಲ,—ಎನ್ನುವ ಸಂದೇಹ ಏಳುತ್ತದೆ. ಈ ಸಂದೇಹ ನಮ್ಮ ಕನ್ನಡ ಸಾಹಿತ್ಯದ ಕೆಲವು ಮೂಲಭೂತ ಪರಿಕಲ್ಪನೆಗಳನ್ನು ಕುರಿತದ್ದೂ ಕೂಡ ಆಗಿದೆ. ನಮ್ಮ ಬಹುಪಾಲು ಬರಹಗಾರರ ಕಾವ್ಯವೂ ಜೀವನ ದೃಷ್ಟಿಯಿಂದ ಸೀಳುಸೀಳಾಗಿ ಕಾಣುತ್ತದೆ' ಎಂಬ ಅಭಿಪ್ರಾಯವು ವ್ಯಕ್ತವಾಗಿದೆ. ಇತ್ತೀಚೆಯ ತರುಣ ವಿಮರ್ಶಕರ ಅನೇಕ ವಿಮರ್ಶೆಗಳಲ್ಲಿ ಈ ತಕರಾರು ಕೆಲವು ಕವಿಗಳ ಬಗ್ಗೆ ಕೃತಿಗಳ ಬಗ್ಗೆ ಮೊನಚಾಗಿ ಬಂದಿದೆ. ಇದು ಆಳವಾಗಿ ಚರ್ಚಿಸಬೇಕಾದ ವಿಮರ್ಶೆಯ ಮಾನದಂಡಕ್ಕೆ ಸಂಬಂಧಪಟ್ಟ ವಿಷಯ. ಪ್ರಕೃತ–ಹೇಳಬೇಕಾದುದಿಷ್ಟೆ, ಯಾವುದೇ ಕವಿಯ ಕೃತಿ ಮುಖ್ಯವಾಗಿ ಅವನ ಪ್ರಾಮಾ ಣಿಕ ಮನೋಧರ್ಮಕ್ಕೆ ಮತ್ತು ಕಾವ್ಯಧರ್ಮಕ್ಕೆ ನಿಷ್ಠವಾಗಿರಬೇಕು. ಅದರಲ್ಲಿ ಅವನ ಜೀವನದೃಷ್ಟಿಯೂ ಒಳಗೊಳ್ಳುತ್ತದೆ. ಆದರೆ ಅದು ಇಂಥದೇ ಇರಬೇಕು, ಎಂಥದೇ ಇದ್ದರೂ ಕಾವ್ಯಧರ್ಮ–ಮನೋಧರ್ಮಗಳಿಗೆ ಹೊರತಾಗಿ ಒತ್ತಿ ಒತ್ತಿ ಹೇಳಬೇಕು ಎಂಬ ಅಪೇಕ್ಷೆ ವಿಮರ್ಶಕನ ಮನೋಧರ್ಮಕ್ಕೆ ಸರಿಹೋಗುವುದಿಲ್ಲ. ನಮಗೆ ಯಾವುದು ಸೀಳು ಸೀಳಾಗಿ ಕಾಣುತ್ತದೋ ಅದು ಸೀಳುಸೀಳಾದ ಬಾಳಿನ ಚಿತ್ರಣವಾಗಿರಬಹುದು, ಇಲ್ಲವೆ ಕವಿಯ ಅಂದಿನ ಮನಃಸ್ಥಿತಿಯಲ್ಲಿ ಸೀಳುಸೀಳುತನವೇ ಆವರಿಸಿಕೊಂಡಿರಬಹುದು.

ನವೋದಯ, ನವ್ಯ ಈ ಚೌಕಟ್ಟಿಗೆ ಸಿಕ್ಕದ ಕವಿಗಳಲ್ಲಿ ಕಣವಿಯವರೊಬ್ಬರು ಎಂದು ಹೇಳುವುದುಂಟು. ಕಣವಿಯವರು ಸಮನ್ವಯ ಕವಿಗಳು ಎಂದು ಬಣ್ಣಿಸಿರುವುದೂ ಉಂಟು. ನನಗೆ ತೋರುವಂತೆ ಈ ಚೌಕಟ್ಟಿಗೆ ಸಿಕ್ಕದ ಮತ್ತು ಸಮನ್ವಯಶೀಲರಾದ ಅನೇಕ ಆಧುನಿಕ ಕವಿಗಳಾಗಿದ್ದಾರೆ. ಆದರೆ ಅವರವರ ಸಮನ್ವಯ ಬೇರೆಬೇರೆ. ಕೇವಲ ಸಂಮಿಶ್ರಣ ಸಮನ್ವಯವಲ್ಲ, ಸಂಕರವಂತೂ ಅಲ್ಲವೇಅಲ್ಲ. ಕಣವಿಯವರು ಕಂಡ ಸಮ ನ್ವಯ ಒಟ್ಟಿನಲ್ಲಿ ಸ್ವನಿಷ್ಠತೆಗೆ ಅವಿರೋಧವಾದ, ಸಹಕಾರಿಯಾದ ಇತರ ಪ್ರಭಾವಗಳ ಸ್ವೀಕಾರ ಮತ್ತು ಅವುಗಳ ಆತ್ಮಸಾತ್‌ಕರಣ.

ಗೌರೀಶ ಕಾಯ್ಕಿಣಿ

# ಕಣವಿಯವರ ಕಾವ್ಯದಲ್ಲಿ "ಶ್ರುತನಿಯೋಜನ"

ಆಧುನಿಕ–ಅತ್ಯಾಧುನಿಕ ಕಾವ್ಯದ ಮುಖ್ಯ ಲಕ್ಷಣಗಳೇನು? (ಇಲ್ಲಿ 'ನವ್ಯ' 'ನವೋನವ್ಯ' ಈ ಹೆಸರುಗಳನ್ನು ಬುದ್ಧಿಪೂರ್ವಕವಾಗಿಯೇ ಬಳಸಿಲ್ಲ. ನವ್ಯವೆಂದರೆ ಬರಿ ಹೊಸತೆಂಬ ಬೋಧವಾಗುತ್ತದೆ. ಆದರೆ 'ಆಧುನಿಕ'ವೆಂದಾಗ ತೀರ ಇಂದಿನ 'ಈಗಿನ'— ಆಧುನಿಕ ಎಂಬ ಅರ್ಥಹೊರಡುತ್ತದೆ. Modern ಶಬ್ದದಲ್ಲಿ ಮೂಲ ಲ್ಯಾಟಿನ್ 'Modo' ಅಂದರೂ ಇದೇ. 'just now' ಇದಿ ಗ ; 'ನವ್ಯ'ವು ತೌಲನಾತ್ಮಕ-ಸಾಪೇಕ್ಷ. ಇಂದಿನ 'ನವ್ಯ' ನಾಳೆಗೆ 'ಪೂರ್ವದ್ದು' ನಿನ್ನೆಯ ನವ್ಯ ಇಂದಿಗೆ ಹಳೆಯದು. ಆದರೆ 'ಆಧುನಿಕ' ಯಾವಾಗಲೂ ಆಧುನಿಕವೇ – ಇಂದಿನದು ಇಂದಿನದೇ.)

ಈ ಆಧುನಿಕ ಕಾವ್ಯದ ಅನೇಕ ಲಕ್ಷಣಗಳಲ್ಲಿ ನಾನು ತಿಳಿದಂತೆ ಮುಖ್ಯವಾದವು. complexity ಸಂಕೀರ್ಣತೆ, ಜಟಿಲತೆ), Irony (ವ್ಯಂಗ್ಯ), Allusion ಶ್ರುತನಿಯೋಜನ ಅಥವಾ ಅಪ್ರಸ್ತುತ ಉಲ್ಲೇಖ) ಮತ್ತು obscurity ದುರೂಹತೆ). ಇವುಗಳ ಹಿನ್ನೆಲೆಯಾಗಿ ಇವುಗಳ ಮೂಲವಾಗಿ (sense of History) (ಇತಿಹಾಸ ಪ್ರಜ್ಞೆ)ಯೂ ಬಂತು.

ಈ ಮೇಲಿನ ಐದು ಲಕ್ಷಣಗಳಲ್ಲಿ ನಮಗೆ ಇಲ್ಲಿ ಗಮ್ಯವಾದದ್ದು Allusion. ಇದನ್ನು ನಾನು (ನನ್ನ ಮಟ್ಟಿಗೆ) 'ಶ್ರುತನಿಯೋಜನ' ಎಂದು ಅನುವಾದಿಸಿದ್ದೇನೆ. ಈ ಶಬ್ದ ನನ್ನದೇ coinage ಅಲ್ಲ. ನಾಲ್ವತ್ತು ವರ್ಷಗಳ ಹಿಂದೆಯೇ ಸಾಹಿತ್ಯ ಪರಿಚಯದ ಮರಾಠೀ ಪತ್ರಪುಸ್ತಕಗಳಲ್ಲಿ ಪ್ರಿ. ಅತ್ರೆಯಂಥ ಉದ್ದಾಮ ಸಾಹಿತಿಗಳೇ ಇದನ್ನು ಈ ಅರ್ಥದಲ್ಲಿ ಬಳಸಿದ್ದು 'ಶ್ರುತ' ಅಂದರೆ ಕೇಳಿದ್ದು, ಓದಿದ್ದು. (ಸಂಸ್ಕೃತದಲ್ಲಿ 'ಬಹುಶ್ರುತ' ಅಂದರೆ ಬಹಳ ಓದಿಕೊಂಡವನು) ಕಾವ್ಯದಲ್ಲಿ ಕವಿ ತಾನು ಓದಿದ್ದು ಕೇಳಿದ್ದು ವಿವಿಧ ಮೂಲಗಳಿಂದ ಪರಿಣತಮತಿಯಿಂದ ಪ್ರಯೋಗಿಸುವ ಕಲಾವಿದ. ಈ ಕರ್ಮಕೌಶಲ್ಯ ಬರೆ 'ಉಲ್ಲೇಖ' Reference) ಕ್ಕಿಂತ ಮಿಗಿಲಾದದ್ದು, ಮಾರ್ಮಿಕ ವಾದದ್ದು.

ಈ Allusion ಅಥವಾ ಶ್ರುತನಿಯೋಜನದಿಂದ ಕವಿಯು ಒಂದು ಉಕ್ತಿಗೆ ಅದರ ಸಂದರ್ಭಕ್ಕೆ ಅದರ ಅರ್ಥಗೌರವಕ್ಕೆ ಹೆಚ್ಚಿನ ಅಂತಸ್ತು, ಆಯಾಮ ಕಟ್ಟಿ ನಿಲ್ಲುತ್ತವೆ. ರಸಸಿದ್ಧಿಯು ಒಂದು ಅಪೂರ್ವ, ಮಾರ್ಮಿಕ, ಸೂಕ್ಷ್ಮ ಸಂಪತ್ತು, ಅನುಭವದ ಅರ್ಕ ಹೊಯ್ದು ಸಮೃದ್ಧಿ, ವಜ್ರಕ್ಕೆ ಕಡೆದ 'ಅಷ್ಟಪೈಲು'ಗಳಂತೆ ಮಿರುಗು ಮೆರೆಯುತ್ತದೆ.

ಒಂದು ಅರ್ಥದಲ್ಲಿ ಈ ಸಮರ್ಪಕವೂ, ಸಾಂದರ್ಭಿಕವೂ ಆದ ಶ್ರುತನಿಯೋಜನದಿಂದಲೇ ಕವಿವಾಣಿಯು ಸಂಕೀರ್ಣತೆ ಬೆಳೆಯುತ್ತ ಅದು ಒಮ್ಮೊಮ್ಮೆ ವಿಜೃಂಭಿಸುತ್ತದೆ. ಇದರೊಳಗಿಂದಲೇ ಭಾವ ವ್ಯಂಜನೆ ಹೆಚ್ಚಿನ ವ್ಯಂಗ್ಯವನ್ನು ಸಾಧಿಸುತ್ತದೆ. ಮತ್ತು ಒಟ್ಟು ಪರಿಣಾಮ ಓದುಗನ ಅರಿವಿನ ಪಾತಳಿಯಲ್ಲಿ obscure (ದುರೂಹ ದುರ್ಬೋಧ) ವೆನಿಸುತ್ತದೆ. ಇಂಥ ಕಾವ್ಯ "ಸುಲಿದ ಬಾಳೆಯ ಹಣ್ಣಿನಂದದಿ" ಸುಗಮವಿರುವದಿಲ್ಲ.

ಇನ್ನು ಈ ಶ್ರುತನಿಯೋಜನಕ್ಕೆ ಹಿನ್ನೆಲೆ ಒಂದು ರೀತಿಯಲ್ಲಿ ಕವಿಯ ಇತಿಹಾಸ ಪ್ರಜ್ಞೆಯೇ ಆಗಿದೆ. ಇಲ್ಲಿ ಇತಿಹಾಸವೆಂದರೆ ಕೇವಲ ದೇಶದ ಜನಾಂಗದ ರಾಜಕೀಯ ಸಾಮಾಜಿಕ ಚರಿತ್ರೆಯ ಅಂಶವೇ ಅಲ್ಲ. ನೇರವಾದ ನೋಟದ ನೆಲೆಯೊಳಗಿನ ಅನುಭವಕ್ಕೆ ಹೊರತಾದ ಹೊರಗಿನ, ಹಿಂದಿನ ಹೆರವರ ಎಲ್ಲ ಅನುಭವವೂ ನಮಗೆ ಇತಿಹಾಸವಾಗಿಯೇ ವೇದ್ಯ. "ಇತಿ'ಹ ಆಸ" 'ಅದು ಹೀಗೆ ಇತ್ತು' ಎಂಬ ವರ್ಣನೆ—ವಿವರಣೆ ಉಲ್ಲೇಖ ಅಥವಾ ಶ್ರುತನಿಯೋಜನ,

ಅಂದರೆ ಶ್ರುತನಿಯೋಜನ ಐತಿಹಾಸಿಕ ಉಲ್ಲೇಖದ್ದೇ ವಿವಿಧ ಪರ್ಯಾಯ ಇಲ್ಲವೆ ವಿನ್ಯಾಸ. ಉಪಮಾ ಪ್ರಧಾನವಾದ ಹಳೆಯ ಕಾವ್ಯದಲ್ಲಿ ಇತಿಹಾಸದ ಉಲ್ಲೇಖ ರಾಜಕೀಯ ಇಲ್ಲವೆ ಸಾಮಾಜಿಕ ಚರಿತ್ರೆಯ ಅಥವಾ ಪೌರಾಣಿಕ ಪ್ರಸಂಗಗಳಿಂದ ಹೆಚ್ಚಾಗಿ ಪ್ರಸ್ತುತ ವಿಷಯಕ್ಕೆ ಸಮಾಂತರವಾದ ದಾಖಲೆ ದೃಷ್ಟಾಂತ ರೂಪದಲ್ಲಿ ಉದಾಹರಿಸಿರಬಹುದು. ಆದರೆ ಆಧುನಿಕ ಕಾವ್ಯದಲ್ಲಿ ಐತಿಹಾಸಿಕ ಸೂಚನೆಗಳೂ ಉಲ್ಲೇಖಗಳೂ ಇನ್ನೂ ಮಾರ್ಮಿಕವಾಗಿ ಆಳವಾಗಿ ಆಂಗಿಕವಾಗಿ ಅಳವಡಿಸಿಕೊಂಡಿರುತ್ತವೆ. ತನ್ನ ಅನುಭವದ ಸಮಗ್ರ ಅಭಿವ್ಯಕ್ತಿಗೆ ಅದೆಷ್ಟು ಪೋಷಕವಾಗುವಂತೆ ಕವಿಯು ಇತರರ, ಇತಿಹಾಸದ, ಅನುಭವದ ಅಂಶಗಳನ್ನು ಪರಿಪರಿಯಾಗಿ ರಸೋದ್ದೀಪನಕ್ಕೆ ಸಂಚಾರಿಯಾಗಿ ಉಪಯೋಗಿಸುತ್ತಾನೆ, ಅದು ಸಮಾಂತರವೆನಿಸಬಹುದು, ಅವಾಂತರವೂ ಅನಿಸಬಹುದು. ತಾನು ಓದಿ ಕೇಳಿ ಬೆಳೆಯಿಸಿಕೊಂಡ ಸಾಂಸ್ಕೃತಿಕ ಕೋಶದಿಂದ ಆತ ಈ ಅಂಶಗಳನ್ನು ಬಿಡಿ ಪದಗಳಲ್ಲಿ ಇಡಿ ವಚನಗಳಲ್ಲಿ ಸೂಕ್ತಿಯಾಗಿ ಅವತರಣಿಕೆಯಾಗಿ, ಸ್ಫುಟ ಪ್ರಸಂಗವಾಗಿ ಅಸ್ಪಷ್ಟ ಛಾಯಾ ಬಿಂಬವಾಗಿ ಪ್ರತ್ಯಕ್ಷವಾಗಿಯೋ, ಪರ್ಯಾಯವಾಗಿಯೋ ತನ್ನ ಕೃತಿಯ ಜಾಡಿನಲ್ಲಿ ಅಡ್ಡ ಉದ್ದ ಹೆಣೆಯಬಹುದು. ಅಂದರೆ ಇದೆಲ್ಲವೂ ವಾಚ್ಯವಾಗಿಯೇ ಇರಲಿ ಸೂಚ್ಯವಾಗಿಯೇ ಇರಲಿ-ಶ್ರುತನಿಯೋಜನವೇ ಸರಿ. ಈ ಇತಿಹಾಸ ಪ್ರಜ್ಞೆಯೆಂದರೆ ಸಮಕಾಲೀನ ಇಲ್ಲವೆ ಪೂರ್ವಕಾಲೀನವಾದ ಪರಾನುಭವದ ಬಗೆಗೆ ಒಂದು ಜೀವಂತ ಪರಾಂಬರಿಕೆ - ಚುರುಕಾದ ಆಸಕ್ತಿ. ಅದರಲ್ಲಿ ಒಂದು ಪೂಜ್ಯಭಾವವಿರಲಿ, ಬಿಡಲಿ ತನ್ನದೇ ಆದ ಶ್ರದ್ಧೆ ಇದೆ, ಗಮನಾರ್ಹವೆಂಬ ಗೌರವವಿದೆ.

ಆಧುನಿಕ ಕವಿಗೆ ಈ ಅರ್ಥದಲ್ಲಿ ಇತಿಹಾಸವು ಅಥವಾ ಗತಕಾಲವು ವರ್ತಮಾನ. ಆಧುನಿಕ ಕಾಲದ ಬಗೆಗೇ ಮಾತನಾಡಲು ಒಂದು ಅಪ್ರತ್ಯಕ್ಷವಾದ ರೀತಿ — ವಕ್ರೋಕ್ತಿಯ ವಿನ್ಯಾಸ. ಅಲ್ಲದೆ ಈ ಅತೀತವು ಸದ್ಯದ ವಾಸ್ತವ ಪ್ರತ್ಯಕ್ಷ ಅನುಭವ ಪ್ರಪಂಚದೊಂದಿಗೆ

ವೈಷಮ್ಯ-ತಾರತಮ್ಯದ ಮಾತ್ರೆಯಲ್ಲಿ ಒತ್ತಿ ಎತ್ತಿ ತೋರಿಸಬೇಕಾದ ಬಿಂಬ. ಅದು ಹಿನ್ನೆಲೆಯಾಗಿ ಚೌಕಟ್ಟಾಗಿ, ಸಂವಾದಿಯಾಗಿ, ವಿವಾದಿಯಾಗಿ—ಏನೇ ಆಗಿಯೂ ಆಂತರಿಕ ಸಾಮಂಜಸ್ಯದಿಂದ ವ್ಯಂಗ್ಯ ಧ್ವನಿಯ ಸಾಂಗತ್ಯದಲ್ಲಿ ಕವಿಯ ಮಾತಿನ ಮೋಡಿಯಲ್ಲಿ ಜಾಡಿನಲ್ಲಿ ಪರಿಪರಿಯಾಗಿ ಒಡಮೂಡುವುದು. ಇದುವೇ ಶ್ರುತನಿಯೋಜನ.

ಕವಿವರ್ಯ ಕಣವಿಯವರ ಕುರಿತು ಹಿಂದೆಲ್ಲ ಬರೆಯುವಾಗ ಅವರ ಕಾವ್ಯದಲ್ಲಿಯ ಈ ಶ್ರುತನಿಯೋಜನದ ಅಂಗವಾಗಿ ನಾನು ಏನನ್ನೂ ಹೇಳಿದ್ದಿಲ್ಲ. ಈ ಒಂದು ಲೋಪವನ್ನು ಈ ಲೇಖನದಿಂದ ತುಂಬಿಕೊಳ್ಳಲು ಹವಣಿಸಿದ್ದೇನೆ.

ಒಂದನೆಯದಾಗಿ, ಒಬ್ಬ ಕವಿಯ ಅಥವಾ ಯಾವನೊಬ್ಬ ಕವಿಯ ಒಂದು ಕೃತಿ ಒಂದು ವಜ್ರವಿದ್ದಂತೆ. ವಜ್ರದ ಹರಳಿಗೆ ಎಷ್ಟೆಷ್ಟು ಪೈಲುಗಳನ್ನು ಕಡೆಯುವೆವೋ ಅಷ್ಟಷ್ಟು ಅದರ ಕಾಂತಿ-ಕಿರಣಗಳ ವೈವಿಧ್ಯ ವೈಭವ ಹೆಚ್ಚು. ಅದೇ ರೀತಿ ಒಬ್ಬ ಕವಿಯನ್ನಾಗಲಿ ಅವನ ಕೃತಿಯನ್ನಾಗಲಿ ವರ್ಣಿಸಿ, ವಿವರಿಸಿ, ವಿವೇಚಿಸಿ ಮುಗಿಯಿತೆಂಬುದಿಲ್ಲ. ಭಾರವಿ ಅಂದಂತೆ ಕ್ಷಣೇ ಕ್ಷಣೇಯತ್‌ನವತಾಂ ಉಪೈತಿ ತದೇವರೂಪಂ ರಮಣೀಯತಾಯಾ" ! ಎಷ್ಟು ನಿಲುವುಗಳೋ ಅಷ್ಟು ನೋಟಗಳು— ಅಷ್ಟು ಸವಿದು ನಲಿಯುವ ಸಾಧ್ಯತೆ ಹೆಚ್ಚು.

ಎರಡನೆಯದಾಗಿ, ಒಬ್ಬ ಕವಿಯ ಅಥವಾ ಒಂದು ಕೃತಿಯ ಬಗೆಗೆ ಮಾಡಿದ ಇಂಥ ಪ್ರಾಯೋಗಿಕ ಪ್ರಾಸಂಗಿಕ ವಿಮರ್ಶೆ, —ಅದು ಅಷ್ಟೇ ಪ್ರಾಮಾಣಿಕವೂ ಆಗಿದ್ದರೆ—ಇತರ ಯಾವುದೇ ಕವಿಯನ್ನು ಅವರ ಯಾವುದೇ ಕೃತಿಯನ್ನು ಅರಿಯಲು ಆಸ್ವಾದಿಸಲು ಒಂದು ಸಾಧನವಾಗುತ್ತದೆ. ಕಣವಿ — ಕಾವ್ಯದ ಈ ಪರಿಯ ಪರಿಚಯ ಮಾಡಿಕೊಡುವಾಗ ನಾನು ಪರ್ಯಾಯವಾಗಿ ಅವರ ಸಮಕಾಲೀನ ಸಮಾನಧರ್ಮಿಗಳಾದ ಬೇರೆ ಕವಿಗಳ ಕಾವ್ಯದ ಪರಿಚಯವನ್ನು ಪರ್ಯಾಯವಾಗಿ ಮಾಡಿಕೊಟ್ಟಂತೆ. ಈ ಒಂದು ಆತ್ಮ ಸಮರ್ಥನೆಯೊಂದಿಗೆ ಕಣವಿ ಕಾವ್ಯದಲ್ಲಿಯ ಶ್ರುತನಿಯೋಜನಗಳ ವಿಷಯ ಸ್ವಲ್ಪ ಸರಸ ಸಲ್ಲಾಪಕ್ಕೆ ತೊಡಗುತ್ತೇನೆ.

ಆಧುನಿಕ ಮತ್ತು ಅತ್ಯಾಧುನಿಕ ಕಾವ್ಯ ಕೃತಿಗಳಲ್ಲಿ ಕಂಡು ಬರುವ ದುರೂಹತೆ, ದುರ್ಬೋಧತೆಗೆ ಸ್ಥೂಲವಾಗಿ ಕೊಡಬೇಕಾದ ಕಾರಣಗಳು ಮೂರು. ಒಂದು : ಈ ಕಾವ್ಯದ ವಕ್ರೋಕ್ತಿ ವಿನ್ಯಾಸ. ವಾಚ್ಯವನ್ನೇ ಬಿಟ್ಟು ಸೂಚ್ಯಕ್ಕೇ ಹಾಯುವುದು. ಇದಕ್ಕಾಗಿ ತರ್ಕ ಸರಣಿಯ ಪದಬಂಧ ವಾಕ್ಯಶೈಲಿಗಿಂತ ಹೆಚ್ಚಾಗಿ ಪ್ರತಿಮೆ ಪ್ರತೀಕಗಳ ಭಾಷೆಯನ್ನೇ ಬಳಸುವದು. ಹಳೆಯ ಕಾವ್ಯ ಹೆಚ್ಚಾಗಿ ಉಪಮಾ ಪ್ರಧಾನವಾಗಿದ್ದರೆ ಈ ಹೊಸ ಕಾವ್ಯ ಪ್ರತಿಮಾ ಪ್ರಧಾನ, ಪ್ರತೀಕ ಪ್ರಧಾನ.

ಎರಡು : ಈ ಪ್ರತಿಮೆ ಪ್ರತೀಕಗಳ ಹಿಂದೆ ಪ್ರೇರಕವಾಗಿ, ಉಕ್ಕುವ ಶಕ್ತಿಯಾಗಿ ಆಯಾ ಕವಿಯ ಅಂತರ್ಮನದ ಅಜಾಗೃತ ಪ್ರಜ್ಞೆಯು ಒಂದು ಬಗೆಯ ಕನಸಿನ ಲೋಕ

ಅರಿವಿನಾಳಕ್ಕಿಂತ ಅರಿವಿಗೂ ನಿಲುಕದ ಅನುಭವ ಪುಂಜದಿಂದ ಹೊಮ್ಮಿದ 'ಆಣಿಮುತ್ತು' ಗಳನ್ನು ರಸಿಕರಿಗೆ ಕವನದಲ್ಲಿ ಪವಣಿಸಿಕೊಡುವದು, ಆದರ ಸೂತ್ರ ಸಿಗದಿರುವದು.

ಮೂರು : ಈ ಪವಣಿಕೆ ಸೂಜಿಗೂ ಹದನು, ಎಳೆನೂಲಿಗೂ ಮಿದುವಾದ, ಆದರೆ ಕೆಲ ಸಲ ನಾಲಿಗೆಗೂ ನಿಲುಕದಂಥ ನುಡಿಗಳಲ್ಲಿ ಕವಿ ಸಾಧಿಸಲು ಹೆಣಗುವದು. ಈ ಸಾಧನೆಯಲ್ಲಿ ಆಧುನಿಕ ಕವಿ— ಈಲಿಯಟ್, ಪೌಂಡರಿಂದ ಮೊದಲ್ಗೊಂಡು ಅಡಿಗ. ಕೆ. ಎಸ್ಸೆನ್‌ರವರೆಗೂ—ಅವನು ಪ್ರಯೋಗಿಸುವ ವಾಙ್ಮಯೀನ, ಸಾಂಸ್ಕೃತಿಕ, ಚಾರಿತ್ರಿಕ ಶ್ರುತ ನಿಯೋಜನಗಳ ಕಂಗೆಡಿಸುವಷ್ಟು ವಿವಿಧ ಹಾಗೂ ಚಿತ್ರವಿಚಿತ್ರ ಪ್ರಪಂಚವೇ ಇದಕ್ಕೆ ಸಾಕ್ಷಿ. ಇಂಥ ಶ್ರುತನಿಯೋಜನಾಬದ್ಧ ಕಾವ್ಯರಚನೆ ಸಾಮಾನ್ಯ ಕಾವ್ಯಪ್ರೇಮಿಯ ತಿಳುವಳಿಕೆಯ ತೆಕ್ಕೆಯನ್ನು ಒಮ್ಮೊಮ್ಮೆ (?) ಮೀರುತ್ತಿದ್ದರೆ ಆಶ್ಚರ್ಯವಲ್ಲ. ಅಂಥ ಓದುಗ ಸಾಮಾನ್ಯವಾಗಿ ಪಡೆದಿರದ ಸಾಹಿತ್ಯಿಕ ಸಾಂಸ್ಕೃತಿಕ ಹಾಗೂ ಭಾಷಾ ವಿಷಯಕ ಪರಿಜ್ಞಾನವನ್ನು ಅದು ಅವನಿಂದ ಅಪೇಕ್ಷಿಸುತ್ತದೆ, ಅದರಿಂದ ಈ ಸಾಮಾನ್ಯ ಕಾವ್ಯರಸಿಕ,— ಆದಕ್ಕೆ ತಕ್ಕ ಸಂಸ್ಕಾರ ಅಧಿಕಾರವಿಲ್ಲದಿರುವದರಿಂದ,— ತಾಳ್ಮೆಗೆಡುವದು ಸ್ವಾಭಾವಿಕವೇ. ಆದರೆ ಈ ಕವಿಗಳು ಕೇವಲ ತಮ್ಮಪ್ರಗಲ್ಭತೆ ಪಾಂಡಿತ್ಯಗಳ ಪ್ರದರ್ಶನಕ್ಕಾಗಿಯೇ ಇಂಥ ಶ್ರುತನಿಯೋಜನಗಳಲ್ಲಿ ತೊಡಗಿದ್ದಿರುವದಿಲ್ಲ ಎಂಬುದನ್ನು ಇಲ್ಲಿ ಒಪ್ಪಿಕೊಳ್ಳಬೇಕು.

ಆದರೆ ಇಂಥ ದುರೂಹತೆ ಕವಿಕಣವಿಗಳ ಶ್ರುತನಿಯೋಜನಗಳಲ್ಲಿ ತೀರ ವಿರಳ, ( ಕವಿ ಅರವಿಂದ ನಾಡಕರ್ಣಿಯವರಲ್ಲಿ ನಮ್ಮ ರಾಮಾಯಣ ಮಹಾಭಾರತಗಳಿಂದ ಮಾತ್ರವಲ್ಲ, ಭಾಸನ ನಾಟಕಗಳಿಂದಲೂ ಸಾಂದರ್ಭಿಕ ಪ್ರತಿಮೆಗಳೂ ಶ್ರುತನಿಯೋಜನ ಗಳೂ ಹೇರಳವಾಗಿ ಬರುತ್ತವೆ. ಹಾಗೆಯೇ ಕವಿ ಅಕಬರ ಅಲಿ ಇಸ್ಲಾಂ ಸಂಸ್ಕಾರವಂತ ರಾಗಿಯೂ ಅವರ ಕಾವ್ಯದಲ್ಲಿ ಉಲ್ಲೇಖಿತವಾಗುವ ಅಪ್ರಸ್ತುತಗಳು ಪುರಾಣಗಳವೇ ಹೊರತು ಕುರಾನದವುಗಳಲ್ಲ ! ಅಡ್ಡಬಿದ್ದ ಸೊಟ್ಟತೆಂಗಿನಮರ ನೋಡಿ ಕಣವಿಯವರಿಗೂ ಒಂಟೆಯು ನೆನಪಾಗುತ್ತದೆ. ಆದರೆ ಅಕಬರ ಆಲಿ ಪುರುಷಾಮೃಗದ ಪ್ರತಿಮೆಯನ್ನೇ ತಮ್ಮ ಒಂದು ಕೃತಿ ತುಂಬ ಪ್ರಭಾವಿಯಾಗಿ ಬಳಸುತ್ತಾರೆ !)

ಈ ಶ್ರುತನಿಯೋಜನಗಳಿಂದ ಕಣವಿಯವರು ಕೆಲವೊಂದು ವ್ಯಂಗ್ಯ ಪರಿಣಾಮಗಳನ್ನು ಸಾಧಿಸುತ್ತಾರೆ. ಈ ವ್ಯಂಗ್ಯ ತಾತ್ತ್ವಿಕವಾಗಬಹುದು. ಭಾವನಿಕವಾಗಬಹುದು, ಸಾಮಾಜಿಕ ಟೀಕೆಯದಾಗಬಹುದು, ನಮ್ಮ ವಿನೋದದ್ದೂ ಆಗಬಹುದು.

ಈ ಶ್ರುತನಿಯೋಜನ ನೇರವಾಗಿ ಇತರ ಕವಿಗಳ, ಲೇಖಕರ ವಾಕ್ಯವಚನಗಳ ಉದ್ಧರಣವಾಗಬಹುದು.—ಲಾಡಿನಲ್ಲಿ ದ್ರಾಕ್ಷೆ, ಖೀರಿನಲ್ಲಿ ಬಾದಾಮಿ ಪಿಸ್ತಾ ಇರುವಂತೆ, ಈ ಅವತರಣಿಕೆಗಳೂ ಪ್ರಸ್ತುತ ವಿಧಾನಕ್ಕೆ ಸಂವಾದಿಯಾಗಿಯೋ ವಿವಾದಿಯಾಗಿಯೋ ಇರಬಹುದು—ಎರಡೂ ರೀತಿ ಕವಿಯ ಭಾವದ ಪರಿಪಾಕ-ಪರಿಣಾಮಕ್ಕೆ ಪೋಷಕವೇ ಆಗುತ್ತದೆ.

ಇದೇ ಜಾಡಿನಲ್ಲಿ ಇಡಿಯು ವಾಕ್ಯ—ಉಕ್ತಿಗಳ ಬದಲು ವಾಕ್ಯಾಂಶಗಳೂ ಅರ್ಥ ಪೂರ್ಣವಾದ ಪದ ಪುಂಜಗಳೂ ಪ್ರಸಿದ್ಧ ಶಬ್ದಗಳೂ ಹೆಸರುಗಳೂ ತನ್ನದೇ ತಂತ್ರಗಾರಿಕೆ ಯಿಂದ, ಶ್ಲೇಷೆಯಿಂದ, ಉತ್ಪ್ರೇಕ್ಷೆಯಿಂದ, ವಿಡಂಬನೆಯಿಂದ ಕವಿಯು ಸಾಕೂತವಾಗಿ ಪ್ರಯೋಗದಲ್ಲಿ ಬಂದಿರಬಹುದು.

ಕೆಲಸಲ ಈ ಶ್ರುತನಿಯೋಜನ ಸೂಚ್ಯವೂ ಗುಪ್ತವೂ ಆಗಿರಬಲ್ಲದು ಒಂದು ರೀತಿ ಹಾಗಿದ್ದರೇನೇ ಅದರ ಶಕ್ತಿ ಮಿಗಿಲು. ನೇರವಾಗಿ ನಿರ್ದೇಶಿಸದೆ ಕದ್ದು ಮುಚ್ಚಿ ಪರೋಕ್ಷ ವಾಗಿ ಮಾಡುವ ಉಲ್ಲೇಖವೇ ಅಸಲಿನ ಶ್ರುತನಿಯೋಜನ. ಆದರೆ ಇಂಥ ನಿಯೋಜನದ ನಿರ್ದೇಶದ ಇಂಗಿತ ಅಥವಾ ಗುರಿ ಓದುಗನಿಗೆ ಗೊತ್ತಿರಬೇಕು. ಇಲ್ಲವಾದರೆ ಈ ವ್ಯಂಗ್ಯಾರ್ಥ ವ್ಯರ್ಥ. Alusion ಶಬ್ದದ ಮೂಲ ಧಾತು Allude. ಅದರ ಲ್ಯಾಟಿನ್ ಬೇರು. 'Ludo' ಅಂದರೆ,ಲೀಲೆ-ಆಡುವಿಕೆ. ಅಂದರೆ ಇಂಥ ಪ್ರಯೋಗದಲ್ಲಿ ಕವಿ ಆಯಾ ಶಬ್ದ-ಪದ-ವಾಕ್ಯದೊಂದಿಗೆ ಅದರ ಅರ್ಥ ಭಾವಗಳೊಂದಿಗೆ ಚಿನ್ನಾಟವಾಡುತ್ತಾನೆ. ಅಂಥ ಅರ್ಥವಿನ್ಯಾಸ, ಭಾವ ವಿಲಾಸದ ಪ್ರಜ್ಞೆ ಓದುಗನಿಗೆ ಕೆಲಮಟ್ಟಿಗಾದರೂ ಪೂರ್ವ ಭಾವಿಯಾಗಿ ಇರಬೇಕು. ಕವಿ ಮತ್ತು ಸಹೃದಯನ ನಡುವೆ ಬರೀ ಸಮಾನ ಹೃದಯದ ಅನುಭೂತಿ ಕ್ಷಮತೆ ಇದ್ದರೆ ಸಾಲದು. "ಅರ್ಥದ ಮರ್ಮ"ವನರಿಯಬಲ್ಲ 'ಸಮಾನ ಧರ್ಮ'ವೂ ಇರಬೇಕು. ಕವಿಯ ಮಾತಿನ ಮೋಡಿಯ ಚದುರು.–ಬೆಡಗುಗಳ ಸಿರಿವಂತಿಕೆ ಯೆಲ್ಲ ಈ ಒಂದೇ ಸಾಧರ್ಮ್ಯವನ್ನು ಆಶ್ರಯಿಸಿದೆ. ಆದ್ದರಿಂದಲೆ ಈ ಗುಪ್ತ ಇಲ್ಲವೆ ಒಳಗಂಟಿನ ಶ್ರುತನಿಯೋಜನದ ಮಹತ್ವ ಹೆಚ್ಚಿನದು.

ಇದರ ಇನ್ನೊಂದು ಪ್ರಯೋಜನವೆಂದರೆ ವರ್ತಮಾನವನ್ನೂ ಭೂತವನ್ನೂ ಒಂದು ಸರಿಯಾದ ಅನುಪಾತದಲ್ಲಿ, ಕಣ್ಣಳತೆಯ ಹೊಂದಾಣಿಕೆಯಲ್ಲಿ ಜೋಡಿಸುವದು. ಒಂದಕ್ಕೆ ಒಂದು ಇದಿರಾಗುವಂತೆ ಅಕ್ಕಪಕ್ಕದಲ್ಲಿ (Juxtaposition) ಇಡುವದರಿಂದ ಪಡೆ ಯುವ ಸಾಮರ್ಥ್ಯ, ವೈಷಮ್ಯಗಳ ಪರಿಣಾಮ ಬೇರೆ. ಒಂದರ ಹಿಂದೆ ಒಂದಾಗುವಂತೆ ಪ್ರಸ್ತುತವನ್ನು ಪ್ರಧಾನವಾಗಿ ಇಟ್ಟು ಅಪ್ರಸ್ತುತವನ್ನು ಗೌಣವಾಗಿರಿಸಿ ಅದರ ಒಳಧ್ವನಿ ಯಾಗಿ ಮಿಡಿಯುವಂತೆ ಮಾಡುವುದರ ಪರಿಣಾಮ ಬೇರೆ. ಕವಿಗೆ ಸಂದರ್ಭಾನುಸಾರ ಎರಡೂ ಅಗತ್ಯದವು ಹಾಗೂ ಮಹತ್ವದವು.

ಕೆಲಸಲ ಈ ಮುಚ್ಚುಮರೆಯ ಅವತರಣಿಕೆಗಳು ಆ ಇನ್ನೊಬ್ಬ ಕವಿಯ ಅಣಕವೋ ಅನುಕರಣವೋ ಕದ್ದನುಡಿಯೋ ಅನಿಸಬಹುದು. ಆದರೆ ಸ್ವಾಯತ್ತ ಪ್ರತಿಭೆಯ ಸಮರ್ಥ ಕವಿ ಅಂಥ ಉಪದ್ವ್ಯಾಪವೆಂದಿಗೂ ಮಾಡಲಾರ. ಅಂಥ Concealed Quotations ಗಳಲ್ಲಿ ಅವನ ಉದ್ದೇಶ ತನ್ನದೇ ಬೇರೊಂದು ಭಾವ ವ್ಯಂಜನೆಯೇ ಆಗಿರುತ್ತದೆ. ಅರ್ಥ ವೈವಿಧ್ಯವೇ ಆಗಿರುತ್ತದೆ. ಅದು ಸುಜ್ಞರಸಿಕನಿಗೆ ನವಿರೇಳಿಸುತ್ತದೆ, ಕಣ್ಣರಳಿಸು ತ್ತದೆ, ಕರುಳು ಕಲಕಿಸುತ್ತದೆ. ಆದರೆ ರಸಿಕರಲ್ಲಿಯೂ ಸುಜ್ಞರೆಷ್ಟು ?

ಕವಿ ಕಣವಿಯವರ ಕೃತಿಗಳಲ್ಲಿ ಈ ಶ್ರುತ ನಿಯೋಜನದ ಮೇಲೆ ಹೇಳಿದ ಹೆಚ್ಚು ಕಡಿಮೆ ಎಲ್ಲ ಉದಾಹರಣೆಗಳನ್ನೂ ಕಾಣಬಹುದು. ಅವುಗಳನ್ನೇ ಅಲ್ಲಲ್ಲಿ ಒಂದೆರಡನ್ನು ಮಾದರಿಗಾಗಿ ಎತ್ತಿಕೊಂಡು ಇಲ್ಲಿ ವಿಶೇಷ ವಿಚಿಕಿತ್ಸೆಗೆ ಗುರಿಮಾಡುವ ಯತ್ನನಡೆದಿದೆ.

ಈ ಕವಿಯು ಕನ್ನಡ ವಾಗ್ಧೋರಣೆಯೇ ಶಿವಶರಣರ ವಚನ ವೈಖರಿಯಲ್ಲಿ ಸಂಸ್ಕಾರ ಗೊಂಡು ಪುಟವಿಟ್ಟಂತೆ ಇದೆ. ಆದ್ದರಿಂದ ಅನೇಕ ಕವನಗಳಲ್ಲಿ ಸ್ಪಷ್ಟವಾಗಿಯೋ ಅಸ್ಪಷ್ಟ ವಾಗಿಯೋ ವಚನಗಳ ದನಿ ಗಡುಸಾಗಿ, ಮಿದುವಾಗಿ, ಹೆಡಸಾಗಿ, ನವಿರಾಗಿ ಪಡಿನುಡಿಯು ತ್ತದೆ. ಅವತರಣ ಚಿಹ್ನೆಗಳು ಇಲ್ಲದ್ದರಿಂದ ಮಾತ್ರ ಕೆಲವೆಡೆ ಈ ನುಡಿಗಳನ್ನು ನಾವು ''ಮುಚ್ಚಿದ'' ಅವತರಣಿಕೆಗಳೆನ್ನಬೇಕೇ ಹೊರತು ಅವು ಅಂಥಲ್ಲಿ ಇಡಿಯಾದ ವಚನ ಪಙ್ಕ್ತಿಗಳಲ್ಲಿಯೇ ಒಡಮೂಡಿವೆ. ವಿಶೇಷತಃ ವೀರಶೈವ ವಿಚಾರ, ತತ್ತ್ವ ವಿಭೂತಿ ದುತ್ವಗಳ ಬಗೆಗೆ ಕವಿಯು ಕಾವು ಕರುಳಿನ ಕೋಡಿಯಾಗಿ ಹರಿದಾಗ ಅದು ಈ ಶಿವ ಶರಣರ ನುಡಿ ಮಡುವಿನಲ್ಲಿ ಮಿಂದೆದ್ದು ಮಿರುಗುತ್ತವೆ. ಉದಾಹರಣೆಗೆ—ದಿ. ಶ್ರೀ ಬಸವನಾಳರನ್ನುಕುರಿತ ಭಾಷ್ಪಾಂಜಲಿ ಮತ್ತು ಕವಿ ಮಧುರ ಚೆನ್ನರನ್ನು ನೆನೆದು ಉಕ್ಕಿದ ಕವಿತೆ. ಇಲ್ಲಿ ಬಂದ ವಚನಗಳ ಕೆಲವು ಸಾಲುಗಳು ಸುಮ್ಮನೆ ಪರಿಣಾಮಕ್ಕಾಗಿ ಪರಿವೇಷ ಕಟ್ಟಲಿಕ್ಕಾಗಿ ತಂದಿಟ್ಟವಲ್ಲ. ಕವನದ ವಸ್ತುವೊಂದಿಗೆ ಆಳವಾಗಿ ಜೀವಾಳದ ಹೊಂದಿಕೆಯಲ್ಲಿ ಬಂದವು. ಆಶಯವನ್ನು ಹೆಚ್ಚಿಸುವಂಥವು.

ಏನು ಬಂದಿರಿ ? ಹದುಳವಿದ್ದಿರಿ?

* * *

ಇವನು ಆರವನಾರು ಎನಿಸದೆ ಇವನು ಎಮ್ಮವ ನೆನಿಸಿರೆ

* * *

(ಶ್ರೀ ಬಸವನಾಳರ ನಡೆನುಡಿಯನ್ನು–) ಲಿಂಗವೇ ಮೆಚ್ಚಿ ಅಹುದಹುದೆಂದಿತು.

''ಇಲ್ಲಿ ಸಲ್ಲುವರಲ್ಲಿ ಸಲ್ಲುವರೆಂಬ ಸೊಲ್ಲೇಸಂದಿತು.'' ವಚನಕಾರರು ಕಲ್ಪಿಸಿದ ಕಲ್ಪನೆ ಅನುಭವದಲ್ಲಿ ಸಾಕಾರವಾದ ಪರಿಇದೇ ಕವನದ ಆಯಾ ಸಂದರ್ಭದಲ್ಲಿ ಈ ಪ್ರಾಸಾದಿಕ ವಾಣಿಯು ಒಂದು ಅಪೂರ್ವ ಹೃದ್ಯತೆಯ ಸಂವೇದನೆಯನ್ನು ಜುಮ್ಮನೆ ಇಂಗಿತಜ್ಞರ ನರಗಳಲ್ಲಿ ಮಿಂಚಾಡಿಸುತ್ತದೆ. ಆದರೆ ಇಂಗಿತಜ್ಞರಲ್ಲದವರಲ್ಲಿ ? ಅಂಥ ಓದುಗರಿಗೆ ಈ ಒಳದನಿ ನಿಲುಕದಿರಬಹುದು. ಆದರೂ ಈ ಆರ್ಷ ನುಡಿಯ ನಯಗಾರಿಕೆ ಲಯಕಾರಿಕೆ ವಿವರಗೊಳಿಸದೇ ಇರಲಾರದು, ಹೊರತು ಇದೊಂದು ವಚನಶಾಸ್ತ್ರೀಯವಾದ ಅಗಮ್ಯ ಪಾಂಡಿತ್ಯ ಪ್ರದರ್ಶನ ಅಥವಾ ಪರಿಮಿತ ಪರಿಭಾಷೆಯಾಗಿ ಉಳಿಯುವುದಿಲ್ಲ.

ಕರುಣೆ ಬಾರದೆ ಶಿವನೆ-ಭಕ್ತರ ಭಜನೆಯಂತಿದು ಸಾಗಿದೆ.

ಎಂದಾಗ ಭಜನೆ ಮಂಡಳಿಯ ಒಂದು ಸಾಮಾನ್ಯ ತಾಳಕಟ್ಟುವ ಸೊಲ್ಲು ಕೂಡ ಈ ಶೋಕ ಗೀತಕ್ಕೆ ಎಷ್ಟು ಸಮರ್ಪಕವಾಗಿ ಹೊಂದಿಕೊಳ್ಳುತ್ತದೆ: ಕವಿತೆಯ ನಾಯಕನ ಈ ಚಿರ ವಿಯೋಗದಲ್ಲಿ ಶಿವಕರುಣೆಯೇ ಬೇಕು. ಆರ್ತರ ಸಹನೆಗೆ, ಭಜನೆಯ ಸೊಲ್ಲು ಅದರ ಮೊರೆಯನ್ನೇ ಮೂಡಿಸುತ್ತದೆ.

ಅದೇ ರೀತಿ ಈ ಬಾಷ್ಪಾಂಜಲಿಯ ಮುಗಿತಾಯದ ಈ ನುಡಿ ನೋಡಿರಿ ;

ಪೂರ್ಣಮಲ್ಲಿಯು ಪೂರ್ಣಮಿಲ್ಲಿಯು
ಪುಣ್ಯಪೂರ್ಣದೊಳುದಿಸಿತು;
ಪೂರ್ಣದಲ್ಲಿಯೆ ಪೂರ್ಣಮಾಗುತ
ಪೂರ್ಣತೆಯೊಳೊಂದಾಯಿತು.

ಇದು ಸುಪ್ರಸಿದ್ಧ "ಪೂರ್ಣಮದಃಪೂರ್ಣಮಿದಂ"-ಎಂಬ ಉಪನಿಷತ್ ಮಂತ್ರದ ಉತ್ತಮ ಕನ್ನಡಿಕೆ. ಇಲ್ಲಿ ಈ ಮಾತುಗಳು ಪ್ರಯೋಗದ ಔಚಿತ್ಯದಿಂದ ಭಾವದ ಪರಿಣಾಮದ ಔನತ್ಯವನ್ನು ಸಹಜವಾಗಿಯೇ ಸಾಧಿಸಿವೆ. "ಪೂರ್ಣಮಾಗುತ" ಎಂಬಲ್ಲಿಯು 'ಮಾಗುತ' ಪದ ತನ್ನದೇ ಆದ ಶ್ಲೇಷೆಯಿಂದ ಕವನ ನಾಯಕನ ವ್ಯಕ್ತಿತ್ವದ ಪಕ್ವ ಪ್ರೌಢಿಮೆಗೂ ಸೂಚ್ಯವಾದ ಸೂಚಿಯಾಗಿದೆ. ಕೊನೆಯ ಪದದ ಭಾವಾಂತರವೂ ವಿಹಿತವೇ ಆಗಿದೆ.

ಮಧುರಚೆನ್ನರ ನೆನಪಾಗಿ ಹೊರಟ ಕಾವ್ಯೋದ್ಗಾರದಲ್ಲಿ ಈ ವಚನ ಪಙ್ಕ್ತಿ ಎಷ್ಟು ಸಮರ್ಪಕವಾಗಿ ಬಂದಿದೆ : "ಮರದ ನೆರಳಲಿ ತನ್ನ ನೆರಳನರಸಲು ಬಹುದೆ ?" ಮೂಲದಿಂದ ಇಲ್ಲಿಯ ಸಂದರ್ಭ ಬೇರೆ. ಆದ್ದರಿಂದ ಹೊಸ ಕೋನದಲ್ಲಿ ಇಟ್ಟ ಒಂದು ಹರಳಿನ ಕಾಂತಿಯಂತೆ ಇಲ್ಲಿ ಈ ನುಡಿ ಹೊಸ ಭಾವವನ್ನು—ಒಮ್ಮೆಲೆ ಆಳದ ತಾತ್ವಿಕ ತಳದ "ನಿಃಶಬ್ದ ನಿಃಶಬ್ದ ಶಬ್ದದಾಚೆಯ ಶಬ್ದ"ವನ್ನು ಝಗ್ಗನೆ ಹೊಳೆಯಿಸುತ್ತದೆ.

ಇನ್ನೂ ಕೆಲವೆಡೆ ವಚನಗಳ ವಾಕ್ಯಾಂಶಗಳು ಆಧುನಿಕ ಸಂದರ್ಭದಲ್ಲಿ ಹರಿತವಾದ ವ್ಯಂಗ್ಯವನ್ನು ಸಾಧಿಸುವದರಲ್ಲಿ ಯಶಸ್ವಿಯಾಗಿವೆ.

ದಿನವೂ ನಮಗೆ ಶಿವರಾತ್ರಿ

ಂ ಂ ಂ

ಉಂಡು ಉಪವಾಸಿಗಳು ನಾವು
ಬಳಸಿದ ಬ್ರಹ್ಮ ಚಾರಿಗಳು ("ಹೊಸವರ್ಷದ ಸ್ವಾ (ಸ್ವ)ಗತ ಭಾಷಣ".)

ಇಂದಿನ ನಮ್ಮ ಡಾಂಭಿಕ, ಸೋಗಲಾಡಿ ಸಂಭಾವಿತತನಕ್ಕೆ "ಬಳಸಿದ ಬ್ರಹ್ಮಚಾರಿ" ತನ ಕಟುವಾದರೂ ಕಟ್ಟು ನಿಟ್ಟಾದ ತಲೆಪಟ್ಟಿ. "ಗಾಳಿ ಬೀಸಿದ ಹಾಗೆ ತೂರಿಕೊಂಡವರು" ಈ ಲೋಕೋಕ್ತಿಯ ಪ್ರಯೋಗವೂ ವಚನಗಳಂತೆಯೇ ಕವಿಯ ಬತ್ತಳಿಕೆಯ ಇನ್ನೊಂದು ಸಿದ್ಧಾಸ್ತ್ರ. ಸಮಕಾಲೀನ ಜೀವನ ವಿಮರ್ಶೆ ಬಂದಾಗೆಲ್ಲ ಹಲವಾರು ವ್ಯಂಗ್ಯಹಾಸ್ಯದ ವಿಚಾರಕ ಕವನಗಳಲ್ಲಿ ಈ ನಾಣ್ಣುಡಿಗಳನ್ನು ಕವಿ ಹೊಸದೊಂದು ಮೊನಚು ಹರಿತ ಗಳಿಂದ ಮಸೆದು ಬೆಸೆದಿದ್ದಾರೆ. ಈ ಕೆಲವೇ ಮಾದರಿಗಳು ಇದರ ರುಚಿಗೆ ಸಾಕು :

ಕೊಡೆ ಹಿಡಿಯುತ್ತೇವೆ :
ಬಿಸಿಲಿಗೆ, ಮಳೆಗೆ, ದೊಡ್ಡವರ ಕಾರು
ಸಿಡಿಸುವ ಕೊಳೆಗೆ, ಆಗದವರು
ಎದುರಿಗೆ ಬಂದಾಗ ಮರೆಗೆ

ಹೊತ್ತು ಬಂದಂತೆ.
o o o
ಹೊತ್ತು ಹೋದಂತೆ ಮಡಿಚಿ
ಹಿಡಿಯುತ್ತೇವೆ ನಮ್ಮ ಅಭಿರುಚಿ—
ಗೆ ತಕ್ಕಂತೆ. (ಕೊಡೆ)

ಇಲ್ಲಿ ಹೊತ್ತು ಬಂದಂತೆ ಕೊಡೆ ಹಿಡಿಯುವ ಒಂದು ನಾಣ್ಣುಡಿಯ ಅಭಿಪ್ರಾಯವನ್ನು ಹೇಗೆ ಹಿಂಜಿ ಹೆಚ್ಚಿ ಬಳಸಿಕೊಳ್ಳಲಾಗಿದೆ !

'ಮನುಷ್ಯ'ನೆಂಬ 'ಎರಡೂ ಕಾಲು ಸಮವಿದ್ದರೂ ವಿಷಮ ನಡೆಯ' ಈ ಪ್ರಾಣಿಯ ಈ ಲೀಲೆ ನೋಡಿ : ಚಾಪೆಯ ಕೆಳಗೆ ನುಸಿದು, ನಿಷ್ಕಾರಣ ಹಲ್ಲು ಕಿರಿಯುವದು.

ಒಳಗೊಳಗೆ ಮಸೆದು ನುಣ್ಣಗೆ ಹೊಸೆದು ಬಲೆಗೆ ಹಗ್ಗ,
ಎಳೆಯಿರದೆ ಮಾತಿನ ಮಗ್ಗನೇಯುವದು
o o o
ಕಂಡವರ ಕಟ್ಟೆಗೆ ಕೂತು, ಹಂಟು ಹೊಡೆದು, ಯಾರದೊ
ನಂಟು ಹಚ್ಚಿ, ಮಾಳಿಗೆ ಹತ್ತಿ ಒದೆಯುತ್ತಾನೆ ಏಣಿ

ಇಲ್ಲಿಯೂ ದಿನ ಬಳಕೆಯ ಪಡೆನುಡಿಗಳು ಹೊಸ ಅರ್ಥವತ್ತತೆಯ ಸತ್ವ ತುಂಬಿಕೊಂಡಿವೆ.

''ಯಾರು ಕೇಳುತ್ತಾರೆ ಹೇಳಿರಣ್ಣ''—ಎಂಬ ಕವನವಂತೂ ಇಂಥ ನಾಣ್ಣುಡಿ ಜಾಣ್ಣುಡಿಗಳಿಂದಲೇ ಹೆಣೆದ ಹೊಸ ಕಸೂತಿಗೆಲಸದ ಪಟ.

ಬಲೆಯ ಬೀಸುತ್ತಾರೆ, ಬುಟ್ಟಿಗೆಸೆಯುತ್ತಾರೆ
ಇಟ್ಟುಕೊಳಿಸುತ್ತಾರೆ, ಹೊಟ್ಟೆ ಬೆಳೆಸುತ್ತಾರೆ
o o o
ಘಂಡು ಎತ್ತುತ್ತಾರೆ, ಎತ್ತಿ ಹಾಕುತ್ತಾರೆ
ಬಂಡು ಹೂಡುತ್ತಾರೆ, ಬೆಂಡು ಸುಲಿಯುತ್ತಾರೆ
o o o
ಕೈಯ ಮುಗಿಯುತ್ತಾರೆ, ಕಾಲು ಕೆದರುತ್ತಾರೆ
ಬಾಲ ಹಿಡಿಯುತ್ತಾರೆ, ಮೇಲೆ ಏರುತ್ತಾರೆ.

ಹೀಗೆ ತ್ರಿತಿನೆಗಟ್ಟಿಕೊಂಡು ಇಂಥ ಪಡೆನುಡಿಗಳು ಹೊತ್ತಿಗಾಡಿದ ಮಾತಿನಂತೆ ಸತ್ತವನನ್ನು ಎಬ್ಬಿಸುವ ಸತ್ವ ತಳೆದು ಬರುತ್ತವೆ. ''ಅಪರಾವತಾರ.'' ''ಜಗದೇಕ ಮಲ್ಲ'' ದಂಥ ಕವನಗಳಲ್ಲಿ ಈ ವೈಖರಿ ಢಾಳವಾಗಿ ಬಂದಿದೆ.—

ಅಲ್ಲಿದ್ದ
ಇಲ್ಲಿದ್ದ
ಎಲ್ಲ ಕಡೆಗೂ ಬಾಲಗುಂಡಾಡಿಸಿದ್ದ.
ಹೋದ ಹೋದಲ್ಲೆಲ್ಲ ಹದನೋಡಿ ಹುಸಿಗುಂಡು ಹಾರಿಸಿದ್ದ,
o o o
ಕೊಬ್ಬರಿಯ ಜತೆಗದರ ಕರಟವನ್ನೂ ಕೂಡ

ತಿಂದು ಬಿಟ್ಟ (ಅಪರಾವತಾರ)

o o o

ಬೇಡಾದವರನೊತ್ತಿ ಪಾತಾಳಕ್ಕೆ—
ಪದ್ಮಾಸನವ ಹಾಕಿ ಕೂಡಬಲ್ಲ.

ದೊಡ್ಡವರ ಬಾಲಕ್ಕೆ ಜೋತಾಡಬಲ್ಲ

o o o

ಪಂದಿ ಹೊಲಗಳ ನುಗ್ಗಿ ಮೇಯಬಲ್ಲ

ಇವೆಲ್ಲ ದಿನ ಬಳಕೆಯ ಮಾತು. ಆದರೆ ಕವನದ ಆಯಾ ಸಂದರ್ಭದಲ್ಲಿ ಹೇಗೆ ಜೀವ ಕಳೆ ತುಂಬಿ ಕಳಕಳಿಸಿ ಮಿಡಿಯುತ್ತವೆ !

'ಕಾಲ ನಿಲ್ಲುವದಿಲ್ಲ' —ದಲ್ಲಿ ಈ ಒಂದು ಮಾತು ಬರುತ್ತದೆ.

ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿದು
ಒದೆಸಿಕೊಂಡಿದ್ದೇವೆ.

ಇಲ್ಲಿಯೂ ಮೇಲಿನ ಸಾಲು ಚಿರಪರಚಿತ ನಾಣ್ಣುಡಿ. ಆದರೆ ಕೆಳಗಿನ ಸಾಲಿನಲ್ಲಿ ಆ ಕತ್ತೆ ತಿರುಗಿ ಒದೆದೇ ಬಿಡುತ್ತದೆ! ಇದರಿಂದ ಒಂದು ಸವೆದು ಮೊಂಡವಾದ ಗಾದೆಗೂ ಹೊಸ ಮೊನಚು ಮೂಡಿ ಅದು ಅಕಲ್ಪಿತವಾಗಿ ಚುಚ್ಚುತ್ತದೆ !

ಹೀಗೆ ವಚನವಿರಲಿ, ನಾಣ್ಣುಡಿ ಇರಲಿ, ಜನ ಬಳಕೆಯ ಪಡೆನುಡಿಯಿರಲಿ ಒಂದರ್ಥದಲ್ಲಿ Concealed Quotations ಕವಿಯ ಮುಖ್ಯ ಮಾತಿನ ಬದಿಯಲ್ಲಿ, ಇದಿರಲ್ಲಿ ನಿಂತು ಇವು ಒಟ್ಟೊಟ್ಟು ಭಾವಸಮನ್ವಯಕ್ಕೆ ಸಂವಾಹಕವಾಗುತ್ತವೆ.

ಆದರೆ ಕೆಲಸಲ ಕವಿಯ ವಾಙ್ಮಯೀನ ಅನುಭವದಲ್ಲಿ ಪಾಲುಗೊಳ್ಳದ ಓದುಗರಿಗೆ ಕೊಂಡೆಯ ಮಂಚಣ್ಣ, ಅಂಬಿಗರ ಚೌಡಯ್ಯಾ, ಪಂಚತಂತ್ರದ ಕರಟಕ ದಮನಕ, ಹಿಟ್ಲರನ ಪ್ರಚಾರ ಮಂತ್ರಿಗೊಬೆಲ್ಸ ಇವರೆಲ್ಲ ಕವನದ ನಡುವೆ ಪ್ರಕಟರಾಗಿ ದಿಗ್ಭ್ರಮೆಗೊಳಿಸುವದೂ ಉಂಟು. ಹಾಗೆಯೇ ಕೆಲಸಲ ಕವಿಯು 'ಲಾಗ' ಕವಿತೆಯಲ್ಲಿಯಂತೆ ಒಂದು ವಸ್ತುವಿಗೆ ಸಂಬಂಧ ಪಟ್ಟ ಏನೆಲ್ಲ ಆಖ್ಯಾಯಿಕೆಗಳ ಶ್ರುತನಿಯೋಜನೆ ತುಂಬ ಚಾತುರ್ಯದಿಂದಲೇ ಮಾಡಿದ್ದರೂ ಅದೆಲ್ಲದರ ಆಸ್ವಾದನೆಯಲ್ಲಿ ಪರಿಮಿತ ಪ್ರಜ್ಞಾಪ್ರಪಂಚದ ರಸಿಕ ಭಾಗಿಯಾಗದೇ ಹೊರಗೇ ಉಳಿಯುವಂತೆ ಆಗುತ್ತದೆ. 'ಲಾಗ'ದಲ್ಲಿ ಹಿತೋಪದೇಶ, ಪಂಚತಂತ್ರ, ಇಸೋಪನ ಕತೆಗಳಲ್ಲಿ ಬರುವ ಮಂಗನ ಕುರಿತ ಹಲವಾರು ಕಥಾ ಪ್ರಸಂಗಗಳನ್ನು ಸಮರ್ಪಕವಾಗಿ ಅಳವಡಿಸಲಾಗಿದೆ. ಅವನ್ನು ಓದಿಬಲ್ಲ ಮಕ್ಕಳೂ ಈ ಕವನವನ್ನು ಮೆಚ್ಚಿ ಹಿಗ್ಗಬಹುದು. ಆದರೆ ಇತರರ ಪಾಲಿಗೆ ಈ ವಿಶಿಷ್ಟರೋಚಕತೆ ನೆಲದ ಮರೆಯ ನಿದಾನ! ವೇದದಷ್ಟೇ ಪೂಜ್ಯವಾದ ರೋಜಕೀರ್ದಿಯ ಭಕ್ತರು ರೂ.ಆ.ಪೈಗೆ ಕುಣಿಯುವ ಚಿತ್ರ ಯಾವ ಓದುಗನಿಗೂ ಅರ್ಥವಾಗುವಂತಿದೆ. ಆದರೆ ಅದೇ ಉಸುರಿನಲ್ಲಿ ಬಂದ ಹಳೆಯ ಕತೆಯ 'ಮಿದಾಸ'ನ ಸೋಂಕಿಗೆ ಅವನ ಮಿದುಳು ಮರವಟ್ಟುತ್ತದೆ—ಆ ಕಥೆಯನ್ನೇ ಆತ ಓದಿರದಿದ್ದರೆ,

ಇನ್ನು ಪ್ರಕಟವಾಗಿ ಪ್ರಯೋಗಿಸಿದ ಕೆಲವು ಅವತರಣಿಕೆಗಳನ್ನು ಸಮೀಕ್ಷಿಸೋಣ. ಇಂಥ ಉದ್ಧರಣಗಳಲ್ಲಿ ಒಂದೇ ಒಂದು ಇಂಗ್ಲಿಷ ಪಙ್ತಿ. ಯೇಟ್ಸನ ಒಂದು ನುಡಿಯ ಸಾಲು : "Things fall apart, Centre cannot hold" (Second Coming") ಮೂಲ ಕವನದ ಗಂಭೀರ ತಾತ್ವಿಕ ಪ್ರವಾದಿ ಹಿನ್ನೆಲೆ ತಪ್ಪಿ ಈ ಸತ್ವಶಾಲಿಯಾದ ಸಾಲು ಕವಿಯ "ಜೀರ್ಣೋದ್ಧಾರ" ಕವನದ ನಡುವೆ ಬಂದಿದೆ. ಹನಿಹನಿಯ ಈ ಕವಣೆ ಕಲ್ಲು ತೂರಿ ಹೊಡೆಯುವ, ಕಾರೊಡಲ ಮೇಘಗಳಿಂದ ಹೊಳೆ ಹಳ್ಳ ನೆರೆ ತುಂಬಿ ಹುಚ್ಚೆದ್ದು ಎಬ್ಬಿಸಿದ ಹಾವಳಿಯ ಓಘದಲ್ಲಿ ಸೇತುವೆ ಕೊಚ್ಚಿ ಹೋದ ಚಿತ್ರದ ಕೊನೆಗೆ ಈ ಪಙ್ತಿ ಬರುತ್ತದೆ. ಇತ್ತ ನೆಲದಲ್ಲಿ ನೆರೆಹಾವಳಿ ಅತ್ತ ಬಸಿರು ಬಸಿರೇ ಬಿರಿದು ಬಕ್ಕರಿಸುವ ಕಣ್ಣು ಕೆಕ್ಕರಿಸುವ ಸೌರಬಿಂಬದಲ್ಲಿಯ ಸ್ಫೋಟ, ಆಕಾಶದಲ್ಲಿ ತಾಸಿಗಿಪ್ಪತ್ತು ಅಪಘಾತ, ಪ್ರಪಂಚದಲ್ಲಿ ರಂಪು ಸಂಪು, ಕೂಟ ಕೂಟಗಳಲ್ಲಿ ಗುಂಪು ಇದಕ್ಕೆಲ್ಲ ಕಾರಣ ? ಕೇಂದ್ರ ಹಿಡಿದಿಡಲಾರದು. ಅಂತೆಯೇ ವಸ್ತು ಜಾತ ಸಮಸ್ತ ಅಸ್ತ ವ್ಯಸ್ತ; ಸಿಡಿದು ಬೀಳುತ್ತಿವೆ ! ಅಂದರೆ ಇಲ್ಲಿ ಕಣವಿ ಯೇಟ್ಸನ ನುಡಿಯಲ್ಲಿ ತನ್ನ ಆಶಯವನ್ನೇ ನಿರೂಪಿಸಿದಂತಿದೆ. ಆ ನುಡಿಯ ಮೂಲ ಕವನದ ಭಾವ ಇಲ್ಲಿ ಧ್ವನಿತವಾಗುವದಿಲ್ಲ.

ಸಾಮಾನ್ಯವಾಗಿ ಕವಿಯು ಪ್ರಯೋಗಿಸುವ ಶ್ರುತನಿಯೋಜನೆಗಳಲ್ಲಿ ಇಂಥ ಅವತರಣಿಕೆಗಳು—ಪೂರ್ತಿವಾಕ್ಯಗಳಿರಲಿ, ವಾಕ್ಯಾಂಶಗಳಿರಲಿ ತನ್ನದೇ ತಿರುವನ್ನು ತೋರಿಸುತ್ತವೆ.

"ಅಪರಾವತಾರ" ಕವನದ ಮುಗಿತಾಯ ಭಗವದ್ಗೀತೆಯ ಅರ್ಜುನನ ಒಂದು ಮಾತಿನಲ್ಲಿ ಒದಗುತ್ತದೆ. ಅಲ್ಲಿ ಶ್ರೀಕೃಷ್ಣನ ವಿರಾಟ್ ವಿಶ್ವರೂಪವನ್ನು ಕಂಡು ಬೆರಗಾಗಿ ಬೆದರಿ ಹೌಹಾರಿದ ಅರ್ಜುನ ಅದನ್ನು ಸುತ್ತಿಸುವ ಶ್ಲೋಕವಿದು.

> ನಮೋನಮಸ್ತೇಽಸ್ತು ಸಹಸ್ರ ಕೃತ್ವಃ
> ಪುನಶ್ಚ ಭೂಯೋಪಿ ನಮೋ ನಮಸ್ತೇ.

ಅರ್ಜುನನಂತೆ, ಈ ಲೋಕ ಕಂಟಕ ಸರ್ವಾಂತರ್ಯಾಮಿಯಾದ ಕುಹಕ ಕುಟಿಲ ಉಪದ್ವ್ಯಾಪಿಯಾದ ಕಲಿಪುರುಷನಿಗೆ ಹೆದರಿ ಕವಿಯು ಮತ್ತೆ ಮತ್ತೆ ನಮಸ್ಕರಿಸುತ್ತಾನೆ. ದುರ್ಜನರಿಗೆ ಪ್ರಥಮ ನಮಸ್ಕಾರವಂತೆ. ಆದರೆ ಅದನ್ನಷ್ಟೇ ಹೇಳಿದರೆ ಕವಿಗೆಲ್ಲಿ ತೃಪ್ತಿ ? ಅದಕ್ಕಾಗಿ ಕಾಲನ ವಿಶ್ವರೂಪಕ್ಕೆ ತಲೆಬಾಗುವ ಅರ್ಜುನನ ಮಾತನ್ನು ಬಳಸಿ ಅದಕ್ಕೇ ಒಂದು ಅನನ್ಯ ಮೆರುಗನ್ನು ತಂದಿದ್ದಾನೆ.

'ಚಿಗುರಿತು ಈ ಹುಲುಗಲ' ಈ ಕವನದಲ್ಲಿ ಕವಿಯ ನಿತಾಂತ ನಿರ್ಭರವಾದ ನಿಸರ್ಗ ಪ್ರೇಮವು ಮತ್ತೆ ಆವಿರ್ಭವಿಸಿದೆ. ಅಲ್ಲಿಯ ಈ ನುಡಿಯನ್ನು ಗಮನಿಸಿರಿ :

ಗಾಳಿಯಲ್ಲಿ ಗಿಲಕು ಗಿಲಕು
ಕಾಯಿಯಲ್ಲಿ ಬೀಜವು.
'ಸಂಭವಾಮಿ ಯುಗೇ ಯುಗೇ'—
ಒಳಗಿನವುನ ತೇಜವು.

ಈ ಮಾತಿನ ಧ್ವನಿ ನಿಬಿಡತೆಯನ್ನು ಮೆಚ್ಚದವನು ಮಂಕನು. ಭಗವಂತನಶ್ರೀಮದ್ವಿಭೂತಿಮತ್ ಸತ್ವವು ಹೇಗೆ ಪುನಃ ಪುನಃ ಈ ಲೋಕದ ಕಲ್ಯಾಣಕ್ಕೆ ಅವತಾರ ತಾಳುವದೆಂಬುದರ ಆಶ್ವಾಸನೆ ಭಗವದ್ಗೀತೆಯಲ್ಲಿ ಶ್ರೀ ಕೃಷ್ಣ ಪರಮಾತ್ಮ ಸಾರಿದ್ದು ಇಲ್ಲಿ ಈ ಕವಿ, ಈ ಮಣ್ಣಿನ ಮರೆಯೊಳು ಅಡಗಿದಂಥ ಹೊಸ ಸೃಷ್ಟಿಯಲ್ಲಿ ತೊಡಗಿದ ಜೀವಸ್ಫೂರ್ತಿಯದೇ ಉದ್ಗಾರವಾಗಿ ಇಲ್ಲಿ ಉಗ್ಗಡಿಸಿದ್ದಾರೆ. ಇಲ್ಲಿ ಈ ಗೀತಾ ವಚನದಿಂದ ಗಿಡಮರ ಚಿಗುರುವ ಚೇತನದ, ಚೇತರಿಸಿಕೊಂಡೇಳುವ ಚೆಲುವಿಗೆ ಒಮ್ಮೆಲೆ ಒಂದು ದೈವಿಕತೆಯ ಪವಿತ್ರ ಪರಿವೇಷ ಕಟ್ಟಿದಂತಾಗಿದೆ. ಇದನ್ನೇ ಕವಿಯು ಕನ್ನಡದಲ್ಲಿಯೇ ಹೇಳಿದರೆ ಈ ತೇಜದ ಬೀಜ ಹೀಗೆ ಬೆಳಗುತ್ತಿದ್ದಿಲ್ಲ.

ಹಾಗೆಯೇ "ವಿನೂತನ ಕವಿಯ ಕೈಫಿಯತ್ತು" ತುಂಬ ಕೌತುಕದಿಂದಲೇ ಆರಂಭವಾಗಿದೆ :

ಏನೊ ಚಂದ್ರಪೆಂಗೆ
ನಾಚ್ಕೆ ಇಲ್ವೆ ನಿಂಗೆ ?—

ಯೆಂಡಗುಡ್ಕರತ್ನ ತನ್ನ ಹೆಂಡದ ಅಮಲಿನಲ್ಲಿ ಚಂದ್ರನನ್ನೇ ಹಳಿಯುವ ಈ ಮಾತು ಈ ಕವನದ ಭಾವಕ್ಕೆ, ವ್ಯಂಗ್ಯಕ್ಕೆ, ಕೆಲವೊಂದು ನವ್ಯರೆಂಬ ಕವಿಗಳ ಅಪಸ್ಮಾರ ಪ್ರಜ್ಞೆಗೆ ಜೀವಶ್ರುತಿ ಮೀಟಿದಂತೆಯೇ ಆಗಿದೆ. ತನ್ನ ಅಖಂಡ ವ್ಯಂಗ್ಯ ಧ್ವನಿಯ (Satire) ತನದಿಂದ ಇದೊಂದು ಈ ಕೋಟಿಯ ಮಾದರಿಯ ಕವನ. ಚಂದ್ರನೂ ಸೋಮ— ಸೋಮರಸವೂ ಮದ್ಯಕ್ಕೆ ಒಂದು ಪುರಾತನ ಪವಿತ್ರ ಪರ್ಯಾಯ. ಬೆಳದಿಂಗಳನ್ನೇ ಹೀಗೆ ಜರೆಯುವಲ್ಲಿ ಈ ವಿನೂತನ ಕವಿ ಒಮ್ಮೆಲೆ ತನ್ನ ಜಾತಿ ಯಾವದೆಂದು ಈ ಒಂದು ಉದ್ಧರಣದಿಂದಲೇ ಉದ್ಘೋಷಿಸಿದಂತಿದೆ.

ಇನ್ನೂ ಒಂದೆರಡು ಇದೇ ಬಗೆಯ ವಾಕ್ಯಾಂಶಗಳ ಶ್ರುತನಿಯೋಜನೆ : 'ಕೃತಾರ್ಥ' ಒಂದು ಸಾಮಾಜಿಕ ಜೀವನ ವಿಮರ್ಶೆಯ ಕವನ. ಅಲ್ಲಿ–

ಬೆಳಗಾಯಿತೋ—
ಕಿಟಕಿ-ಬಾಗಿಲಿನಿಂದ ಹೊರಗೆ ಚೆಲ್ಲುತಾರೆ :
ಕಸ–ಕಡ್ಡಿ, ಹಾಳೆ, ಹಣ್ಣಿನ ಸಿಪ್ಪೆ (ಸುಡುಗಾಡು ಶುಂಠಿಯ ಕೊಂಬು)
ಎಮ್ಮ ಮನೆಯಂಗಳದಿ ಬೆಳೆಯುವದು ತಿಪ್ಪೆ,

ಅಂತೆಯೇ–"ಕಾಲಪುರುಷನಲ್ಲಿ ಕವಿಗಳ ಕೋರಿಕೆ" ಹೀಗೂ ಒಕ್ಕಣಿಸುತ್ತದೆ–

ನಮ್ಮ ಮನದಂಗಳದಿ ಬೆಳೆದಷ್ಟು ಕವಿತೆಗಳ
'ನಿನ್ನ ಮಡಿಲೊಳಗಿಡಲು ತಂದಿರುವೆವು'.

ಈ ಸಂದರ್ಭಗಳಲ್ಲಿ ವಿ.ಸೀ.ಯವರ ಸುಪ್ರಸಿದ್ಧ "ಮನೆ ತುಂಬಿಸುವದು" ಈ ಕವಿಯ ಪ್ರತಿಭಾ ಸ್ಪರ್ಶದಿಂದ ರಸ ವ್ಯಂಜನೆಯಲ್ಲಿ 'ನವತಾಂ ಉಪೈತಿ' ಎಂಬಂತೆ ಕೃತಾರ್ಥವಾಗಿದೆ.

ಇದೇ ಬಗೆಯ ಅಣಕದೆರಕದಲ್ಲಿ 'ಜಗದೇಕಮಲ್ಲ' ಕವನದಲ್ಲಿ ಅಷ್ಟೇ ಸಂದರ್ಭೋಚಿತವಾಗಿ ಸರ್ವಜ್ಞನ ಮಾತೂ ಸಾರ್ಥಕವಾಗಿ ಬಂದಿದೆ—

ಎಲ್ಲ ಬಲ್ಲವರಿಲ್ಲ,
ಬಲ್ಲಿದರು ಬಹಳಿಲ್ಲ.
ಏಕಿಲ್ಲ ? ಇವನಿಲ್ಲವೆ ನಮ್ಮ ಜಗದೇಕಮಲ್ಲ ?

ವಿಷಮ ತಾರತಮ್ಯದಿಂದ (contrast) ಹೃದಯಂಗಮವಾಗುವ ಈ ಛಾಯಾವತರಣಿಕೆ ನೋಡಿ :

ಮುದ್ದಾಗಿ ತೂರಿದವ ಹದ್ದಾಗಿ ಹಾರಿದ.
ಉಳಿದ ಪಕ್ಷಿಗಳೇನು ನನ್ನಂತೆ ಹಾರುವವೆ ? ('ಅಪರಾವತಾರ')

ಎಂಬಲ್ಲಿ ವರಕವಿ ಕುವೆಂಪು ಅವರ "ನಾ ಹಾರಿದೆತ್ತರಕೆ ನೀ ಹಾರಬಲ್ಲೆಯಾ ?" ಎಂದು ಗರುಡ ಗಮನದ ಮಹಾಕವಿ ಪಾದಚಾರಿ ವಿಮರ್ಶಕ ಕವಿಗೆ ಹಾಕಿದ ಸವಾಲು ನೆನಪಾಗಿ ಈ ಹದ್ದಿಗೂ ಆ ಗರುಡನಿಗೂ ಇರುವ ವ್ಯತ್ಯಾಸದ ಅರಿವಿನಿಂದ ಈ ವ್ಯಂಗ್ಯ ಇನ್ನೂ ಉತ್ಕಟವೆನಿಸುತ್ತದೆ. ಇಂಥ ಛಾಯೊಬಿಂಬ ಅಣಕವೂ ಅಲ್ಲ, ಅನುಕರಣವೂ ಅಲ್ಲ. ಇವೆರಡನ್ನು ಮೀರಿದ ಒಂದು ಮನೋಜ್ಞತೆಯ ಪ್ರಯೋಗ. ಇದರ ಒಂದು ಉತ್ತಮ ಉದಾಹರಣೆ –'ಕಾಮಾಕ್ಷಿ'ಯ ಈ ಆರಂಭ:

ಆ ಗಿಡಾ ಈ ಗಿಡಾ
ಒಂದೊಂದೂ ಜೇಂಗೊಡಾ
ಯಾವ ಹಸಿರೊ, ಯಾವ ಹೆಸರೊ ?
ತರುಲತೆಗಳ ತೋರಣಾ

ಇಲ್ಲಿ ವರಕವಿ ಬೇಂದ್ರೆಯವರ "ಆ ಮುಖಾ–ಈ ಮುಖಾ" ಕವನದ ಸುಖವೂ ಅದರ ಮುಂದಿನ "ಯಾವ ಗಂಡೊ ಯಾವ ಹೆಣ್ಣೊ !" ಎಂಬ ಪಂಕ್ತಿಯೂ ನೆನಪಿನ ಮರೆಗೆ ಸುಳಿದು ಇವೆರಡರ ಸನ್ನಿಕರ್ಷದಿಂದ ಒಂದು ವಿಚಿತ್ರ ಹೃದ್ಯತೆ ಅನಿಸುತ್ತದೆ. ಇದೇ ಮಾಟ 'ಗುಬ್ಬಿ'ಯ ಬಗೆಗೂ ಕಂಡುಬರುತ್ತದೆ.

ಈ ಪುಕ್ಕಲು ಪ್ರಾಣಿಯ ಧೈರ್ಯಕ್ಕೆ
ಬರೀ ಎರಡು ರೆಕ್ಕೆ.

ಇಲ್ಲಿಯೂ ಬೇಂದ್ರೆಯವರ "ಮುಗಿಲಿಗೆ ರೆಕ್ಕೆಗಳೊಡೆದವೊ ಅಣ್ಣಾ" ಎಂಬ ಸಾಲು ನೆನಪಾಗಿ ಇಲ್ಲಿ ಈ ಕವಿ ಅದೇ ಕಲ್ಪನೆ ತನ್ನದೆ ಮೋಡಿಯಲ್ಲಿ ಅರಳಿಸಿದ್ದು ಸ್ವಾರಸ್ಯಕರ ವಾಗಿದೆ. ಇದೇ ಮಾತ 'ರಂಜನಾ'ಳ ಬಗೆಗೆ–

"ಮೂಗು ಹಟಮಾರಿತನಕೊಡೆದ ಮೊಗ್ಗು"—ಎಂಬಲ್ಲಿಯೂ "ಗಾಳಿಗೊಡೆದ ಬುದ್ಬುದ"-ಹಿನ್ನೆಲೆಯ ಇಂಚರವಾಗಿದೆ. ಅದೇ ರೀತಿ "ದೀಪಧಾರಿ"ಯನ್ನು ಬಣ್ಣಿಸುವಾಗ

ಎದ್ದನೋ
ತೊತ್ತಳಂದುಳಿವ ಯಜ್ಞದ ಕುದುರೆ —ಎನ್ನುವಾಗ ಕವಿ ಲಕ್ಷ್ಮೀಶನ ಲವ "ಎತ್ತಣ ತುರಂಗವಿದು—ತೊತ್ತಳದುಳಿವುದು ?" –ಎಂಬ ದಿಟ್ಟಮಾತು ಹಿಂದಿನಿಂದ ಪಡಿ ನುಡಿಯುತ್ತದೆ. ಲವನೂ ಕವಿಯ 'ದೀಪಧಾರಿ'ಯಂತೆ ಪುಟ್ಟ ಬಾಲಕನೇ. ಇಲ್ಲಿ ಈ ಬಾಲಕನೇ ಯಜ್ಞಾಶ್ವನಂತೆ ಪುಂಡಾಡುತ್ತಿದ್ದಾನೆ.

"ಎರಡು ರಂಗದ ಯುದ್ಧ". "ಯುದ್ಧರತಿಯ ನಂಜೇರಿ ಉರಿದಿತ್ತು ಪಶ್ಚಿಮ ರಂಗ" ಎಂದಾಗ ಅಂಬಿಕಾತನಯದತ್ತರ "ಮುಗಿಲ ಮಾರಿಗೆ ರಾಗರತಿಯ ನಂಜು ಏರಿತ್ತ"–ಎಂಬ ಸುರಮ್ಯ ಸೊಲ್ಲು ಈ ರತಿ ಆ ರತಿಗಳ ನಂಜಿನ ಬೀಭತ್ಸ ಭೇದ ಎದೆಯನ್ನು ಝಲ್ಲೆನ್ನಿಸುತ್ತದೆ. ಆ ರಾಗರತಿಯ ನಂಜೂ ಪಶ್ಚಿಮ ರಂಗದ್ದೇ. ಆದರೆ ಅದು ಪ್ರಣಯದ್ದು. ಇದು ಪ್ರಳಯದ್ದು. ಕವಿಯು ಈ 'ನಂಜೇರಿಸುವ ರತಿ'ಯ ಹೊರತು ಇನ್ನಾವ ಪದಗಳನ್ನು ಬಳಸಿದರೂ ಈ ಚಿತ್ರ ಇಷ್ಟು ಕಾತರ ಧ್ವನಿ ಮಿಡಿಯುತ್ತಿದ್ದಿಲ್ಲ.

'ಬರೆಯಲೊಲ್ಲದ ಕವಿತೆ' ಹೆಚ್ಚು ಆಧುನಿಕ. ಅಲ್ಲಿ ಆದಿಕವಿ ಪಂಪನ ನುಡಿ ಹೇಗೆ ನವಿರಾಗಿ ನೇಯ್ದುಕೊಂಡಿದೆ ನೋಡಿ—

ಪರಿಮಳದ ಹೂವ ಹಣತೆಯಲಿ ಬೆಳಗುವವು
ಲೌಕಿಕ ಜಿನಾಗಮಗಳೆರಡೂ.

ಪ್ರಕೃತಿಯ ಆ ನಿಪ್ಪುರಾಣದೊಂದಿಗೆ ಕವಿಯ ನವಜೀವನದ ಲೌಕಿಕ ದರ್ಶನವೂ ಹೂವಿನಲ್ಲಿ ಪರಿಮಳದಂತೆ ಏರಕವಾಗಿ ಬೆಳಗಿದೆ! ಇಂಥ ಒಂದು ಶ್ರೀಮತಸಿಯೋಜನದಲ್ಲಿ ಭೂತ ವರ್ತಮಾನಗಳು ಕಾವ್ಯ ದೀಪ್ತಿಯಲ್ಲಿ ಒಂದಾಗುವವು.

"ಕಾಲ ನಿಲ್ಲುವದಿಲ್ಲ" ಸರಿ, ಅದರ ಗತಿಲಯದ ಅರಿವು ನಮಗೆ ಆಗುವ ಒಂದು ಪರಿ. "ಒಳಹೊರಗೆ ಉಸಿರು ಆಡುತ್ತಿದೆ ನಿರಾಯಾಸ", ಇದಕ್ಕೆ ಕವಿ ಕೊಡುವ ಅರ್ಥ ಪುಷ್ಟಿ ಕನಕದಾಸರ ಈ ಜನಪ್ರಿಯ ಸೊಲ್ಲಿನ ಒಂದು ವಕ್ರ ವಿನ್ಯಾಸದಿಂದ: "ಬಯಲು ಆಲಯದೊಳಗೊ, ಆಲಯವು ಬಯಲೊಳಗೊ?" ದಾಸರ ದರ್ಶನ ಇಲ್ಲಿ ದೃಷ್ಟಾಂತ

ವಾಗಿದೆ. ಇಲ್ಲಿ ಬಯಲು ಹೊರ ಜಗತ್ತು. ಆಲಯ ನಮ್ಮ ಅಂತರ್ಯ. ಶ್ವಾಸ ಆಲಯದಲ್ಲಿ, ಉಚ್ಛ್ವಾಸ ಬಯಲಿನಲ್ಲಿ-ಕುಂಭಕ ರೇಚಕವಾಗಿ ಹರಿಯುವ ಅಖಂಡ ಕಾಲಪ್ರವಾಹ!

ದಾಸರ ಪದ್ಯ ಪಙ್ಕ್ತಿಯೊಂದು ತನ್ನ ವ್ಯಂಗ್ಯಾರ್ಥಕ್ಕೆ ದುಡಿಸಿಕೊಂಡ ಇನ್ನೊಂದು ಉದಾಹರಣೆ :

ಹಸುರು ಜೋಡಿನ ಹೊಂಡದಲ್ಲಿ ಬಡಕಲು ಎಮ್ಮೆ
ಈಸಬೇಕೋ ಇದ್ದು ಜೈಸಬೇಕು
—ಎಲ್ಲಿಂದಲ್ಲಿಗೆ ಮಾತಿನ ಮಿಂಚು ಹೊಡೆಯಿತು !

ಈ ಅವತರಣಿಕೆಗಳ ವಿಚಿಕಿತ್ಸೆ ಯೇಟ್ಸ ಕವಿಯು ವಾಕ್ಯ ನಿಯೋಜನೆಯಿಂದ ಪ್ರಾರಂಭ ಮಾಡಲಾಯಿತು. ಅದೀಗ ಇನ್ನೊಬ್ಬ ಆಂಗ್ಲ ಕವಿಯ ಮಾತಿನ ಪಡಿನುಡಿಯಿಂದ ಮುಗಿಸುತ್ತೇನೆ.

"ಶಿಶು ಕಂಡ ಕನಸಿ"ನಲ್ಲಿ ಕವಿತೆಯ ಎರಡನೆಯ ಪರಿಚ್ಛೇದದ ಎರಡನೆಯ ಭಾಗ ಹೀಗೆ ಆರಂಭವಾಗುತ್ತದೆ :

ನಾನು (ಬೆಳೆದ ಮಗು)
ಮೂರು ಮಕ್ಕಳ ತಂದೆ
ಮೂರು ಸಲ ಮಗುವಾಗಿ ಮತ್ತೆ ಬೆಳೆದೆ.

ಇದನ್ನೋದಿದೊಡನೆ ನೇರ ನೆನಪಾಗುವುದು ಕವಿ ವರ್ಡ್ಸ್‌ವರ್ಥನ ಈ ಪ್ರಸಿದ್ಧ ವಿರೋಧಾಭಾಸದ ಪಙ್ಕ್ತಿ. "Child is the father of man." ಈ ಮಾತಿನ ಮರ್ಮವನ್ನು ಕಣವಿಯವರು ಇನ್ನಷ್ಟು ಅರ್ಥಗರ್ಭಿತವಾಗಿಸಿದ್ದಾರೆ-ಮನನೀಯಗೊಳಿಸಿದ್ದಾರೆ ಇಲ್ಲಿ. ತಂದೆಯೂ ಬೆಳೆದವ-ಗು. ಇಂದಿನ ಮಗು ನಾಳಿನ ತಂದೆ. ಇದು ಆಂಗ್ಲ ಕವಿಯ ಭಾವ. ಇಲ್ಲಿ ಕವಿಯೂ ಇನ್ನೂ ಆಳಕ್ಕೆ ನಿಲುಕಿದ್ದಾನೆ. ತನ್ನ ಮೂರು ಮಕ್ಕಳ ಬಾಲ್ಯದಲ್ಲಿ ತನ್ನ ಬಾಲ್ಯವನ್ನು ಮೂರುಸಲ ಮರುಕಳಿಸಿ ಅನುಭವಿಸಿದ್ದಾನೆ. "ಆತ್ಮಾವೈ ಪುತ್ರ ನಾಮಾಸಿ" ಎಂದಿದೆ ಉಪನಿಷತ್ತು. ತಾನೇ ಮಗನಾಗಿ ಹೆಸರು ತಾಳುತ್ತಾನಂತೆ ಆತ್ಮ. ಕನ್ನಡದ 'ಮಗ-ಮಗಳ್' ಈ ದೃಷ್ಟಿಯಿಂದ ಅತ್ಯಂತ ಹುರುಳಿನ ಶಬ್ದ. ಉಪನಿಷತ್ತಿನ ಉಕ್ತಿಯನ್ನೇ ಈ ಕನ್ನಡ ಮಾತು ಜನಜನಿತವಾಗಿ ಒಡಮೂಡಿಸಿದಂತಿದೆ. 'ಮಗುಳ್' ಅಂದರೆ ಮತ್ತೆ-ತಾನೇ ಮತ್ತೆ ಹುಟ್ಟಿ ಬಂದವನೇ 'ಮಗ' ('ಮರಳಿಬಂದ ಪ್ರಾಣಿಯೇ 'ಮರಿ' ?) ಮಕ್ಕಳ ಬಾಳಿನೊಂದಿಗೆ ತಂದೆಯ ಈ ತಾದಾತ್ಮ್ಯವೇ ನಿಜವಾದ ವಾತ್ಸಲ್ಯ. ವರ್ಡ್ಸ್‌ವರ್ಥಕವಿಯ ಇಣುಕು ನೋಟ ಇಲ್ಲಿ ಇಡಿಯ ದರ್ಶನವಾಗಿ ವ್ಯೈವೆತ್ತಿದೆ :

* *

ಹೊಸ ಹುರುಳು ತುಂಬುವ ಇದೇ ಹದ-ಹವಣಿಕೆಯನ್ನು ಕವಿ ಅನೇಕ ಬಿಡಿ ಪದ ಪ್ರಯೋಗಗಳಲ್ಲಿಯೂ ಚಾರಿತ್ರಿಕವಾಗಿ, ಪೌರಾಣಿಕವಾಗಿ, ಸಾಹಿತ್ಯಿಕವಾಗಿ ಶ್ರೇಯಸ್ಸಿ

ನಿಂದ ಕೈಗೂಡಿಸಿದ್ದಾರೆ. ಈ ಬಗೆಯಲ್ಲಿ ಅತಿ ಸಹಜವೆಂದರೆ ಅವರು ವರ್ಣಿಸುವ ವ್ಯಕ್ತಿಗಳ ಕೃತಿಗಳ ಹೆಸರುಗಳನ್ನು ಅರ್ಥಪೂರ್ಣವಾಗಿ ವ್ಯಕ್ತಿತ್ವಕ್ಕೆ ಪರಿಚಯಕವಾಗಿ ಉಪಯೋಗಿಸಿಕೊಳ್ಳುವದು ; ಮಧುರಚೆನ್ನರ 'ಕಾಳರಾತ್ರಿ' 'ಮಧುರಗೀತ', ಗೋಕಾಕರ 'ಬಾಳದೇಗುಲದಲ್ಲಿ', 'ದ್ಯಾವಾ-ಪೃಥಿವಿ' ಇತ್ಯಾದಿ. ಅನಂತರ ಕಾವ್ಯವಸ್ತುವಿಗೆ ಸಂಬಂಧಪಟ್ಟ ಕೆಲವೊಂದು ಚಾರಿತ್ರಿಕ ಇಲ್ಲವೆ ಸಾಂಸ್ಕೃತಿಕ ಮಹತ್ವದ ಶಬ್ದಗಳು "ಎರಡು ರಂಗದ ಯುದ್ಧ"ದಲ್ಲಿ:

ತನ್ನ ಮಕ್ಕಳ ಹೆಣವ ಹೊತ್ತು ಸಾಗಿಸಿದ ಪದ್ಮಾನದಿ
ಹರಿದಿತ್ತು ನಿರಂತರ ಮುಕ್ತಿ ವಾಹಿನಿಯಾಗಿ,

ಇಲ್ಲಿ ಬಾಂಗ್ಲಾ ವಿಮೋಚನೆಯ ಧೀರ ಪಡೆಗಳ ದಂಡು ಮುಕ್ತವಾಹಿನಿ. ಅವರ ಧುರಂಧರಿಯ ನಿರ್ವಾಹ ಪದ್ಮಾನದಿಯಂತೆಯೇ ನಿರಂತರ ವಾಹಿನಿ. ಎಂಥ ರೋಮಾಂಚಕಾರಿಯಾದ ಕಟಾಕ್ಷ ಸಂಕೇತ ! ಹಾಗೆಯೇ ಬೇಂದ್ರೆ 'ನಡೆದದ್ದೆ ಸಾಧನ ಕೇರಿ' ಈ 'ಅರಳು ಮರಳಿನ' ಕವಿ ಬಣ್ಣಿಸಿದ "ಮಳೆಯು ಎಳೆಯುವ ತೇರಿ"ಗೂ ಕವಿಯು 'ಧಾರವಾಡದಲ್ಲಿ ಮಳೆಗಾಲ' ಎಂಬ ಕವನದಲ್ಲಿ ಶ್ರಾವಣದ ಬಳಗದೊಂದಿಗೇ ಸ್ಥಾನ. ತೇರಿಗೆ ಬಂದಿದೆಯಂತೆ ಶ್ರಾವಣದ ಆ ಬಳಗ !

'ಘಟಸ್ಥಾಪನೆ' ನವರಾತ್ರಿಯ ಹಬ್ಬದ ಆರಂಭದ ಒಂದು ಪರ್ವ. ಆದರೆ ಈ ತುಸು ಬಿರುಸು ಶಬ್ದವನ್ನು ಎಷ್ಟು ಅರ್ಥ ಪೂರ್ಣವಾಗಿ ಬಳಸಿದ್ದಾನೆ ಮಳೆಗಾಲವನ್ನು ಚಿತ್ರಿಸುವಾಗ !

ಘಟಸ್ಥಾಪನೆಯಾಯ್ತು !ಮೋಡದ ಕೊಡವು ಬುಡಮೇಲಾಯಿತು.

ಇಲ್ಲಿ 'ಘಟ'ದ ಅರ್ಥ ಹೊಸರೂಪವನ್ನೇ ಹೊಂದಿತು. ಅದು ಮೋಡದ ಕೊಡ. ಬರಿದಾಗಿ ಒಂದೆಡೆಗೆ ಈಗ ಇಡಲಾಯಿತು ! 'ಮೇಘೋಪಾಸನೆ' ಯಲ್ಲಿ ಬರುವ ಈ ಪಾಠ ಯಾತರ ನೆನಪು ಮೀಟುತ್ತದೆ ?

ಕರುಣೆ ಕರಗಿ ನೀರಾಗಿ ಸುರಿವ ತೆರ ಮೋಡದೊಡಲಿನಿಂದ–

ಇಲ್ಲಿ ಶೇಕ್ಸಪಿಯರನ ಜಗತ್ಪ್ರಸಿದ್ಧ ಸೊಲ್ಲು ತಿರುವು ಮುರುವಾಗಿದೆ.

"Quality of merey is not strained
It droppeth as a gentle rain from heaven..."

ಶೇಕ್ಸಪಿಯರ ಕರುಣೆಯನ್ನು ಬಾನಿನಿಂದ ಮೆಲ್ಲಗೆ ಜಿನುಗುವ ಮಳೆಗೆ ಹೋಲಿಸಿದರೆ ನಮ್ಮ ಕವಿ ಮೋಡದೊಡಲಿನಿಂದ ಬೀಳುವ ಮಳೆಯನ್ನೇ ಕರಗಿ ನೀರಾಗಿ ಸುರಿವ ಕರುಣೆಗೆ ಹೋಲಿಸಿದ್ದಾನೆ, (ಆದರೆ ನಮ್ಮ ಮಹಾಕವಿ ಕುವೆಂಪು "ಸ್ಮಶಾನ ಕುರುಕ್ಷೇತ್ರ"ವೆಂಬ ತಮ್ಮ ಕಾವ್ಯರೂಪಕದಲ್ಲಿ ಯುಧಿಷ್ಠಿರನ ಬಾಯಿಯಲ್ಲಿ ಆ ಕರುಣಾಗುಣದ ಕುರಿತ ಪೋರ್ಶಿಯಾಳ ಭಾಷಣವನ್ನು ಇಡಿಯಾಗಿಯೇ ಇದ್ದಕ್ಕಿದ್ದಂತೆ ಕನ್ನಡಿಸಿ ನುಡಿಸಿದ್ದಾರೆ!)

ಸೂರ್ಯನ ಏಕಚಕ್ರಾಧಿಪತ್ಯ ಸಂದು ರಾತ್ರಿ ಬಾನಿನಲ್ಲಿ ತಾರೆಗಳ "ಪ್ರಜಾಪ್ರಭುತ್ವ' ಸ್ಥಾಪನೆಯಾದ ಈ ಪರಿಯ ಸೊಬಗನ್ನು ಬಣ್ಣಿಸಲು ಕವಿ ಹೀಗೆ ಪ್ರಾರಂಭಿಸುತ್ತಾನೆ.

ಮುಳುಗುತಿಹ ನೇಸರನು ಮುದಿಸಿಂಹನಂತಾಗಿ
ಪಶ್ಚಿಮಾದ್ರಿಯ ಗವಿಯ ಸೇರುತಿಹನು.

ಇಲ್ಲಿ ಮುಳುಗುವ ಸೂರ್ಯ ಮುದಿ ಸಿಂಹನೇ ಏಕಾಗಬೇಕು? ಬ್ರಿಟಿಶ್ ಸಾಮ್ರಾಜ್ಯದ ಚಿಹ್ನ-ಸಂಕೇತ ಸಿಂಹ. ಈ ಬ್ರಿಟಿಶ್‌ಸಿಂಹ ಮುದಿಯಾಗಿ ಬಸವಳಿದು ತೊಲಗಿದ. ಬ್ರಿಟಿಶ ಸಾಮ್ರಾಜ್ಯವೇ ಮುಳುಗಿತು. ಅದು ತನ್ನ ಪಶ್ಚಿಮದ ಗವಿಯನ್ನು ಸೇರಿತು. ಬ್ರಿಟಿಶ್ ಸಾಮ್ರಾಜ್ಯದ ಮೇಲೆ ಸೂರ್ಯನೆಂದೂ ಮುಳುಗುವದಿಲ್ಲವೆಂಬ ಜಂಭದ ಬಡಿವಾರಕ್ಕೆ ಭಂಗ ಬಂದು ಆ ಸಾಮ್ರಾಜ್ಯವೇ ಅಸ್ತವಾಯಿತು! ಇದೆಲ್ಲ ಅರ್ಥದ ವ್ಯೂಹ ಆಯಾಲದಂತೆ ತಲೆಗೆ ಸುತ್ತಿಕೊಂಡು ಮುಳುಗುವ ಸೂರ್ಯ ಮುದಿಸಿಂಹನಾಗಿ ಬಿಟ್ಟ!

'ವಿಶ್ವಕವಿಯ ದೃಶ್ಯಕಾವ್ಯ'ದಲ್ಲಿ ಈ ಕವಿಯು "ಮೇಘದೋಲೆಯಲಿ ಮಿಂಚು ಬಳ್ಳಿ ರುಜುಮಾಡಿ ಬರೆಯುತ್ತಿರು"ವಂತೆ ಉತ್ಪ್ರೇಕ್ಷಿಸಿದ್ದಾರೆ. ಇದನ್ನೋದಿದಾಗ ರವೀಂದ್ರನಾಥ ಟಾಗೋರರು ವ್ಯೋಮಪಟದ ನೀಲದಲ್ಲಿ ಪಳಕ್ಕನೆ ಹೊಳೆಯುವ ಅಂಕು ಡೊಂಕಿನ ಮಿಂಚನ್ನು 'ದೇವರ ರುಜುವಾತು' (God's signature) ಎಂದು ವರ್ಣಿಸಿದ್ದು ನೆನಪಾಗುತ್ತದೆ.

'ಅಶ್ರುತಗಾನ' ಕವನದಲ್ಲಿ—ಈ ಹೆಸರೂ ಕೀಟ್ಸ್ ಕವಿಯದೇ ಅಲ್ಲವೆ ?

—"ಬಿದಿರ ಮೆಳೆಯಲಿ ಗಾಳಿ ಕೊಳಲ ಬಾರಿಸಿದಂತೆ" ಎಂಬ ಉಪಮೆ ಬಂದಿದೆ. ಇದರ ಬೆನ್ನಿಗೆ ಹಿಮಾಲಯದ ದರಿಗಳಲ್ಲಿ ಬಿದಿರು ಮೆಳೆಗಳ ರಂಧ್ರಗಳನ್ನು ತುಂಬಿ ಊದಿ ಗಾಳಿ, ಕಿನ್ನರರ ಹಾಡುಗಾರಿಕೆಗೆ ಹಿಮ್ಮೇಳದ ಶ್ರುತಿ ಹಿಡಿಯುತ್ತಿತ್ತೆಂಬ ಕಾಲಿದಾಸನ ಉತ್ಪ್ರೇಕ್ಷೆ ನೆನಪಾಗಿ ನಾವು ಪುಲಕಿತರಾಗುತ್ತೇವೆ. (ಯಃ ಪೂರಯನ್ ಕೀಚಕ ರಂಧ್ರ ಭಾಗಾನ್ ದರೀ ಮುಖೋತ್ಥೇನ ಸಮೀರಣೇನ—ಇತ್ಯಾದಿ) ಕಾಲಿದಾಸನ ಉತ್ಪ್ರೇಕ್ಷೆಯ ಭವ್ಯ ಸಮಗ್ರತೆ ಈ ಸಣ್ಣ ಸೊಲ್ಲಿನಲ್ಲಿ ಇಲ್ಲ. ಆದರೂ ಇಲ್ಲಿಯೂ ಅದೇ ಸತ್ವವಿದೆ.

'ಕಾಲಾತೀತ' ಕವನದ ಕೊನೆಗೆ ಮಹಿಷಹವಾನನಾಗಿ ಕೊಳಲೂದಿ ಸಾಗಿಹ ದನಗಾಹಿ ಮಹಿಷವಾಹನ ಯಮಧರ್ಮನ ನೆಳಲಾಗಿ ತೇಲಿಹೋಗುವನು. ಕಾಲಕ್ಕೆ ಆ ಕಾಲ ಪುರುಷನ ಈ ವಾಹನವೇ ಒಂದು ಪ್ರತೀಕ.

'ಋತುಸಂಸಾರ'ದಲ್ಲಿ ಕವಿಯು "ಮಾವು ಹೂವಿನ ಕೊಡೆ ವಿಮಾನದಿಂದಿಳಿತಂದು ಬಂದ ಪ್ರೀತಿಯ ಕಂದ" ವಸಂತಾಗಮನವನ್ನು ಕವಿ ಸೂಚಿಸುವ 'ಧ್ವನಿಚಿತ್ರ'-

"ಕುವೂ ಜಗ್ ಜಗ್ ಪುವ್ವೀ ಟುವಿಟ್ಟವೂ" ಈ ಮಧುಮಾಸದ ಮಂತ್ರ ಶೇಕ್ಸ್‌ಪಿಯರನಿಂದ.ಬಿ. ಎಂ. ಶ್ರೀಯವರೆಗೂ ವಸಂತಾಗಮನವನ್ನು "ವಿಧವಿಧ ವಿಹಗ

ಸ್ವಪ್ನ"ಗಳ ಸಂಕೇತವಾಗಿ ಮೊಳಗುತ್ತ ಬಂದದ್ದು ! ನೂರು ಬಣ್ಣನೆಗಿಂತ ಇದೊಂದು ಮಾತು ಮಿಗಿಲಾಗಿ ಪ್ರಭಾವಿ.

ದುಷ್ಯಂತ, ದೂರ್ವಾಸ, ಶಕುನಿಯರಂತೆ ಶ್ರೀರಾಮ, ಸೀತೆಯರೂ ಆಯಾ ಸಂದರ್ಭದಲ್ಲಿ ಧ್ವನಿ ನಿರ್ಭರವಾಗಿ ಪ್ರಕಟವಾಗುತ್ತಾರೆ. ಮೋಡ ಮುಸುಕಿದ ಮಳೆಗಾಲದ ಬಾನಿನಲ್ಲಿ ಥಕ್ಕನೆ ಬಿರುಕು ಬಿದ್ದು ಬಿಸಿಲಿನ ಕಂಬಿ ಕಾಣಿಸಿಕೊಳ್ಳುವುದನ್ನು ಕವಿ ಬಣ್ಣಿಸುವ ಬಗೆ ಹೀಗೆ :

ನಡುವೆ ಚಕ್ಕನೆ ಹಸುರ ಮಧ್ಯಕೆ
ಸೂರ್ಯ ಸರ್ಚ್‌ಲೈಟ್ ಕೆಡವಲು
ಹನುಮನೆದೆಯೊಳು ರಾಮ ಸೀತೆಯ–
ರಂತೆ ಕಣ್ಣಿಗೆ ಹೊಳೆವುದು.

ಒಂದು ಪೌರಾಣಿಕ ವೀರಭಕ್ತನ ಆಖ್ಯಾಯಿಕೆಯು ಅಂತರಂಗದ ಮೇಲೆ ಕವಿ ಪ್ರತಿಭೆ ಕೆಡುಹಿದ ಸರ್ಚ್‌ಲೈಟ್ ಬೆಳಗಿದ ಸೋಜಿಗವಿದು !

ಇನ್ನು ಒಂದೆರಡು ಉಲ್ಲೇಖಗಳನ್ನು ಉದಾಹರಿಸಿ ಈ ಬರಹಕ್ಕೆ ಪೂರ್ಣವಿರಾಮ ಹಾಕುತ್ತೇನೆ. ಏಕೆಂದರೆ ಇಂಥ ದಾಖಲೆಗಳು ವಿವಿಧವಿದ್ದಷ್ಟೇ ವಿಪುಲ. ಒಂದೊಂದೂ ವಿಶಿಷ್ಟವಾದ ವ್ಯಾಖ್ಯಾನ ಬೇಡುತ್ತವೆ. ಆದರಿಂದ ಲೇಖನವು ಲಂಬಾಯಮಾನವಾಗುತ್ತದೆ.

ಕೆಲಸಲ ಕವಿಯು ಇಂಥ ಶ್ರುತನಿಯೋಜನದಲ್ಲಿ ಔಚಿತ್ಯಕ್ಕಿಂತ ವೈಚಿತ್ರ್ಯವೇ ಎದ್ದು ಕಾಣುವದುಂಟು.—'ಜೋಕು' ಮಾಡುವ ಮೋಹದಲ್ಲಿ ಜೋಕೆ ತಪ್ಪಿ ಜೋಲಿ ಹೋಗು ವಂತೆ ! 'ಪಥಿಕ' ಒಂದು ಸೊಗಸಾದ ಕವನ. ಅಲ್ಲಿ ಎಮಿನಂತೆ ಪ್ರಕೃತಿಯ ಸೊಬಗನ್ನು ಲಲಿತ ಮಧುರ ಶಬ್ದಗಳಲ್ಲಿ ಸೂರೆಗೊಳ್ಳುತ್ತ ಕವಿ ಮೂರನೆಯ ನುಡಿಯಲ್ಲಿ ಹೇಳುತ್ತಾನೆ.

ಇಲ್ಲಿ ಬಣ್ಣದ ತಳಿರ ತುಟಿಯ ಲ್ಲಿ ಹೂ ನಗೆಯು
ಅಲ್ಲಿ ಹಣ್ಣಿನ ಗೊನೆಗೆ ಗಿಣಿಗಳೆರಡು.

ಈ ಎರಡು ಗಿಳಿಗಳು ಸಾವಿರಾರು ವರ್ಷ ಹಳೆಯವು. ಋಗ್ವೇದದ ಒಂದು ಮಂತ್ರದಲ್ಲಿ "ದ್ವಾಸುಪರ್ಣಾ ಸಯುಜಾ ಸಖಾಯಾ"—ಎಂಬ ಒಂದು ಪ್ರತಿಮೆ ಬರುತ್ತದೆ, ಅದು ಈ ವಿಶ್ವದ ವಟವೃಕ್ಷದಲ್ಲಿ ಎರಡು ಕೊಂಬೆಗಳಲ್ಲಿ ಕೂತ ಆತ್ಮ ಪರಮಾತ್ಮಗಳ ಅಥವಾ ಒಂದೇ ದೇಹದಲ್ಲಿಯ ಪ್ರತ್ಯಗಾತ್ಮ ಅಂತರಾತ್ಮಗಳ (?) ಪ್ರತೀಕ. ಅಲ್ಲಿ ಈ 'ಸುಪರ್ಣ'ಗಳಲ್ಲಿ ಒಂದು ಆ ಪಿಪ್ಪಲ ವೃಕ್ಷದ ಹಣ್ಣು ತಿನ್ನುತ್ತಿರುತ್ತದೆ. ಇನ್ನೊಂದು ಮೇಲಿನ ಟೊಂಗೆಯಲ್ಲಿರುವಂತಹದು—ತಣ್ಣಗೆ ಕುಳಿತಿರುತ್ತವೆ ಅಂತರ್ಮುಖಿಯಾಗಿ. ಆದರೆ ಇಲ್ಲಿ ಕಣವಿಯವರು ಕುಡ ಎರಡೂ ಗಿಳಿಗಳು ಹಣ್ಣಿನ ಗೊನೆಗೆ ಬಾಯಿ ಹಾಕಿವೆ ! ಹಾಕಲಿ ಬಿಡಿ. ಆದರೆ ಆ ಗಿಳಿಗಳು ಎರಡೇ ಆಗುವುದರ ಸಂಕೇತ? ಆ ವೈದಿಕ ಹಕ್ಕಿಗಳ ಜ್ಞಾಪನೆಯೇ ? ಹಾಗಿದ್ದರೆ ಈ ಸಂದರ್ಭದಲ್ಲಿ ಈ ಗಿಳಿಗಳು ಹೀಗೇಕೆ ? "ಬಾಳ

ಬಿಸಿಲಲಿ ಬಳಲಿ ದಣಿದು ಬಂದಿಹ ಪಥಿಕನಿಗೆ" ಮರದ ತಣ್ಣೆಳಲೆ ಆಸರ. ಅವನಿಗಲ್ಲದೆ ಯಾರಿಗೆ ಈ ಸುಂದರತೆ? ಯಾರಿಗೀ ಪರವಶತೆ? ಯಾರ ಸುಖಕೆ ಈ ಸೃಷ್ಟಿ? ಎಂದು ಮುಗಿಯುವ ಈ ಕವನದಲ್ಲಿ ಹೀಗೆ ಹಣ್ಣಿನ ಗೊನೆಯನ್ನು ಗಿಳಿಗಳು ತಿನ್ನ ತೊಡಗಿದರೆ ಆಕ್ಷೇಪವಿಲ್ಲ. ಆದರೆ ಅವು ಎರಡೇ ಏಕೆ?

[ನಾಲ್ಕು ದಶಕಗಳ ಹಿಂದಿನ ಸಂಗತಿ. ಅಂದು ಹಿರಿಯ ಕವಿಮಿತ್ರ ಪ್ರಿಯ ಎಂ. ಗೋಪಾಲಕೃಷ್ಣ ಅಡಿಗರು ನನಗೆ ಮೊತ್ತಮೊದಲು 'ನಡೆದು ಬಂದ ದಾರಿ' ಕವನ ಓದಿ ತೋರಿಸುತ್ತಿದ್ದರು. ಅಲ್ಲಿ ಒಂದೆಡೆಗೆ ಗೋಪುರದಲ್ಲಿ 'ಪಾರಿವಾಳ ಮೂರು' ಎಂಬ ಮಾತು ಬಂತು. ಈ ಪಾರಿವಾಳ ಮೂರು ಏಕೆ? ನಾನು ಕೇಳಿದೆ. ಅಡಿಗರು ತಡೆದರು. ತಡವರಿಸಿ ದರು 'ಮೂರು ಒಂದು ಗೂಢ ಸಂಖ್ಯೆ ಅಲ್ವೇ?' ಅಂದರು. ಆಗ ನಾನೇ ಸೂಚಿಸಿದೆ. ಅಷ್ಟೇನು ಮಿಸ್ಟಿಕ್ ಆಗಬೇಕಿಲ್ಲ ಈ ಉಲ್ಲೇಖ. ಪಾರಿವಾಳ ಶಾಂತಿಯ ಪ್ರತೀಕ ಪಾಶ್ಚಾತ್ಯ ರಂತೆ. ನಮ್ಮ ಸಂಸ್ಕೃತಿಯಲ್ಲಿ ಯಾವಾಗಲೂ ತ್ರಿವಾರ ಶಾಂತಿ ಪಾಠ. ಈ ಮೂರು ಭಾವಿಕ ದೈವಿಕ, ಆತ್ಮಿಕ ಶಾಂತಿಗಳಿಗಾಗಿ ಈ ಮೂರು ಪಾರಿವಾಳಗಳೆಂದು ಹಿಡಿಯಬಹುದಲ್ವೇ?' ಅಡಿಗರು ಸಂತೋಷದಿಂದ ಒಪ್ಪಿದರು.]

ಇಂತಹದೇ ಇನ್ನೊಂದು ಸುಂದರವಾದರೂ ಸಂದಿಗ್ಧ ಸಾಮಂಜಸ್ಯದ ಉಲ್ಲೇಖ. 'ಕತ್ತಲೆ ಬೆಳಕು' ಅಷ್ಟಪಟ್ಪದಿಯಲ್ಲಿ–ಕೊನೆಯ ಭಾಗದಲ್ಲಿ–ಆದೂ ಕಂಸಿನಲ್ಲಿ ಈ ಉಲ್ಲೇಖ ಬರುತ್ತದೆ

[ಶಾಲೆ ತಪ್ಪಿಸಿ ಹೋದ ಧ್ರುವನ ಬೆನ್ನಿಗೆ ಗುದ್ದು] ಸಂಜೆಗೆ ಏರಿಬರುವ ತಾರೆ, ಕಿಡಿ ಹಾರಿಸುವ ಕಾಡಿನಂಚಿನ ಮಿಂಚುಳಿಗಳ ಸಾಲಿನಲ್ಲಿಯೇ ಕವಿಗೆ ಪ್ರಶ್ನೆ "ಎಲ್ಲಿ ನಾರದ ಹರಿ ವಿರಂಚಿ?" ಈ ಪ್ರಶ್ನೆ ಈ ಸಂದರ್ಭದಲ್ಲಿ ಏಕೆ ಏಳಬೇಕೋ? ಅದರ ಬೆನ್ನಿಗೇ ಕಂಸಿನಲ್ಲಿ ಧ್ರುವನ ನೆನಪು. ಆ ಧ್ರುವನೂ ಎಂದಿಗೂ ಮಲತಾಯಿ ದೂಡದ ಸ್ಥಾನಕ್ಕಾಗಿ ತಪಶ್ಚರಣಕ್ಕೆ ಹೊರಟವನಲ್ಲ. 'ಶಾಲೆ ತಪ್ಪಿಸಿ' ಹೋದವನು. ಅಂದು ಸಕ್ತಿ ಶಿಕ್ಷಣ ವಿದ್ದಿದ್ದರೆ ಧ್ರುವ ಶಾಲೆಗೆ ಸೇರುವ ವಯಸ್ಸಿನವನೇ. ಈ ಕಂಸಿನೊಳಗಿನ ವಾಕ್ಯ ನಿಜ ವಾಗಿಯೂ ತುಂಬ ಅರ್ಥವ್ಯೂಹವೆಬ್ಬಿಸುವ 'ಧ್ವನಿಕೋಶ'. ಶಾಲೆ ಸಾಮಾಜಿಕ, ಸಾಂಪ್ರ ದಾಯಿಕ. 'ಗುದ್ದು' ವೈಯಕ್ತಿಕ ವ್ಯಾವಹಾರಿಕ. ಧ್ರುವ ಆದರ್ಶ ಧ್ಯೇಯವಾದಿ ಜೀವ, ಎಳೆವರಯದ ಆದರ್ಶ ಜೀವಿಗೆ ಶಾಲೆಯ ಗಾಣದಲ್ಲಿ ಹಿಂಡಿ ಹಿಪ್ಪಿ ಮಾಡುವ ಪಾಲಕರು 'ಉತ್ತಾನಪಾದರು'? ಆತ ತಪ್ಪಿಸಿಕೊಂಡು ಹೋದರೆ ಹುಡುಕಿ ತಂದು ಬೆನ್ನಿಗೆ ಗುದ್ದಿ ಮರಳಿ ಸಾಂಪ್ರದಾಯಿಕ ವ್ಯವಸ್ಥೆಗೆ ವ್ಯಾವಹಾರಿಕ ಪ್ರಯೋಜನಕ್ಕೆ ಪಳಗಿಸುವವರೇ. ಆದರೆ 'ಕತ್ತಲೆ-ಬೆಳಕಿನ' ಈ ಕವನದ ಸಂದರ್ಭಕ್ಕೆ ಈ ಶ್ರುತನಿಯೋಜನೆ ತಾನೇ ತಾನಾಗಿ ಎಷ್ಟೇ ಮನೋವೇಧಕವೂ ತದ್ಬೋಧಕವೂ ಆಗಿದ್ದರೂ ಒಟ್ಟಂದಕ್ಕೆ ವಿಸುವಾದಿ. ಅಂತೆಯೇ ಅದು ಕಂಸಿನಲ್ಲಿ ಇಡಲಾಗಿದೆಯೇನೋ!

ಇದಕ್ಕೂ ವಿಸುವಾದಿಯಾಗಿ ತನ್ನ ವಿವರೋಪಕಥನದಿಂದ ಅವಾಂತರವೆನಿಸುವ ಉಲ್ಲೇಖ ದೂರ್ವಾಸನ ಶಾಪವು—'ಜೀರ್ಣೋದ್ಧಾರ' ಕವನದಲ್ಲಿ ಮದ್ದಾನೆಯಂತೆ

ಹುಚ್ಚೆದ್ದು ಧಾಂದಲೆಹಾಕುತ್ತಿದ್ದ ಗಾಳಿಯ ವರ್ಣನೆಯಲ್ಲಿ ಈ ಮೂರು—ನಾಲ್ಕು ಸಾಲಿನ ಶ್ರುತನಿಯೋಜನೆ ಬಂದಿದೆ. ಇಂದ್ರ ಐರಾವತವೇರಿ ಬರುತ್ತಿದ್ದಾಗ ದೂರ್ವಾಸ ಮುನಿ ಇದಿರಾಗುತ್ತಾನೆ. ಅವನ (ಕೊರಳಿನ?) ಹೂವಿನ ಹಾರವನ್ನು ಆ ಉನ್ಮತ್ತ ಆನೆಯು ನೆಲಕೊಗೆದು ತಿಕ್ಕಿ ತುಳಿದಾಡುತ್ತದೆ. ಅದಕ್ಕೆ ಆ ಮಹಾ ಮುಂಗೋಪಿ ಮುನಿ ಇಂದ್ರನಿಗೆ ಶಾಪಕೊಡುತ್ತಾನೆ. ಆದರೆ ಆ ಶಾಪ ತಿರುಗಿ ಆ ಮುನಿಗೇ ತಟ್ಟುತ್ತದೆ. ಸರಿ, ಆದರೆ ಮುಂದೇನು ? ಇಲ್ಲಿ ಮೈಮೇಲೆ ಎಚ್ಚರವಿಲ್ಲದೆ ಅಲೆದಾಡುವ ಆ ಸುಂಟರಗಾಳಿಗೆ ಒಂದಲ್ಲ ಸಾವಿರ ಸೊಂಡಿಲು. ಇದೊಂದು ಉತ್ಪ್ರೇಕ್ಷೆ. ಕವಿಯನ್ನು ಒಮ್ಮೆಲೇ ನೂರು ಸೊಂಡಿಲ ಐರಾವತಕ್ಕೇ ಒಯ್ದು ಮುಟ್ಟಿಸುತ್ತದೆ. ಅಷ್ಟಕ್ಕೆ ಈ ಉಲ್ಲೇಖ ಔಚಿತ್ಯಪೂರ್ಣ. ಆದರೆ ಇದನ್ನು ಮೀರಿ ಐರಾವತದಿಂದ ದೂರ್ವಾಸ, ಅವನಿಂದ ಇಂದ್ರನಿಗೆ ಶಾಪ.— ಆನೆಯ ಪಾಪಕ್ಕೆ ಮೇಲೇರಿಕೂತ ಒಡೆಯನಿಗೆ ಶಾಪ ! ಈ ಅನ್ಯಾಯ ತಿರುಬಾಣವಾಗಿ ಶಾಪಕೊಟ್ಟ ಶೀಘ್ರಕೋಪಿಗೇ ಬಡಿಯಿತೆಂಬ ಕಥನ—ಇದೆಲ್ಲ ಅಪ್ರಸುತ, ಅಪ್ರಾಸಂಗಿಕ ವೆನ್ನುವಷ್ಟು ದೂರ ಹಾಯಿತು. ಇದು ಕವಿಯ ಕಥನ ವ್ಯಾಮೋಹವೆನ್ನಬಹುದೇ ?

ಶ್ರುತನಿಯೋಜನೆಯ ಸಂಗತಿ ಇಲ್ಲವೆ ಸಂವಾದಿತ್ವ ಒಡೆದೆದ್ದು ಕಾಣಬೇಕೆಂದಿಲ್ಲ. ಕವನದ ಸಂದರ್ಭದಲ್ಲಿ ಅರ್ಥ, ಭಾವ, ಆಶಯ, ವಸ್ತು ವಿಚಾರ ಸರಣಿಯೊಂದಿಗೆ ಅದು ಆಳವಾದ ಒಳಹೊಂದಿಕೆ ಇಟ್ಟುಕೊಂಡಿರಬಹುದು, ಬೇಕು. ಇದಕ್ಕೆ ಲೋಪ ಬಂದಲ್ಲಿ ನಿಯೋಜಿಸಿದ ಅವತರಣಿಕೆ, ಚಾರಿತ್ರಿಕ ಪೌರಾಣಿಕ ಇಲ್ಲವೆ ಆಖ್ಯಾಯಿಕ ಉಲ್ಲೇಖ ಸ್ವತಃ ಅದೆಷ್ಟೇ ಸ್ವಾರಸ್ಯವಾಗಿದ್ದರೂ ಕವನದ ಸಂದೇಶದೊಂದಿಗೆ ಸಾಮರಸ್ಯವಿರದೇ ಪರಿಣಾಮ ದಲ್ಲಿ ವ್ಯರ್ಥವಾಗಿ ಬಿಡುತ್ತದೆ. ಅನುಭವವನ್ನು ಕಲೆಯಾಗಿ ಕಲೆಯನ್ನು ಅನುಭವವಾಗಿ ಎರಡನ್ನೂ ಜೀವನದ ಜೀವಾಳದ ಆವಿಷ್ಕಾರವಾಗಿ ಮಾರ್ಪಡಿಸುವ ವಿಧಾನದಲ್ಲಿ ಇಂಥ ಶ್ರುತನಿಯೋಜನೆ, ವಾಙ್ಮಯೀನಉಲ್ಲೇಖ ಒಂದು ಕೃತಕ ಕುತೂಹಲದ ತಂತ್ರಗಾರಿಕೆಯಾಗಿ ನಿಲ್ಲಬಾರದು. ಆದರೆ ಇಂಥ ಪ್ರಮಾದ ಈ ಕವಿಯ ಕಸಬಿನಲ್ಲಿ ಕಾಣಸಿಗುವದು ಕಡಿಮೆ.

ಒಟ್ಟಾರೆ ಕಣವಿ ಕಾವ್ಯದಲ್ಲಿಯ ಈ ಶ್ರುತನಿಯೋಜನೆ (Allusion) ತೀರ ನಿಗೂಢವೂ ಸಂಕೀರ್ಣ ಆಕರಗಳಿಂದ ಆಯ್ದುವೂ ಪಾಂಡಿತ್ಯ ಪ್ರದರ್ಶನಕ್ಕಾಗಿ ತಂದವೂ ಆಧುನಿಕ ಪಾಶ್ಚಾತ್ಯ ಕಾವ್ಯತಂತ್ರದ ಅಂಧಾನುಕರಣಕ್ಕಾಗಿಯೇ ಬಂದವೂ ಆಗಿರದೆ, ಕವಿಯ ಬುದ್ಧಿವಿಕಾಸ. ಭಾವಸಂಸ್ಕಾರ. ದಾರ್ಶನಿಕದೃಷ್ಟಿ. ಜೀವನಶ್ರದ್ಧೆ ಮತ್ತು ಕಲಾ ಪ್ರಜ್ಞೆ ಇವುಗಳಿಗೆ ಅತ್ಯಂತ ಅನುಗುಣವಾಗಿಯೇ ರೂಪಗೊಂಡಿವೆ. ಹಳೆ ಹೊಸ ಕನ್ನಡ ಸಂಸ್ಕೃತ ಮತ್ತು ಆಂಗ್ಲ ಕವಿಗಳ ಉಕ್ತಿಗಳೂ ಜಾನಪದ ಜಾಣ್ನುಡಿ-ಪಡೆನುಡಿಗಳೂ ಹಾಸು-ಹೊಕ್ಕಾದಲ್ಲಿ ನಿಜವಾಗಿಯೂ ಕಾವ್ಯ ಹಾಗೂ ಮಾನವೀಯತೆಗಳ ಜ್ಞಾನ ಮತ್ತು ಆನಂದಗಳ ಒಂದು ಅಕ್ಷಯಾಂಬರವೇ ಸಿದ್ಧವಾಗಿದೆ.

ಎಸ್. ಎಸ್. ಕೋತಿನ

# ಕಣವಿಯವರ ಕಾವ್ಯದಲ್ಲಿ ನಿಸರ್ಗ

ಪಡುವಣಗಾಳಿ ಬೀಸಿ ಬಡಿದುದರ ಪರಿಣಾಮವಾಗಿ ಕನ್ನಡ ಕಾವ್ಯ ಪ್ರಪಂಚದಲ್ಲಿ ಉಂಟಾದ ಹೊಸ ಆವಿಷ್ಕಾರದಿಂದ, ನವೋದಯ ಕಾಲದ ಕವಿಯ ಮನಸ್ಸು ಹಾಗೂ ಕಾವ್ಯದ ವಸ್ತು ಹೊಸ ರೀತಿಯಲ್ಲಿ, ಹೊಸ ಉದ್ದೇಶಕ್ಕಾಗಿ ಅನಾವರಣಗೊಳಿಸಿಕೊಂಡವು. ವಸ್ತು ಯಾವುದೇ ಇರಲಿ, ಅದನ್ನು ಕುರಿತ ಕವಿಯ ಸಂವೇದನೆ ಹಾಗೂ ಸೌಂದರ್ಯ ಪ್ರಜ್ಞೆ ಕಾವ್ಯಕ್ಕೆ ಪ್ರೇರಣೆ-ಪ್ರಚೋದನೆಯನ್ನು ಹಾಗೂ ಜೀವರಸವನ್ನು ಒದಗಿಸಲು ಕಾರಣವಾದವು. ಇಂಥ ನವೋದಯ ಸಂಪ್ರದಾಯದ ಕಾವ್ಯ, ವಸ್ತು ವೈವಿಧ್ಯದಿಂದ ತುಂಬಿ ಕೊಂಡರೂ, ಅದು ಕಳಕಳಿಸಿ ನಿಲ್ಲುವಂತೆ ಮಾಡಿದ್ದು ನಿತಾಂತವಾದ ನಿಸರ್ಗದ ಸೌಂದರ್ಯಾನುಭವ. ಪ್ರಕೃತಿ ಸೌಂದರ್ಯದ ಬಗೆಗಿನ ಹಸಿವು, ಹಂಬಲ, ಅದರ ವಿವಿಧ ಮುಖಗಳ ದರ್ಶನ ಪ್ರದರ್ಶನಗಳೇ ಈ ನವೋದಯ ಕಾವ್ಯದ ವೈಶಿಷ್ಟ್ಯವೆಂದರೂ ಸರಿಯೆ. ಅಂತೆಯೆ ಜಿ.ಎಸ್ ಶಿವರುದ್ರಪ್ಪನವರು ಹೇಳುವಂತೆ "ನವೋದಯ ಸಾಹಿತ್ಯದಲ್ಲಿ ಬೇರೆಲ್ಲ ಪ್ರಕಾರಗಳಿಗಿಂತ ಪ್ರಕೃತಿ ಸೌಂದರ್ಯವನ್ನು ಕುರಿತ ಭಾವಗೀತ ಪ್ರಕಾರವೇ ಕಾವ್ಯಸೃಷ್ಟಿಯ ಬಹುಭಾಗವನ್ನು ಆಕ್ರಮಿಸಿದೆ. ಸೌಂದರ್ಯವೆಂದರೆ ಪ್ರಕೃತಿಸೌಂದರ್ಯ, ಸೌಂದರ್ಯಾರಾಧನೆಯೆಂದರೆ ಪ್ರಕೃತಿ ಸೌಂದರ್ಯಾರಾಧನೆ ಎನ್ನುವಷ್ಟರ ಮಟ್ಟಿಗೆ ಪ್ರಕೃತಿಯನ್ನೇ ಕುರಿತ ಗೀತೆಗಳು ವಿಶೇಷವಾಗಿ ರಚಿತವಾಗಿವೆ. ಅದರ ಹೊರಮೈ ಚಲುವನ್ನು ಹಿಡಿದು, ಅಂತರಂಗದ ಚಲುವನ್ನು, ಅದರಲ್ಲಿಯ ದೈವಿಕತೆಯನ್ನೂ ತಾನು ದರ್ಶಿಸಿದ್ದೇನೆಂದು ಬರೆಯದ ಕವಿಯೇ ಇಲ್ಲವೆನ್ನುವಷ್ಟರ ಮಟ್ಟಿಗೆ ಈ ಪ್ರಕೃತಿ ಗೀತೆಗಳು ತುಂಬಿವೆ"[1]. ಪಾಶ್ಚಾತ್ಯ ರೊಮ್ಯಾಂಟಿಕ್ ಸಾಹಿತ್ಯದಿಂದ ನಮ್ಮ ನವೋದಯ ಕವಿಗಳು ಪ್ರಭಾವಿತರಾದರೂ, ಪ್ರಕೃತಿಯಾರಾಧನೆಯ, ನಿಸರ್ಗೋಪಾಸನೆಯ ದೀಕ್ಷೆಯನ್ನೇನೂ ಅದರಿಂದ ಪಡೆಯಬೇಕಾದ ಪ್ರಸಂಗವಿರಲಿಲ್ಲ. ವೇದೋಪನಿಷತ್ತುಗಳ ಕಾಲದಿಂದಲೂ ಆನುವಂಶಿಕ ಗುಣವೆಂಬಂತೆ ಬೆಳೆದು ಬಂದ ಪ್ರಕೃತಿಯೋಪಾಸನೆಗೆ ಹಾಗೂ ಪ್ರಕೃತಿ ಸೌಂದರ್ಯಾನುಭವದ ಅಭಿವ್ಯಕ್ತಿಗೆ ಒಂದು ಹೊಸ ದಾರಿಯನ್ನು, ರೀತಿಯನ್ನು ಮಾತ್ರ ಅದರಿಂದ ಕಂಡುಕೊಂಡರು ಎಂಬುದು ಇಲ್ಲಿ ಮುಖ್ಯವಾದದ್ದು, ಪ್ರಕೃತಿ ಸೌಂದರ್ಯಾನುಭವವನ್ನು ಕುರಿತು, ಅದರ ಉಪಾಸನೆಯನ್ನು ಕುರಿತು ಇಂಥ ಸುದೀರ್ಘ ಪರಂಪರೆ ಹಾಗೂ ಸಂಸ್ಕಾರ ವಿಶೇಷವಿದ್ದುದರಿಂದಲೇ "ನವೋದಯದ ಕವಿಗಣ ಈ ಮೂವತ್ತು ನಲ್ವತ್ತು ವರ್ಷಗಳಲ್ಲಿಯೇ ಆಂಗ್ಲ ಸಾಹಿತ್ಯ ನೂರಾರು ವರುಷಗಳಲ್ಲಿ ಸಾಧಿಸಿದ್ದನ್ನು ಸಾಧಿಸಿವೆ ಎಂದರೆ ಹೆಮ್ಮೆಯ ಮಾತಲ್ಲ. ಕೆಲವು ಮುಖಗಳಲ್ಲಿಯಂತೂ

---

1 "ಸೌಂದರ್ಯ ಸಮೀಕ್ಷೆ" (1965) ಜಿ. ಎಸ್. ಶಿವರುದ್ರಪ್ಪ: ಪು–321

ಆಂಗ್ಲ ಸಾಹಿತ್ಯಕಾಣದ ಎತ್ತರ ಆಳಗಳನ್ನು ಸ್ಪರ್ಶಿಸಿದೆ ಎನ್ನಲು ಹಿಂಜರಿಯಬೇಕಿಲ್ಲ"[2] ಎಂದು ಹೇಳುವಂತಾಗಿದೆ.

ಕಾವ್ಯಾಭಿವ್ಯಕ್ತಿಯಲ್ಲಿ ವಸ್ತುನಿಷ್ಠತೆಯನ್ನು ಳಿದು ವ್ಯಕ್ತಿನಿಷ್ಠತೆಯನ್ನು ಮೈಗೂಡಿಸಿಕೊಂಡ ನವೋದಯ ಕಾಲದ ಕವಿಗಳಿಗೆ ಪ್ರಕೃತಿವರ್ಣನೆಯು ಕಾರ್ಯ ತತ್ಪೂರ್ವದ ಕವಿಗಳಿಗೆ ಆದಂತೆ ಹಗುರಾದ ಕೆಲಸವಾಗಿರಲಿಲ್ಲ. ಆಗಿನ ಕವಿಗಳಿಗೆ ಅದರ ಪರಿಣಾಮ ಏನೇ ಆಗಿರಲಿ— ಪ್ರಕೃತಿವರ್ಣನೆಗೆ ಕವಿಸಮಯದಂಥ ಪರಂಪರೆಯ, ಸಂಪ್ರದಾಯದ ಪೂರ್ವಸಿದ್ಧ ರಾಜಮಾರ್ಗದ ಅನುಕೂಲತೆ ಇತ್ತು; ಮೇಲಾಗಿ ಲಾಕ್ಷಣಿಕರ ಮಾರ್ಗದರ್ಶನವಿತ್ತು. ಪ್ರಕೃತಿಯ ನೇರ ಅನುಭವ, ಸಂಪರ್ಕ ಇರಲಿ ಇಲ್ಲದಿರಲಿ, ಲಾಕ್ಷಣಿಕರು ಹೇಳಿದಂತೆ ನಡೆದರೆ, ಔಚಿತ್ಯ ಪರಿಪಾಲಿಸಿದರೆ ಕವಿತನಕ್ಕೆ ಕುಂದಿರಲಿಲ್ಲ. ಆದರೆ ವ್ಯಕ್ತಿನಿಷ್ಠ ಮಾರ್ಗಾವಲಂಬಿಯಾದ ನವೋದಯ ಕವಿಗೆ ಪ್ರಕೃತಿಯನ್ನು ಕುರಿತ ನೇರವಾದ ಅನುಭವ, ದರ್ಶನ ಭಾವನಾತ್ಮಕ ಪ್ರತಿಕ್ರಿಯೆಗಳೇ ಅನಿವಾರ್ಯವಾದ ಮಹತ್ವದ ಪ್ರೇರಣೆಗಳಾದವು.

ಪ್ರಕೃತಿಯ ಬಗೆಗಿನ ಸಹಜವಾದ ಹಂಬಲ, ಗಾಢವಾದ ಪ್ರೀತಿ, ಸ್ನೇಹ, ಆತುರ-ಕಾತುರಗಳೇ ಆತನ ಕಾವ್ಯಕ್ಕೆ ಜೀವಸತ್ವಗಳಾದವು. ಹೀಗೆ ನಿಸರ್ಗವನ್ನು ಕುರಿತ ಈ ಕಾಲದ ಕಾವ್ಯಗಳಲ್ಲಿ ಸಾಂಪ್ರದಾಯಿಕತೆಗಿಂತ ಪ್ರಾಮಾಣಿಕತೆ ಮುಖ್ಯವಾದದ್ದರಿಂದ, ನಿಸರ್ಗಾನುಭವದ ಕಲಾಪೂರ್ಣ ಅಭಿವ್ಯಕ್ತಿಯೇ ಕವಿಯ ಮಹತ್ವದ ಅರ್ಹತೆ ಹಾಗೂ ಮಾನದಂಡಗಳಲ್ಲಿ ಒಂದಾದ್ದರಿಂದ, ಕವಿಕರ್ಮದ ಜವಾಬ್ದಾರಿ ಇನ್ನೂ ಹೆಚ್ಚಿನದಾಗಿತ್ತು. ತತ್ಪೂರ್ವದ ವಸ್ತುನಿಷ್ಠಕಾವ್ಯದಲ್ಲಿ ಕಾವ್ಯದ ಒಂದಂಗವಾಗಿ ಹರಿದುಬಂದ ಪ್ರಕೃತಿ ನವೋದಯ ಕಾಲದಲ್ಲಿ ಭಾವಗೀತೆಯಾಗಿ ಕಾಣಿಸಿಕೊಂಡು ವಿನೂತನ ಮೋಡಿಯನ್ನು ಪ್ರದರ್ಶಿಸಿತು. ಈ ನವೋದಯ ಕಾಲದಲ್ಲಿ ನಿಸರ್ಗದ ಸೌಂದರ್ಯಾನುಭವದ ಪ್ರಾಮಾಣಿಕತೆಯೇ ಕಾವ್ಯದ ಪ್ರಾಣವಾಗಿದ್ದರೂ, ಅಪ್ರಾಮಾಣಿಕವಾದ ಅನುಸರಣೆ, ಅನುಕರಣೆ ಈ ಕಾಲದಲ್ಲೂ ತಪ್ಪಲಿಲ್ಲ. ನವೋದಯ ಕಾಲದ ಈಚಿನ ಕವಿಗಳಂತೂ ಆ ಕಾಲದ ಆದರ್ಶ ಕವಿಗಳಾಗಿದ್ದ ಕುವೆಂಪು ಹಾಗೂ ಬೇಂದ್ರೆಯಂಥ ಹೆಮ್ಮರಗಳನ್ನು ಸುತ್ತುಹಾಕುವುದರಲ್ಲಿಯೇ ಸುಸ್ತಾಗಿ ತಮ್ಮ ಕಾವ್ಯದ ಬಸಿರನ್ನು ತುಂಬಿಕೊಂಡರೂ ತಾಳದೇ ಹೋಗಿದ್ದಾರೆ. ಸೃಷ್ಟಿಸೌಂದರ್ಯದ ಬಗೆಗೆ ಸಹಜ ಒಲವು, ಆಸಕ್ತಿ, ಆಕರ್ಷಣೆ ಹಾಗೂ ಸಾನ್ನಿಧ್ಯಾನುಭವವುಳ್ಳ ಪ್ರತಿಭಾವಂತ ಕವಿಗಳು ಮಾತ್ರ ನವೋದಯ ಕಾವ್ಯ ಪರಂಪರೆಯಲ್ಲಿ ತಮ್ಮ ಅಸ್ತಿತ್ವದ ಮುದ್ರೆಯನ್ನು ಒತ್ತಬಲ್ಲವರಾಗಿದ್ದಾರೆ. ಬಯಲುಸೀಮೆಯ ನಿಸರ್ಗಸೌಂದರ್ಯದ ಒಡನಾಡಿಯಾಗಿ ಅದರೊಡನೆ ಸಹಜವಾದ ಸಂಬಂಧ, ಆತ್ಮೀಯತೆಯನ್ನು ಪಡೆದುಕೊಂಡು, ಅದರೊಡನೆ ಪ್ರೀತಿಯಿಂದ ಬಾಳಿ ಬೆಳೆದವರಾದ್ದರಿಂದಲೇ ಕಣವಿಯವರು ಅಂಥ ಮಹತ್ವದ ತೀರ ಕೆಲವೇ ಕೆಲವು ಕವಿಗಳಲ್ಲಿ ಒಬ್ಬರಾಗಿದ್ದಾರೆ.

---

2 ಅಲ್ಲೆ; ಪು–279;

ನವೋದಯದ ಮುಚ್ಚಂಜೆಯ ಕಾಲಕ್ಕೆ "ಕಾವ್ಯಾಕ್ಷಿ"ಯನ್ನು ತೆರೆದ ಕವಿ ಹಲವು ಬಗೆಯ ಸಂದಿಗ್ಧತೆಗಳನ್ನು, ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂದದ್ದು ತೀರ ಸಹಜವಾಗಿದೆ. ಆ ಕಾಲಕ್ಕಾಗಲೇ ಸೃಷ್ಟಿಸೌಂದರ್ಯದ ನೂರಾರು ಪರಿಗಳನ್ನು ಕಂಡುಂಡು, ಅದರ ರಸತರಂಗಗಳನ್ನೆಲ್ಲ ಮನಸೋಕ್ತವಾಗಿ ಹೀರಿ-ಹಿಗ್ಗಿದ್ದರಿಂದ, ನಿಸರ್ಗದ ಛವಿಛಾಯೆ ಎನ್ನುವದು ಜೀರ್ಣಗೊಂಡ ಚೀನಾಂಬರದಂತೆ ಕವಿ ಸಹೃದಯರ ಅನಪೇಕ್ಷೆಯ ವಸ್ತುವಾಗಿತ್ತು. ನವೋದಯದ ಹುರುಪಿನ ಪರಿಸರದಲ್ಲಿ ಬೆಳೆದು ಪ್ರಕೃತಿ ಸೌಂದರ್ಯಾನುಭವದಿಂದ ಮೈತುಂಬಿಕೊಂಡ ಕಾವ್ಯಶಕ್ತಿ, ತನ್ನ ಕ್ರಿಯಾಶೀಲತೆಯನ್ನು ಭರಾಟೆಯಿಂದ ಪ್ರದರ್ಶಿಸಿಕೊಳ್ಳುತ್ತಿದ್ದಂತೆಯೇ ಪ್ರಕೃತಿಯನ್ನು ಕುರಿತ ನಿರ್ಮಾತಗೊಳ್ಳುತ್ತಿದ್ದ ವಾತಾವರಣ, ನಿರಾಶಾದಾಯಕವಾದ ಅನಭಿರುಚಿ ಈ ಕವಿಯ ಕಾವ್ಯೋತ್ಸಾಹವನ್ನು ಕಂಗೆಡಿಸಲಿಲ್ಲ ಎನ್ನುವದು ಗಮನಾರ್ಹವಾದ ಮಾತಾಗಿದೆ, ಅಷ್ಟೇ ಅಲ್ಲ ಇಂಥ ನವೋದಯದ ಇಳಿಗಾಲದಲ್ಲಿಯೂ,—ಸಹಜ ಭಾವಜೀವಿಯಾದ, ಪ್ರಕೃತಿಪ್ರಿಯನಾದ — ಈ ಕವಿ ತನ್ನ ಎಳೆಯ ಪ್ರಾಯದಲ್ಲಿಯೇ ಸಹೃದಯರ ಹಾಗೂ ಆ ಕಾಲದ ಹಿರಿಯ ಮಹತ್ವದ ವಿಮರ್ಶಕರ ಗಮನವನ್ನು ತೀವ್ರವಾಗಿ ಸೆಳೆದದ್ದು ಒಂದು ವಿಶೇಷವಾಗಿದೆ.

ಮೂಲತಃ ಚೆನ್ನವೀರ ಕಣವಿಯವರು ನಿಸರ್ಗಪ್ರೇಮಿಗಳಾದ ಭಾವಜೀವಿಗಳು 'ಪ್ರಕೃತಿಯೋಪಸನೆಯು ನಿತ್ಯವಾಗಿರಲಿ' ಎಂದು ಹಂಬಲಿಸಿದ ಈ ಭಾವಜೀವಿ ಸಹಜವಾದ ಪ್ರಕೃತಿಯೋಪಾಸನೆಯನ್ನು, ಅದರ ಒಲವು ಆತ್ಮೀಯತೆಯನ್ನು ಬೇಡಿ ಬಂದವರೂ ಹೌದು; ಪಡೆದು ಬಂದವರೂ ಹೌದು. ಬಾಲ್ಯದಿಂದಲೂ ಪ್ರಕೃತಿ ಹಾಗೂ ಕವಿಯಲ್ಲಿ ಕೂಡಿ ಬಂದ ಕೆಡಲಾರದ ಸಂಬಂಧವನ್ನು, ಆಕರ್ಷಣೆಯನ್ನು ಮತ್ತು ಅದಕ್ಕೆ ಇದ್ದ ಕಾರಣವನ್ನು ಭಾವಜೀವಿಯ ನಿವೇದನೆಯಲ್ಲಿಯೇ ಕಂಡುಕೊಳ್ಳಬಹುದು. ಬಯಲು ಸೀಮೆಯ ಹಳ್ಳಿಯಲ್ಲಿ ಬೆಳೆದು ಧಾರವಾಡದಂಥ ನಿಸರ್ಗರಮ್ಯ ನಗರದಲ್ಲಿ ಬಾಳಿದ ಕವಿ ಅದನ್ನು ಹಲವೆಡೆಯಲ್ಲಿ ಹಲವಾರು ತೆರನಾಗಿ ತೋಡಿಕೊಂಡಿದ್ದಾನೆ.

ಸೌಂದರ್ಯದರ್ಶನಕೆ ದೀಪ್ತವಾಗಿಹ ಮನವು
ಪ್ರಕೃತಿಯೌಪಾಸನೆಯ ಕೈ ಕೊಂಡಿತು. (ಭಾವಜೀವಿ)
ಅದಕಾಗಿ ಪ್ರಕೃತಿ ಮಾತೆಯ ಮಡಿಲಿನಾಸರೆಗೆ
ಆಸತ್ತು ಬೇಸತ್ತು ಬಂದೆನಿಂದು. (ಭಾವಜೀವಿ)

ಚಂದ್ರ ಚಿಕ್ಕೆಗಳಲ್ಲಿ ಮೋಡಕಾಡುಗಳಲ್ಲಿ
ಬಾಲ್ಯದಿಂದಲೂ ಪ್ರೀತಿ ಬಲಿಯುತಿತ್ತು (ಭಾವಜೀವಿ)
ನೆಲದಾಯ ಕಾರುಣ್ಯ
ಹಸಿರು ಸಾಮ್ರಾಜ್ಯದಲ್ಲಿ ಕುಸುಮಿಸಿಹುದು.
ಕಂಡೆ ಕಣ್ಮನಗಳಲಿ ರಸಭಾವ ಸಂಚಾರ
ಕಿರುಮಕ್ಕಳೂ ಕವಿಗಳಾಗಬಹುದು (ಭಾವಜೀವಿ)

ಸೂಕ್ಷ್ಮತಮ ಹೂವಿನೊಲು ಚೆಲು ಚಮತ್ಕೃತಿಯಾಗಿ
ಹೃತ್ಕಮಲವರಳುವದೆ ನನಗೆ ಮೆಚ್ಚು. (ಭಾವಜೀವಿ)

ಕವಿಯು ಜೀವನದಂತೆ ನೇರವಾದ, ಅವನ ಮನಸ್ಸಿನಂತೆ ಸರಳವಾದ ಇಲ್ಲಿಯ ಸಹಜ ನಿವೇದನೆ. ಯಾವುದೋ ಒಂದು ಕಾಲದ, ಯಾವುದೋ ಒಂದು ಮನಸ್ಥಿತಿಯಲ್ಲಿಯ ಆತನ ಮನೋಧರ್ಮವನ್ನು, ಪ್ರಕೃತಿ ಪ್ರೇಮವನ್ನು ಪ್ರಕಟಿಸದೆ, ಅಂತಃಕರಣದಲ್ಲಿ ಕರಗಿ ಹೋದ, ಚಿರಸ್ಥಾಯಿಯಾಗಿ ನೆಲೆಯೂರಿದ ಪ್ರಕೃತಿಯೋಪಾಸನೆಯ ಆತುರವನ್ನು, ಪ್ರಕೃತಿಯನ್ನು ಕುರಿತ ಮೂಲಭೂತ ಮನೋಭಾವನೆಯನ್ನು ಪ್ರಕಟಿಸುವಂತಿದೆ. ಸ್ವಭಾವತಃ ಭಾವಜೀವಿಯಾದ ಈ ಕವಿ ನಗರಜೀವನದ ಮಾನವ ಪ್ರಪಂಚಕ್ಕಿಂತಲೂ ಭಿನ್ನವಾದ ಭಾವಗಳನ್ನು ನಿಸರ್ಗದಲ್ಲಿ ಗುರುತಿಸುತ್ತಾನೆ. ಅಂತೆಯೇ ಪುಟ್ಟಹಕ್ಕಿಯೊಂದನ್ನು ಕುರಿತು-

ನೀ ಕಂಡ ಬನದಲ್ಲಿ ಬಾನಿನಲಿ ಕಾನಿನಲಿ
ಇವಕು ಮೀರಿದ ಬೇರೆ ಭಾವವುಂಟು

ಎಂದು ಮನಗಂಡು ಹೇಳುವದಲ್ಲದೆ, ತನ್ನ ಹಾಡಿಗಿಂತಲೂ ಆ ಪುಟ್ಟ ಹಕ್ಕಿಯ ಹಾಡಿನಲ್ಲಿರುವ ಮಾಧುರ್ಯದ ರಹಸ್ಯವನ್ನೇ ನಿಸರ್ಗದೊಡನಿರುವ ಅದರ ಸಂಬಂಧದಲ್ಲಿ ಗುರುತಿಸುತ್ತಾನೆ.

ನಿನ್ನ ಹಾಡಿನ ಮುಂದೆ ನನ್ನದೇತರ ಪಾಡು
ನನ್ನ ಹಾಡಿಗೂ ನನಗೂ ಜನ್ಮಗಂಟು–'ಮತ್ತೊಂದು ಪುಟ್ಟ ಹಕ್ಕಿಗೆ', (ಮಧುಚಂದ್ರ)

ಎಂದು ವ್ಯಸನದಿಂದ ಹೇಳುತ್ತಾನೆ. ಹೀಗಾಗಿ ಪ್ರಕೃತಿಯನ್ನು ಕುರಿತ ಕವಿಯು ಹಂಬಲ ಹಾಗೂ ಪ್ರಕೃತಿ ಮತ್ತು ಕವಿಯ ನಡುವೆ ಅಂಟಿಕೊಂಡು ಬಂದ ನಂಟುತನ ಕೇವಲ ಸಹಜವಾದದ್ದೇ ಹೊರತು ಆಕಸ್ಮಿಕವಲ್ಲ ; ಅವರ ಕಾವ್ಯಾಕ್ಷಿಯಿಂದ ಮೊದಲುಗೊಂಡು 'ನಗರದಲ್ಲಿ ನೆರಳು' ('ಬರೆಯಬೇಕಾದ ಕವಿತೆ'ಯ) ವರೆಗಿನ ಎಲ್ಲ ಕೃತಿಗಳಲ್ಲಿಯೂ ನಿಸರ್ಗ ಒಂದಲ್ಲ ಒಂದು ರೀತಿಯಲ್ಲಿ ಪಾತ್ರವಾಡಿರುವುದು ಈ ಮಾತಿಗೆ ನಿದರ್ಶನವಾಗಿದೆ. ಕವಿಯ ಮನೋರಂಗದಲ್ಲಿ, ಬಹಿರಂಗದಲ್ಲಿ ನೃತ್ಯಗೈದು ತನ್ನ ಒಳ ಹೊರಗಿನ ಚೆಲುವನ್ನು, ವಿಲಾಸವನ್ನು ಕವಿಯ ಚರ್ಮಚಕ್ಷುವಿಗೂ ಆತ್ಮಾಕ್ಷಿಗೂ ನೂರುನೂರು ತೆರನಾಗಿ ಪ್ರಕೃತಿ ಪ್ರದರ್ಶಿಸಿದೆ, ಹೊರಹೊಮ್ಮಿಸಿತ ಕವಿಯ ಕಲ್ಪನಾ ವಿಲಾಸಕ್ಕೂ, ಭಾವಲಹರಿಗೂ, ಚಿಂತನಾ ತರಂಗಗಳಿಗೂ ಮಹತ್ವದ ಕಾರಣವಾಗಿ ಕವಿಯ ಕಾವ್ಯಸ್ಫೂರ್ತಿಯ ಸಂಜೀವಿನಿ ಶಕ್ತಿಯಾಗಿ ಕಾಣಿಸಿಕೊಂಡಿರುವುದನ್ನು ಅರಿಯ ಬಹುದಾಗಿದೆ. ಗೌರೀಶ ಕಾಯ್ಕಿಣಿಯವರು ಹೇಳುವಂತೆ ಅದು ಅವರ ಕಾವ್ಯ ಜೀವನದ ಜೀವದುಸಿರು. ಆದಿನಿಂದ ಇಂದಿನವರೆಗೂ ಈ ಪ್ರಕೃತಿ ಪ್ರೇಮ, ನಿಸರ್ಗೋಪಾಸನೆ ಎಂದಿನಷ್ಟೇ ಕಳಕಳಿಯಿಂದ ನಳನಳಿಸಿ ಸ್ಫುಟ

ಗೊಳ್ಳುತ್ತದೆ.[3] ಪ್ರಕೃತಿ ಸೌಂದರ್ಯದ ಸಾನ್ನಿಧ್ಯದಲ್ಲಿ ಕವಿ, ಚೈತನ್ಯದ ಝರಿಯನ್ನು, ಬಾಳ ತೊಳೆಯುವ, ಬದುಕನ್ನು ಸಿಂಗರಿಸುವ ಮಂತ್ರವನ್ನು ಕಂಡುಕೊಂಡು ಅದರಲ್ಲಿ ಐಕ್ಯಾನುಭವವನ್ನು ಸಾಧಿಸಿ ತನ್ನತನವನ್ನು ಇಲ್ಲಗೈಯುವ ಆಶಯವನ್ನು ಹೊಂದುತ್ತಾನೆ.

ರಸಾಹ್ಲಾದಿನಿ ಪರಾ ಪ್ರಕೃತಿ ಸಂಜೀವಿನಿ
ನಿನ್ನ ನೀನಿಲ್ಲಗೆಯ್
ಅಲ್ಪತೆಯು ಕರಗಿ ಒಂದಾಗಲಿ–'ಮಾನಸ ಪೂಜೆ' (ಆಕಾಶ ಬುಟ್ಟಿ)

ರಮ್ಯ ಮನೋಹರವಾಗಿ ಕಂಗೊಳಿಸುವ ಸೃಷ್ಟಿಸೌಂದರ್ಯ ಕವಿಯ ಪಾಲಿಗೆ ವಿಶ್ವಕವಿಯ ದೃಶ್ಯಕಾವ್ಯ. ಸಹೃದಯಿಯಾದ ಕವಿಯ ಆತ್ಮ ಅದರಲ್ಲಿ ರಸನಿಮಗ್ನವಾಗುತ್ತಿದೆ.

ಮಹಾಕಾವ್ಯವೀ ಭವ್ಯಸೃಷ್ಟಿ ಇದನೋದಿದನಿತು ರಮ್ಯ
ಮಹಾಕವಿಯ ವಿದ್ವದ್ವಿಭೂತಿ ಅನುಭಾವಿ ಹೃದಯಗಮ್ಯ
-'ವಿಶ್ವಕವಿಯ ದೃಶ್ಯಕಾವ್ಯ'(ಆಕಾಶಬುಟ್ಟಿ)

ಅಷ್ಟೇ ಅಲ್ಲ, ಬಾಳಬಿಸಿಲಲ್ಲಿ ಬಳಲಿ ಬೆಂಡಾದ ದಾರಿಕಾರನಿಗೆ ಪ್ರಕೃತಿ ಸೌಂದರ್ಯೋಪಾಸನೆಯ ಅವಶ್ಯಕತೆಯನ್ನು, ಅದರಿಂದ ಲಭ್ಯವಾಗುವ ಆತ್ಮಶಾಂತಿಯ, ಆನಂದದ ಸ್ವರೂಪವನ್ನು ಕವಿಜೀವ ತನ್ನ ಎಳೆವಯಸ್ಸಿನಲ್ಲಿಯೇ ಕಂಡುಕೊಂಡಿದೆ.

ಪ್ರಕೃತಿ ತನ್ನೆದೆಯ ಮಧುವಾಟಿಕೆಯ ತೆರೆದಿರಲು
ಅದನು ತಣಿ ಹೀರದೆಯೆ ಸಾಗಬಹುದೆ ?
ಯಾರಿಗೀ ಸುಂದರತೆ? ಯಾರಿಗೀ ಪರವಶತೆ ?
ಯಾರ ಸುಖಕೀ ಸೃಷ್ಟಿ ನಿನಗಲ್ಲದೆ ?
o o o
ಬಾಳಬಿಸಿಲಲಿ ಬಳಲಿ ದಣಿದು ಬಂದಿಹ ಪಥಿಕ
ಮರದ ತಣ್ಣೆಳಲೊಂದೆ ನಿನಗಾಸರ –'ಪಥಿಕ (ಆಕಾಶಬುಟ್ಟಿ)

ಹೀಗೆ ನಿಸರ್ಗವನ್ನು ಕುರಿತ ಕವಿಯ ಸಂಬಂಧ, ಯಥಾರ್ಥತೆಯಿಂದ ಕೂಡಿದ ಸಹಜ ಸಂಬಂಧ. ಅದರ ಉದ್ದೇಶವಾದರೂ ನಿಸರ್ಗ ಸೌಂದರ್ಯದೆದುರಾಳಕ್ಕೆ ಇಳಿದು ಕರಗಿದ ತನ್ನೆದೆಯಲ್ಲಿ ಸಂತೋಷ, ಪರವಶತೆಯನ್ನು ಕಂಡುಕೊಳ್ಳುವದೇ ಹೊರತು ಅದನ್ನೇ ಒಂದು ಮಾಧ್ಯಮವನ್ನಾಗಿ ಮಾಡಿಕೊಂಡು, ಪ್ರಕೃತಿಯ ಶ್ವಾಸಕೋಶದಿಂದ ಜಾರಿಕೊಂಡು ಆಧ್ಯಾತ್ಮದ ಕೋಶಕ್ಕೆ ಸೇರಿಕೊಳ್ಳುವದು ಈ ಕವಿಯ ಆಶಯವಲ್ಲ. ಅಂತೆಯೇ ನಿಸರ್ಗದೊಡನಿರುವ ಕವಿಯ ಸಂಬಂಧದಲ್ಲಿ ನೈಜತೆ, ಪ್ರಾಮಾಣಿಕತೆ ಮಾತ್ರವಲ್ಲ ನೆಲದ ರುಚಿಯೂ ಕೂಡ ಅನುಭವಕ್ಕೆ ಬರುತ್ತದೆ. ನಿಸರ್ಗವನ್ನು ಕುರಿತ ಹಂಬಲವೂ ಅಷ್ಟೇ ತೀವ್ರವಾಗಿದೆ.

3 'ಚೆನ್ನವೀರ ಕಣವಿಯವರ ಕಾವ್ಯದೃಷ್ಟಿ'. (1977) ಗೌರೀಶ ಕಾಯ್ಕಿಣಿ; ಪು. 20

ಎಲ್ಲೊ ಅಂಗೈಯಗಲ ಹಸಿರು ಕಂಡರೆ ಸಾಕು
ಮನದ ಆಸೆಗಳಲ್ಲಿ ಸೇರುತಿಹವು –'ನಿಯಮೋಲ್ಲಂಘನ' (ಆಕಾಶಬುಟ್ಟಿ)

ಹೀಗೆ ಪ್ರಕೃತಿಯ ಸಾನ್ನಿಧ್ಯದಲ್ಲಿ ಈ ಕವಿಗೆ ಬದುಕು ಇದೆ; ಹೊಸ ಆಸೆ, ಹೊಸ ಹಂಬಲಗಳಿವೆ; ಬಾಳ ಚೈತನ್ಯವಿದೆ; ಕಾವ್ಯ ಚೈತನ್ಯದ ಪ್ರೇರಣೆ ಸ್ಫೂರ್ತಿ ಇದೆ.

ಕಬ್ಬಿಗನ ನುಡಿಯಿಲ್ಲಿ 'ಓಂ ನಮೋ' ಎಂದಿಹುದು:
ಪ್ರಕೃತಿ ಸೌಂದರ್ಯದೌದಾರ್ಯಕ್ಕಿನ್ನಲ್ಪ ತನು—'ಒಂದು ಸಂಜೆ'
(ಆಕಾಶ ಬುಟ್ಟಿ)

ಈ ಪರಿಯಾಗಿ ಕವಿಯ ಆತ್ಮ ಹಾಗೂ ಅವನ ಬದುಕಿನ ಆಸೆ ಆಕಾಂಕ್ಷೆಗಳೆಲ್ಲ ಸೃಷ್ಟಿಸೌಂದರ್ಯವನ್ನು ಸುತ್ತಿಕೊಂಡು ಕುಡಿಬಿಡುತ್ತ, ಸುರುಳಿ ಬಿಚ್ಚುತ್ತ ಬೆಳೆದಿರುವುದನ್ನು ಅವರ ಪ್ರತಿಯೊಂದು ಕವನ ಸಂಗ್ರಹವೂ ಪ್ರತಿಸಿಧಿಸುತ್ತದೆ. ಒಟ್ಟಿನಲ್ಲಿ ಪ್ರಕೃತಿಯ ಕೈವಾಡವಿಲ್ಲದ ಕವನಗಳೇ ಕಣವಿಯವರಲ್ಲಿ ದುರ್ಲಭ. ಕವಿ ತನ್ನ ಅನುಭವ ಭಾವನೆಗಳನ್ನು—ಅವು ಏನನ್ನೇ ಕುರಿತಾಗಿರಲಿ—ಮೂರ್ತಗೊಳಿಸುವಾಗ ಪ್ರಕೃತಿ, ಏನೂ ಇಲ್ಲವೆಂದರೂ ತನ್ನ ಎಸಳಿನ ಉಗುರನ್ನಾದರೂ ಇಟ್ಟು ತನ್ನ ಸೇವೆಗೆ ಸಂತೃಪ್ತಿಪಟ್ಟುಕೊಳ್ಳುವಂತೆ ಕಾಣುತ್ತದೆ. ಹೀಗಾಗಿ ಕಣವಿಯವರ ಕಾವ್ಯದ ಸ್ಫೂರ್ತಿಯ ಮೂಲವನ್ನು ಪ್ರಕೃತಿಯ ಸೌಂದರ್ಯದಲ್ಲಿಯೇ ಗುರುತಿಸುವಂತಾಗಿದೆ. ತಮ್ಮ ಬರವಣಿಗೆಯ ಪ್ರೇರಣೆಯನ್ನು ಕುರಿತು ಹೇಳುತ್ತ ಒಂದು ಕಡೆ ಸ್ವತಃ ಕಣವಿಯವರೇ "———ಸುತ್ತಣ ಪ್ರಕೃತಿಯನ್ನು ಕಂಡಾಗ ಯಾವದೋ ಒಂದು ಭಾವ ಮನಸ್ಸಿನಲ್ಲಿ ಜಾಗೃತಗೊಳ್ಳುತ್ತಿತ್ತು. ಮೋಡಗಳು ವಿಚಿತ್ರವಾದ ಆಕಾರ ತಾಳುವುದನ್ನೂ ಅವು ಮಳೆಯಾಗಿ ಸುರಿಯುವ ಚಮತ್ಕಾರವನ್ನೂ ಕಂಡು ನಾನು ವಿಸ್ಮಯಾನಂದದಲ್ಲಿ ಮುಳುಗುತ್ತಿದ್ದೆ. ಈಗಲೂ ಮಳೆಬರುತ್ತಿರುವಾಗ ಕಿಟಕಿ ತೆರೆದು ಹೊರಗಿನ ಸೃಷ್ಟಿಯನ್ನು ನೋಡದೆ ಮನಸ್ಸಿಗೆ ಸಮಾಧಾನವೆನಿಸುವುದಿಲ್ಲ. ಹಳ್ಳಿಯಲ್ಲಿ ಕಳೆದ ನನ್ನ ಬಾಲ್ಯಜೀವನವು ಆಗಿನ ಕಾಲದ ಜೀವನದ ಸೊಬಗನ್ನು ಸಾಕಷ್ಟು ತುಂಬಿಕೊಂಡಿತು. ಅಲ್ಲಿಯ ಹೊಲ, ತೋಟ, ಗುಡ್ಡ, ಮರಡಿ, ಹಳ್ಳ— ಝರಿ—ರಂಗುರಂಗಾದ ಬಾಳು ಇವುಗಳಲ್ಲಿಯ ಕಾವ್ಯಾಂಶವನ್ನು ನನ್ನ ಮನಸ್ಸು ಆಗ ಗ್ರಹಿಸಿಕೊಂಡು ಭಾವಕೋಶವನ್ನು ತಕ್ಕಮಟ್ಟಿಗೆ ಪುಷ್ಟಿಗೊಳಿಸಿಕೊಂಡಿರಬೇಕು."[4] ಎಂದು ಹೇಳಿರುವರಲ್ಲದೆ "ಈಗಲೂ ವಿಸ್ತಾರವಾದ ಪ್ರಕೃತಿಯ ಮಧ್ಯದಲ್ಲಿ ಸಾಗುತ್ತಿರುವ ಜೀವನವೇ ನನಗೆ ಸ್ಫೂರ್ತಿಯ ಸೆಲೆಯಾಗಿದೆ,"[5] ಎಂದು ಹೇಳಿರುವುದನ್ನು ಲಕ್ಷಿಸಿದರೆ ಅವರ ಜೀವನ ಹಾಗೂ ಕಾವ್ಯದಲ್ಲಿ ಪ್ರಕೃತಿಗಿರುವ ಸ್ಥಾನಮಾನಗಳ ಮಟ್ಟವನ್ನು ಅರ್ಥಮಾಡಿಕೊಳ್ಳಬಹುದು. ಈ ರೀತಿ ಕವಿಯ ವ್ಯಕ್ತಿತ್ವ ಮತ್ತು ಕಾವ್ಯಪ್ರತಿಭೆಯ ಜೀವಾಣುಗಳು

---

4 'ಸಾಹಿತ್ಯ ಚಿಂತನ' (1970) 'ನನ್ನ ನಾ ಕಂಡಂತೆ 1964ರಲ್ಲಿ ಬರೆದ ಲೇಖನ];
5 ಅಲ್ಲೆ; ಪು. 154.

ಪ್ರಕೃತಿಯಿಂದಲೇ ಪ್ರೊಟೀನನ್ನು, ಜೀವಸತ್ವವನ್ನು ನಿರಂತರವಾಗಿ ಪಡೆಯುತ್ತ ಬೆಳೆದು ಬಂದುದರಿಂದಲೇ ಅವುಗಳಲ್ಲಿ ಎಂದಿಗೂ ಕ್ಷಯಕಾಣಿಸಿಕೊಳ್ಳಲಿಲ್ಲ. ಇಂಥ ಪ್ರಕೃತಿಪ್ರೇಮದ ಅಸಾಧಾರಣ ಬೆಂಬಲ ಇದ್ದಿತೆಂದೇ, ಕಾವ್ಯಾರಂಭದಲ್ಲಿದ್ದ ಅಹಿತಕಾರಿಯಾದ ಪರಿಸರದಲ್ಲಿ ಕಂಡುಬಂದ ಸಂದಿಗ್ಧ ಪರಿಸ್ಥಿತಿ, ಒಂದು ಬಗೆಯ ವಿಶಿಷ್ಟ ಸಮಸ್ಯೆ ಈ ಕವಿಯನ್ನು ಕಂಗೆಡಿಸಿ ನಿರುತ್ಸಾಹಿಯನ್ನಾಗಿ ಮಾಡಲಿಲ್ಲ. ಮುಂದುವರೆದು ಹೇಳುವುದಾದರೆ, ಈ ಕವಿಯು ಕಾವ್ಯಕ್ಕೆ ಆರಂಭಕಾಲದಲ್ಲಿಯೂ ಕೂಡ ತನ್ನ ಉಪಜೀವನಕ್ಕಾಗಿ ತನ್ನ ಸಮಕಾಲೀನ ಶ್ರೀಮಂತ ಕವಿಗಳಾಗಿದ್ದ ಕುವೆಂಪು, ಬೇಂದ್ರೆಯಂಥ ಕವಿಗಳಿಗೆ ಕೈಯೊಡ್ಡುವ ಅವರ ಅನುಕರಣೆ ಮಾಡುವ ಪ್ರಮೇಯ ಒದಗಲಿಲ್ಲ.

ಕಣವಿಯವರು, ಕುವೆಂಪು ಮತ್ತು ಬೇಂದ್ರೆಯವರ ಪ್ರಭಾವಕ್ಕೆ, ತಮ್ಮ ಕಾವ್ಯೋದ್ಯಮದ ಆರಂಭಕಾಲದಲ್ಲಿ ಮಣಿದವರಾದರೂ, ಆ ಮಣಿತ ಸಹೃದಯತೆಯ ದ್ಯೋತಕವೇ ಹೊರತು ದೌರ್ಬಲ್ಯದ ಕುರುಹಾಗಿ ಎಂದಿಗೂ ಕಾಣಿಸಿಕೊಳ್ಳಲಿಲ್ಲ. ಆದರೂ ಕವಿಗಳ ದವಲತ್ತಾಗಿದ್ದ ಧಾರವಾಡ ಪರಿಸರದಲ್ಲಿ ಬೆಳೆದ ಈ ಕವಿ ದತ್ತವಾಣಿಯಿಂದ ಉತ್ತೇಜನ ಪಡೆದದ್ದೂ ಸುಳ್ಳಲ್ಲ,—

ಧಾರವಾಡದ ನೆಲದ ಗುಣವೇನೊ ಋಣವೇನೊ
ಕವಿಗಾಳಿ ಸವಿಗಾಳಿ ತೀಡುತಿಹುದು:
ಧಾರವಾಡದ ತಾಯ ಮಡಿಲಲ್ಲಿ ಮೊರೆಯಿಟ್ಟ
ದತ್ತವಾಣಿಗೆ ಎದೆಯು ಕೋಡುತಿಹುದು—'ಭಾವಜೀವಿ'

ಮೇಲಾಗಿ 'ನೆಲಮುಗಿಲು' ಸಂಗ್ರಹದಲ್ಲಿ ಹಲವೆಡೆಯಲ್ಲಿ ಅಂಬಿಕಾತನಯದತ್ತರ ಹೆಸರನ್ನು ಎತ್ತಿ ಸ್ಮರಿಸಿರುವುದು, 'ದೀಪಧಾರಿ'ಯನ್ನು ಅವರಿಗೆ ಅರ್ಪಿಸಿರುವದು, 'ಎರಡುದಡ'ದಲ್ಲಿ 'ಎಪ್ಪತ್ತರ ಬೇಂದ್ರೆ'ಯನ್ನು ಕುರಿತು ಅಷ್ಟಪಟ್ಟದಿಯಲ್ಲಿ ಶ್ಲೋಕಾರ ಹೊರಡಿಸಿದ್ದು ಮಾತ್ರವಲ್ಲ 'ಕಾವ್ಯಾಕ್ಷಿ' 'ನೆಲಮುಗಿಲು'ಗಳಿಗೆ ಮುನ್ನುಡಿಯ ಹರಕೆಯನ್ನು ಹೊತ್ತಿರುವದು ಈ ಸಂದರ್ಭದಲ್ಲಿ ಸ್ಮರಣಾರ್ಹ. ಅಲ್ಲದೆ 'ಕಾವ್ಯಾಕ್ಷಿ'ಗೆ ಬರೆದ ಮುನ್ನುಡಿಯಲ್ಲಿಯ ಬೇಂದ್ರೆಯವರ ಮಾತುಗಳಿಂದ ಸ್ಫೂರ್ತಿಯನ್ನು ತಾವು ಪಡೆದಿರುವುದಾಗಿಯೂ ಒಂದೆಡೆ ಹೇಳಿರುವುದುಂಟು.6 ಕುವೆಂಪು ಅವರ ಪ್ರಭಾವಕ್ಕೆ ಒಳಗಾಗಿರುವುದು ಇಷ್ಟು ಸ್ಪಷ್ಟವಲ್ಲವಾದರೂ, ಅವರ ಕಾವ್ಯಪ್ರತಿಭೆ, ಕಲಾಸಿದ್ಧಿಗೆ ಮುಗ್ಧರಾದದ್ದು; ಅಚ್ಚರಿ ಪಟ್ಟಿದ್ದನ್ನು ಅಲ್ಲಗಳೆಯುವಂತಿಲ್ಲ. ಆ ಕಾಲದ ಇಂಥ ಮಹತ್ವದ ಕವಿಗಳ ಪ್ರಭಾವಕ್ಕೆ ಒಳಗಾಗಿಯೂ, ತನ್ನ ಮನೋಧರ್ಮಕ್ಕೆ ಒಗ್ಗುವ ತೆರದಲ್ಲಿ ನಿಸರ್ಗದೊಂದಿಗಿನ ತನ್ನ ಸ್ವಂತ ಸಂಬಂಧವನ್ನು, ಅದರ ಬಗೆಗಿನ ತನ್ನ ವೈಯಕ್ತಿಕ ಅನುಭವ-ಭಾವನೆಗಳನ್ನು, ತನ್ನದೇ ಆದ ಮಾಧ್ಯಮದಲ್ಲಿ ಪ್ರಾಮಾಣಿಕವಾಗಿ ಅಭಿವ್ಯಕ್ತಗೊಳಿಸುವಲ್ಲಿ ಮಹತ್ವಾಕಾಂಕ್ಷಿಯಾದ ಈ

---

ಸಾಹಿತ್ಯ ಚಿಂತನ; ಪು. 153.

ಕವಿ ಸ್ವತಂತ್ರ ಅಸ್ತಿತ್ವವನ್ನು, ತನ್ನತನವನ್ನು ಕಾಯ್ದುಕೊಂಡು ಪ್ರತ್ಯೇಕವಾದ ಬೆಳವಣಿಗೆಯನ್ನು ಪಡೆದಿದ್ದಾನೆ.

ನಿಸರ್ಗ ವ್ಯಾಪಾರ ಬೇಂದ್ರೆಯವರ ಪಾಲಿಗೆ ಒಂದು ಜಂಗೀಜಾತ್ರೆ; ಭರ್ಜರಿ ಉತ್ಸವ. ಸಂತೋಷ, ಸಡಗರ, ಸಂಭ್ರಮ, ಹರ್ಷೋತ್ಸಾಹದಿಂದ ಮೈಮರೆತು ಹಿಗ್ಗಿ-ಹಾಡಿ, ಕುಣಿದು-ಕುಪ್ಪಳಿಸುವ ದತ್ತ ಮನಸ್ಸಿನ, ಮತ್ತು ಕಾವ್ಯದ ರೀತಿ ಜಾನಪದ ರೀತಿಯದು; ಉತ್ಸಾಹ ಹುರುಪು, ಹುಮ್ಮಸ್ಸುಳ್ಳ ಈ ಕವಿಯಲ್ಲಿ ತನ್ಮಯತೆ, ತಲ್ಲೀನತೆ, ಸ್ಥಾಯಿಯಾಗಿ ಕಂಡರೂ, ಎಷ್ಟೋ ಸಲ ಅವೆಲ್ಲ ಸಹೃದಯನ ಅರಿಕೆಗೆ ಅಸ್ಪಷ್ಟವಾದ, ಒಮ್ಮೊಮ್ಮೆ ಸ್ಪಷ್ಟವಾದ ದರ್ಶನದ ನೆಲಗಟ್ಟನ್ನು ಉದ್ದೇಶವಾಗಿ ಇಟ್ಟುಕೊಂಡಿವೆ. ಒಟ್ಟಿನಲ್ಲಿ ಬೇಂದ್ರೆಯವರ ಕಾವ್ಯದೃಷ್ಟಿ 'ದಾರ್ಶನಿಕ ಜಾನಪದ'. ಆದರೆ ಕಣವಿಯವರ ಪ್ರಕೃತಿಯೇ ಬೇರೆ; ಕಾವ್ಯದ ದೃಷ್ಟಿಯೇ ಬೇರೆ. ಮೂಲತಃ ಕಣವಿಯವರದು ಯಾವ ಅಲ್ಲೋಲ ಕಲ್ಲೋಲವೂ ಇಲ್ಲದ, ಧಗೆ ಧಗೆಯೂ ಇಲ್ಲದ ಶಾಂತ-ಪ್ರಶಾಂತವಾದ, ಸ್ನಿಗ್ಧ-ಮುಗ್ಧವಾದ ಪ್ರಕೃತಿ. ಶಾಂತಿಯೆನ್ನುವದು ಪಡೆದುಕೊಂಡುಬಂದ, ಕಾಪಾಡಿಕೊಂಡು ಬಂದ, ಅವರ ಪಾಲಿನ ಅತ್ಯಂತ ಮಹತ್ವದ ಆತ್ಮನಿಧಿ; ಮಾತ್ರವಲ್ಲ ಅವರ ಒಂದು ಬಗೆಯ ತಪಸ್ಸೂ ಹೌದು; ಅವರ ಬದುಕಿನ ಚರಮೋದ್ದೇಶವೂ ಹೌದು. ಒಂದು ಸಂಜೆಯ ಪ್ರಶಾಂತ ವಾತಾವರಣದಲ್ಲಿ ಮುಳುಗಿದ ಕವಿ "ಸಾವು ಬಂದರೆ ಇಂಥ ಶಾಂತ ಸಮಯದಿ ಬರಲಿ" ಎನ್ನುವಷ್ಟರ ಮಟ್ಟಿಗೆ ಆದರ ತೀವ್ರ ಹಂಬಲದಲ್ಲಿ ಕಾಣಿಸಿಕೊಳ್ಳುತ್ತಾನೆ. ಈ ಒಂದು ತೀವ್ರ ಹಂಬಲವೇ ಅವರ ಮನಸ್ಸನ್ನು ನಿಸರ್ಗದತ್ತ ಮುಖ ಮಾಡಲು ಪ್ರೇರೇಪಿಸಿದ್ದು. ಸಂತೆಗದ್ದಲವನ್ನು ಸೇರದ 'ನಾಗರಿಕ ನಾಗರ ಹಾವು ಹುತ್ತುಗಟ್ಟದ ಹಳ್ಳಿಯಲ್ಲಿ' ಬೆಳೆದ ಮನಸ್ಸು ಶಾಂತ ಪ್ರಶಾಂತವಾಗ ಧಾರವಾಡದ ಪ್ರಕೃತಿಯೊಂದನೆ ಒಂದು ಬಗೆಯ ಸ್ನೇಹವನ್ನು, ಆತ್ಮೀಯತೆಯನ್ನು ಸಾಧಿಸಿದೆ. ಇಂಥ ಸ್ವಭಾವ ಸಾಮ್ಯದಿಂದಲೇ ನಿಸರ್ಗ ಮತ್ತು ಕವಿಯ ಜೀವನದಲ್ಲಿ ಒಂದು ಬಗೆಯ ಖಾಯಾನು ಸಂಬಂಧ ಬಿಡಿಸಲಾರದ ಬೆಸುಗೆಯಾಗಿ ಕಾಣಿಸಿಕೊಂಡಿದೆ.

ಶಾಂತಿಯಂತೆ ಪ್ರೀತಿಯೂ ಕೂಡ ಅವರ ವ್ಯಕ್ತಿತ್ವ ಹಾಗೂ ಮನೋಧರ್ಮದಲ್ಲಿ ಗುರುತಿಸಬಹುದಾದ ಮತ್ತೊಂದು ಮಹತ್ವದ ಅಂಗ. "ನಮ್ಮ ಬಾಳಿಗೆ ಪರಮ ಪ್ರೀತಿಯೇ ನೆಲಗಟ್ಟು ಪ್ರೀತಿಯೇ ಚೌಕಟ್ಟು ಬೇರೆಯಲ್ಲ" ಎನ್ನುವುದು ಅವರ ಬದುಕಿನ ಸಿದ್ಧಾಂತಗಳಲ್ಲಿ ಒಂದು. ಈ ಶಾಂತತೆ ಮತ್ತು ಪ್ರೀತಿಯ ಮನೋಧರ್ಮವೇ ಈ ಕವಿಯನ್ನು ವಿಶಿಷ್ಟ ಭಾವಜೀವಿಯನ್ನಾಗಿ ಮಾಡಿದ್ದು; ಅಂದರೆ ಕಾಯ್ಕಿಣಿಯವರು ಗುರುತಿಸುವಂತೆ–"ಈ ಭಾವನಾತ್ಮಕತೆ "Sloppy Sentiment ಅಲ್ಲ; ಆಳವಾದ ನಿರ್ಭರವಾದ ಇಲ್ಲಿಯ ಭಾವನೆಯ ಮೇಲೆ ಬುದ್ಧಿಯ ವಿವೇಕದ ರಸಪ್ರಜ್ಞೆಯ ಹತೋಟಿ ಇದೆ. ತನ್ನ ಭಾವೋಲ್ಲಾಸವನ್ನು ಉನ್ಮಾದವಾಗದಂತೆ ನೋಡಿಕೊಳ್ಳುವ ಎಚ್ಚರಿಕೆ, ತನ್ನ ಭಾವದ ಉದ್ಗಾರದಿಂದ ತಾನು ತಕ್ಕ ಅಂತರಕ್ಕೆ ನಿಂತು ಅದನ್ನು ತಿಳಿಯಾಗಿಸಿ ರೂಪಿಸುವ

ಹಟವಿಲ್ಲದ ಹಗುರಾದ ಹಿಡಿತ ಇಲ್ಲಿದೆ."[7] ಎಷ್ಟೇ ಆತ್ಮೀಯತೆ ಇದ್ದರೂ ನಿಸರ್ಗದೊಡನೆ ಕವಿಯ ವರ್ತನೆ ಗಾಂಭೀರ್ಯದಿಂದ ಕೂಡಿರುತ್ತದೆ. ಪ್ರಕೃತಿಯ ಬಗೆಗಿನ ಕೌತುಕ ಎಷ್ಟೇ ತೀವ್ರವೇದರೂ ಅದರಲ್ಲಿ ಕಾತುರತೆ ಕಾಣಿಸದ ಒಂದು ರೀತಿಯ ಸಂಯಮತೆ ಕಾಣದೊರೆಯುತ್ತದೆ. ಇದರಿಂದಾಗಿ ಪ್ರಕೃತಿಯನ್ನು ಕುರಿತ ಭಾವಾವೇಶದ ಮೇಲೆ ಕವಿಯ ಹತೋಟಿ ಕಾಣಿಸಿಕೊಳ್ಳುತ್ತದೆ. ಆದ್ದರಿಂದ ಕವಿ ನಿಸರ್ಗಸೌಂದರ್ಯದಿಂದ ಅಮಲೇರಿ ವರ್ತಿಸುವದಿಲ್ಲ. ಹೀಗಾಗಿ ಬೇಂದ್ರೆಯವರಲ್ಲಿ ಮೈಚೆಳಿಬಿಟ್ಟು ಹೊರಹೊಮ್ಮುವ ತನ್ಮಯತೆ, ಉತ್ಸಾಹ, ರಭಸ ಜಾನಪದೀಯವಾಗಿ ಕಂಡರೆ ಕಣವಿಯವರಲ್ಲಿ ನಾಗರಿಕ ಮಯವಾಗಿ ಕಾಣಿಸಿಕೊಳ್ಳುತ್ತವೆ. ಇದಕ್ಕೆ ಕಣವಿಯವರ ಬದುಕಿನ ವೃತ್ತಿ ಪರಿಸರವೂ ಕಾರಣವಾಗಿರಬೇಕು. ಪ್ರಕೃತಿ ಲೋಕದಷ್ಟೆ ಮಾನವಲೋಕವನ್ನು ಪ್ರೀತಿಸಿದ, ಅವೆರಡನ್ನೂ ಕುರಿತು ಸಮಶ್ರದ್ಧೆಯುಳ್ಳ ಕವಿಯ ಆತ್ಮ, ನಿಸರ್ಗದ ಚೆಲುವಿನಾಳಕ್ಕೆ ಇಳಿಯುತ್ತ ಹೊರಟು ಬದುಕಿನ ಒಂದು ಸ್ತರವನ್ನೊ, ಮಾನವೀಯ ಅಂತಃಕರಣದ ನೆಲೆಯನ್ನೋ ಮುಟ್ಟುತ್ತಿದೆಯೇ ಹೊರತು ಬೇಂದ್ರೆಯವರಂತೆ ಬದುಕಿನ ರಹಸ್ಯವನ್ನಾಗಲಿ, ಅಲೌಕಿಕವಾದ ದರ್ಶನವನ್ನಾಗಲಿ ಸ್ಪರ್ಶಿಸುವದಿಲ್ಲ.

ಇನ್ನು ಕುವೆಂಪು ಅವರಂತೆ ಕಣವಿಯವರು "ಪ್ರಕೃತಿಯಾರಾಧನೆಯೆ ಪರಮನಾರಾಧನೆ'ಯಾಗಿ ಕಾಣಲಿಲ್ಲ. 'ಸೊಬಗಿನಲಿ ಶಿವನಿಹನು ಶಿವನೆ ಸೊಬಗಾಗಿಹನು" ಎಂದು ನಿಸರ್ಗ ಸೌಂದರ್ಯದಲ್ಲಿ ದೈವತ್ವವನ್ನು ಗುರುತಿಸುವದು ಇವರ ಉದ್ದೇಶವಲ್ಲ. ನಿಸರ್ಗವನ್ನು ಕುರಿತ ಇವರ ಭಾವನೆಗಳು ಲೋಕೋತ್ತರವಾಗಿ, ಊರ್ಧ್ವಪರವಾಗಿ, ಮರ್ತ್ಯದ ಸಂಸರ್ಗವನ್ನು ಕಳೆದುಕೊಂಡವುಗಳಾಗಿ, ಇಂದ್ರಿಯ ಪರಿಮಿತವನ್ನು ಮೀರಿದವುಗಳಾಗಿಯೂ ಕಾಣುವದಿಲ್ಲ. ನಿಸರ್ಗಾಸ್ವಾದನೆಯಲ್ಲಿ ಅಬ್ಬರ-ಆವೇಗ, ಉದ್ವೇಗ-ಉದ್ರೇಕಗಳ ಅತಿರೇಕಗಳು ಈ ಕವಿಗೆ ಇನ್ನೂ ದೂರ. ಕುವೆಂಪು ಅವರಂತೆ ಪ್ರಕೃತಿಯ ಸಾನ್ನಿಧ್ಯವೊದಗಿದರೆ ಸಾಕು ಸೌಂದರ್ಯದ ಕಿಡಿಸಿಡಿದಂತೆ, ರಸಜ್ವಾಲೆತಾಗಿದಂತೆ ಬೆಬ್ಬೆರಗಾಗಿ ಈ ಕವಿಯ ಚಿತ್ತ ಮೂರ್ಛೆ ಹೋಗುವದಿಲ್ಲ. ಪ್ರಕೃತಿಲೋಕದ ಚೆಲುವಿನ ಕಣಕಣಗಳನ್ನು ಕಣ್ಮನಗಳಲ್ಲಿ ತುಂಬಿಕೊಂಡು, ಅದರ ಒಂದೊಂದು ಅಣುವಿನಾಳಕ್ಕೂ ಹೊಕ್ಕು ದಿಗ್ಭ್ರಾಂತನಾಗಿ, ಅದ್ಭುತ ಬ್ರಹ್ಮರಹಸ್ಯವನ್ನು ಸ್ಫೋಟಿಸಿ, ತನ್ಮೂಲಕ ಓದುಗರನ್ನು ತಬ್ಬಿಬ್ಬುಗೊಳಿಸುವ ಅತೀಂದ್ರಿಯಜಾಲವನ್ನು ಬೀಸುವ ರೀತಿ ಈ ಕವಿಯದಲ್ಲ. ಕಣವಿಯವರ ಪಾಲಿಗೆ ನಿಸರ್ಗ ಹೊಕ್ಕು ಬಳಕೆಯುಳ್ಳ, ತನ್ನದೇ ಆದ ಬದುಕನ್ನುಳ್ಳ ಆತ್ಮೀಯ ನೆರೆಹೊರೆ. ಅದರ ಸುಖದುಃಖಗಳನ್ನು ಕೇಳಿ ತನ್ನ ಸುಖ ದುಃಖಗಳನ್ನು ಹೇಳಿ–ಎರಡೂ ಬದುಕೂ ಒಂದೇ ಎಂಬ ನಂಬಿಕೆಗೆ ಬಂದು ನೆಮ್ಮದಿಗೊಳ್ಳುವದು ಇವರ ರೀತಿ.

ಕುವೆಂಪು ಅವರಿಗೆ ಪ್ರಕೃತಿ ಸೌಮ್ಯ ಶಂಕರಿಯೂ ಹೌದು ; ರುದ್ರಭಯಂಕರಿಯೂ ಹೌದು. ಕಣವಿಯವರಿಗಾದರೂ ಅದು ಯಾವಕಾಲಕ್ಕೂ ಸೌಮ್ಯರೂಪಿ. ಈ ಕಾರಣ

7) 'ಚೆನ್ನವೀರ ಕಣವಿಯವರ ಕಾವ್ಯದೃಷ್ಟಿ (1977) ಗೌರೀಶ ಕಾಯ್ಕಿಣಿ: ಪು: 13

ದಿಂದಾಗಿ ಕಣವಿಯವರಲ್ಲಿ ಬಯಲು ಸೀಮೆಯ ಪ್ರಕೃತಿಯ ಲಲಿತ ಮನೋಹರವಾದ, ಸೌಮ್ಯ-ಸ್ನಿಗ್ಧವಾದ ಮುಖಗಳನ್ನು ಕಾಣಬಹುದಲ್ಲದೆ ಕುವೆಂಪು ಅವರಲ್ಲಿ ಆಗಾಗ ಕಾಣು ವಂತೆ ಪ್ರಕೃತಿಯ ರುದ್ರಭಯಂಕರವಾದ, ಕ್ರೂರ-ಕರಾಳವಾದ, ಬೀಭತ್ಸ ಮುಖಗಳು ಕಾಣದೊರೆಯವು. ಮುಖ್ಯವಾಗಿ ಕಣವಿಯವರು ತಮ್ಮ ಅನುಭವಕ್ಕೆ ಮೀರಿದ, ಮನೋ ಧರ್ಮಕ್ಕೆ ಒಗ್ಗದ ಪ್ರಕೃತಿಯ ಮುಖಗಳನ್ನು ಚಿತ್ರಿಸುವ ಹವ್ಯಾಸಕ್ಕೆ ಹೋಗದೆ, ತಮ್ಮ ಕಾವ್ಯರಚನೆಯ ಎಂಥ ಹುಮ್ಮಸ್ಸಿನ ಕಾಲದಲ್ಲೂ ಇಂಥ ಪ್ರಾಮಾಣಿಕತೆಯನ್ನು, ಸಹಜ ವಾದ ಆತ್ಮನಿಷ್ಠೆಯನ್ನು ಕಾಪಾಡಿಕೊಂಡು ಬಂದರೆಂದೇ ಅವರ ಕವನಗಳಲ್ಲಿ ನಿಸರ್ಗ ಹಸಿರು ಆರದಂತೆ, ಉಸಿರು ಹಾರದಂತೆ ನವನವೋನ್ಮೇಷಶಾಲಿನಿಯಾಗಿ ನಿರಂತರವಾಗಿ ನಿಂತುಕೊಳ್ಳಬಲ್ಲದಾಯಿತು.

ಪ್ರಕೃತಿಯ ಚೆಲುವು ಒಲುವುಗಳ ಅನುಭವವನ್ನು ಅದರ ಪ್ರಶಾಂತ ಪರಿಸರವನ್ನು ಸೌಮ್ಯ ಅಂಗಾಂಗಗಳನ್ನು ಯಾವ ಉದ್ರೇಕ-ಉದ್ವಿಗ್ನತೆಗಳಿಲ್ಲದೆ, ಹೀಗೆ ಆನಂದರೂಪಿ ಯಾದ ಪ್ರಕೃತಿ ಸೌಂದರ್ಯಕ್ಕೆ ಆಕಾರವನ್ನು ಕೊಟ್ಟವರಲ್ಲಿ ಮತ್ತು ನವ್ಯಸಂಪ್ರದಾಯದಲ್ಲೂ ಪ್ರಕೃತಿಯನ್ನು ನಾಜೂಕಾಗಿ ಬಳಸಿಕೊಂಡು ಸಮನ್ವಯವನ್ನು ಸಾಧಿಸಿದವರಲ್ಲಿ ಜಿ. ಎಸ್ ಶಿವರುದ್ರಪ್ಪನವರನ್ನುಳಿದು ಬೇರೊಬ್ಬರ ಹೆಸರನ್ನು ಎತ್ತಿ ಹೇಳುವುದು ಕಷ್ಟ. ಕಣವಿ ಯವರು ಬೇಂದ್ರೆ, ಮಧುರಚೆನ್ನರ ಪ್ರಭಾವಲಯದಲ್ಲಿ ಬೆಳೆದು ಬಂದವರಾದರೆ, ಶಿವ ರುದ್ರಪ್ಪನವರು ಕುವೆಂಪು ಅವರ ಪ್ರಭಾವಲಯದಲ್ಲಿ ಬೆಳೆದು ಬಂದವರು. ಹೀಗೆ ಭಿನ್ನ ಪ್ರಕೃತಿಯವರಾದ ಬೇಂದ್ರೆ-ಕುವೆಂಪು ಅವರ ಪ್ರಭಾವದಲ್ಲಿ ಬೆಳೆದು ಬಂದರೂ ಇವರಿಬ್ಬ ರದೂ ಅವಳಿ ಜವಳಿಯಂತೆ ಕಾಣುವ ಒಂದೇ ಪ್ರಕೃತಿ ; ಶಾಂತ ಸೌಮ್ಯ ಮನೋವೃತ್ತಿ. ಇಬ್ಬರ ಕವನಗಳಲ್ಲೂ ನಿಸರ್ಗ ಒಂದೇ ಬಗೆಯಾಗಿ ಕಾಣಿಸಿಕೊಳ್ಳುವದು ಹೆಚ್ಚು. ನಿಸರ್ಗದ ಒಂದು ಬಿಡಿಯಂಗದ ಕಾಂತಿಯಲ್ಲಿ ಕರಗಿಹೋದ ತನ್ನ ಆತ್ಮವನ್ನು ಬಿಂದುಗೊಳಿಸಿ, ಆ ಆತ್ಮಬಿಂದುವಿನಲ್ಲಿ ಮೂಡುವ ವರ್ಣಮಯವಾದ ಭಾವತರಂಗಗಳನ್ನು ಕಲಾತ್ಮಕವಾಗಿ ಬಿಡಿಸುವಲ್ಲಿ ಶಿವರುದ್ರಪ್ಪನವರು ತಮ್ಮ ವೈಶಿಷ್ಟ್ಯವನ್ನು ತೋರಿದರೆ, ಕಣವಿಯವರು ಪ್ರಕೃತಿ ಚಿತ್ರಣದಲ್ಲಿ ದೇಶೀಯ ಪ್ರತಿಮೆಗಳನ್ನು ಬಳಸಿಕೊಳ್ಳುವಲ್ಲಿ ಹೆಚ್ಚಿನ ಆಸ್ತ್ರಾತ್ಮಕತೆ ಯನ್ನು ಪ್ರದರ್ಶಿಸುವಲ್ಲಿ ತಮ್ಮ ವೈಶಿಷ್ಟ್ಯವನ್ನು ಕಾಣಿಸಿದ್ದಾರೆ. ಇಷ್ಟಿದ್ದರೂ ಕೆಲವೆಡೆ ಯಲ್ಲಂತೂ ಒಬ್ಬರ ಕವನವನ್ನು ಓದಿದರೆ ತತ್‌ಕ್ಷಣವೇ ಇನ್ನೊಬ್ಬರ ಕವನ ಮನದಲ್ಲಿ ಸುಳಿದು ಹೋಗುತ್ತದೆ. ಕಣವಿಯವರ—

"ಪುಟ್ಟ ಹಕ್ಕಿಯ ಇಂಥ ಪುಟ್ಟ ಎದೆಯೊಳದೆಂತು
ಗಾನ ಚಿಲುಮೆಯು ತಾನೆ ಚಿಮ್ಮುತಿಹುದೊ"—'ಮತ್ತೊಂದು ಪುಟ್ಟ ಹಕ್ಕಿಗೆ'
[ಮಧುಚಂದ್ರ]

ಎಂಬಲ್ಲಿ

ಇಷ್ಟು ಹಚ್ಚನೆ ಹಸುರು ಗಿಡದಿಂ
ದೆಂತು ಮೂಡಿತು ಬೆಳ್ಳಗೆ ...'ಮಲ್ಲಿಗೆ' (ಚೆಲುವು-ಒಲವು)

ಎಂಬ ಶಿವರುದ್ರಪ್ಪನವರ ಅಚ್ಚರಿಯ ಭಾವಾಭಿವ್ಯಕ್ತಿಯಲ್ಲಿ ಇರುವ ಸಾಮ್ಯವನ್ನು ಗುರುತಿಸಬಹುದು.

ಚಿಟ್ಟಗುಬ್ಬಿ ಪುಟ್ಟಗುಬ್ಬಿ
ಮುಳ್ಳುಬೇಲಿಯನ್ನು ತಬ್ಬಿ
ಚೀರಿಚೀರಿ ಗಂಟಲುಬ್ಬಿ
ಒಡೆಯುವಂತೆ ಹಾಡಿತು.
ಕೇಳಲಿಲ್ಲ ಜಗದ ಕಿವಿ
ನೋಡಲಿಲ್ಲ ಬಾನ ರವಿ
ನೀನಾದರೂ ಬಾರೊ ಕವಿ

ಎಂದು ಅಂಗಲಾಚಿತು''...'ಒಂದುಪುಟ್ಟ ಹಕ್ಕಿಗೆ' [ಮಧುಚಂದ್ರ]

—ಕಣವಿಯವರ ಈ ಕವನ ಜಿ. ಎಸ್. ಶಿವರುದ್ರಪ್ಪನವರ 'ಪ್ರಕೃತಿ—ಕವಿ' ಎಂಬ ಕವನವನ್ನು ಜ್ಞಾಪಕಕ್ಕೆ ತಂದುಕೊಡುತ್ತದೆ. ಒಬ್ಬರ ಅನುಕರಣೆಗೆ ಇನ್ನೊಬ್ಬರು ಒಳಗಾಗಿದ್ದಾರೆ ಎಂದು ಹೇಳುವದು ಇಲ್ಲಿಯ ಉದ್ದೇಶವಲ್ಲ ; ಇವರಿಬ್ಬರ ಎದೆಯೂ ಸಹಜವಾಗಿಯೇ ಏಕರೀತಿಯಲ್ಲಿ ಮಿಡಿಯಬಲ್ಲ ರೀತಿಯನ್ನು ತೋರಿಸುವದಾಗಿದೆ.

ನವೋದಯ ಪರಂಪರೆಯ ಕಾಲ ಮುಗಿದು ನವ್ಯ ಪರಂಪರೆಯ ಹರೆ ಕಾಣಿಸಿ ಕೊಳ್ಳಲಾರಂಭಿಸಿದಾಗ ಸೌಮ್ಯ-ಶಾಂತ ಪ್ರಕೃತಿಯ, ನಿಸರ್ಗೋಪಾಸನೆಯಲ್ಲಿಯೇ ಬಾಳಿನ ಪುರುಷಾರ್ಥವನ್ನು ಕಾಣುವ ಇಂಥ ಕವಿಯ ಕಾವ್ಯಶಕ್ತಿ ಎಲ್ಲಿ ಅನರ್ಥಕ್ಕೆ ಇಟ್ಟುಕೊಳ್ಳುತ್ತದೆಯೋ ಎಂಬುದು ಆ ಕಾಲದ ವಿಮರ್ಶಕರ ಮರುಕದುಂಬಿದ ಶಂಕೆಯಾಗಿತ್ತು. ''ಕಣವಿಯವರ ಇತ್ತೀಚಿನ ಕವಿತೆಗಳನ್ನು ಓದಿದವರಿಗೆ ನವ್ಯ ಪರಿಸರದ ಪ್ರಜ್ಞೆ ಅವರಲ್ಲಿ ಆಗಲೇ ಜಾಗೃತವಾಗಿದೆಯೆಂದು ತಿಳಿಯುತ್ತದೆ...ಕವಿಯ ಮನೋಧರ್ಮ ಪ್ರಶಾಂತಿಯುಳ್ಳದ್ದು, ರಭಸದ್ದಲ್ಲ. ಎಲ್ಲಿ ಚಿಂತನೆ, ಸೂಕ್ಷ್ಮತೆ ನಯ ಬೇಕೋ ಅಲ್ಲಿ ಕವಿಯ ಕಾವ್ಯ ಯಶಸ್ವಿಯಾಗುತ್ತದೆ...ಇಲ್ಲಿ ('ಆಕಾಶಬುಟ್ಟಿ'ಯಲ್ಲಿ) ಇಂಥ ಕವನಗಳಜೊತೆಗೆ ಪ್ರಗತಿಶೀಲ ಎನ್ನಬಹುದಾದ ಕೆಲವು ರಾಜಕೀಯ ಸಾಮಾಜಿಕ ಪದ್ಯಗಳೂ ಇವೆ. ಇಂಥ ಕವಿತೆಗಳಿಗೆ ಬೇಕಾದ ವಾಗ್ವಿಜೃಂಭಣೆಯ ಆಟಾಟೋಪದ ದಾರಿ ಕಣವಿಯುವರದ್ದಲ್ಲ ಎಂಬುದಿಲ್ಲಿ ಕಂಡುಬರುತ್ತದ''[8] ಎನ್ನುಮಥ ಆಗಿನ ವಿಮರ್ಶಕರ ಮಾತುಗಳಲ್ಲಿಯೇ ಇದನ್ನು ಗುರುತಿಸಬಹುದಾಗಿದೆ.

ನವ್ಯಮಾದರಿಯ ಇವರ ಎಲ್ಲ ಕವನಗಳಿಗೆ ನಿಸರ್ಗವೇ ಪ್ರೇರಣೆಯು ಮೂಲ ಸೆಲೆಯಾಗಿದೆಯೆಂದು ಹೇಳಲಾಗದಿದ್ದರೂ, ಅಲ್ಲಿಯೂ ರಸಸಂಪ್ರದಾಯದ ತಮ್ಮ ವಿಶಿಷ್ಟ ಹೊಗರನ್ನು ತೋರಿಯೇ ನವ್ಯದ ಆಶಯವನ್ನು ಈಡೇರಿಸ ಹೊರಟಿರುವದರಿಂದ ಸಹಜವಾಗಿಯೇ—ಹೊಸ ವಿಧಾನದಲ್ಲಿಯೇ ಆಗಲೊಲ್ಲದೇಕೆ, ನಿಸರ್ಗ ತನ್ನ

---

8. ಎಂ. ಗೋಪಾಲಕೃಷ್ಣ ಅಡಿಗ ''ನಾಗರಿಕ'' ಕುಮುಟಾ [೩೦—೬—೫೩]; ನೋಡಿ— ''ಆಕಾಶ ಬುಟ್ಟಿ''—''ಆಕಾಶಬುಟ್ಟಿಯನ್ನು ಕುರಿತು.'' -ಪು : 2—3.

ರೂಪವನ್ನು ತೋರದೆ ಹೋಗಿಲ್ಲ. ನವ್ಯಸಂಪ್ರದಾಯದ ಉರವಣಿಗೆಯ ಕಾಲದಲ್ಲೂ ನವೋದಯ ಪರಂಪರೆಯಲ್ಲಿಯೇ ಅದೇಗತ್ತು, ಅದೇಧಾಟಿ, ಅದೇ ಲಯದಲ್ಲಿಯೇ ನಿಸರ್ಗಸೌಂದರ್ಯವನ್ನು, ಹಾಗೂ ತನ್ನ ಕಲ್ಪನೆ-ಭಾವನೆಗಳನ್ನು ರೂಪಗೊಳಿಸಿದ್ದು ಸಾಹಸದ ಮಾತಲ್ಲ ; ಪ್ರಕೃತಿಯನ್ನು ಕುರಿತ ಶ್ರದ್ಧೆಯ ಮಾತಾಗಿದೆ.

ಕಾಲದೊಡನೆ ಬೆಳೆದು ನವ್ಯಧ್ವನಿಯನ್ನು ಈ ಕವಿ ಮೈಗೂಡಿಸಿಕೊಂಡಾಗಲೂ ರಸ ಸಂಪ್ರದಾಯ ಹಾಗೂ ನಿಸರ್ಗಪ್ರೇಮ ಈ ಕವಿಗೆ ವಂಚನೆಯನ್ನು ಮಾಡಲಿಲ್ಲ, ಬದುಕಿನ ಬೇಸರಿಕೆ-ಕೀಸರಿಕೆ, ತಳಮಳ-ತಲ್ಲಣಗಳನ್ನು, ಬದುಕಿನ ಹುದುಲು–ಹೊಲಸನ್ನು ಮೌಲ್ಯಗಳ ವಿಪರ್ಯಾಸ-ವೈಪರೀತ್ಯಗಳನ್ನು ಕಂಡು ಮಿಕ್ಕ ನವ್ಯಕವಿಗಳಂತೆ ಈ ಕವಿ ಮುಖ ಕಿವುಚಿ ಕಾರಿಕೊಳ್ಳದೆ ನಿಸರ್ಗ ಚಿಕಿತ್ಸೆಯನ್ನು ನಡೆಸುವ ವೈದ್ಯನಂತೆ ಸಂಯಮ ದಿಂದ ನಿಸರ್ಗದ ಸಾಮಗ್ರಿಯನ್ನು, ಸೌಂದರ್ಯ ಸಂಪತ್ತನ್ನು ಅತ್ಯಂತ ಪರಿಣಾಮಕಾರಿಯಾಗಿ ತನ್ನ ಉದ್ದೇಶಕ್ಕೆ ಬಳಸಿಕೊಂಡಿದ್ದಾನೆ. ಅದೆಷ್ಟು ಪರಿಣಾಮಕಾರಿಯಾಗಿ ಬಳಸಿ ಕೊಂಡಿದ್ದಾನೆಂದರೆ, ನವ್ಯ ಕವಿಗಳೆನಿಸಿಕೊಳ್ಳುವವರು ಇದೇ ಮದ್ದನ್ನು, ಮಾರ್ಗವನ್ನು ಹೆಚ್ಚಿನ ಶ್ರದ್ಧೆಯಿಂದ ಅನುಸರಿಸಿದ್ದರೆ, ಅದರಲ್ಲಿ ಸಫಲರಾಗಿದ್ದರೆ, ನವ್ಯಕಾವ್ಯ ಇನ್ನೂ ಕೆಲವು ದಿನ ಬದುಕಿಕೊಳ್ಳಬಹುದಿತ್ತೇನೊ ಎನಿಸುತ್ತದೆ. ಇನ್ನೊಂದು ವಿಶೇಷವೆಂದರೆ, ನಿಸರ್ಗದ ಬಗೆಗೆ ಇಂಥ ಸಹಜವಾದ ಒಲವು, ಗಾಢವಾದ ಪ್ರೇಮವಿದ್ದಾಗಲೂ, ಅದನ್ನು ಕಲಾತ್ಮಕವಾಗಿ ಬಳಸಿಕೊಂಡು ತನ್ನ ಅಭಿವ್ಯಕ್ತಿಗೆ ಸಹಜವಾದ ಹೊಗರನ್ನು ತಂದುಕೊಳ್ಳ ಬಲ್ಲವನಾದರೂ, ಆ ಪ್ರಕತಿಪ್ರೇಮವೇ ಒಂದು ಪ್ರೇತವಾಗಿ, ಅದರ ಮೇಲಿನ ಮೋಹವೇ ಒಂದು ಮಾಯೆಯಾಗಿ ಈ ಕವಿಯನ್ನು ಕಾಡಿರುವದು. ಅಂದಂದಿನ ಅಗತ್ಯಕ್ಕೆ ತಕ್ಕಂತೆ ಅದರ ಸಮಗ್ರ ದೃಶ್ಯವನ್ನೊ ಇಲ್ಲವೆ ಅದರ ಅಂಗಾಂಗಗಳನ್ನೊ ಬಳಸಿಕೊಳ್ಳುವಲ್ಲಿ ಔಚಿತ್ಯವನ್ನು, ಒಂದುಬಗೆಯ ಹದಗಾರಿಕೆಯನ್ನು ಕಂಡುಕೊಂಡಿದ್ದಾನೆ. ಅಂತೆಯೇ ಅವರ ಕವನಸಂಗ್ರಹಗಳಲ್ಲಿ ನಿಸರ್ಗ ವ್ಯಾಪಾರದಿಂದ, ಅದರ ಚೆಲುವಿನ ಅನಂತ ಪರಿಗಳಿಂದ, ಸಾಮಗ್ರಿಗಳಿಂದ ಕಳಕಳಿಸಿ ನಿಂತ ಪದ್ಯಗಳನ್ನು ಕಾಣುವಂತೆ ನಿಸರ್ಗದ ಸೋಂಕಿಲ್ಲದ 'ದಾಸರ ದರ್ಶನ.' 'ಬೆಡಗು,' 'ಗಡಿಬಿಡಿ ಗೊಂದಲಾಸುರ,' 'ಯಾರು ಕೇಳುತ್ತಾರೆ ಹೇಳಿರಣ್ಣ,' 'ಸರ್ವಜ್ಞ,' 'ಮೃತ್ಯುಘೋಷಣೆ,' 'ಲಾಗ,' 'ಕಣ್ಣಿರುವಷ್ಟು ನೋಟ' ಇಂಥ ಪದ್ಯ ಗಳನ್ನೂ ಕಾಣಬಹುದಾಗಿದೆ. ಅಷ್ಟೇಯೇಕೆ, ಅವರ ಪ್ರಥಮ ಕವನ ಸಂಗ್ರಹವಾದ 'ಕಾಮಾಕ್ಷಿ'ಯಲ್ಲಿಯೇ 'ಹುತಾತ್ಮ,' 'ನೆನೆವುದೊಂದಗ್ಗಳಿಕೆ,' 'ಗೆಲುವೆನೆಂಬ ಭಾಷೆ,' 'ತಾಳ್ಮೆ,' 'ಹೋರು ಬೀಳ್ವನ್ನೆಗಂ,' 'ಅಖಂಡ ಕರ್ನಾಟಕ,' ಮೊದಲಾದ ಪದ್ಯಗಳು ನಿಸರ್ಗದ ಸೋಂಕಿಲ್ಲದೆ ಬದುಕಿರುವದನ್ನು ಗುರುತಿಸಬಹುದಾಗಿದೆ. ಹೀಗೆ ಔಚಿತ್ಯ ಮತ್ತು ಮಿತವ್ಯಯಪ್ರಜ್ಞೆ ಕಾವ್ಯದಲ್ಲಿ ಕಾಣಿಸಿಕೊಂಡ ನಿಸರ್ಗ ಸೌಂದರ್ಯಕ್ಕೆ, ನಿಸರ್ಗದ ದ ಡಿಮೆಗೆ ಗೌರವವನ್ನು, ಗಾಂಭೀರ್ಯವನ್ನು, ಬೆಲೆಯನ್ನು ತಂದುಕೊಟ್ಟಿದೆ.

ಕವಿ ತನ್ನ ಮನೋರಂಗದಲ್ಲಿ ತುಂಬಿ ನಿಂತ ನಿಸರ್ಗದ ರಮ್ಯರೂಪವನ್ನು, ಅದರ ಅಂಗಾಂಗಗಳ ಚೆಲುವನ್ನು ಶಬ್ದಶಿಲ್ಪದಲ್ಲಿ ಮೂಡಿಸುವಲ್ಲಿ ಅಪೂರ್ವವಾದ ಕಲಾನಿಷ್ಠೆ,

ಯನ್ನು ಮೆರೆದಿದ್ದಾನೆ. ಆದರೊಡನೆ ಪ್ರಕೃತಿಯ ಆಹ್ಲಾದಕಾರಿಯೊದ ಪರಿಸರದಲ್ಲಿ ತೆರೆ ತೆರೆಯಾಗಿ, ನೊರೆನೊರೆಯಾಗಿ ಚೆಲ್ಲುವರಿದ ತನ್ನ ಚೈತನ್ಯ ಲಹರಿಯನ್ನು ಮೂರ್ತಗೊಳಿಸುವಲ್ಲಿ ಅಗಾಧ ನೈಪುಣ್ಯವನ್ನು ಪ್ರದರ್ಶಿಸಿದ್ದಾನೆ. ಇಂಥ ಒಂದೊಂದು ಚಿತ್ರದಲ್ಲಿಯೂ ಲಾಲಿತ್ಯ ಸೌಕುಮಾರ್ಯ, ಸೂಕ್ಷ್ಮವಾದ ಲಯಗಾರಿಕೆ, ಆಕರ್ಷಕವಾದ ಗತಿ—ಗೇಯತೆ ಎದ್ದುಕಾಣುವ ವೈಶಿಷ್ಟ್ಯಗಳಾಗಿವೆ. ನಿಸರ್ಗವನ್ನು ಕುರಿತು ನವಿರು ನವಿರಾಗಿ ಕಾಣಿಸಿಕೊಳ್ಳುವ ಕಲ್ಪನಾ ಲಹರಿ, ಊಹಾವಿಲಾಸದಿಂದ, ಕವನಗಳಿಗೇ ಒಂದು ಬಗೆಯ ರೋಮಾಂಚನವನ್ನು ಕವಿ ತಂದುಕೊಟ್ಟಿದ್ದಾನೆ. ನಿಸರ್ಗದ ಸಮಗ್ರ ದೃಶ್ಯಕ್ಕಷ್ಟೇ ಅಲ್ಲ ಚಿಕ್ಕೆ, ಹಕ್ಕಿ, ಸೂರ್ಯ-ಚಂದ್ರ, ಹೊಳೆ-ಹಳ್ಳ ಗುಡ್ಡ-ಬೆಟ್ಟಗಳಂಥ ಬಿಡಿಬಿಡಿಯಾದ ಅಂಗಾಂಗಗಳಿಗೂ ಕವಿಯ ಮನಸ್ಸು ಸ್ಪಂದಿಸಿದೆ. ಆದರೆ ಮೋಡ, ಮಳೆ, ಹೂವುಗಳನ್ನು ಕುರಿತು ವಿಶೇಷರೀತಿಯಲ್ಲಿ ಮಿಡಿದಿರುವದನ್ನು, ಅವುಗಳನ್ನು ಕುರಿತ ತನ್ನ ಸಂವೇದನೆಗಳನ್ನು ಅನಂತರೀತಿಯಲ್ಲಿ ವ್ಯಕ್ತಗೊಳಿಸಿರುವದನ್ನು ಕಾಣಬಹುದು. ತನ್ನ ಪ್ರಶಾಂತ ಪರಿಸರಕ್ಕೆ, ಸೌಂದರ್ಯಕ್ಕೆ, ಮಾರುಹೋದ ಈ ಕವಿಯನ್ನು, ಪ್ರಕೃತಿ ತನ್ನನ್ನೆ ಅಭಿವ್ಯಕ್ತಗೊಳಿಸಲು ಜುಲುಮೆಯನ್ನು ಮಾಡುವದಿಲ್ಲ; ತನ್ನ ಬದುಕನ್ನೂ ವ್ಯಕ್ತಗೊಳಿಸಲು ಕವಿಗೆ ಪ್ರಚೋದನೆಯನ್ನಿತ್ತು, ಅದಕ್ಕೆ ಮನಮುಟ್ಟಿ ದುಡಿದು ಧನ್ಯವಾಗಿರುವದು ಗಮನಾರ್ಹ. ಪ್ರಕೃತಿಲೋಕ ಹಾಗೂ ಮಾನವಲೋಕದಲ್ಲಿ ಸಮಶ್ರದ್ಧೆಯುಳ್ಳ ಅವೆರಡರಲ್ಲಿಯೂ ಸಹಜ ಸಂಬಂಧವನ್ನು ಮನಗುಡ ಕವಿಗೆ ಒಂದು ಮತ್ತೊಂದರ ಬಿಂಬವಾಗಿ ಕಾಣಿಸಿಕೊಳ್ಳುತ್ತದೆ. ಅವೆರಡರಲ್ಲಿ ಸೌಮ್ಯವನ್ನು ಗುರುತಿಸುವಂತೆ ನಿಷ್ಠುರವಾದ ವೈಷಮ್ಯವನ್ನು ಕವಿ ಗುರುತಿಸುತ್ತಾನೆ. ನವ್ಯ ಪರಂಪರೆಯಲ್ಲಿ ಮಾತ್ರವಲ್ಲ ನವೋದಯ ಪರಂಪರೆಯ ದಾರಿಯಲ್ಲಿರುವಾಗಲೇ ಈ ವಿಧಾನವನ್ನುಅನುಸರಿಸಿದ್ದುಂಟು. "ಕಾಲೇಜಿನಟ್ಟದಲಿ ನಿಂತು ನಾಲ್ದೆಸೆಗಳಲಿ ಸೃಷ್ಟಿರಮಣೀಯತೆಯ ಕಂಡಿರುವೆನು" ಎಂದು 'ಭಾವಜೀವಿ'ಯಾಗಿ ಹೇಳಿಕೊಂಡ ಕವಿ ಕರ್ನಾಟಕ ಕಾಲೇಜಿನ ಅಟ್ಟದಿಂದ ಕಾಣುವ ನಾಲ್ಕು ಹೊತ್ತಿನ ನೋಟವನ್ನು ಸೆರೆಹಿಡಿದ ಪರಿಯಲ್ಲಿ ಇದನ್ನು ಮನಗಾಣಬಹುದು.—

ಬಳ್ಳಿಗಳ ಗೊಂಚಲಲಿ
ದಾಂಗುಡಿಯ ಜೋಕಾಲಿ
ಹುಲುಗಲದ ಟೊಂಗೆಯಲಿ
ಕೊನರಿರುವ ಹೊಂಗೆಯಲಿ
ಚಂದಳಿರ ಮಾವಿನಲಿ
ಚಿಗುರೊಡೆದ ಹುಣಸೆಯಲಿ

.........................

ಸೌಂದರ್ಯ ಸಾಕಾರ—
ಗೊಂಡು ಕಂಗೊಳಿಸಿಹುದು
ಕಂಡು ಕಂಗಳ ಬರವು
ಹಿಂಗುತಿಹುದು, — 'ಪ್ರಕೃತಿಯ ಮಡಿಲಲ್ಲಿ.' (ಆಕಾಶಬುಟ್ಟಿ)

ಇಂಥ ಕಂಗಳ ಬರವನ್ನು ಹಿಂಗಿಸುವ ಚಿತ್ರದಲ್ಲಿ ನೆಲದಾಯ ಕಾರುಣ್ಯ ಕುಸುಮಿಸಿದರೆ ಅಲ್ಲಿಯೇ—

ಹೆಬ್ಬಾವಿನಂದದಲಿ
ಹಬ್ಬಿರುವ ನಗರದಲಿ
.....................
ಎದ್ದಿರುವ ಧೂಳಿಯಲಿ
ಗದ್ದಲದ ಹೋಳಿಯಲಿ
ಶಾಂತಿ ಕಾಲ್ದೆಗೆಯುತಿದೆ
ನಿತ್ಯವ್ಯವಹಾರದಲಿ
ನಗರದಲ್ಲಿ—'ಪ್ರಕೃತಿಯ ಮಡಿಲಲ್ಲಿ' (ಆಕಾಶ ಬುಟ್ಟಿ)

ಎಂಬಂಥ ನಗರದ ವಿಷಮ ವಾತಾವರಣದ ಚಿತ್ರದಲ್ಲಿ ಜಿಗುಪ್ಸೆ ವ್ಯಕ್ತವಾಗಿದೆ. ನಿಸರ್ಗದ ಬದುಕಿನಲ್ಲೂ ಕವಿ ವಿಚ್ಛಿನ್ನತೆಯನ್ನು ಕಾಣದೇ ಇಲ್ಲ:

ದೂರ ಕಾನನದಲ್ಲಿ
ಎಳೆ-ಸುಂಟರ ಗಾಳಿ
ಮುಗಿಲುದ್ದ ಕೆಂಧೂಳಿ-
ಯಲ್ಲಿ ತರಗೆಲೆ ತೇಲಿ
ಎಳೆ ಹರಿದ ಪಟದಂತೆ
ವಿಚ್ಛಿನ್ನ ಮನದಂತೆ—
ಮರವಟ್ಟು ಸುತ್ತುತಿದೆ
ಗಿರಗಿರನೆ ತಿರುಗುತಿದೆ
ಭೂವ್ಯೋಮ ಮಧ್ಯದಲಿ
ಶೂನ್ಯದಲ್ಲಿ—'ಪ್ರಕೃತಿಯ ಮಡಿಲಲ್ಲಿ' (ಆಕಾಶಬುಟ್ಟಿ)

ಹೀಗೆ ಸೃಷ್ಟಿ ಮತ್ತು ಮಾನವ ಲೋಕದಲ್ಲಿ ಬೇರ್ಪಟ್ಟ ಬದುಕನ್ನು ಕಂಡ ರೀತಿ ಇದು.

ಸಂಸಾರಿಯಾದ ಕವಿ ಮನೆಯ ಕಿಟಕಿಯ ಬಳಿ ಕುಳಿತು ಒಳ ಹೊರಗಿನ ಪರಿಸರವನ್ನು ಕಂಡು—ಮನೆಯೊಳಗಿನ ಸಂಸಾರದಲ್ಲಿ ಕಾಣುವ ಸೊಗಸು ಸಂತೋಷದ ಅನುನಯವಾದ ನಿತ್ಯನೂತನತೆಯನ್ನು, ಹೊರಗಡೆಯ ನಿಸರ್ಗದಲ್ಲೂ ಕಾಣುತ್ತಾನೆ. ಅದರಾಚೆ ದೂರದಲ್ಲಿ ಹಾಸು ಹೊಕ್ಕಾಗಿ ಹೆಣೆದ ಎರಡರ ಪರಿಯನ್ನು ವೀಕ್ಷಿಸಿ ಅಂತರ್ಮುಖಿಯಾಗುತ್ತಾನೆ—

ಮಗುವನಾಡಿಸುತ, ಹೂವಿಗೆ ಹೂವ ಪೋಣಿಸುತ
ಜಾವ ಜಾವಕೆ ಹಾಡಿನೆಳೆಯ ಜಗ್ಗಿ
ದುಂಡುಮಾಲೆಯ ಕನಸ ಕಟ್ಟಿ ಮುಡಿಯುತ್ತಿಹಳು
ಇರುಳ ಬಾನಿಗೆ ಚಂದ್ರ-ತಾರೆಯಾಗಿ
...........................
ಊದು ಬತ್ತಿಯು ಬರೆವ ಊಹೆ ಚಿತ್ರವಿಲಾಸ
ಮಗುವಿನೆಳನಗೆಯದರ ಧವಳಕೀರ್ತಿ.

........................
ಹಂಚುವಾಳಿಗೆ ಮೇಲೆ ಓಡೋಡಿ ಬರುವ ಮಳೆ
ಕಿಟಕಿ ಕಣ್ಣನು ತೆರೆವ ಮಿಂಚು ಸೆಳೆತ—
ಎಲ್ಲ ಗುಡುಗಿನ ಧ್ವನಿಯನೆದೆಗೆ ತುಂಬಿಸಿಕೊಳುವ
ಇದರ ಮಡಿಲಲ್ಲಿಹವು ನೂರು ಗೀತ,

ಪ್ರಕೃತಿಯ ಹಿನ್ನೆಯನ್ನುಳ್ಳ ಮನೆಯೊಳಗಿನ ಸೊಗಸಾದ ಪರಿಸರದ ಚಿತ್ರ ಇದಾದರೆ ಎರಡನೆಯ ಪರಿಚ್ಛೇದದಲ್ಲಿ ಕಾಣುವ

ಜಾಜಿ ಮಲ್ಲಿಗೆ ಬಕುಲ ಸಂಪಿಗೆಯ ಹೂಗಾಳಿ
ಬಾನ ಬೆಳುದಿಂಗಳಿನ ಗಂಧಲೇಪ
ನೂರು ಸ್ನೇಹದ ಒಲುಮೆ ಚಿಲುಮೆ ಪುಟಿಯುವ ರಂಗ
ಏಕಾಂತಕಿದು ಮತ್ತೆ ನಿಸ್ತರಂಗ,

..................
ಮಾವು ಹೂವಿನ ತೇರು, ಹೊಂಗೆ ತುಂಬಿದ ಬಸುರಿ
ಉರಿವ ದೀಪಸ್ತಂಭವಗೋ ಬೂರಲ !
ಬೆಳೆದು ಬಾಗಿದ ತೆಂಗು, ಹುಲ್ಲು ಹೂವಿನ ರಂಗು
ಎಲ್ಲೊ ಮರೆಯಾಗಿಹುದು ಪರಿಕೋಗಿಲ 'ಮನೆ-- ಕಿಟಕಿ' (ದೀಪಧಾರಿ)

— ಈ ಚಿತ್ರ ಸಂಸಾರ ಪರಿಸರದ ಹಿನ್ನೆಲೆಯನ್ನೊಳಗೊಂಡ ಕಿಟಕಿಯ ಹೊರಗಿನ ಬದುಕನು ಅನುಭವಕ್ಕೆ ತರುತ್ತದೆ. ಮುಂದೆ ಮೂರನೆಯ ಪರಿಚ್ಛೇದದಲ್ಲಿ "ದಿನದ ಬಳಕೆಯನ್ನು ಮೀರಿ ಸೆಳೆವತೀಂದ್ರಿಯ ಸ್ಪರ್ಶ" ಅಂತರ್ಮುಖಿಯಾಗುವ ಮನಸ್ಸಿನ ಚಿತ್ರವನ್ನು ಕೊಡುತ್ತದೆ.

ಶೃಂಗಾರ, ಪ್ರಣಯಗಳು ಮಾನವನ ಬದುಕಿನ ಮಹತ್ತರವಾದ ಮೌಲ್ಯಗಳು. ಈ ಪ್ರಣಯದ ವ್ಯಾಪಾರವನ್ನು, ಅದರಲ್ಲೊದಗುವ ನಿರಾಶೆ, ದುರಂತಗಳನ್ನು ಕವಿ ನಿಸರ್ಗ ವ್ಯಾಪಾರದ ಹಿನ್ನೆಲೆಯಲ್ಲಿ ಪರಿಣಾಮಕಾರಿಯಾಗಿ ನಿರೂಪಿಸಿದ್ದಾನೆ. "ನಿನ್ನೆದೆಯ ಜೇನ ನೀಡುವ ನಲ್ಮೆಯಿಂದೆನ್ನ ಒಲಿಸಿ ಮೀಸಲು ನಗೆಯ ಸೂಸಿ ಕರೆದೆ ; ಇಂದೇಕೆ ಮೊಗಬಾಡಿ ವಿಹ್ವಲ ವಿಕಾರದಲಿ ನಿಂದಿರುವೆ ಚುಂದುಳ್ಳ ಮಧುರ ಹೂವೆ ?" ಎಂದು ಕೇಳಿದ ತುಂಬಿಗೆ "ಬೇರೊಂದು ದುರುದುಂಬಿ ಕೆಟ್ಟಗಾಳಿಯ ಸುಳಿಗೆ ಒಂದೆನ್ನ ಬಲುಮೆಯಲಿ ಬಲಿಗೊಂಡಿತು; ಅಯ್ಯೋ ಆವಿಷಮವಿಷ ಮೈಯೆಲ್ಲ ಉರಿಯುತಿದೆ, ಅಬಲೆಯೆಂದೆನೆ ಸಾವು ಬೇಕಾಯಿತು." ಎಂಬುದು ಆಬಲೆ ಹೂವಿನ ಉತ್ತರವಾಗುತ್ತದೆ. ಆದರ ಪರಿಣಾಮ ?—

ತುಂಬಿ ಮೊರೆಯಿತು ಮರೆಯಲಾರೆನೆಂದು
ನೊಂದ ಹೂ ಕಳಚಿತ್ತು, ಎದೆಯು ಬೆಂದು;
ಗಾಳಿ ಗೋಳಿಡೆ ಹಾಡೆ ಚರಮಗೀತ
ಮುಗಿಲ ಹೆಗಲೇರಿ ಸಾಗಿತ್ತು ಪ್ರೇತ !
—'ನಲ್ಮೆ' (ಮಧು ಚಂದ್ರ)

"ಎಂದು ಬರುವದೊ ಕಾಲ ನನ್ನಿನಿಯ ಮಳೆಗಾಲ ವಿರಹ ವೈಶಾಖವನು ದಾಟ ಬೇಕೆ?" ಎಂದು ಮಿಡುಕಿದ ಕವಿಯು ಚೈತನ್ಯ ಮಳೆಗಾಲದ ಚಿತ್ರವನ್ನು ಹಲವು ಹನ್ನೆರಡು ಬಗೆಯಾಗಿ, ಪ್ರತಿಮೆ, ರೂಪಕಗಳ ಮೂಲಕ, ಮತ್ತೆ ಕೆಲವು ಸಲ ನೇರವಾಗಿ ಚಿತ್ರಿಸಿ ಮಳೆಗಾಲದ ಪರಿಸರವನ್ನು, ಸಂತೋಷವನ್ನು ಸಾಕ್ಷಾತ್ಕರಿಸಿ ಕೊಟ್ಟಿದೆ. ಮಳೆಗಾಲದ ಪರಿಣಾಮವಾಗಿ ಕಾಣಿಸಿಕೊಂಡ ನೆಲದ ಚೆಲುವನ್ನು, ಅದರ ದೃಶ್ಯವನ್ನು—

ಏನಿದೀ ಹನಿಹನಿಯ ತೆನೆತೆನೆ ಸಿವುಡುಗಟ್ಟುತ ಒಗೆವುದು !
ಗುಡ್ಡಗುಡ್ಡಕೆ ಗೂಡು ಬಡಿಯುತ ಬೇರೆ ಸುಗ್ಗಿಯ ಬಗೆವುದು.
ಸೆಳ ಸೆಳಕು ಬೆಳೆ ಕೊಯಿದರೂ ಆ ಮೋಡದೊಕ್ಕಲು ತಂಗದು
ಬಾನಮೇಟಿಗೆ ಸೋನೆ ತೂರುತ ರಾಶಿಮಾಡದೆ ಹಿಂಗದು.

ನೋಡು, ಮೋಡದ ಬಸ್ಸು ಭರಭರ ತುಂಬಿಕೊಂಡೇ ಸಾಗಿದೆ
ಯಾವ ಗಿರಿಶಿಖರದಲಿ ಜಾತ್ರೆಯೊ ಏಳು ಕೊಳ್ಳಕೆ ಬಾಗಿವೆ.
ಮೋಡ ನೂತೇ ನೂಲುವದು ಬಿಳಿದಾರ ಧಾರಾಕಾರದಿ
ಗುಡ್ಡ ಮರಡಿಗೆ ಸುತ್ತಿ ಕುಕ್ಕಡಿ ಮಾಡಿ ತುಂಬಿದೆ ಕೊಳ್ಳದಿ.

—'ಧಾರವಾಡದಲ್ಲಿ ಮಳೆಗಾಲ' (ನೆಲ-ಮುಗಿಲು.)

ಮಾನವ ವೃತ್ತಿ ಪರಿಸರದಿಂದಾಯ್ದ ಸಾಮಗ್ರಿಗಳನ್ನೇ ಮುಂದುಮಾಡಿ ಮೂರ್ತೀಕರಿಸುವ ಇಂಥ ವಿನೂತನ ಕಲ್ಪನೆ ಚಿರಂತನವಾದ ಪರಿಣಾಮವನ್ನು ಮಾಡುತ್ತದೆ. "ಇಳೆಗೂ ಬಾನಿಗೂ ಮಳೆ ಜೋಕಾಲಿ" "ಬಾನ ಸಾಣಿಗೆ ಹಿಟ್ಟು ಸಾಣಿಸಿದಂತೆ ಜಿನುಗಿದೆ ಸೋನೆಯು" "ಬಳುಕಿ ಬಾಗುವ ಮಳೆಯು ಸೆಳಕುಗಳ ಸೇವಿಗೆಯು ಸಿವುಡುಗಟ್ಟಿಡು"— ಹೀಗೆ ಮಳೆಯನ್ನು ಅದೆಷ್ಟು ಪರಿಯಾಗಿ ಕವಿ ಪರಿಭಾವಿಸಬಲ್ಲನೆಂಬುದು ಗಮನಿಸು ವಂತಿದೆ. ಇದು ಕವಿ ಮತ್ತು ಸೃಷ್ಟಿಯ ನಡುವಿನ ಒಗೆತನದಲ್ಲಿಯ ಸಾಮರಸ್ಯದ ಫಲ. ಇಂಥ ಪ್ರಕೃತಿ ಚಿತ್ರಣದಲ್ಲಿ ಕಂಡುಬರುವ ಒಂದು ವಿಶೇಷವೆಂದರೆ, ಪ್ರಕೃತಿಯು ಯಾವದೇ ಮುಖದ ಚಿತ್ರವನ್ನು ಕೊಡುವಾಗ, ತನ್ನ ಮನೆ ಮನಗಳ ಒಳ-ಹೊರಗುಗಳ ವ್ಯವಹಾರ ದಲ್ಲಿ ಆದ ಪರಿಣಾಮ ಸಹಿತವಾದ ಚಿತ್ರವನ್ನೊದಗಿಸುವಲ್ಲಿ ಈ ಕವಿ ತೋರುವ ಹೆಚ್ಚಿನ ಆಸಕ್ತಿ, ಪ್ರಕೃತಿಯ ಯಾವದೇ ಒಂದು ವಸ್ತು ನೆಪಕ್ಕೆ ಎನ್ನುವಂತೆ ಕಾಣಿಸಿಕೊಂಡು, ಬದುಕಿನ, ಬೀದಿಯ, ಸಂಸಾರದ, ಮನದ ಹಾಗೂ ಸೃಷ್ಟಿಯ ಚಟುವಟಿಕೆಗಳ ಜಾತ್ರೆ ಯನ್ನು ನೆರೆಯಿಸುವದು ಈ ಕವಿಗೆ ಪ್ರಿಯವಾದ ರೀತಿ. "ಮತ್ತೆ ಮಳೆ" (ನಗರದಲ್ಲಿ ನೆರಳು)ಯ ದೃಶ್ಯದಲ್ಲಿ, ಸಳಸಳ ಜುಳುಜುಳು ರಪರಪವಾಗಿ ಒಂದೆರಡು ಸಾಲುಗಳಲ್ಲಿ ಕಾಣಿಸಿಕೊಂಡ ಮಳೆ ಇಂಥ ಒಂದು ಜಾತ್ರೆಯನ್ನು, ಪ್ರದರ್ಶನವನ್ನು ಉದ್ಘಾಟಿಸಿ ಹಿಂದೆ ಸರಿದು ಮರೆಯಾಗಿ ನಿಲ್ಲುತ್ತದೆ. ಮುಂದೆ ಕಾಣುವದು ಹೊಗೆಯುಗುಳುವ ಬಂಡಿ, ಉಗಿ ಹಾಯುವ ಬಿಸಿಬಿಸಿ ತಿಂಡಿ, ಹಬ್ಬದ ಉಂಡಿ, ಮತ್ತೆ ಗಿಡಿಡಿ ಬಾಗಿದ ಬೀಗಿದ ಗಂಡು, ಹೆಣ್ಣು, ಮುದುಕರು, ಹುಡುಗರು ; ಮುಂದೆ ಎಣ್ಣೆ ಹಚ್ಚಿ ಎರೆವಂಥ ದಾಂಬರು

ರಸ್ತೆ, ಜಾರುವ ಕಾರು, ಕೊಡೆ ಏರಿಸಿ ಕಚಲ್ ಪಚಲ್ ನಡೆದವರು. ಅಷ್ಟೇ ಅಲ್ಲ "ಹಚ್ಚನೆ ಹಸುರೆಲ್ಲವು ಬಂಗಾರದ ಬಿಸಿಲನು ಹೊದ್ದು ಸಿಂಗಾರ"ವಾದ ರೀತಿ—ಇಂಥ ಪ್ರಕೃತಿ ಮತ್ತು ಮಾನವ ಲೋಕದ ಸ್ನೇಹ ಸಮ್ಮೇಲನ ಕಾಣಿಸಿಕೊಳ್ಳುತ್ತ ಓಲೆ ಅಲಂಕಾರಗಳ ಕೊಟ್ಟು ಕೊಂಡು ಪರಸ್ಪರ ಅಲಂಕರಿಸಿಕೊಳ್ಳುವಲ್ಲಿಯೂ ಅವುಗಳ ಆತ್ಮೀಯ ಸ್ನೇಹವನ್ನು ಗುರುತಿಸಬಹುದು.—

ಪಡುವಣದ ಸಂಜೆವೆಣ್ ನಡುಮನೆಗೆ ಬಂದಂತೆ
ರಾಗ ಪುಲಕಿತೆ ಎದೆಯನಾಳುತಿಹಳು;
ಮಳೆ ಬಂದ ಮರುಚಣದ ಇಳೆಯ ಹೊಸತನದಂತೆ
ಅಡಿಗಡಿಗು ಈ ಬಾಳ ಬೆಳಗುತಿಹಳು—'ನಿರೀಕ್ಷೆ' (ಮಧುಚಂದ್ರ)

ಒಂದೆ ಚಿಕ್ಕೆಯು ತೆರೆದಿ ಜಾನಿಸಿಹಳು—'ನಿರೀಕ್ಷೆ' (ಮಧುಚಂದ್ರ)
ಮುಳ್ಳು ಬೆಳೆದ ಕಂಟಿಯಲ್ಲಿ
ಅದರ ಹರಿತ ಕೊರೆತದಲ್ಲಿ
ಚೆಂಗುಲಾಬಿ ಚಿಮ್ಮಿ ಬಂದು
ಹಂಗುದೊರೆದು ಅರಳಿ ನಿಂದು
ಪಕಳೆ ಪಕಳೆ ತೆರೆಯುವಂತೆ

.......................
ಕಂಟಕದಲಿ ನಿಂತನು
ಎತ್ತು ಮೇಲಕೆನ್ನನು—'ಎತ್ತುಮೇಲಕೆನ್ನನು' (ಕಾವ್ಯಾಕ್ಷಿ)

ಸುಳಿಗಾಳಿಯೊಂದಿನಿತು ಸೂಸಿ ಬಂದರೆ ಸಾಕು
ಮರವನಪ್ಪಿದ ಬಳ್ಳಿ ಬಳುಕುವಂತೆ
ನಾವು ಆಡುವ ಮಾತು ಹೀಗಿರಲಿ ಗೆಳೆಯ—'ಮಾತು' (ಆಕಾಶ ಬುಟ್ಟಿ)

ಈ ರೀತಿ ಪ್ರಕೃತಿಯ ಸಾಮಗ್ರಿಯಿಂದ ಒದುಕಿನ ಚಿತ್ರವನ್ನು, ಹಂಬಲವನ್ನು ಸ್ಫುಟಗೊಳಿಸುವಂತೆ ಬದುಕಿನ ಸಾಮಗ್ರಿಯನ್ನು ಬಳಸಿಕೊಂಡು ಪ್ರಕೃತಿಯ ಚಿತ್ರವನ್ನು ಅಷ್ಟೇ ಕಲಾತ್ಮಕವಾಗಿ ಸ್ಫುಟಗೊಳಿಸಬಲ್ಲ.

ಸೇದಿ ಬೀಸಾಡಿಸುವ ಸಿಗರೇಟು ತುಂಡಿನೊಲು
ದೂರದಲಿ ಕಾಣಿಸಿತು ಮುಂಕು ಚಿಕ್ಕೆ

o o o

ಮಗುವು ಕಿಟಿಕಿಟಿ ಹಚ್ಚಿ ಕೀಸರಿಟ್ಟಂತೆ
ಮಳೆಯು ಜಿಟಿಜಿಟಿ ಹತ್ತಿ ತೊಟ್ಟಿಕ್ಕಿದೆ.

o o o

ಮರದ ಎಲೆಗಳ ಸಂದಿಯಲ್ಲಿ ಮಾಸಿದ ಕಿರಣ
ಹರಿದು ಬರುತಿದೆ ಪಿಸಿಯ ನೂಲಿನಂತೆ

o o o

ಅಳುವ ಮಕ್ಕಳು ನಕುವೆ ನಕ್ಕ ಹಾಗೆ

o o o

ಜ್ವರವಿಳಿದು ವೈಬೆವರು ಬಿಟ್ಟ ರೋಗಿಯು ತೆರದಿ
ಕಾಯ್ದು ತಿರೆ ತೊಯ್ದಿಹುದು ಮೇಲೆ ಕೆಳಗೆ

ಪ್ರಕೃತಿ ಮತ್ತು ಮಾನವ ಲೋಕವನ್ನು ಎದುರು ಬದುರಾಗಿ ನಿಲ್ಲಿಸಿ ಒಂದರ ಕಣ್ಣು-ಗೊಂಬಿಯಲ್ಲಿ ಮೂಡಿದ ಇನ್ನೊಂದರ ಚಿತ್ರವನ್ನು ಸರೆಹಿಡಿಯುವ ಚಾತುರ್ಯ ಈ ಕವಿಯದು. ಇಲ್ಲಿ ದೇಸಿಯ ಸೊಗಡಿನಲ್ಲಿ ಮೂಡಿಬಂದ ಪ್ರತಿಮೆಗಳು ಎಷ್ಟು ಸಾರ್ಥಕವಾಗಿವೆಯೆನ್ನುವದನ್ನು ನೋಡಬೇಕು. 'ಮೇಘೋಪಾಸನೆ'ಯಲ್ಲೂ ಕವಿ ಸೊಗಸಾದ ಪ್ರತಿಮೆಗಳನ್ನು ಸೃಷ್ಟಿಸಿಕೊಳ್ಳುವಲ್ಲಿ ಪ್ರಾಣಿಲೋಕ ಅದೆಷ್ಟು ಅರ್ಥಪೂರ್ಣವಾಗಿ ಬಳಕೆಯಾಗಿದೆ !

ಹಂಸ ಕುರಿಯಮರಿ ಆನೆ ಒಂಟೆ ಹಸು ಪ್ರಾಣಿರೂಪ ತಳೆದು
ತಾಗಿ ತುರುಗಿ ದಿಗ್ವಿಜಯ ಕೈದುವಾ ಸೈನ್ಯದಂತೆ ನಡೆದು,
ಉಣ್ಣೆಯಾಗಿ ಮಿದು ಬೆಣ್ಣೆಯಾಗಿ ಹಿಂಜಿರುವ ಅರಳೆಯಾಗಿ
ತೊಟ್ಟಿಲಾಗಿ ತೂಗುವವು ಮೋಡಪಡೆ ನಡೆವ ಬೆಟ್ಟವಾಗಿ
—'ಮೇಘೋಪಾಸನೆ' (ಕಾವ್ಯಾಕ್ಷಿ)

ಇಲ್ಲಿ ಕಲ್ಪನೆಯ ಪಡಿಯಚ್ಚಿನಲ್ಲಿ ಒಡಮೂಡಿದ, ಬೆಣ್ಣೆಯಂತೆ, ಹಿಂಜಿದ ಅರಳೆಯಂತೆ ನಯವಾದ ನುಣುಪಾದ ಪ್ರತಿಮೆಗಳೇ ಕವಿಯ ಮನಸ್ಸಿನ, ಪ್ರವೃತ್ತಿಯ ಸಂಕೇತಗಳೂ ಹೌದು. ದಿಗ್ವಿಜಯಕ್ಕೆ ಹೊರಟ ಸೈನ್ಯದಂತೆ ಕಾಣುವ ಹಂಸ, ಕುರಿಮರಿ, ಆನೆ, ಒಂಟೆ, ಹಂಸಗಳು ಶಾಂತ ಸೌಮ್ಯಗುಣವುಳ್ಳ, ಸಾತ್ವಿಕ ಶಕ್ತಿಯನ್ನು ಹೊಂದಿದ ಜೀವಿಗಳು. ಅವುಗಳ ದಿಗ್ವಿಜಯದ ಉದ್ದೇಶವೂ ಶಾಂತಿಯೇ ಹೊರತು ರಕ್ತ ಸೇಚನೆಯಲ್ಲ. ಇಲ್ಲಿಯ ಪ್ರತಿಮೆಗಳು, ಅಮೋಘದರ್ಶನಾಭಿವ್ಯಕ್ತಿಯ ಉದ್ದೇಶಕ್ಕಾಗಿ ವಿನಾಯಕರ 'ದ್ಯಾವಾ—ಪೃಥಿವಿ'ಯ ನೀರದದಲ್ಲಿ ಮೂಡಿಬಂದ-ಸಿಂಹ, ಮಯೂರ, ಕುರಿಮರಿ, ಕೂರ್ಮ, ಸಾರಂಗ, ವ್ಯಾಘ್ರ, ವರಾಹ, ಸರ್ಪ, ಶೃಗಾಲ, ತಿಮಿಂಗಲ; ಏಡಿಗಳಂಥ ಪ್ರತಿಮೆಗಳನ್ನು ನೆನಪಿಗೆ ತರುವವಾದರೂ, ಕಣವಿಯವರ ಈ ಪ್ರತಿಮೆಗಳು ವಿನಾಯಕರ ಪ್ರತಿಮೆಗಳಿಗಿಂತ ಎಷ್ಟೋ ವರುಷಗಳ ಮೊದಲೇ ಮೂಡಿಬಂದವುಗಳು ಎನ್ನುವುದು ಮಹತ್ವದ್ದಾಗಿದೆ. ವಿನಾಯಕರ ದರ್ಶನಾಭಿವ್ಯಕ್ತಿಯಲ್ಲಿ ಅವರ ಪ್ರತಿಮೆಗಳ ದುಡಿಮೆ ಇರುವದಾದರೂ, ಅಂಥಲ್ಲೆಲ್ಲ,-ಕಾಯ್ಕಿಣಿಯವರು ಹೇಳುವಂತೆ—"ಕಲ್ಪನೆಯ ವಿಲಾಸವೈಚಿತ್ರ್ಯದ ಸೀಮೆಯನ್ನು ದಾಟಿ ಕಾವ್ಯತ್ವದ ಪಿಠಸದ ವೈಖರಿಯಾಗುವದಕ್ಕೆ ಅದೇಕೊ ಬಾಧಕವಾಗುತ್ತದೆ."[9] ಆದರೆ ಇಲ್ಲಿ ಅವೆಲ್ಲ ಭಾವಸ್ಯಂದಿಯಾಗಿ ಕಾಣಿಸಿಕೊಳ್ಳುತ್ತವೆ ; ಕಲ್ಪನಾವಿಲಾಸ, ಊಹಾವಿಲಾಸಗಳು ಭಾವಗೀತೆಗಾಗಿ ರೂಪ ತಳೆಯುತ್ತವೆ.

———

9. "ವಿನಾಯಕ ವಾಙ್ಮಯ" (1969) ಸಂ-ಹಾ.ಮಾ.ನಾಯಕ; ಸೀಧುವಳ್ಳಿ ಅನಂತಮೂರ್ತಿ 'ಕಡಲು ಮತ್ತು ಮುಗಿಲು'- ಗೌರೀಶ ಕಾಯ್ಕಿಣಿ; ಪು—269.

ನಿಸರ್ಗದ ಸೌಮ್ಯ ಸೌಂದರ್ಯದಲ್ಲಿ, ಸ್ವರೂಪ ಮತ್ತು ಕ್ರಿಯೆಯಲ್ಲಿ ನಿಮಗ್ನವಾದ ಕವಿಯ ಮನಸ್ಸು ಗೆಲುವುಗೊಂಡು ತೇಲಾಡಿ, ಬದುಕಿನ ಬಗೆಗಿರುವ ಕವಿಯ ನಂಬಿಕೆಯನ್ನೂ, ದರ್ಶನದ ನೆಲೆಗಟ್ಟನ್ನೂ ಮುಟ್ಟಿ ನಿಲ್ಲುತ್ತದೆ; ಮತ್ತೆ ಕೆಲವು ಸಲ ನಲವಿನಾಳಕ್ಕೆ ಇಳಿದು ಮಾನವೀಯ ಅಂತಃಕರಣವನ್ನು ಮೇಲೆತ್ತಿ ತಂದು ಹೆಪ್ಪುಗಟ್ಟಿಸುತ್ತದೆ. ಭೂಮಿಯಾಳದ ಭಾವ ಮೇಳೈಸಿ ಪುಟಿದಂತೆ ಅರಳಿನಿಂತ ನೀಲಿಹೂಗಳ ಬಾಳ ಚೈತನ್ಯವನ್ನು ಬಣ್ಣಿಸಿದ ಕವಿ "ಬಿಸಿಲು ಬಲಿಯುವ ಮುನ್ನ ಬಗೆಗೋಡ ಸೌಜನ್ಯ, ಮುಖವು ಸಣ್ಣದು ಮಾಡಿ ಮುದುಡಿಕೊಂಡಿ"ರುವ ಮತ್ತು "ಒರಿಯ ನೆನಪಿಗೆ ಉಳಿದ" ದೇಟಿಗಂಟಿದ ಹೂವನ್ನು ಕಾಣುತ್ತಾನೆ; ಮರುಕದುಂಬಿದ ಸ್ವರದಲ್ಲಿಯೇ ಅದನ್ನು ಹೇಳುತ್ತಾನೆ. ಆದರೆ..."ಬದಿಬದಿಗೆ ನಾಳೆಯರಳುವ ಮೊಗ್ಗೆ ಮೂರ್ಧನ್ಯ !" ಎಂದು ಹೇಳಿ ಆಶಾವಾದಿತ್ವವನ್ನು ಪ್ರಕಟಿಸುತ್ತಾನೆ. ಹೆಪ್ಪುಗಟ್ಟಿದ ಅಂತಃಕರಣ ಕಾಣುವುದಕ್ಕೆ 'ನಗರದ ನೆರಳಿ'ನಲ್ಲಿಯ 'ಗುಬ್ಬಿ'ಯನ್ನು ನೋಡಬೇಕು. "ಈ ಪುಕ್ಕಲು ಪ್ರಾಣಿಯ ಧೈರ್ಯಕ್ಕೆ ಬರೀ ಎರಡು ರೆಕ್ಕೆ". ಚಿಂವ್, ಚಿಂವ್ ಮರಿಗೆ ಗುಟುಕಿಟ್ಟು ಹಾರಿಹೋಗುತ್ತದೆ. -ಹೀಗೆ ಎಷ್ಟೋ ಬಾರಿ. ಇದನ್ನು ಕಂಡ ಕವಿ—

ಗುಬ್ಬಿಯ ಪುಟ್ಟ ಆಕೃತಿ
ಮರೆಯಾಗಿ
ತಾಯಿಯ ವಿಶಾಲ ಹೃದಯದಲ್ಲಿ
ಕರಗಿ
ಹೋಗುತ್ತೇನೆ ನಾನು ಜೀವಂತವಾಗಿ—'ಗುಬ್ಬಿ' (ನಗರದಲ್ಲಿನೆರಳು)

ಎಂದು ತನ್ನಾತ್ಮವನ್ನೇ ನಿವೇದಿಸಿಕೊಂಡು ತಾಯ್ತನದ ಅಂತಃಕರಣವನ್ನು ವ್ಯಂಜಿಸಿ ಇದ್ದಕ್ಕಿದ್ದಂತೆ ಓದುಗನೂ ಜೀವಂತವಾಗಿ ಕರಗಿ ಹೋಗುವಂತೆ ಮಾಡುತ್ತಾನೆ.

ವ್ಯಕ್ತಿ ಚಿತ್ರಣದಲ್ಲಿಯೂ ಪ್ರಕೃತಿಯ ಒಲವು, ಅದರ ಸೊಬಗು ಅದೆಷ್ಟು ಪರಿಣಾಮಕಾರಿಯಾಗಿ, ಪ್ರಭಾವಕಾರಿಯಾಗಿ ಬಳಕೆಯಾಗಿದೆಯೆಂಬುದು ಲಕ್ಷಿಸುವಂತಿದೆ,

ಇರುವ ನೀರೆಲ್ಲ ಸುರಿದು
ಹಸಿದ ನೆಲ ಹಸುರಾಗಿ ಕಳಕಳಿಸಿ
ಬಾನು ಥಳಥಳಿಸಿರಲು
ಬೆಳ್ಳಗೆ ಮೇಲೆ ಹೊರಟಿತ್ತು ಮಂದಹಾಸದ ಮೋಡ:
ಗಾಂಧಿ ನೋಡ
......................................
ಇರುಳ ಬಾನಿನ ತುಂಬ ನೀನೊಬ್ಬನೇ ಕೋಲೂರಿ ನಡೆದಂತೆ
ಚಿಕ್ಕೆಗಳ ಗುರುತುಂಟು—'ಗಾಂಧಿ' (ಎರಡು ದಡ)

ಗಾಂಧೀಜಿಯವರ ವ್ಯಕ್ತಿತ್ವಕ್ಕೆ, ಅಸ್ಮಿತ್ವಕ್ಕೆ ಎಂಥ ಸಮರ್ಪಕವಾದ ಪಳಗಿದ ಪ್ರತಿಮೆಗಳು! ಇಂಥದೇ ಕಲಾನಿಷ್ಠೆಯನ್ನು 'ಗಾಂಧಿ-ಶರದ್ಗೀತ' (ನಗರದಲ್ಲಿ ನೆರಳು)ದಲ್ಲಿಯೂ ಕಾಣ ಬಹುದು. ಬೇಂದ್ರೆಯವರನ್ನು ಕುರಿತು—

......ಕಡಲ ಗುಟು-
ಕರಿಸಿ, ಚಿಕ್ಕೆ ಮುಕ್ಕಳಿಸುವರು
...ಹಣ್ಣಾದ ಕೇದಿಗೆಯ ಹೊಡೆ :
ಚೂಪಾದ ಗರಿ : ಹುಷಾರಿ ; ಕಂಪಿಗೆಲ್ಲಿಯ ಕೊರತೆ ;
ನಡೆದದ್ದೆ ಸಾಧನ ಕೇರಿ ನುಡಿದದ್ದೆ ಕವಿತೆ-'ಎಪ್ಪತ್ತರ ಬೇಂದ್ರೆ' (ಎರಡು ದಡ)

ನೆಹರು ಅವರನ್ನು ಕುರಿತು—

ಬಾನ ನೀಲಿಯ ಉಡಿದು ನಕ್ಷತ್ರಗಳ ಮುಡಿದು
ಮೋಡ ಕುಡಿಮಿಂಚುಗಳ ಧಾರೆ ಹಿಡಿದು.
ನದಿ ನದಿಗೆ ಧುಮುಕಿಸಿದ ಆ ಹಿಮಾದ್ರಿಯ ಶಿಖರ
ನೆಲಕೊರಗಿ ನಿದ್ರಿಸಿತು; ಏಳ್ವುದೆಂದು ? 'ನೆಹರು: ಶ್ರದ್ಧಾಂಜಲಿ' (ನೆಲ-ಮುಗಿಲು)

ಬದುಕಿನ ಒಂದು ಮಹತ್ವದ, ಅಷ್ಟೇ ಸೂಕ್ಷ್ಮವಾದ, ವ್ಯಾಪಕವಾದ ನಂಬಿಕೆಯಂಥ ವಿಷಯದ ಸ್ವರೂಪ, ಪ್ರಭಾವ, ಪರಿಣಾಮಗಳನ್ನು ಚಿತ್ರಿಸುವಲ್ಲಿಯೂ ಪ್ರಕೃತಿ ಪ್ರತಿಮೆ ಗಳಾಗಿ ತನ್ನ ಅಸಾಧಾರಣವಾದ ನೆರವನ್ನು ನೀಡಿದೆ —

ಅನಂತವೆಂದರೂ ಆಕಾಶಕೊಂದು ಆಕೃತಿಯುಂಟು
ನೀಲವೆಂದರೂ ನೂರುಬಣ್ಣದ ಲೀಲೆಗವಕಾಶವುಂಟು"-'ನಂಬಿಕೆ'(ಎರಡು ದಡ)

ವಿಶ್ವವ್ಯಾಪಿಯಾದ ನಂಬಿಕೆಯ ಹರವನ್ನು, ವೈವಿಧ್ಯವನ್ನು, ಅದರ ಕ್ರಿಯೆಯನ್ನು ಇಲ್ಲಿ ಪ್ರಕೃತಿಜನ್ಯವಾದ ಪ್ರತಿಮೆ ಹಾಗೂ ಸಂಕೇತಗಳು ಅನುಭವವೇದ್ಯವನ್ನಾಗಿ ಮಾಡು ತ್ತವೆ.[10] ಹೀಗೆ "ಈ ಕವಿಯ ವಸ್ತು ಯಾವುದೇ ಇರಲಿ, ಅದರ ವ್ಯಂಜನೆಯ ರೂಪ-ರೀತಿ ಏನೇ ಇರಲಿ, ಅಲ್ಲಿ ನಿಸರ್ಗರಮ್ಯತೆಯ, ಸೃಷ್ಟಿಸೌಂದರ್ಯದ ಏನಾದರೊಂದು ಉಲ್ಲೇಖ, ನಿರ್ದೇಶನ, ವ್ಯಪದೇಶ ಸಂಚಾರಿಯಾಗಿ ಇಣುಕು ಹಾಕದೇ ಹೋಗುವದಿಲ್ಲ."[11] ಒಟ್ಟಿನಲ್ಲಿ ಇದುವರೆಗೂ ಕಂಡಂತೆ ನಿಸರ್ಗ ಪ್ರಜ್ಞೆ ಸ್ವತಂತ್ರವಾಗಿ ತನ್ನ ವಿಲಾಸವನ್ನು ಪ್ರಕಟಿಸುವದಲ್ಲದೆ ಬದುಕಿನ ವಾಸ್ತವ ಪ್ರಜ್ಞೆಯನ್ನು ವ್ಯಂಜಿಸುವಲ್ಲಿಯೂ ಅರ್ಥಪೂರ್ಣ ವಾಗಿ ಕಾಣಿಸಿಕೊಳ್ಳುತ್ತದೆ.

ಆದರೆ ಈ ಹಿಂದೆಯೇ ಸೂಚಿಸಿದಂತೆ ಪ್ರಕೃತಿಯ ಯಾವದೇ ಒಂದು ಬಿಡಿಭಾಗದ ಸೌಂದರ್ಯದ ಬಿಂದುವಿನಲ್ಲಿ ತನ್ನ ಆತ್ಮವನ್ನು ಕೇಂದ್ರೀಕರಿಸಿ ಏಕಾಗ್ರತೆಯನ್ನು ಸಾಧಿಸು

10) ಇದರ ಸಮಗ್ರ ವಿಶ್ಲೇಷಣೆಗಾಗಿ ನೋಡಿರಿ-ಸಾಧನೆ ; ( ) 'ನಂಬಿಕೆ : ಒಂದು ವಿಶ್ಲೇಷಣೆ ಲೇ-ಜಿ. ಎಸ್. ಕಾಪಸೆ ; ಪು. 107—117 ;

11) 'ಚೆನ್ನವೀರ ಕಣವಿಯವರ ಕಾವ್ಯದೃಷ್ಟಿ' (1977) ಗೌರೀಶ ಕಾಯ್ಕಿಣಿ ; ಪು 19.

ವದು ಕಡಿಮೆ. ಮದುವೆಯ ಹಂದರದಲ್ಲಿ ವಧೂವರರೇ ಮುಖ್ಯವಾಗಿದ್ದರೂ, ಅಲ್ಲಿಯ ಸಂಭ್ರಮದ ವಾತಾವರಣದಲ್ಲಿ ಸೂರೆಗೊಂಡ ಚಿತ್ತ ಸುತ್ತಲೂ ಹರಿದು ಹರಡಿಕೊಳ್ಳು ವಂತೆ, ಪ್ರಕೃತಿಯ ಯಾವದೇ ಪ್ರತ್ಯೇಕ ಅಂಗಾಂಗದತ್ತ ಚಿತ್ತ ಹರಿದರೂ, ಅದು ಅಲ್ಲಿಯೇ ನೆಟ್ಟು ನಿಲ್ಲುವದಕ್ಕಿಂತ ಸಂಪೂರ್ಣ ಪರಿಸರವನ್ನೇ ಆವರಿಸಿ ಬಿಡುತ್ತದೆ ; ಇಲ್ಲವೇ ಒಂದು ಪ್ರತೀಕವಾಗಿ, ಮತ್ತೇನನ್ನೊ ಸಾಧಿಸ ಹೊರಡುತ್ತದೆ ; ಲೌಕಿಕ ಹಂಬಲವನ್ನು ಚೇತರಿಸು ವಲ್ಲಿ ಕೊನೆಗೊಳ್ಳುತ್ತದೆ. ಆವರಣದ ಹಿನ್ನೆಲೆಯಲ್ಲಿ ನಿಸರ್ಗದ ಒಂದು ಪರಿಯನ್ನು ಚಿತ್ರಿಸುವಲ್ಲಿ ಈ ಕವಿಗೆ ಹೆಚ್ಚಿನ ಒಲವು. ಇಂಥ ಒಂದು ಪರಿಸರದ ಹಿನ್ನೆಲೆಯಲ್ಲಿ ಅರಳಿ ನಿಂತ ಪ್ರಕೃತಿಯ ಒಂದು ಬಿಡಿಭಾಗದ ಚಿತ್ರ ಮೆಚ್ಚುಗೆಯನ್ನು ಪಡೆಯಬಲ್ಲುದಾದರೂ, ಚಿತ್ತವನ್ನು ಸಂಪೂರ್ಣವಾಗಿ, ಸೆರೆಹಿಡಿದು ತನ್ಮಯತೆಯನ್ನುಂಟು ಮಾಡಿ ಗುಂಗುಹಿಡಿಸು ವದು ಕಡಿಮೆ. ಈಗಾಗಲೇ ಉದಾಹರಿಸಿದ ಪದ್ಯಗಳಲ್ಲಿ ಈ ಗುಣವನ್ನು ಕಾಣಬಹು ದಾದರೂ, ಚೆಂಗುಲಾಬಿ, ಈ ಮಲ್ಲಿಗೆ ಈ ಗುಲಾಬಿ, ಚಂದಿರ, ಕಾಡುಮಲ್ಲಿಗೆಯಂಥ ಪದ್ಯಗಳನ್ನುಮತ್ತೆ ಇಲ್ಲಿ ಸ್ಮರಿಸಬಹುದು. ಇಲ್ಲೆಲ್ಲ ಆ ವಸ್ತುವಿನ ಸೌಂದರ್ಯದಲ್ಲಿ ಮನವೆಲ್ಲ ಇಂಗಿ ಹೋಗಿ ಭಾವದ ಒಂದು ಸೆಲೆಯಾಗಿ, ಝರಿಯಾಗಿ ಹೊರಬರುವದಿಲ್ಲ. 'ಚೆಂಗು ಲಾಬಿ'ಯಲ್ಲಿ 'ಚೆಂಗುಲಾಬಿಯ ಮೊಗ್ಗೆ ಅರುಣನೆಡೆ ಮೊಗವಿರಿಸಿ ಚೆಂದುಟಿಯನರೆತೆರೆದು ನೋಂಪಿಯಲಿ, ಸಕ್ಕರೆಯ ನಿದ್ದೆಯಲಿ ಸವಿಗನಸ ಕಾಣುತಿದೆ ಚದುರನೈತಹನೆಂಬ ಹಂಬಲದಲಿ' ಎನ್ನುವಲ್ಲಿ ಹೂವಿನ ರೂಪ-ಸ್ವರೂಪವನ್ನು ಕವಿ ಭಾವನಾತ್ಮಕವಾಗಿ ಪರಿಭಾವಿಸುವದನ್ನು ಕಾಣುತ್ತೇವೆ ; ಅದರ ಚೆಲುವು ಬಿರಿಯುವಿಕೆ, ಅದರ ಮಾದಕತೆ ಯನ್ನು ಕಲ್ಪನೆಗೆ ತಂದು ಕೊಡುತ್ತಾನೆ. 'ಕುಂಕುಮ ಪರಾಗವಿದೆ ; ಕೆನ್ನೆಯರ ಚೆನ್ನೆಯರ ರಾಗಬಂದಿ'', ಎಂದೆಲ್ಲಾ ಕವಿಯ ಭಾವನೆಗಳು ಹೂವನ್ನೇ, ಅದರ ಚೆಲುವನ್ನೇ ಕೇಂದ್ರವನ್ನಾಗಿಟ್ಟುಕೊಳ್ಳುತ್ತವೆ. ಆದರೆ ಪದ್ಯ ಮುಂದುವರಿದಂತೆ ಕವಿಯ ನೋಟ ಹಿಗ್ಗುತ್ತಹೋಗಿ ತುಂಬಿ, ಗಾಳಿ, ಅಲ್ಲಲ್ಲಿ ಬಳುಕುವ ಬಳ್ಳಿ, ಹೂಗೊಂಚಲು. ಅರಳಿನಿಂತ ಎಷ್ಟೋ ಹೂಗಳು-- ಎಂದು ಸುತ್ತಲೂ ವ್ಯಾಪಿಸುತ್ತದೆ. ಕೊನೆಗೆ 'ಹೂವಿನಂತಹ ಹುಡುಗಿ ಈ ಹೂವ ಮುಡಿಯುವಳೆ—ಹೂವು ಪಡೆದಿಹುದೇನು ಅಂಥ ಭಾಗ್ಯ ?' ಎನ್ನುವಲ್ಲಿ ಕವಿಯ ಭಾವ ಲಹರಿ ಹೊಸ ತಿರುವನ್ನು ಪಡೆಯುತ್ತದೆ. 'ಕಾಡುಮಲ್ಲಿಗೆ'ಯಲ್ಲಿ ಮೋಡ, ಮಳೆ, ಚಿಕ್ಕೆ, ಹಕ್ಕಿ, ಎಲ್ಲವೂ ಬಂದಿದ್ದರೂ ಅಲ್ಲೆಲ್ಲ ಕಾಡುಮಲ್ಲಿಗೆಯೇ, ಅದರ ಚೆಲುವೇ ಕೇಂದ್ರವಾಗುತ್ತದೆ ; ಅದರ ಸೌಂದರ್ಯದ ಸೊಬಗಿನಲ್ಲಿ ಕವಿಯ ಮನಸ್ಸು ಭಾವಸಮಾಧಿ ಯನ್ನು ಸಾಧಿಸುತ್ತದೆ ; ಹಾಗೆ ಸಾಧಿಸುತ್ತಿದ್ದಂತೆಯೇ ತಟ್ಟನೇ ದೂರಸರಿದು ''ತುಂಬಿ ಗುಂಗುಂ ಗಾನಗೈದು ಬಂದಿಹುದು ; ಅರಳುಗಳ ನೀಡವ್ವ ಒಲಿದು ಬಂದಿಹನಾತ, ತುಂಬು ಹೃದಯದಿ ತುಂಬು ಬೊಗಸೆಯಲಿ ತುಂಬು' ಎಂದು ಹೇಳುವಲ್ಲಿ ಭಾವನಿಮಗ್ನತೆ ಶಿಥಿಲಗೊಳ್ಳುತ್ತದೆ. ಸೌಂದರ್ಯಾನುಭೂತಿಗೆಆತಂಕ ಒದಗುತ್ತದೆ ; ಸೌಂದರ್ಯಪ್ರಜ್ಞೆ ಜಾರಿ ಹೋಗಿ ಶೃಂಗಾರಪ್ರಜ್ಞೆ ಸ್ಥಾಯಿಯಾಗಿ ಬಿಡುತ್ತದೆ. ಇಂಥ ವಿಧಾನಕ್ಕೂ,—ಒಂದು ಭಾವದ ನಿಲುಗಡೆಯಿಂದ ಮತ್ತೊಂದು ಭಾವದ ನಿಲುಗಡೆಗೆ ಏರುವ ಜಾತಿಯ

ಭಾವಗೀತೆಗಳಿಗೂ ಅದರವೇ ಆದ ಮೋಹಕತೆ ಇರುವದನ್ನು ಅಲ್ಲಗಳೆಯಲಾಗದು. ಆದರೆ ಸೌಂದರ್ಯಪ್ರಜ್ಞೆಯಲ್ಲಿಯೇ ಒಂದು ಭಾವ ಜೀವತಳೆದು, ಪ್ರಕೃತಿಯ ಒಂದು ಅವಯವವನ್ನೇ ಕೇಂದ್ರವಾಗಿಟ್ಟುಕೊಂಡು, ಭಾವೈಕಾಗ್ರತೆಯನ್ನು ಸಾಧಿಸಿ, ಅಲ್ಲಿಂದಲೇ ಬೆಳೆದು ಅಲ್ಲಿಯೇ ಕೊನೆಗೊಳ್ಳುವದು ಇವರಲ್ಲಿ ಕಡಿಮೆ. ಹೀಗೆಂದ ಮಾತ್ರಕ್ಕೆ ಪ್ರಕೃತಿಯಲ್ಲಿ ಕವಿಗಿರುವ ಐಕ್ಯಾನುಭವ ಸಾಮರ್ಥ್ಯವನ್ನು ಶಂಕಿಸುವಂತಿಲ್ಲ. ಪ್ರಕೃತಿಯ ಸಾನ್ನಿಧ್ಯದಲ್ಲಿ, ಅದರ ಒಡನಾಟದಲ್ಲಿ ಒಂದಾದ ಕವಿ ತಾನೇ ಅದಾಗಿ ಕಾಣಿಸಿಕೊಳ್ಳಬಲ್ಲ. ಕರಗಿದ ತನ್ನೆದೆಯನ್ನು ಅದರೆದೆಯಲ್ಲಿ ಸಮರಸಗೊಳಿಸಬಲ್ಲ. ತನ್ನ ಚೈತನ್ಯವನ್ನೇ ನಿಸರ್ಗದ ಚೈತನ್ಯದಲ್ಲಿ ಲೀನಗೊಳಿಸಬಲ್ಲ. ಇಂಥ ಸಂದರ್ಭದಲ್ಲಿ ಕಾಣಿಸಿಕೊಳ್ಳುವ ತನ್ಮಯತೆ. ಉತ್ಸಾಹಗಳ ಸೆಳವಿನಲ್ಲಿ ಓದುಗನ ಚಿತ್ತವನ್ನು ಸೆಳೆದು ಕರಗಿಸಿಕೊಳ್ಳಬಲ್ಲ 'ಗಿರಿಗಿರಿ ಗಿಂಡಿ' ಎಂಬ ಪದ್ಯವನ್ನು ಇದಕ್ಕೆ ತಕ್ಕ ನಿದರ್ಶನವಾಗಿ ನೋಡಬಹುದು..— ತಂಪಿನಲ್ಲಿ ತೇಲುವ ಸಂಜೆಯ ಗಾಳಿ ಬಾನಿನೊಡನೆ ವೈಮನರೆತೋಡುವ ಗರಿಗರಿಯಾದ ಮೋಡದ ಚಕ್ಕಂದಾಟ, ಹಾಡುವ ಬಣ್ಣದ ಹಕ್ಕಿ, ಇಂಥ ಚೈತನ್ಯಪೂರ್ಣವಾದ, ಹರ್ಷಾತಿಶಯದಿಂದ ಕೂಡಿದ ವಾತಾವರಣದಲ್ಲಿ ಕವಿಯ ಮನಸ್ಸು ಮೆಲ್ಲನೆ ಸೇರಿಕೊಳ್ಳುತ್ತದೆ. ತೆಂಗಿನ ಚವರಿ, ಗಾಳಿಸವಾರಿ, ಪಾತರಗಿತ್ತಿ ಪಕ್ಕಾಹಕ್ತಿ ವೈ ಕೈ ತುಂಬಿದ ಹೂಮ ಕರೆದ, ಹುಲ್ಲಿನ ವಸತಿ- ಹೀಗೆ ಮುಂದೆ ಗಿರಿಗಿರಿಯಾಟದಲ್ಲಿ ಪ್ರಕೃತಿಯ ಚೆಲುವಿನ ಅಂಗಾಂಗಗಳೆಲ್ಲ ಬಹಿರಂಗವಾಗಿ ಬಿಚ್ಚಿಕೊಳ್ಳುತ್ತ ಹೊರಟಂತೆ, ಅದರ ಆಟದಲ್ಲಿ ಪ್ರತ್ಯಕ್ಷ ಭಾಗಿಯಾದ ಕವಿಯ ಮನಸ್ಸೂ ಪರವಶವಾಗಿ, ಅದರ ಒಂದು ಅಂಗವಾಗಿ ಬಿಡುತ್ತದೆ.

"———

ಗೆಳತಿಯರೆಲ್ಲ
ಬಂದಾರೇನ
ಮಲ್ಲಿಗೆ ಹೂವ
ಮುಡದಾರೇನ
ಗುಲಾಬಿ ಲಂಗ
ಉಟ್ಟಾ ರೇನ
ನೀಲಿ ಪೋಲಕ
ತೊಟ್ಟಾರೇನ
ನತ್ತುಬುಗಡಿ
ಇಟ್ಟಾರೇನ
ಚಿನ್ನದ ಬಳೆಗೆ
ಅತ್ತಾರೇನ
ಬಾರೇ ಗೆಳತಿ

ನನ ಬಂಗಾರಿ
ವಸಂತ ಕಾಲದ
ಸಿರಿ ಸಿಂಗಾರಿ

ಈ ತನ್ಮಯತೆ ಚರಮಾವಸ್ಥೆಗೆ ಬಂದು—

ಜೀವದ ಗೆಳತಿ
ಒಲವಿನ ಒರತಿ
ಇತತ್ತ ಬಾರ
ಇದಿರಿಗೆ ಬಾರ
————
ಗಿರಿ ಗಿರಿ ಗಿಂಡಿ
ಇಬತ್ತಿ ಉಂಡಿ"

-'ಗಿರಿಗಿರಿಗಿಂಡಿ' (ಮಧುಚಂಧ್ರ)

ಹೀಗೆ ಬದುಕಿನ ಸ್ತರವನ್ನು ತಪ್ಪಿಸಿಕೊಳ್ಳುವಷ್ಟರ ಮಟ್ಟಿಗೆ ನಿಸರ್ಗ ಚೈತನ್ಯದೊಡನೆ, ಅದರ, ಸಂತೋಷ, ಸಂಭ್ರಮ, ಹಿಗ್ಗು-ಉತ್ಸಾಹಗಳೊಡನೆ ಕವಿ ಸ್ವಂತ ಸಂಬಂಧವನ್ನು ಹೊಂದಿ ಆನಂದಪರವಶನಾಗುತ್ತಾನೆ. ಪ್ರಕೃತಿಯನ್ನು ಕುರಿತ ಕಣವಿಯವರ ಕವನಗಳಲ್ಲಿ ಇದೊಂದು ಮೋಹಕವಾದ ಕವನ. ಬೇಂದ್ರೆಯವರ 'ಪಾತರಗಿತ್ತಿ ಪಕ್ಕ'ದ ನಂತರ ಅದೇ ದರ್ಜೆಯ ಅಷ್ಟೇ ಉತ್ಕೃಷ್ಟವಾದ ಕವನ ಕನ್ನಡದಲ್ಲಿ ಇದೊಂದೇ ಎನಿಸಿಬಿಟ್ಟಿದೆ.

ಹೀಗೆ ನಿಸರ್ಗದ ಸೊಬಗು-ಸೌಂದರ್ಯ, ಬೆಡಗು-ಬಿನ್ನಾಣ, ಆಟ-ನೋಟಗಳನ್ನೆಲ್ಲ ಊಹೆಯ ನಯವಾದ ಎಳೆಯಲ್ಲಿ, ಕಲ್ಪನೆಯ ಜಾಲದಲ್ಲಿ, ಮೃದುವಾದ ಸರಳ ಶಬ್ದಗಳ ಮಲಕಿನಲ್ಲಿ ಜೀವಂತ ಸೆರೆಹಿಡಿದು ನಿಲ್ಲಿಸಿ ತನ್ನ ಮನದ ಸಂತೋಷ, ಸಂಭ್ರಮಗಳ ನೇರ ಚಿತ್ರವನ್ನು ಕೊಡುವಲ್ಲಿ ಉತ್ತಮ ದರ್ಜೆಯ ಕಲಾ ಶಕ್ತಿಯನ್ನು ಈ ಕವಿ ಪ್ರದರ್ಶಿಸಿದ್ದಾನೆ. ಪ್ರಕೃತಿಲೋಕದ ಹಾಗೂ ಮಾನವ ಲೋಕದ ಬದುಕಿನ ವಿಷಯಗಳನ್ನು ಹಾಸುಹೊಕ್ಕಾಗಿ ನೆಯ್ದಿರುವನಲ್ಲದೆ, ಸಾಮ್ಯವೈಷಮ್ಯಗಳನ್ನು ಪ್ರಭಾವಕಾರಿಯಾಗಿ ಕಾಣಿಸಿಕೊಟ್ಟಿದ್ದಾನೆ. ತನ್ನ ಸಮಕಾಲೀನ ಸಂಕೀರ್ಣ ಬದುಕಿನ ಹಾಗೂ ಸಮಸ್ಯೆಗಳ ಅಭಿವ್ಯಕ್ತಿಗೆ ಪ್ರಕೃತಿಯ ಸಾಮುಗ್ರಿಗಳನ್ನು ಹವಣಾದ, ಸಾರ್ಥಕವಾದ ಪ್ರತಿಮೆ-ಪ್ರತೀಕಗಳನ್ನಾಗಿ ಬಳಸಿಕೊಂಡು ಸಫಲನಾಗಿರುವುದುಂಟು. ಮತ್ತೆ ಕೆಲವು ಸಲ ಬದುಕನ್ನು ಹಾಗೂ ಅದನ್ನು ಕುರಿತ ತನ್ನ ಚಿಂತನ, ಸಿದ್ಧಾಂತ, ದರ್ಶನಗಳ ಅಭಿವ್ಯಕ್ತಿಗೆ ನಿಸರ್ಗದ ಹಿನ್ನೆಲೆಯನ್ನು ಬಳಸಿಕೊಂಡಿರುವುದುಂಟು; ಮಾನವೀಯ ಪ್ರಜ್ಞೆಯನ್ನು ಮೆರೆದಿರುವದುಂಟು. ವಿಶೇಷವೆಂದರೆ, ಈ ಒಂದೊಂದು ವಿಧಾನದಲ್ಲೂ ಅನಂತ ರೀತಿಯ ಚಾತುರ್ಯವನ್ನು ಮೆರೆದಿರುವದು.

ಒಟ್ಟಿನಲ್ಲಿ ಹೇಳುವದಾದರೆ, ನಿಸರ್ಗದ ಚೆಲುವು ಚೈತನ್ಯಗಳಿಗೆ, ಒಲವು ಉಲ್ಲಾಸ

ಗಳಿಗೆ, ಪ್ರಶಾಂತ ಗುಣ–ಮನೋಧರ್ಮಗಳಿಗೆ ತನ್ನನ್ನು ಮನಸ್ಸಾಕ್ಷಿಯಾಗಿ ಅರ್ಪಿಸಿಕೊಂಡು ಋಣ ಸಂಬಂಧವನ್ನು ಸ್ನೇಹವನ್ನು ಸಾಧಿಸಿವ ಈ ಕವಿಯ ಕವನಗಳಿಗೆ, ಅದು ಕೂಡ ತನ್ನನ್ನು ಅನಂತರೀತಿಯಲ್ಲಿ ಅರ್ಪಿಸಿಕೊಂಡು ಜೀವಕಳೆಯನ್ನು ತಂದುಕೊಟ್ಟಿದೆ, ಕವಿಯ ಹಂಬಲ ಆಶಯಗಳನ್ನರಿತು ಮನಮುಟ್ಟಿ ಕಳಕಳಿಯಿಂದ ದುಡಿದಿದೆ; ತನ್ನನ್ನೇ ತಾನು ಅನಂತರೀತಿಯಿಂದ ಪ್ರದರ್ಶಿಸಿಕೊಂಡಿದೆ. ಇದರಿಂದಾಗಿ ಕಣವಿಯವರ ಕವನಗಳು ಕನ್ನಡ ಕಾವ್ಯ ಪ್ರಪಂಚವಲ್ಲಿ —ಧಾರವಾಡದ ನೆಲ-ಮುಗಿಲಿನಲ್ಲಿ ಮೂಡಿನಿಂತ ಪ್ರಕೃತಿಯಂತೆ–ಕಳ ಕಳಿಸಿ, ನಳನಳಿಸಿ, ರಸದುಂಬಿ ನಿಲ್ಲುವಂತಾಗಿವೆ.

ಎಂ. ಅಕಬರ ಅಲಿ

# ಕಣವಿಯವರ ಪ್ರೇಮಗೀತಗಳು

ಯಾವುದೇ ಬಗೆಯ ಸಾಹಿತ್ಯಿಕ ಗುಂಪುಗಾರಿಕೆಯ ರಾಜಕೀಯದಲ್ಲಿ ಪಾಲು ಗೊಳ್ಳದೆ, ಕಾವ್ಯಧೋರಣೆಯ ಅತಿರೇಕಗಳಿಗೆ ಬಲಿಯಾಗದೆ, ಢೋಲು-ಡಂಗುರಗಳ ಗತ್ತುಗಾರಿಕೆಯನ್ನು ಬಳಸದೆ, ಸದ್ದಿಲ್ಲದ ಸೃಷ್ಟಿಕಾರ್ಯದಲ್ಲಿ ತೊಡಗಿಕೊಂಡು ಅರ್ಥ ಪೂರ್ಣ ನಿರ್ಮಿತಿಯತ್ತ ತುಡಿಯುತ್ತಿರುವ ಚೆನ್ನವೀರ ಕಣವಿಯವರು ಹೊಸಗನ್ನಡ ಕಾವ್ಯದ ಪ್ರಮುಖ ಕವಿಗಳಲ್ಲಿ ಒಬ್ಬರು. ಅವರ ಪ್ರತಿಭೆ ನಿತ್ಯ ಹಸಿರು ಮುರಿಯುವ (Ever Green) ಸ್ವರೂಪದ್ದು; ಕಾಲಧರ್ಮಾನುಸಾರ ಹೊಸ ಹೊಸ ಕಾವ್ಯತಂತ್ರ-ಮಂತ್ರಗಳನ್ನು ಮೈಗೂಡಿಸಿಕೊಳ್ಳುತ್ತ ನಿತ್ಯ ಜೀವಂತಿಕೆಯನ್ನು ಉಳಿಸಿಕೊಂಡು ಬೆಳೆಸಿ ಕೊಂಡು ಬಂದಂಥದು. ಈ ಕಾರಣಕ್ಕಾಗಿಯೇ ಅವರಿಗೆ ಹೊಸಗನ್ನಡ ಕಾವ್ಯದ ಚರಿತ್ರೆ ಯಲ್ಲಿ ಒಂದು ಮಹತ್ವದ ಸ್ಥಾನ ದಕ್ಕಿದೆ.

ಹೊಸಗನ್ನಡದ ಪ್ರೇಮಗೀತಗಳ ಪರಂಪರೆಯಲ್ಲಿ ಕಣವಿ ಅವರದ್ದು ವಿಶಿಷ್ಟವಾದ ದನಿ. ಕುವೆಂಪು ಕವನಗಳಲ್ಲಿ ಆದರ್ಶದ ತುಡಿತ ಹಾಗೂ ಆಧ್ಯಾತ್ಮದ ಮಿಡಿತ ತುಂಬಿ ಕೊಂಡಿದ್ದರೆ, ಬೇಂದ್ರೆಯವರ ಕವಿತೆಗಳಲ್ಲಿ ಬದುಕಿನ ಜೀವಜೀವಾಳವನ್ನೆ ಹಿಡಿದೆತ್ತಿತೋರ ಬಲ್ಲ ಜೀವನಾನುಭವದ ಕಾವು-ತೇವು ಮಡುಗಟ್ಟಿ ನಿಂತಿವೆ. ಕೆ.ಎಸ್. ನರಸಿಂಹಸ್ವಾಮಿಯ ವರಲ್ಲಿ ಬೇಂದ್ರೆಯವರಲ್ಲಿಯಂತಹ ವಾಸ್ತವತೆಯ ಅಮೃತಸ್ಪರ್ಶವಿದ್ದರೂ, ಅವರಿಂದ ಭಿನ್ನವಾದ ಒಂದು ಬೆಡಗಿನ ವಿಲಾಸ ವಿಜೃಂಭಿಸಿದೆ. ಆದರೆ ಚೆನ್ನವೀರ ಕಣವಿಯವರ ಗೀತಗಳು, ಪರಂಪರೆಯ ಈ ಸತ್ವವನ್ನೆಲ್ಲ ಅರಗಿಸಿಕೊಂಡೂ ಸ್ವಂತಿಕೆಯನ್ನು ಅರಳಿಸಿ ಕೊಳ್ಳುವಲ್ಲಿ ಸಫಲವಾಗಿವೆ. ಕುವೆಂಪು ಕವನಗಳಲ್ಲಿಯಂತಹ ಆದರ್ಶದ ವರ್ಣವೈಭವ ವನ್ನು ಅಳವಡಿಸಿಕೊಂಡಿದ್ದರೂ ವಾಸ್ತವತೆಯ ಗಟ್ಟಿ ನೆಲದ ಮೇಲೆಯೇ ಅವು ನಿಂತಿವೆ. ಬೇಂದ್ರೆ, ಕೆ.ಎಸ್.ನ. ಅವರ ಜಾಡಿನ ಸಹಜಸೊಮ್ಮಿನ ಜೀವಂತಿಕೆಯನ್ನು ಜೀರ್ಣಿಸಿ ಕೊಂಡು ಅವರಲ್ಲಿಲ್ಲದ ಒಂದು ವಿಲಕ್ಷಣ ಜೀವಗುಣ ಪಡೆದಿವೆ. ಹಲವಾರು ಕವನಗಳಲ್ಲಿ ಹಲವಾರು ನಾಯಕರುಗಳೊಂದಿಗೆ ಅನುಭವವನ್ನು ಹಂಚಿ ಹೋಗಗೊಡದೆ ಏಕ ನಾಯಕನ ವಿವಿಧ ಅನುಭವಗಳನ್ನು ಏಕಸೂತ್ರತೆಯಲ್ಲಿ ಬದ್ಧಗೊಳಿಸುವ ವಿಶಿಷ್ಟ ಕಾವ್ಯಕ್ರಿಯೆ ಇಲ್ಲಿ ಮೂರ್ತರೂಪವಾಗಿದೆ.

ಕಣವಿಯವರ ಪ್ರೇಮಗೀತಗಳ ಒಟ್ಟಂದದ ಸ್ವರೂಪವನ್ನು ಪ್ರತಿಮಿಸುವ ಮೂಲಕ 'ಮಧುಚಂದ್ರ', ಸಂಕಲನದ ಶೀರ್ಷಿಕೆಯಾಗಿಯೂ ಅರ್ಥಪೂರ್ಣವಾಗಿರುವುದು

ಇಲ್ಲಿ ಗಮನಿಸಬೇಕಾದ ಅಂಶ. ಆದರೆ ಈ ಪದಪ್ರಯೋಗ ಅಪಾರ್ಥ–ಅನೌಚಿತ್ಯಗಳಿಗೆ ಎಡೆಗೊಡುವಂಥದಾಗಿದೆಯೆಂದು ಡಾ॥ ಕೆ. ಕೃಷ್ಣಮೂರ್ತಿಯವರು ಆಕ್ಷೇಪವೆತ್ತಿರುವ ರಾದರೂ* ಅವರ ವಿವೇಚನೆ ತೀರ 'ಆಕೆಡೆಮಿಕ್' ಆಗಿ ಈ ಪದವು ಪ್ರಯೋಗಗೊಂಡ ಸಂದರ್ಭವನ್ನೂ ಇದು ಸ್ಫುರಿಸುವ ಅರ್ಥವಂತಿಕೆಯನ್ನೂ ಕಡೆಗಣಿಸಿನೆಯೆಂದು ನನ್ನ ಅನಿಸಿಕೆ. 'ಮಧುಚಂದ್ರ'ವೆಂಬ ತಲೆ ಬರೆಹವನ್ನೆ ಹೊತ್ತ ಮೊದಲಗೀತ ಇಲ್ಲಿಯ ಕಥಾ ನಾಯಕನ ವಿವಾಹಪೂರ್ವ ಪ್ರೇಮದ ಪೂರ್ವಪೀಠಿಕೆಯಾಗಿರುವುದಲ್ಲದೆ ಇಲ್ಲಿಯ ಪ್ರೇಮದ ಪರಿಯನ್ನೂ ಧ್ವನಿಸಬಲ್ಲುದಾಗಿದೆ. ನಾಯಕ ತನ್ನ ಪ್ರೇಯಸಿಯನ್ನು.

ಬಾ ನಲ್ಲೆಗೆ। ಬಾ ಮೆಲ್ಲಗೆ। ನನ್ನೆದೆ ಮೆಲ್ವಾಸಿಗೆ॥
ಇಳೆಗಿಳಿದಿದೆ। ಬೆಳುದಿಂಗಳು। ನಮ್ಮೊಲುಮೆಯ ಕರೆಗೆ!

ಎಂದು ಪ್ರೇಮಾರ್ದ್ರನಾಗಿ ಕನವರಿಸುತ್ತ

ಲೋಕದ ಮೈನೋವಿಗೆ ಶ್ರೀಗಂಧದ ತನಿಲೇಪ
ಆಕಾಶದ ಗುಡಿಯಿಂದಲೆ ಹೊರಸೂಸಿದೆ ಧೂಪ॥

ಎಂದು ಉದ್ಗರಿಸುತ್ತಾನೆ. ಈ ಮೂಲಕ ತನ್ನನ್ನೂ ತನ್ನ ಪ್ರೇಯಸಿಯನ್ನೂ ಆವರಿಸಿರುವ 'ಬೆಳುದಿಂಗಳು' ತಮ್ಮ ಪ್ರೇಮದ 'ಪ್ರತಿರೂಪ'ವೆಂದೂ, ಆ ಪ್ರೇಮ ಲೌಕಿಕ ಅನುಭವ ದಿಂದ ಬಿಡಿಸಿಕೊಂಡು ಊರ್ಧ್ವಮುಖಿಯಾಗಿ ಅಲೌಕಿಕ ಪ್ರಭಾವಳಿಯ ನಡುವೆ ಥಳಥಳಿ

---

*''ಕವಿಗಳ ನೂತನ ಸೃಷ್ಟಿಯಾದ ಈ ಶಬ್ದಕ್ಕೆ ಸೂಚ್ಯಾರ್ಥವೇನಿರಬಹು ದೆಂದರೂ, ನನ್ನ ಮಟ್ಟಿಗೆ ಇದು ಇಂಗ್ಲಿಷಿನ 'Honey moon' ಎಂಬುದರ ಅಪಾರ್ಥಕ ಪ್ರತಿರೂಪವೆನಿಸುತ್ತದೆ. ಇಂಗ್ಲಿಷಿನಲ್ಲಿ 'Honey'. ಎಂಬ ಶಬ್ದ ಪ್ರಣಯಿಗಳ ರೂಢಿಯಲ್ಲಿ ಪ್ರೇಯಸೀವಾಚಕ; ಆದರೆ ಕನ್ನಡದಲ್ಲಿ 'ಮಧು' ಶಬ್ದಕ್ಕೆ ಇನಿಯಳೆಂಬರ್ಥ ಬಹುದೂರ; 'ಜೇನು' 'ಮದ್ಯ' ಇವೇ ಪ್ರಸಿದ್ಧಾರ್ಥಗಳು. 'moon' ಎನ್ನುವಾಗ ಇಂಗ್ಲಿಷಿನಲ್ಲಿ ಒಂದು 'ಪಕ್ಷ' (ಶುಕ್ಲ ಇಲ್ಲವೆ ಕೃಷ್ಣ), ನಿಯಮಿತ ಕಾಲಾವಧಿ ಎಂಬ ಅರ್ಥಗಳುಂಟು. ಇವೆರಡೂ ಕೂಡಿದ 'Honey moon' ಶಬ್ದದಿಂದ ನವ ವಧೂವರರು ಏಕಾಂತವಿಹಾರಕ್ಕಾಗಿ ಹೋಗುವ ಕೆಲವೊಂದು ಕಾಲವೆಂಬ ಅರ್ಥ ಇಂಗ್ಲಿಷಿನಲ್ಲಿ ಸಹಜ. ಕನ್ನಡದಲ್ಲಿ 'ಮಧುಚಂದ್ರ' ಎಂಬ ಶಬ್ದದಿಂದ ಈ ಅರ್ಥವಂತೂ ಹೊರಡದು. ಮದ್ಯದ ಸೂಚನೆ ವ್ಯರ್ಥ. ಕಥಂಚಿತ್ 'ಮಧುಮಾಸ' ಎಂಬ ಮೂರನೆಯ ಅರ್ಥವನ್ನು ಹಿಡಿದು 'ಶೃಂಗಾರ ಮಾಸ' ಎಂಬ ಪ್ರಸ್ತುತಾರ್ಥಕ್ಕೆ ಬಂದರೂ 'ಚಂದ್ರ' ಪದದ ಸ್ವಾರಸ್ಯದಿಂದ ಪ್ರೇಮ ವಿಲಾಸ ಎಂದು ಅರ್ಥಯಿಸುವ ಪ್ರಸಂಗವನ್ನು ಲಾಕ್ಷಣಿಕರು 'ನೇಯಾರ್ಥ'ವೆಂಬ ದೋಷವೆನ್ನಬಹುದು. ಇಂಗ್ಲಿಷಿನ ಪದಾನುವಾದಕ್ಕೆ ಕನ್ನಡ ಕವಿಗಳು ಮಾರುಹೋದಾಗ ಇಂತಹ ಅನೌಚಿತ್ಯಗಳಿಗೆ ಎಡೆಯಾಗುತ್ತದೆ.''—ಮಧು ಚಂದ್ರ, 'ರಸಾನುಸಂಧಾನ', ದ್ವಿತೀಯ ಮುದ್ರಣ, 1962, ಪುಟ : v-vi (ಈ ಲೇಖನ ದಲ್ಲಿ ಮುಂದೆಲ್ಲ ಇದೇ ಮುದ್ರಣದ ಪುಟ ಸಂಖ್ಯೆ ಕೊಡಲಾಗಿದೆ—ಲೇಖಕ)

ಸುಮಂಥನೆಂದೂ ನಂಬಿರುವಂತೆ ಕಂಡು ಬರುತ್ತದೆ. ವಿವಾಹೋತ್ತರದ ಒಂದು ಸಂತಸದ ಗಳಿಗೆಯಲ್ಲಿ ಆತ—

ಮಧುಮಾಸದ ಚಂದ್ರಹಾಸ
ಬೆಳಗಿತೆದೆಯ ಮಂದಿರ (ಪು. 30)

ಎಂದು ತನ್ನ ಅಂತರಂಗದ ಆಪ್ತ ಭಾವಕ್ಕೆ ನುಡಿಗೊಡುತ್ತ 'ಮಧುಚಂದ್ರ'ದ ಅರ್ಥ ದೀಪ್ತಿಯ ಕಡೆಗೆ ನಮ್ಮ ಗಮನ ಸೆಳೆದಿದ್ದಾನೆ. ಈ ಹಿನ್ನೆಲೆಯನ್ನೂ ಇಲ್ಲಿಯ ಕಥನದ ಸಮಗ್ರ ಪರಹನ್ನೂ ಪರಿಭಾವಿಸಿದಾಗ, ಜೀವನದ 'ಮಧುಮಾಸ'ವೆನ್ನಬಹುದಾದ ಯೌವನದಲ್ಲಿ 'ಚಂದ್ರಹಾಸ' ದಂತಹ ಪರಿಶುದ್ಧ ಪ್ರೇಮದಲ್ಲಿ ಮಿಂದೆದ್ದ ಪ್ರೇಮಿಗಳ ಲೀಲಾವಿಲಾಸದ ಕಥನವೇ ಈ 'ಮಧುಚಂದ್ರ'ವೆಂದು ಮನದಟ್ಟಾಗದಿರದು.

'ಮಧುಚಂದ್ರ'ದಲ್ಲಿಯ ಪ್ರೇಮಕಥನ 'ಇರುಳು' 'ಹಗಲು'ಗಳಂತಹ ಎರಡು ರೆಕ್ಕೆಗಳನ್ನು ಚಾಚಿ ನಮ್ಮನ್ನು ತಬ್ಬಿಕೊಳ್ಳುವಂಥದಾಗಿದೆ. ವಿವಾಹಪೂರ್ವ ಜೀವನದ ಪ್ರಣಯದ ವ್ಯಥೆ ಮೊದಲಲ್ಲಿ ಕುಡಿವರಿದರೆ, ವಿವಾಹೋತ್ತರದ ಸಾಂಸಾರಿಕ ಸುಖ-ದುಃಖದ ಕಥೆ ಅನಂತರವಲ್ಲಿ ದಾಂಗುಡಿಯಿಟ್ಟಿದೆ. ಇವೆರಡಕ್ಕೂ ಕೇಂದ್ರಬಿಂದುವಾಗಿ ಪ್ರತಿಕ್ರಿಯಿಸುವ ನಾಯಕ ಭಾವಜೀವಿಯಾಗಿ ನಮ್ಮ ಗಮನ ಸೆಳೆಯುತ್ತಾನೆ.

ಪ್ರೇಯಸಿಯೊಂದಿಗಿನ ನಾಯಕನ ಸಂಬಂಧವನ್ನು ಕಡೆದು ನಿಲ್ಲಿಸುವ 'ಮಧುಚಂದ್ರ' ಗೀತದಲ್ಲಿಯ 'ಆನಂದದ ಕಡಲು—ಮೀನು' ಪದಗಳು, ಬಂಧಮುಕ್ತ ಬದುಕಿನ ಬಯಕೆಯನ್ನು ವ್ಯಂಜಿಸುವ ಬಗೆ ಅರ್ಥಪೂರ್ಣವಾಗಿದೆ. ಅವರಿಬ್ಬರ ಎದೆಗಳು 'ಪ್ರೇಮಾಂಬುಧಿ ಗೆಳೆಸಿ! ಆ ಗಂಗಾಯಮುನೆಯರೊಲು ಚಿರಸಂಗಮ ಬಯಸಿ' (ಮಿಲನ, ಪು. ೧೬) ತುಡಿದರೂ, ಪ್ರೇಮದ ಪಥ ಹೂವು ಚೆಲ್ಲಿದ ಹಾದಿಯಲ್ಲವೆಂಬುದು ಬೇಗನೇ ಅವರ ಅನುಭವಕ್ಕೆ ಬರುತ್ತದೆ :

ನಡುದಾರಿಗೆ ಅಡ್ಡೈಸಿವೆ ಗುಡುಗಾಡಿವೆ ಮುಗಿಲು
ಹೆಡೆಯೆತ್ತುತ ಘೂತ್ಕರಿಸಿದೆ ಬಿರುಗಾಳಿಯ ಹುಯಿಲು
..............................................
ಗಿರಿದರಿಗಳು ಅವ್ವಳಿಸಿರೆ, ತಿರುಗಣಿಯೊಲು ಹೊನಲು
(ಮಿಲನ, ಪು. ೧೬)

ಪ್ರೇಮಿಗಳ ಹೃದ್ಗತಕ್ಕೆ ಬೆಲೆಗೊಡದ ವಾಸ್ತವ ಪ್ರಪಂಚ ಅವರ ಒಲವಿನ ದಾರಿಯಲ್ಲಿ ವಿಘ್ನಗಳನ್ನು ಒಡ್ಡಿದಾಗ, ''ಕಟ್ಟಳೆಗಳ ಕಟ್ಟೊಡೆಯುವೆ ಸ್ವಚ್ಛಂದದಿ ನಲಿವೆ'' ಎಂಬ ವಿದ್ರೋಹದ ಭಾವ ಅಂತರಂಗದಲ್ಲಿ ಒಂದು ಕ್ಷಣ ಪುಟಿದೆದ್ದರೂ, ಅಂತರಾಳದ ದೌರ್ಬಲ್ಯ ತಲೆಯೆತ್ತಿ ''ಏಗೈವೆ'' ಎಂಬ ಉದ್ಗಾರದೊಂದಿಗೆ ಪರಿಸರವನ್ನು ಪ್ರತಿಭಟಿಸಿ ನಿಲ್ಲುವ ಶಕ್ತಿ ತನಗೆ ಸಾಲದೆಂಬುದನ್ನು ಧ್ವನಿಸುತ್ತದೆ :

ಪಂಜರದಲಿ ಅಗವಟ್ಟಿಹ ಗಿಳಿಗೆಲ್ಲಿದೆ ತ್ರಾಣ ?
ಪಕ್ಕದಲಿಹ ರೆಕ್ಕೆಗಳಲಿ ಬಿಕ್ಕಳಿಸಿದೆ ಪ್ರಾಣ ! (ಪು. ೧೬)

ಮುಂದುವರಿದು, ತಮಗೊದಗಿದ ದೀರ್ಘರ ದುರ್ದೆಸೆಗೆ ತಳಮಳಿಸುತ್ತ

ಓ ಎಂದಿಗೆ ! ಇನ್ನೆಂದಿಗೆ ನೋಂತರ ಸಮ್ಮಿಲನ ?
ಹೊಸಬಾಳಿನ ಹೊಸ ಹಾಡಿಗೆ ರಸಮಯ ಸಂಸ್ಕರಣ ? (ಪು. ೧೬)

ಎಂದು ಮೊರೆಯಿಡುತ್ತದೆ. ಆದರೇನು ? ಕೊನೆಗೂ ನಿರಂತರ ಅಗಲಿಕೆಯ ಗಳಿಗೆ ಬಂದೇ ತೀರುತ್ತದೆ :

"ನಿನ್ನೆದೆಯ ಜೇನ ನೀಡುವ ನಲ್ಮೆಯಿಂದೆನ್ನ
ಒಲಿಸಿ ಮೀಸಲು ನಗೆಯ ಸೂಸಿ ಕರೆದೆ ;
ಇಂದೇಕೆ ಮೊಗ ಬಾಡಿ ವಿಹ್ವಲ ವಿಕಾರದಲಿ
ನಿಂದಿರುವೆ ಚೆಂದುಳ್ಳ ಮಧುರ ಹೂವೆ ?"

"ಬೇರೊಂದು ದುರುದುಂಬಿ ಕೆಟ್ಟಗಾಳಿಯ ಸುಳಿಗೆ
ಬಂದೆನ್ನ ಬಲುಮೆಯೊಳಿ ಬಲಿಗೊಂಡಿತು :
ಅಯ್ಯೊ ಆ ವಿಷನಿಮಿಷ !ಮೈಯೆಲ್ಲ ಉರಿಯುತಿದೆ
ಅಬಲೆಯೆಂದೆನೆ––ಸಾವು ಬೇಕಾಯಿತು"

ತುಂಬಿ ಮೊರೆಯಿತು ಮರೆಯಲಾರೆನೆಂದು
ನೊಂದ ಹೂ ಕಳಚಿತ್ತು ಎದೆಯು ಬೆಂದು.
('ನಲ್ಮೆ'-ಪು. ೧೭)

ಹೂವು-ದುಂಬಿಗಳ ಹೃದಯ ಸಂವಾದವನ್ನಾಧರಿಸಿದ ಅನ್ಯೋಕ್ತಿ, ಇಲ್ಲಿಯ ಅಭಿವ್ಯಕ್ತಿಗೆ ಸಫಲತೆ ಸಾಧ್ಯವಾಗುವಂತೆ ಮಾಡಿದೆ. ಇದರೊಂದಿಗೇ ಪ್ರೇಮದ ಕನಸು ಮುರಿದು, ಅದರ ಲೀಲಾವಿಲಾಸಕ್ಕೆ ಅಂಕ ಪರದೆ ಬೀಳುತ್ತದೆ.

'ಇರುಳು' ಹರಿದು 'ಹಗಲು' ತೆರೆದುಕೊಳ್ಳುವುದು, ಎಂತಹ ಗಾಯವೂ ಕಾಲಾಂತರದಲ್ಲಿ ಮಾಯುವುದು ನಿಸರ್ಗನಿಯಮ. "ಆದುದಾಯಿತು ಹಿಂದು" ಎಂದು ತನ್ನನ್ನು ತಾನು ಸಂತೈಸಿಕೊಂಡು ಹೊಸ ಪರಿಸ್ಥಿತಿಯೊಂದಿಗೆ ಹೊಂದಿಕೊಳ್ಳಲಿಚ್ಛಿಸಿದ ನಾಯಕ 'ಶುಭ ನವೋದಯ'ದ ಬರವನ್ನು ಹಾರೈಸಿ ಹೊಸ ತಿರುವಿನಲ್ಲಿ ಹಜ್ಜೆ ಹಾಕಲು ಹವಣಿಸುವ ('ನವೋದಯ'-ಪು. ೧೮). "ಮತ್ತೊಂದು ಪುಟ್ಟ ಹಕ್ಕಿಗೆ" ತನ್ನ ಮನೋಗತವನ್ನು ನಿವೇದಿಸಿಕೊಳ್ಳುತ್ತ,

ನಿನ್ನ ಹಾಡಿನ ಮುಂದೆ ನನ್ನದೇತರ ಪಾಡು-
ನನ್ನ ಹಾಡಿಗು ನನಗು ಜನ್ಮಗಂಟು ! (ಪು. ೨೧)

ಎಂದು ನುಡಿದು, ತನ್ನ ಮೊದಲ ಪ್ರಣಯದ ವ್ಯಥೆಯನ್ನು ಸೂಚ್ಯವಾಗಿ ನಿರೂಪಿಸುತ್ತಾನೆ. ಆದರೇನು ? ಬದುಕು ನಿಂತ ನೀರಲ್ಲ. ನಿರಂತರ ಚಲನೆ, ಪರಿಸರ ಸಂವೇದಿಯಾದ ಬದಲಾವಣೆ—ಇದೇ ಅದರ ಜೀವಗುಣ, ಜೀವಂತಿಕೆಯ ಲಕ್ಷಣ. ಹೀಗಾಗಿ ಆತನ ಹೃದಯ ಆ ಹಕ್ಕಿಯ ಗಾನಕ್ಕೆ ಪ್ರತಿಸ್ಪಂದಿಸುತ್ತ,

ನಿನ್ನ ಧ್ವನಿ ಸ್ವಚ್ಛಂದ ಆನಂದದುಕ್ಕಂದ
ಹೊಚ್ಚ ಹೊಸ ಮಳೆಯ ತನಿಸೆಳಕಿನಂತೆ (ಪು. ೨೧)

ಎಂದು ಉದ್ಗರಿಸುತ್ತದೆ. ಇಲ್ಲಿ ಹೊಮ್ಮಿರುವ "ಹೊಚ್ಚ ಹೊಸ ಮಳೆಯ ತನಿ ಸೆಳಕಿ"ನ ಪ್ರತಿಮೆ, ನಾಯಕನ ಪ್ರೇಮ ಜೀವನದ ಪೂರ್ವೋತ್ತರಗಳನ್ನು ಸಮಗ್ರವಾಗಿ ಪ್ರತಿ

ಫಲಿಸಬಲ್ಲ ಸಂಪನ್ನತೆಯನ್ನು ಒಳಗೊಂಡುದಾಗಿದೆ. ಬದುಕಿನ "ವಸಂತ"ದ ಉಕ್ಕು ಉತ್ಸವಗಳ ಮೇಲೆ ಕಾಲ ತೆರೆಯೆಳೆದಾದ ಮೇಲೆ ವಿರಹದ ಉರಿ "ಬೇಸಗೆ"ಯಲ್ಲಿ ನೆಲದ ಹಾಗೆ ಒದ್ದಾಡಿದ ನಾಯಕ, "ಹೊಚ್ಚ ಹೊಸ ಮಳೆ"ಯಾಗಿ ಎದೆಗೆ ತಂಪು ಎರೆಯಬಲ್ಲ ನವವಧುವಿನ ನಿರೀಕ್ಷೆಯಲ್ಲಿರುವ ಅಂಶ ಇಲ್ಲಿ ಅಭಿವ್ಯಂಜಿತವಾಗಿದೆ. ಇಂತಹ ಮಧುರಿಮೆಯ ಕನಸನ್ನು ಕಾಣ ಹಚ್ಚಿದ ಆ 'ಮತ್ತೊಂದು ಹಕ್ಕಿ'ಯ ಹಾಡನ್ನು ಮತ್ತೆ ಮತ್ತೆ ಕೇಳಬೇಕೆಂಬ ಬಯಕೆ ಅಂತರಂಗದಲ್ಲಿ ಸೆಲೆಯೊಡೆಯುತ್ತದೆ :

ಏನಾದರೂ ಇರಲಿ ಹಾಡ ನಿಲ್ಲಿಸಬೇಡ
ದೀಪ ಪಟ್ಟನೆ ಆರಿ ಹೋಗಬಹುದು !
ನನ್ನೆದೆಯ ಕತ್ತಲೆಯ ಕಣ್ಣುಕಪ್ಪಡಿ ಮತ್ತೆ
ಮೂಲೆಮೂಲೆಗೆ ಹೋಗಿ ಹಾಯಬಹುದು ! (ಪು. ೨೨)

ಹಿಂದಿನ ಆಘಾತವನ್ನು ನೆನಪಿಗೆ ತಂದುಕೊಳ್ಳುವ ಮೂಲಕ ಭವಿಷ್ಯದಲ್ಲಿ ಅದರ ಪುನರಾವರ್ತನೆಯಾಗದಂತೆ ನೋಡಿಕೊಳ್ಳಬೇಕೆಂಬ ಹಂಬಲ ಈ ಚಿತ್ರದಲ್ಲಿ ಕೆತ್ತಲ್ಪಟ್ಟಿದೆ. 'ದೀಪ' ಮತ್ತು 'ಕಣ್ಣುಕಪ್ಪಡಿ'ಯ ಪ್ರತಿಮೆಗಳು ಅದರ ಅರ್ಥವಂತಿಕೆಯನ್ನು ಹಿಗ್ಗಿಸಿವೆ.

ಕನಸು-ಕನವರಿಕೆಗಳಿಗೆ ಕೈಕಾಲು ಮೂಡಿ 'ಚೆಂಗುಲಾಬಿ' ಚೆಲುವೆಯೊಬ್ಬಳು ಜೀವದ ಗೆಳತಿಯಾಗಿ ಬಂದ ಮೇಲೆ ನಾಯಕನ ಬದುಕಿನಲ್ಲಿ ಹೊಸ ಜೀವ, ಹೊಸ ಹರ್ಷಗಳ ಸಂಚಾರವಾಗುತ್ತದೆ. ಆ ಭಾವಾವೇಶ ಹಿಂದಿನ 'ನೂರು ನೋವನೆಲ್ಲ ಮರೆಸಿ', ಪ್ರೀತಿಗಂಧ ಪೂಸಿ, ನಾಯಕನನ್ನು ಸಂತೃಪ್ತಿಯ ಅಲೆಗೈಗಳ ಮೇಲೆ ತೇಲಿಸಿಕೊಂಡು ಹೋಗುತ್ತದೆ :

ನಾದಲಹರಿಯೊಡನೆ ಬಂದ
ನೀನು ಹಾಡಿನೊಡತಿಯು
ಒಲಿದು ಒಲಿಸಿಕೊಂಬ ನಗೆಯೆ
ನಿನ್ನ ನಯದ ನಡತೆಯು.
ಮಾತು ಪಾರಿಜಾತ ಪುಷ್ಪ-
ದಂತೆ ಮೃದುಲ ಕೋಮಲ ! (ಪು. ೨೯)

ಪ್ರಥಮ ಪ್ರೇಮ ಕಥಾನಕದ ಕಂಡರಣೆಯಲ್ಲಿದ್ದ ಒಂದು ಬಗೆಯ ಸಂಕೋಚದ ತೆರೆ ಕಳಚಿ ಹೋಗಿರುವುದರಿಂದ ಇಲ್ಲಿಯ ಚಿತ್ರಣ ವಿವರಣಗಳೊಂದಿಗೆ ಬೆಳೆದಿದೆ. ಹೊಸ ಬದುಕಿನ ಸುಖಸಮಾಗಮದ ವೈಭವವಿಲಾಸ ಇನ್ನಿಷ್ಟು ಥಾಳವಾಗಿ ಬಿಚ್ಚಿಕೊಂಡಿದೆ—

ಒಲವು ಬಳ್ಳಿಯಾಗಿ ಕುಡಿಯ
ಚಾಚಿ ನಿನ್ನ ಬಳಸಿದೆ,
ನಡುವೆ ಚೆಂಗುಲಾಬಿಯಂತೆ
ನಿನ್ನ ಬಾಳು ಅರಳಿದೆ (ಪು. ೨೬)

ಇಲ್ಲಿಯ ಭಾವಾವಿಷ್ಕರಣದಲ್ಲಿ ಪುನರಾವೃತ್ತಿ ಕಂಡು ಬಂದರೂ 'ಚೆಂಗುಲಾಬಿ'ಯ ಪ್ರತಿಮೆ ಮಹತ್ವದ್ದಾಗಿದೆ. ಮೊದಲ ಕನಸು 'ಮಲ್ಲಿಗೆ'ಯಾದರೆ, ಇದೀಗ ಮನ-ಮನೆ

ಎರಡನ್ನೂ ತುಂಬಿರುವ ಮಡದಿ 'ಚೆಂಗುಲಾಬಿ'. ಇವೆರಡೂ ಮೋಹಕ ಹೂವುಗಳೇ ಆದರೂ ಒಂದೊಂದರ ಆಕರ್ಷಣೆ ಒಂದೊಂದು ವಿಧ, ವಿಭಿನ್ನ. 'ಚೆಂಗುಲಾಬಿ' ತನ್ನ ವರ್ಣಮಯತೆಯಿಂದ ಮನಸ್ಸನ್ನು ಸೆಳೆದರೆ, 'ಮಲ್ಲಿಗೆ' 'ಸೌಗಂಧಿಕಾ' ಶಕ್ತಿಯಿಂದ ಹೃದಯವನ್ನು ಸೂರೆಗೊಳ್ಳುತ್ತದೆ. ಹೀಗಿರುವುದರಿಂದಲೇ 'ಮಲ್ಲಿಗೆ'ಯ ಪರಿಮಳ ಉದ್ವಕ್ಕೂ ನೆನಪಾಗಿ ಬಂದು ನಾಯಕನನ್ನು ವರ್ತಮಾನದಿಂದ ಭೂತಕ್ಕೆ ತುಯ್ಯುವಂತೆ ಮಾಡುತ್ತದೆ. ಪ್ರಥಮಾವಸ್ಥೆಯ ಪ್ರಣಯದ ಎಲ್ಲಾ ಮುಖಗಳನ್ನು ಈ ಸಂದರ್ಭದಲ್ಲಿ ಬಾಚಿಕೊಳ್ಳುವ ಕ್ರಿಯೆ ಸಾಕಾರಗೊಳ್ಳುತ್ತ ಹೋಗುತ್ತದೆ—

ನನ್ನ ಕನಸಿನ ಹೊನ್ನ ತಾವರೆಯ ಹೂವರಳಿ
ಎನ್ನ ಬೊಗಸೆಯೊಳಿಂದು ಕಂಗೊಳಿಸಿದೆ
(ನನ್ನ ಹೊಂದಾವರೆ—ಪು. 33)

'ಜೊತೆ' ಎಂಬ ಕವನದಲ್ಲಿ ಆದರ್ಶದಾಂಪತ್ಯ 'ಚಂದಿರ-ರೋಹಿಣಿ'ಯರ ಪ್ರತಿಮೆಗಳ ಮೂಲಕ ನಾಯಕನಲ್ಲಿ ಮೈಪಡೆದುಕೊಳ್ಳುತ್ತಿದ್ದರೂ 'ಗಾಳಿಯ ಪುಂಗಿ'ಯನ್ನನುಸರಿಸಿ ಬಿಚ್ಚಿಕೊಳ್ಳುವ 'ಕಿರುಮೋಡದ ಹೆಡೆ' ಚಂದಿರ-ರೋಹಿಣಿಯರ ಮಧ್ಯೆ ಅಡ್ಡತೆರೆಯನ್ನೆಳೆದು ಎಲ್ಲಿ ಬದುಕನ್ನು ಕದಡುವುದೋ ಎಂಬ ಭಯ ನಾಯಕನನ್ನು ಕಾಡುತ್ತದೆ. ಇಷ್ಟಾದರೂ ಭೂತದಿಂದ ಬಿಡಿಸಿಕೊಂಡು ವರ್ತಮಾನದ ಕ್ಷಣಗಳತ್ತ ತುಡಿಯುವ ಲವಲವಿಕೆ ಅವನಲ್ಲಿ ಜಾಗೃತವಾರುವುದು ಕೊನೆಯ ಸಾಲುಗಳಲ್ಲಿ ಮುದ್ರಿತವಾಗಿದೆ;

ಈ ಬೆಳದಿಂಗಳ ಇಂಗಡಲಾಳದಿ
ಕಂಗಳ ಮೀನ್ಗಳ ತೆರೆಯೆ ಸಖಿ
ಸೃಷ್ಟಿಯ ಸೌಂದರ್ಯೋಪಾಸನೆಯಲಿ
ನೀ ಜೊತೆಗಿರೆ ನಾ ಪರಮಸುಖಿ (ಪು. 32)

ಇಲ್ಲಿಯ ತನಕ ಭಾವನಾತ್ಮಕ ಪ್ರೇಮದ ಬಾಹ್ಯಕ್ರಿಯೆಗಳಲ್ಲಷ್ಟೆ ಭಾಗಿಯಾಗುತ್ತಿದ್ದ ನಾಯಕ. "ಜೀವ ಜೀವಾಳದಲಿ ಕೂಡಿದವಳು" (ಪು. 38) ಮೂಲಕ ಪ್ರೇಮದ ಉತ್ಕಟಕ್ಷಣಗಳ ದೈಹಿಕ ಕ್ರಿಯೆಗಳತ್ತ ತುಡಿಯುವುದರಿಂದ ಇಡಿಯಾಗಿ ಕವನ ಬೆಳೆದು ಬಂದಿರುವುದು ದೃಗ್ಗೋಚರವಾಗುತ್ತದೆ. ಇಲ್ಲಿಂದ ಮುಂದಿನ ಕವನಗಳಲ್ಲಿ ನಾಯಕನ ಸಾಂಸಾರಿಕ ಜೀವನ ಸಂಪುಟದ ಕೆಲವೊಂದು ಪುಟಗಳೇ ಚಿತ್ರಮಯವಾಗಿ ತೆರೆದುಕೊಳ್ಳುತ್ತವೆ. ಬೆಳಗಿನ ಸಕ್ಕರೆ ನಿದ್ದೆಯನ್ನು ಇನ್ನೂ ಸವಿಯುತ್ತಿರುವ ಮಡದಿಯನ್ನು ನಾಯಕನು ಬೆಳಗಾಗ ಎಬ್ಬಿಸುವ ಮೃದು ಮಧುರ ಬಗೆ "ಉಷೆಯ ಗೆಳತಿಯ"ಲ್ಲಿ ಹಾಡಾಗಿ ಹರಿದಿದ್ದರೆ, ನೌಕರಿಮಾಡುವ ನಗರಜೀವಿಯಾದ ಆತನ 'ಮನೆಯ ಮಂಗಳಮೂರ್ತಿ'ಯೆನ್ನಿಸಿದ ಮಡದಿ, ಸಂಜೆಹೊತ್ತು ಪತಿಯ 'ನಿರೀಕ್ಷೆ'ಯಲ್ಲಿರುವ ಚಿತ್ರ ಜೀವ ತುಂಬಿ ತುಳುಕುವಂಥದಾಗಿದೆ:

ತುಂಬುಗೈ ಬಾಗಿಲಿಗೆ ಇಂಬುಗೊಟ್ಟಿದೆ, ಕಾಲ
ತುದಿ ಬೆರಳು ಹೊಸತಿಲಕೆ ಹೂವಾಗಿದೆ !

ನೆಟ್ಟದಿಟ್ಟಿಯು ದಾರಿ ನೋಡಿ ನಿಟ್ಟುಸಿರಿಡಲು
ಜಡೆಯುದ್ದಕೂ ಚಿಂತೆ ಹೊಯ್ದಾಡಿದೆ ! (ಪು. ೪೨)

ಈ ನಿರೀಕ್ಷೆಯ ನಿಲುವು, ಉತ್ಕಂಠೆ ಮರೆಯಲಾಗದ ಮುದ್ರೆಯನ್ನು ನಮ್ಮ ಮನಸ್ಸಿನ ಮೇಲೆ ಒತ್ತುವಂತಿವೆ. ಯಾವುದೋ ಮನಸ್ತಾಪದಿಂದ ಪತಿ 'ಮೌನಭಾರ'ದಡಿಯಲ್ಲಿ ಮುಲುಗುತ್ತಿರುವಾಗ. ಆತನ ಮುದ್ದಾಟ ಅಪ್ಪುಗೆ ನಗೆಯ ಸರಸಸಲ್ಲಾಪದ ರಸನಿಮಿಷಗಳನ್ನು ಮೆಲುಕುಹಾಕಿ ಮನದ ತಳಮಳವನ್ನು ತೋಡಿಕೊಳ್ಳುವ ಬಗೆ ಆರ್ದ್ರತೆಯಿಂದ ತುಂಬಿದೆ;

ಸರಸ ಸಲ್ಲಾಪಗಳ ಸರಸಿ ಬತ್ತುತಲಿರಲು
ಈ ಸರೋಜಕೆ ಬೇರೆ ಜೀವವಿಹುದೆ ? (ಪು, ೪೪)

..........................................
ಕಣ್ಣು ಕಾತರಿಸಿಹವು ಎದೆಯು ಹಾರೈಸಿಹುದು
ತಾಳಲಾರೆನು ಇನ್ನು ಮೌನಭಾರ ! (ಪು. ೪೫)

ಮುಂದೆ ಮಡದಿ ಮೊದಲ ಸಲ 'ಪಯಣ' ಬೆಳೆಸಿದ ಮೇಲೆ ಒಂಟಿತನದ ಧಗೆಯಲ್ಲಿ ಕಸಿವಿಸಿಗೊಂಡ ನಾಯಕ, ತನ್ನಾಕೆಯೊಂದಿಗಿನ ಸಂಗಸುಖದ ಹಿನ್ನೆಲೆಯಲ್ಲಿ ಮನೆಯನ್ನು ಮುತ್ತಿ ಮುಕ್ಕಿದ ಭಣಭಣವನ್ನು ತೂಗಿ ನೋಡುತ್ತಾ, ಪತ್ನಿಯ ಸ್ಥಿತಿಗತಿಯನ್ನು ಚಿತ್ರಿಸಿಕೊಳ್ಳುತ್ತಲೇ ಭಾರತೀಯ ಗೃಹಿಣಿಯ ಧರ್ಮಸಂಕಟವನ್ನು ವ್ಯಂಜಿಸಿದ ಬಗೆ ಗಮನಿಸುವಂಥದಾಗಿದೆ;

ತವರುಮನೆ ನೆನೆದೊಡನೆ ಹಗಲೆಲ್ಲ ಹಿಗ್ಗಿದಳು
ನನ್ನ ಅನುಮತಿಗೆನಿತೊ ಅಮೃತಧಾರೆ—
ಮರುಗಳಿಗೆಯಲಿ ಮತ್ತೆ ಇರುಳು ಕೊರಳನ್ನಪ್ಪಿ
'ಅಗಲಲಾರೆನು' ಎಂಬ ಕಣ್ಣಧಾರೆ!
('ವಿರಹಕೂಜನ'—ಪು. ೪೮)

ಹೀಗೆ ಬದುಕಿನ 'ಇರುಳು' 'ಹಗಲು'ಗಳೆರಡಕ್ಕೂ ಮೈಪಡೆದ ನಾಯಕನ ಪ್ರೇಮ ಕಥಾನಕ ತನ್ನೆಲ್ಲ ಸಂಕೀರ್ಣತೆಯೊಂದಿಗೆ 'ಈ ಮಲ್ಲಿಗೆ ಈ ಗುಲಾಬಿ' ಕವನದಲ್ಲಿ ಪ್ರತಿಮಿತವಾಗಿದೆ. ಯಾವುದೋ ಒಂದು ಸಂಕೋಚಭಾವ ಸರಳ ಪ್ರಕೃತಿಗೀತವೆಂಬ ಭ್ರಮೆಯ ತೆರೆಯನ್ನು ಅದರ ಮೇಲೆ ಇಳಿಬಿಡಲು ಹವಣಿಸಿದ್ದರೂ ಅದೂ ಪಾರದರ್ಶಕವೇ ಆಗಿದೆ :

ಈ ಮಲ್ಲಿಗೆ ಈ ಗುಲಾಬಿ
ಚೆಲುವಿನೆರಡು ಕಣ್ಣುಗೊಂಬಿ

....................
ಎಲೆ ಮಲ್ಲಿಗೆ, ಚೆಲು ಗುಲಾಬಿ
ಬಾರ ಚಿಟ್ಟೆ, ಬಾರ ತುಂಬಿ
ಮನದ ತುಂಗ ಶೃಂಗದಲ್ಲಿ
ಎನ್ನ ಹೃದಯರಂಗದಲ್ಲಿ

ದ್ವೈತವಿರದ ಕೂಟದಲ್ಲಿ
........................
ಹಾಡಿ ನೃತ್ಯವಾಡಿರೇ
ಚಿರಂಜೀವಿಯಾಗಿರಿ (ಪು. ೬೮)

ಹಳೆಯ ನೆನೆಪಿನೊಂದಿಗೆ ಹೊಸ ಬದುಕನ್ನು ಒಪ್ಪಿಕೊಳ್ಳುತ್ತ ಎರಡನ್ನೂ ಬೆಸೆಯುವ ಯತ್ನ ಇಲ್ಲಿ ಕಾರ್ಯೋನ್ಮುಖವಾಗಿದೆ. ವರ್ತಮಾನದ ಕ್ಷಣಗಳು ಪ್ರಮುಖವಾಗುವ ಎಡೆಯಲ್ಲೆಲ್ಲಾ ಭೂತದ ಸ್ಮೃತಿಗಳು ಜಾಗ್ರತಗೊಳ್ಳುತ್ತಾ ದ್ವಂದ್ವಸ್ಥಿತಿಯಲ್ಲಿಯೇ ಬೆಳೆದುಕೊಂಡು ಹೋದರೂ 'ದ್ವೈತವಿರದ ಕೂಟ'ದತ್ತ ಹೆಜ್ಜೆಹಾಕುವ ತೀವ್ರ ಆಕಾಂಕ್ಷೆಯೇ ಇಲ್ಲಿಯ ಪ್ರೇಮ ಸಂಹಿತೆಯ ಬೆನ್ನುಹುರಿ ಎಂಬುದು ಇಲ್ಲಿ ಸ್ಪಷ್ಟವಾಗುತ್ತದೆ. ಇಲ್ಲಿ ಪ್ರಯೋಗಿತವಾದ 'ಚಿಟ್ಟೆ' 'ತುಂಬಿ'ಗಳ ಮೇಲ್ಮೈಯ ಅರ್ಥವನ್ನೆ ಅವಲಂಬಿಸಿದರೆ ಇದೊಂದು ಪ್ರಕೃತಿ ಗೀತವೆಂಬ ಭ್ರಮೆ ಹುಟ್ಟಬಹುದಾಗಿದೆ. ಆದರೆ ವಸ್ತುಸ್ಥಿತಿ ಹಾಗಿಲ್ಲ. ಇವೆರಡೂ ಇಲ್ಲಿ ಪ್ರತಿಮೆಗಳಾಗಿ ಕೆತ್ತಲ್ಪಟ್ಟಿದ್ದು, ಕವಲಾಗಿ ಕುಡಿಚಾಚಿದ ನಾಯಕನ ಪ್ರೇಮಾಂತರಂಗದ 'ಪ್ರತಿರೂಪ'ಗಳಾಗಿ 'ದ್ವೈತವಿರದ ಕೂಟ'ವನ್ನೆ ಧ್ವನಿಸುತ್ತಿವೆ.

ಅಂತೂ ಪರಮೋನ್ನತಿಯತ್ತ ಮೊಗಚಾಚುತ್ತಲೇ ಪರಿಮಿತ ಹಂದರದಲ್ಲಿ ಪ್ರಫುಲ್ಲಿತವಾಗಿ, ಸಮಾಜಕ್ಕೆ ಒಪ್ಪಿತವಾದ ನಿರ್ಬಂಧಗಳ ನಡುವೆಯೇ ಫಲಿತಗೊಳ್ಳ ಹೊರಟ ಪ್ರೇಮವಿಶೇಷದ ಪ್ರಾಮಾಣಿಕ ತುಡಿತವೇ ಇಲ್ಲಿ ವಿರಾಜಿಸಿದೆ. ಅನುರಾಗದ ಕೆಂಪು ನಿರ್ಮಲತೆಯ ಬಿಳುಪುಗಳನ್ನು ಬಿಂಬಿಸುವ "ಪಾರಿಜಾತ ಪುಷ್ಪದಂತಹ ಮೃದುಲ ಕೋಮಲ" (ಗೆ,-ಪು: ೨೯) ಮಾತುಗಳನ್ನು ಅರ್ಥದೀಪ್ತವಾಗಿ ದುಡಿಸಿಕೊಳ್ಳುವ ಮೂಲಕ, "ತಿಳಿಗೊಳದ ಮಧ್ಯದಲಿ ತೆರೆಯ ವರ್ತುಲಗಳಲಿ ! ಹೊನ್ನ ತಾವರೆ ತೇರು ತೇಲಿ" (ನಲಂಮೆಯ ಕರೆ, ಪು. ೩೫) ದಂತಹ ಅದರ ವಿಲಕ್ಷಣ ವಿಲಾಸ ನಮ್ಮನ್ನು ಗಾಢವಾಗಿ ತಟ್ಟುತ್ತದೆ. ಈ ಕಾರಣಕ್ಕಾಗಿಯೇ ಕಣವಿಯವರ ಈ ಪ್ರೇಮಕಥಾನಕ ವಿಶಿಷ್ಟವೂ ಮಹತ್ವದ್ದೂ ಆಗಿದೆ.

ಗಿರಡ್ಡಿ ಗೋವಿಂದರಾಜ

# ಕಣವಿಯವರ ಕಾವ್ಯಮಾರ್ಗ ಮತ್ತು ಅವರ ಶಿಶುಗೀತೆಗಳು

## ೧

"ದೀಪಧಾರಿ" ಕವನಸಂಕಲನಕ್ಕೆ ಬರೆದ ತಮ್ಮ ಮೊದಲ ಮಾತುಗಳಲ್ಲಿ ಚೆನ್ನವೀರ ಕಣವಿಯವರು ತಮ್ಮ ಆ ಕಾಲದ ಕಾವ್ಯಮಾರ್ಗದ ಸ್ವರೂಪವನ್ನು ಕುರಿತು ಕೆಲವು ಪ್ರಾಸಂಗಿಕವಾದ ಮಾತುಗಳನ್ನು ಹೇಳಿದ್ದಾರೆ :

> ಈ ಸಂಗ್ರಹದ ಕೆಲ ಕವಿತೆಗಳಲ್ಲಿ ನವ್ಯಕಾವ್ಯಮಾರ್ಗದ ಹಲವು ಅಂಶಗಳನ್ನು ಓದುಗರು ಕಾಣಬಹುದು. ಆ ಮಾರ್ಗದಲ್ಲಿ ನಡೆದ ಯಶಸ್ವಿ ಪ್ರಯೋಗಗಳೆಂದು ನಾನಿವನ್ನು ಕರೆಯುತ್ತಿಲ್ಲವಾದರೂ ಆಧುನಿಕ ಭಾವಗೀತೆ ಹಾಗೂ ನವ್ಯಮಾರ್ಗಗಳ ನಡುವೆ ನಿರ್ಮಾಣಗೊಂಡಿರುವ ಕಂದರಕ್ಕೆ ಇದು ಸೇತುವೆಯಾದೀತೆಂಬ ನಮ್ರ ಭಾವನೆ ನನಗಿದೆ.

ಅಲ್ಲಿಂದೀಚೆಗೆ ಕಣವಿಯವರ ಕಾವ್ಯದಲ್ಲಿ ಬದಲಾವಣೆ—ಬೆಳವಣಿಗೆಗಳೇನೋ ಆಗಿವೆ. ಆದರೆ ಅವರ ಕಾವ್ಯ ಮೇಲೆ ವ್ಯಕ್ತವಾಗಿರುವ ಆಶಯವನ್ನು—ನವೋದಯ ಹಾಗೂ ನವ್ಯ ಮಾರ್ಗಗಳ ನಡುವೆ ಸೇತುವೆಯಾಗುವ ಉದ್ದೇಶವನ್ನು—ಮಾತ್ರ ಇನ್ನೂ ಉಳಿಸಿಕೊಂಡಿದೆ ಎನ್ನಬಹುದು. ಜಿ.ಎಸ್. ಶಿವರುದ್ರಪ್ಪನವರೊಂದಿಗೆ ಸೇರಿಸಿ ಕಣವಿಯವರ ಕಾವ್ಯವನ್ನು ಸಮನ್ವಯ ಮಾರ್ಗದ ಕಾವ್ಯ ಎಂದು ವರ್ಣಿಸುವದು ಇಂದಿನ ವಿಮರ್ಶೆಯಲ್ಲಿ ಸಾಮಾನ್ಯವಾಗಿಬಿಟ್ಟಿದೆ.

ಆದರೆ ಸ್ವತಃ ಕಣವಿಯವರು ತಮ್ಮ ಕಾವ್ಯವನ್ನು ಈ ರೀತಿ ಕರೆಯಲಾಗುತ್ತಿರುವ ಬಗೆಗೆ ತಮ್ಮ ಅತೃಪ್ತಿಯನ್ನು ವ್ಯಕ್ತಪಡಿಸಿದ್ದಾರೆ. ಒಂದು ಕಾಲದಲ್ಲಿ ತಮ್ಮ ಕಾವ್ಯದ ಬಗೆಗೆ ತಾವೇ ಹೇಳಿಕೊಂಡ ಮಾತುಗಳನ್ನೇ ವಿಮರ್ಶಕರು ಇನ್ನೂ ಗಟ್ಟಿಯಾಗಿ ಹಿಡಿದುಕೊಂಡಿರುವದರ ಬಗೆಗೆ ಅವರಿಗೆ ಅಸಮಾಧಾನವಿದೆ. ತಮ್ಮ ಕಾವ್ಯದಲ್ಲಿ ಅನಂತರ ಆಗಿರುವ ಬದಲಾವಣೆ-ಬೆಳವಣಿಗೆಗಳನ್ನು ಗುರುತಿಸಲು ಈ ಮಾತು ಅಡ್ಡಿಯಾಗಿದೆ ಎಂಬುದು ಅವರ ಭಾವನೆಯಾಗಿದೆ.

ಈ ಭಾವನೆಯ ಹಿಂದೆ ಇರುವ ಒಂದೆರಡು ಗ್ರಹಿಕೆಗಳನ್ನು ಇಲ್ಲಿ ಅರ್ಥಮಾಡಿಕೊಳ್ಳಬೇಕು. ಮುಖ್ಯವಾಗಿ, ಸಮನ್ವಯಮಾರ್ಗದ ಕವಿ ಎಂದು ಕರೆಸಿಕೊಳ್ಳಲು ಕಣವಿಯವರಿಗೆ ಇಷ್ಟವಿದ್ದಂತಿಲ್ಲ. ಸಮನ್ವಯವೆಂದರೆ ಒಂದು ಬಗೆಯ ಸರಳ ಹೊಂದಾಣಿಕೆ,

ಅನುಭವ ಹಾಗೂ ಅಭಿವ್ಯಕ್ತಿಗಳೆರಡರ ದೃಷ್ಟಿಯಿಂದಲೂ ಮಾಡಿಕೊಂಡ ರಾಜಿ ಎಂಬ ಅರ್ಥ ಇಂದಿನ ವಿಮರ್ಶೆಯಲ್ಲಿ ಪ್ರಚಲಿತವಾಗಿರುವದರಿಂದ ಅದಕ್ಕೆ ಅಷ್ಟು ಗೌರವವಿಲ್ಲ. ವಿ.ಕೃ. ಗೋಕಾಕರು ನವ್ಯತೆ ಒಂದು ತಂತ್ರ, ಅದನ್ನು ಯಾರು ಬೇಕಾದರೂ ಅಳವಡಿಸಿ ಕೊಳ್ಳಬಹುದು ಎಂಬ ಮಾತನ್ನು ಆರಂಭದಲ್ಲಿ ಮುಂಡಿಸಿದ್ದರು. ಮುಂದೆ ಅವರೇ ಸಮನ್ವಯಮಾರ್ಗದ ಸಿದ್ಧಾಂತವನ್ನೂ ಪ್ರತಿಪಾದಿಸಿದರು. ಈ ವಾದದ ಒಂದು ಅರ್ಥ ದಲ್ಲಿ ಅನುಭವ ನವೋದಯ ಕಾವ್ಯಕ್ಕೆ ವಿಶಿಷ್ಟವಾದುದಾಗಿದ್ದೂ ಅಭಿವ್ಯಕ್ತಿಯಲ್ಲಿ ಕವಿತೆ ನವ್ಯವಾಗಬಹುದು. ಈ ಧೋರಣೆ ಅನುಭವದ್ರವ್ಯ ಹಾಗೂ ಅಭಿವ್ಯಕ್ತಿಮಾರ್ಗ ಗಳೆರಡೂ ಭಿನ್ನವೆಂದು ಭಾವಿಸುತ್ತದೆ. ಆ ಮೂಲಕ ಅವೆರಡರ ನಡುವಿನ ಸಂಬಂಧವನ್ನು ಸರಳೀಕರಿಸುತ್ತದೆ. ಇಂದಿನ ವಿಮರ್ಶೆ ಈ ಧೋರಣೆಯನ್ನು ಒಪ್ಪುವದಿಲ್ಲ. ಅನುಭವ-ಅಭಿವ್ಯಕ್ತಿಗಳೆರಡೂ ಪರಸ್ಪರಾವಲಂಬಿಗಳು ಎಂಬುದು ಅದರ ಪ್ರತಿಪಾದನೆ. ಹೀಗಾಗಿ, ಸಮನ್ವಯಮಾರ್ಗದ ಕವಿಗಳು ತಮ್ಮ ಅನುಭವದ್ರವ್ಯ ಬದಲಾಗದಿದ್ದರೂ ಅಭಿವ್ಯಕ್ತಿ ಮಾರ್ಗವನ್ನು ಮಾತ್ರ ಬದಲಿಸಿಕೊಂಡುದರಿಂದ ಅವರ ಕಾವ್ಯದಲ್ಲಿ ಅನುಭವ ಹಾಗೂ ಅಭಿವ್ಯಕ್ತಿಗಳ ನಡುವೆ ಸೃಜನಶೀಲವಾದ ಸಂಬಂಧ ಕಾಣುವದಿಲ್ಲವೆಂಬ ಅಪವಾದಕ್ಕೆ ಗುರಿಯಾಗಿದ್ದಾರೆ.೧

ಎರಡನೆಯದಾಗಿ, ನವೋದಯ ಮಾರ್ಗದಿಂದ ನವ್ಯ ಮಾರ್ಗಕ್ಕೆ ಬದಲಾಗುವದು ಬೆಳವಣಿಗೆಯ ಕುರುಹು ಎಂಬ ನಂಬಿಕೆಯೂ ಇಲ್ಲಿರುವ ಹಾಗೆ ಕಾಣುತ್ತದೆ. ಅಂತೆಯೇ, ನವೋದಯದಿಂದ ನವ್ಯವಾಗಿ ಬದಲಾವಣೆ ಹೊಂದಿದಾಗ ಅವೆರಡು ಮಾರ್ಗಗಳ ನಡು ವಿನ ಸೇತುವೆಯಾಗುವದು ಬೆಳವಣಿಗೆಯ ಹಾದಿಯಲ್ಲಿಯ ಒಂದು ಮಜಲಾಗುತ್ತದೆಯೇ ಹೊರತು, ಅದೇ ಶಾಶ್ವತ ನೆಲೆಯಾಗಲಾರದು ಎಂಬ ವಾದ ಇದರ ಹಿಂದಿದೆ. ವಿಮರ್ಶ ಕರು ತಮ್ಮ ಕಾವ್ಯದ ಮುಂದಿನ ಬೆಳವಣಿಗೆಯ ಹಂತಗಳನ್ನು ಗಮನಕ್ಕೆ ತೆಗೆದುಕೊಳ್ಳದೇ, ಇನ್ನೂ 'ಸೇತುವೆ'ಯ ಮೇಲೇ ನಿಂತಿದ್ದಾರೆಂದೂ, ತಮ್ಮ ಕಾವ್ಯ ಬದಲಾಗಲೆತ್ನಿಸುತ್ತಿದ್ದ ಹಂತದ ಗುಣಧರ್ಮಗಳನ್ನೇ ತಮ್ಮ ಒಟ್ಟು ಕಾವ್ಯಕ್ಕೆ ಅನ್ವಯಿಸಿ ಹೇಳುತ್ತಿದ್ದಾರೆಂದೂ ಕಣವಿಯವರ ಅಸಮಾಧಾನ.

ಆದರೆ ಇಲ್ಲಿ ಗಮನಿಸಬೇಕಾದ ಒಂದೆರಡು ವಿಷಯಗಳಿವೆ. ಮೊದಲು ನವೋದಯ ಮಾರ್ಗದಲ್ಲಿ ಬರೆಯುತ್ತಿದ್ದ ಅನೇಕ ಕವಿಗಳು ನವ್ಯವಾಗಿ ಬದಲಾದಾಗ ಅವರ ಕಾವ್ಯದ ವಸ್ತು, ತಂತ್ರ, ಬದುಕಿನ ಬಗೆಗಿನ ಧೋರಣೆಗಳು ಹೆಚ್ಚು—ಕಡಿಮೆ ಒಟ್ಟಾಗಿ ಬದಲಾದವು. ಕಣವಿ ಮತ್ತು ಇನ್ನು ಕೆಲವರ ಕಾವ್ಯದಲ್ಲಿ ಹಾಗಾಗಲಿಲ್ಲ. ಅವರಲ್ಲಿ ಬದಲಾವಣೆ ಅಂಶಿಕ ವಾಗಿ, ಹಂತಹಂತವಾಗಿ ನಡೆಯಿತು. ಅಷ್ಟೇ ಅಲ್ಲ, ಕೊನೆಯ ಹಂತದಲ್ಲೂ ಕೂಡ ಅದು ತನ್ನ ಹಿಂದಿನ ಹಂತದ ಕೆಲವೊಂದು ಅಂಶಗಳನ್ನು ಪೂರ್ತಿಯಾಗಿ ಬಿಟ್ಟುಕೊಡಲಿಲ್ಲ.

---

೧. ಉದಾಹರಣೆಗೆ ನೋಡಿ : ಜಿ. ಎಚ್. ನಾಯಕ : ''ಸಮಕಾಲೀನ'' (೧೯೭೩), ಪುಟ : ೯೧-೯೨.

ಹೀಗೆ ಹಿಂದಿನ ಹಂತದ (ಎಂದರೆ ನವೋದಯ ಕಾವ್ಯದ) ಕೆಲವೊಂದು ಅಂಶಗಳನ್ನು ಉಳಿಸಿಕೊಂಡು, ಮುಂದಿನ ಹಂತದ (ಎಂದರೆ ನವ್ಯಕಾವ್ಯದ) ಕೆಲವೊಂದು ಅಂಶಗಳನ್ನು ಹೊಸದಾಗಿ ಅಳವಡಿಸಿಕೊಂಡಿತು. ಇದೇ ಈ ಕವಿಗಳ ವೈಶಿಷ್ಟ್ಯವೂ ಆಗಿ ಉಳಿದುದರಿಂದ ವಿಮರ್ಶಕರ ಲಕ್ಷ್ಯ ಈ ಅಂಶದ ಮೇಲೆಯೇ ಹೆಚ್ಚಾಗಿ ಕೇಂದ್ರೀಕೃತವಾಗಿದೆ. ನಂತರ ಬಹುಮಟ್ಟಿಗೆ ನವ್ಯವೆನ್ನಬಹುದಾದ ಕೆಲವು ಕವಿತೆಗಳನ್ನು ಅವರು ಬರೆದಿದ್ದರೂ, ಒಟ್ಟಿನಲ್ಲಿ ಅವರ ಸಮನ್ವಯ ಮಾರ್ಗದ ಕವಿತೆಗಳಲ್ಲಿಯೇ ಅವರ ಸ್ವಂತಿಕೆ ಹೆಚ್ಚು ಎದ್ದು ಕಾಣುತ್ತದೆಂಬುದೇ ಇದಕ್ಕೆ ಮುಖ್ಯ ಕಾರಣವಾಗಿದೆ.

ಈ ಬಗೆಯ ಸಮನ್ವಯ ಮಾರ್ಗದ ಕಾವ್ಯ ಉಳಿದ ಕಾವ್ಯಮಾರ್ಗಗಳಿಗಿಂತ ತನ್ನಷ್ಟಕ್ಕೆ ತಾನೇ ಕಡಿಮೆ ದರ್ಜೆಯದು ಎಂದು ಭಾವಿಸಬೇಕಾದ ಕಾರಣವೇನೂ ಇಲ್ಲ. ಅಲ್ಲದೆ, 'ನವೋದಯ', 'ನವ್ಯ', 'ಸಮನ್ವಯ' ಇತ್ಯಾದಿ ಹಣೆಪಟ್ಟಿ ಹಚ್ಚಿಯೇ ಒಬ್ಬ ಕವಿಯನ್ನು ಗುರುತಿಸುವದು ಅನಿವಾರ್ಯವೇನೂ ಅಲ್ಲ. ಆದರೆ ಹೀಗೆ ಎರಡು ಬೇರೆ-ಬೇರೆ ಮಾರ್ಗಗಳ ಕಾವ್ಯದ ಕೆಲವು ಅಂಶಗಳನ್ನು ಅಳವಡಿಸಿಕೊಂಡಿದ್ದರಿಂದ ಕಣವಿಯವರ ಕಾವ್ಯದ ಮೇಲೆ ಆದ ಮೌಲಿಕ ಪರಿಣಾಮವೇನು ಎಂಬುದನ್ನು ಗಮನಿಸುವದು ಅವಶ್ಯವಾಗಿದೆ. ಈ ಲೇಖನದ ಮುಖ್ಯ ಉದ್ದೇಶವೂ ಇದೇ ಆಗಿದೆ. ಈ ದೃಷ್ಟಿಯಿಂದ ಕಣವಿಯವರು ತಮ್ಮ ಜೀವನದ ವಿವಿಧ ಹಂತಗಳಲ್ಲಿ ಮಕ್ಕಳ ಬಾಲಲೀಲೆಗಳನ್ನು ಕುರಿತು ಬರೆದ ನಾಲ್ಕು ಕವಿತೆಗಳನ್ನು ಇಲ್ಲಿ ಸ್ಥೂಲವಾಗಿ ಚರ್ಚಿಸಲಾಗಿದೆ. ೧. 'ಮಗುವಿಗೆ', ೨. 'ಇವನಿಂದಲೇ ನಮಗೆ ಬೈಗು-ಬೆಳಗು', ೩. 'ದೀಪಧಾರಿ' ಮತ್ತು ೪. 'ರಂಜನಾ' ಇವೇ ಆ ನಾಲ್ಕು ಕವಿತೆಗಳು. ಈ ಕವಿತೆಗಳು ರಚನೆಯಾಗಿರುವದು ಕಣವಿಯವರ ಕಾವ್ಯಜೀವನದ ಬೇರೆ-ಬೇರೆ ಹಂತಗಳಲ್ಲಿ ಎಂಬುದು ಗಮನಿಸಬೇಕಾದ ಸಂಗತಿ. ಮೊದಲನೆಯ ಪದ್ಯ ಅವರಿನ್ನೂ ನವೋದಯ ಕಾವ್ಯದ ಮುಖ್ಯ ಪ್ರವಾಹದಲ್ಲಿ ತೇಲುತ್ತಿದ್ದ ಕಾಲದ್ದು. ಎರಡನೆಯ ಮತ್ತು ಮೂರನೆಯ ಕವಿತೆಗಳು ಕಣವಿಯವರು ಸ್ವತಃ (ಬಹುಶಃ ಪ್ರಜ್ಞಾಪೂರ್ವಕವಾಗಿ) ನವೋದಯ-ನವ್ಯ ಮಾರ್ಗಗಳ ನಡುವಿನ ಸೇತುವೆಯಾಗಲು ಯೋಚಿಸುತ್ತಿದ್ದ ಕಾಲದವು. ಕೊನೆಯದು ಸ್ವಲ್ಪ ಇತ್ತೀಚೆಗಿನದು.[1]

೨

ಪ್ರತಿಯೊಂದು ಕಾವ್ಯಮಾರ್ಗವೂ ತನ್ನ ಹಿಂದಿನ ಕಾವ್ಯ ಮಾರ್ಗದಲ್ಲಿ ಚರ್ವಿತ—ಚರ್ವಣಕ್ಕೊಳಗಾಗಿ ಹೋಳಪನ್ನು ಕಳೆದುಕೊಂಡ ಅನುಭವಕ್ಷೇತ್ರಗಳನ್ನು ಕೈಬಿಟ್ಟು ಹೊಸ ಕ್ಷೇತ್ರಗಳ ಅನ್ವೇಷಣೆಗೆ ಆರಂಭಿಸುತ್ತದೆ. ತನ್ನ ಕಾಲದ ಸಂವೇದನೆಯ ಉತ್ಕಟ

---

೧. ಕಣವಿಯವರ ಇತರ ಕವಿತೆಗಳಲ್ಲಿಯ ಸಮನ್ವಯದ ಸ್ವರೂಪ ಕೆಲಮಟ್ಟಿಗೆ ಭಿನ್ನವಾಗಿದೆ ಎಂಬುದನ್ನು ಇಲ್ಲಿ ಗಮನಿಸಬೇಕು.

ಕ್ಷಣಗಳ ಅಭಿವ್ಯಕ್ತಿಗಾಗಿ ಸಮರ್ಥವಾದ ಹೊಸ ಅಭಿವ್ಯಕ್ತಿಮಾರ್ಗಗಳನ್ನು ರೂಪಿಸಿ ಕೊಳ್ಳುತ್ತದೆ. ಹೀಗೆ ಹೊಸದಾಗಿ ರೂಪಿಸಿಕೊಂಡ ಅಭಿವ್ಯಕ್ತಿಯ ಮಾರ್ಗಗಳು ಆ ಕಾಲದ ವಿಶಿಷ್ಟ ಸಂವೇದನೆಯ ಸಂಕೀರ್ಣ ಅಭಿವ್ಯಕ್ತಿಗೆ ಯೋಗ್ಯವಾಗುವಂತೆ ಸೂಕ್ಷ್ಮವಾಗಿ ಹಿಗ್ಗುವ ತಂತ್ರಗಳನ್ನು ಯೋಜಿಸಿಕೊಳ್ಳುತ್ತವೆ. ಹಾಗೆಯೇ ಮತ್ತೆ ಕೆಲವು ವಸ್ತುಗಳ ಅಭಿವ್ಯಕ್ತಿಗೆ ಒಗ್ಗದಂತೆ ತಮ್ಮವೇ ಆದ ಕೆಲವು ಸಂಕೋಚಗಳನ್ನೂ ಬೆಳಸಿಕೊಳ್ಳುತ್ತವೆ. ನವೋದಯ ಕಾವ್ಯದಲ್ಲಿ ವಿಶಿಷ್ಟವಾಗಿ ಕಾಣಿಸಿಕೊಂಡ ಜೀವನದ ಸುಂದರ ಕ್ಷಣಗಳ ಚಿತ್ರಗಳನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ನವೋದಯ ಕಾವ್ಯದ ಭಾಷೆ, ಲಯ, ಪ್ರಾಸಸಂಯೋಜನೆ, ಗೇಯತೆ ಇಂಥ ಲಲಿತ ಅಭಿವ್ಯಕ್ತಿಗೆ ಅತ್ಯಂತ ಯೋಗ್ಯವಾಗಿದ್ದವು. ಅಂತೆಯೇ ಮುಗ್ಧ ಪ್ರಣಯದ ಚಿತ್ರಗಳು, ಪ್ರಕೃತಿಯ ವರ್ಣನೆಗಳು, ಕನಸುಗಾರಿಕೆ, ದೇಶ ಪ್ರೇಮ, ಆದರ್ಶ ವಾದಿತ್ವ, ಭಾವನಾವಶತೆ ಇತ್ಯಾದಿಗಳು ಹೇರಳವಾಗಿ ಅಲ್ಲಿ ಕಾಣಿಸಿಕೊಂಡವು. ಮುಖ್ಯ ವಾಗಿ ಇದು ಒಂದು ರೀತಿಯ ತನ್ಮಯತೆಯ ಕಾವ್ಯವಾಗಿತ್ತು. ಆದರೆ ನವ್ಯಕಾವ್ಯ ಭಿನ್ನ ವಾದ ಅಭಿವ್ಯಕ್ತಿಮಾರ್ಗದ ಮೂಲಕ ಬದುಕಿನ ವಾಸ್ತವತೆಯ ನಿಷ್ಠುರ ಚಿತ್ರಗಳನ್ನು ಕೊಡತೊಡಗಿತು. ಜೀವನದ ವಿವಿಧ ಕ್ಷೇತ್ರಗಳಲ್ಲಿ ಕಾಣಿಸಿಕೊಳ್ಳತೊಡಗಿದ್ದ ಭ್ರಮನಿರಸನ, ವಿಘಟನೆ, ಭ್ರಷ್ಟಾಚಾರ, ಮೌಲ್ಯಗಳ ಬೆಲೆಯಿಳಿತ, ಹತಾಶೆ ಮುಂತಾದ ವಸ್ತುಗಳನ್ನು ಪ್ರಧಾನವಾಗಿ ಚಿತ್ರಿಸಿತು. ಇದಕ್ಕೆ ಯೋಗ್ಯವಾದ ವ್ಯಂಗ್ಯ, ವಿಡಂಬನೆ, ವಿದಗ್ಧತೆ ಮುಂತಾದ ತನ್ಮಯತೆಗೆ ವಿರುದ್ಧವಾದ ಎಚ್ಚರದ ಧೋರಣೆಗಳನ್ನು ಅಳವಡಿಸಿಕೊಂಡಿತು. ಪರಿಣಾಮವಾಗಿ, ನವೋದಯ ಕಾವ್ಯದಲ್ಲಿ ಕಾಣಿಸಿಕೊಂಡಿದ್ದ ಕೆಲವೊಂದು ವಸ್ತುಗಳು ಮತ್ತು ಧೋರಣೆಗಳು ನವ್ಯಕಾವ್ಯದಲ್ಲಿ ಬರಲು ಸಾಧ್ಯವಾಗಲಿಲ್ಲ. ಬಂದರೂ ನವೋದಯ ಕಾವ್ಯದಲ್ಲಿಯಂತೆ ಕವಿತೆಯ ಸ್ಥಾಯಿಯಾಗಿ ಬರದೆ, ಸಂಕೀರ್ಣ ಅನುಭವದ ಅಭಿವ್ಯಕ್ತಿಯ ಒಂದು ಸಣ್ಣ ಭಾಗವಾಗಿ ಮಾತ್ರ ಬಂದವು.

ಹೀಗೆ ನವೋದಯ ಕಾವ್ಯದಲ್ಲಿ ಮುಖ್ಯವಾಗಿದ್ದು, ನಂತರದ ನವ್ಯ ಕಾವ್ಯದಲ್ಲಿ ಮಹತ್ವ ಪಡೆಯದೇ ಹೋದ ವಸ್ತುಗಳಲ್ಲಿ ಮಗುವಿನ ಬಾಲಲೀಲೆಗಳ ವಸ್ತುವೂ ಒಂದು. ಇದು ಮೇಲುನೋಟಕ್ಕೇ ರೋಮ್ಯಾಂಟಿಕ್ ಎಂದು ಹೇಳಬಹುದಾದ ವಸ್ತು. ರೋಮ್ಯಾಂಟಿಕ್ ಕಾವ್ಯವನ್ನು ಕೆಲವರು 'ವಿಸ್ಮಯದ ಪುನರುತ್ಥಾನ' ಎಂದು ಕರೆದಿದ್ದಾರೆ. ರೋಮ್ಯಾಂಟಿಕ್ ಕವಿಗಳು ಮಗುವಿಗೆ ಸಹಜವಾದ ಬೆರಗಿನಿಂದ, ಕೌತುಕದಿಂದ ಜಗತ್ತನ್ನು ನೋಡಲೆತ್ನಿಸಿದರು. ಅಂತೆಯೇ ಮಗುವಿನ ಮುಗ್ಧ ಲೀಲೆಗಳು ಅವರಿಗೆ ಜಗತ್ತಿನ ವಿಸ್ಮ ಯದ ಸಂಕೇತಗಳಾಗಿ ಕಂಡವು. ಇದರಿಂದಾಗಿ ರೋಮ್ಯಾಂಟಿಕ್ ಕಾವ್ಯದಲ್ಲಿ ಮಗುವಿಗೆ ಮಹತ್ವದ ಸ್ಥಾನ ಸಿಕ್ಕಿದೆ. ನಮ್ಮ ನವೋದಯ ಕಾವ್ಯವನ್ನು ರೋಮ್ಯಾಂಟಿಕ್ ಕಾವ್ಯ ವೆಂದು ಕರೆಯುವುದಕ್ಕೆ ಕೆಲವರ ಆಕ್ಷೇಪಣೆ ಇದೆ. ಆದರೆ ರೋಮ್ಯಾಂಟಿಕ್ ಕಾವ್ಯದ ಕೆಲ ವೊಂದು ಗುಣಧರ್ಮಗಳು ನಮ್ಮ ನವೋದಯ ಕಾವ್ಯದಲ್ಲಿ ಇವೆಯೆಂಬುದು ಮಾತ್ರ ನಿರ್ವಿ ವಾದ. ಅವುಗಳಲ್ಲಿ ಜಗತ್ತನ್ನು ಮಗುವಿನ ಮುಗ್ಧ ವಿಸ್ಮಯದ ದೃಷ್ಟಿಯಿಂದ ನೋಡುವ ದೃಷ್ಟಿಕೋನ ಒಂದು. ಹಾಗೆಯೇ ಮಗುವನ್ನು ಸೃಷ್ಟಿಯ ವಿಸ್ಮಯದ ಸಂಕೇತವಾಗಿ,

ಇನ್ನೂ ಭೂಮಿಯ ಬದುಕಿನಿಂದ ಭ್ರಷ್ಟವಾಗದ ದೈವಿಕತೆಯು ಅಂಶವಾಗಿ ಕಾಣುವದು ಇದೇ ದೃಷ್ಟಿಕೋನದ ಇನ್ನೊಂದು ಮುಖವಾಗಿದೆ. ಮುಂದೆ ನವ್ಯಕಾವ್ಯದಲ್ಲಿ ಈ ವಸ್ತು ವಿಶೇಷ ಪ್ರಾಶಸ್ತ್ಯ ಪಡೆಯಲಿಲ್ಲ. ಅಂತೆಯೇ ಕಣವಿಯವರ ಕಾವ್ಯದ ವಿವಿಧ ಹಂತಗಳಲ್ಲಿ ಈ ವಸ್ತು ಮತ್ತೆ ಮತ್ತೆ ಕಾಣಿಸಿಕೊಂಡಿರುವದು ಕುತೂಹಲಕರವಾಗಿದೆ. ಈ ವಸ್ತು ಬೇರೆ-ಬೇರೆ ಕಾವ್ಯಮಾರ್ಗಗಳಲ್ಲಿ ಕಾಣಿಸಿಕೊಳ್ಳುವಾಗ ಅದರ ಮೂಲಸ್ವರೂಪ, ಅಭಿವ್ಯಕ್ತಿ ಹಾಗೂ ಅದನ್ನು ಕುರಿತ ಧೋರಣೆಗಳಲ್ಲಿ ಆಗಿರುವ ಬದಲಾವಣೆ ಅಥವಾ ಬೆಳವಣಿಗೆಗಳು ಯಾವವು ಎಂಬುದನ್ನು ಗುರುತಿಸುವದು ಕೂಡ ಅಷ್ಟೇ ಕುತೂಹಲಕರವಾಗಿದೆ.

೩

'ಮಗುವಿಗೆ' ಎಂಬ ಮೊದಲ ಕವಿತೆ ಪ್ರಕಟವಾಗಿರುವದು "ಮಧುಚಂದ್ರ" ಎಂಬ ಸಂಕಲನದಲ್ಲಿ. ಈ ಸಂಕಲನ ಪ್ರಕಟವಾಗುವ ಕಾಲಕ್ಕೆ ಕಣವಿಯವರ ಕಾವ್ಯಜೀವನದಲ್ಲಿ ಇನ್ನೂ ನವ್ಯತೆಯ ಸೆಳೆತ ಆರಂಭವಾಗಿರಲಿಲ್ಲ. ಅಂತೆಯೇ ಅದು ಪೂರ್ತಿಯಾಗಿ ನವೋದಯದ ವಾತಾವರಣದಲ್ಲಿ ಹುಟ್ಟಿದ ಕಾವ್ಯ ಎನ್ನಬಹುದು. 'ಮಗುವಿಗೆ' ಕವಿತೆಯಂತೂ ವಸ್ತು, ರೀತಿ ಮತ್ತು ಧೋರಣೆಗಳ ದೃಷ್ಟಿಯಿಂದ ರೋಮ್ಯಾಂಟಿಕ್ ಜಾತಿಗೆ ಸೇರುತ್ತದೆ. ಇಡಿಯ ನವೋದಯ ಕಾವ್ಯ ರೋಮ್ಯಾಂಟಿಕ್ ಆಗಿರಲಿ, ಬಿಡಲಿ; ಈ ಕವಿತೆಯಂತೂ ರೋಮ್ಯಾಂಟಿಕ್ ಎನ್ನುವದರಲ್ಲಿ ಸಂದೇಹವಿಲ್ಲ.

ಈ ಕವಿತೆಯಲ್ಲಿ ಹಸುಗೂಸಿನ ಮುಗ್ಧ ಚರ್ಯೆಗಳ ವರ್ಣನೆ ಇದೆ. ಈ ಚರ್ಯೆಗಳ ವರ್ಣನೆಯಲ್ಲಿ ಕವಿಯು ತೋರಿಸುವ ಧೋರಣೆಯಲ್ಲೂ ಅಂಥದೇ ರೀತಿಯ ಮುಗ್ಧತೆ ಕಾಣುತ್ತದೆ. ಕವಿತೆ ಆರಂಭವಾಗುವದು ಹೀಗೆ :

> ನಮ್ಮ ಬಾಳಬಳ್ಳಿಗೊಗೆದ ಹೊಚ್ಚಹೊಸತು ಮಲ್ಲಿಗೆ
> ನೆಲಮುಗಿಲಿನ ಒಲವು ಗೆಲವು ಪಡೆದು ಬಂದಿತಿಲ್ಲಿಗೆ,
> ಪರಿಮಳಿಸಿತು ತುಂಬಿ-ತೋಟ ನಿನ್ನ ಒಂದೆ ಸೊಲ್ಲಿಗೆ
> (ಪುಟ್ಟ ಎಸಳುಗೈಗಳನ್ನು ಮುಟ್ಟಲೇನು ಮೆಲ್ಲಗೆ ?)

ಇಲ್ಲಿಯ ವರ್ಣನೆಯಲ್ಲಿ ವಿಶೇಷವೆನ್ನಬಹುದಾದ ಹೊಸತನವೇನೂ ಕಾಣಿಸುವದಿಲ್ಲ. ಬಾಳ ಬಳ್ಳಿಯ ಕಲ್ಪನೆ ಹಳೆಯದು. ಈ ಬಳ್ಳಿಗೆ ಮಲ್ಲಿಗೆಯಾಗಿ ಮಗು ಹುಟ್ಟುವದರಲ್ಲೂ ವಿಶೇಷವೇನಿಲ್ಲ. ಮುಂದಿನ ಸಾಲಿನಲ್ಲಿ ಬರುವ ನೆಲಮುಗಿಲಿನ ಮಾತು ಕೂಡ ಅಷ್ಟೇ. ಮಗುವಿನ ಮುಗ್ಧತೆಗೆ ಈ ಲೋಕದಾಚೆಗಿನ ಅಲೌಕಿಕ ಸಂಬಂಧವನ್ನು ಜೋಡಿಸುವದು ರೋಮ್ಯಾಂಟಿಕ್ ಭಾವನೆಯಲ್ಲಿ ಸಾಮಾನ್ಯವಾದ ವಿಷಯ. ಮೂರನೆಯ ಸಾಲಿನಲ್ಲಿ ಬರುವ 'ಪರಿಮಳಿಸಿತು' ಎಂಬ ಮಾತು ಮೊದಲ ಸಾಲಿನಲ್ಲಿಯ 'ಮಲ್ಲಿಗೆ'ಯ ಸಾಹಚರ್ಯದಿಂದಾಗಿ ಅರ್ಥಪೂರ್ಣವಾಗಿದೆ ಎನಿಸಿದರೂ, ಸಾಲಿನ ಕೊನೆಯಲ್ಲಿಯ 'ನಿನ್ನ ಒಂದೆ ಸೊಲ್ಲಿಗೆ' ಎಂಬುದು ಮಲ್ಲಿಗೆಗೂ ಪರಿಮಳಕ್ಕೂ ಮೂಡಬಹುದಾಗಿದ್ದ ಸಂಬಂಧವನ್ನು

ಮುರಿಯುತ್ತದೆ. ಮಗುವಿನ ಸೊಲ್ಲಿನಿಂದ ತುಂಬಿ-ತೋಟ ಪರಿಮಳಿಸುವದು ಸ್ವಲ್ಪ ಅಸ್ಪಷ್ಟವಾಗಿದೆ. ಒಟ್ಟಿನಲ್ಲಿ ಮೂರೂ ಸಾಲುಗಳಲ್ಲಿಯ ಮೂರೂ ಚಿತ್ರಗಳು ಪ್ರತ್ಯೇಕವಾಗಿಯೇ ಉಳಿದುಕೊಳ್ಳುತ್ತವೆ. ಮಗುವಿನ ಬಗೆಗೆ ಮೊದಲ ಎರಡು ಸಾಲುಗಳಲ್ಲಿ ಉತ್ತಮ ಪುರುಷ (third person) ವನ್ನೂ, ಮೂರನೆಯ ಸಾಲಿನಲ್ಲಿ ಮಧ್ಯಮ ಪುರುಷ (second person)ವನ್ನೂ ಬಳಸುವದನ್ನು ನೋಡಬೇಕು. ಲಯ ಹಾಗೂ ಪ್ರಾಸಗಳ ಹೊರತಾಗಿ ಈ ಮೂರೂ ಸಾಲುಗಳನ್ನು ಜೋಡಿಸುವ ಸಾಧನಗಳು ಇಲ್ಲಿಲ್ಲ. ಒಂದು ರೀತಿಯಲ್ಲಿ ಲಯ-ಪ್ರಾಸಗಳು ಮಾತ್ರ ಅವುಗಳ ನಡುವೆ ಸಂಬಂಧವಿದೆಯೇನೋ ಎಂಬ ಭ್ರಮೆಯನ್ನು ಹುಟ್ಟಿಸುತ್ತವೆ. ನಾಲ್ಕನೆಯ ಸಾಲಂತೂ ಈ ಮೂರೂ ಚಿತ್ರಗಳಿಂದ ಇನ್ನೂ ಹೊರಗೆ ನಿಲ್ಲುವ ಅನಿರೀಕ್ಷಿತ ಭಾವವನ್ನು ಸೂಚಿಸುತ್ತದೆ. ಬಹುಶಃ ಕವಿಗೂ ಈ ಸಂಶಯ ಬಂದೇ ಅದನ್ನು ಕಂಸಗಳಲ್ಲಿ ಇರಿಸಿದಂತಿದೆ.

ಮುಂದಿನ ನುಡಿಗಳಲ್ಲಿ ಕವಿ ಮಗುವಿನ ಕೆಲವು ಸಹಜ ಚರ್ಯೆಗಳಿಗೆ ತನ್ನ ಕಲ್ಪನಾ ರಮ್ಯವಾದ ಚಿತ್ರಗಳನ್ನು ಆರೋಪಿಸುತ್ತ ಹೋಗುತ್ತಾನೆ. ನಿದ್ದೆಯಲ್ಲೂ ಮಗು ನಗುವದು ನಮ್ಮ ಬುದ್ಧಿಯಾಚೆಗಿನ ವ್ಯಾಪಾರವೆಂದು ಹೇಳುತ್ತಾನೆ. ಮಗುವಿನ ಕುಂಚಿಗೆ ನಮ್ಮ ಬಾಲ್ಯ-ಚಿತ್ರಲೀಲೆಗಳ ವಿಶೇಷ ಸಂಚಿಕೆ ಎಂದು ವರ್ಣಿಸುತ್ತಾನೆ. ಅವನ ಅಳುವಿನ ದನಿಯೇ ಮಧುರರಾಗವಾಗಿ ಸೆಳೆಯುವದು ಎನ್ನುತ್ತಾನೆ. ಇನ್ನೂ ಕೆಲವು ಚರ್ಯೆಗಳಲ್ಲಿ ಕವಿ ಕೆಲವು ಸುಂದರ ಹೋಲಿಕೆಗಳನ್ನು ಕಂಡಿದ್ದಾನೆ.

ಗಾಳಿಗಡಲಿನಲ್ಲಿ ಹುಟ್ಟು ಕಡೆಯುತಿರುವ ಕೈಗಳು
ಮಲಗಿದಲ್ಲೆ ಬೈಸಿಕಲ್ಲು ತುಳಿವ ಪುಟ್ಟ ಕಾಲ್ಗಳು

ಒಟ್ಟಿನಲ್ಲಿ ಇದೊಂದು ಭಾವನಾ ಪ್ರಧಾನವಾದ ಸಾಮಾನ್ಯ ಕವಿತೆ. ಸುಕುಮಾರವಾದ ಭಾವವೊಂದನ್ನು ನವುರಾಗಿ ಸೂಚಿಸುತ್ತದೆ. ಎಳೆಯ ಮಗುವಿನ ನೋಟದಿಂದ ಮುಗ್ಧನಾದ ಕವಿ ಅದರ ಒಂದೊಂದೇ ಚಟುವಟಿಕೆಗಳಿಗೆ ತನ್ನವೇ ಭಾವುಕ ಕಲ್ಪನೆಗಳನ್ನು ಜೋಡಿಸಿ ಸುಖಿಸುತ್ತಾನೆ. ಇಲ್ಲಿಯ ಚಿತ್ರಗಳು ಒಟ್ಟಿನಲ್ಲಿ ವಾತ್ಸಲ್ಯ-ಅಂತಃಕರಣದ ಭಾವವನ್ನು ಒಂದುಬಗೆಯ ತನ್ಮಯತೆಯನ್ನೂ ಸೂಚಿಸುತ್ತವೆಯಾದರೂ, ಸಮಗ್ರವಾಗಿ ಒಂದು ಅನುಭವವನ್ನು ಕೊಡುವದಿಲ್ಲ. ಚಿತ್ರಗಳು ಬಿಡಿಬಿಡಿಯಾಗಿಯೇ ಉಳಿದುಬಿಡುತ್ತವೆಯೇ ಹೊರತು, ಒಂದಕ್ಕೊಂದು ಸೇರಿ ಕವಿತೆಯನ್ನು ಬೆಳೆಸುವದಿಲ್ಲ, ಕವಿತೆಗೆ ಸಮಗ್ರತೆಯನ್ನು ತರುವದಿಲ್ಲ. ಅಲ್ಲದೆ ಬೈಸಿಕಲ್ಲಿನ ತುಳಿತ ಮುಂತಾದ ಒಂದೆರಡು ಹೋಲಿಕೆಗಳನ್ನು ಬಿಟ್ಟರೆ, ಚಿತ್ರಗಳು ಕೂಡ ಉಜ್ವಲ ಕಲ್ಪನಾಶಕ್ತಿಯನ್ನಾಗಲಿ, ಗಮನ ಸೆಳೆಯುವ ನಾವೀನ್ಯವನ್ನಾಗಲಿ ತೋರಿಸುವದಿಲ್ಲ. ಇಡಿಯ ಕವಿತೆ ಚಿಂತನದ ಆಸರೆಯೇ ಇಲ್ಲದೆ, ಕೇವಲ ಭಾವದ ಮೇಲೆಯೇ ಭಾರ ಹಾಕಿರುವದರಿಂದ ಅದರ ವಸ್ತುವೂ ದುರ್ಬಲವಾಗಿದೆ.

ಈ ಕವಿತೆ ಪ್ರಕಟವಾಗಿರುವದು ಕಣವಿಯವರ ನಾಲ್ಕನೆಯ ಕಾವ್ಯ ಕೃತಿಯಲ್ಲಿ ಎಂಬುದು ಗಮನಾರ್ಹ ಸಂಗತಿ. ಈ ಹೊತ್ತಿಗೂ ಕೂಡ ಕಣವಿಯವರ ಕಾವ್ಯ ಯಾವ

ಸ್ಥಿತಿಯಲ್ಲಿತ್ತು ಎಂಬುದಕ್ಕೆ ಇದೊಂದು ನಿದರ್ಶನವಾಗಿದೆ. ಒಂದು ರೀತಿಯಿಂದ ಇದು ಆ ಕಾಲದ ತರುಣ ಕವಿಗಳು (ನವೋದಯ) ಕಾವ್ಯವನ್ನು ಅರ್ಥಮಾಡಿಕೊಂಡಿದ್ದ ರೀತಿಯನ್ನು ಸೂಚಿಸುತ್ತದೆ. ಇಲ್ಲಿ ಕವಿ ಕಣವಿಯವರು ಕೇವಲ ಕೆಲವು ಬಿಡಿ ಸಾಲುಗಳ ಚೆಲುವಿನಲ್ಲಿ ಆಸಕ್ತರಾಗಿದ್ದಾರೆಯೇ ಹೊರತು, ಸಮಗ್ರ ಕವಿತೆಯ ಶಿಲ್ಪದಲ್ಲಿ ಅಲ್ಲ ಎನಿಸುತ್ತದೆ. ಈ ದೃಷ್ಟಿಯಿಂದ 'ಮಗುವಿಗೆ' ಕವಿತೆಯನ್ನು ಬೇಂದ್ರೆಯವರ ಕರುಳಿನ ವಚನಗಳೊಂದಿಗೆ ಹೋಲಿಸಿ ನೋಡಿದರೆ ಅಂತರ ಸ್ಪಷ್ಟವಾಗುತ್ತದೆ.

೪

'ಇವನಿಂದಲೇ ನಮಗೆ ಬೈಗು-ಬೆಳಗು' ಮತ್ತು 'ದೀಪಧಾರಿ' ಈ ಎರಡೂ ಕವಿತೆಗಳು "ಮಧುಚಂದ್ರ"ದ ನಂತರದ "ದೀಪಧಾರಿ" ಸಂಕಲನದಲ್ಲಿ ಪ್ರಕಟವಾಗಿವೆ. ಈ ಕಾಲಕ್ಕೇ ಕಣವಿಯವರು ನವ್ಯಕಾವ್ಯದ ಪ್ರಭಾವಕ್ಕೆ ಒಳಗಾದದ್ದು.

ಮೂಲದಲ್ಲಿ 'ಮಗುವಿಗೆ' ಮತ್ತು ಇಲ್ಲಿಯ ಎರಡು ಕವನಗಳ ವಸ್ತುವಿನಲ್ಲಿ ಅಂಥ ವಿಶೇಷ ಅಂತರವೇನೂ ಇಲ್ಲ. ಮೂರೂ ಕವನಗಳಲ್ಲಿ ಮಗುವಿನ ನಿದ್ದೆ, ಹಟಮಾರಿತನ, ಅಳು, ನಗು, ಹಾಡು, ದೇವಲೋಕದ ಸ್ಪರ್ಶ ಇತ್ಯಾದಿಗಳು ಮರುಕಳಿಸುತ್ತವೆ. ಮೂರರಲ್ಲೂಪ್ರೀತಿ-ವಾತ್ಸಲ್ಯಗಳೇ ಸ್ಥಾಯಿಯಾಗಿವೆ. ಇಲ್ಲೂ ಭಾವನೆಯದೇ ಮೇಲುಗೈಯಾಗಿದೆ. ಇಲ್ಲಿಯೂ ಚಿತ್ರಗಳು ಬಿಡಿಬಿಡಿಯಾಗಿಯೇ ಬರುತ್ತವೆ. ಇಷ್ಟೇ, ಈಗ ಮಗು ಬೆಳೆದು. ಸ್ವಲ್ಪ ದೊಡ್ಡದಾಗಿರುವದರಿಂದ ಅದರ ಚರ್ಯೆಗಳು ಬದಲಾಗಿವೆ ಆದರೂ 'ಮಗುವಿಗೆ' ಮತ್ತು "ದೀಪಧಾರಿ"ಯ ಕವಿತೆಗಳಲ್ಲಿ ಕೆಲವು ಮಹತ್ವದ ವ್ಯತ್ಯಾಸಗಳಿವೆ. 'ಇವನಿಂದಲೇ ನಮಗೆ ಬೈಗು-ಬೆಳಗು' ಕವಿತೆಯನ್ನು ಸ್ವಲ್ಪ ವಿವರವಾಗಿ ಪರಿಶೀಲಿಸುವ ಮೂಲಕ ಈ ವ್ಯತ್ಯಾಸಗಳನ್ನು ಮನಗಾಣಬಹುದಾಗಿದೆ. ಕವಿತೆಯ ಮೊದಲಭಾಗದ ಕೆಲವು ಸಾಲು ಹೀಗಿವೆ:

ಮುಳ್ಳುಜಾಲಿಯ ಹೂವ ಸೌಗಂಧದಲಿ ತೇಲೆ ದುಂಬಿಗನಸು
ಜೋಂಪಿಸುತ್ತಿದೆ ಮಗುವಿನೆಳೆಯ ಮನಸು.
'ಕಂದ ಜೋ ಜೋ...ಬೆಳಕಿನಂದ ಜೋ ಜೋ'-
ಹೊಂಗೆ, ಹುಣಿಸೆಯು ಬೊಗಸೆ ಬೊಗಸೆ ಸುರಿದಿವೆ ಹೂವು
ಹಣ್ಣು ತೂಗಿದೆ ಕೊಂಬೆ ಕೊಂಬೆಯಲಿ ಮಾವು ;
ಧೂಳಿ ನುಣ್ಣಗೆ ನೆಲಕೆ ಜಾರುತಿದೆ, ಗಾಳಿಯಲಿ ಆರುತಿಹುದದರ ಕಾವು.
ಮನೆಯ ಜಗುಲಿಯನೇರಿ ಬೆಳಕು ತೂಗಾಡುತಿದೆ
ಒಳದನಿಯು ಹಾಡುತಿಹುದು:
'ಕಂದ ಜೋ ಜೋ, ಪೂರ್ಣಚಂದ್ರ ಜೋ ಜೋ'

'ಮಗುವಿಗೆ' ಕವಿತೆಯಲ್ಲಿಯ ಚಿತ್ರಗಳೆಲ್ಲ ಬಿಡಿಬಿಡಿಯಾಗಿ ಕಾಣುವದರ ಜೊತೆಗ ಬಹಳ ಸರಳವಾಗಿವೆ; ಅವುಗಳ ಉದ್ದೇಶವೂ ಸೀಮಿತವಾದುದು. ಆರಂಭದಲ್ಲಿಯೇ ಸೂಚಿತವಾಗುವ ಕೇಂದ್ರಭಾವವನ್ನು ಅವು ಮತ್ತೆ ಸೂಚಿಸುತ್ತ ಹೋಗುತ್ತವೆಯೇ ಹೊರತು, ಆ ಭಾವದ ಹೊಸ ಮಗ್ಗಲುಗಳನ್ನು ಹೊಳೆಯಿಸುವದಿಲ್ಲ. ಆದರೆ ಮೇಲಿನ

ಸಾಲುಗಳಲ್ಲಿಯ ವರ್ಣನೆ ಹೆಚ್ಚು ಕಾರ್ಯಸಾಧಕವಾಗಿ ಕೆಲಸಮಾಡುತ್ತದೆ. ಇಲ್ಲಿ ಇಡಿಯು ವರ್ಣನೆ ಸೇರಿ ಒಂದುಬಗೆಯ ಸಮ್ಮೋಹಕವಾದ, ಮತ್ತು ಬರಿಸುವ ವಾತಾವರಣವನ್ನು ನಿರ್ಮಿಸುತ್ತದೆ. ಇಲ್ಲಿಯ ಲಯದಲ್ಲಿರುವ ನಾದಮಯತೆ ಮತ್ತು ಚಿತ್ರಗಳಲ್ಲಿರುವ ಅಸ್ಪಷ್ಟತೆಗಳು 'ಕಂದ ಜೋ ಜೋ' ಇತ್ಯಾದಿ ಸಾಲುಗಳೊಂದಿಗೆ ಸೇರಿಕೊಂಡು ಜೋಗುಳದ ಪರಿಣಾಮವನ್ನು ಸೃಷ್ಟಿಸುತ್ತವೆ. ಈ ವಾತಾವರಣ ಮುಂದೆ ಬರುವ ಮಗುವಿನ ನಿದ್ದೆಯ ಆವಾಹನೆಗೆ ತಕ್ಕದಾದ ಹಿನ್ನೆಲೆಯನ್ನು ಒದಗಿಸುತ್ತದೆ. ಹೀಗೆ ಇಲ್ಲಿಯ ಲಯ ಮತ್ತು ಚಿತ್ರಗಳು 'ಮಗುವಿಗೆ' ಕವಿತೆಯಲ್ಲಿಗಿಂತ ಹೆಚ್ಚು ಸಂಕೀರ್ಣವಾಗಿ ಕೆಲಸಮಾಡುವದನ್ನು ಗಮನಿಸಬಹುದು.

ಎರಡನೆಯ ಭಾಗದಲ್ಲಿ ಮಗುವಿನ ಆಟ-ಪಾಠ, ತುಂಟಾಟಗಳ ಚಿತ್ರಗಳಿವೆ. ಇಲ್ಲಿಯ ಮಗು ಆಗಲೇ ಅಂಬೆಗಾಲಿಡತೊಡಗಿದ್ದಾನೆ :

ಹಗಲು ಕೋಳಿಯ ನಿದ್ದೆ–
ಬಯಲಾಟದಲಿ ಸೋಗು ಕುಣಿದದ್ದೂ ಕುಣಿದದ್ದೆ
ತಕ್ಕ ಥೈ ತಕ್ಕ ಥೈ.
ಕಾಳಿಂಗನ ಹೆಡೆಯ ಹತ್ತಿ ತುಳಿದ ಬಾಲಕೃಷ್ಣ
ಧಿತ್ತ್ಯ ಥೈ !
ಆಚೆ ಬೀದಿಗೂ ಗಸ್ತಿಹೊಡೆದು ಬರುವದು ಕೇಕೆ
ಕೊಟ್ಟು ಎಚ್ಚರಿಕೆ.
ಬಿಳಿಜೋಳ ಹೊಲದಲ್ಲಿ ಕವಣೆಗಲ್ಲನು ಬೀರಿ ಹಕ್ಕಿ ಹಾರಿಸುತಿಹನು
ಅತ್ತಿತ್ತ ಸುಳಿದೀರಿ ಮತ್ತೆ ಜೋಕೆ !
ತಾಸಿಗಿಪ್ಪತ್ತು ಮೈಲಿನ ವೇಗ ಮೀರುವುದು
ಮನೆತುಂಬ ಓಡುವುದು ಅಂಬೆಗಾಲಿನ ಕಾರು
  ನೋಡ ನೋಡುತ ಧುಮುಕಿ ಹೊಡೆದು ಮೇಲೇಳುವದು
  ಬ್ರೇಕು ಹಾಕಲು ವೇಗ ಮತ್ತಿಷ್ಟು ಜೋರು

ಈ ಭಾಗ ಮೊದಲನೆಯ ಭಾಗಕ್ಕಿಂತ ಅನೇಕ ದೃಷ್ಟಿಯಿಂದ ಭಿನ್ನವಾಗಿದೆ. ಅದರಲ್ಲೂ ಲಯ ಮತ್ತು ಧಾಟಿಗಳಲ್ಲಿಯ ಬದಲಾವಣೆ ಒಡೆದು ಕಾಣುವಂತಿದೆ. ಮೊದಲ ಭಾಗದಲ್ಲಿ ಲಯ ನಾದಮಯವಾಗಿದ್ದು ಜೋಗುಳದ ಜೀಕನ್ನು ನೆನಪಿಗೆ ತರುತ್ತದೆ ; ಇಲ್ಲಿಯ ಲಯ ಉತ್ಸಾಹದ್ದು. ಅಲ್ಲಿಯ ಧಾಟಿ ತನ್ಮಯತೆಯದು ; ಇಲ್ಲಿಯದು ವಾತ್ಸಲ್ಯಪೂರ್ವಕವಾದ ವ್ಯಂಗ್ಯ ಬೆರೆತ ಉತ್ಪ್ರೇಕ್ಷೆಯದು. ರೀತಿಯಲ್ಲಷ್ಟೇ ಅಲ್ಲ, ಕವಿತೆಯ ವಸ್ತು ಮತ್ತು ಶಿಲ್ಪಗಳಲ್ಲೂ ಈ ಅಂತರ ಸ್ಪಷ್ಟವಾಗುತ್ತದೆ. ಉದಾಹರಣೆಗೆ, ಈ ಭಾಗದ ಮೊದಲ ಸಾಲನ್ನೇ ನೋಡಬಹದು. ಇಲ್ಲಿ "ಹಗಲು ಕೋಳಿಯ ನಿದ್ದೆ" ಎಂಬುದು ಮೊದಲ ಭಾಗದ ನಿದ್ದೆಯ ಆವಾಹನೆಯನ್ನು ನೆನಪಿಸುತ್ತದೆ. ಹಾಗೆಯೇ ಹಗಲಿನಲ್ಲಿ ಕೇವಲ ಹುಸಿನಿದ್ದೆ ಮಾಡಿ ನಿರಂತರವಾಗಿ ಚಟುವಟಿಕೆಯಲ್ಲಿ ತೊಡಗುವ ಮಗುವಿನ ಅದಮ್ಯ ಚೈತನ್ಯಶಕ್ತಿಯ ಪ್ರತಿಮೆಗಳಿಗೆ ಹಾದಿಮಾಡಿಕೊಡುತ್ತದೆ. ಮುಂದೆ ಬರುವ ಚಿತ್ರಗಳು ಮಗುವಿನ ಹಲವು ಬಗೆಯ ಚಟು

ವಟಿಕೆಗಳನ್ನು ಸೂಚಿಸುತ್ತವೆ. 'ಮಗುವಿಗೆ' ಕವನದಲ್ಲಿಯೂ ಹೋಲಿಕೆಗಳು ಒಂದು ರೀತಿಯಲ್ಲಿ ಕವಿಯೇ ಆರೋಪಿಸಿದಂತೆ ಭಾಸವಾಗುತ್ತವೆ. ಆದರೆ ಇಲ್ಲಿಯ ಚಿತ್ರಗಳ ರೀತಿಯೇ ಬೇರೆಯಾಗಿದೆ. ಇಲ್ಲಿಯೂ ಒಂದರ ಮೇಲೊಂದು ಆಕರ್ಷಕವಾದ ಬಿಡಿ ಬಿಡಿ ಚಿತ್ರಗಳು ಮಾಲೆಮಾಲೆಯಾಗಿ ಬರುತ್ತವೆ. ಇಂಥ ಚೆಲುವಿನ ಬಿಡಿ ಸಾಲುಗಳು ಕಣವಿಯವರ ಕಾವ್ಯದಲ್ಲಿ ಸಮೃದ್ಧವಾಗಿ ಸಿಗುತ್ತವೆ. ಆದರೆ ಈ ಚಿತ್ರಗಳು ತಮ್ಮಷ್ಟಕ್ಕೇ ಉಜ್ವಲವಾಗಿ ಕಣ್ಣು ಸೆಳೆಯುವುದರ ಜೊತೆಗೆ ಒಟ್ಟಾಗಿ ಮಗುವಿನ ಅದಮ್ಯ ಉತ್ಸಾಹ, ದಣಿವಿಲ್ಲದ ಚಟುವಟಿಕೆಗಳನ್ನು ಕಣ್ಣಿಗೆ ಕಟ್ಟುತ್ತವೆ. ಇದು ಮೊದಲ ಭಾಗದ ಕೊನೆಗೆ ಬರುವ

ಆದಿ ದಣಿದಿದೆ ಮಗುವು
(ಅದಕೆ ದಣಿವೇ ಇಲ್ಲ)

ಎಂಬ ಸಾಲುಗಳಲ್ಲಿಯ ವಿರೋಧಾಭಾಸಕ್ಕೆ ಒದಗಿಸಿರುವ ಮೂರ್ತ ಪುರಾವೆ. ಹೀಗೆ ಮೊದಲ ಭಾಗದಿಂದ ಈ ಭಾಗಕ್ಕೆ ಸಾವಯವ ಸಂಬಂಧದ ಬೆಳವಣಿಗೆ ಕಾಣುತ್ತದೆ.

ಮೂರನೆಯ ಭಾಗ ಎರಡನೆಯ ಭಾಗದ ವಿಸ್ತರಣ ಎನ್ನಬಹುದು. ಎರಡನೆಯ ಭಾಗದಲ್ಲಿ ಮಗುವಿನ ಕುಣಿತ, ಕೇಕೆ, ಓಡಾಟಗಳನ್ನು ವರ್ಣಿಸಿದ ನಂತರ ಈ ಭಾಗದಲ್ಲಿ ಮಗುವಿನ ತುಂಟಾಟದ ಚಿತ್ರಗಳನ್ನು ಕೊಡಲಾಗಿದೆ.

ಮೈಮರೆತು ಕುಳಿತಕಡೆಗಿವನ ಮಿಂಚಿನದಾಳಿ
ಹೊಂಚುಗಾರ !
ಎಲಿಂದಲೋ ಬಂದು ಸರ್ರನೆರಗಿ ಬಡಿಯುವ ಗಿಡುಗ
ಆಕ್ರಮಣಶೀಲ !

ಹೀಗೆ ಆರಂಭವಾಗುವ ಈ ಭಾಗದಲ್ಲಿ ಬರುವ ಪ್ರತಿಮೆಗಳೆಲ್ಲ ಯುದ್ಧಶಾಸ್ತ್ರಕ್ಕೆ ಸಂಬಂಧಿಸಿದುವು. "ದಾಳಿ", "ಆಕ್ರಮಣ", "ಕೋಲಾಹಲ", "ಚಂಡಪ್ರಚಂಡ" ಮುಂತಾದ ಮಾತುಗಳು ಉದ್ದಕ್ಕೂ ಯುದ್ಧದ ವಾತಾವರಣವನ್ನು ಸೂಚಿಸುತ್ತವೆ. ಆದರೆ ಉತ್ಪ್ರೇಕ್ಷೆಯ ವ್ಯಂಗ್ಯದಿಂದಾಗಿ ಅದು ಅಣಕುಯುದ್ಧವಾಗುತ್ತದೆ. ಕೊನೆಗೆ ಬರುವ—

ನಜರುಕಾಣಿಕೆ ಕೊಟ್ಟು ಮುಜುರೆ ಹೊಡೆದರು ಕೂಡ
ಸಂಧಾನ ವಿಫಲ ವಿಫಲ,
ತುಂಟನಗೆ ಸಮ್ಮೋಹನಾಸ್ತ್ರ ಬೀರುವ ಬಂಟ
ನಿತ್ಯ ಜಯಶೀಲ

ಎಂಬ ಸಾಲುಗಳು ಈ ಯುದ್ಧದಲ್ಲಿ ಮಗುವೇ ಕೊನೆಗೆ ತನ್ನ ಸಾರ್ವಭೌಮತ್ವವನ್ನು ಸ್ಥಾಪಿಸಿ ಉಳಿದವರನ್ನೆಲ್ಲ ಶರಣಾಗತಗೊಳಿಸಿಕೊಳ್ಳುವುದನ್ನು ತೋರಿಸುತ್ತವೆ.

ಈ ಚಿತ್ರಗಳೇನೋ ಸುಂದರವಾಗಿಯೇ ಇವೆ. ತಮ್ಮೊಳಗೇ ಯುದ್ಧಪ್ರತಿಮೆಗಳ ಚೌಕಟ್ಟಿನಿಂದಾಗಿ ಆಂತರಿಕ ಸಂಬಂಧವನ್ನೂ ಹೊಂದಿವೆ. ಆದರೆ ಕವಿತೆಯ ಒಟ್ಟು ಸಂದರ್ಭದಲ್ಲಿ ಇವುಗಳ ಕೆಲಸ, ಔಚಿತ್ಯ ಅಷ್ಟೇನು ವಿಶೇಷವಾದುದಲ್ಲ. ಇವೂ ಕೂಡ ಎರಡ

ನೆಯ ಭಾಗದಲ್ಲಿಯೂ ಮಗುವಿನ ದಣಿವಿಲ್ಲದ ಆಟವನ್ನೇ ಮತ್ತೊಮ್ಮೆ ವಿಸ್ತರಿಸಿ ಹೇಳು ತ್ತವೆ.

ಕೊನೆಯ ಭಾಗ ಆಡಿ ದಣಿದು ಮಗು ನಿದ್ದೆಹೋಗುವದನ್ನು ವರ್ಣಿಸುತ್ತದೆ. ಅಲ್ಲೂ ಕೂಡ ಒಂದು ಬಗೆಯ ತುಂಟತನದ ಚೆಲುವು ಕಾಣುತ್ತದೆ:

ಎರೆದು ಧೂಪವ ಹಾಕಿ ಕೊಚ್ಚಿ ಬೆಚ್ಚಗೆ ತುಂಬುತೊಟ್ಟಿಲನು ತೂಗಿ
ಮೆಲ್ಲನುಲಿಯುಲಿ ಇವಳು ಜೋಗುಳವ ಹಾಡುತಿರೆ
ಹೊಮ್ಮಿ ಬರುವದು ಇವಗು ಕಾವ್ಯಸ್ಫೂರ್ತಿ !
ಯಾವ ದೈವಿಕ ಭಾಷೆ ಯಾವದೋ ಧಾಟಿ—
ಹಾಡಿಯೇ ಹಾಡುವನು ಕಂಠಪೂರ್ತಿ.
ತೂಗಿದವರಿಗೆ ಬಂತು ತೂಕಡಿಕೆ ಎಂದಾಗ
ಹಾಡು ಮುಗಿವುದು ಕನಸಿನಲ್ಲಿ ಕರಗಿ.

ಇಲ್ಲಿಯು 'ಜೋಗುಳ'', ಕವಿತೆಯ ಮೊದಲ ಭಾಗದಲ್ಲಿಯ ಜೋಗುಳವನ್ನು ಸಹಜವಾಗಿ ನೆನಪಿಸುತ್ತದೆ. ಎರೆದು, ಧೂಪಹಾಕಿ, ಹೊಚ್ಚಿ ಬೆಚ್ಚಗೆ, ತುಂಬುದೊಟ್ಟಿಲನ್ನು ತೂಗುವದು ಮತ್ತು ಜೋಗುಳ ಹಾಡುವದು ನಿದ್ದೆಯ ಆವಾಹನೆಯನ್ನು ಮುಂದುವರಿಸುತ್ತವೆ. ಹಾಡುವವರ ಜೊತೆ ಮಗು ತಾನೂ ಹಾಡುತ್ತ ಹಾಡು ಕನಸಿನಲ್ಲಿ ಕರಗಿ ಮುಗಿಯುವದು ಅದರ ಮುಂದಿನ ಬೆಳವಣಿಗೆ. ಇಲ್ಲಿ ಕವಿತೆ ಮೊದಲ ಭಾಗದ ನಾದಮಯತೆಗೆ, ಸಮ್ಮೋಹಕ ವಾತಾವರಣಕ್ಕೆ ಮತ್ತೆ ಮರಳುತ್ತದೆ. ಅನಂತರ ಮಗುವಿನ ನಿದ್ದೆ :

ಏರಿ ಗಗನಕೆ ಹಾರಿ ತೂರಿ ಬಿನ್ನಾಣದಲಿ
ಬಗೆ ಬಗೆಯ ಲಾಗ ಹಾಕಿ,
ಗೂಡಿಗಿಳಿವುದು ಪಾರಿವಾಳ ನೆಟ್ಟಗೆ ಬಂದು
ಬಾನಿನಲಿ ಸಂಜೆಯಾಗಿ,

ಇಲ್ಲಿ ಕವಿತೆಯ ಎರಡು ಮತ್ತು ಮೂರನೆಯ ಭಾಗಗಳಲ್ಲಿಯ ಮಗುವಿನ ಚಟುವಟಿಕೆ ಗಳನ್ನು ಹಕ್ಕಿಯ ವೈವಿಧ್ಯಮಯವಾದ ಹಾರಾಟದಲ್ಲಿ ಒಳಗೊಳ್ಳುತ್ತ, ಹಕ್ಕಿ ಸಂಜೆಗೆ ಮರಳಿ ಗೂಡಿಗಿಳಿಯುವುದರಲ್ಲಿ ಮಗು ಹಗಲೆಲ್ಲ ಹಾರಾಡಿ ದಣಿದು ಸಂಜೆಗೆ ನಿದ್ದೆಹೋಗು ವದನ್ನು ಬಹಳ ಸುಂದರವಾಗಿ ಸೂಚಿಸಲಾಗಿದೆ. ಆದರೆ ಕವಿಗೆ ಯಾಕೋ ಇಷ್ಟೇ ಸಾಕೆನಿ ಸುವುದಿಲ್ಲ. ದಣಿದು ಮಲಗಿದ ಮಗುವಿನ ನಿದ್ದೆಯ ಗಾಢಸ್ವರೂಪವನ್ನು ಸೂಚಿಸಲು. ಇನ್ನಷ್ಟು ಸ್ಪಷ್ಟವಾದ ಹೋಲಿಕೆಯೊಂದನ್ನು ಕೊಟ್ಟು ಅದನ್ನು ವಿವರಿಸುತ್ತಾನೆ:

ದಡಸೂಸಿ ಹರಿವ ನದಿ ಮಡುವಾಗಿ ನಿಂತಂತೆ
ಇರುಳಿನಲಿ ಇವನ ನಿದ್ದೆ—

ಇಲ್ಲಿಯ ಹೋಲಿಕೆಯು ಚೆಲುವಿನ ಬಗೆಗೆ ಭಿನ್ನಾಭಿಪ್ರಾಯವಿಲ್ಲ. ಆದರೆ ಈ ಹೋಲಿಕೆ ಒಂದು ರೀತಿಯಲ್ಲಿ ಹಿಂದಿನ ಸಾಲುಗಳ ಹಕ್ಕಿಯ ಚಿತ್ರದಲ್ಲಿಯ ಧ್ವನಿಪೂರ್ಣತೆಯನ್ನು ವಾಚ್ಯವಾಗಿಸುತ್ತದೆ. ಹಕ್ಕಿಯ ಚಿತ್ರದ ಉದ್ದೇಶ ಮೊದಲು ಅರ್ಥವಾಗದಿದ್ದವರೂ

ಕೂಡ ಇಲ್ಲಿಯ ಹೋಲಿಕೆಯ ಬೆಳಕಿನಲ್ಲಿ ಅದನ್ನು ಸುಲಭವಾಗಿ ಅರ್ಥಮಾಡಿಕೊಳ್ಳ ಬಹುದು. ಇದು ಕವಿ ಓದುಗರಿಗೆ ತೋರಿಸುವ ರಿಯಾಯಿತಿಯಾಗುತ್ತದೆ.

ಇಲ್ಲಿಗೆ ಕವಿತೆಯು ಶಿಲ್ಪದ ದೃಷ್ಟಿಯಿಂದ ಒಂದು ಪೂರ್ಣಸುತ್ತು ಮುಗಿದಂತಾಗು ತ್ತದೆ. ನಿದ್ದೆಯ ಆವಾಹನೆಯಿಂದ ಆರಂಭವಾಗುವ ಕವಿತೆ, ಫ್ಲ್ಯಾಷ್ ಬ್ಯಾಕಿನಲ್ಲಿ ಮಗು ಆಡಿ ದಣಿದುದನ್ನು ವರ್ಣಿಸಿ, ಕೊನೆಗೆ ಮಗು ನಿದ್ದೆ ಹೋಗುವದರೊಂದಿಗೆ ಮುಗಿಯುತ್ತದೆ. ಇದು ಕವಿತೆಯ ಸ್ಥೂಲ ಚೌಕಟ್ಟು, ಆದರೆ ಕವಿತೆ ಇಲ್ಲಿಗೆ ಮುಗಿಯುವದಿಲ್ಲ. ಅದಕ್ಕೊಂದು ತಾತ್ವಿಕ ಅರ್ಥವನ್ನು ಕೊಡದೆ ಕವಿತೆಗೆ ಸಮಗ್ರತೆ ಬಂದಂತೆ ಕವಿಗೆ ಅನಿಸುವದಿಲ್ಲ. ಅಂತೆಯೇ

ನಡುವೆ ಏನೋ ಕನಸು, ತುಟಿಯಂಚಿನಲಿ ಮಿಂಚು—
ಮೂಡಿ ಮರೆಯಾಗುವದು ದಿವದ ಬೆಳಕು;

ಎಂದು ಕವಿತೆ ಮುಂದುವರಿಯುತ್ತದೆ. ಇದನ್ನು ಕವಿತೆಯ ಚೌಕಟ್ಟು ತಡೆದುಕೊಳ್ಳುತ್ತದೆ. ಯಾಕೆಂದರೆ ಕನಸು ಕೂಡ ನಿದ್ದೆಯ ಮುಂದುವರಿದ ಭಾಗವೇ ಅಲ್ಲವೆ ? ಆದರೆ—

ಎಲ್ಲೊ ಒಲವಿನ ಸೂತ್ರ ಹಿಡಿದು ಆಡಿಸುತಿರಲು
ಆನಂದದುಯ್ಯಾಲೆ ಒಳಗು-ಹೊರಗು ;
ಸೂರ್ಯಚಂದ್ರರು ದಿನವು ಮೂಡಿ ಬೆಳಕಾಡಿದರು
ಇವನಿಂದಲೇ ನಮಗೆ ಬೈಗು-ಬೆಳಗು.

ಎಂದು ಕವಿತೆ ಮುಕ್ತಾಯವಾಗುವ ರೀತಿ ಮಾತ್ರ ಅಸಮಾಧಾನವನ್ನುಂಟುಮಾಡುತ್ತದೆ. ಹಾಗೆ ನೋಡಿದರೆ, ರಚನೆಯ ದೃಷ್ಟಿಯಿಂದ ಈ ಸಾಲುಗಳು ಕವಿತೆಯ ಒಟ್ಟು ಶಿಲ್ಪಕ್ಕೆ ತೀರಾ ಅಸಂಗತವೆಂದೇನೂ ಅನಿಸುವುದಿಲ್ಲ. ಮೊದಲ ಭಾಗದಲ್ಲಿಯ ಜೋಗುಳದ ವಾತಾ ವರಣ ಹಾಗೂ ನಾಲ್ಕನೆಯ ಭಾಗದ ತೊಟ್ಟಿಲ ತೂಗುವದರೊಂದಿಗಿನ ಜೋಗುಳದ ಹಾಡಿಗೂ ಇಲ್ಲಿಯ 'ಆನಂದದುಯ್ಯಾಲೆ'ಗೂ ಸಂಬಂಧವಿದೆ. ಹಾಗೆಯೇ ಎರಡು ಮತ್ತು ಮೂರನೆಯ ಭಾಗಗಳ ಚಿತ್ರಗಳಿಗೂ ಇಲ್ಲಿಯ ಕೊನೆಯ ಎರಡು ಸಾಲುಗಳಿಗೂ ತಕ್ಕ ಮಟ್ಟಿನ ಸಂಬಂಧವಿದೆ. ಮಗುವೇ ಮನೆಮಂದಿಯೆಲ್ಲರ ಬೈಗು-ಬೆಳಗುಗಳನ್ನು ನಿರ್ಣಯಿಸಿ, ಅವರ ಚಟುವಟಿಕೆಗಳನ್ನು ನಿಯಂತ್ರಿಸುವದಕ್ಕೆ ಅಲ್ಲಿ ಸೂಚನೆಗಳಿವೆ. ಆದರೂ ಒಟ್ಟಿನಲ್ಲಿ ಕವಿತೆ ಧ್ವನಿಸುವ ಕೇಂದ್ರ ಅರ್ಥ ಇದಲ್ಲ ; ಕೇವಲ ಆಂಶಿಕ ಅರ್ಥ ಮಾತ್ರ. ಈಗಾಗಲೇ ಸೂಚಿಸಿದ ಕವಿತೆಯ ಸ್ಥೂಲ ಚೌಕಟ್ಟಿನಲ್ಲಿ ಇದು ಹೊಂದುವದಿಲ್ಲ. ಅಂತೆಯೇ ಇದು ಹೊರಗಿನಿಂದ ತಂದು ಸೇರಿಸಿದ ವಸ್ತು ಎನಿಸಿಬಿಡುತ್ತದೆ. ಕವಿತೆಯನ್ನು ಸಾಮಾನ್ಯ ಹೇಳಿಕೆ ಅಥವಾ ಅನಿಸಿಕೆಯೊಂದನ್ನು ಸಾರಿ ಮುಗಿಸಬೇಕೆಂಬ ನವೋದಯ ಕಾವ್ಯದ ಚಟದ ಪ್ರಭಾವ ಇಲ್ಲಿರುವಂತಿದೆ. ಅದೇನಿದ್ದರೂ, "ಇವನಿಂದಲೇ ನಮಗೆ ಬೈಗು-ಬೆಳಗು" ಎಂಬ ಕವಿತೆಯ ಕೊನೆಯ ಸಾಲೇ ಕವಿತೆಯ ಹೆಸರೂ ಆಗಿರುವದು ಹಾದಿ ತಪ್ಪಿಸುವಂತಿದೆ,



ಇದೇ ಸಂಕಲನದ 'ದೀಪಧಾರಿ'ಯಾಗಲಿ, "ನೆಲ-ಮುಗಿಲು" ಸಂಕಲನದ 'ರಂಜನಾ' ಆಗಲಿ,—ವಸ್ತು ರಚನೆ ಆಶಯ ಪ್ರತಿಮಾಸೃಷ್ಟಿ ಧೋರಣೆ ಇತ್ಯಾದಿಗಳ ದೃಷ್ಟಿಯಿಂದ ಹೆಚ್ಚಿನ ಬೆಳವಣಿಗೆಯನ್ನೇನೂ ತೋರಿಸುವದಿಲ್ಲ. ಆದ್ದರಿಂದ ಉಳಿದ ಕವಿತೆಗಳ ವಿವರವಾದ ಚರ್ಚೆ ಇಲ್ಲಿ ಅನವಶ್ಯಕ.

ಮುಖ್ಯವಾಗಿ ಇಲ್ಲಿ ಹೆಸರಿಸಿರುವ ನಾಲ್ಕೂ ಕವಿತೆಗಳ ವಸ್ತು ಒಂದೇ ಆಗಿದೆ. ಅವುಗಳ ಹಿಂದಿನ ಭಾವವೂ ಒಂದೇ ಆಗಿದೆ. ಆಶಯ ಮತ್ತು ಪ್ರತಿಮೆಗಳು ನಾಲ್ಕೂ ಕವಿತೆಗಳಲ್ಲಿ ಪುನರಾವೃತ್ತವಾಗಿವೆ. ಉದಾಹರಣೆಗೆ ಈ ಕೆಳಗಿನ ಸಾಲುಗಳನ್ನು ನೋಡಿ :

ನೆಲ ಮುಗಿಲಿನ ಒಲವು ಗೆಲವು ಪಡೆದು ಬಂದಿತಿಲ್ಲಿಗೆ ('ಮಗುವಿಗೆ')

ನಡುವೆ ಏನೋ ಕನಸು, ತುಟಿಯಂಚಿನಲಿ ಮಿಂಚು—
ಮೂಡಿ ಮರೆಯಾಗುವದು ದಿವದ ಬೆಳಕು ('ಇವನಿಂದಲೇ...')
ಮರುಗಳಿಗೆ—ಶುಭಗಳಿಗೆ—ಏನು ಹೊಳೆದೊ ಏನೊ

ಏನಿಳಿವುದೋ ಚಂದ್ರಲೋಕದಿಂದ... ('ದೀಪಧಾರಿ')

ದೇವಲೋಕದ ಸರಕು ಹೊತ್ತು ತಂದಿಹ ಹಡಗು
ಈ ದಡವ ತುಂಬಿರುವದಿದರ ಬೆಡಗು ('ರಂಜನಾ')

ಇಲ್ಲೆಲ್ಲ ಮಗುವಿನ ಲೀಲೆಗಳಲ್ಲಿ ದೈವಿಕ ಅಂಶಗಳನ್ನು ಕಾಣುವ ಸಾಮಾನ್ಯ ಭಾವ ವ್ಯಕ್ತವಾಗಿದೆ. ಪ್ರತಿಮೆಗಳ ಬಳಕೆಯಲ್ಲೂ ಇಂಥ ಪುನರಾವೃತ್ತಿ ಕಾಣುತ್ತದೆ:

ಇನ್ನು ಈಟು ಇರುವಾಗಲೇ ಹಟವ ತೆಗೆದು ನಮ್ಮನು
ಹೆದರಿಸುವೆಯ ? ('ಮಗುವಿಗೆ')

ನಜರು ಕಾಣಿಕೆ ಕೊಟ್ಟು ಮುಜುರೆ ಹೊಡೆದರು ಕೂಡ
ಸಂಧಾನ ವಿಫಲ ವಿಫಲ ('ಇವನಿಂದಲೇ')

ಹಿಂದು ಮುಂದೂ ನೋಡದಿವನು ಊದಿಯೆ ಬಿಡುವ
ಸಮರತೂರ್ಯ !
ನಮಗಿಲ್ಲ ಇದನೆದುರು ನಿಂತು ನುಡಿಯುವ ಧೈರ್ಯ. ('ದೀಪಧಾರಿ')

ಮೂರು ಸಲ ಒಪ್ಪಂದ, ನೂರು ಸಲ ಯುದ್ಧ
ಅವರಿವರ ಸಂಧಾನ ಮೊದಲೇ ನಿಷಿದ್ಧ ! ('ರಂಜನಾ')

ಈ ಸಾಲುಗಳಲ್ಲಿ ಯುದ್ಧ ವಿಷಯಕ ಪ್ರತಿಮೆಗಳು ಮತ್ತೆ ಮತ್ತೆ ಬಂದಿವೆ. ಹಾಗೆಯೇ, ಮಗುವೇ ಈ ಯುದ್ಧದಲ್ಲಿ ಜಯಶಾಲಿಯಾಗುವದನ್ನೂ ನೋಡಬಹುದು.

ಈ ನಾಲ್ಕು ಕವಿತೆಗಳ ಮುಕ್ತಾಯವೂ ಹೆಚ್ಚು-ಕಡಿಮೆ ಒಂದೇ ರೀತಿಯಾಗಿದೆ.

ಶುಭದ ಹರಕೆ ನವೋದಯಕೆ ನೂರು ದೀಪ ಹಚ್ಚಲು
ನಮ್ಮೆದೆಯಾನಂದಕೆಲ್ಲ ಕಂದ ನೀನೆ ಚೊಚ್ಚಲು ('ಮಗುವಿಗೆ')

ಸೂರ್ಯಚಂದ್ರರು ದಿನವು ಮೂಡಿ ಬೆಳಕಾಡಿದರು
ಇವನಿಂದಲೇ ನಮಗೆ ಬೈಗು-ಬೆಳಗು ('ಇವನಿಂದಲೇ')

ಇವನೆಳೆಯ ಕಂಗಳಲಿ ಹೊಳೆವ ತಿಂಗಳ ಬೆಳಕು
ದಿನದ ದಾರಿಯೊಳೆಮಗೆ ದೀಪಧಾರಿ ('ದೀಪಧಾರಿ')

ತೃಣಮಪಿ ನ ಚಲತಿ ನಿನ್ನ ವಿನಾ, ನಿನ್ನ ವಿನಾ, ನಿನ್ನ ವಿನಾ ('ರಂಜನಾ')

ಮೊದಲಿನ ಮೂರೂ ಕವಿತೆಗಳ ಕೊನೆಯ ಸಾಲುಗಳಲ್ಲಿ ಬೆಳಕಿನ ಪ್ರತಿಮೆ ಪುನರಾವೃತ್ತವಾಗಿದೆ. ಹಾಗೆಯೇ ಮಗು ಮನೆಮಂದಿಯೆಲ್ಲರನ್ನೂ ನಿಯಂತ್ರಿಸುವ ಶಕ್ತಿಯಾಗುವದನ್ನೂ ಇಲ್ಲಿ ಕಾಣಬಹುದು. ಹಾಗೆಯೇ ಮಕ್ಕಳ ಹಟಮಾರಿತನ, ಅವುಗಳ ಎದುರುವಾದದ ಅರ್ಥಹೀನತೆ, ವಿನಾಕಾರಣವಾದ ಅಳು-ನಗುಗಳು ಮುಂತಾದ ಆಶಯಗಳೂ ಮತ್ತೆ ಮತ್ತೆ ಬಂದಿವೆ.

೬

ಇದನ್ನೆಲ್ಲ ನೋಡಿದರೆ ಕಣವಿಯುವರು ಒಂದೇ ಕವಿತೆಯನ್ನು ನಾಲ್ಕು ಸಲ ಬರೆದಿದ್ದಾರೆಂದು ಅನಿಸುತ್ತದೆ. ಅಲ್ಲಲ್ಲಿ ಕೆಲವು ಹೊಸ ಸಾಲುಗಳು ಸೇರಿಕೊಂಡಿವೆ, ಸುಂದರ ಚಿತ್ರಗಳು ಬಂದಿವೆ ಎಂಬುದನ್ನು ಗಮನಿಸಿಯೂ ಈ ಮಾತು ಹೇಳಬೇಕಾಗುತ್ತದೆ. ಮುಖ್ಯವಾದ ಸಂಗತಿಯೆಂದರೆ—ಈ ಎಲ್ಲ ಕವಿತೆಗಳ ವಸ್ತುವೂ ಒಂದು ಭಾವವೇ ಆಗಿದೆ-ಅದು ವಾತ್ಸಲ್ಯಭಾವ. ಈ ವಾತ್ಸಲ್ಯದ ಸ್ಥಾಯಿಯ ಸುತ್ತ ಆಗಾಗ ಕೆಲವು ಹೊಸ ಸಂಚಾರಿಗಳು ಸೇರಿಕೊಂಡು ಬೇರೆ ಬೇರೆ ಕವಿತೆಗಳಾಗಿವೆ.

ಈ ನಾಲ್ಕು ಕವಿತೆಗಳನ್ನು ಕಣವಿಯುವರು ತಮ್ಮ ಕಾವ್ಯಜೀವನದ ಬೇರೆಬೇರೆ ಹಂತಗಳಲ್ಲಿ ಬರೆದಿದ್ದರೂ ವಸ್ತುವಿನಲ್ಲಿ ಅಂಥ ವ್ಯತ್ಯಾಸವೇನೂ ಇಲ್ಲ. ಆದರೆ ರೀತಿಯಲ್ಲಿ ಸಾಕಷ್ಟು ವ್ಯತ್ಯಾಸಗಳಿವೆ. ರೀತಿಯ ವ್ಯತ್ಯಾಸಗಳನ್ನು ಅನುಸರಿಸಿ ಈ ಕವಿತೆಗಳನ್ನು ವಿಂಗಡಿಸುವುದಾದರೆ 'ಮಗುವಿಗೆ' ಒಂದು ಗುಂಪಿಗೆ, ಇನ್ನುಳಿದ ಕವಿತೆಗಳು ಮತ್ತೊಂದು ಗುಂಪಿಗೆ ಸೇರುತ್ತವೆ. ಈಗಾಗಲೇ ಸೂಚಿಸಿರುವಂತೆ 'ಮಗುವಿಗೆ' ನವೋದಯ ಮಾರ್ಗಕ್ಕೆ ಸೇರಿದ ಕವಿತೆ. ಈ ಕವಿತೆಯಿಂದ ಇನ್ನುಳಿದ ಕವಿತೆಗಳು ಯಾವ ಅಂಶಗಳಲ್ಲಿ ಭಿನ್ನವಾಗಿವೆ ಎಂಬುದನ್ನು ಪರಿಶೀಲಿಸುವದರ ಮೂಲಕ ಕಣವಿಯುವರ ಕಾವ್ಯದಲ್ಲಿ ಒಟ್ಟಿನಲ್ಲಿ ಆಗಿರುವ ಬದಲಾವಣೆಗಳನ್ನು ಗುರುತಿಸಬಹುದಾಗಿದೆ.

ಮೊದಲನೆಯದಾಗಿ, ಪ್ರತಿಮೆಗಳ ಬಳಕೆಯಲ್ಲಿ ಗಮನಾರ್ಹವಾದ ಬದಲಾವಣೆಯಾಗಿದೆ. ಮುಂಚಿಗಿಂತ ಈಗ ಹೆಚ್ಚಿನ ಕಲ್ಪನಾಸಮೃದ್ಧಿ ಕಾಣುತ್ತದೆ. ಕುರ್ತಕೋಟಿಯವರು ಸೂಚಿಸಿರುವಂತೆ ಮೊದಲು ಸಂಕ್ಷಿಪ್ತ ಹೋಲಿಕೆಯಾಗಿದ್ದುದು ಈಗ ಪೂರ್ಣ

ಪ್ರಮಾಣದ ಚಿತ್ರವಾಗಿ ಹಬ್ಬಿಕೊಳ್ಳುತ್ತದೆ.[1] ಈ ಕಾರಣದಿಂದಾಗಿ ಪ್ರತಿಮೆಗಳು ಹೆಚ್ಚು ಸ್ಫುಟವಾಗಿವೆ.

ಎರಡನೆಯದಾಗಿ, ಶಿಲ್ಪದ ದೃಷ್ಟಿಯಿಂದ ಪ್ರಬುದ್ಧತೆ ಕಾಣುತ್ತದೆ. ಚಿತ್ರಗಳು ಹೆಚ್ಚು ಹೆಚ್ಚಾಗಿ ಕಾರ್ಯಸಾಧಕವಾಗಿ ಕೆಲಸಮಾಡುತ್ತವೆ. ಮೊದಲಿನ ಬಿಡಿ ಚಿತ್ರಮಾಲೆಗಳ ಸಡಿಲತನಕ್ಕಿಂತ ಭಿನ್ನವಾದ ಸಾವಯವ ಶಿಲ್ಪದ ಕಡೆಗೆ ಗಮನ ಕೊಡಲಾಗಿದೆ.

ಮೂರನೆಯದಾಗಿ, ಮೊದಲಿನ ಯಾಂತ್ರಿಕ ಲಯಕ್ಕೆ ಬದಲಾಗಿ ಮುಕ್ತಛಂದಕ್ಕೆ ಒಲಿದ, ವೈವಿಧ್ಯಪೂರ್ಣವಾದ ಹೊಸ ಲಯದ ಮೇಲೆ ಹಿಡಿತ ಸಾಧಿಸಿದೆ. ಮುಂಚೆಗಿಂತ ಪ್ರಾಸಗಳು ಹೆಚ್ಚು ಹಿತದೂರದಲ್ಲಿ ಕಾಣಿಸಿಕೊಂಡಿವೆ.

ಆದರೆ ಇವೆಲ್ಲ ಬದಲಾವಣೆ-ಬೆಳವಣಿಗೆಗಳು ಬೆಳೆಯುವ ಕವಿಯೊಬ್ಬ ತನ್ನ ಕಾವ್ಯಕರ್ಮದಲ್ಲಿ ಸಹಜವಾಗಿ ಪ್ರಬುದ್ಧತೆಗೆ ಬರುತ್ತಿದ್ದಾನೆಂಬುದರ ಸೂಚನೆಯಾಗಿರುವ ಸಾಧ್ಯತೆಯೂ ಇರುವದರಿಂದ ಇದಕ್ಕೆಲ್ಲ ನವ್ಯಕಾವ್ಯದ ಪ್ರಭಾವವೇ ಕಾರಣವೆಂದು ಹೇಳಲಿಕ್ಕಾಗುವದಿಲ್ಲ. ಆದರೂ ಪ್ರತಿಮೆಗಳನ್ನು ಹೋಲಿಕೆಯ ಮಟ್ಟವನ್ನು ದಾಟಿ ಕಾರ್ಯಸಾಧಕವಾಗಿ ಬಳಸುವದರಲ್ಲಿ, ಮುಕ್ತಛಂದದ ಬಳಕೆಯಲ್ಲಿ, ಲಯವನ್ನು ಸಹ ಅಭಿವ್ಯಕ್ತಿಯ ಅಂಗವಾಗಿ ದುಡಿಸಿಕೊಳ್ಳುವದರಲ್ಲಿ ನವ್ಯಕಾವ್ಯದ ಪ್ರಭಾವ ಇಲ್ಲವೆಂದೂ ಹೇಳಲಿಕ್ಕಾಗುವದಿಲ್ಲ.

ಆದರೆ ನವ್ಯಕಾವ್ಯದ ಪ್ರಭಾವವನ್ನು ಸೂಚಿಸುವ ಒಂದು ಮಹತ್ವದ ಅಂಶ ಎರಡನೆಯ ಗುಂಪಿನ ಕವಿತೆಗಳಲ್ಲಿ ಸ್ಪಷ್ಟವಾಗಿ ಕಾಣುತ್ತದೆ. ಇದು ಮುಖ್ಯವಾಗಿ ಕವಿತೆಯ ಧಾಟಿ-ಧೋರಣೆಗಳಿಗೆ ಸಂಬಂಧಿಸಿದ್ದು. 'ಮಗುವಿಗೆ' ಕವನದ ಧಾಟಿ ಮುಗ್ಧ ತನ್ಮಯತೆಯದು. ಇಲ್ಲಿ ಕವಿ ಹಸುಗೂಸಿನ ಬಾಲಲೀಲೆಗಳಲ್ಲಿ ತಾನೂ ಒಂದಾಗಿಹೋಗಿದ್ದಾನೆ. ಆ ಲೀಲೆಗಳನ್ನು ಮುಗ್ಧವಿಸ್ಮಯದಿಂದ ಗಂಭೀರವಾಗಿ ವರ್ಣಿಸುತ್ತಾನೆ. ಆದರೆ ನಂತರದ ಕವಿತೆಗಳಲ್ಲಿಯ ಧಾಟಿ ಬಹುಮಟ್ಟಿಗೆ ಭಿನ್ನವಾಗಿದೆ. ಉದಾಹರಣೆಗೆ ಈ ಸಾಲುಗಳನ್ನು ನೋಡಿ :

ಜೋಲಿ ಹೊಡೆಯುತ ತಂತಿ ಮೇಲೆ ಓಡುವ ನಡೆವ
ವಿವಿಧ ಕಸರತ್ತು ;
ಅದರ ಗತ್ತುಗಳೆಲ್ಲ ಇವನಿಗೂ ಗೊತ್ತು !
ಬಂದು ನೋಡಿರಿ ಒಮ್ಮೆ ಗರ್ದಿಗಮ್ಮತ್ತು. ('ದೀಪಧಾರಿ'),

ಇಲ್ಲಿಯೂ ಮಗುವಿನ ಬಗೆಗೆ ಅದೇ ವಾತ್ಸಲ್ಯವಿದೆ, ಅವನ ಚಟುವಟಿಕೆಗಳ ಬಗ್ಗೆ ಸೋಜಿಗವೂ ಇದೆ. ಆದರ ಜೊತೆಗೆ ಆತ್ಮೀಯವಾದ ವ್ಯಂಗ್ಯವೂ ಇದೆ. ಮಗು ನಡೆಯುವ ರೀತಿಯನ್ನು ಇಲ್ಲಿ ತಂತಿಯ ಮೇಲೆ ನಡೆಯುವ ಕಸರತ್ತಿಗೆ ಹೋಲಿಸಲಾಗಿದೆ. ಕಸರತ್ತು

---

1. ಕೀರ್ತಿನಾಥ ಕುರ್ತಕೋಟಿ : "ನವ್ಯಕಾವ್ಯ ಪ್ರಯೋಗ" (೧೯೭೫), ಪುಟ : ೧೦೭

ಕಲಿತು ತೋರಿಸುವ ವಿದ್ಯೆ. ಮಗು ಸರಿಯಾಗಿ ನಡೆಯಲು ಬಾರದ್ದು ಇಂಥ ಕಸರತ್ತಿನಂತೆ ಕಾಣುತ್ತದೆ. ಆದರೆ ಆ ಕಸರತ್ತಿನ ಗತ್ತುಗಳೆಲ್ಲ ಇವನಿಗೂ ಗೊತ್ತು ಎನ್ನುವಲ್ಲಿರುವ ಸೊಗಸಾದ ವ್ಯಂಗ್ಯ ಉತ್ಪ್ರೇಕ್ಷೆ 'ಮಗುವಿಗೆ' ಪದ್ಯದಲ್ಲಿಯ ತನ್ಮಯತೆಯಲ್ಲಿ ಕಾಣುವಂಥ ದಲ್ಲ. ಇಲ್ಲಿರುವ ಹಿತವಾದ ವ್ಯಂಗ್ಯ ಕವಿ ತಾನಿಲ್ಲಿ ಬೇಕೆಂದೇ, ಉದ್ದೇಶಪೂರ್ವಕವಾಗಿ ಉತ್ಪ್ರೇಕ್ಷಿಸಿ ಹೇಳುತ್ತಿದ್ದೇನೆಂಬುದನ್ನು ಅರಿತಿದ್ದಾನೆಂಬುದರ ದ್ಯೋತಕವಾಗಿದೆ. ಈ ಧೋರಣೆಯಿಂದಾಗಿಯೇ ಇಂಥ ಚಿತ್ರಗಳ ಸೊಗಸು ಹೆಚ್ಚಾಗುತ್ತದೆ, ಮಗುವಿನ ಲೀಲೆ ಇನ್ನಷ್ಟು ಪ್ರಿಯವಾಗುತ್ತದೆ. ಈ ಧೋರಣೆಗೆ ಪೋಷಕವಾಗುವಂತೆ ಬರುವ ಪ್ರಾಸಗಳು ಕೂಡ ಇಲ್ಲಿಯ ಒಟ್ಟು ಪರಿಣಾಮಕ್ಕೆ ಸಹಾಯಕವಾಗಿವೆ. ಈ ಬಗೆಯ ಧೋರಣೆ ನವ್ಯ ಕಾವ್ಯದ ಪ್ರಧಾನ ಅಂಶವಾಗಿದೆ. ಅದನ್ನು ಅಳವಡಿಸಿಕೊಂಡಿದ್ದರಿಂದಾಗಿ ಇಲ್ಲಿಯ ಕವಿತೆಗಳ ಬೆಲೆ ಖಂಡಿತವಾಗಿಯೂ ಹೆಚ್ಚಾಗಿದೆ.

ಆದರೆ ಇದೊಂದೇ ಕಾರಣಕ್ಕಾಗಿ ಇವು ನವ್ಯಕಾವ್ಯ ಮಾರ್ಗದ ಕವಿತೆಗಳೆಂದು ಹೇಳಲಿಕ್ಕಾಗುವದಿಲ್ಲ. ಈ ಮೂರೂ ಕವಿತೆಗಳಲ್ಲಿ ನವೋದಯ ಕಾವ್ಯದ ಹಲವಾರು ಸಂಸ್ಕಾರಗಳು ಇನ್ನೂ ಸಾಕಷ್ಟು ದಟ್ಟವಾಗಿಯೇ ಇವೆ.

ಮೊದಲನೆಯದಾಗಿ ಇವಿನ್ನೂ ಭಾವಪ್ರಧಾನವಾದ ಕವಿತೆಗಳೇ ಆಗಿವೆ. ಈ ಭಾವಕ್ಕೆ ಚಿಂತನೆಯ ಬೆನ್ನಾಸರೆ ಇಲ್ಲ. ಮಗುವಿನ ಪ್ರಿಯವಾಗಬಹುದಾದ ಚರ್ಯೆಗಳನ್ನೇ ಆರಿಸಿ ಅವುಗಳನ್ನು ಇಲ್ಲಿ ರೋಮ್ಯಾಂಟಿಸೈಜ್ ಮಾಡಿ ವರ್ಣಿಸಲಾಗಿದೆ. ಆದರೆ ಮಕ್ಕಳ ವಿಷಯದಲ್ಲಿ ಎಲ್ಲವೂ ಪ್ರಿಯವೇ ಆಗಿರುವದಿಲ್ಲವೆಂಬುದು ಕೂಡ ಅಷ್ಟೇ ಸತ್ಯ. ಹೀಗೆ ಪ್ರಿಯವಲ್ಲದ ಇನ್ನೊಂದು ಜಾತಿಯ ವಿವರಗಳನ್ನೆಲ್ಲ ಇಲ್ಲಿ ಪೂರ್ತಿಯಾಗಿ ಮರೆಮಾಡ ಲಾಗಿದೆ. ಇದು ವಾಸ್ತವತೆಯ ಅಪ್ರಿಯ ಮುಖವನ್ನು ಮರೆಮಾಚುವ ರೋಮ್ಯಾಂಟಿಕ್ ಸರಳೀಕರಣದ ರೀತಿ. ಇಲ್ಲಿ ಹಟಮಾರಿತನ, ಜಗಳಗಂಟತನ ಇತ್ಯಾದಿ ವಿವರಗಳು ಬಂದಾಗ ಅವನ್ನೂ ರೋಮ್ಯಾಂಟಿಸೈಜ್ ಮಾಡಿಯೇ ತೋರಿಸಲಾಗಿದೆ, ಇದರಿಂದಾಗಿ ಕವಿತೆಗಳು ಸಮಗ್ರ ಅನುಭವವಾಗಿ ಮೂಡುವದಿಲ್ಲ.

ಶಿಲ್ಪದ ದೃಷ್ಟಿಯಿಂದ ಸಾವಯವ ಶಿಲ್ಪದ ಬೆಳವಣಿಗೆಯತ್ತ ಒಲವಿದ್ದರೂ ಈ ಕವಿತೆಗಳು ಆ ಬಗೆಯ ಶಿಲ್ಪದ ಮಾದರಿಗಳಲ್ಲ. ಚಿತ್ರಗಳು ಚೌಕಟ್ಟನ್ನು ಮೀರಿ ನಿಲ್ಲುತ್ತವೆ. ಕೆಲವು ಕಡೆ ಹಲವು ಚಿತ್ರಗಳು ಸೇರಿ ಒಂದು ಅಂಶವನ್ನು ಸೂಚಿಸುವಲ್ಲಿ ಐಕ್ಯ ಸಾಧಿಸಿ ದರೂ, ಅವು ಆ ಅಂಶದ ಬೇರೆ ಬೇರೆ ಮುಖಗಳನ್ನು ಸೂಚಿಸುವದಿಲ್ಲ. ಅಂತೆಯೇ ಚಿತ್ರಗಳು ತಮ್ಮಷ್ಟಕ್ಕೆ ಬಹಳ ಸುಂದರವಾಗಿದ್ದರೂ ದುಂದುಗಾರಿಕೆಯಾಗುತ್ತದೆ. ಇದು ಒಂದು ಬಗೆಯ ರೋಮ್ಯಾಂಟಿಕ್ ಸಮೃದ್ಧಿ (exuberance) ಯಾಗಿ ಕಾಣುತ್ತದೆ. 'ಇವನಿಂದಲೇ...' ಕವಿತೆಯ ಯುದ್ಧ ಪ್ರತಿಮೆಗಳನ್ನು ಉದಾಹರಣೆಯಾಗಿ ನೋಡ ಬಹುದು. ಇದರಿಂದಾಗಿ ಕವಿತೆ ವಾಚಾಳಿಯಾಗುತ್ತದೆ. ಶಿಲ್ಪ ಸಡಿಲವಾಗುತ್ತದೆ. ಇದು ಸಮೃದ್ಧವಾದ ಕಲ್ಪನಾಶಕ್ತಿಯನ್ನು ನಿಯಂತ್ರಿಸಿಕೊಳ್ಳದಿರುವದರ ಪರಿಣಾಮವಾಗಿರ

ಬಹುದು. ಬಹುಶಃ ಒಂದೇ ಕಾಲಕ್ಕೆ ಹೊಳೆದ ಹಲವು ಸುಂದರ ಚಿತ್ರಗಳನ್ನು ಕೈ ಬಿಡಲಾರದ ಮೋಹದಿಂದಾಗಿಯೇ ಮೂರು-ನಾಲ್ಕು ಕವಿತೆಗಳನ್ನು ಬರೆದು ಅವುಗಳನ್ನು ಬಳಸಿಕೊಳ್ಳುವ ಅವಕಾಶ ಕಲ್ಪಿಸಿಕೊಂಡಿದ್ದಾರೇನೋ ಎನಿಸುತ್ತದೆ.

ನವ್ಯಕವಿತೆಗಳಲ್ಲಿ ಒಂದಾದ ಮೇಲೊಂದು ಪ್ರತಿಮೆಗಳು ಬರುತ್ತ ಹೊಸ ಹೊಸ ಸಂಗತಿಗಳನ್ನು ಧ್ವನಿಸುತ್ತ ಅನುಭವದ ಮತ್ತು ಕವಿತೆಯ ಬೆಳವಣಿಗೆಯಲ್ಲಿ ಕೊಂಡಿಗಳಾಗುತ್ತವೆ. ಇವುಗಳಲ್ಲಿ ಒಂದೆರಡು ಪ್ರತಿಮೆಗಳು ಅರ್ಥವಾಗದೇ ಹೋದರೂ ಇಡೀ ಕವಿತೆ ಅರ್ಥವಾಗದೆ ತೊಂದರೆಯಾಗಬಹುದು. ಆದರೆ ಕಣವಿಯವರ ಕಾವ್ಯದಲ್ಲಿ ಈ ತೊಂದರೆ ಅಷ್ಟಾಗಿಲ್ಲ. ಪ್ರತಿಮೆಗಳು ಸಾಕಷ್ಟು ದೀರ್ಘವಾಗಿ ಬೆಳೆಯುವದರಿಂದ ಅದರ ವಿವರಗಳು ಸ್ಪಷ್ಟವಾಗುತ್ತವೆ. ಜೊತೆಗೆ ಅಲ್ಲಲ್ಲಿ ಹೋಲಿಕೆಯ ರೂಪದಲ್ಲಿ ಉಪಮಾನ-ಉಪಮೇಯಗಳೆರಡೂ ಬಂದು ಅರ್ಥ ವಿಶದವಾಗುತ್ತದೆ. ಕೆಲವು ಸಲ ವಾಚ್ಯವೂ ಆಗುತ್ತದೆ. ಇದಲ್ಲದೆ, ಒಂದೇ ಅರ್ಥವನ್ನು ಸೂಚಿಸುವ ಮೂರು-ನಾಲ್ಕು ಚಿತ್ರಗಳು ಒಟ್ಟಿಗೆ ಬರುವದರಿಂದ ಅವುಗಳಲ್ಲಿ ಒಂದು ಅರ್ಥವಾದರೆ ಇನ್ನುಳಿದವಕ್ಕೂ ಅರ್ಥ ಹೊಳೆಯುತ್ತದೆ. ಇದು ಒಂದು ರೀತಿಯಲ್ಲಿ ಓದುಗರಿಗೆ ತೋರಿಸಿದ ವಿನಾಯಿತಿಯೂ ಹೌದು. ಆದರೆ ಇದರಿಂದ ಕವಿತೆಯ ಶಿಲ್ಪ ಬಹಳಷ್ಟು ಶಿಥಿಲವಾಗುತ್ತದೆ.

ಕಣವಿಯವರ ಈಚಿನ ಕಾವ್ಯದಲ್ಲಿ ನವ್ಯಕಾವ್ಯದ ಪ್ರಭಾವದಿಂದಾಗಿ ವ್ಯಂಗ್ಯ ತಾಟಸ್ಥ್ಯ ಕಾಣಿಸಿಕೊಂಡಿದ್ದರೂ, ಅದರ ಎಡೆಗೆಡೆಗೇ ತಾದಾತ್ಮ್ಯವನ್ನು ಸೂಚಿಸುವ ಉದ್ಗಾರಗಳೂ ಕಾಣಿಸಿಕೊಳ್ಳುತ್ತವೆ. 'ಇವನಿಂದಲೇ—' ಕವಿತೆಯಲ್ಲಿಯ ಎರಡನೆಯ ಭಾಗದಲ್ಲಿ ಮಗುವಿನ ಅದ್ಭುತ ಚಟುವಟಿಕೆಗಳ ತೀವ್ರವ್ಯಂಗ್ಯದ ಚಿತ್ರಮಾಲೆಯ ನಂತರ ಈ ಸಾಲು ಬರುತ್ತವೆ :

> ಎಂಥ ಅದ್ಭುತವಡಗಿ ಕುಳಿತು ಆಡಿಸುತಿಹುದೊ
> ಎಂಟು ತಿಂಗಳ ಪುಟ್ಟ ಜೀವಯಂತ್ರ !

ಹಾಗೆಯೇ 'ದೀಪಧಾರಿ'ಯಲ್ಲಿ

> (ಇತ್ತೀಚೆ ಬೇರೆ ಕಲಿತಿಹನು
> ಕಣ್ಣಿನಲಿ ನೀರಿಲ್ಲದೆಯೆ ಅಳುವ ಹೊಸ ಉಪಾಯ)

ಎಂಬ ಸಾಲುಗಳ ಕೆಳಗೇ ಮುಂದಿನ ಸಾಲುಗಳು ಬರುತ್ತವೆ :

> ಮರುಗಳಿಗೆ—ಶುಭಗಳಿಗೆ— ಏನು ಹೊಳೆವುದೊ ಏನೊ
> ಏನಿಳಿವುದೋ ಚಂದ್ರಲೋಕದಿಂದ,
> ಇಷ್ಟಗಲ ಅರಳುವದು ದುಂಡುಮಲ್ಲಿಗೆ ನಗೆಯು
> ಹೊಮ್ಮಿದೊಲು ಈ ಬಾಳಿನೆಲ್ಲ ಚೆಂದ,

ಇಂಥ ಸಾಲುಗಳು ಶುದ್ಧ ರೋಮ್ಯಾಂಟಿಕ್ ಕವಿತೆಯೊಂದರಿಂದ ನೇರವಾಗಿ ಎತ್ತಿಕೊಂಡಂತೆ ಕಾಣುತ್ತವೆ. ಇದರ ಅರ್ಥವಿಷ್ಟೆ : ಕಣವಿಯವರ ಕಾವ್ಯ ಈ ಬಗೆಯ ತಾದಾತ್ಮ್ಯದ

ಅವಕಾಶಗಳನ್ನು ಪೂರ್ತಿಯಾಗಿ ಇಂದಿಗೂ ಬಿಟ್ಟುಕೊಟ್ಟಿಲ್ಲ. ಇಷ್ಟೇ ಅಲ್ಲ. ಇಲ್ಲಿಯ ವ್ಯಂಗ್ಯ ಕೇವಲ ವಿವರಗಳಿಗೆ ಮಾತ್ರ ಸೀಮಿತವಾಗಿದೆಯೇ ಹೊರತು, ಅದೇ ಕವಿತೆಯೇ ವಸ್ತುವಿನ ಬಗೆಗಿನ ಒಟ್ಟು ಧೋರಣೆಯಾಗಿಲ್ಲ. ಒಟ್ಟು ಧೋರಣೆ ಇನ್ನೂ ತಾದಾತ್ಮ್ಯದ್ದೇ ಆಗಿದೆ ಎಂಬುದು ಇಲ್ಲಿ ಗಮನಾರ್ಹ.

ಪ್ರಾಸಗಳ ಬಳಕೆಯಲ್ಲಿಯೂ ಕೆಲವು ಕಡೆ ಇದೇ ಬಗೆಯ ಪ್ರವೃತ್ತಿ ಕಾಣುತ್ತದೆ. ಉದಾಹರಣೆಗೆ, 'ರಂಜನಾ' ಎಂಬ ಶಬ್ದ 'ವ್ಯಂಜನ', 'ಪ್ರಭಂಜನ'ದಂಥ ಪ್ರಾಸಕೊಡುವ ಶಬ್ದಗಳನ್ನು ನೆನಪಿಗೆ ತಂದು ಒಂದೊಂದು ಸಾಲಿನ ರಚನೆಗೆ ಕಾರಣವಾಗುತ್ತವೇನೋ ಎನಿಸುತ್ತದೆ.

ಇವು ಕಣವಿಯವರ ಕಾವ್ಯ ಉಳಿಸಿಕೊಂಡಿರುವ ನವೋದಯ ಕಾವ್ಯದ ಕೆಲವು ಅಂಶಗಳಾಗಿವೆ. ಇವುಗಳಲ್ಲಿ ಕೆಲವು ದೋಷಗಳೂ ಹೌದು. ಇವುಗಳಲ್ಲಿ ಕೆಲವನ್ನಾದರೂ ಆ ಮಾರ್ಗದ ಪ್ರಭಾವದ ಪರಿಣಾಮವೆಂದು ಭಾವಿಸದೆ, ಇವಕ್ಕೆ ಕವಿಯ ದೌರ್ಬಲ್ಯವೇ ಹೊಣೆ ಎಂದು ವಾದಿಸುವದೂ ಸಾಧ್ಯವಿದೆ. ಆದರೆ ಮುಖ್ಯವಾಗಿ ನವೋದಯದ ಭಾವ ಪ್ರಧಾನತೆಗೆ ವ್ಯಂಗ್ಯ ಧೋರಣೆಯನ್ನು ಅಳವಡಿಸಿಕೊಂಡು ಭಾವಕ್ಕೆ ಹೊಸರುಚಿಯನ್ನು ತಂದು ಕೊಟ್ಟಿದ್ದರಲ್ಲಿ ಈ ಕವಿತೆಗಳ ವೈಶಿಷ್ಟ್ಯವಿದೆ ಎನ್ನಬಹುದು. ತನ್ನ ಅನಾಥ ಪ್ರಜ್ಞೆ, ನಿರಾಶೆ, ವ್ಯಂಗ್ಯ, ವಿಡಂಬನೆ, ತಾತ್ವಿಕ ಚಿಂತನೆ, ಅಂತರಂಗದ ಹೊಯ್ದಾಟಗಳಂಥ ವಿಷಯಗಳ ಗುಂಪಿನಲ್ಲಿ ಹಲವು ಬಗೆಯ ಜೀವನ ಸಂತೋಷದ ಕ್ಷಣಗಳಿಗೆ ಎರವಾಗಿರುವ ನವ್ಯ ಕಾವ್ಯಕ್ಕೆ ಒಂದುರೀತಿಯಿಂದ, ವೈಯಕ್ತಿಕ ಭಾವನೆಗಳ ವೈಭವೀಕರಣದಲ್ಲಿ 'ಪರವಶ' ವಾಗಿದ್ದ ನವೋದಯ ಕಾವ್ಯಕ್ಕೆ ಇನ್ನೊಂದು ರೀತಿಯಿಂದ ಇವು ಪೂರಕವಾಗುತ್ತವೆ. ಇದರಿಂದಾಗಿ ಎರಡೂ ಕಾವ್ಯಮಾರ್ಗಗಳಲ್ಲಿಯೂ ಅಭಿವ್ಯಕ್ತಿಯ ಸಾಧ್ಯತೆಗಳನ್ನು ವಿಸ್ತರಿಸಿ ದಂತಾಗಿದೆ. ಈ ಅರ್ಥದಲ್ಲಿ ಇದು ಸುಲಭ ಹೊಂದಾಣಿಕೆಯ ಕಾವ್ಯಮಾರ್ಗವಾಗುವುದಿಲ್ಲ ಎಂಬುದು ಮಹತ್ವದ ವಿಷಯ.

ಹಾಗೆಯೇ ಆಂತರಿಕ ಅವಶ್ಯಕತೆ ಇಲ್ಲದೆಯೇ ಕಾವ್ಯಮಾರ್ಗ ಮಾತ್ರ ಬದಲಾಗಿದೆ ಎಂಬ ಅಪವಾದವನ್ನು ನೋಡಬಹುದು. ಆಂತರಿಕವಾಗಿ ಇಲ್ಲಿಯ ಕವಿತೆಗಳಲ್ಲಿಯ ವಸ್ತು ಬದಲಾಗಿಲ್ಲವೆಂಬುದು ನಿಜ. ಆದರೆ ಆ ವಸ್ತುವಿನ ವಿವರಗಳ ಬಗೆಗಿನ ಕವಿಯ ಧೋರಣೆ ಸಾಕಷ್ಟು ಬದಲಾಗಿದೆ ಎಂಬುದೂ ನಿಜ. ವಸ್ತುವಿನಂತೆ ಧೋರಣೆಯೂ ಆಂತರಿಕ ವಿಷಯವೇ ಆಗಿರುವದರಿಂದ, ಬದಲಾದ ಧೋರಣೆಗೆ ತಕ್ಕಂತೆ ಅಭಿವ್ಯಕ್ತಿಯ ಮಾರ್ಗದಲ್ಲೂ ಕೆಲವೊಂದು ಬದಲಾವಣೆಗಳಾಗಿರುವದು ಸಮರ್ಥನೀಯವೇ ಆಗಿದೆ. ಆದರೂ ಕಣವಿಯವರ ಜೀವನದೃಷ್ಟಿಯಲ್ಲಿ ರೋಮ್ಯಾಂಟಿಕ್ ಅಥವಾ ನವೋದಯವು ಎನ್ನಬಹುದಾದ ಅಂಶಗಳೂ ಇವೆ. ಹೀಗಾಗಿ ಅವರ ಕಾವ್ಯದಲ್ಲಿ ನವೋದಯ ಮತ್ತು ನವ್ಯ ಅಂಶಗಳ ಮಿಶ್ರಣವು ಭಿನ್ನ-ಭಿನ್ನ ಪ್ರಮಾಣದಲ್ಲಿ ಕಣ್ಣಿಗೆ ಬೀಳುತ್ತದೆ. ಇಲ್ಲಿ ಚರ್ಚಿಸಿರುವ ಶಿಶುಗೀತೆಗಳಲ್ಲಿ ರೋಮ್ಯಾಂಟಿಕ್ ಅಂಶಗಳೇ ಒಂದು ಕೈ ಮಿಗಿಲಾಗಿ ಕಾಣುತ್ತವೆ.

ಒಟ್ಟಿನಲ್ಲಿ ಈ ಕವಿತೆಗಳು ಉತ್ತಮ ನವ್ಯ ಕವಿತೆಗಳ ಹಾಗೆ ವೈಚಾರಿಕವಾಗಿಯೂ ನಮ್ಮನ್ನು ಒಳಗುಮಾಡಿಕೊಳ್ಳುವದಿಲ್ಲ. ಅಂತೆಯೇ ಇವುಗಳ ಯಶಸ್ಸು ಸೀಮಿತವಾದುದಾಗಿದೆ. ಬಹುಶಃ ಈ ಸಮನ್ವಯ ಭಾವ ಮತ್ತು ವೈಚಾರಿಕತೆಗಳ ನಡುವೆ ಸಾಧಿಸಿದ್ದರೆ ಇವುಗಳ ಯಶಸ್ಸು ಮಹತ್ವದ್ದಾಗಬಹುದುದಿತ್ತು. ಆದರೆ ವೈಚಾರಿಕತೆಯ ಆಚೆಗೂ ಇರುವ ನಮ್ಮ ಜೀವನದ ಭಾವುಕ ಕ್ಷಣಗಳನ್ನು ನೆನಪಿಗೆ ತಂದುಕೊಟ್ಟು ಆ ಕ್ಷಣಗಳಲ್ಲಿ ನಮ್ಮನ್ನು ಪರವಶರನ್ನಾಗಿ ಮಾಡುವದರಲ್ಲಿ ಇವು ಯಶಸ್ವಿಯಾಗುತ್ತವೆ. ಈ ಸಂದರ್ಭದಲ್ಲಿ ಅನುಭವಸಮಗ್ರತೆ, ಸಾವಯವ ಶಿಲ್ಪ, ಭಾವ ವಿಚಾರಗಳ ಸಮತೋಲನ ಮುಂತಾದ ಮಾತುಗಳು ನಮ್ಮನ್ನು ಅಷ್ಟಾಗಿ ಬಾಧಿಸುವದಿಲ್ಲ. ಹೀಗೆ ಜೀವನಸಂತೋಷವನ್ನು ಪ್ರಕಟಿಸುವ ದೃಷ್ಟಿಯಿಂದಷ್ಟೇ ನೋಡಿದಾಗ ಈ ಕವಿತೆಗಳು ಮಕ್ಕಳ ಬಾಲಲೀಲೆಗಳನ್ನು ಕುರಿತ ಸುಂದರ ಜನಪದ ತ್ರಿಪದಿಗಳ ಅಂತಃಕರಣದ ಪ್ರಪಂಚವನ್ನು ನೆನಪಿಗೆ ತರುತ್ತವೆ; ಆದರೆ ತಮ್ಮ ಶಿಳಿವ್ಯಂಗ್ಯದ ಧೋರಣೆಯಲ್ಲಿ ಈಚಿನ ಮೂರು ಕವಿತೆಗಳು ಜನಪದ ತ್ರಿಪದಿಗಳಿಂದ ಭಿನ್ನವಾಗುತ್ತವೆ.

ಡಿ. ಲಿಂಗಯ್ಯ

# ಕಣವಿಯವರ ಯುಗಾದಿ ಕವಿತೆಗಳು

ಚೆನ್ನವೀರ ಕಣವಿಯವರ ಕಾವ್ಯ ಬೆಟ್ಟಗುಡ್ಡಗಳಿಂದ ಧುಮುಕಿ ಕಗ್ಗಾಡುಗಳ ನಡುವೆ ಆರ್ಭಟಿಸುತ್ತ ಹರಿಯುವ ಮಲೆನಾಡಿನ ಮಹಾಪ್ರವಾಹದಂತಲ್ಲ; ನಿಧಾನವಾಗಿ ಗಂಭೀರವಾಗಿ ಏರು ತಗ್ಗುಗಳಿಲ್ಲದೆ ಮಟ್ಟಸವಾದ ಬಯಲು ಸೀಮೆಯಲ್ಲಿ ಹರಿಯುವ ನದಿ ಇದ್ದ ಹಾಗೆ. ಸರಳವಾದ ಅಭಿವ್ಯಕ್ತಿ, ನೇರವಾದ ಗುರಿ. ಪ್ರತಿಯೊಂದರಲ್ಲೂ ಸಮಕಾಲೀನ ಬದುಕಿನ ಒತ್ತು, ಸಕಾಲಿಕ ಸಾಮಗ್ರಿ ಇದ್ದರೂ ಸಾರ್ವಕಾಲಿಕ ಮೌಲ್ಯದ ಕಡೆಗೆ ಸೆಳೆತ. ಯಾವುದಕ್ಕೂ ಅತಿಯೆನಿಸದ ಆರೋಗ್ಯಕರವಾದ ಇತಿಮಿತಿಯ ಚೌಕಟ್ಟಿನೊಳಗೇ ಸಂಚರಿಸುವ ಕುಸುರಿ ಕೆಲಸ. ಉರಿಯುವ ಸೂರ್ಯನ ಬಿಸಿಲಿನ ಪ್ರಖರತೆಯಂತೆ, ಅಮಾವಾಸ್ಯೆಯ ಕಗ್ಗತ್ತಲೆಯ ಸಾಂದ್ರತೆಯಂತೆ, ಪೂರ್ಣಚಂದ್ರನ ತುಂಬುಬೆಳಕಿನಂತೆ ಕಣವಿಯವರ ಕಾವ್ಯ ನಮ್ಮ ಕಣ್ಣಿಗೆ ಬಡಿಯುವುದಿಲ್ಲ ; ಮಿನುಗುವ ಚುಕ್ಕೆಯ ತನಿಬೆಳಗಿನಂತೆ ಆಹ್ಲಾದಕಾರಿಯಾಗಿರುತ್ತದೆ. ಶಬ್ದಾಡಂಬರಕ್ಕಿಂತ ಸಹೃದಯ ಸಂವಾದ ಕವಿಗೆ ಮೆಚ್ಚು. ಗಹನವಾದ ವಿಚಾರವನ್ನೂ ಸಮಗ್ರ ಬದುಕಿನ ಹಿನ್ನೆಲೆಯಲ್ಲಿ ಗಮನಿಸಿ, ಸ್ವಾನುಭವವನ್ನು ಅದರೊಂದಿಗೆ ಮೇಳವಿಸಿ, ನಿರ್ಲಿಪ್ತಭಾವನೆಯ ವ್ಯಂಗ್ಯದಿಂದ ಸಹಜವಾಗಿ ಸರಳವಾಗಿ ಕವಿ ಒಂದು ಶಬ್ದಚಿತ್ರವನ್ನು ನೆಯ್ದು ಬಿಡುತ್ತಾರೆ. ಅನುಭವದ ಸಾಮಗ್ರಿ ಇನ್ನೇನು ಮುಗಿದು ಕಾವ್ಯ ತೆಳುವಾಯಿತು ಎನ್ನುವಷ್ಟರಲ್ಲಿ ಆಶ್ಚರ್ಯಕರವಾದ ರೀತಿಯಲ್ಲಿ ಅದಕ್ಕೊಂದು ಹೊಸಕಾಂತಿಯನ್ನು ತಂದು ಕಾವ್ಯ ಗರಿಗಟ್ಟಿಕೊಳ್ಳುವಂತೆ ಮಾಡಿಬಿಡುತ್ತಾರೆ. ಈ ಅಂಶಗಳನ್ನು ಕಣವಿಯವರ ಸಂಕೀರ್ಣ ಕವನಗಳಲ್ಲಾಗಲಿ, ಸಾಮಾನ್ಯ ಕವನಗಳಲ್ಲಾಗಲಿ, ಪ್ರಕೃತಿ ಗೀತೆಗಳಲ್ಲಾಗಲಿ ಮತ್ತೆ ಮತ್ತೆ ಕಾಣಬಹುದು.

ಕಣವಿಯವರ ಪ್ರಕೃತಿ ಗೀತೆಗಳು ವಿಶಿಷ್ಟರೀತಿಯವು. ಕುವೆಂಪು ಅವರ ಪ್ರಕೃತಿ ಗೀತೆಗಳನ್ನು ಪ್ರತ್ಯೇಕವಾಗಿ ತಟ್ಟನೆ ಗುರುತಿಸುವಂತೆ ಕಣವಿಯವರ ಪ್ರಕೃತಿ ಗೀತೆಗಳನ್ನು ಪ್ರತ್ಯೇಕವಾಗಿ ಗುರುತಿಸುವುದಕ್ಕಾಗುವುದಿಲ್ಲ. ಯಾಕೆಂದರೆ ಪ್ರಕೃತಿಯ ದಟ್ಟವಾದ ಚಿತ್ರಗಳು ಕಣವಿಯವರಲ್ಲಿ ಕಡಮೆ. ಅವರ ಇತರ ಕವನಗಳಿಗೂ ಇವುಗಳಿಗೂ ಅಷ್ಟಾಗಿ ವ್ಯತ್ಯಾಸವಿಲ್ಲ. ಪ್ರಕೃತಿಗೀತೆಗಳಲ್ಲೂ ಅವರ ಇತರ ಗೀತೆಗಳಲ್ಲಿ ಕಂಡುಬರುವ ಹಾಗೆ ಪ್ರಧಾನ ವಿಷಯದ ಜೊತೆಗೆ ಸಮಕಾಲೀನ ಬದುಕಿನ ಒತ್ತು, ವ್ಯಂಗ್ಯ ಅಚ್ಚೊತ್ತಿರುತ್ತದೆ. ಇದರಿಂದ ಕವಿತೆಗಳು ಸಹೃದಯರ ಭಾವನೆಗಳೊಡನೆ ಸುಲಭವಾಗಿ ಮಿಡಿದು ಹೆಚ್ಚು ಆತ್ಮೀಯವಾಗುತ್ತವೆ. ಸಮಕಾಲೀನ ಘಟನೆಗಳು ಸಾರ್ವಕಾಲಿಕ ಮೌಲ್ಯಗಳತ್ತ ಮುಖ ಮಾಡುವುದರ ಮೂಲಕ ಕಣವಿಯವರ ಕವಿತೆಗಳು ಹೆಚ್ಚುಗಾರಿಕೆಯನ್ನು ಪಡೆಯುತ್ತವೆ.

ಪ್ರಕೃತಿಯು ಸ್ಫೂರ್ತಿ ಕಣವಿಯವರ ಕಾವ್ಯದ ಬತ್ತದ ಚಿಲುಮೆ. ಪ್ರಾರಂಭದಿಂದಲೂ ಕವಿ ಪ್ರಕೃತಿಯನ್ನು ತಮ್ಮ ಅಭಿವ್ಯಕ್ತಿಗೆ ಅನೇಕ ರೀತಿಯಲ್ಲಿ ದುಡಿಸಿಕೊಂಡಿದ್ದಾರೆ. ಪ್ರಕೃತಿಯ ಹಲವು ಹತ್ತು ಮುಖಗಳು, ಋತುವೈಭವ, ಸಂಸ್ಕೃತಿ, ಧಾರ್ಮಿಕ ಹಿನ್ನೆಲೆಯಲ್ಲಿ ಹಾಸುಹೊಕ್ಕಾಗಿರುವ ಹಬ್ಬಹರಿದಿನಗಳು—ಮೊದಲಾದವುಗಳನ್ನು ಬಳಸಿಕೊಂಡು ಕಾವ್ಯ ರಚಿಸುವಾಗ ಯುಗವಾಣಿಯ ಜೊತೆಗೆ ಕವಿವಾಣಿಯು ದನಿಗೂಡಿರುವುದನ್ನು ಕಾಣಬಹುದು.

ಭಾರತೀಯರಿಗೆ ಪ್ರಿಯವಾದ ಹಬ್ಬಗಳಲ್ಲಿ ಯುಗಾದಿಯೂ ಒಂದು. ಅದನ್ನು ಕುರಿತು ಬರೆಯದ ಕವಿಯಿಲ್ಲ. ಅವರಲ್ಲಿ ಕಣವಿಯವರೂ ಒಬ್ಬರು. ಯುಗಾದಿ ಹಾಗೂ ವಸಂತ ಋತುವಿನ ವರ್ಣನೆಯೆಂದರೆ ಕವಿ ಕಣವಿಯವರಿಗೆ ಮೊದಲಿಂದಲೂ ಪಕ್ಷಪಾತ. ಅವಕಾಶ ಸಿಕ್ಕಿದ ಕಡೆಗಳಲ್ಲೆಲ್ಲ ಪ್ರಕೃತಿಯ ಸೊಬಗನ್ನು ತಮ್ಮ ಕಾವ್ಯಕುಂಚದಿಂದ ಬಿಡಿಸಿದ್ದಾರೆ. ಋತುಗಳ ಮಾತು ಬಂದಾಗ ವಸಂತದ ಸಮೃದ್ಧಿಯನ್ನು, ಯುಗಾದಿಯ ಬೇವುಬೆಲ್ಲವನ್ನು ಕವಿ ಖಂಡಿತ ಮರೆಯುವುದಿಲ್ಲ. ಯುಗಾದಿ ಮತ್ತು ವಸಂತದ ವರ್ಣನೆಯ ಶಬ್ದಗಳು, ವಸ್ತುಗಳು, ಹಾಗೂ ಪ್ರತಿಮೆಗಳು ಕಣವಿಯವರ ಕವಿತೆಗಳಲ್ಲಿ ಪುನಃ ಪುನಃ ಕಾಣಿಸಿಕೊಳ್ಳುತ್ತವೆ. ಇವುಗಳನ್ನೆಲ್ಲ ಒಟ್ಟಿಗೆ ನೋಡಿದಾಗ ಯುಗಾದಿಯನ್ನೂ ವಸಂತವನ್ನೂ ಕುರಿತ ಕಣವಿಯವರ ಚಿಂತನೆ ಇನ್ನೂ ಮುಗಿದಿಲ್ಲವೇನೋ ಅನ್ನಿಸುತ್ತದೆ.

ವಸಂತದ ಆರಂಭವೇ ಯುಗಾದಿ. ವಸಂತದ ವರ್ಣನೆಯೆಂದರೆ ಯುಗಾದಿಯ ವರ್ಣನೆಯೂ ಆಗುತ್ತದೆ. ಇವೆರಡರ ಸಂದರ್ಭಗಳು ಒಂದರೊಡನೊಂದು ಮಿಶ್ರವಾಗುವ ಉದಾಹರಣೆಯೂ ಇದೆ. 'ವಸಂತ'ದ ಕೋಗಿಲೆ 'ಯುಗಾದಿ'ಯಲ್ಲೂ ಹಾಡುವುದುಂಟು. 'ಸೃಷ್ಟಿನೋಂತು ನಿಂತಿದೆ,' 'ಋತುಸಂಸಾರ' ಮೊದಲಾದ ಕವಿತೆಗಳಲ್ಲಿ ಕಣವಿಯವರು ಉತ್ತಮ ಪ್ರತಿಮೆಗಳ ಮೂಲಕ ವಸಂತದ ಪರಿಚಯವನ್ನು ಸೊಗಸಾಗಿ ಮಾಡಿದ್ದಾರೆ. 'ಯುಗಯುಗದ ಹಾಡು', 'ಮೂಲವಸ್ತು'–ಕವಿತೆಗಳಲ್ಲಿ ಯುಗಾದಿಯ ಎಳೆಗಳಿವೆ. ಆದರೆ ಇವು ಅಷ್ಟು ಪುಷ್ಟವಾಗಿಲ್ಲ ; ರಸಾರ್ದ್ರವಾಗಿಲ್ಲ, ಕಣವಿಯವರ 'ಮಣ್ಣಿನ ಮೆರವಣಿಗೆ' ಸಂಗ್ರಹದ 'ಯುಗಾದಿ' ಮತ್ತು 'ವಿಕಾರಿ' ಕವಿತೆಗಳು ಯುಗಾದಿಯನ್ನು ಕುರಿತ ಪೂರ್ಣ ಪ್ರಮಾಣದ ರಚನೆಗಳಾಗಿವೆ. ಇವು ಕವಿಯ ಗಮನಾರ್ಹ ಕವಿತೆಗಳೂ ಹೌದು. ಈ ಎರಡು ಕವಿತೆಗಳ ವಿವರವಾದ ವಿವೇಚನೆ ಈ ಲೇಖನದ ಉದ್ದೇಶ.

೧

ಭಾರತೀಯರಿಗೆ ಯುಗಾದಿ ಪ್ರಿಯವಾಗಲು ಅದು ಕಾಲಿಡುವ ಸಂದರ್ಭವೂ ಕಾರಣವಾಗಿದೆ. ಸುಗ್ಗಿಯ ಫಲವನ್ನು ರೈತರು ಅನುಭವಿಸುತ್ತಿರುತ್ತಾರೆ. ಚಳಿಗಾಲದಲ್ಲಿ ಎಲೆಗಳನ್ನೆಲ್ಲ ಕಳೆದುಕೊಂಡ ಮರಗಿಡಗಳು ಮರುಹುಟ್ಟು ಪಡೆದಂತೆ ಹೊಸದಾಗಿ ಎಲೆ ಹೀಚು ಕಾಯಿ ಹೂಗಳನ್ನು ಪಡೆದು ತೊನೆದಾಡುತ್ತಿರುತ್ತವೆ. ಇಡೀ ಭೂಮಿ ವಸಂತ

ರಾಜನ ಬೀಡಾಗಿರುತ್ತದೆ. ಪ್ರಕೃತಿ ಅನುಗ್ರಹಿಸಿ, ಋತುಮಾನಗಳು ನಿರೀಕ್ಷಿಸಿದ ಫಲ ನೀಡಿದರೆ ಮನುಷ್ಯ ಸುಖವಾಗಿರದೆ ಇನ್ನೇನು ? ಅಂಥ ಸಂದರ್ಭದಲ್ಲಿ ಯುಗಾದಿ ಬಂದರೆ ಎಲ್ಲರಿಗೂ ಪ್ರಿಯವೇ.

ಕಣವಿಯವರ 'ಯುಗಾದಿ' ಕವಿತೆಯ ಪ್ರಾರಂಭ ಆತ್ಮೀಯವಾಗಿದೆ. ಪ್ರಕೃತಿ ಪುರುಷರ ಅವಿನಾ ಸಂಬಂಧದ ಸೂಚಕವೋ ಎನ್ನುವಂತೆ ಯುಗಾದಿಯ ಪ್ರವೇಶವಾಗುತ್ತದೆ. ಕವಿ ಯುಗಾದಿ ಎಂಬ ಹೊಸವರ್ಷವನ್ನು ಅನಾದಿಯೆಂಬ ಹಿರಿಯನಿಗೆ ಅಥವಾ ಅಜ್ಜನಿಗೆ ಹೋಲಿಸಿದ್ದಾರೆ. ಈ ಹೋಲಿಕೆಗೆ ಬಹುಶಃ ಕ್ರಿಸ್‌ಮಸನ ಮುನ್ನಾದಿನ ಆಗಮಿಸಿ ಮಕ್ಕಳಿಗೆ ಉಡುಗೊರೆಕೊಟ್ಟು ಶುಭಕೋರುವ ಸಾಂತಾಕ್ಲಾಸನ ನೆನಪು ಪ್ರಭಾವ ಬೀರಿರಬಹುದು. ಮಕ್ಕಳಿಗಾಗಲಿ ಮೊಮ್ಮಕ್ಕಳಿಗಾಗಲಿ ಅಜ್ಜನೆಂದರೆ ಅಚ್ಚುಮೆಚ್ಚು. ಮಕ್ಕಳನ್ನು ಕಾಣಬೇಕೆಂಬ ಆತುರ ಕಾತರ ಅಜ್ಜನಿಗಿರುತ್ತದೆ. ಅಜ್ಜನನ್ನು ಕಾಣಬೇಕೆಂಬ ಆಸೆ ಮಕ್ಕಳಿಗಿರುತ್ತದೆ. ಇಬ್ಬರಿಗೂ ಬಹಳ ದಿನಗಳ ಪರಿಚಯ ಬೇರೆ. ಎಂದ ಮೇಲೆ ಹೇಳಿ ಕೇಳಿ ಬರುವ ಪ್ರಮೇಯವಿಲ್ಲ.

ಕರೆಯದಿದ್ದರು ನಾವು, ನೀನು ಬಂದೇ ಬರುವಿ
ಅಲ್ಲವೆ ? ಬಾ ಮತ್ತೆ, ಬಾ ಯುಗಾದಿ ;
ಎಂಥ ಬಿಸಿಲೊಳು ಬಂದೆ !

ಜನ ಬಯಸಲಿ ಬಿಡಲಿ, ಯುಗಾದಿ ಬಂದೇ ಬರುತ್ತದೆ. ಅದು ಪ್ರಕೃತಿಯ ಔದಾರ್ಯ. ಅದರ ಆಗಮನದ ಅಗತ್ಯ ಜನರಿಗೂ ಉಂಟು. "ಬಾ ಮತ್ತೆ ಬಾ" ಎಂಬ ಮಾತುಗಳು ಯುಗಾದಿಯ ಆಗಮನದ ಅಗತ್ಯವನ್ನು ಸೂಚಿಸುತ್ತವೆ. ಆದರೆ ಈ ಯುಗಾದಿ ಬಂದಾಗ ಬಿಸಿಲು. ಇಳಿ ವಯಸ್ಸಿನವನು ಬಿಸಿಲನ್ನೂ ಲೆಕ್ಕಿಸದೆ ಬಂದಿದ್ದಾನೆ. ಉಪಚಾರ ಬೇಕು.

ಬೇಕೆ ಬಾಯಾರಿಕೆಗೆ ಬೇವು-ಬೆಲ್ಲ ?
ಚಹಕೆ ಸಕ್ಕರೆಯಿಲ್ಲ ; ನಡೆದೀತೆ ಬರಿಯ ತಣ್ಣೀರ ಗುಟುಕು ?

ಮನೆಗೆ ಬಂದವರಿಗೆ ಬಾಯಾರಿಕೆ ನೀಗುವುದಕ್ಕಾಗಿ ನೀರು ಬೆಲ್ಲ ಕೊಡುವುದು ರೂಢಿ, ಯುಗಾದಿಯಂದು ಬಂದವರಿಗೆ ಬೇವು–ಬೆಲ್ಲ. ಬದುಕು ಸುಖ ದುಃಖಗಳ ಮಿಶ್ರಣ. ಅದರ ಸಂಕೇತ ಬೇವು-ಬೆಲ್ಲ. ಬಾಳಿನಲ್ಲಿ ಬರುವ ನೋವು ನಲಿವುಗಳನ್ನು ಸಮಭಾವದಿಂದ ಸ್ವೀಕರಿಸಿ ಅರಗಿಸಿಕೊಳ್ಳುವುದೇ ಜೀವನದ ರಹಸ್ಯ. ಎಲ್ಲ ಯುಗಾದಿಗಳೂ ಸುಖಮಯವಾಗಿರುವುದಿಲ್ಲ. ಕವಿ ಕಂಡ ಅಂದಿನ ಯುಗಾದಿಯಂತೂ ತಾಪತ್ರಯದ್ದು. ಮನೆಯಲ್ಲಿ ಒಂದಿದ್ದರೆ ಒಂದಿಲ್ಲದ ಪರಿಸ್ಥಿತಿ. ಚಹಕ್ಕೆ ಸಕ್ಕರೆ ಗತಿಯಿಲ್ಲ. ತಣ್ಣೀರ ಗುಟುಕಿನಲ್ಲೇ ತೃಪ್ತಿ ಪಡಬೇಕು. ಸಧ್ಯ ಅದಾದರೂ ಇದೆಯಲ್ಲ! ಅಲ್ಲದೆ, ಬಿಸಿಲಲ್ಲಿ ಬಳಲಿ ಬಂದವರಿಗೆ ತಣ್ಣೀರಿಗಿಂತ ಹಿತವಾದ ಪಾನೀಯ ಯಾವುದಿದೆ ? ವೃದ್ಧನ ಉತ್ತರಕ್ಕೂ ಕಾಯದೆ ಉಪಹಾರ ಮುಂದುವರಿದಿದೆ. ಬಿಸಿಲಿನ ಧಗೆಯನ್ನು ಪರಿಹರಿಸಲು ಗಾಳಿ ಬೀಸಿಕೊಳ್ಳಬಾರದೆ ? ಶ್ರೀಮಂತರ ಮನೆಯಾಗಿದ್ದರೆ ವಿದ್ಯುತ್ ಬೀಸಣಿಗೆ ಇರುತ್ತಿತ್ತು. ಆದರೆ ಇಲ್ಲಿ ಹಾಗಲ್ಲ.

ಇದು ಹೋದ ವರುಷವೆ ಕೊಂಡ ಬಾಳದ ಬೇರ ಬೀಸಣಿಗೆ
ನೀರು ಚಿಮುಕಿಸಿದೆ ; ತಣ್ಣಗೆ ಬೀಸಿಕೊ.
ಇಲ್ಲ್ಲೆ ಪಾಟಿಯ ಕಲ್ಲಮೇಲೆ ಹಾಸಿದೆ, ಸ್ವಲ್ಪ ಅಡ್ಡಾಗಿ ಏಳು ;
ಆಮೇಲೆ ಮಾತಾಡೋಣ, ಕುಳಿತು ಹಾಯಾಗಿ
ಒಂದು ಯುಗವಾಗಿ ಹೋಯಿತಲ್ಲವೆ ನಾವು ಭೆಟ್ಟಿಯಾಗಿ !

ಯುಗಾದಿ ವೃದ್ಧನಿಗೆ ಕೊಟ್ಟದ್ದು ವಿಶೇಷವಾದ ಹಾಗೂ ವಿಚಿತ್ರವಾದ ಬೀಸಣಿಗೆ. 'ಬಾಳದ ಬೇರು' ದ್ವಂದ್ವಾರ್ಥದಲ್ಲಿ ಬಳಕೆಯಾಗಿದೆ. ಸುವಾಸನೆಯಿಂದ ಕೂಡಿದ ಮುಡಿವಾಳದ ಬೇರನ್ನು ನೀರಿನಿಂದ ತೇವಗೊಳಿಸಿದರೆ ಮತ್ತಷ್ಟು ಸುಗಂಧ ಬೀರುತ್ತದೆ, ಆದರೆ ಬೀಸಣಿಗೆ ಸರಿಯಾದ ಸ್ಥಿತಿಯಲ್ಲಿಲ್ಲ. ಯಾಕೆಂದರೆ ಅದು ಬಾಳದ ಬೇರಿನಿಂದ ಮಾಡಿದ್ದು, ಬಾಳಿಕೆ ಬರಬೇಕಾಗಿದ್ದದ್ದು ಬಾಳಲೇ ಇಲ್ಲ. ಕಳೆದ ವರ್ಷದ ಯುಗಾದಿಯಿಂದ ಇಂದಿನವರೆಗಿನ ಬದುಕಿನ ನಿಸ್ಸಾರತೆಯನ್ನು ಇದು ಧ್ವನಿಸುತ್ತದೆ. ಸಾರವೋ ನಿಸ್ಸಾರವೋ ಅದರ ವಾಸನೆ ಯುಂತೂ ನೆನಪಿನಲ್ಲಿದೆ ಅಷ್ಟೆ. ನೀರನ್ನು ಚಿಮುಕಿಸಿದರೆ ಬೀಸಣಿಗೆ ಸುವಾಸನೆ ಬೀರುವ ಹಾಗೆ ನೆನೆಸಿಕೊಂಡರೆ ಕಳೆದ ಘಟನೆಗಳು ಮರುಕಳಿಸುತ್ತವೆ. ಹಳೆಯ ನೆನಪನ್ನು ಹೊತ್ತು ಮನುಷ್ಯ ಮುಂದಕ್ಕೆ ಹೆಜ್ಜೆ ಹಾಕಬೇಕಾಗುತ್ತದೆ. ನಿನ್ನೆ, ಇಂದಿಗಿಂತ ನಾಳೆ ಸುಖದ್ದಿರ ಬೇಕೆಂಬ ಆಶಾಭಾವನೆ ಇದಕ್ಕೆ ಕಾರಣ. ವೃದ್ಧ ಪುರುಷ ಹೆಚ್ಚು ಮಲಗುವಂತಿಲ್ಲ. ಸ್ವಲ್ಪ ಅಡ್ಡಾಗಿ ಎದ್ದರೆ ವಾಸಿ. ಯಾಕೆಂದರೆ ಅವನೊಡನೆ ಬಹಳ ಮಾತಾಡುವುದಿದೆ. ಕಳೆದ ವರ್ಷ ನೋಡಿದ್ದರೂ ಯುಗವಾಗಿರಬಹುದು ಅನ್ನಿಸಿದೆ. ಯುಗಾದಿಯ ಬಗೆಗೆ ಅಷ್ಟೊಂದು ಅಕ್ಕರೆ. ಒಂದು ವರ್ಷ ಬಿಟ್ಟಿರುವುದೂ ಕಷ್ಟ. ಒಂದು ಯುಗವಾಗಿ ಹೋಯಿತಲ್ಲವೆ ನಾವು ಭೆಟ್ಟಿಯಾಗಿ, ಎಂಬ ಆಡುಮಾತುಗಳು ಧ್ವನಿಪೂರ್ಣವಾಗಿ ಬಳಕೆಯಾಗಿವೆ. ಬೇಡದ ವ್ಯಕ್ತಿಯಾಗಿದ್ದರೆ, ಭೇಟಿಗೆ ಇಷ್ಟವಿಲ್ಲದಿದ್ದರೆ ಈ ಮಾತುಗಳ ಧಾಟಿಯೇ ಬೇರೆಯಾಗು ತ್ತಿತ್ತು.

ಯುಗಾದಿ ವೃದ್ಧಪುರುಷ ಯಾವ ವಾಹನ ಹಿಡಿದು ಬಂದ ? ಉಪಚಾರ ವಿಶ್ರಾಂತಿ ಆದಮೇಲೆ ಪರಸ್ಪರ ಮಾತುಕತೆ ಪ್ರಾರಂಭವಾಯಿತು. ಇಳಿವಯಸ್ಸಿನ ಯುಗಾದಿ ಪುರುಷ ಯಾವುದರಲ್ಲಿ ಬಂದ ಎಂಬುದರ ಚಿತ್ರ ಮುಂದೆ ಬಂದಿದೆ. ಈ ಭಾಗದಲ್ಲಿ ವಾಚ್ಯತೆ ಅಧಿಕ ವಾಗಿದೆ. ಸಹಜವಾದ ಹಳ್ಳಿಯ ಪರಿಸರವನ್ನು ಕವಿ ಬಳಸಿಕೊಂಡಿದ್ದಾರೆ. ಪಟ್ಟಣಿಗರಿಗಿಂತ ಪ್ರಕೃತಿಯ ಮಕ್ಕಳಾದ ಹಳ್ಳಿಗರಿಗೆ ಯುಗಾದಿಯ ಸಂಭ್ರಮ ಹೆಚ್ಚು. ಕವಿಗೂ ಅದೇ ಮೆಚ್ಚು. ಹಳ್ಳಿಗೆ ಬಂದಹಾಗೆ ಯುಗಾದಿ ಪುರುಷ ಬಂದಿದ್ದಾನೆ. ಬರುವಾಗ ಹಳೆಯ ಹಾದಿಯ ಗುರುತು ಸಿಕ್ಕಿತೇ ಅಥವಾ ಏನಾದರೂ ಅದಲು ಬದಲು ಕಂಡಿತೇ ಎಂದು ಕೇಳಿ ಕವಿ ಮಾರ್ಮಿಕವಾಗಿ ಹೀಗೆ ಸಂಭಾಷಿಸಿದ್ದಾರೆ :

ವರುಷಗಟ್ಟಲೆ ಎತ್ತಲೋ ಕಣ್ಮರೆಯಾಗಿ ಹೋಗುವ ನಿನಗೆ ಹೇಗೆ ಗೊತ್ತು,—
ಇಲ್ಲಿ, ಒಳಗೊಳಗೆ ನಡೆಯುತಿರುವ ಮಸಲತ್ತು,
ನಿಮಿಷ ನಿಮಿಷಕ್ಕೆ ಹೊಸ ಹೊಸ ವೇಷಧರಿಸಿ ಓಡುವ ಜಗತ್ತು.

ಭೂಮಿಯ ಬದುಕು ಹೊಸ ಹೊಸ ಅನ್ವೇಷಣೆಯ ಹಾದಿಯಲ್ಲಿ ಓಡುತ್ತಿದೆ. ಸದಾ ಬದಲಾವಣೆ ಕಾಣುತ್ತಿದೆ. ಮನುಷ್ಯ ಅನ್ಯ ಗ್ರಹಗಳಿಗೆ ಹೋಗುತ್ತಿದ್ದಾನೆ. ಯಾಕೆ ಹೀಗೆ ? ಭೂಮಿಯಲ್ಲಿ ಇರುವ ಸೌಲಭ್ಯ ಸಾಲದೆ ? ಬೇರೆಡೆಯಲ್ಲಿ ಇಲ್ಲಿನದಕ್ಕಿಂತ ಹೆಚ್ಚಿನದು ಸಿಕ್ಕೀತೇ ? ಕವಿ ವ್ಯಂಗ್ಯವಾಗಿ ಆದರೂ ನಿರ್ಲಿಪ್ತರಾಗಿ ಉತ್ತರಿಸಿದ್ದಾರೆ :

> ಹಾಗೆ ನೋಡಿದರೆ, ನಮಗಿಲ್ಲಿ ಏನಿದೆ ಹೇಳು ವಿಶೇಷ ಸವಲತ್ತು ?
> ಇಂದೊ ನಾಳೆಯೊ ವಲಸೆ ಹೋಗುವರು ನಮ್ಮ ಜನ
> ಚಂದ್ರ ತಾರಾಲೋಕ ಹುಡುಕಿಕೊಂಡು
> (ಬಹುಶಃ) ಕವಿಗಳನ್ನೂ ಜೊತೆಗೆ ಕರೆದುಕೊಂಡು.

ಚಂದ್ರಗ್ರಹ ಯಾತ್ರೆಯ ಮನುಷ್ಯ ಪ್ರಯತ್ನದ ಘಟನೆಗಳು ಈ ಕವನದ ರಚನೆಯ ಸಂದರ್ಭದಲ್ಲಿ ಕವಿಗೆ ಪ್ರಭಾವ ಬೀರಿರುವುದು ಸ್ಪಷ್ಟ. ಕವಿಯ ಸಮಕಾಲೀನ ಪ್ರಜ್ಞೆ ಯುಗಾದಿ ಪುರುಷನೊಡನೆ ಹೀಗೆ ಸಂಭಾಷಿಸಿದೆ. ಕೊನೆಯ ಸಾಲು ಹಾಸ್ಯಮಯವಾಗಿದೆ. ಕಣವಿಯವರು ತಮ್ಮ ಕವಿತೆಗಳಲ್ಲಿ ಅಲ್ಲಲ್ಲಿ ಹೀಗೆ ಮೆತ್ತಗೆ ಚಕ್ಕಳಗುಳಿ ಇಡುವುದುಂಟು.

ಮುಂದೆ, ಋತುರಾಜ ಚೈತ್ರಪುರುಷನ ವರ್ಣನೆ ಇದೆ. ಈವರೆಗಿನ ವೃದ್ಧಪುರುಷನ ಚಿತ್ರ ಬದಲಾಗಿ ಯವ್ವನದಿಂದ ತುಂಬಿ ತುಳುಕುವ ಚೈತ್ರಪುರುಷ ಋತುವಿನೊಡನೆ ಮೊದಲಬಾರಿಗೆ ಸೇರುವ ಪ್ರೇಮ ಪ್ರಕರಣದ ಉಲ್ಲಾಸಕಾರಿಯಾದ ವರ್ಣನೆಯಾಗಿದೆ ಇದು. ಕವಿತೆಯ ರಚನಾಬಂಧವೂ ವ್ಯತ್ಯಾಸವಾಗಿದೆ. ಕವನದ ಪ್ರಾರಂಭದಿಂದ ಮುಕ್ತ ಛಂದಸ್ಸಿನಲ್ಲಿ ಅಭಿವ್ಯಕ್ತಿಸಿದ ಕವಿ ಈ ಭಾಗದಲ್ಲಿ ಮುಕ್ತಛಂದಸ್ಸು ಮತ್ತು ಬದ್ಧಛಂದಸ್ಸು ಎರಡನ್ನೂ ಬಳಸಿರುವುದನ್ನು ಗಮನಿಸಬೇಕು. ಇದರಿಂದ ರಚನೆಯ ಏಕತಾನತೆ ಇಲ್ಲವಾಗಿದೆ ; ಅಭಿವ್ಯಕ್ತಿಯಲ್ಲಿ ನವೀನತೆ ಉಂಟಾಗಿ ಸೊಗಸು ಮೂಡಿದೆ. ವಸಂತ ಋತುವಿನ ಆಗಮನವನ್ನು ಈ ಸಾಲುಗಳು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತವೆ :

> ವರುಷ ವರುಷಕ್ಕೊಮ್ಮೆ ಬಯಲಟ್ಟದಲಿ ತೊಟ್ಟು ಬರುವೆ ಭರ್ಜರಿವೇಷ
> ಓ ಚೈತ್ರ ಪುರುಷ !
> ಬಿರುಗಾಳಿ, ಕೋಲ್ಮಿಂಚು, ಆಣೆಕಲ್ಲಿನ ಮಳೆಯು, ಗುಡುಗು—ಸಂತೋಷ ;
> ಹೇಗಿಹುದು ಪಂಚಾಂಗದಲ್ಲಿ ಹೊಸ ವರುಷ ?
> ಕೋಗಿಲೆಯು ಮಾತ್ರ ಬಿಟ್ಟೂಬಿಡದೆ ತನ್ನ ಜಾಹೀರಾತು ಪ್ರಕಟಿಸಿದೆ.

ಇದರ ಮುಂದಿನ ಎರಡು ಸಾಲುಗಳು ಇರದಿದ್ದರೂ ಕಾವ್ಯಧ್ವನಿಗೆ ಭಂಗ ಬರುತ್ತಿರಲಿಲ್ಲ. ಚೈತ್ರ ಪುರಷನ ನೇಪಥ್ಯ ಬಯಲಟ್ಟ. 'ಚೈತ್ರ' ಎನ್ನುವ ಪದ ವಿಶೇಷವಾದ ದ್ವಂದ್ವಾರ್ಥದಲ್ಲಿ ಬಳಕೆಯಾಗಿದೆ. ಭರ್ಜರಿವೇಷ ಧರಿಸಿ ರಂಗ ಪ್ರವೇಶಿಸಿದರೆ ಕಣ್ಣಿಗೆ ರಪ್ಪನೆ ಅಪ್ಪಳಿಸುವ ಬಿರುಗಾಳಿ, ಕೋಲ್ಮಿಂಚು, ಮಳೆ ಇತ್ಯಾದಿ, ಇಷ್ಟಾದರೆ ಪ್ರಕೃತಿಯ ಸಮೃದ್ಧಿಯಾದಂತೆಯೇ. ಅದರ ಪರಿಣಾಮ ಇಡೀ ಪ್ರಕೃತಿಗೆ ಹೊಸ ವೇಷ. ಎಲ್ಲೆಲ್ಲೂ ಕೋಗಿಲೆ ದನಿಯ ನಾದ, ಅದರ ಸಂತೋಷದ ನಾದ ಪ್ರಸಾರಕ್ಕೆ ಕೊನೆಯೇ ಇಲ್ಲ, ವಸಂತಮಾಸದ ಪ್ರಕೃತಿಯ ಚೆಲುವು ಕಣ್ಣಿಗೆ ಹಬ್ಬವಾಗಿದೆ.

ತಳಿತ ಮಾವು ಮುಗುಳಾದ ಬೇವು
ಹುಲುಗಲದ ತುಂಬ ಹೂವು ;
ಬೇಗೆ ಹತ್ತಿ ಮೈಸುಟ್ಟ ಕಾಡು
ಮರೆತಿಹುದು ಎಲ್ಲ ನೋವು.

ಚೆನ್ನವೀರ ಕಣವಿಯವರು ಗಿಡಮರಗಳನ್ನು ಬಹಳವಾಗಿ ಪ್ರೀತಿಸುತ್ತಾರೆ. ಪ್ರಕೃತಿಯ ಆಗು—ಹೋಗುಗಳಿಗೆ ಆತ್ಮೀಯತೆಯಿಂದ ಸೂಕ್ಷ್ಮವಾಗಿ ಸ್ಪಂದಿಸುತ್ತಾರೆ. ವಸಂತ ಕಾಲದ ಗಿಡಮರಗಳ ವೈಭವದ ವರ್ಣನೆಗೆ ಕವಿ ಕಂಡರಿಸಿದ ಕಾವ್ಯಗತಿ ಆಕರ್ಷಕವಾಗಿದೆ. ಅಂತ್ಯ ಪ್ರಾಸದ ಶಬ್ದಗಳು ಎಚ್ಚರಿಕೆಯಿಂದ ಆರಿಸಿ ಪೋಣಿಸಿದ ಮಣಿಗಳ ಹಾಗೆ ಅಲಂಕರಿಸಿವೆ. ಕಣವಿಯವರ ಮುಕ್ತಛಂದಸ್ಸಿನ ಸಾಲುಗಳಲ್ಲಿ ಅಲ್ಲಲ್ಲಿ ಒಂದೊಂದು ಮಾತು ಹೆಚ್ಚು ಎಂದು ಬೆರಳಿಟ್ಟು ತೋರಿಸಲು ಸಾಧ್ಯವಿದ್ದರೂ ಇಲ್ಲಿ ಮಾತ್ರ ಅದು ಸಾಧ್ಯವಿಲ್ಲ. ಒಂದೇ ಒಂದು ಶಬ್ದವೂ ಕೂಡ ಇಲ್ಲಿ ವ್ಯರ್ಥವಾಗಿ ಬಳಕೆಯಾಗಿಲ್ಲ, ವಸಂತಕಾಲದ ಮಾವು ಬೇವು ಹೊಂಗೆಗಳೆಲ್ಲ ನೋಡುವುದಕ್ಕೆ ಸೊಗಸು. ಬಿಸಲಿನ ಬೇಗೆಗೆ ಸುಟ್ಟುಹೋಗಿದ್ದ ಕಾಡು ಕೂಡ ಮರುಹುಟ್ಟು ಪಡೆದು ಚಿಗುರೊಡೆದು ನಗುತ್ತಿರುತ್ತದೆ. ಒತ್ತೊತ್ತಾದ ಎಲೆಗಳನ್ನು ಹೊಂದಿ, ಮೈತುಂಬ ಹೂ ಮುಡಿದು ತೂಗಿತೊನೆಯುವ ಹೊಂಗೆ ಈ ಕವಿಗೆ ಇಷ್ಟವಾದುದು. "ಚಿಗುರಿತು ಈ ಹುಲುಗಲ" ಎಂಬ ಕವಿತೆಯನ್ನೇ ಹಾಡಿದ್ದಾರೆ.

ಮುಂದಿನ ಇಂಥದೇ ಮೂರು ಪದ್ಯಗಳಲ್ಲಿ ಕಿವಿಗೆ ಹಿತವಾದ ಪರಿಭಾವನೆಗೆ ಅರ್ಹವಾದ ನಾದಮಾಧುರ್ಯದಿಂದ ಕೂಡಿದ ಉತ್ತಮ ಶಬ್ದಚಿತ್ರಗಳಿವೆ :

ಬಿಸಿಲ ಬೇಗೆಗೀ ನೆಳಲ ತಂಪು
ತಂಗಾಳಿ ತಂದ ಜೊಂಪು.

ವಸಂತ ಮಾಸದಲ್ಲಿ ಹೊಸ ಉಡುಪು ತೊಟ್ಟು ನಿಂತಿರುವ ಮರಗಳ ಕಡೆಗೆ ಹೋಗಿ ಸ್ವಲ್ಪ ಹೊತ್ತು ಕುಳಿತರೆ ಸಾಕು ತಂಗಾಳಿಯ ಸ್ಪರ್ಶದಿಂದ ತೂಕಡಿಕೆ ಹತ್ತುವುದು ಖಂಡಿತ. ಈ ಪದ್ಯದ ಸಾಲುಗಳ ಬಂಧವನ್ನು ಗಮನಿಸಬೇಕು. ಕ್ಲಿಷ್ಟವಿಲ್ಲದ ಸುಲಭವಾದ ಪದಗಳ ಜೋಡಣೆ. 'ತಂಪು'. 'ಜೊಂಪು' ಒಂದಕ್ಕೊಂದು ಪೂರಕವಾದ ಅಂತ್ಯಪ್ರಾಸದ ಶಬ್ದಗಳು, ಸಾಧಾರಣ ಶಬ್ದಗಳಿಂದ ಅಸಾಧಾರಣ ಅರ್ಥವ್ಯಾಪ್ತಿಯನ್ನು ಸಾಧಿಸಿರುವುದು ಇಲ್ಲಿಯ ವೈಶಿಷ್ಟ್ಯ. ಇಲ್ಲಿನ ಕಾವ್ಯಧ್ವನಿಯ ಗ್ರಹಿಕೆಗೆ ವ್ಯಾಖ್ಯಾನ ಅನಗತ್ಯ. ಅಷ್ಟೇ ಅಲ್ಲ; ಇದು ಸುಲಭವಾಗಿ ವ್ಯಾಖ್ಯಾನಕ್ಕೆ ದಕ್ಕುವ ಅಭಿವ್ಯಕ್ತಿಯಲ್ಲ. ಸಹೃದಯತೆಯಿಂದ ಪರಿಭಾವಿಸಿದರೆ ಅರ್ಥವಿಸ್ತಾರ ಅಧಿಕವಾಗುತ್ತದೆ. ಇಂಥ ಕಡೆ ಕಣವಿಯವರ ಕಾವ್ಯಪ್ರತಿಭೆಯ ಸ್ವಂತಿಕೆಯನ್ನು ಕಾಣಬಹುದು.

ಬಂತು ಗಾಳಿ ಕೆಂಧೂಳಿ—ಗೂಳಿ
ಮುಗಿಲುದ್ದ ಹೋಳಿಯಾಡಿ,
ಬೆಣಚುಗಲ್ಲ ಬಿಳಿ ಮೋಡದಲ್ಲಿ
ಕುಡಿಮಿಂಚು ಜೀವತಾಳಿ !

ಸವುರಾದ ಪ್ರತಿಮೆಗಳನ್ನು ಸೃಜಿಸುವ ಹಾಗೆ ಒರಟಾದ ಶಕ್ತಿಯುತವಾದ ಪ್ರತಿಮೆಗಳನ್ನೂ ಕಣವಿಯವರು ಸೃಜಿಸಬಲ್ಲರು ಎಂಬುದಕ್ಕೆ ಈ ಪದ್ಯ ಸಾಕ್ಷಿಯಾಗಿದೆ. ಇದು ಮಳೆಯ ಪೂರ್ವದ ಸ್ಥಿತಿಯ ವರ್ಣನೆ. 'ಕೆಂಧೂಳಿಗೂಳಿ' ರೂಪಕ ವೀರ್ಯವತ್ತಾಗಿದೆ. 'ಗೂಳಿ'ಯನ್ನು ಲೈಂಗಿಕ ಸಂಕೇತವಾಗಿ ಬಳಸಿರುವಂತಿದೆ. ಈ ಪದ್ಯದಲ್ಲಿ 'ಳ' ಕಾರಗಳ ಪ್ರಯೋಗ ಹೆಚ್ಚು, ಪ್ರಕೃತಿಯನ್ನು ಬಯಸಿಬಂದ ಋತುರಾಜನ ಕೂಟ ಬೇಟದ ತೀವ್ರತೆ ಹೀಗಿದೆ :

ಮೊದಲ ಮಳೆಗೆ ನೀರಡಿಸಿ ನಿಂತ
ಇಳೆಗಾಯ್ತು ಮೊದಲ ಕೂಟ,
ಸಾಕು ಎನಿಸಿ ಸಾಕಾಗಲಿಲ್ಲ
ಹೊಸ ಋತುವಿನೊಡನೆ ಬೇಟ.

ಸೊಗಸಾದ ಪದ್ಯ. ಆಕಾರದಲ್ಲಿ ವಾಮನನಂತಿರುವ ಈ ಪದ್ಯ ಅರ್ಥದಲ್ಲಿ ತ್ರಿವಿಕ್ರಮನಂತಿದೆ. ಭೂಮಿ ಮೊದಲ ಮಳೆಗಾಗಿ ಬಾಯಾರಿ ನಿಂತಿತ್ತು. ಮಳೆಯ ರೂಪದಲ್ಲಿ ಋತುರಾಜನ ಕೂಟವಾಯಿತು. ಸಾಕು ಎನಿಸಿದರೂ ಸಾಕಾಗದಷ್ಟು ತೀವ್ರವಾದ ಪ್ರೇಮ ಅದು. ನೀರಡಿಸು, ಕೂಟ, ಬೇಟ ಪದಗಳು ಉಚಿತವಾಗಿ ಪ್ರಯೋಗವಾಗಿವೆ ; ಸಂದರ್ಭವನ್ನು ಧ್ವನಿಪೂರ್ಣವಾಗಿ ಪ್ರತಿಮಿಸುವಲ್ಲಿ ಯಶಸ್ವಿಯಾಗಿವೆ.

ಮುಂದೆ, ಕಾವ್ಯದ ಛಂದಸ್ಸು, ಕವಿಯ ಯೋಚನಾ ಸರಣಿ ಮತ್ತೆ ಬದಲಾಗಿದೆ. ಪ್ರಾರಂಭದ ಯುಗಾದಿ ವೃದ್ಧಪುರುಷನೊಡನೆ ಆತ್ಮೀಯ ಸಂಭಾಷಣೆ ಮುಂದುವರಿದಿದೆ. ಈ ಭಾಗದಲ್ಲಿ ಗಂಭೀರವಾಧ ಅನೇಕ ಯೋಚನಾತರಂಗಗಳು ಒಂದರೊಡನೊಂದು ಹೆಣೆದುಕೊಂಡಿರುವುದನ್ನು ಕಾಣಬಹುದು.

ನೆನೆಸಿದೊಡನೆಯೆ ಕನಸಿನಲ್ಲಿ ಬಂದವ ನೀನು
ಬಾ ಯುಗಾದಿ, 'ಶತಂ ಜೀವೇಮ ಶರದಃ'

ಚೇತೋಹಾರಿಯಶಾದ ಯುಗಾದಿಯ ಕನವರಿಕೆ ಕವಿಗೆ. ನೆನೆಸಿದ ಕೂಡಲೆ ಬಂತು ಯುಗಾದಿ. ನೂರು ವರ್ಷ ಬಾಳೋಣ. ಯಶಾಕೆಂದರೆ ನೂರು ಯುಗಾದಿಗಳನ್ನು ಅನುಭವಿಸಬಹುದು. ಅಭಿವ್ಯಕ್ತಿಯ ಸಮರ್ಥನೆಗೆ ಕವಿ ಉಪನಿಷತ್ತಿನ ವಾಕ್ಯವನ್ನು ಬಳಸಿದ್ದಾರೆ. ಕಣವಿಯವರು ಅಲ್ಲಲ್ಲಿ ಹೀಗೆ ಅನ್ಯಮೂಲಗಳ ಸಾಲುಗಳನ್ನು ಉದ್ಧರಿಸುವುದುಂಟು. ಈ ಭಾಗದ ಸಂಭಾಷಣೆ ಏಕಮುಖದಂತೆ ಕಂಡರೂ ಏಕಮುಖದ್ದಲ್ಲ. ಯುಗಾದಿ ಪುರುಷನೂ ಮಾತಾಡಿದ್ದಾನೆ. ಅದು ವ್ಯಕ್ತವಾಗಿಲ್ಲ ಅಷ್ಟೆ. ಕವಿಯ ಪ್ರಶ್ನೆ ಮತ್ತು ಉತ್ತರಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಯುಗಾದಿ ಪುರುಷ ಮಾತಾಡಿರುವ ಬಗೆಗೆ ಸೂಚನೆಗಳು ದೊರೆಯುತ್ತವೆ.

ನೂರು ವರುಷದ ಮೆದುಳ ಮಡಿಕೆಯೊಳಗೇನಿಹುದೊ—
ಹಬ್ಬ ಹುಣ್ಣಿವೆಗೊಮ್ಮೆ ಬಿಚ್ಚಿ ಬಿಸಿಲಿಗೆ ಹಾಕಿ, ಮಡಿಚಿ ಪೆಟ್ಟಿಗೆಯೊಳಗೆ ಇಟ್ಟುದಷ್ಟೆ,
ನುಸಿ ಮುಟ್ಟಿದರೆ ಅದರ ಗತಿಯೇನು ? ಮೊದಲೆ ರೇಶಿಮೆಯ ಬಟ್ಟೆ—

ನೂರು ವರ್ಷ ಬದುಕುವುದಕ್ಕೆ ಎಲ್ಲರಿಗೂ ಆಸೆ. ಆದರೆ ನೂರು ವರ್ಷದ ಬದುಕಿನಲ್ಲಿ ಏನೇನು ಸಂಭವಿಸುವುದೋ ಯಾರಿಗೆ ಗೊತ್ತು? ಜೋಪಾನವಾಗಿದ್ದರೂ ಅಪಾಯ ಇಲ್ಲ ವೆಂಬ ಖಾತ್ರಿ ಇಲ್ಲ. 'ನುಸಿ', 'ಕಾಲ'ಕ್ಕೆ ಸಂಕೇತವಾಗಿರುವಂತಿದೆ. 'ಮೆದುಳ ಮಡಿಕೆ' ಬದುಕಿನ ದೀರ್ಘತೆಯನ್ನು ಧ್ವನಿಸುತ್ತದೆ. 'ರೇಶಿಮೆಯ ಬಟ್ಟೆ'ಯನ್ನು ಮನುಷ್ಯನ ಪ್ರಾಣಕ್ಕೆ ಅನ್ವಯಿಸಿಕೊಳ್ಳಬಹುದು. ನೆನಪಿನ ಆಳವನ್ನು ಕೆದಕುವ ಹಾಗೆ ಈ ಅವ್ಯಕ್ತ ಪ್ರತಿಮೆ ರಚನೆಯಾಗಿದೆ. ಯುಗಾದಿ ಪುರುಷ 'ದಾರಿಯಲಿ ಬರುವಾಗ ಎಡಬಲಕೆ ಕಂಡುದೇನು?

ಎಲೆಯುದುರಿ ರಸವಾರಿ ಕೊಂಬೆಗೈಗಳ ಚಾಚಿ
ಬಾನಿಳೆಯ ನಡುವೆ ಜೋತಾಡುತಿರುವೀ ಅಸ್ಥಿಪಂಜರಗಳು ?

ಇದು ಪ್ರಶ್ನೆಯೂ ಹೌದು, ಉತ್ತರವೂ ಹೌದು. ಯುಗಾದಿ ಪುರುಷನ ಉತ್ತರವನ್ನೇ ಕವಿ ಮೆಲುಕು ಹಾಕಿರುವಂತಿದೆ. ಯುಗಾದಿ ಬಂದಾಗ ಕಂಡದ್ದು ಬದುಕಿನಲ್ಲಿ ರಸವನ್ನೇ ಕಳೆದುಕೊಂಡು, ಇಹದ ಬಾಳನ್ನು ಅನುಭವಿಸದೆ, ಪರದ ಬಾಳನ್ನು ದಕ್ಕಿಸಿಕೊಳ್ಳದೆ, ಮರದ ಕೊಂಬೆಗಳಂತೆ ಕೈಚಾಚಿ ಅಂತರಪಿಶಾಚಿಗಳ ಹಾಗೆ ಜೋತಾಡುತ್ತಿರುವ ಮನುಷ್ಯ ರೆಂಬ ಅಸ್ಥಿಪಂಜರಗಳು ಮಾತ್ರ. ಮನುಷ್ಯರ ಬಾಳು ಹೀಗಿರುವುದರಿಂದಲೇ ಯುಗಾದಿ ಬಂದಾಗ ಸಂಭ್ರಮದಿಂದ ಸ್ವಾಗತಿಸುವವರು ಕಡಮೆ. ಇದಕ್ಕೆ ಯುಗಾದಿ ಪುರುಷನ ಅಕ್ಷೇಪಣೆ ಇದೆ. ಕವಿ ಸಮಾಧಾನ ಮಾಡಿದ್ದಾರೆ :

ಸ್ವಲ್ಪ ತಾಳು—
ಯುಗ ಯುಗಕ್ಕೊಮ್ಮೆ ಸಂಭವಿಸಿ ಬಂದರು ಅವಗೆ
ದುಂಬಾಲು ಬೀಳುವ ಮಂದಿ ಎಷ್ಟು, ಹೇಳು.

ದಶಾವತಾರದ ಕಲ್ಪನೆ ಇಲ್ಲಿ ಬಂದಿದೆ. 'ಅವಗೆ' ಎಂದರೆ ಅವತಾರಿ 'ವಿಷ್ಣುವಿಗೆ'. ಪ್ರತಿ ಯುಗದಲ್ಲೂ ವಿಷ್ಣು ಅವತಾರ ಎತ್ತಿದ. ಅವನಿಗಾಗಿ, ಅವನ ತತ್ವದ ಅನುಸರಣೆಗಾಗಿ ಆಸಕ್ತಿ ತೋರಿಸಿದವರು ಎಷ್ಟು ಮಂದಿ ? ಕೆಲವರು ಮಾತ್ರ, ಎಲ್ಲರೂ ಅಲ್ಲ. ಹಾಗೆಂದರೆ ಅವನು ಅವತಾರ ಎತ್ತುವುದನ್ನು ನಿಲ್ಲಿಸಲಿಲ್ಲ. ಯುಗಾದಿಯೂ ಅಷ್ಟೆ, ಯಾರು ಸ್ವಾಗತಿ ಸಲಿ, ಸ್ವಾಗತಿಸದಿರಲಿ ತನ್ನ ಕ್ರಿಯೆಯನ್ನು ಮಾತ್ರ ನಿಲ್ಲಿಸುವುದಿಲ್ಲ. ಇಲ್ಲದಿದ್ದರೆ ಪ್ರತಿ ವರ್ಷವೂ ಯುಗಾದಿ ಬರುತ್ತಿತ್ತೆ :

ಸ್ವತಃ ನೀನೇ ಎಷ್ಟು ಸಲ ಬಂದು ಹೋದೆಯೋ ಈ ಹಿಂದೆ
ಬರಲಿರುವೆಯೊ ಮತ್ತೆ ಇನ್ನು ಮುಂದೆ

ಮನುಷ್ಯನ ಬದುಕಿಗೆ ಎಲ್ಲೆ ಇದೆ. ಆದರೆ ಯುಗಾದಿಯ ಆಗಮನ ನಿರಂತರವಾದುದು. ಅದು ಬಂದಾಗಲೆಲ್ಲ ಭೂಮಿಯಲ್ಲಿ ಬದಲಾವಣೆಗಳನ್ನು ಕಾಣುತ್ತದೆ. ಯಾಕೆಂದರೆ ಇಲ್ಲಿ ಯಾವಾಗಲೂ ಒಂದಲ್ಲ ಒಂದು ರಿಪೇರಿ ನಡೆದೇ ಇರುತ್ತದೆ.

ನೀ ಬರುವ ಮುನ್ನವೇ ನಡೆದಿತ್ತು ನೀ ಬರುವ ದಾರಿಯ ರಿಪೇರಿ;
ಮುಂದೆ ಬರುವಾಗೆಲ್ಲ ಬಹು ಹುಷಾರಿ!
ಮರೆಯದಿರು, ಕನಿಷ್ಠ ವರುಷಕೊಂದಾದರೂ ಬೇಕು ನಮಗೆ ಹೊಸವಾದರಿ.

ಕಡೆಯ ಸಾಲಿನ ವ್ಯಂಗ್ಯ ಮಾರ್ಮಿಕವಾಗಿದೆ.

ಕವಿತೆಯ ಕೊನೆಯ ಭಾಗ ಮತ್ತಷ್ಟು ಸಂಕೀರ್ಣವಾಗಿದೆ; ವಿಸಂಗತಿಗಳ ಸರಮಾಲೆಯಾಗಿದೆ. ಬಹಿರಂಗದ ವ್ಯಾಖ್ಯಾನಕ್ಕಿಂತ ಅಂತರಂಗದ ದರ್ಶನದಲ್ಲಿ ಮುಳುಗಿರುವಂತಿದೆ. ಯುಗಾದಿ ಆಗಮಿಸುವ ಸಂದರ್ಭದಲ್ಲಿ ಪ್ರಕೃತಿಯ ಸೌಂದರ್ಯವನ್ನು ಗಮನಿಸಿದರೆ ಶಾಂತಿ ಸುಖ ಸಂತೋಷಗಳು ಸ್ವರ್ಗದಿಂದ ಭೂಮಿಗೆ ಇಳಿದು ಬಂದಿವೆಯೇನೋ ಎನ್ನಿಸುತ್ತದೆ. ಈ ವೈಭವ ವರ್ಷವೆಲ್ಲ ಇದ್ದರೆ ಚೆನ್ನಾಗಿತ್ತಲ್ಲವೆ ಎಂದು ಆಸೆಯಾಗುತ್ತದೆ. ಮನುಷ್ಯನ ಬದುಕೆಲ್ಲವೂ ಯುಗಾದಿಯ ಸಂಭ್ರಮದಂತೆ ಇದ್ದರೆ ಆಗುತ್ತಿರಲಿಲ್ಲವೆ ? ಅದಕ್ಕೇನು ಅಡ್ಡಿ ?

ಯುಗಯುಗದ ಹಾದಿಯಲಿ ನೆಳಲು ಬಿಚ್ಚಿದೆ ಬೋಧಿ
ಆಗಾಗ ಬಂದು ವಿಶ್ರಾಂತಿ ಪಡೆಯುವವಿಲ್ಲಿ ಈ ಜಗದ ಕರುಣೆ ಶಾಂತಿ;
ಎದೆಯ ಗುಹೆಯಲ್ಲಿ ಮಿಣುಕುತಿದೆ 'ಕಲ್ಯಾಣವೆಂಬ ಪ್ರಣತಿ,'
ಒಳಗು ಹೊರಗೆಲ್ಲ ಒಂದೆ ರೀತಿ.

ವಸಂತಮಾಸದ ಶಾಂತಿ ಚೆಲುವಿನ ಪರಿಸರ ಬದುಕನ್ನು ಕುರಿತು ಕವಿ ಆಳವಾಗಿ ಚಿಂತಿಸುವಂತೆ ಮಾಡಿದೆ. ಮನುಷ್ಯನ ಉದ್ಧಾರಕ್ಕೆ ಹಲವು ಮಹಾತ್ಮರು ಅವತರಿಸಿದರು. ಹಲವು ತತ್ವಗಳು ಬೆಳಕಿಗೆ ಬಂದವು. 'ಬೋಧಿ'— ವೃಕ್ಷದ ಕೆಳಗೆ ಜ್ಞಾನೋದಯಪಡೆದ 'ಬುದ್ಧ'ನನ್ನು ನೆನಪಿಸುತ್ತದೆ. 'ಕಲ್ಯಾಣವೆಂಬ ಪ್ರಣತಿ' ಹೊರಗೆ ಒಳಗೆಲ್ಲ 'ಬೆಳಕು' ತುಂಬಿಕೊಂಡ ಅಲ್ಲಮ ಪ್ರಭುವಿನ ಮಾತು. 'ಇಲ್ಲಿ' ಎಂಬ ನುಡಿ 'ಭೂಮಿ' ಮತ್ತು 'ವಸಂತಕಾಲ'ಕ್ಕೆ ಅನ್ವಯವಾಗುವಂಥಾದ್ದು. ಮಹಾತ್ಮರು ಅವತರಿಸಿದರೂ ಅರಿವು ಹರಡಿದರೂ ಮನುಷ್ಯ ಮಾತ್ರ ಕಂಡೂ ಕಾಣದಂತಾದ, ಕೇಳಿಯೂ ಕೇಳದಂತಾದ. ಇಲ್ಲದಿದ್ದರೆ ಶಾಂತಿ ಸುಖಗಳ ಸ್ವರ್ಗವಾಗಬೇಕಾಗಿದ್ದ ಮಣ್ಣಿನ ಬದುಕು ಯುದ್ಧ ಭೀತಿಗಳ ನರಕವಾಗಬೇಕಾಗಿರಲಿಲ್ಲ. ಇದು ನಾಗರಿಕ ಮನುಷ್ಯನ ವಿಚಿತ್ರಸ್ಥಿತಿ, ಆಧುನಿಕ ಸಮಾಜದ ವಾಸ್ತವ ಚಿತ್ರ. ಅನುಭಾವಿ ಶರಣರ, ಅನುಪಮ ದಾರ್ಶನಿಕರ ಪ್ರಭಾವಕ್ಕೆ ಒಳಗಾಗಿರುವ ಚೇತನ ಈ ಕವಿಯದು. ಆದ್ದರಿಂದಲೇ ಮನುಷ್ಯನ ಬದುಕು ರಣರಂಗವಾಗುವುದನ್ನು ಕವಿ ಇಷ್ಟಪಡುವುದಿಲ್ಲ.

ಯುದ್ಧ ರಂಗದಲಿ ಸನ್ನದ್ಧವಾಗಿದೆ ರಥವು
ಎಲ್ಲಿ ಆ ಸಾರಥಿ ?

ಎಂದು ಕೇಳಿದ್ದಾರೆ ಕವಿ. ಯುದ್ಧರಂಗ, ರಥ ಸಿದ್ಧವಾಗಿವೆ. ಸಾರಥಿಯಿಲ್ಲ. ಹಿಂದೆ, ಕುರುಕ್ಷೇತ್ರ ಯುದ್ಧದಲ್ಲಿ ನರನಾದ ಅರ್ಜುನನಿಗೆ ನಾರಾಯಣನಾದ ಶ್ರೀಕೃಷ್ಣಸಾರಥಿಯಾಗಿದ್ದ. ಇಂದಿನ ನರನಿಗೆ ಆ ಸೌಲಭ್ಯವಿಲ್ಲ. ಬಾಳು ಎಂಬ ಕುರುಕ್ಷೇತ್ರದಲ್ಲಿ ಮನುಷ್ಯನೇ ಸಾರಥಿ, ಇವನೇ ರಥಿ. ಇಂಥ ಅಸಹಾಯಕ ಪರಿಸ್ಥಿತಿಗೆ ಇಂದು ಯಾರೂ ಹೊರತಾಗಿಲ್ಲ.

ಓ ಇದು ಈಗ ನಮ್ಮ ಸರತಿ.

'ಸರತಿ' ಎಂಬ ಪದ ಪಂಪನ 'ಸೂಳ್‌ಪಡೆಯಲುಪ್ಪುದು ಕಾಣಾ ಮಹಾಜಿರಂಗದೊಳ್' ಮಾತುಗಳನ್ನು ಜ್ಞಾಪಿಸುತ್ತದೆ. ಈ ಸಾಲಿಗೆ ಮೊದಲು ಉದ್ಧೃತ ಪದ್ಯವೊಂದಿದೆ. ಅದು, ಏಳು ಕುದುರೆಗಳನ್ನು ಕಟ್ಟಿದ ರಥದಲ್ಲಿ ಓಡುವ, ಕಾಮನಬಿಲ್ಲು ಮೂಡಿಸಿ ಜಗಕೆಲ್ಲ ಬೆಳಕು ಬೀರುವ ಸೂರ್ಯನ ವರ್ಣನೆಯಾಗಿದೆ.

'ಯುಗಾದಿ' ಕವಿತೆ ಸರಳವಾಗಿ ಪ್ರಾರಂಭವಾಗಿ, ಹತ್ತೂಕಡೆ ಗರಿಗೆದರಿ ಹಾರಾಡಿ, ಸಂಕೀರ್ಣವಾಗಿ ಮುಕ್ತಾಯವಾಗಿದೆ. ಆರಂಭದ ಲಘುವಾದ ಸಂಭಾಷಣೆಗೂ ಅಂತ್ಯದ ಗಂಭೀರವಾದ ಆಲೋಚನೆಗೂ ಅಜಗಜಾಂತರವಿದೆ. ಕವಿತೆಯ ಕೊನೆಯ ಭಾಗಗಳಲ್ಲಿ ಚಿಂತಿಸಿದಷ್ಟೂ ಕವನದ ಅರ್ಥವ್ಯಾಪ್ತಿ ಹಿಗ್ಗುತ್ತದೆ. ಇದೊಂದು ಸಾರ್ಥಕ ಕವಿತೆ. ಒಟ್ಟು ಕವಿತೆಯ ಬಂಧ ಐದು ಪರಿಚ್ಛೇದಗಳಲ್ಲಿ ಹಂಚಿಕೆಯಾಗಿದೆ.

೨

'ವಿಕಾರಿ' ಯುಗಾದಿಯನ್ನು ಕುರಿತ ಮತ್ತೊಂದು ಕವಿತೆ. 'ಯುಗಾದಿ' ಕವಿತೆಗಿಂತಲೂ 'ವಿಕಾರಿ' ಹೆಚ್ಚು ಸಂಗ್ರಹವಾಗಿದೆ, ಸರಳವಾಗಿದೆ. ಧ್ವನ್ಯಾರ್ಥದಲ್ಲಿ ಅದಕ್ಕೆ ಸರಿಮಿಗಿಲಾಗಿದೆ. ರಚನೆಯ ತಂತ್ರಗಳಲ್ಲಿ ಎರಡಕ್ಕೂ ಸಾಮ್ಯಗಳಿವೆ. ಇದರಲ್ಲಿಯೂ ಮುಕ್ತ ಛಂದಸ್ಸಿನದೇ ಕಾರುಬಾರು. ಆದರೆ ಪದಪ್ರಯೋಗ ಬಹಳ ಹಿಡಿತವಾಗಿದೆ. ಭಾವಕ್ಕೆ ತಕ್ಕಹಾಗೆ ಸಾಲುಗಳ ಹಾಸು ಬೀಸು ಏರಿಳಿತಗೊಂಡಿದೆ. ಹಿಂದಿನ ಕವಿತೆಯ ಕೆಲವು ಮಾತುಗಳು ಇಲ್ಲಿಯೂ ತಲೆಹಾಕಿವೆ, ಎರಡರ ವಸ್ತು ಒಂದೇ ಆದ್ದರಿಂದ ಹೀಗಾಗಿರಬಹುದು. ಸಂಖ್ಯೆಯಲ್ಲಿ ಒಂದೇ ಆದರೂ ಅಲ್ಲಿಯ ಉದ್ಧೃತ ಪದ್ಧತಿ ಇಲ್ಲಿಯೂ ಮುಂದುವರಿದಿದೆ.

ವಿಳಂಬಿಯ ಅನಂತರದ ಸಂವತ್ಸರ ವಿಕಾರಿ. ಇದರ ಆರಂಭ ಶಕ್ತಿಯುತವಾದ ಸಾರ್ಥಕ ಪ್ರತಿಮೆಗಳ ಕಲಾಶಾಲೆಯಂತಿದೆ.

'ಬಿಕೊ' ಎನ್ನುತಿದೆ, ಹಾಳು ನೀಲಿಯ ಸುರಿವ ಆಕಾಶ.
ಅಲ್ಲಿ ಒಂದೇ ಸಮನೆ ಚಕ್ರ ಹಾಕುವ ಹದ್ದು—
ಅದಕೆ ಮದ್ದು.

ದಿನನಿತ್ಯದ ಬದುಕು ಅಸಹ್ಯವಾದಾಗ, ನಿಸ್ಸಾರವಾದಾಗ ಏನೆಲ್ಲವೂ ಭಯಂಕರವಾಗುತ್ತದೆ. ಸುಂದರವಾಗಿರಬಹುದಾದ ಆಕಾಶದ ನೀಲಿಯೂ 'ಹಾಳುನೀಲಿ'ಯಾಗಿದೆ. ಆಕಾಶವೆಲ್ಲ ಬಿಕೊ ಅನ್ನುತ್ತಿದೆ. ಅದಕ್ಕೆ ಇಂಬುಕೊಡುವ ಹಾಗೆ ಸತ್ತಪ್ರಾಣಿಯನ್ನು ಅರಸಿ ಸುತ್ತುತ್ತಿದೆ ಹದ್ದು. ಅದರ ಚಲನೆ ಕ್ರೌರ್ಯದ ಕುರುಹಾಗಿದೆ. ಇದೇ ಅರ್ಥದಲ್ಲಿ 'ಏುತು ಸಂಸಾರ'ದಲ್ಲಿ ಕವಿ 'ಗಿಡುಗ'ವನ್ನು ಬಳಸಿದ್ದಾರೆ.

ವಕ್ರ ಹಳಿಗಳಗುಂಟ ಹೊಟ್ಟೆ ಹೊಸೆಯುತ ಹೊರಟು ನಿಂತಿಹುದು ಶೈಲು.
ಬಿಸಿಲ ನೆತ್ತಿಯು ಬಿರಿವ ಸಿಳ್ಳು; ಕಪ್ಪುಹೊಗೆ :
ಒಟ್ಟರಸಿ ಬಿಟ್ಟ ನಿಟ್ಟುಸಿರು.

ರೈಲು ಬದುಕಿನ ಚಲನೆಯ ಸಂಕೇತ. ಆದರೆ ಈ ರೈಲು ಚಲನೆ ಇಲ್ಲದ್ದು. ಸಮಾನಾಂತರ ವಾದ ಹಳಿಗಳಿಲ್ಲದ್ದು. ವಕ್ರಪಥವಿಡಿದ ಬದುಕು ತೆವಳುತ್ತಾ ಪ್ರತಿಯಿಲ್ಲದೆ ಸಾಗುತ್ತಿರುವುದು ಅಸಹ್ಯಕರವಾಗಿದೆ. ನಿಟ್ಟುಸಿರೆ ಇದಕ್ಕೆ ಉಸಿರಾಗಿದೆ.

ಬಡಕಲು ಗಿಡದ ಬುಡದಲ್ಲಿ ತಳಿರು ನಾಲಗೆ ಚಾಚಿ
ದಸದಸ ತೇಕುತಿದೆ ನಾಯಿ;
ಪಾತಾಳದಾಳಕ್ಕೆ ಸೇದು ಹಗ್ಗವ ಹಾಕಿ ಜಗ್ಗಿದಂತಿಹುದದರ ಬಾಯಿ.

ಬಡಕಲಾಗಿರುವ ಗಿಡದ ಬುಡದಲ್ಲಿ ಕೆಂಪು ನಾಲಗೆಯನ್ನು ಹೊರಚಾಚಿ ದಸದಸ ಉಸಿರಾಡುತ್ತಿರುವ ಧಡೂತಿ ನಾಯಿ. ಅದರ ಬಾಯಿ ಪಾತಾಳದ ನೆನಪು ಹುಟ್ಟಿಸುವಷ್ಟು ಭಯಂಕರವಾಗಿದೆ. ಬಿಸಿಲಿನ ಝಳ ಅತಿಯಾಗಿದೆ. ಒಟ್ಟಿನಲ್ಲಿ ವಿಕಾರಿ ಕಾಲಿಟ್ಟ ಗಳಿಗೆ ಹಿತಕರವಾಗಿಲ್ಲ.

ವಿಕಾರಿ ಬರುವ ಮೊದಲಿದ್ದ ಸ್ಥಿತಿ ಹೇಳಿಕೊಳ್ಳುವಂಥಾದ್ದಲ್ಲ. ಇಡೀ ವರ್ಷ ಜನತೆ ವಟಗುಟ್ಟುತ್ತಿತ್ತು, ವಟಗುಟ್ಟುವಿಕೆ ಎಲ್ಲ ಕಾಲದಲ್ಲೂ ಇರುವಂಥಾದ್ದೆ. ಅದರಲ್ಲಿ ಪೂರ್ಣ ಸತ್ಯವಿಲ್ಲದಿದ್ದರೂ ಎಲ್ಲವೂ ಸುಳ್ಳಾಗಿರುವುದಿಲ್ಲ. ವಟಗುಟ್ಟಿದ್ದರ ಸಾರಾಂಶ ಇಷ್ಟು: ಈ ಜಗತ್ತು ಕೆಟ್ಟುಹೋಗಿದೆ. ಬಾಳು ಎನ್ನುವ ಗಾಳಕ್ಕೆ ಪ್ರಾಣವೇ ಸಿಕ್ಕಿಕೊಂಡಿದೆ. ಅಂದರೆ ಬದುಕು ಹಿಂಸಾತ್ಮಕವಾಗಿದೆ. ನೆಪಕ್ಕೆ ಬೀಗ ಹಾಕಿದ್ದರೂ ಉಗ್ರಾಣ ಖಾಲಿಯಾಗಿದೆ. ಬರಿ ಚೀಲಗಳ ರಾಶಿಬಿದ್ದಿದೆ. ಅಂದರೆ ದವಸಧಾನ್ಯಗಳು ಇಲ್ಲ. ಜನರಲ್ಲಿ ನೀತಿನಿಯಮ ಮಾಯವಾಗಿದೆ. ಬೆಳೆದಿರುವ ಹೊಲ ನೋಡಿ ತಮ್ಮ ದನಗಳನ್ನು ಲೂಟಿಗೆ ಬಿಡುತ್ತಾರೆ. ತಾವು ಬೆಳೆಯುವಂತಿಲ್ಲ, ಬೆಳೆದವರು ನೆಮ್ಮದಿಯಿಂದ ಇರುವಂತಿಲ್ಲ, ಅಂದರೆ ಪುಂಡಾಟಿಕೆಗೇ ಕಾಲ. ಮನುಷ್ಯನ ಬುದ್ಧಿಯೂ ವಿಪರೀತವಾಗಿದೆ. ತಲೆಗೊಂದು ಮಾತು. ಸಮಾಜವನ್ನು ಸಂಘಟಿಸುವ ಬದಲು ಅದರ ವಿನಾಶಕ್ಕೆ ಆಸಕ್ತಿ ಹೆಚ್ಚುತ್ತಿದೆ. ಹಣಕ್ಕೆ ಪ್ರಾಧಾನ್ಯ ಬಂದಿದೆ. ನಡೆಯದ ನಾಣ್ಯವೂ ಮನುಷ್ಯನನ್ನು ಧಿಕ್ಕರಿಸಿ ನೋಡುತ್ತಿದೆ.

ಈಗ ಲೊಚಗುಟ್ಟಿದೆ ಹಲ್ಲಿ, ಒಳಿತೋ ಒಳಿತೆನ್ನು,

ಹೊಸ ಸಂವತ್ಸರದ ಬಗೆಗೆ ಕವಿ ಬಹಳ ಆಶಾಭಾವನೆಯನ್ನು ಇಟ್ಟುಕೊಂಡಿದ್ದಾರೆ.

ವಿಕಾರಿ ಸಂವತ್ಸರದಲ್ಲಿ ಪರಿಸ್ಥಿತಿ ಸುಧಾರಿಸಿದೆ. ಪ್ರಕೃತಿ ಹಿಂದಿನಂತಿಲ್ಲ. ಹೊಸ ವರ್ಷದ ಪ್ರಕೃತಿ ವರ್ಣನೆ ಮುಂದೆ ಸೊಗಸಾಗಿ ಮೂಡಿದೆ:

ತೊಟ್ಟು ನೀರಿರದ ಬಟ್ಟ ಬಯಲಿನಲಿ ಸುಂಟರಗಾಳಿ
ಕುಣಿವ ತಾಂಡವ ಮೂರ್ತಿ ಅಟ್ಟಹಾಸ,
ಮರ ಮರದ ಕೊಂಬೆಯಲಿ ಏನೊ ಪವಾಡ
ಚೆಂದುಟಿಯ ಮಂದಹಾಸ.

ಅಗ್ನಿಗೆಂಡವ ಹಾಯ್ದು ತಳಿರ ಪಲ್ಲಕ್ಕಿಯಲಿ
ಚಿಗುರು–ಹೂ-ಮಿಡಿ ಛತ್ರ ಚಾಮರವ ಹಿಡಿದು :
'ದೇವತಾ ಪೃಥಿವಿ'
ವರುಷ ವರುಷವು ತಪ್ಪದಂತೆ ಹೂವಿನ ತೇರು
ಬಾನ ಹರುಷಕೆ ನೆಲವು ತಾಯಿ ಬೇರು.
ಕೋಗಿಲೆಯು ಮೈದುಂಬಿ ಹೊಸಜೀವ ಬಂದಂತೆ
ಬರುವ ಸಂವತ್ಸರದ ಹೇಳಿಕೆಯ ಸಾರು.

ಕಾವ್ಯದ ಚಲನೆಯೇ ಇಲ್ಲಿ ಬದಲಾಗಿರುವುದನ್ನು ಗಮನಿಸಬೇಕು. ಬಂಧವೂ ಅಷ್ಟೆ. ಮುಕ್ತ ಛಂಧಸ್ಸೇ ಆದರೂ ಅನುಪ್ರಾಸ ಅಂತ್ಯಪ್ರಾಸಗಳ ಮೋಡಿ ಅಪಾರವಾಗಿದೆ, ಸಾಲುಗಳು ಸಂಗ್ರಹವಾಗಿ ಭಾವಗೀತಾತ್ಮಕತೆ ಹೆಚ್ಚಾಗಿದೆ. ಮೊದಲ ಎರಡು ಸಾಲುಗಳು ಮಳೆಯು ವರ್ಣನೆ. ಮಳೆ ಬಿದ್ದ ಮೇಲೆ ಪ್ರಕೃತಿಯ ವೈಭವ ಕೇಳಬೇಕೆ ? ಪವಾಡದಂತೆ ಮರದ ಕೊಂಬೆಯಲ್ಲೆಲ್ಲ ಹಸುರಿನ ಚಿಗುರು. ಅದೇ ಮುಂದುವರಿದು ಹೂ ಮಿಡಿ ಛತ್ರ ಚಾಮರ ವಾಗಿ ಚೆಲುವು ತುಂಬಿದೆ, ಇಡೀ ಪ್ರಕೃತಿ ದೇವತೆಯ ಮಡಿಲು, 'ದೇವತಾ ಪೃಥಿವಿ' ಮಧುರ ಚೆನ್ನರ ಕವನವೊಂದರ ಶೀರ್ಷಿಕೆ. ಇಲ್ಲಿ ಸಂದರ್ಭೋಚಿತವಾದ ಬಳಕೆ, ಎಲ್ಲಿ ನೋಡಿದರೂ ಹೂವಿನ ತೇರು, ಇದಕ್ಕೆ ಕಾರಣ ನೆಲ ಮತ್ತು ಆಕಾಶ. 'ಬಾನ ಹರುಷಕೆ ನೆಲವು ತಾಯಿ ಬೇರು' ಧ್ವನಿಪೂರ್ಣವಾದ ಅಭಿವ್ಯಕ್ತಿ. 'ಯುಗಾದಿ' ಕವಿತೆಯ ಹಾಗೆಯೇ ಇಲ್ಲಿಯೂ ಕೋಗಿಲೆಯ ದನಿ ಸಾರಿದೆ.

ಕವಿ ವಿಕಾರಿಯನ್ನು ಸ್ವಾಗತಿಸುವ ಭರದಲ್ಲಿ ಹಿಂದಿನ ವಿಳಂಬಿಯನ್ನು ತಿರಸ್ಕರಿಸಿಲ್ಲ. ಅದರ ಉತ್ತರಾಧಿಕಾರಿಯಾಗಿ ಬಂದದ್ದಲ್ಲವೆ ಇದು ? ವಿಳಂಬಿಯ ನೆನಪು ಕೂಡ ಕವಿಗೆ ಪ್ರಿಯವಾಗಿದೆ. ಅಲ್ಲದೆ ವಿಳಂಬಿ ಸಂವತ್ಸರದ ಉದ್ದೇಶವೂ ಘನವಾದುದಾಗಿತ್ತು. ಅದು ಹೀಗಿದೆ : ಹಿಂದಿನ ಯುಗಾದಿ, ಯುಗಯುಗದ ಮರೆವನ್ನು ಕೆದಕಿ ಹೊಸಚೈತನ್ಯವನ್ನು ನೀಡುವ ಸಾಂಕೇತಿಕ ಶಕ್ತಿಯಾಗಿತ್ತು. ಆ ಸಮಯ ನವೋತ್ಸಾಹದ ಚಿಲುಮೆ ; ಜಡತ್ವಕ್ಕೆ ಪೂರ್ಣವಿರಾಮ. ಬದುಕು ಸಮೃದ್ಧಿಯಾಗಬೇಕು, ಬೇಸತ್ತ ಬದುಕಿಗೆ ಆಸರೆ ದೊರೆಯ ಬೇಕು. ಸಮರಸ ಭಾವನೆ ಮೂಡಬೇಕು ಎಂಬುದೇ ವಿಳಂಬಿಯ ಉದ್ದೇಶವಾಗಿತ್ತು,

ಅದಕ್ಕೆ ಬೆಂಬಲವಾಗಿ ಬಂದೆಯಾ,
ಬಾ, ವಿಕಾರಿ.

ವಿಳಂಬಿಗೆ ಬೆಂಬಲವಾಗಿ ಬಂದ ವಿಕಾರಿಯನ್ನು ಆತ್ಮೀಯತೆಯಿಂದ ಕವಿ ಸ್ವಾಗತಿಸಿದ್ದಾರೆ. 'ಬಾ ವಿಕಾರಿ'ಯ ರೀತಿಯಲ್ಲಿಯೇ 'ಬಾ ಯುಗಾದಿ' ಬಳಕೆಯಾಗಿರುವುದನ್ನು ನೆನಸಿಕೊಳ್ಳ ಬಹುದು. ಮಾನವಕುಲಕ್ಕೇ ಮುದವನ್ನು ನೀಡಲು ಬರುವ ಹೊಸ ಸಂವತ್ಸರಕ್ಕೆ 'ವಿಕಾರಿ'ಎನ್ನುವ ಹೆಸರೆ ! ವಿಕಾರವಾದದ್ದನ್ನೇನೂ ಅದು ಮಾಡುವುದಿಲ್ಲ. ಆದ್ದರಿಂದ ಆ ಹೆಸರು ಅದಕ್ಕಿಂತ ನಮಗೇ ಹೆಚ್ಚಾಗಿ ಹೋಲುತ್ತದೆ.

ವಿಕಾರಿಯ ಬಗೆಗೆ ಕವಿಗೆ ಮಹದಾಕಾಂಕ್ಷೆ. ಹೊಸ ಸಂವತ್ಸರಕ್ಕೆ ಕವಿ ಹೀಗೆ ಹಾರೈಸಿದ್ದಾರೆ :

ಒಳಗು ಹೊರಗೂ ನಿನ್ನ ಹರಿದು ತಿನ್ನುವರಿಹರು, ಬಲು ಹುಷಾರಿ,
ನೀನಾಗದಿರು ಕಂಡ ಕಂಡವರ ಮೋರೆ ಪರಚಿಕೊಳ್ಳುವ ಮಾರಿ,
ಆಗು ಸುವಿಚಾರಿ, ಜಗಕೆ ಮಂಗಲಕಾರಿ,
ಭೂತ ಭವಿಷತ್ತುಗಳ ಕಾದಾಟದಲ್ಲಿ ನಿನ್ನ ವರ್ತಮಾನದ ಜೋಲಿ ತಪ್ಪದಿರಲಿ
ನೀನಾಗು ತುಮುಲದಲಿ ತಲೆಯುನೆತ್ತುವ ಕಲಿ
ನಿನ್ನ ಹೊಂಗನಸುಗಳು ನನಸಾಗಲಿ.

'ಹರಿದು ತಿನ್ನುವರು' ಮಾತುಗಳು ಹರಿತವಾಗಿವೆ. 'ಹುಷಾರಿ'ಹಿಂದಿನ 'ಯುಗಾದಿ'ಯಲ್ಲೂ ಬಂದಿದೆ. '........ ಜೋಲಿತಪ್ಪದಿರಲಿ' ಸಾಲಿನ ಮಾತುಗಳು ಕವಿಯಲ್ಲಿ ವಾಸ್ತವಿಕ ಪ್ರಜ್ಞೆ ಸದಾ ಜಾಗೃತವಾಗಿರುವುದನ್ನು ಸೂಚಿಸುತ್ತವೆ. ವರ್ತಮಾನದ ಬದುಕು ಆಯತಪ್ಪ ದಿರುವುದು ಮುಖ್ಯ. ಹೋರಾಟದಲ್ಲಿ ತಲೆಯೆತ್ತಬಲ್ಲ ವೀರನಾದರೆ ಕನಸು ನನಸಾಗುತ್ತದೆ. ಒಟ್ಟನಲ್ಲಿ ಹೊಸ ಸಂವತ್ಸರದ ಬದುಕು ಮಂಗಳಕರವಾಗಲಿ ಎಂಬುದು ಕವಿಯ ಹಾರೈಕೆ.

'ವಿಕಾರಿ'ಯ ಅಂತ್ಯ 'ಯುಗಾದಿ'ಯಷ್ಟು ಸಂಕೀರ್ಣವಾಗಿಲ್ಲ. ಪ್ರಾರಂಭದ ಪ್ರತಿಮಾವಿಧಾನ ಕ್ರಮೇಣ ಕಡಮೆಯಾಗಿದೆ. ಕೊನೆಯ ಭಾಗವಂತೂ ಕೇವಲ ಹೇಳಿಕೆ ಯಾಗಿದೆ. ಇದರಲ್ಲಿ ಪರಿಚ್ಛೇದವಿಲ್ಲ. ಸ್ಥೂಲವಾಗಿ ನಾಲ್ಕು ಹಂತಗಳನ್ನು ಕಲ್ಪಿಸಬಹುದು. 'ಯುಗಾದಿ'ಯಲ್ಲಿ ಕಂಡು ಬರುವ ಪ್ರಶ್ನೆಗಳ ಸುರಿಮಳೆ, ಸಂಭಾಷಣೆಯ ಆಧಿಕ್ಯ ಇಲ್ಲಿಲ್ಲ. ಸರಳತೆಯೇ ಈ ಕವಿತೆಯ ಮಹತ್ವವಾಗಿದೆ. ಸಂಕೀರ್ಣತೆಯಿಂದ 'ಯುಗಾದಿ' ಸಾರ್ಥಕ ವಾದರೆ, ಸರಳತೆಯಿಂದ 'ವಿಕಾರಿ' ಸಾರ್ಥಕವಾಗಿದೆ. ಎರಡು ಕವಿತೆಗಳ ಮೂಲಧಾತು ಒಂದೆ. ಒಂದೇ ವಸ್ತುವಿನ ಎರಡು ಮುಖಗಳಿವು. ಇವುಗಳ ತೌಲನಿಕ ಅಭ್ಯಾಸದಿಂದ ಕಣವಿ ಯವರ ಸದಭಿರುಚಿಯನ್ನು ಕೆಲವು ಸಮಾನಾಂಶಗಳನ್ನೂ ಗುರುತಿಸಬಹುದು.

ಚೆನ್ನವೀರ ಕಣವಿಯವರು ಯುಗಾದಿಯನ್ನು ಕುರಿತು ಕವಿತೆಗಳನ್ನೇಕೆ ರಚಿಸಿದರು? ಒಂದು ವಿಷಯದ ಬಗೆಗೆ ಒಮ್ಮೆ ಬರೆದ ಮೇಲೆ ಮತ್ತೆ ಬರೆಯುವುದೇನಿದೆ ? ಅದರ ಆಗತ್ಯವಿದೆಯೇ ಯುಗಾದಿಯನ್ನು ಕುರಿತು ಪೂರ್ಣಚಿತ್ರವನ್ನೂ ಕಣವಿಯವರು ಇನ್ನೂ ನಿರ್ಮಿಸಿಲ್ಲವೆ? ಈಗಿರುವಂತೆ ಈ ಕವಿತೆಗಳು ಅಪೂರ್ಣವೆ? ಇಂಥ ಸಮಸ್ಯೆಗಳು ಏಳುತ್ತವೆ. ಇವುಗಳಿಗೆ ಹೀಗೆ ಉತ್ತರ ಕಂಡುಕೊಳ್ಳಬಹುದೆಂದು ಕಾಣುತ್ತದೆ ; ಕಣವಿಯವರ ಯುಗಾದಿ ಕವಿತೆಗಳು ಕೇವಲ ಪ್ರಕೃತಿ ಗೀತೆಗಳಲ್ಲ. ಯುಗಾದಿಯ ವರ್ಣನೆಯೊಡನೆ ವಾಸ್ತವಿಕ ಬದುಕಿನ ವಿಶ್ಲೇಷಣೆಯೂ ಮೇಳವಿಸಿರುವುದು ಇವುಗಳ ವಿಶೇಷತೆ. ಹಾಗಾಗಿ ಪ್ರತಿವರ್ಷದ ಯುಗಾದಿಯೂ ಬೇರೆ ಬೇರೆಯಾಗಿರುವಂತೆ ಕಾಣುತ್ತದೆ. ವರ್ಷಗಳ ಅಂತರದಲ್ಲಿ ಬದುಕಿನ ಅನುಭವವೂ ವ್ಯತ್ಯಾಸವಾಗಿರುತ್ತದೆ. ಒಂದೇ ವಸ್ತುವನ್ನು ವಿವಿಧ ಆಯಾಮಗಳಿಂದ ವಿವಿಧ ಪ್ರತಿಮೆಗಳಿಂದ ಕಂಡರಿಸುವುದು ಕಣವಿಯವರ ಕಾವ್ಯ ಮನೋ ಧರ್ಮದ ಜಾಯಮಾನ. ಈ ಹಿನ್ನೆಲೆಯಲ್ಲಿ ಕಣವಿಯವರ ಯುಗಾದಿ ಕವಿತೆಗಳ ಸಂಖ್ಯೆ ಹೆಚ್ಚಾದರೆ ಆಶ್ಚರ್ಯವಿಲ್ಲ.

## ಶಾಂತಿನಾಥ ದೇಸಾಯಿ

# ಕಣವಿಯವರ ಸುನೀತಗಳು

೧

ಕಣವಿಯವರಿಗೆ ಸಾನೆಟ್ಟೆಂದರೆ ಅತ್ಯಂತ ಪ್ರಿಯವಾದ ಕಾವ್ಯಪ್ರಕಾರ. 'ಕಾವ್ಯ ರಚನೆಯ ಪ್ರಾರಂಭದಿಂದಲೂ ನನ್ನ ಮನಸ್ಸನ್ನಾಕರ್ಷಿಸಿದ ...ಕಾವ್ಯಪ್ರಕಾರ' ಇದು ಎಂದು ಕಣವಿಯವರೇ **ಎರಡು ದಡ**ದ ಮುನ್ನುಡಿಯಲ್ಲಿ ಹೇಳಿದ್ದಾರೆ. ಅವರ ಮೊದಲ ಸಂಗ್ರಹವಾದ **ಕಾವ್ಯಾಕ್ಷಿ** (೧೯೪೯)ಯಲ್ಲೇ ೧/೪ ದಷ್ಟು ಸಾನೆಟ್ಟುಗಳಿವೆ; ಮುಂದೆ **ಆಕಾಶಬುಟ್ಟಿ** (೧೯೫೩)ಯಲ್ಲಿ ೧/೪ ದಷ್ಟು, **ಮಧುಚಂದ್ರ**(೧೯೫೪)ದಲ್ಲಿ ೧/೫ ದಷ್ಟು, **ದೀಪಧಾರಿ** (೧೯೫೬)ಯಲ್ಲಿ ೧/೬ ದಷ್ಟು, **ನೆಲ-ಮುಗಿಲು** (೧೯೬೫)ನಲ್ಲಿ ೧/೩ ದಷ್ಟು, **ಎರಡು ದಡ** (೧೯೭೬)ದಲ್ಲಿ ೧/೩ ದಷ್ಟು—ಹೀಗೆ ಒಟ್ಟು ಕವಿತೆಗಳ ಸುಮಾರು ೧/೩ ಅಥವಾ ೧/೪ ದಷ್ಟು (ಸುಮಾರು ೭೦) ಸುನೀತಗಳನ್ನು ಕಣವಿಯವರು ರಚಿಸಿದ್ದಾರೆಂಬುದನ್ನು ಗಮನಿಸಿದಾಗ ಕಣವಿಯವರಿಗೆ ಸಾನೆಟ್ಟಿನ ಮೇಲೆ ಎಷ್ಟು ಪ್ರೀತಿ ಎಂದು ಗೊತ್ತಾಗಿಬಿಡುತ್ತದೆ. ನವ್ಯಕಾವ್ಯದತ್ತ ಅವರ ಮನಸ್ಸು ಹೊರಳಿದಾಗ ಸಾನೆಟ್ಟು ಸ್ವಲ್ಪ ಉಪೇಕ್ಷಿತವಾಗಿತ್ತೇನೋ (**ಮಣ್ಣಿನ ಮೆರವಣಿಗೆ** [೧೯೬೦]ಯಲ್ಲಿ ಒಂದೂ ಸಾನೆಟ್ಟಿಲ್ಲ), ಆದರೆ ಮುಂದೆ ಮರಳಿ ತಮ್ಮ ಸಂಗಾತಿಯಾದ ಸುನೀತವನ್ನೇ ಕಣವಿಯವರು ಆಗಾಗ್ಗೆ ಆಶ್ರಯಿಸಿದ್ದನ್ನು ನಾವು ನೋಡುತ್ತೇವೆ.

ಸಾನೆಟ್ಟಿನ ಮೇಲೆ ಕಣವಿಯವರಿಗೆ ಇಷ್ಟೇಕೆ ಪ್ರೀತಿ ? ಎಂದು ಮೊದಲಿಗೇ ಪ್ರಶ್ನೆ ಕೇಳಬಹುದು. ಈ ಪ್ರಶ್ನೆಗೆ ಕಣವಿಯವರ ಸ್ವಂತ ಉತ್ತರವೆಂದರೆ : "ಈ ಕಾವ್ಯಪ್ರಕಾರ ಇಂದು ರೂಪವೈವಿಧ್ಯದಿಂದಲೂ, ವಸ್ತುವೈವಿಧ್ಯದಿಂದಲೂ ಕನ್ನಡದಲ್ಲಿ ಕಂಗೊಳಿಸುವಂತಾಗಿದೆ...ಮಿತವಾದ ಚೌಕಟ್ಟಿನಲ್ಲಿ ಹಿತವಾದ ಚಿತ್ರಕಶಕ್ತಿಯಿಂದ ಭಾವ-ವಿಚಾರಗಳು ಸಮ್ಮಿಲನಗೊಂಡು ತನ್ನ ಕಲೆಗಾರಿಕೆಯನ್ನು ಮೆರೆಯುವ ಈ ರೂಪ" ತಮಗೆ ಮೊದಲಿನಿಂದಲೂ ಪ್ರಿಯ ಹಾಗೂ "ಇವುಗಳ ಕೆತ್ತನೆಯ ಕೆಲಸದಲ್ಲಿ ನಾನು ಸಂತೋಷಪಟ್ಟಿದ್ದೇನೆ," ಎಂದು ಕಣವಿಯವರು ಮೇಲೆ ಹೇಳಿದ ಮುನ್ನುಡಿಯಲ್ಲಿ ವಿಶದಪಡಿಸಿದ್ದಾರೆ. ಅವರ ಈ ಹೇಳಿಕೆಯ ಮೇಲಿಂದ ಮೂರು ಮಾತುಗಳು ಸ್ಪಷ್ಟವಾಗುತ್ತವೆ: (೧) ಕನ್ನಡದ ರಮ್ಯ ಸಂಪ್ರದಾಯದ ಒಂದು ಅತ್ಯಂತ ಆಕರ್ಷಕವಾದ ಛಂದೋರೂಪವಾದ ಸಾನೆಟ್ಟು (ಮಾಸ್ತಿ, ಬೇಂದ್ರೆ, ಪುಟ್ಟಪ್ಪ, ಗೋಕಾಕ, ಕೆ. ಎಸ್. ಎನ್. ಪು.ತಿ.ನ. ಮುಂತಾದ ಹಿರಿಯ ಕವಿಗಳು ಇಂಗ್ಲೆಂಡದ ಅಥವಾ ಯುರೋಪದ ಈ ಕಾವ್ಯರೂಪಕ್ಕೆ ಕನ್ನಡದ

ದೀಕ್ಷೆ ಕೊಟ್ಟು ಆಧುನಿಕ ಕಾವ್ಯದಲ್ಲಿ ಅದಕ್ಕೆ ಒಂದು ಸನ್ಮಾನದ ಸ್ಥಾನ ಕಲ್ಪಿಸಿದ್ದರು—ಇಂಥ ಈ ಸಾನೆಟ್ಟು) ರಮ್ಯ ಸಂಪ್ರದಾಯದ ಒಬ್ಬ ಉತ್ಕೃಷ್ಟ ತರುಣ ಸಾಧಕರಾದ ಕಣವಿಯವರನ್ನು ಪ್ರಾರಂಭದಿಂದಲೇ ವಶಪಡಿಸಿಕೊಂಡದ್ದರಲ್ಲಿ ಆಶ್ಚರ್ಯವೇನಿಲ್ಲ. (೨) ಹಲವಾರು ಛಂದೋಬಂಧಗಳಲ್ಲಿ ಸಾನೆಟ್ಟು ಕಣವಿಯವರಿಗೆ ಪ್ರಿಯವಾಗಲಿಕ್ಕೆ ಇನ್ನೊಂದು ಕಾರಣವೆಂದರೆ ಸಾನೆಟ್ಟಿನ ಪ್ರಕಾರಕ್ಕೂ ಕಣವಿಯವರ ಮೂಲ ಸಂವೇದನೆಗೂ ಒಂದು ನಿಕಟವಾದ ಸಂಬಂಧವಿರಬೇಕು. ಕಣವಿಯವರು ರಮ್ಯಸಂಪ್ರದಾಯದ ಕವಿಗಳಾದರೂ ಅವರಲ್ಲಿ ಎಂದಿಗೂ ಭಾವಾವೇಶವಿಲ್ಲ : ಹಾಗೆ ನೋಡಿದರೆ ಅವರಲ್ಲಿ ಭಾವನೆ—ಚಿಂತನೆಗಳ ಸಮತೋಲ ಮೊದನಿಲಿಂದಲೂ ಕಂಡು ಬರುವಂತಹದು. ಅವರ ಸಂವೇದನೆಯ ಈ ಮೂಲ ಗುಣವನ್ನು ಕವಿ ಗೋಪಾಲ ಕೃಷ್ಣ ಅಡಿಗರು ಹಿಂದೆಯೇ ಗುರುತಿಸಿದ್ದಾರೆ. ಆಕಾಶಬುಟ್ಟಿಯನ್ನು ವಿಮರ್ಶಿಸುತ್ತ ಅವರು ಹೇಳಿದ್ದೇನೆಂದರೆ : "ಈ ಕವಿಯ ಮನೋಧರ್ಮ ಪ್ರಶಾಂತಿಯದಲ್ಲದೆ, ರಭಸದ್ದಲ್ಲ. ಎಲ್ಲಿ ಚಿಂತನೆ, ಸೂಕ್ಷ್ಮತೆ, ನಯ ಬೇಕೋ ಅಲ್ಲಿ ಈ ಕವಿಯ ಕಾವ್ಯ ಯಶಸ್ವಿಯಾಗುತ್ತದೆ." ಅವರ ಈ ಮನೋಧರ್ಮಕ್ಕೆ ಅತ್ಯಂತ ತಕ್ಕುದಾದ ಕಾವ್ಯ ಪ್ರಕಾರವೆಂದರೆ ವೈಚಾರಿಕ ಭಾವಗೀತೆ (intellectual lyric)ಯಾದ ಸಾನೆಟ್ಟು. ೧೪ ಸಾಲುಗಳ ಒಂದು ನಿರ್ದಿಷ್ಟವಾದ ಪ್ರಾಸ ಲಯಗಳ ಬಂಧವಿದ್ದಂಥ, ನಿಷ್ಠುರವಾದ ಕಾವ್ಯರೂಪವಾದ ಸಾನೆಟ್ಟನ್ನು ಬರೆಯುವಾಗಲೇ ಕಾವ್ಯಶಕ್ತಿಯ ಜೊತೆ ಬುದ್ಧಿಶಕ್ತಿಯೂ ಕೆಲಸ ಮಾಡಬೇಕಾಗುತ್ತದೆ. ಕಣವಿಯವರ ಸಂವೇದನೆಯಲ್ಲಿ ಈ ಎರಡೂ ಶಕ್ತಿಗಳ ಮಧುರ ಸಂಗಮವಿದೆ. ಅಂತೆಯೇ ಸಾನೆಟ್ಟು ಅವರ ಮೂಲ ಶಕ್ತಿಗಳ ಅಭಿವ್ಯಕ್ತಿಗೆ ಯೋಗ್ಯವಾದ ಮಾಧ್ಯಮವಾಗಿದೆ. (3) ಕಣವಿಯವರಿಗೆ ಸಾನೆಟ್ಟಿನ 'ಕೆತ್ತನೆಯ ಕೆಲಸ'ದಲ್ಲಿ ಅತ್ಯಂತ ಸಂತೋಷ—ಯಾಕೆ ? ಕಾವ್ಯಬರೆಯುವದೆಂದರೆ ಅವರಿಗೆ ಉಸಿರಾಡಿಸುವಷ್ಟು ಸಸಾರ. ಹುಟ್ಟಿನಿಂದಲೇ ಪ್ರತಿಭೆಯನ್ನು ಪಡೆದುಕೊಂಡು ಬಂದ ಕಣವಿಯವರಿಗೆ ಶಬ್ದಸಂಪತ್ತು ಹಾಗೂ ರಚನಾ ಕೌಶಲ್ಯ ಬಹು ಬೇಗನೆ ಅವಗತವಾಗಿಬಿಟ್ಟವು. ಇಂಥ ಸಿದ್ಧಕವಿಗೆ ನಿಜವಾದ ಆಹ್ವಾನ ಕೊಡುವ ಕಾವ್ಯರೂಪವೆಂದರೆ ಅತ್ಯಂತ ಕಠಿಣವಾದ ಸಾನೆಟ್ಟೇ. ಅಂತೇ ಈ ಆಹ್ವಾನ ಸ್ವೀಕರಿಸಿ ಅದರ ಮೇಲೆ ಪ್ರಭುತ್ವ ಸಂಪಾದಿಸುವುದೆಂದರೆ ಕವಿಗೆ ಅತ್ಯಂತ ಸಂತೋಷದ ಸಂಗತಿ. 'ಚಿನ್ನಗನ್ನಡದ ಅಕ್ಕಸಾಲಿಗ' (ಗೌರೀಶ ಕಾಯ್ಕಿಣಿ) ರಾದ ಕಣವಿಯವರಿಗೆ ಒಂದು ಅತ್ಯಂತ ಸೂಕ್ಷ್ಮವಾದ, ನಾಜೂಕಾದ, ಮಾಡಲು ಕಠಿಣವಾದ, ಒಂದು ಆಭರಣ ಮಾಡುವದೆಂದರೆ ಅತ್ಯಂತ ಸುಖದ, ತೃಪ್ತಿಯ ಮಾತು. ಅಂತೆಯೇ ಕಣವಿಯವರ ಪ್ರತಿಭೆ ಆಗಾಗ್ಗೆ ಅಷ್ಟಪಟ್ಪದಿಯನ್ನು ಆಶ್ರಯಿಸುವ ಅಭ್ಯಾಸವನ್ನಿಟ್ಟುಕೊಂಡಿತು.

ಈ ಮೂರು ಮಾತುಗಳ ಹೊರತಾಗಿ, ಕಣವಿಯವರ ಒಟ್ಟೂ ಸಾಧನೆಯನ್ನು ಗಮನಿಸಿದಾಗ, ಇನ್ನೊಂದು ಮಾತು ಸ್ಪಷ್ಟವಾಗುವದು. ಕಣವಿಯವರು ಕನ್ನಡನಾಡಿನ ಸಾಹಿತ್ಯಿಕ ಬೆಳವಣಿಗೆಯೊಡನೆ ಸಾಧಿಸಿದ ತಾದಾತ್ಮ್ಯದ ಪರಿಣಾಮವಾಗಿ ಕನ್ನಡದ ಅನಭಿಷಿಕ್ತ 'ರಾಜ'ಕವಿ (poet laureate) ಯಾಗಿ ಕೆಲಸ ಮಾಡುವ ಹೊಣೆಗಾರಿಕೆ

ಅವರ ಮೇಲೆ ಬಿದ್ದಿತು. ಅಂತೆಯೇ ಅವರು ಆಗಾಗ್ಗೆ ಸಾರ್ವಜನಿಕ ಭಾವದ ಅಭಿವ್ಯಕ್ತಿ ಗಾಗಿ ಸಾಂದರ್ಭಿಕ (occasional) ಕಾವ್ಯ ಬರೆಯಬೇಕಾಯಿತು. (ಆದರೆ ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸಾರ್ವಜನಿಕ ಭಾವ ಅವರ ಮೇಲೆ ಹೊರಗಿನಿಂದ ಹೇರಲ್ಪಡಲಿಲ್ಲ. ಕಣವಿಯವರ ವಿಷಯದಲ್ಲಿ ಸಾರ್ವಜನಿಕ ಭಾವವೂ ವೈಯಕ್ತಿಕ ಭಾವ ವಾಗಿಯೇ ಪರಿವರ್ತನೆಗೊಳ್ಳುತ್ತದೆ.) ಸ್ವಾತಂತ್ರ್ಯಸಂಗ್ರಾಮದಂಥ ಸಾರ್ವಜನಿಕ ವಿಷ ಯದ ಮೇಲೆ ಬರೆಯುವ ಪ್ರಸಂಗ ಬಂದಾಗಾಗಲಿ, ಗಾಂಧಿ, ಶಾಸ್ತ್ರಿ, ಶ್ರೀ ಅರವಿಂದ ರಂಥ ಮಹಾತ್ಮರ ಬಗ್ಗೆ ಬರೆಯ ಬೇಕಾದಾಗಾಗಲಿ, ಇನ್ನೂ ಹತ್ತಿರದ ಹಿರಿಯರಾದ ಬೇಂದ್ರೆ, ಮುಗಳಿ, ತೀನಂಶ್ರೀ ಮುಂತಾದ ಆತ್ಮೀಯರ ಬಗ್ಗೆ ಬರೆಯುವ ಪ್ರಸಂಗ ಬಂದಾಗಾಗಲಿ ಕಣವಿಯವರಿಗೆ ಸಾನೆಟ್ಟು ಒಂದು ಅತ್ಯಂತ ಪ್ರಭಾವಿಯಾದ ಅಭಿವ್ಯಕ್ತಿ ಮಾಧ್ಯಮವಾಯಿತು. ಪ್ರಸಂಗಗಳ ಅಥವಾ ವ್ಯಕ್ತಿಗಳ ಗಾಂಭೀರ್ಯಕ್ಕೆ ಯೋಗ್ಯವಾದ ಕಾವ್ಯರೂಪವೆಂದರೆ ಗಾಂಭೀರ್ಯದ ವಸ್ತುಪ್ರತಿರೂಪವಾದ ಅಷ್ಟಷಟ್ಪದಿಯೇ ಸೈ. ಅಂತೇ ಸುನೀತ ವೀರರಾದ ಚೆನ್ನವೀರರು ನಮ್ಮ ಒಳ್ಳೇ ಪ್ರಾಸಂಗಿಕ ಕವಿಗಳೂ ಹೌದು.

೨

ಕಣವಿಯವರು ತಮ್ಮ ಕಾವ್ಯಜೀವನದ ಮೊದಲ ಹಂತದಲ್ಲಿಯೇ ಸಾನೆಟ್ಟನ್ನು ಅತ್ಯಂತ ಸಲೀಸಾಗಿ, ಅತ್ಯಂತ ಕುಶಲತೆಯಿಂದಲೂ ಪ್ರಭುತ್ವದಿಂದಲೂ ಉಪಯೋಗಿಸು ವುದನ್ನು ನೋಡುತ್ತೇವೆ. ಸಾನೆಟ್ಟಿನಲ್ಲಿ ಅಭಿವ್ಯಕ್ತಗೊಳ್ಳುವ ಅವರ ಆಗಿನ ವಸ್ತುಗಳೆಂದರೆ ಪ್ರಾಮುಖ್ಯವಾಗಿ ೧)ಸಾರ್ವಜನಿಕ ರಾಜಕೀಯ ವಿಷಯಗಳು ; ೨) ಭಾರತದ ಮಹಾತ್ಮರು ೩) ಪ್ರಕೃತಿ ಹಾಗೂ ೪) ಕಲೆ. ಇಲ್ಲಿ ಗಮನಿಸಬೇಕಾದ ವಿಷಯವೆಂದರೆ ವೈಯಕ್ತಿಕ ಅನು ಭವದ ಅಭಿವ್ಯಕ್ತಿಗಾಗಿ ಅವರು ಸಾನೆಟ್ಟನ್ನು ಉಪಯೋಗಿಸುವುದು ತೀರ ವಿರಳ: ಕಾವ್ಯಾಕ್ಷಿ ಯಲ್ಲಿ 'ತಂಗಿಯ ಓಲೆಯನ್ನೋದಿ', 'ಆಕಾಶ ಬುಟ್ಟಿ'ಯಲ್ಲಿ 'ಉರುಳುರುಳು ಕಂಬನಿಯೇ' ಇವೇ ಎರಡು ವೈಯಕ್ತಿಕವೆನ್ನಬಹುದಾದ ಸುನೀತಗಳು. 'ನೆಲಮುಗಿಲಿ'ನಲ್ಲಿ ಸುನೀತಗಳ ಮುಖಾಂತರ ಕವಿ ತಾತ್ವಿಕ ಚಿಂತನೆಯನ್ನು ವ್ಯಕ್ತಗೊಳಿಸಲು ಯತ್ನಿಸುತ್ತಾನೆ. ನೆಲಮುಗಿಲಿ ನಲ್ಲಿ ಹಾಗೂ 'ಎರಡು ದಡ'ದಲ್ಲಿ ಬರುವ ವ್ಯಕ್ತಿ ಕೇಂದ್ರವಾದ ಸುನೀತಗಳು ವೈಶಿಷ್ಟ್ಯಪೂರ್ಣ ವಾಗಿವೆ ; ಮೊದಲಿನ ಜಡವಾದ ಗಾಂಭೀರ್ಯ ಮಾಯವಾಗಿ ಒಂದು ರೀತಿಯ ಆತ್ಮೀಯ ಸಲಿಗೆಯಿಂದ ಜೀವಂತವಾಗಿವೆ. ಕಣವಿಯವರ ಕೇಂದ್ರದೃಷ್ಟಿ ರಮ್ಯವಾದದ್ದು — ಬೆರಗು, ಆಶ್ಚರ್ಯ, ಉತ್ಸಾಹ, ಆದರೆ ಇವೇ ಅವರ ಸ್ಥಾಯೀ ಭಾವಗಳು. ವ್ಯಕ್ತಿಗಳನ್ನು ಚಿತ್ರಿಸು ವಾಗ ನೀರು ಬಿಟ್ಟು ಹಾಲು ಬೇರ್ಪಡಿಸುವ ಹಂಸ-ಕೌಶಲ್ಯ ಕಣವಿಯವರದು. ಎಲ್ಲಿಯೂ ಯಾರ ಮನಸ್ಸೂ ನೋಯಬಾರದು — ಎಂಬ ಅಹಿಂಸಾತತ್ವ ಅವರದು. ಟೀಕೆ, ವ್ಯಂಗ್ಯ ಅವರ ಮನೋಧರ್ಮಕ್ಕೆ ಹೊರತಾದವುಗಳು. ಹೀಗಿದ್ದಾಗ್ಯೂ ಅವರ ವ್ಯಕ್ತಿಚಿತ್ರಣ ಯಶಸ್ವಿಯಾಗುವದು ಅವರ ಸುಂದರ ಕಲಾತ್ಮಕತೆಯ ಮೂಲಕ — ವ್ಯಕ್ತಿಯ ಹೊರಗಿನ

ಹಾಗೂ ಒಳಗಿನ ವ್ಯಕ್ತಿತ್ವಗಳನ್ನು ಕೂಡಿಯೇ ಸ್ಪಂದಿಸುವ ಚಮತ್ಕೃತಿಯ ಮೂಲಕ. ಅವರ ತಾತ್ವಿಕ ಅಷ್ಟಷಟ್ಪದಿಗಳು ತತ್ವದ ದೃಷ್ಟಿಯಿಂದ ಸರಳವಾಗಿದ್ದರೂ, ಕಲೆಯ ದೃಷ್ಟಿಯಿಂದ ಅತ್ಯಂತ ಸಂಕೀರ್ಣ ಹಾಗೂ ಸಾಂದ್ರವಾಗಿವೆ, ಅನುಭವದ ದೃಷ್ಟಿಯಿಂದ ಗಹನವಾಗಿವೆ.

ಕಣವಿಯವರು ಸಾನೆಟ್ಟಿನ ಆಕೃತಿಯ ದೃಷ್ಟಿಯಿಂದ ಸಾಕಷ್ಟು ಪ್ರಯೋಗ ಮಾಡಿದರೂ, ಅವರಿಗೆ ಪ್ರಿಯವಾದ ಬಂಧವೆಂದರೆ : ಅ ಆ ಆ ಅ। ಇ ಈ ಈ ಇ। ಉ ಊ ಊ ಉ। ಎ ಎ। ಈ ನಾಲ್ಕು ಗುಂಪುಗಳಲ್ಲಿಯ ಪ್ರತಿಯೊಂದು ಸಾಲಿನ ಛಂದೋ ಬಂಧವೆಂದರೆ 5 ಮಾತ್ರೆಗಳ ನಾಲ್ಕು ಗಣಗಳು. ಕಣವಿಯವರ ಅತ್ಯಂತ ಮೆಚ್ಚಿನ ಸಾಲುಗಳೆಂದರೆ ಪ್ರಾಸಬದ್ಧವಾದ ಕೊನೆಯ ಎರಡು ಸಾಲುಗಳು. ಒಟ್ಟಿನ ಮೇಲೆ, ಕಣವಿಯವರಲ್ಲಿ ಶೇಕ್ಸಪಿಯರನ ಓಘವಿದೆ, ಹಾಗೂ ಶೇಕ್ಸಪಿಯರನ ಕೊನೆಯ ಎರಡು ಸಾಲುಗಳಲ್ಲಿ ಬರುವ ಮಾತಿನ ಚಮತ್ಕೃತಿ (ಚೇಳಿನಕೊಂಡಿ) ಕಣವಿಯವರ ಕೊನೆಯ ಸಾಲುಗಳಲ್ಲಿಯೂ ಆಗಾಗ್ಗೆ ಬರುತ್ತದೆ. ಉದಾ :

ಮಧ್ಯರಾತ್ರಿಯಲಿಂತು ಕೊರೆದು ಮಿಂಚಿನ ಗೆರೆಯ
ಮರೆಯಾದ : ದಡಕ್ಕೆ ಮುಟ್ಟಿಸಿದ ಹೊತ್ತು ಹೊರೆಯ.

('ಲಾಲಬಹಾದ್ದೂರ ಶಾಸ್ತ್ರಿ)

ಇರುಳಾಗಲು ಬೆಳಕು ಸೋಸುವದು ಬಾನ ಜರಡಿ
ಹಗಲಿನಲಿ ಬಂದು ಮೂಸುವದು ಕತ್ತಲೆ-ಕರಡಿ.

('ಕತ್ತಲೆ-ಬೆಳಕು')

ಮಿಲ್ಟನನ ಸಾನೆಟ್ಟುಗಳಲ್ಲಿ ಬರುವ ಎರಡು ಪರಸ್ಪರಪೂರಕ ವಿಭಾಗಗಳು (octave ಹಾಗೂ sestet) ಕಣವಿಯವರಲ್ಲಿ ತೀರ ವಿರಳ, ಕಾವ್ಯಾಕ್ಷಿಯಲ್ಲಿ 'ಈ ಘಟ ಪ್ರವಾಹ'ದಲ್ಲಿ ಇಂಥ ಒಂದು ಅಷ್ಟಷಟ್ಪದಿ ಇದೆ. ಮೊದಲಿನ ಎಂಟು ಸಾಲುಗಳಲ್ಲಿ ನದಿಯ ನೀರಿನ ಪ್ರವಾಹದ ವರ್ಣನೆ ಇದ್ದು, ನಂತರದ ಆರು ಸಾಲುಗಳಲ್ಲಿ ಕವಿ ತನ್ನ ಎದೆಯ ಅಂತರಾಳದ ಅಂತಃಕರಣದ ಪ್ರವಾಹದ ಬಗ್ಗೆ ಮಾತನಾಡುತ್ತಾನೆ. ಆದರೆ ಕೊನೆಗೆ ಪ್ರಾಸಬದ್ಧವಾದ ಎರಡು ಸಾಲುಗಳು ಕಣವಿಯವರಿಗೆ ಬೇಕೇ ಬೇಕು :

ಸಹಜ ಜೀವನದಾದಿ ಮಧ್ಯದಂತರ್ದಾಹ
ತಣಿಸಿ ತೀರ್ಚಲಿಕಿದೋ : ಈ ಘಟಪ್ರವಾಹ.

'ನೆಲ–ಮುಗಿಲು' ಹಾಗೂ 'ಎರಡು ದಡ' ಗಳ ಸುನೀತಗಳಲ್ಲಿ ಕಣವಿಯವರು ಸಾಧಿಸಿದ ಯಶಸ್ಸು ಅನನ್ಯಸಾಧಾರಣವಾಗಿದೆ. ಅತ್ಯಂತ ಕಠಿಣವಾದ ಸುನೀತದ ಬಂಧದಲ್ಲಿ ಸ್ವಚ್ಛಂದತೆಯಿಂದ ಆಡುವಂಥ ಕಣವಿಯವರ ಕಲೆಗಾರಿಕೆ ನೋಡಿದರೆ, ದೊಂಬರ ಹುಡುಗಿಯ ವಿಸ್ಮಯಕಾರಿಯಾದ ಅಂಗವಿನ್ಯಾಸಗಳ ನೆನಪಾಗುತ್ತದೆ. (ಉದಾ. 'ದಾಹ', 'ದೀಪಾವಳಿ' 'ಕತ್ತಲೆ-ಬೆಳಕು' ಇತ್ಯಾದಿ.)

೩

ಇನ್ನು, ಕಣವಿಯವರ ಅತ್ಯಂತ ಯಶಸ್ವಿಯಾದ ೩-೪ ಸಾನೆಟ್ಟುಗಳನ್ನು ಸ್ವಲ್ಪ ಸಮೀಪದಿಂದ ನೋಡೋಣ :

(೧) **ತುಂಬುದಿಂಗಳು**

ಮೊನ್ನೆ ದೀಪಾವಳಿಗೆ ಒಂದು ತಿಂಗಳು ದಣೀ
ತುಂಬಿಹುದು ; ಆಗಲೇ ಸುಳುವು ಹಿಡಿಯುವ ಮೋಡಿ !
ತೆರೆದು ಬಟ್ಟಲಗಣ್ಣ ಬಿಟ್ಟೂ ಬಿಡದೆ ನೋಡಿ
ಮಿಟ್ಟು ಮಿಸುಕದೆ ಇರುವ (ನಾನು ಅಪರಿಚಿತನೇ ?)
ಎತ್ತಿಕೊಂಡರೆ ತುಸುವೆ ಅತ್ತಂತೆ ಮಾಡಿ, ಮರು—
ಗಳಿಗೆಯಲಿ ಬೆಚ್ಚಗೆ ಬಟ್ಟೆ ತೊಯ್ಸಿ ಗೊತ್ತಿಲ್ಲ—
ದವರಂತೆ ಸುಮ್ಮನಿರೆ (ಇದನಾರು ಕಲಿಸಿಲ್ಲ !)
ಬೇರೆ ಬೇಕೇ ಶಿಕ್ಷೆ ? ಹಗಲು ನಿದ್ದೆಯ ಹೊಡೆದು
ದೀಪ ಹಚ್ಚುವ ಹೊತ್ತಿಗಾಗಲೇ ಕಣ್ದೆರೆದು
ಇರುಳೆಲ್ಲ ತಂತಿ ಮಿಟಿದ ತೆರದಿ ದನಿತೆಗೆದು
ಪಹರೆ ಮಾಡುವನೀತ, ಮುಟ್ಟಿಗೆಯ ಬಿಗಿಹಿಡಿದು
ಕುಟ್ಟಿ ಗಾಳಿಯ, ಒಂಟಿ ಕುಸ್ತಿಯಾಡುವ ಜಟ್ಟಿ !
'ಹಸಿವೆಯಾದರೆ ಒಂದು ನಿಮಿಷ ತಡೆಯಲು ಒಲ್ಲ'
ಇರಬಹುದು : (ಅದು ಮಾತ್ರ ನನ್ನ ಖಾತೆಯದಲ್ಲ)

('ಮಧುಚಂದ್ರ')

ಇಲ್ಲಿ ಕೂಡಿಬಂದ ವಾತ್ಸಲ್ಯ—ಖುಷಿ—ವಿನೋದಗಳ ತ್ರಿವೇಣಿ ಸಂಗಮ ಅತ್ಯಂತ ಆಕರ್ಷಕವಾಗಿದೆ. ಆಡು-ಮಾತಿನ ಭಾಷೆಯಲ್ಲಿಯೇ ಸಹಜವಾಗಿ ಮೂಡಿಬಂದ ಧ್ವನಿ ಅತ್ಯಂತ ಅರ್ಥಪೂರ್ಣವಾಗಿದೆ. ಕಂಸಿನಲ್ಲಿಯ ಪ್ರಶ್ನೆಯಾಗಲಿ ಹೇಳಿಕೆಯಾಗಲಿ ಕಣ್ಣು ಹೊಡೆದು ತಮ್ಮ ತಿಳಿವ್ಯಂಗ್ಯದ ಮೂಲಕ ನಗಿಸುತ್ತವೆ. 'ನಾನು ಅಪರಿಚಿತನೇ?' ಎನ್ನುವಲ್ಲಿ ಎಷ್ಟೊಂದು ಸುಂದರವಾದ ವ್ಯಂಗ್ಯವಿದೆ ! ಈತನಿಗೆ ಜನ್ಮ ಕೊಟ್ಟ ನಾನು ಈತನಿಗೇ ಅಪರಿಚಿತ—ಎಂದು ನಕ್ಕು ಹೇಳುವಲ್ಲಿ ಎಷ್ಟೊಂದು ವ್ಯಂಗ್ಯಾತ್ಮಕ ತಥ್ಯಾಂಶವಿದೆ ! 'ಇರುಳೆಲ್ಲ. . . .ಪಹರೆ ಮಾಡುವನೀತ', ಎನ್ನುವಾಗ ಗಂಡ—ಹೆಂಡಿರ ಏಕಾಂತಕ್ಕೆ ಮಗುವಿನ ಮೂಲಕ ಹೇಗೆ ಅವಕಾಶ ಸಿಗುವದಿಲ್ಲವೆಂಬ ಮಾತು ಸೂಚಿತವಾಗಿದೆ. ಮಗುವಿನ 'ಒಂಟಿ ಕುಸ್ತಿ'ಯೂ ಅರ್ಥಗರ್ಭಿತ ! ಇದೇ ಸಂದರ್ಭದಲ್ಲಿ ಮಗು ಬೇಡುವ 'ಸ್ತನ' ಕ್ಕೆ ಗಂಡನ ಲೈಂಗಿಕತೆಯ ನೆರಳೂ ಬೀಳುತ್ತದೆ. 'ಅದು ಮಾತ್ರ ನನ್ನ ಖಾತೆಯದಲ್ಲ' ಈ ಮಾತಿಗೂ ಎರಡು ಅರ್ಥಗಳು ಮೂಡುತ್ತವೆ. ಅದು = ಹಾಲು ಕುಡಿಸುವದು, ಹಾಗೂ ಅದು = ಸ್ತನ. . .ಹೀಗೆ, ತಂದೆ-ತಾಯಿ—ಮಗು ಇವರ ನಡುವಿನ ಅತ್ಯಂತ ತೊಡಕಾದ ಬಂಧನದ ವ್ಯಂಗ್ಯವನ್ನೆಲ್ಲ ಈ ಸುನೀತ ಅತ್ಯಂತ ಸುಂದರವಾಗಿ ಸೂಚಿಸುತ್ತದೆ.

## (೨) ಎಪ್ಪತ್ತರ ಬೇಂದ್ರೆ

ಕಣ್ಣು ಮಿಂಚಿಸಿ, ನೂರು ಹಂಚಿಕೆಯ ಸಂಚಿಕೆಯ
ತುಂಬಿ—ತಲೆಯಾಡಿಸುತ, ಯಾವುದೋ ಒಳದನಿಗೆ
ನಾದ ಕೂಡಿಸಿ, ನೆಲಕೆ ನೀರು ಬರಿಸುವ ಹಾಗೆ

ಬೀಸುಗಾಳಿಯ ಜೊತೆಗೆ ಬಂದರದೊ ಬೇಂದ್ರೆ ! ಕೈಯ
ಮಾಟಕ್ಕೆ ಮಾತು ಮಾಂತ್ರಿಕನಾಟ : ಅರಗಳಿಗೆ—

ಹೊರ-ಒಳಗೆ ತುಂಬಿ ತುಳುಕುವ ಬೆಡಗು. ಕಡಲ ಗುಟು
ಕರಿಸಿ, ಚಿಕ್ಕೆಗಳ ಮುಕ್ಕಳಿಸುವರು ; ತಟ್ಟನೆ ಒಗಟು

ಒಡೆಯುವ ಒಡಪು. ನುಡಿ : ಕುಡಿಮಿಂಚು ಬಾನ ಗುಡಿಗೆ.
ಇಪ್ಪತ್ತೊ ? ಎಪ್ಪತ್ತೊ ? ಮುಪ್ಪತ್ತು ಮುಂದೆ ನಡೆ ;

ಅಂಬಿಕಾತನಯನಿಗೆ ದತ್ತುಕೊಟ್ಟಂದು ಇವ-
ರೊಪ್ಪತ್ತು. ಜಗದಂಬೆ-ಹಡಲಿಗೆ ಹೊತ್ತು ಕುಣಿವ—

ಗೆಲ್ಲಿ ಪುರಸತ್ತು ? ಹಣ್ಣಾದ ಕೇದಿಗೆಯ ಹೊಡೆ ;
ಚೂಪಾದ ಗರಿ; ಹುಷಾರಿ ; ಕಂಪಿಗೆಲ್ಲಿಯ ಕೊರತೆ?
ನಡೆದದ್ದೆ ಸಾಧನಕೇರಿ, ನುಡಿದದ್ದೆ ಕವಿತೆ.

ಇಲ್ಲಿ ಬೇಂದ್ರೆಯವರ ಬಾಹ್ಯ ವ್ಯಕ್ತಿತ್ವಕ್ಕೂ ಅಂತರ್ವ್ಯಕ್ತಿತ್ವಕ್ಕೂ ಸಂಬಂಧ ಜೋಡಿಸಿ, ಒಂದು ಇನ್ನೊಂದನ್ನು ಹೇಗೆ ಪ್ರತಿಸ್ಪಂದಿಸುತ್ತದೆ ಎಂಬುದನ್ನು ಕಣವಿಯವರು ಅತ್ಯಂತ ಉತ್ಸ್ಫೂರ್ತವಾಗಿ ತೋರಿಸುತ್ತಾರೆ. ಅವರ ಹಾವಭಾವ—ತಲೆಯಾಡಿಸುವದು, ಕೈ ಅಲುಗಾಡಿಸುವದು, ಕಣ್ಣು ಮಿಂಚಿಸುವದು ; ಅವರ ಮಾತಿನ ರೀತಿ—ಮೇಲಿಂದ ಮೇಲೆ ವಿಷಯ ಬದಲಿಸುವದು, ಒಮ್ಮೆಲೆ ಅತ್ಯಂತ ಸುಂದರವಾದ ಮಿಂಚು ಮಾತು ನುಡಿಯುವದು—ಒಮ್ಮೊಮ್ಮೆ ಹರಿತವಾಗಿ, ಒಮ್ಮೊಮ್ಮೆ ಸಿಹಿಯಾಗಿ ಮಾತಾಡುವದು ; ಅವರ ಬಾಹ್ಯಜೀವನದ ರೀತಿ—ಅತ್ತಿತ್ತ ಅಡ್ಡಾಡುವದು, ಬಿಡುವಿಲ್ಲದೆ ನಡೆಯುವದು—ಹೊರಗಿನ ವ್ಯಕ್ತಿತ್ವಕ್ಕೆ ಸಂಬಂಧಿಸಿದವುಗಳು. ಇವು ಅವರ ಒಳಗಿನ ಜಗತ್ತಿಗೆ ಕೈಮರ ; ಅವರ ತಲೆಯಲ್ಲಿಯ ನೂರಾರು ವಿಚಾರಗಳು ನೂರಾರು ಹಂಚಿಕೆಗಳು ಅವರ ವಿದ್ವತ್ತೆ, ಅವರ ಆದರ್ಶಪ್ರಿಯತೆ, ಅವರ ಜೀವನದ ಒಟ್ಟು ಧೋರಣೆ ಪ್ರೇರಣೆ; ಅವರ ಚಿಂತನೆ, ಅವರ ಕಲ್ಪಕತೆ, ಅವರ ಕಾವ್ಯ,—ಇವೆಲ್ಲ ಅತ್ಯಂತ ಸಹಜಸುಂದರವಾಗಿ ಸೂಚಿತವಾಗಿವೆ. ಇಷ್ಟೆಲ್ಲ 'ಕೆತ್ತನೆಯ ಕೆಲಸ' ಮಾಡುವಾಗಲೂ ಕಣವಿಯವರ ಮೂಲ ಭಾವವಾದ ಆತ್ಮೀಯ ಆದರಕ್ಕೆ ಎಲ್ಲಿಯೂ ಧಕ್ಕೆ ತಗಲುವದಿಲ್ಲ. ಅಷ್ಟೇ ಅಲ್ಲದೆ, ಕಣವಿಯವರ ಕಲ್ಪಕತೆಯೂ (ಬೇಂದ್ರೆಯವರ ವ್ಯಕ್ತಿತ್ವದ ಎತ್ತರಕ್ಕೆ ಪುಟಿಯುತ್ತ) ವಿಸ್ಮಯಕಾರಿಯಾದ ಪ್ರತಿಮೆಗಳನ್ನು ಸೃಜಿಸುತ್ತದೆ. 'ನೆಲಕೆ ನೀರು ಬರಿಸುವ ಹಾಗೆ' : ಕಡಲ ಗುಟುಕರಿಸಿ. ಚಿಕ್ಕೆಗಳ ಮುಕ್ಕಳಿಸುವರು' 'ಜಗದಂಬೆ-ಹಡಲಿಗೆ ಹೊತ್ತು ಕುಣಿವಗೆಲ್ಲಿ ಪುರಸತ್ತು ?'' ಹಣ್ಣಾದ ಕೇದಿಗೆಯ ಹೊಡೆ ; ಚೂಪಾದ ಗರಿ ;

ಹುಷಾರಿ, ಕಂಪಿಗೆಲ್ಲಿಯು ಕೊರತೆ : '—ಒಂದಕ್ಕಿಂತ ಒಂದು ಹೆಚ್ಚಿನ ಚಮತ್ಕಾರ! ಆಶ್ಚರ್ಯದ ಮಾತೆಂದರೆ—ಇಷ್ಟೆಲ್ಲ ಭಾಷೆಯ ಕುಣಿತ-ಮಣಿತ ಸಾನೆಟ್ಟಿನ ಒಂದಂಕಣದ ಅವಕಾಶದಲ್ಲಿ. ಸಾನೆಟ್ಟಿನ ಚಕ್ರೀ ಬಂಧನದಲ್ಲಿಯೇ ಇಷ್ಟೊಂದು ಸ್ವಾತಂತ್ರ್ಯವನ್ನು ಗಳಿಸಿದ ಕವಿಗೆ ನಾವು ನಿಜಕ್ಕೂ ಅಭಿನಂದನೆ ಸಲ್ಲಿಸಬೇಕು.

### (೩) ಬಿಸ್ಮಿಲ್ಲಾರ ಶಹನಾಯಿ ವಾದನ ಕೇಳಿ

ಒಂದೆ ಉಸಿರಿಗೆ ಹಸಿರ ಹೊಮ್ಮಿಸುವ ; ನೂರು ಬಗೆ
ಭಾವ ಕುಸುಮವನೆತ್ತಿ ಗಾಳಿಸುಳಿಯಲಿ ಹೀಗೆ
ನರುಗಂಪ ತೇಲಿಸುವ ; ಹಂಬಲದ ಸವಿದನಿಗೆ
ತುಂಬಿ ಆಲಿಸುವ ; ಮನಸಿನ ಮಧ್ಯಬಿಂದುವಿಗೆ
ಕನಸು ಕಾಮನಬಿಲ್ಲ ವರ್ತುಳವ ರಚಿಸಿ, ನೆಲ-
ಮುಗಿಲನೊಂದುಸಲ ಬಂಧಿಸಿ ಜೀವ ಸ್ಪಂದಿಸುವ,
ಮೋಡದೊಡಲಿಗೆ ಮಿಂಚು ಸಂಚರಿಸಿ ಹನಿಗರೆವ
ರಾಗ ಲಹರಿಯ ತೊರೆಗಳೋಡಿ ತಬ್ಬಿವೆ ಕಡಲ.
ಕೋಟಿ ಮೈಲಂತರದ ನೀಹಾರಿಕೆಯ ನಾಡಿ
ಮಿಡಿತ ತಟ್ಟಿತು ಕಿವಿಗೆ ; ನಾದದ ಕೂದಲೆಳೆಯಲಿ
ಪೃಥ್ವಿ ತೂಗಿರೆ, ಸೂರ್ಯಚಂದ್ರರಿಗು ಜೋಕಾಲಿ,
ಪಾತಾಳಗವಿಗೆ ತೆರೆದವು ನೂರು ಬೆಳಕಿಂಡಿ !
ಹೊಕ್ಕಳ ಹುರಿಯ ಕತ್ತರಿಸಿ ಮುಗಿಯೆ ಶಹನಾಯಿ
ಆಗಸದ ಚಿಪ್ಪೊಡೆದು ಜೀವ ತೆರೆಯಿತು ಬಾಯಿ.

ಈ ಸಾನೆಟ್ಟಿನ ಸೌಂದರ್ಯವನ್ನು ವಿಶ್ಲೇಷಿಸುವ ಕೆಲಸ ನಿಜಕ್ಕೂ ಕಠಿಣವಾದುದು. ಬಿಸ್ಮಿಲ್ಲಾಖಾನರ ಶಹನಾಯ್ ಸಂಗೀತದ ಅನುಭವವನ್ನು ಆ ಸಂಗೀತದಷ್ಟೇ ನಯವಾದ ಸೂಕ್ಷ್ಮವಾದ ಸಿಹಿಯಾದ ಕಾವ್ಯದಲ್ಲಿ ಹಿಡಿದ ಕಣವಿಯವರ ಕೌಶಲ್ಯವೆಂದರೆ ಕನ್ನಡ ಸುನೀತಗಳಲ್ಲಿ ಒಂದು ಮಹತ್ಸಾಧನೆ. ಹಸಿರು—ಕುಸುಮ—ನರುಗಂಪ— ಈ ಪ್ರತಿಮೆಗಳು 'ನೆಲ'ಕ್ಕೆ ಸಂಬಂಧಿಸಿಧವುಗಳಾದರೆ, ಕಾಮನಬಿಲ್ಲು, ಮೋಡ, ಮಿಂಚು, ಮಳೆ ಇವುಗಳು 'ಆಕಾಶಕ್ಕೆ' ಸಂಬಂಧಿಸಿದವುಗಳು. ಅಷ್ಟಾದ ನಂತರ ಕಾವ್ಯ ಮರಳಿ ಭೂಮಿಯತ್ತ ಗತಿಸುತ್ತದೆ ; ಕಡಲು, ತೊರೆಗಳು ಇತ್ಯಾದಿ. ಹೀಗೆ ಕಣವಿಯವರೂ (ಬಿಸ್ಮಿಲ್ಲಾರಂತೆ) ತಮ್ಮ ಕಾವ್ಯದಲ್ಲಿ ಇಡಿ ಪೃಥ್ವಿಯನ್ನೇ ತೂಗಿಸುತ್ತಾರೆ. ಮುಂದೆ 'ಪಾತಾಳ'ಕ್ಕೂ ಹೋಗಿ ಅಲ್ಲಿ 'ನೂರು ಬೆಳಕಿಂಡಿ'ಯನ್ನು ತೆರೆಸುತ್ತಾರೆ. ಸಂಗೀತಕ್ಕೂ ಶ್ರೋತೃವಿಗೂ ಬಿಗಿದಂಥ ಸೂಕ್ಷ್ಮ ಬಂಧದ ಕಲ್ಪನೆಯನ್ನು 'ಹೊಕ್ಕಳ ಹುರಿಯ ಕತ್ತರಿಸಿ ಮುಗಿಯೆ ಶಹನಾಯಿ' ಎಂದು ಹೇಳಿ ಅದರ ಅಂತಿಮ ದಿವ್ಯವಾದ ಪರಿಣಾಮವನ್ನು 'ಆಗಸದ ಚಿಪ್ಪೊಡೆದು ಜೀವ ತೆರೆಯಿತು ಬಾಯಿ' ಎಂಬ ಸಾಲಿನಲ್ಲಿ ಅತ್ಯಂತ ಸುಂದರವಾಗಿ ಧ್ವನಿಸುತ್ತಾರೆ,

## (೪) ನೆಲ-ಮುಗಿಲು

ಕಣ ಕಣದ ಗತಿ-ಮತಿಯು ಗುರುತಿಸು, ಆದರೀಗಲೆ
ಅದರ ಇತಿವೃತ್ತವನು ಬರೆಯದಿರು, ನೀನಾಗಿ
ಕೊರೆಯದಿರು ದಾರಿಯನು. ಬಯಲ ಬಿಡುಗಡೆ ನುಂಗಿ

ನೀರು ಹಿಡಿಯಲಿ, ವಿಶ್ವವೆಲ್ಲವು ತೆರೆದ ಬಾಗಿಲೆ,
ಹಾರಿ ಹಕ್ಕಿಯಾಗಲಿ ತುತ್ತ ತುದಿಗಿದೆ ಚುಕ್ಕಿ.

ಮೀರಿ ಹರಿಯಲಿ ದಡವನೆರಡೂ ಕಡೆಗೆ ಬಾಚಿ,
ಬತ್ತಿತೋ ? ಚಿಮ್ಮುವದು ಒರತೆ ನಾಲಗೆ ಚಾಚಿ,

ಆಕಾಶ ಕೈ ಹಿಡಿದು ಎತ್ತುವದು, ಮುತ್ತಿಕ್ಕಿ
ಭೂಮಿಗಿಳಿಸುವದು, ತೊಡೆಯ ಮೇಲಾಡುವದು ಮಗು :

ತಾಯ ಮೊಗ ಸೂರ್ಯಪಾನವು ಹೊರಳೆ ಹೊಂಬೆಳಗು !
ಎಲ್ಲೆಡೆಗು ಏಕಕಾಲಕೆ ಬಹುದೆ ಮಳೆ ? ಹರಗು

ಒಳಹೊರಗು ಸಿದ್ಧವಿರು. ಹೊಸ ನೀರು ನಿಬ್ಬೆರಗು.
ಗುರುತ್ವಾಕರ್ಷಣ ಕರುಣೆ-ಕೇಂದ್ರ ನೆಲದೊಡಲು
ಬಾನತೀಂದ್ರಿಯ ಸ್ಪರ್ಶ—ತುಂಬಿ ತೇಲಿವೆ ಮುಗಿಲು.

ಕಣವಿಯವರು ತಮ್ಮ ತತ್ವಜ್ಞಾನವನ್ನೆಲ್ಲ, ಜೀವನದ ಮೇಲಿದ್ದ ತಮ್ಮ ಭರವಸೆಯನ್ನೆಲ್ಲ ಈ ಸುನೀತದಲ್ಲಿ ಅತ್ಯಂತ ಪ್ರಭಾವಿಯಾಗಿ ಮಿಡಿಸಿದ್ದಾರೆ. ಪ್ರತಿಮೆಗಳನ್ನೆಲ್ಲ ಪ್ರಕೃತಿಯಿಂದಲೇ ಆಯ್ದು, ಪ್ರಕೃತಿಯ ಸಂತಾನನಾದ ಮನುಷ್ಯನ ಜೀವನದ ಸೀಮೆಗಳನ್ನು ಗುರುತಿಸುವ ಪ್ರಯತ್ನವಿಲ್ಲಿದೆ. ಜೀವನದ ಸೀಮಿತತೆಯನ್ನು ಗುರುತಿಸಿಯೂ ಜೀವನ ಶಕ್ತಿಯ ಊರ್ಧ್ವಮುಖತ್ವದಲ್ಲಿ ವಿಶ್ವಾಸ ತೋರಿಸುವ ಈ ಸಾನೆಟ್ಟಿನಲ್ಲಿ ರೊಮ್ಯಾಂಟಿಕ್ ದರ್ಶನದ ಪರಿಪಾಕವಿದೆ : 'ಹೊಸ ನೀರು ನಿಬ್ಬೆರಗು' 'ತಾಯ ಮೊಗ ಸೂರ್ಯಪಾನವು ಹೊರಳೆ ಹೊಂಬೆಳಗು' 'ಬಾನತೀಂದ್ರಿಯ ಸ್ಪರ್ಶ' ಎಂಬ ಪದ ಪ್ರಯೋಗಗಳು ಕಣವಿಯವರ ಕೇಂದ್ರ ಮನೋಧರ್ಮದಿಂದಲೇ ಹುಟ್ಟಿದವುಗಳು. ಭೂಮಿ-ಆಕಾಶಗಳ ಮಧ್ಯದಲ್ಲಿಯೇ ನಮ್ಮ ಜೀವನ ಸಾಗಲಿದೆ—ಮುಗಿಲಿನಂತೆ ತುಂಬಿ ತೇಲುವದೇ ಜೀವನ— ಇದು ಕಣವೀಕಾವ್ಯದ ಕೇಂದ್ರ ಸಂದೇಶ.

ಮೇಲಿನ ನಾಲ್ಕು ಸುನೀತಗಳು, ನನ್ನ ಮಟ್ಟಿಗೆ ಕನ್ನಡದ ರಸಸಂಪ್ರದಾಯದ ಅತ್ಯಂತ ಸುಂದರವಾದ ನಾಲ್ಕು ಕಳಸಗಳು ! ಯಾವ ಸಂಪ್ರದಾಯವಿದ್ದರೇನು ಕಾವ್ಯ ಕಾವ್ಯವೇ !

ಜಿ. ಎಂ. ಹೆಗಡೆ

# ಕಣವಿಯವರ ಸುನೀತಗಳಲ್ಲಿ ವ್ಯಕ್ತಿಚಿತ್ರಗಳು

ಹೊಸಗನ್ನಡಕಾವ್ಯದ ಬೆಳವಣಿಗೆ ಹಾಗೂ ಚರಿತ್ರೆಯಲ್ಲಿ ಸುನೀತಗಳ ಪರಂಪರೆಯನ್ನು ಮಾಸ್ತಿ ಹಾಗೂ ದ. ರಾ. ಬೇಂದ್ರೆಯವರಂತೆ ಅವ್ಯಾಹತವಾಗಿ ನಡೆಸಿಕೊಂಡು ಬಂದ ಕವಿ ಕಣವಿಯವರು ಈ ಕ್ಷೇತ್ರದಲ್ಲಿ ಅತ್ಯಂತ ಗಮನಾರ್ಹವಾದ ಸಾಧನೆಯನ್ನು ಮಾಡಿದ್ದಾರೆ. ಸಾಹಿತ್ಯಲೋಕದ ಕಲಾತ್ಮಕ ಪ್ರಕಾರವಾದ ವ್ಯಕ್ತಿಚಿತ್ರವನ್ನು ಕಣವಿಯವರು ತಮ್ಮ ಸುನೀತಗಳಲ್ಲಿ ಪ್ರಭಾವಯುತವಾಗಿ ಅಭಿವ್ಯಕ್ತಿಸುವಲ್ಲಿ ಮಾಡಿದ ಸಾಧನೆ, ಗಳಿಸಿದ ಯಶಸ್ಸು ಮತ್ತು ಅವುಗಳ ಮಹತ್ವ ಇವುಗಳನ್ನು ವಿವೇಚಿಸುವದು ಈ ಪ್ರಬಂಧದ ಉದ್ದೇಶ.[1] ಡಾ. ಜಿ. ಎಸ್. ಶಿವರುದ್ರಪ್ಪನವರು ಅರ್ಧಶತಮಾನದ ಕನ್ನಡ ಕಾವ್ಯವನ್ನು ವಿಮರ್ಶಿಸುತ್ತ "ನಿಜವಾದ ಕವಿಗೆ 'ಚಾರಿತ್ರಿಕ ಪ್ರಜ್ಞೆ' (Historical sense) ಇರಬೇಕು ಎಂದು ಇಂಗ್ಲೆಂಡಿನ ನವ್ಯಕಾವ್ಯದ ಕಾಲದಲ್ಲಿ ಟಿ. ಎಸ್. ಇಲಿಯಟ್ ಹೇಳಿದ ಮಾತು ಕನ್ನಡದ ನವೋದಯ ಕವಿಗಳ ವಿಚಾರದಲ್ಲಿ ಸಾರ್ಥಕವಾಯಿತೆ ಹೊರತು, ಕನ್ನಡದ ನವ್ಯಕವಿಗಳ ವಿಚಾರದಲ್ಲಿ ಅಲ್ಲ" ಎಂದಿದ್ದಾರೆ.[2] ಚೆನ್ನವೀರ ಕಣವಿಯವರಲ್ಲಿರುವ ಕನ್ನಡ ಕಾವ್ಯಪರಂಪರೆಯ ಪ್ರಜ್ಞೆಗೆ ಚಾರಿತ್ರಿಕ, ಸಾಂಸ್ಕೃತಿಕ ಧೋರಣೆಗಳನ್ನು ಅಭಿವ್ಯಕ್ತಿಸುವ ಅವರ ಸುನೀತಗಳು ನಿದರ್ಶನಗಳನ್ನೊದಗಿಸುತ್ತವೆ. ಕನ್ನಡದ ಗಣ್ಯಕವಿಗಳ ವ್ಯಕ್ತಿತ್ವ ಅವರ ಸುನೀತಗಳ ವಸ್ತುವಾಗಿರುವದರಿಂದ ಕನ್ನಡ ಕವಿಗಳ ಚರಿತ್ರೆಯ ದೃಷ್ಟಿಯಿಂದ ಅವು ವಿನೂತನ ಕೊಡುಗೆಗಳಾಗಿವೆ. ಕಣವಿಯವರು ಸುನೀತಗಳ ರಚನೆಗೆ ತೊಡಗಿದಾಗ ಅದು ಪ್ರಯೋಗಾವಸ್ಥೆಯಿಂದ ಪ್ರವರ್ಧಮಾನವಾದ ಸ್ಥಿತಿಗೇರಿತ್ತು ಎಂದೆನಿಸುತ್ತದೆ. ಆದುದರಿಂದ ಸುನೀತದ ಶಿಲ್ಪಕ್ಕಿಂತಲೂ ವಸ್ತು ಮತ್ತು ಆಶಯಕ್ಕೆ ಹೆಚ್ಚಿನ ಮಹತ್ವ ಕಣವಿಯವರ ಸುನೀತಗಳಿಗೆ ಪ್ರಾಪ್ತವಾಯಿತು. ಒಂದು ದೃಷ್ಟಿಯಲ್ಲಿ ಕಣವಿಯವರ ಸುನೀತಗಳು (ವ್ಯಕ್ತಿ ಚಿತ್ರವ

1. ಕಣವಿಯವರು ತಮ್ಮ ಸುನೀತಗಳಲ್ಲಿ ವ್ಯಕ್ತಿಚಿತ್ರಗಳಷ್ಟನ್ನೇ ಮೂಡಿಸಿದ್ದಾರೆ ಎಂದಲ್ಲ. ಅವರು ನಿಸರ್ಗ ಹಾಗೂ ಬಾಳಿನ ಬೇರೆ ಬೇರೆ ಮುಖಗಳ ಬಗೆಗೆ ಸಂಕೀರ್ಣವಾದ ಸುನೀತಗಳನ್ನು ಯಶಸ್ವಿಯಾಗಿಯೇ ಚಿತ್ರಿಸಿದ್ದಾರೆ. ಅವರ ಸುನೀತಗಳಲ್ಲಿಯ ವ್ಯಕ್ತಿಚಿತ್ರಗಳನ್ನು ಮಾತ್ರ ಅವಲೋಕಿಸುವದು ಈ ಪ್ರಬಂಧದ ಮಿತಿಯಲ್ಲಿ ಸೇರುತ್ತದೆ.

2. ಡಾ. ಜಿ. ಎಸ್. ಶಿವರುದ್ರಪ್ಪ—"ಅರ್ಧ ಶತಮಾನದ ಕನ್ನಡಕಾವ್ಯ" ಕಸ್ತೂರಿ– ಏಪ್ರಿಲ್, ೧೯೭೪. ಪು. ೫೧.

ನ್ನೊಳಗೊಂಡ) ಸಾಂದರ್ಭಿಕ ಮಹತ್ವವನ್ನು ಪಡೆದಿರುತ್ತವೆ. ಇದರಿಂದ ಕಣವಿಯವರು ಗಣ್ಯವ್ಯಕ್ತಿಗಳ ಮೌಲ್ಯಮಾಪನ ಮಾಡುವ ವಿಧಾನವೂ ಆಲೋಚನೀಯವಾಗಿದೆ.

ಧಾರವಾಡದಲ್ಲಿ ಬೇಂದ್ರೆಯವರು ಗೆಳೆಯರ ಗುಂಪನ್ನು ಕಟ್ಟಿದ ವಿಷಯ ಹೊಸ ಗನ್ನಡಕಾವ್ಯದ ಇತಿಹಾಸಕ್ಕೆ ಸೇರಿದ ಸಂಗತಿಯಾಗಿದೆ. ಗೆಳೆಯರ ಗುಂಪಿನ ದ. ರಾ. ಬೇಂದ್ರೆ, ವಿನಾಯಕ, ರಂ. ಶ್ರೀ. ಮುಗಳಿಯವರು ಸಾಹಿತ್ಯ ಕ್ಷೇತ್ರದಲ್ಲಿ ಗಳಿಸಿದ ಘನ ವಾದ ಯಶಸ್ಸು, ಅವರ ಜೀವನದ ಧ್ಯೇಯ, ವ್ಯಕ್ತಿತ್ವವನ್ನು ಕುರಿತು ಕಣವಿಯವರು ಬರೆದ ಸುನೀತಗಳು ಮಹತ್ವಪೂರ್ಣವಾಗಿವೆ. ಎಪ್ಪತ್ತರ ಬೇಂದ್ರೆಯವರನ್ನು ಕಂಡಾಗ ಉದ್ಗರಿಸುವ ಸುನೀತದ ಮೊದಲಭಾಗ ಹೀಗಿದೆ :

ಕಣ್ಣು ಮಿಂಚಿಸಿ, ನೂರು ಹಂಚಿಕೆಯ ಸಂಚಿಕೆಯ
ತುಂಬಿ-ತಲೆಯಾಡಿಸುತ, ಯಾವುದೋ ಒಳದನಿಗೆ
ನಾದ ಕೂಡಿಸಿ, ನೆಲಕೆ ನೀರು ಬರಿಸುವ ಹಾಗೆ
ಬೀಸುಗಾಳಿಯ ಜೊತೆಗೆ ಬಂದರದೊ ಬೇಂದ್ರೆ ! [2]

ಬೇಂದ್ರೆಯವರ ಕವಿತ್ವಶಕ್ತಿಯನ್ನು ಅಪೂರ್ವವಾದ ಮಳೆಗಾಲದ ಮೋಡದ ಪ್ರತಿಮೆಯ ಮೂಲಕ ಧ್ವನಿರಮ್ಯತೆಯಿಂದ ಕಣವಿ ವರ್ಣಿಸಿದ್ದಾರೆ. ಆಕಾಶದಲ್ಲಿ ಮಳೆ ಬರುವ ಪೂರ್ವದಲ್ಲಿ ಮಿಂಚು, ಮೋಡಗಳ ಸಂಚಾರ ಹಾಗೂ ಬೀಸಿದ ತಂಪಾದ ಗಾಳಿಗೆ ನೆಲಕೆ ನೀರು ಬರಿಸುವ ಮಳೆ ಹೇಗೆ ಉಂಟಾಗುತ್ತದೋ ಅದೇ ರೀತಿಯಲ್ಲಿ ಕವಿಯಲ್ಲೂ ಕಾವ್ಯ ಹುಟ್ಟುವಾಗ ನೂರಾರು ಭಾವನೆಗಳು, ಹೃದಯದ ಅನುಭವವಾಗಿ ಹೊರಚಿಮ್ಮುವಲ್ಲೂ ಒಂದು ಕವಿಕಾರ್ಯ ನಡೆದಿರುತ್ತದೆ[4] ಎಂಬುದನ್ನು ಬೇಂದ್ರೆಯವರ ಕಾವ್ಯಪ್ರಕ್ರಿಯೆಯಲ್ಲಿ ಕಂಡ ಕಣವಿಯವರು ಕನ್ನಡದ ಭಾವಗೀತೆಯ ಸಕಲ ಮಾಧುರ್ಯವೆಲ್ಲವೂ ಅವರ ಕಾವ್ಯದಲ್ಲಿ ತುಂಬಿ, ನೆಲಕೆ ನೀರು ಬರಿಸುವ ಹಾಗೆ ರಸಾನಂದವನ್ನು ನೀಡುತ್ತದೆ ಎಂದಿದ್ದಾರೆ. ವ್ಯಕ್ತಿ ಬೇಂದ್ರೆ ಹಾಗೂ ಕವಿ ಬೇಂದ್ರೆ ಇವೆರಡರ ಸಾಮರಸ್ಯವನ್ನೂ ಈ ಸುನೀತದಲ್ಲಿ ಕಣವಿಯವರು ಸೆರೆಹಿಡಿದ್ದಾರೆ. ಬೇಂದ್ರೆ ವ್ಯಕ್ತಿತ್ವ ಹಾಗೂ ಕಾವ್ಯದ ಗುಣಗಳನ್ನು ಸುನೀತದ ಮುಂದಿನ ಪಂಕ್ತಿಗಳು ನಿರೂಪಿಸುತ್ತವೆ.

.................................ಕೈಯ
ಮಾಟಕ್ಕೆ ಮಾತು ಮಾಂತ್ರಿಕನಾಟ : ಅರಗಳಿಗೆ
ಹೊರ-ಒಳಗೆ ತುಂಬಿ ತುಳುಕುವ ಬೆಡಗು, ಕಡಲ ಗುಟು
ಕರಿಸಿ ಚಿಕ್ಕೆಗಳ ಮುಕ್ಕಳಿಸುವರು ; ತಟ್ಟನೆ ಒಗಟು
ಒಡೆಯುವ ಒಡಪು ನುಡಿ : ಕುಡಿಮಿಂಚು ಬಾನ ಗುಡಿಗೆ.

---

೩. 'ಎರಡು ದಡ'—"ಎಪ್ಪತ್ತರ ಬೇಂದ್ರೆ." ೧೯೬೭. ಪು. ೨೪,

೪. ಭಾವಗೀತೆಯ ಬಗೆಗೆ ವರ್ಡ್ಸ್‌ವರ್ತ ಕವಿ ತನ್ನ "preface to the lyrical ballads" ದಲ್ಲಿ "poetry is the spontaneous overful of powerfowl feelings reflected in tranquility" ಎಂದು ಹೇಳಿದುದನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು.

ಗಾರುಡಿಗತನ, ಮಾಂತ್ರಿಕಪ್ರತಿಭೆಗಳಿಂದ ಕೂಡಿದ ಬೇಂದ್ರೆ ವ್ಯಕ್ತಿತ್ವವೇ ಒಂದು ಬೆಡಗು. ಅವರ ಮಾತಿನಂತೆ ಕಾವ್ಯದಲ್ಲಿಯೂ ಕಾಣುವ ಈ ಗುಣಗಳೊಂದಿಗೆ ಹಾಲು ಚೆಲ್ಲಿದ ಬೆಳದಿಂಗಳಿನ ಮಾಧುರ್ಯ ಸದಾ ಸುವ್ಯಕ್ತವಾಗುತ್ತದೆ. "ಕಡಲ ಗುಟುಕರಿಸಿ ಚಿಕ್ಕೆಗಳ ಮುಕ್ಕಳಿಸುವರು'– ಕಡಲಿನಂಥ ವಿಶಾಲವಾದ ಜ್ಞಾನ ಸಂಪತ್ತನ್ನೆಲ್ಲ ತಾರೆ ಗಳಂತೆ ಕಿರಿದಾಗಿ ಕವಿತೆಯಲ್ಲಿ ಬಣ್ಣಿಸುವಲ್ಲಿ ಒಂದು ಬೇಂದ್ರೆ ಪಾಕವಿದೆ. ಬೇಂದ್ರೆ ಮಾತು ಮತ್ತು ಕಾವ್ಯ ರಸಿಕನಿಗೆ ಹೊಸಹೊಸ ಅರ್ಥ ಪ್ರಪಂಚವನ್ನು ನೀಡುವ ಬಗೆ ಒಂದು ನವೀನ ವೈಶಿಷ್ಟ್ಯ ಎಂದು ಕಣವಿ ಗಮನಿಸಿದ್ದಾರೆ. ಇಲ್ಲಿ "ಜಗದಂಬೆ-ಹಡಲಿಗೆ ಹೊತ್ತು ಕುಣಿವಗೆಲ್ಲಿ ಪುರುಸೊತ್ತು?" ಎಂಬ ರೂಪಕವನ್ನೂ ಬಳಸಿದುದು ಅರ್ಥಪೂರ್ಣವಾಗಿದೆ. ಹಣ್ಣಾದ ಕೇದಿಗೆಯಂತೆ ಬೇಂದ್ರೆ ವಯಸ್ಸಿನಲ್ಲಿ ಮಾಗಿನಿಂತರೂ ಕಾವ್ಯದ ಕಂಪನ್ನು ಮತ್ತೆ ಮತ್ತೆ ನೀಡುತ್ತಿರುವದನ್ನು ಕಣವಿ ಹೇಳುತ್ತ ಸುನೀತದ ಕೊನೆಯಲ್ಲಿ "ನಡೆದದ್ದೆ ಸಾಧನ ಕೇರಿ, ನುಡಿದದ್ದೆ ಕವಿತೆ" ಎಂಬ ಪರಿಣಾಮಕಾರಿಯಾದ ಸತ್ಯಚಿತ್ರವನ್ನು ಬೇಂದ್ರೆಯವರ ಬಗೆಗೆ ನೀಡಿದ್ದಾರೆ. ಬೇಂದ್ರೆಯವರ ವ್ಯಕ್ತಿತ್ವದ ಸಮರ್ಥ ನಿರೂಪಣೆ ಯನ್ನು ಇನ್ನಾವ ಉಕ್ತಿಗಳಿಂದಲೂ ಅಭಿವ್ಯಕ್ತಿಸಲು ಸಾಧ್ಯವಿಲ್ಲ. ಅಷ್ಟರಮಟ್ಟಿಗೆ ಈ "ಎಪ್ಪತ್ತರ ಬೇಂದ್ರೆ" ಸುನೀತ ಪರಿಪೂರ್ಣವಾಗಿದೆ.

ಸಮೃದ್ಧವಾದ ಜೀವನವನ್ನು ನಡೆಸುತ್ತ, ಬಾಳಿನಲ್ಲಿ ಯಶಸ್ಸಿನ ಹೆಜ್ಜೆಗಳನ್ನಿಡುತ್ತ ನಡೆದ ವಿನಾಯಕ ಗೋಕಾಕರು ಸಾಹಿತ್ಯರಂಗದಲ್ಲಿ ಅಪ್ರತಿಮವಾದ ಸಾಧನೆಯನ್ನು ಮಾಡಿದ್ದಾರೆ. ವಿನಾಯಕರ ಪ್ರತಿಭಾಪ್ರಪಂಚವನ್ನು ಕುರಿತ ಕಣವಿಯವರ ನುಡಿಗಳು ತುಂಬಾ ಮಾರ್ಮಿಕವಾಗಿವೆ.

ತುಂಬಿದ ತಲೆಯ ಬೆಳ್ಳಿಗೂದಲಿಗೆ ಬೆರಳಾಡಿ
ಚಿಂತನೆಯ ಅಪ್ಪಪೈಲಿನ ಹರಳ ಹೊರಳಿಸುತ
ಅಂತಃಕರಣದಂಗೈಯಲ್ಲಿ ತೂಗಿ ಬದುಕ
ಬೆಲೆಗೈವ ; 'ಅದೇನದಲ್ಲ' ಅದೆಲ್ಲವ ಕೂಡಿ

"ವಿನಾಯಕರಿಗೆ ವಂದನೆ"5 ಎಂಬ ಶೇಕ್ಸಪಿಯರನ ಮಾದರಿಯ ಈ ಸುನೀತದ ಮೊದಲ ಪಂಕ್ತಿಗಳು ವಿನಾಯಕರ ಸಂವೇದನಾಶೀಲ, ಚಿಂತನಪರ ಪ್ರತಿಭೆಯು ದ್ಯೋತಕವಾಗಿವೆ. ವಿನಾಯಕರ ಸೃಜನಶೀಲವಾದ ಪ್ರತಿಭೆ ಬದುಕಿನ ಮೌಲ್ಯಗಳನ್ನು ಜಿಜ್ಞಾಸೆಗೆ ಗುರಿಪಡಿಸಿರುವ ರೀತಿಯನ್ನು ಅವರ ಸಾಹಿತ್ಯ ಮತ್ತು ವ್ಯಕ್ತಿತ್ವದಲ್ಲಿ ಕಣವಿ ಕಂಡಿದ್ದಾರೆ.

ಎಂಟುದಿಕ್ಕಿನ ಗಾಳಿಗಲ್ಲಿ ಕಡಲಿನ ಹಾಡು,
ಮೂಡ-ಪಡುವಣ ನೆಳಲು-ಬೆಳಕಿನಲಿ ತೇಲುವರ-
ಸಂಚೆ ಬಾಳದೇಗುಲದಿ ಸಮನ್ವಯ–ತೀರ

---

5. 'ನಗರದಲ್ಲಿ ನೆರಳು' : "ವಿನಾಯಕರಿಗೆ ವಂದನೆ" (೧೯೭೮) ಪು. ೩.

ಸಿಂಗಾರ. ಅರುವತ್ತರಲು ಭಾರಿ ಕಸರತ್ತು.
ಎತ್ತರದಲ್ಲು ಬಾಗಿ ಹತ್ತಿರ ಬರುವ ಮಹತಿ :
ಸಂಕ್ರಾಂತಿ : ಕೈಕುಲುಕಿದಂತೆ ದ್ಯಾವಾಪೃಥಿವಿ.

ಗೋಕಾಕರ ಸಾಹಿತ್ಯಜೀವನದ ವಿವಿಧ ಮಜಲುಗಳು ಇಲ್ಲಿ ಕೆನೆಗಟ್ಟಿನಿಂತಿವೆ. ಕಡಲಾಚೆ ಸಾಗಿ ಸಮುದ್ರಗೀತೆಗಳನ್ನು ಕನ್ನಡಕ್ಕೆ ಕೊಟ್ಟ ಗೋಕಾಕರು ಭಾರತೀಯ ಸಾಹಿತ್ಯ ಪರಂಪರೆಗೆ ಪಾಶ್ಚಾತ್ಯ ಆಲೋಚನೆಯ ಎರಕಹೊಯ್ದರು. ಅವರ ಸಮನ್ವಯ ಧೋರಣೆ ಪ್ರಬುದ್ಧವಾದ ಸತ್ವ ಹಾಗೂ ಜೀವನಾನುಭವದ ಆಳವಾದ ಅವಲೋಕನದ ಫಲ. ಕಾವ್ಯದಲ್ಲಿ ನವ್ಯತೆಯನ್ನು ಸ್ವಾಗತಿಸಿದ, ಸಾಹಿತ್ಯದಲ್ಲಿ ಹೊಸಪ್ರಜ್ಞೆ ಸದಾ ಮೂಡ ಬೇಕೆನ್ನುವ ಗೋಕಾಕರು ಕೈಕುಲುಕಿದಂತೆ ದ್ಯಾವಾಪೃಥಿವಿಯನ್ನು ನೀಡಿ ತಮ್ಮ ಚಿಂತನ ಶೀಲತೆಯನ್ನು ತುಂಬಾ ಸಮರ್ಥವಾಗಿ ಪುನಃ ಪ್ರದರ್ಶಿಸಿದ್ದಾರೆ. ಹೀಗೆ ಗೋಕಾಕರ ಪರಿಣತವಾದ ಜೀವನದೃಷ್ಟಿಯನ್ನು ಕಣವಿಯವರು "ಅರವತ್ತರಲು ಭಾರಿ ಕಸರತ್ತು" ಎಂದಿದ್ದಾರೆ.

ಕಣವಿಯವರ ಕಾವ್ಯದ ಮುಖ್ಯ ಗುಣವಾದ ವರ್ಣನೆಯ ವಿಧಾನ ಅವರ ಸುನೀತಗಳಲ್ಲಿಯೂ ಅಂತಸ್ಥವಾಗಿದೆ. ಕವಿ ತನ್ಮಯನಾಗಿ ಭಾವನೆಗಳನ್ನು ಉತ್ಕಟವಾದ ರೀತಿಯಲ್ಲಿ ಅಭಿವ್ಯಕ್ತಿಸುತ್ತ ಹೋಗುವ ಅಂಶ ಗಮನಾರ್ಹವಾದುದು. ಅವರ "ರಸಿಕ ರಂಗ" ಎಂಬ ಸುನೀತ ಇದಕ್ಕೆ ಸ್ಪಷ್ಟವಾದ ಸಾಕ್ಷಿಯಾಗಿದೆ.

ಜೀವನದ ಯಾತ್ರೆಯಲಿ ಕಣ್ಣೀರ ತೀರ್ಥವ
ಕುಡಿದು, ನೋವುಗಳ ತಗ್ಗಿನಲಿ ನುಗ್ಗುನುರಿಯಾಗಿ
ಮುಗ್ಗರಿಸದೆಯೆ ಮುಂದಕಡಿಯಿಟ್ಟು, ಮುಡಿ ಬಾಗಿ
ಹಿಗ್ಗು-ದಿಣ್ಣೆಯನ್ನೇರಿ ನಿಂತ ರಸಿಕ! ಭೈರವ
ರೂಪದೆದುರು ಸೌಮ್ಯನಂದಾದೀಪ. ಮಲ್ಲಿಗೆ
ಬಕುಲ, ಸಂಪಿಗೆಯ ತಂಪನು ಜೀವಕೋಲಯಿಸಿ
ಸಖ್ಯದ ಕಂಪನುಂಡು, ತಂಬೂರಿ ನಾದದಲಿ
ತುಂಬಿ ಕರುಣೆಯ, ಪಡೆದೆ ರಸಸರಸ್ವತಿ ಹರಕೆ.

ಆಧುನಿಕ ಸಾಹಿತ್ಯದ ಇತಿಹಾಸದಲ್ಲಿ ವಿಚಾರ, ವಿಮರ್ಶೆ ಸಂಶೋಧನೆಗಳಿಂದ ಕೀರ್ತಿ ಪ್ರಾಯವಾದ ಕೈಂಕರ್ಯದಿಂದ ವಿಖ್ಯಾತರಾದ ರಂಗನಾಥ ಮುಗಳಿಯವರ ಜೀವನ ಕಷ್ಟ ಕೋಟಲೆಗಳ ವ್ಯಥೆಯ ಕಥೆ. ಆದರೂ ಮುಗಳಿ ರಸಿಕರಂಗರು, ಅವರು ನೋವನ್ನು ನಗೆಯಾಗಿಸುವ, ಗಹನವಾದುದನ್ನು ತಿಳಿಯಾಗಿಸುವ ಕಲೆಯನ್ನು ಹೊಂದಿದ ಅಂಶ ಒಂದು ಕುತೂಹಲಕರ ಸಂಗತಿ ಎಂದು ಕವಿ ಉಲ್ಲೇಖಿಸುತ್ತಾರೆ. ಮುಗಳಿಯವರು ಸಾಹಿತ್ಯ ಸೌರಭವನ್ನು ಬೀರಿದ ಹಾಗೆಯೇ ಸಂಗೀತಪ್ರಿಯರೂ ಆಗಿದ್ದಾರೆ, ಮುಗಳಿಯವರ

---

೬. 'ಎರಡುದಡ' : "ರಸಿಕರಂಗ". (೧೯೬೯), ಪು. ೧೯.

ಜೀವನ ವಿಧಾನವನ್ನು, ಸುನೀತದ ಮೊದಲ ಭಾಗ ವರ್ಣಿಸಿದರೆ, ಮುಂದಿನ ಭಾಗ ಅವರ ಅನುಪಮವಾದ ಸಾಧನೆಯನ್ನು ಪರಿಚಯಿಸುತ್ತದೆ.

ನಾಡಿಗಡಿಯಲಿ ಒಲವು-ಗುಡಿ ಕಟ್ಟಿ, ಚೆಲುವಿಗೆದೆ
ತೆರೆದು, ಸಜ್ಜನಿಕೆಯಲಿ ಹಾಲು ಜೇನನು ಕರೆದು
ಹಲವು ಪಣತಿಗೆ ಎಣ್ಣೆಯೆರೆದು, ಮಕ್ಕನು ತೆಗೆದು
ದೀಪಾವಳಿಯ ಗೈದೆ; ಮುಳ್ಳಿನಲು ಮುಗುಳೊಡೆದೆ.
ನಂದನದ ಮಂದಾರ ಒಂದಾರ ಕೊಳ್ಳೋಣ
ಲೋಕದೀ ಹೂವದಕೆ ಬಾಸಿಂಗ-ಬಾಗಿನ.

ರಂಗನಾಥ ಮುಗಳಿಯವರು ಮಹಾರಾಷ್ಟ್ರದಲ್ಲಿದ್ದು ಕನ್ನಡದ ಪಾಂಡಿತ್ಯಧ್ವಜವನ್ನು ಎತ್ತಿ ಹಿಡಿದು ನಾಡಿನುದ್ದಗಲಕ್ಕೂ ವಿದ್ಯಾರ್ಥಿಗಳಿಗೆ ಸಮರ್ಥವಾದ ಜ್ಞಾನ ದಾನ ಮಾಡಿ ದುದನ್ನು ವರ್ಣಿಸಿದ ಕಣವಿಯವರು ಮುಗಳಿಯವರ ಮಾತನ್ನೇ ಉಲ್ಲೇಖಿಸಿ ಅವರ ಸಾಹಿತ್ಯಕೃಷಿಯಲ್ಲಿ ಯಾವುದನ್ನಾದರೂ ನೋಡಿದಲ್ಲಿ ಅದು ಪ್ರೇರಣಾಪರವೂ ಚೈತನ್ಯ ಯುತವೂ ಆಗಿದೆಯೆನ್ನುತ್ತಾರೆ,

ಕಣವಿಯವರು ಕಾವ್ಯಾಭ್ಯಾಸಿಯಾಗಿ, ಶ್ರೇಷ್ಠಮಟ್ಟದ ಸಹೃದಯಿಯಾಗಿ, ಯಾವುದೇ ಕವಿಯ ಮೌಲ್ಯವನ್ನೂ ನಿರ್ಧರಿಸಬಲ್ಲರು. ಅಲ್ಲಿ ಅವರ ರಸಗ್ರಾಹಕ ದೃಷ್ಟಿಯ ಮೇಲ್ಮೆಯನ್ನು ನಾವು ಕಾಣಬಹುದು. ಇದಕ್ಕೆ ಕಣವಿಯವರ ''ಪು.ತಿ.ನ.''[7] ಎಂಬ ಸುನೀತ ಸೊಗಸಾದ ಉದಾಹರಣೆಯಾಗಿದೆ. ಕನ್ನಡದ ನವೋದಯ ಕಾವ್ಯದಲ್ಲಿ ಪು.ತಿ. ನರಸಿಂಹ ಚಾರ್ಯರದು ಒಂದು ವಿಶಿಷ್ಟವಾದ ಸ್ಥಾನ. ಅವರ ಕಾವ್ಯದಲ್ಲಿರುವ ಚಿಂತನೆಯ ಮಾಧುರ್ಯ ಪ್ರಸನ್ನತೆ, ಅನುಭೂತಿ ಮಧುರಚೆನ್ನರನ್ನುಬಿಟ್ಟರೆ ಇನ್ನಾರಲ್ಲೂ ಕಾಣಲು ಕಷ್ಟವಾಗುತ್ತದೆ. ಈ ದೃಷ್ಟಿಯಿಂದ ಅವರು ಹೊಸಗನ್ನಡ ಕಾವ್ಯದಲ್ಲಿ ಭಿನ್ನರಾಗಿದ್ದಾರೆ. ಪು.ತಿ.ನ. ಅವರನ್ನು ಕುರಿತ ಸುನೀತದಲ್ಲಿ ಅವರ ಕಾವ್ಯಗುಣವನ್ನು ಕಣವಿ ಬಹು ಸ್ಪಷ್ಟವಾಗಿ ವರ್ಣಿಸಿದ್ದಾರೆ.

ತುಂಬಿದುದು ತುಳುಕಿ ಹೋಗದ ಹಾಗೆ ತುಟಿಯಂಚಿ
ನಲ್ಲಿ ನಗು, ಒಗುಮಿಗುವ ನಮ್ಮ ಪ್ರತಿಭೆಯ ಮಿನುಗು
ಕಣ್ಣಿನಲಿ: ಬಾನ ಬೆಳ್ಳಕ್ಕಿ ಹಾರಿದ ಬೆರಗು.
ಬೆಳ್ಳಿ ಬಟ್ಟಲಿಗೆ ದಾಳಿಂಬೆ ಬಿಡಿಸುವ ಶುಚಿ
ರುಚಿ ಮಾತು: ಮೈದಡವಿ ಚಿಗುರಿ ಹೂಬಿಡುವ ಕೆಳೆ.
ಇರವಿನೊಳಹೊರಗು ಸ್ವರಲಹರಿ. ಶರದದ ಹಗಲು
ತೆರವು ತುಂಬುತ್ತ ತೇಲುವಾಗಂತುಕ ಮುಗಿಲು,
ಜಗದಚ್ಚರಿ ತೆರಂಬೊಳೆವ ಮನದಪೂರ್ವಕಳೆ.

---

7. 'ನಗರದಲ್ಲಿ ನೆರಳು'-''ಪು.ತಿ.ನ.'' (೧೯೭೪) ಪು. ೩೮.

ಇಲ್ಲಿಯ ಅಭಿವ್ಯಕ್ತಿ ಅತ್ಯಂತ ಧ್ವನಿಪೂರ್ಣವಾಗಿದ್ದು, ಕಣವಿಯವರ ಸೂಕ್ಷ್ಮವಾದ ಸಂವೇದನಾಶೀಲತೆಯೂ ಸುವ್ಯಕ್ತವಾಗಿದೆ. ಭಾವಪೂರ್ಣವಾದ ಭಾಷೆಯಿಂದ ಪು.ತಿ. ನ, ಅವರ ಪ್ರಸನ್ನವಾದ ಕಲಾತ್ಮಕ ವ್ಯಕ್ತಿತ್ವವನ್ನು ಮೂರ್ತಿಪ್ರತಿಮೆಯಂತೆ ಚಿತ್ರಿಸಲಾಗಿದೆ. ಅವರ ಕಾವ್ಯವನ್ನು ಜಿಜ್ಞಾಸೆಗೆ ಗುರಿಪಡಿಸಿ ಕಣವಿಯವರು ಜೀವನಾನುಭವ, ಆತ್ಮ ಸೌಂದರ್ಯದಿಂದ ಕಂಡ ಬೆಳಕನ್ನು ಸ್ವಾರಸ್ಯಮಯವಾಗಿ ಬಣ್ಣಿಸುತ್ತಾರೆ.

ಹೊಚ್ಚ ಹೊಸ ಪ್ರಕೃತಿ ವಿನಯದ ಪ್ರಜ್ಞೆ : ದೈವಾಜ್ಞೆ.
ಸಂಪ್ರದಾಯಕ್ಕೊಸೆದು ಮಸೆದ ಭಾವದ ಮೂಸೆ
ಹೊರ-ಒಳ ಜಗದ ಸೊಗದ ನಿರ್ಲಿಪ್ತ ಜಿಜ್ಞಾಸೆ.
ಆತ್ಮಪ್ರಕಟನೆ ಚೆಲುವ ಸೃಷ್ಟಿಯರಳುವ ಸಂಜ್ಞೆ.
ಮಲೆದೇಗುಲದ ಗಂಟೆಯುಲಿಗೆ ಚಲಿಸುವ ಲೋಕ.
ಬದುಕನವಲೋಕಿಸಿದಲೌಕಿಕ ಜೀವಪಾಕ.

ಕಣವಿಯವರ ಪದ ಸಾಮರ್ಥ್ಯ. ಸುನೀತದ ಶಿಲ್ಪಸೌಷ್ಠವ ಹಾಗೂ ವಸ್ತು ಮತ್ತು ಆಶಯಗಳ ಅಭಿವ್ಯಕ್ತಿಯ ಉತ್ಕೃಷ್ಟತೆ ಇಲ್ಲಿ ಅತ್ಯಂತ ಯಶಸ್ವಿಯಾಗಿ ನಿರ್ವಹಿಸಲ್ಪಟ್ಟಿದೆ ಎಂದು ಹೇಳಬಹುದು.

ಕನ್ನಡದ ಪ್ರಸಿದ್ಧ ಕಾವ್ಯಮೀಮಾಂಸಕರಾದ ತೀ. ನಂ. ಶ್ರೀಯವರು ಅಗಲಿದಾಗ ಅವರ ಆದರ್ಶಮಯ ಬದುಕನ್ನು ಸ್ಮರಿಸುತ್ತ ಬರೆದ ಶೋಕಗೀತೆಯನ್ನು ಸುನೀತದ ಬಂಧದಲ್ಲಿ ಕಣವಿ ರಚಿಸಿದ್ದಾರೆ. ಸಾಮಾನ್ಯವಾಗಿ ಆಂಗ್ಲ ರೋಮ್ಯಾಂಟಿಕ್ ಕವಿಗಳ ಶೋಕ ಗೀತೆ(elegy)ಯಲ್ಲಿ ಅಗಲಿದ ವ್ಯಕ್ತಿಗಳ ಶೋಕವನ್ನು ಬಣ್ಣಿಸಿದಂತೆ ತೋರುತ್ತದೆ, ಕುತೂಹಲಕರ ಸಂಗತಿಯೆಂದರೆ ಕನ್ನಡದಲ್ಲಿ ಸುನೀತಗಳು ಕೇವಲ ಕಾವ್ಯದ ಬಂಧದ ದೃಷ್ಟಿಯಿಂದ ಮಾತ್ರ ಆಂಗ್ಲಸಾಹಿತ್ಯದಿಂದ ಪ್ರೇರಣೆ ಪಡೆದು, ಅದರಲ್ಲಿಯ ವಸ್ತುವಿಧಾನವನ್ನು ಸ್ವತಂತ್ರವಾಗಿ ಬಳಸಿಕೊಂಡುದನ್ನು ಕಾಣಬಹುದು, ಮೈಸೂರು–ಧಾರವಾಡಗಳಲ್ಲಿ ಕನ್ನಡಕ್ಕೆ ಭದ್ರವಾದ ತಳಹದಿಯನ್ನು ಹಾಕಿದ ತೀ.ನಂ. ಶ್ರೀ. ಕಲ್ಕತ್ತೆಯಲ್ಲಿ ನಿಧನರಾದಾಗ "ಕನ್ನಡದ ಕಲಶ ತುಳುಕಿತ್ತೆ ? ಕೈಯ ಹೊತ್ತಿಗೆ ಜಾರಿ, ಸರಸ್ವತಿಯ ವಜ್ರದ ಓಲೆ ಕಳಚಿತ್ತೆ ?" ಎಂದು ಶೋಕಿಸುವ ಕಣವಿ ತೀ. ನಂ. ಶ್ರೀಯವರ ವಿದ್ವತ್ತೆಯ ಸಹೃದಯ ವ್ಯಕ್ತಿತ್ವವನ್ನು ನೆನಪಿಸುತ್ತ ಸಾಗುವ ಸುನೀತದ ನುಡಿಚಿತ್ರಗಳಿವು :

ಕಲ್ಪವೃಕ್ಷದೆಳನೀರು, ಬಾಗಿರುವ ಗೊನೆವಾಳೆ,
ವಸಂತದ ಚಂದನ ಗಂಧ, ಒಲುಮೆ ಹೂಮಾಲೆ,
ಸ್ನೇಹದೂದುಬತ್ತಿಯ ನವುರು, ನರುದಂಬುಲದ
ರುಚಿ-ಶುಚಿಗೊಳಿಸಿ, ನಸುನಗೆಯ ರೇಶಿಮೆವಸ್ತ್ರ
ಹೊಂದಿಸಿ, ನುಡಿಯ ಕನ್ನಡಿ ನೋಡಿ, ತಿದ್ದಿ ತೀಡಿ
ಜನಪದ ಭಾವ-ಬುದ್ಧಿಯ ಬೃಹತ್‌ಕೋಶದಲಿ

ಪ್ರೀತಿ ಪಾಥೇಯವನು ಕೈಕೊಂಡು, ಬಲುದಿನದ
ಪಯಣಕ್ಕೆ ಹೊರಟುಬಿಟ್ಟರು ಃ ನಮ್ಮ ತೀ.ನಂ.ಶ್ರೀ 8.

ಸುನೀತದ ಕೊನೆಯ ಎರಡು ಸಾಲುಗಳಲ್ಲಿ ಕಣವಿಯವರು ಒಂದು ಘನೀಭೂತವಾದ ಅನುಭವವನ್ನು ಮೂಡಿಸಿದ್ದಾರೆ.

ಇಂದಿಲ್ಲ ನಾಳೆ ಬಂದು, 'ಎಲ್ಲಿಗೆ ಬಂತು ಕೆಲಸ' ?
ಎಂದಾರು; ಈ ಗುಡಿಗೆ ಯಾರಿಡಬೇಕು ಕಳಸ ?

ತೀ. ನಂ. ಶ್ರೀ. ಜ್ಞಾನಕ್ಕಾಗಿ ಬದುಕಿದವರು. ಅವರು ಪ್ರಾರಂಭಿಸಿದ ಕನ್ನಡ ವಿದ್ವತ್ತೆಯು, ಸಂಶೋಧನೆಯ ಪರಂಪರೆ ಮುಂದುವರಿಯಬೇಕು ಎಂಬ ಆಶಯವನ್ನು ಕವಿ ಬಿಂಬಿಸುತ್ತ ನಮ್ಮ ಮೇಲಿರುವ ಹೊಣೆಯ ಬಗೆಗೂ ಎಚ್ಚರಿಸಿದ್ದಾರೆ.

ಕನ್ನಡ ಕಾವ್ಯದಲ್ಲಿ ಭಾವಮಯವಾದ ನಾದ, ಛಂದಗಳಿಗೆ ಪುಟ ತೆರೆದ ಕವಿ ಕರ್ಕಿಯವರ ವ್ಯಕ್ತಿತ್ವವನ್ನು ಕಣವಿಯವರು ನಿರೂಪಿಸುವಲ್ಲಿಯೂ ಒಂದು ತೆರನಾದ ಮನೋಜ್ಞತೆ ವ್ಯಕ್ತವಾಗುತ್ತದೆ.

ತೀರ ಎತ್ತವಿರದ ದೇವಗಣಗಿಲ ಗಿಡದ
ಸುತ್ತು ನೀರುಂಡು ನಳನಳಸಿರುವ ಹಸಲೆ; ಎಳೆ
ಬಿಸಿಲ ಮಿಂದು, ಸಂತೃಪ್ತಿ ಸುಳಿಗಾಳಿಯಲಿ ತಲೆ–
ಯೊಲೆದು, ಮಾಸದ ಹಸುಗೂಸಿನಂತೆ ನಸುನಗುತ
ಕೊಂಬೆ ತುತ್ತತುದಿಗೆ ಹಳದಿ-ಬಿಳಿ ಮಧುರಪಾಕದಿ
ಹೂವಿನಾರತಿಯ ಚಾನಿಗೆ ಹಿಡಿದು, ನಿರುಮ್ಮಳ
ನಿಂತ ರಸಿಕ9.

ದೇವಕಣಗಿಲದ ಪ್ರತಿಮೆಯ ಮೂಲಕ ಕಣವಿಯವರು ಅವರ ಜೀವನಸಿದ್ಧಿಯನ್ನು ಗುರುತಿಸಿದ್ದಾರೆ. ಕರ್ಕಿಯವರ ನಿರ್ಮಲವಾದ ಅಂತರಂಗದಲ್ಲಿಯ ರಸಿಕತೆಯ ಸ್ವಾರಸ್ಯವನ್ನು ಬಣ್ಣಿಸಿದ್ದಾರೆ,

ಹೊಸಗನ್ನಡ ಕಾವ್ಯಕ್ಕೆ ನಾಂದಿ ಹಾಡಿದ ಪಂಜೆ ಮಂಗೇಶರಾಯರ ಕಾವ್ಯದ ಭಾವ ಭಾಷೆಗಳ ಆಹ್ಲಾದಕಾರಿಯಾದ ಅನುಭವವನ್ನು, ಅದರ ದೃಷ್ಟಿವೈಶಾಲ್ಯವನ್ನು ಕಣವಿಯವರು ಸುನೀತದಲ್ಲಿ ಹೆಣೆದಿರುವಿಕೆಯೂ ಪರಿಶೀಲನಾರ್ಹವಾದುದು. ಕವಿ "ಪಂಜೆಯವರನ್ನು ನೆನೆದು" —

......ಮಕ್ಕಳ ಜೊತೆಗೆ ಆಡಿ, ಹಾಡಿ, ಕುಣಿ
ದು, ಕಥೆಹೇಳಿ ನಲಿದ ಕವಿಶಿಷ್ಯ ಗುರುವೆ ತಲೆ ಮಣಿ—
ದು, ನವೋದಯದ ಹೃದಯದೌದಾರ್ಯಕ್ಕೆ ನಮ್ಮ

---

8. 'ಎರಡುದಡ'–"ತೀ. ನಂ. ಶ್ರೀಯವರ ಪಯಣ" (೧೯೬೯) ಪು. ೩೧.
9. 'ನಗರದಲ್ಲಿ ನೆರಳು'— "ಕರಕಿ ಕಣಗಿಲ" (೧೯೭೪) ಪು. ೪.

ಹಮ್ಮು ಬಿರಿದು, ಅಂತಃಕರಣ ಚಿಮ್ಮುವದು. ಬಿಳಿ
ಬಣ್ಣದಲ್ಲೇಳು ಬಣ್ಣಗಳ ತಿರುಗಿಸಿ ಕಣ್ಣು
ಮನ ತಣಿಸಿ ತಂಗಾಳಿಯಾಗಿ, ಮಂಗಳ ಮಣ್ಣು
ಅರಳಿ ತೆನೆ-ಚಿನ್ನ. ಕನ್ನಡ ನುಡಿಯ ಗೋಧೂಳಿ
ಸಮಯಕ್ಕೆ ಹಲವು ನಕ್ಷತ್ರ ಮಿನುಗಿಸಿ ನಕ್ಕೆ
ತೃಪ್ತಿ ತುಳುಕಿಸಿ ಶರತ್ಕಾಲದಾಗಸಕ್ಕೆ''೧೦

''ಕವಿಶಿಷ್ಯ''ರೆಂದು ಖ್ಯಾತರಾದ ಪಂಜೆಯವರು ನವೋದಯ ಕನ್ನಡಕಾವ್ಯ ಪರಂಪರೆಯನ್ನು ಪ್ರಾರಂಭಿಸಿದುದಷ್ಟೇ ಆಗಿರದೆ ಮಂಗಳೂರಿನಲ್ಲಿಯ ಗೋವಿಂದ ಪೈ, ಪೇಜಾವರ ಸದಾಶಿವರಾಯ, ಕಡೆಂಗೋಡ್ಲು ಶಂಕರಭಟ್ಟ, ಮುಳಿಯ ತಿಮ್ಮಪ್ಪಯ್ಯ, ಗಣಪತಿರಾವ್ ಪಾಂಡೇಶ್ವರ ಮುಂತಾದ ಕವಿಗಳಿಗೆ ಪ್ರೇರಣೆಯನ್ನೂ ಚೈತನ್ಯವನ್ನೂ ನೀಡಿದುದರಿಂದಲೇ ಕನ್ನಡ ಸಾಹಿತ್ಯರಂಗದಲ್ಲಿ ಶರತ್ಕಾಲವನ್ನೂ ಕಾಣುವಂತಾಯಿತೆಂಬುದನ್ನು ಕಣವಿಯವರು ಇಲ್ಲಿ ಮನಗಾಣಿಸಿದ್ದಾರೆ.

ಜ ಚ. ನಿ. ಯವರು ಕನ್ನಡದಲ್ಲಿ ವಚನಪರಂಪರೆಯ ಪ್ರೇರಣೆಯಿಂದ ಸಾಹಿತ್ಯಿಕ, ಆಧ್ಯಾತ್ಮಿಕ, ಸಾಂಸ್ಕೃತಿಕ ಜ್ಞಾನಸಂಚಯವನ್ನು ಪುರೋಭಿವೃದ್ಧಿಗೊಳಿಸುವಲ್ಲಿ ಪ್ರಮುಖರಾದವರು. ಜ ಚ ನಿ. ಯವರ ಗ್ರಂಥರಾಶಿಯನ್ನು ಅವಲೋಕಿಸಿದಾಗ ಶ್ರೀಗಳ ಅಪೂರ್ವವಾದ ಪಾಂಡಿತ್ಯ-ಪ್ರತಿಭೆಗಳು ಪುರಾತನ ಜ್ಞಾನಭಂಡಾರವನ್ನಿಲ್ಲಿ ವಿನೂತನವಾದ ದೃಷ್ಟಿಯಲ್ಲಿ ಅವಲೋಕಿಸುವ ಪ್ರಯತ್ನದಲ್ಲಿ ನಿರತವಾಗಿರುವಂತೆ ತೋರುತ್ತದೆ. ಕಣವಿಯವರು ತಮ್ಮ ಸುನೀತದಲ್ಲಿ ಜ. ಚ. ನಿ. ಯವರ ಅಪೂರ್ವವಾದ ಆಧ್ಯಾತ್ಮಿಕ ವ್ಯಕ್ತಿತ್ವವನ್ನೂ ಅವರ ಜೀವನದರ್ಶನವನ್ನೂ ಹೀಗೆ ಬಣ್ಣಿಸುತ್ತಾರೆ :

.........ಷಟ್ಸ್ಥಲದ ಕಣದಲ್ಲಿ ಜೀವನದಹಂ
ಕೃತಿಯ ಹಂತಿಯ ಕಟ್ಟಿ ತುಳಿಸಿ, ಗಾಳಿಗೆ ತೂರಿ
ಸ್ವಾನುಭವಸಾರ ಸಿದ್ಧಾಂತ ಸಂಪುಟ ರಾಶಿ :
ಹಗೆಹದಲಿ ಹಾಕಿ ಬರಗಾಲಕ್ಕೆ ತೆಗೆದಿರಿಸಿ
ಮುಗ್ಗು ತಿನ್ನುವದಲ್ಲ; ನಿತ್ಯಬದುಕಿನ ದಾರಿ.
ದಣಿವಿರದೆ ತೋಡಿ ತೆಗೆಯುವರು ಚಿನ್ನದ ಗಣಿಯ
ಇರವು—ಬರೆಹದ ನಡುವೆ ತೆರವು ತುಂಬುವ ಮಣಿಹ''೧೧

ಬಾಳಿನಲ್ಲಿ ಮಾನವ ಆದರ್ಶವನ್ನು ಹಾಕಿಕೊಳ್ಳದಿದ್ದರೆ, ಅನುಭಾವದ ಅರಿವನ್ನೂ ಪಡೆಯದಿದ್ದರೆ ಅದು ಬರಗಾಲದ ಬದುಕಾಗುತ್ತದೆ. ಪ್ರತಿಯೊಬ್ಬನಿಗೂ ಈ ಅರಿವಿನ ಸೇಚನವನ್ನು ಮಾತು ಮತ್ತು ಕೃತಿಗಳ ಮೂಲಕ ನಿರ್ದೇಶಿಸುತ್ತ ಬಂದ ಜ. ಚ. ನಿ. ಚಿನ್ನದಗಣಿಯಿದ್ದಂತೆ ಎಂದು ಕಣವಿ ಪರಿಚಯಿಸುತ್ತಾರೆ. ''ಮಲ್ಲಿಕಾರ್ಜುನನ ಶಿಖರಕ್ಕೆ

---

೧೦. 'ನಗರದಲ್ಲಿ ನೆರಳು'-- ''ಪಂಜೆಯವರನ್ನು ನೆನೆದು'' (೧೯೭೪) ಪು. ೩೯.

೧೧, ಅದೇ ''ಶ್ರೀ ಜ. ಚ. ನಿ.'' (೧೯೭೪) ಪು. ३३.

ಬೆಳಕಾಗಿ"[12] ಎಂಬ ಆಕರ್ಷಕ ಶೀರ್ಷಿಕೆಯ ಸುನೀತ ಮಲ್ಲಿಕಾರ್ಜುನ ಮನ್ಸೂರರ ಕಲಾ ಪ್ರತಿಭೆಯನ್ನು ಪರಿಚಯಿಸುತ್ತದೆ. ಮಲ್ಲಿಕಾರ್ಜುನ ಮನ್ಸೂರ್ ಅವರು ಹಿಂದುಸ್ತಾನಿ ಸಂಗೀತದಲ್ಲಿ ಭಾರತೀಯ ಖ್ಯಾತಿಯನ್ನು ಗಳಿಸಿದ ಕನ್ನಡದ ಉನ್ನತ ಕಲಾವಿದರು. ಅವರ ಗಾನಲಹರಿ, ಸಂಗೀತದ ಸ್ವರಮಾಧುರ್ಯವನ್ನು ಈ ಕವಿ ಬಣ್ಣಿಸುವ ಬಗೆ ಹೀಗಿದೆ :

ನಸುಕಿನ ಕ್ಷಿತಿಜ ಕಂಠಕ್ಕೆ ಹೊಮ್ಮಿ ಆಕಾಶ
ಕ್ಕುಲಿವ ರಾಗ, ಬಯಲನಾಲೋಡಿಸುತ ಪ್ರತಿಪ-
ದಾರ್ಥವ ಹಿಂಜಿ, ಆಲಾಪಕ್ಕೆ ಸ್ವರ ಸ್ವರೂಪ
ದ ಹಂಜಿ : ಸೃಷ್ಟಿಮೂಲದ ನಾದ : ಸ್ವಪ್ರಕಾಶ.
ಹಿಗ್ಗಿ ತಳತಳ ಹೊಳೆದು. ಎಳೆದು ತನ್ನೊಳಸೆಳೆದು
ಹಡೆದ ಮೂರ್ತಿಗೆ ಜೀವದುಂಬಿ ಮೊರೆವ ನಿನಾದ.

ಸೃಷ್ಟಿಯ ಸಮಸ್ತವಾದ ಕ್ರಿಯೆಗಳಲ್ಲಿಯೂ ನಾದ–ಲಯಗಳ ವೈವಿಧ್ಯ ತುಂಬಿರುತ್ತದೆ. ಸ್ವರ, ರಾಗ, ನಾದ–ಲಯಗಳು ಮನ್ಸೂರರ ಕಂಠದಿಂದ ಮೂಡಿ ಬರುವಾಗ ಉಂಟಾಗುವ ಭಾವಾಭಿವ್ಯಕ್ತಿ ಸೃಷ್ಟಿಮೂಲವಾಗಿದ್ದು "ಕೆರೆಯ ನೀರನು ಕೆರೆಗೆ ಚೆಲ್ಲಿ ವರವ ಪಡೆದಂತೆ" ಮಲ್ಲಿಕಾರ್ಜುನ ಮನ್ಸೂರರು ಕಣವಿಯವರಿಗೆ ಕಂಡಿದ್ದಾರೆ. ಸುನೀತದ ಮುಂದಿನ ಭಾಗವು ಅವರ ವೈಯಕ್ತಿಕ ಸಾಧನೆಯ ಇನ್ನೊಂದು ಮುಖವನ್ನು ನೀಡುತ್ತದೆ.

ವಚನಕ್ಕೆ ವಚನ ಕೊಟ್ಟಂತೆ ಕಟ್ಟಿದ ಸೇತು,
ನೊಂತು ಶರಣರ ಕರುಳ ಮಿಡಿದು ಇಹ—ಪರ ಸೋಂಕೆ.
ಕಿವಿಗೊಟ್ಟ ಸಲಕೆ ಹೊಸಮಿಂಚು ಕಂಚಿನ ತಾನ
ರಸವರ್ಷ, ದಿಗ್ದಿಗಂತ ಸ್ಪರ್ಶ : ಪುನರುತ್ಥಾನ

ವಚನದ ಸಂಗೀತಮಾಧುರ್ಯವನ್ನು ಮಲ್ಲಿಕಾರ್ಜುನ ಮನ್ಸೂರರು ಸುಶ್ರಾವ್ಯವಾಗಿ ಹಾಡುತ್ತ ವಚನದಲ್ಲಿಯ ಗೀತಾಂಶವನ್ನು ಪ್ರಕಟಿಸುವ ಬಗೆ ಅನನ್ಯವಾದುದು. ಈ ದೃಷ್ಟಿಯಿಂದ ಅವರು ವಚನಗಳ ಸಂಗೀತ ಪ್ರತಿಭೆಯನ್ನು ಬೆಳಗಿಸಿರುವದನ್ನು ಕವಿ ಮನ್ಸೂರರ ವ್ಯಕ್ತಿತ್ವದ ಅನನ್ಯಾಂಶಗಳನ್ನು ಗುರುತಿಸುತ್ತ ಸ್ಪಷ್ಟಪಡಿಸಿದ್ದಾರೆ.

ಸ್ವತಂತ್ರಭಾರತದ ಪ್ರಧಾನಮಂತ್ರಿಯಾದ ಲಾಲಬಹಾದ್ದೂರ ಶಾಸ್ತ್ರಿಯವರನ್ನು ಕುರಿತು ಬರೆದ ಸುನೀತದಲ್ಲಿ ಅವರ ಸರಳತೆ, ಬಡತನ, ಪ್ರಾಮಾಣಿಕತೆ, ಕಾಯಕನಿಷ್ಠೆಯನ್ನು ಕಣವಿಯವರು ಚಿತ್ರಿಸುತ್ತ ಅವರ ಅಪರೂಪದ ವ್ಯಕ್ತಿತ್ವವನ್ನು ಸ್ಮರಿಸಿದ್ದಾರೆ.

ಗದ್ದುಗೆಯನೇರಿದರು ಕಾಣಿಸಿಕೊಳದ ಕಿರಿಯ.
ಬಾಜಾ ಬಜಂತ್ರಿಯ ನಿಲಿಸಿ ಸಹಜ ತಂತಿಯ ಮಿಡಿದ,
ಎಲ್ಲರಿಗು ಕಿವಿಗೊಟ್ಟು ತನ್ನ ಒಳದನಿ ಮರೆಯ[13]

---

೧೨. 'ನಗರದಲ್ಲಿ ನೆರಳು'–"ಮಲ್ಲಿಕಾರ್ಜುನನ ಶಿಖರಕ್ಕೆ ಬೆಳಕಾಗಿ" (೧೯೭೪) ಪು, ೩೯.
೧೩. 'ಎರಡು ದಡ'—"ಲಾಲಬಹಾದ್ದೂರ ಶಾಸ್ತ್ರಿ" (೧೯೬೯) ಪು. ೨೫.

ಎನ್ನುತ್ತ ಲಾಲಬಹಾದ್ದೂರ 'ಯಾರಿಗೂ ಸಿಗದ ಬಿಳಿಪಾರಿವಾಳವ ಹಿಡಿದ;' "ಮಧ್ಯ ರಾತ್ರಿಯುಲಿಂತು ಕೊರೆದು ಮಿಂಚಿನ ಗೆರೆಯು ಮರೆಯಾದ" ಈ ಅರ್ಥಪೂರ್ಣ ನುಡಿಗಳು ಗಣ್ಯವ್ಯಕ್ತಿಯ ಸ್ಮರಣೆಯುನ್ನು ಚಿರಸ್ಥಾಯಿಯಾಗಿಸುತ್ತವೆ. ಶಾಂತಿ ತತ್ವದಿಂದ ಮತ್ತು ದುಡಿಮೆಯಿಂದ ಯುಶಸ್ಸು ಸಾಧಿಸಿದ ಲಾಲಬಹಾದ್ದೂರರ ಆಂತರಿಕ ಹಾಗೂ ಬಾಹ್ಯ ವ್ಯಕ್ತಿತ್ವವನ್ನು ಕಣವಿಯುವರು ಸುನೀತದಲ್ಲಿ ಬಹು ಸಮಂಜಸವಾಗಿಯೇ ಚಿತ್ರಿಸಿದ್ದಾರೆ.

ಕಣವಿಯುವರ ವ್ಯಕ್ತಿಚಿತ್ರವನ್ನೊಳಗೊಂಡ ಸುನೀತಗಳನ್ನು ಅವಲೋಕಿಸಿದಾಗ ಕಾವ್ಯಾಭ್ಯಾಸಿಯಾದ ಸಹೃದಯುನಿಗೆ ಗೋಚರಿಸುವ ಕೆಲವು ಅಂಶಗಳನ್ನು ಇಲ್ಲಿ ಸ್ಪಷ್ಟ ಪಡಿಸಬಹುದು. "ಕಣವಿ ಅವರ ಕಾವ್ಯ ದೃಷ್ಟಿ ನಿಸರ್ಗದ, ಜೀವನದ ಚೆಲುವಿಗೆ ಆಕರ್ಷಿತ ವಾದ ರೊಮ್ಯಾಂಟಿಕ್ ದೃಷ್ಟಿಯಾಗಿದೆ. ಇದು ನವ್ಯವೂ ಆಗಬಹುದು".[14] ಎಂಬ ಹೇಳಿಕೆಯುನ್ನು ಇಲ್ಲಿ ಗಮನಿಸಬೇಕು. ಕಣವಿಯುವರು ವ್ಯಕ್ತಿ ಚಿತ್ರವನ್ನೊಳಗೊಂಡ ಸುನೀತಗಳಲ್ಲಿ ಗಣ್ಯರಾದವರ ವ್ಯಕ್ತಿತ್ವವನ್ನು ಚಿತ್ರಿಸುವಾಗ ರೂಪಕಗಳನ್ನೂ ಪ್ರತಿಮೆ ಗಳನ್ನೂ ಬಳಸುವಾಗ ಅವು ನಿಸರ್ಗಕ್ಕೊಂದು ವಸ್ತುಗಳಾಗಿರುವದನ್ನೂ ನೋಡಬಹುದು. ಕಣವಿಯುವರ ಸುನೀತಗಳ ವಿಶಿಷ್ಟಾಂಶಗಳೆಂದರೆ ಅವುಗಳಲ್ಲಿರುವ ಸಹಜತೆ, ಸರಳತೆ ಮತ್ತು ಧ್ವನಿರಮ್ಯತೆಯಿಂದ ಕೂಡಿದ ಕವಿಪ್ರತಿಭೆ, ಕಲ್ಪನೆಯ ಸೂಕ್ಷ್ಮತೆಗಳೇ ಪ್ರಮುಖ ವಾಗಿವೆ. ಕಣವಿಯುವರ ಸುನೀತಗಳಲ್ಲಿಯ ಶಬ್ದಸೃಷ್ಟಿ ಹಾಗೂ ಛಂದಸ್ಸಿನ ವೈವಿಧ್ಯ ಅವರ ವಿಶಿಷ್ಟವಾದ ಸಾಮರ್ಥ್ಯವನ್ನು ಆಕರ್ಷಕವಾದ ರೀತಿಯಲ್ಲಿ ಸಹೃದಯುನ ಮನಸ್ಸನ್ನು ಸೂರೆಗೊಳ್ಳುತ್ತವೆ. 'ರಸಿಕರಂಗ' ಸುನೀತದಲ್ಲಿ ಜೀವನದಲ್ಲಿ ಕಡು ಕಷ್ಟ ಗಳು ಬಂದಾಗ ವ್ಯಕ್ತಿಯ ಪರೀಕ್ಷೆ ನಡೆಯುತ್ತದೆನ್ನುವ ಕ್ಷಣಗಳಲ್ಲಿ ಮುಗಳಿ ತಮ್ಮ ವ್ಯಕ್ತಿತ್ವದ ಶ್ರೀಮಂತಿಕೆಯನ್ನು ತೋರಿಸಿದ್ದಾರೆನ್ನಲು ಕಣವಿ ಅವರ ಬಗೆಗೆ "ಮುಳ್ಳಿನಲು ಮುಗುಳೊಡೆದ" ಎಂದು ಹೇಳಿಬಿಡುತ್ತಾರೆ. ಗುಲಾಬಿಯ ಗಿಡ ಮುಳ್ಳಿನಿಂದ ಕೂಡಿ ದ್ದರೂ ಹೂವಿನ ಸುಗಂಧದಿಂದ ಜನರನ್ನು ಸದಾ ಆಕರ್ಷಿಸುತ್ತದೆ, ಹಾಗೆಯೇ ಮುಗಳಿ ತಮ್ಮ ಕಷ್ಟಗಳಲ್ಲೂ ಉತ್ತಮ ಅಭಿರುಚಿ ಹಾಗೂ ಸಂತೋಷದ ಮುಗುಳುನಗೆಯ ಕಳೆ ಯುನ್ನು ಕಳೆದುಕೊಳ್ಳಲಿಲ್ಲವಂತೆ. ಹೀಗೆಯೇ ಕವಿ ಹಳೆಗನ್ನಡದ ಕೆಲವು ಪದಗಳನ್ನು ತೆಗೆದುಕೊಂಡು ಅದಕ್ಕೆ ಒಂದು ಹೊಸಚೇತನವನ್ನು ನೀಡುತ್ತಾರೆ. ಪಂಪನಲ್ಲಿ ಬರುವ "ತೆರಂಬೊಳೆ"ಯುನ್ನು ಪು.ತಿ.ನ. ಅವರ ಬಗೆಗೆ "ಜಗದಚ್ಚರಿ ತೆರಂಬೊಳೆವ ಮನದ-ಪೂರ್ವಕಳೆ" ಎನ್ನುವಲ್ಲಿ ಪು.ತಿ.ನ. ಅವರ ವ್ಯಕ್ತಿತ್ವದ ಅಂತರಾಳದಲ್ಲಿಯ ಅಪೂರ್ವವಾದ ಕಳೆ ಕಾವ್ಯದಲ್ಲಿ, ನೀರಿನಲ್ಲಿ ವಾಳೆಮೀನು ಹೊಳೆದಂತೆ ಭಾಸವಾಗುತ್ತದೆಂದು ಸ್ಪಷ್ಟಪಡಿಸಿ ದ್ದಾರೆ. ವಿನಾಯುಕರ ಮನೋಧರ್ಮದಲ್ಲಿ ಇರುವ "ಅಂತಃಕರಣದಂಗೈಯಲ್ಲಿ ಬೆಳೆಗೈವ" ಸಾಧನೆಯುನ್ನು ಕಣವಿ ಮನೋಜ್ಞವಾಗಿ ಗುರುತಿಸಿದ್ದಾರೆ. ಬೇಂದ್ರೆಯುವರ ಕಾವ್ಯಪ್ರತಿಭೆ "ಹಣ್ಣಾದ ಕೇದಿಗೆಯ ಹೊಡೆ"ಯೆನ್ನುವ ಕವಿ, ಅವರ ಕಾವ್ಯದಲ್ಲಿಯ "ನಾದ" "ಒಳ

೧೪. ಕೀರ್ತಿನಾಥ ಕುರ್ತಕೋಟಿ-"ಯುಗಧರ್ಮ ಹಾಗೂ ಸಾಹಿತ್ಯ ದರ್ಶನ." (೧೯೬೨) : ಪು.೮೮.

ದನಿ" (ಧ್ವನಿರಮ್ಯತೆ) "ಮಾಂತ್ರಿಕನಾಡಿ" ಮುಂತಾದವುಗಳಲ್ಲಿ ಸೂಕ್ತವಾದುದನ್ನೇ ಬಳಸಿದ್ದಾರೆ. ಛಂದಸ್ಸಿನ ದೃಷ್ಟಿಯಿಂದ "ರಸಿಕರಂಗ", "ಎಪ್ಪತ್ತರ ಬೇಂದ್ರೆ", ಇಟಾಲಿಯನ್ ಮಾದರಿಯ ಸುನೀತ (೮+೬=೧೪ ಪಂಕ್ತಿಗಳು)ಗಳಾದರೆ "ವಿನಾಯಕರಿಗೆ ವಂದನೆ" ಶೇಕ್ಸಪಿಯರಿಯನ್ ಮಾದರಿಯ ಸುನೀತ (೪×೩+೨ = ೧೪ ಪಂಕ್ತಿಗಳು) ವಾಗಿದೆ. ಉಳಿದವುಗಳಲ್ಲಿ "ಕರಕಿ ಕಣಗಿಲು", "ಶ್ರೀ ಜ. ಚ. ನಿ." "ಪು.ತಿ.ನ", "ಪಂಜೆಯುವರನ್ನು ನೆನೆದು", "ಮಲ್ಲಿಕಾರ್ಜುನ ಶಿಖರಕ್ಕೆ ಬೆಳಕಾಗಿ" ಸುನೀತಗಳಲ್ಲಿ ಕಣವಿವರು ಹದಿನಾಲ್ಕು ಪಂಕ್ತಿಗಳ ನೂತನವಾದ ಪ್ರಯೋಗವನ್ನು ಮಾಡಿದ್ದಾರೆ. "ಲಾಲಬಹಾದ್ದೂರ ಶಾಸ್ತ್ರಿ" ಸುನೀತದಲ್ಲಿ ಮೂರು ಮೂರು ಪಂಕ್ತಿಗಳಲ್ಲಿ ನಾಲ್ಕು ಪಂಕ್ತಿಗಳಿಗೆ ಬದಲು ವ್ಯಕ್ತಿತ್ವವನ್ನು ವರ್ಣಿಸುತ್ತ ಕೊನೆಯ ಎರಡು ಸಾಲುಗಳಲ್ಲಿ ವಿಚಾರಕ್ಕೆ ಮಹತ್ವದ ತಿರುವನ್ನು ಕೊಟ್ಟು ಮುಕ್ತಾಯಗೊಳಿಸಲಾಗಿದೆ.

ಕಣವಿಯವರ ನವ್ಯಮನೋಧರ್ಮ ಅವರ ಸುನೀತಗಳಲ್ಲಿಯೂ ವ್ಯಕ್ತವಾಗಿದೆ. "ಪಂಜೆಯುವರನ್ನು ನೆನೆದು" ಸುನೀತ ಪ್ರಾರಂಭವಾಗುವದು ನವ್ಯಕಾವ್ಯದ ದೃಷ್ಟಾಂತ ವಿಧಾನದ ಈ ಮಾತುಗಳಿಂದ—

"ತಿಟಿ ತಿಟಿ ಟೈಟ್ ಪ್ಯಾಂಟು, ಒತ್ತು-ಬೂಟಿಗೆ ಗುಡ್
ನೈಟ್ ಎಂದು, ತೆಳು ಪಂಜೆಯುಟ್ಟು, ಚಪ್ಪಲಿ ಮೆಟ್ಟಿ
ತೆಂಕಣಗಾಳಿಗೊಡ್ಡಿ ಮೈಯ, ಸಹಜ ಭೆಟ್ಟಿ
ಯಾದ ಗೆಳೆಯರ ಜೊತೆಗೆ ಮಾತಾಡುತ್ತ ಗುಡ್ಡ
ವೇರಿ ಕುಳಿತಂತೆ ಹಾಯೆನಿಸುವದು : ಪಂಜೆ ನಿಮ್ಮ
ನೆನೆದಾಗ[15]—

ಒಟ್ಟಿನಲ್ಲಿ ಸಮನ್ವಯ ಮನೋಧರ್ಮದ ಕಣವಿಯವರು ಕನ್ನಡದ ಪ್ರಸಿದ್ಧ ಕವಿಗಳನ್ನು ಸುನೀತದಲ್ಲಿ ಚಿತ್ರಿಸಿರುವ ರೀತಿ ಆಯಾ ಕವಿಗಳ ವ್ಯಕ್ತಿತ್ವ ಮತ್ತು ಕಾವ್ಯದ ಮೇಲೆ ಬರೆದ ಭಾಷ್ಯವೆಂದು ಹೇಳಬಹುದು. ಮೌಲ್ಯಮಾಪನದಲ್ಲಿರುವ ಅವರ ಪರಿಶುದ್ಧವೂ ಅಂತಃಕರಣಪೂರ್ವಕವೂ ಆದ ಮನೋಧರ್ಮವು ಸುನೀತಗಳ ಶ್ರೇಷ್ಠತೆಯನ್ನು ಹೆಚ್ಚಿಸುತ್ತದೆ. ಸುನೀತಗಳಲ್ಲಿ ವ್ಯಕ್ತವಾಗುವ ಕಾವ್ಯಾತ್ಮಕವಾದ ಮೌಲ್ಯಗಳಿಂದಲೂ ಕನ್ನಡ ಕವಿಗಳ ಚರಿತ್ರೆಗೆ ಪೂರಕವಾದ ಅನುಭವವನ್ನು ಈ ಸುನೀತಗಳು ನೀಡಬಲ್ಲವು. ಕಣವಿಯವರಲ್ಲಿರುವ ಪರಂಪರೆಯ ಪ್ರಜ್ಞೆಯನ್ನೂ ಸಾಂಸ್ಕೃತಿಕ ಧೋರಣೆಯ ಕಾಳಜಿಯನ್ನೂ ಅವರ ಸುನೀತಗಳು ಪ್ರಬಲವಾಗಿ ಪ್ರಚುರಪಡಿಸುತ್ತವೆ.

---

೧೫. 'ನಗರದಲ್ಲಿ ನೆರಳು'-"ಪಂಜೆಯುವರನ್ನು ನೆನೆದು" (೧೯೭೪) ಪು. ೩೯.

ಕೆ. ನೆಂ. ರಾಜಗೋಪಾಲ

# ಕಣವಿಯವರ ಕಾವ್ಯದಲ್ಲಿ ಪ್ರತಿಮೆಗಳು

ನಾನು 1953 ರಿಂದ 55ರ ಅವಧಿಯಲ್ಲಿ ನನ್ನ ಎಂ. ಎ. ವಿದ್ಯಾಭ್ಯಾಸಕ್ಕಾಗಿ ಧಾರವಾಡದಲ್ಲಿದ್ದೆ. ಆಗ ಚೆನ್ನವೀರ ಕಣವಿಯವರ ಪರಿಚಯವಾಗಿ ಅದು ಗೆಳೆತನವನ್ನು ಮೀರಿ ಅವರ ಸಂಸಾರ ವಲಯದಲ್ಲಿ ನಾನೂ ಒಬ್ಬನಾಗಿ ಹೋದೆ. ಅಂತಹ ನಿಕಟ ಸಂಪರ್ಕ ದಿಂದ ಬಿಡಿಸಿಕೊಂಡು ಅವರ ಕಾವ್ಯ ವಿಮರ್ಶೆಗೆ ತೊಡಗುವುದು ಸುಲಭವಲ್ಲ. ಅವರ ಸನ್ಮಾನವನ್ನು ಮನಸಾ ಒಪ್ಪಿದುದರ ಫಲವಾಗಿ ಈ ಲೇಖನವನ್ನು ಬರೆಯುತ್ತಿದ್ದೇನೆ. ಇದರಲ್ಲಿ ನನ್ನದಕ್ಕಿಂತ ಓದುಗರ ಹೊಣೆಗಾರಿಕೆ ಹೆಚ್ಚಾಗುವುದಲ್ಲದೆ ಅವರ ಮೌಲಿಕ ಸಾಮರ್ಥ್ಯವನ್ನು ಅದು ಅನುಸರಿಸುತ್ತದೆ.

ಒಂದು ರೇಡಿಯೋ ಸಂದರ್ಶನದಲ್ಲಿ ಕಣವಿಯವರು ತಮ್ಮ ನವ್ಯ ಕಾವ್ಯದ ಒಲವು ಎಂದಿನಿಂದ ಮೊದಲಾಯಿತೆಂಬ ಪ್ರಶ್ನೆಗೆ ಅವರ 'ಹೊಸ ಹುಟ್ಟು' ('ದೀಪಧಾರಿ') ಎಂಬ ಕವಿತೆಯ ಸುಮಾರಿಗೆ ಎಂದು ಉತ್ತರಿಸಿದ ನೆನಪಿದೆ. ಆದುದರಿಂದ ಅವರ ಪ್ರತಿಮಾ ವಿಧಾನವನ್ನು ಪರಿಶೀಲಿಸಲು ಅವರ ಹೇಳಿಕೆಯನ್ನೇ ಆಧರಿಸುತ್ತೇನೆ, ಮತ್ತು ಆನಂತರ ದಲ್ಲಿ ವಿಕಾಸವಾದ ಅವರ ಕಾವ್ಯ ಪ್ರತಿಮೆಗಳನ್ನು ಕುರಿತು ಪರಿಶೀಲಿಸುತ್ತಿದ್ದೇನೆ.

ಕಣವಿಯವರು ಬಳಸಿರುವ ಪ್ರತಿಮೆಗಳಿಗೆ 'ಹೊಸಹುಟ್ಟಿ'ಗೂ ಮುಂಚಿನ ಸಂಬಂಧ ವಿಲ್ಲವೆನ್ನುವುದು ನನ್ನ ಅಭಿಪ್ರಾಯವಾಗಿಲ್ಲ, ಏಕೆಂದರೆ ಅವರ ಮುಂದಿನ ಮತ್ತು ಇಂದಿನ ಪ್ರಯತ್ನಗಳಿಗೆ ಅದಕ್ಕೂ ಹಿಂದಿನ ಕಾಲವು ಭೂಮಿಕೆಯಾಗಿರುತ್ತದೆ. ಇದರ ವಿವರವನ್ನು ಮುಂದೆ ಕಾಣಬಹುದಾಗಿದೆ. ಆದರೂ 'ಹೊಸಹುಟ್ಟಿ'ನ ಗುರುತು ಒಂದು ಮುಖ್ಯ ಘಟ್ಟವಾಗಿದೆ.

ಕಣವಿಯವರು ಸೌಜನ್ಯ ಶೀಲರು, ಸ್ನೇಹಮಯಿ. ನನಗೆ ತಿಳಿದಮಟ್ಟಿಗೆ ತಮ್ಮ ಮಾಧ್ಯಮಿಕ ಶಾಲಾದಿನಗಳಿಂದಲೂ ಕಾವ್ಯರಚನೆಯಲ್ಲಿ ತೊಡಗಿದವರು. ಅವರ ಯೌವನಾ ವಸ್ಥೆಯಲ್ಲಿಯೇ ಅವರ ಕವಿತನಕ್ಕೆ ಒಂದು ನಿಶ್ಚಿತವಾದ ದನಿ ಒಡಮೂಡಿತೆನ್ನಬಹುದು, ಹೀಗೆಯೇ ಅವರ ಕಾವ್ಯದಲ್ಲಿ ಕಂಡುಬರುವ ಬದಲಾವಣೆಗೂ ಅವರ ಮನಸ್ಸು ಆಧಾರ ಭೂತವಾಗಿದೆ. ಹೀಗೆನ್ನುವಾಗ ಅವರ ಸ್ನೇಹಮಯತೆಯೂ ಕಾವ್ಯಪ್ರೇಮದ ಬಿಸಿಯಿಂದ ಕೂಡಿ ವಿಕಾಸವಾದುದೆಂದು ಶಂಕಿಸಬಹುದಾಗಿದೆ, ಅದಕ್ಕೂ ಮುಖ್ಯವಾದುದು ಅವರ ಕಾವ್ಯ ಧೋರಣೆಯೇ ಆಗುತ್ತದೆ.

ಕಣವಿಯವರು ಹಲವಾರು ಪ್ರಸಿದ್ಧ ಕವಿಗಳನ್ನು ಪ್ರತಿಷ್ಠಿತ ವ್ಯಕ್ತಿಗಳನ್ನು ಕುರಿತು ಗಂಭೀರವಾದ ಸುನೀತಗಳನ್ನು ರಚಿಸಿದ್ದಾರೆ. ಇವುಗಳು ಅವರ ಉಳಿದ ರಚನೆಗಳಿಗಿಂತಲೂ

ಯಶಸ್ವಿಯಾದವೆಂದು ಕಂಡುಬರುತ್ತಿದೆ. ಅಂದ ಮೇಲೆ ಜೀವನ ಮೌಲ್ಯಗಳನ್ನು ಗುರುತಿಸುವಲ್ಲಿ ಇವರ ಮನಸ್ಸು ದುಂಬಾಲು ಬೀಳುವ ರೀತಿಯನ್ನು ಗುರುತಿಸಬಹುದು. ಇವರ ಮನಸ್ಸಿಗೆ ಬಂದ ಕನ್ನಡ ಕವಿಗಳಲ್ಲಿ ಮಧುರಚೆನ್ನ, ಕುವೆಂಪು, ಬೇಂದ್ರೆ ಮತ್ತು ಅಡಿಗರು ಮುಖ್ಯವೆಂದು ಹೇಳಿದರೆ ತಪ್ಪಾಗಲಾರದು. ಇವರೆಲ್ಲರ ಮೂಲಕ ಈ ಕವಿಯ ಸ್ನೇಹವು ತನ್ನ ರೆಂಬೆ ಕೊಂಬೆಗಳನ್ನು ತೂರಿಸಿ ಬೆಳೆದು ಫಲಿಸುವ ಪ್ರಯತ್ನ ಮಾಡಿದೆ. ಇದು ಒಂದು ದೌರ್ಬಲ್ಯವೆಂದು ಗುರುತಿಸುವುದಕ್ಕಿಂತ ಕನ್ನಡ ಕಾವ್ಯ ಪರಂಪರೆಯಲ್ಲಿ ಪ್ರಭಾವಗಳನ್ನು ಮುರಿದು ಬೆಳೆಯಲು, ಸ್ವತಂತ್ರವಾದ ದನಿಯನ್ನು ಎತ್ತಲು ಒದಗಿಬಂದ ಸಮಕಾಲೀನ ಸಂದರ್ಭವೆಂದು ಹೇಳುವುದು ಸರಿಯಾಗುತ್ತದೆ. ಪರಂಪರೆಯ ಪ್ರಭಾವವನ್ನು ಹೇಳುವಲ್ಲಿ ವಚನ ಸಾಹಿತ್ಯದ ಸತ್ವವೂ ಮುಖ್ಯವಾಗಿ ಅವರ ಮನಸ್ಸನ್ನು ತುಂಬಿಕೊಂಡು ಕಾವ್ಯ ವಿಕಾಸದಲ್ಲಿ ಪ್ರೌಢಿಮೆಯುಂಟಾಯಿತೆನ್ನಬಹುದು.

ಹೊಸಗನ್ನಡ ಸಾಹಿತ್ಯದ ಕವಿಗಳಿಗೆ ಪಾಶ್ಚಾತ್ಯ ಆಧುನಿಕ ಕವಿಕೃತಿಗಳ ಪ್ರಭಾವವಿರುವುದನ್ನು ಸಾಮಾನ್ಯವಾಗಿ ಕಾಣುತ್ತೇವೆ. ಹೊಸ ಹೊಸ ಕಾವ್ಯ ಶಿಲ್ಪಗಳು ಕನ್ನಡ ನವ್ಯಕಾವ್ಯದಲ್ಲಿ ಕೂಡ ಕಾಣಿಸಿಕೊಳ್ಳುವುದಕ್ಕೆ ಹೊರಗಿನ ಪ್ರೇರಣೆಯು ಆಧಾರವಾಯಿತೆನ್ನಬಹುದು. ಹೀಗೆ ಹೊಸ ಹೊಸ ಮಾದರಿಗಳು ನಮ್ಮ ಕವಿಗಳ ಕೈವಶವಾದುವೆಂಬುದನ್ನು ಮರೆಯದೆ ಕಣವಿಯವರನ್ನು ನಾವು ಗುರುತಿಸಬೇಕಾಗುತ್ತದೆ. ಅದರಲ್ಲೂ ಸುನೀತಗಳಲ್ಲಿ ಕಣವಿಯರ ಹಿರಿಮೆ ದನಿಯೆತ್ತುತ್ತದೆ.

ನಾನೂ ಅವರೂ ಜೊತೆಯಾಗಿ ಕುಳಿತೇ ಪಾಶ್ಚಾತ್ಯ ನವ್ಯ ಕೃತಿಗಳನ್ನು ಪರಿಶೀಲಿಸುತ್ತಿದ್ದೆವು, ಇಂತಹ ಅಭ್ಯಾಸದ ಅವಶ್ಯಕತೆಯನ್ನು ನಾವು ಗುರುತಿಸಿದ್ದೆವು. ಏಕೆಂದರೆ ಅಡಿಗರ ಮತ್ತು ರಾಮಚಂದ್ರಶರ್ಮರ ಕೃತಿಗಳ ರಚನೆಗಳನ್ನು ಅನುಸರಿಸುವುದರ ಬದಲು ನಮ್ಮದೇ ಆದ ಸಾಧನಗಳನ್ನು ಕಂಡುಕೊಳ್ಳಬೇಕಾದ ಪರಿಸರವೊಂದು ನಮ್ಮನ್ನು ಆವರಿಸಿದ್ದಿತು, ಇದರ ಜೊತೆಗೆ ಮತ್ತೊಂದು ಸತ್ಯವೂ ಉಂಟು. ನಮ್ಮ ಭಾಷೆಯ ಜಾಯಮಾನವು ನಮ್ಮ ಸಾಮಾಜಿಕತೆಯ ರಕ್ತದಿಂದ ಜೀವಂತವಾಗಿರುವಾಗ ಬೇರೆಯ ಪ್ರಭಾವಗಳು ಅದರಲ್ಲಿ ಬೆರೆತು ಹೋಗುವುದಲ್ಲದೆ ಅವಿಭಾಜ್ಯವಾಗುವುದೂ ಉಂಟು. ಉದಾಹರಣೆಗೆ ಐರಿಷ್ ಕವಿ A. E. ಎಂಬಾತನ ಕೃತಿಗಳು, ಆಧ್ಯಾತ್ಮಿಕವಾದುವು ; ಅವುಗಳಲ್ಲಿ ನಮ್ಮ ಉಪನಿಷತ್ತಿನ ನಿಲುವುಗಳು ಬೆಳ್ದಿಂಗಳಲ್ಲಿ ಹೊಳೆಯುವ ಗೋಪುರಗಳಂತೆ ರಂಜಿಸುತ್ತವೆ. ನಮ್ಮ ಪ್ರಸಿದ್ಧ ಕವಿಗಳಾದ ಬೇಂದ್ರೆ, ಕುವೆಂಪು ಮತ್ತು ಅಡಿಗರು ಅಭ್ಯಾಸಮಾಡಿರುವುದುಂಟು, ಆದರೆ ನಮ್ಮ ಕವಿಗಳ ಕೃತಿಗಳಲ್ಲಿ ಪ್ರಕಾಶಿಸುವ ಅಥವಾ ಮಿಂಚುವ ಆಧ್ಯಾತ್ಮಿಕತೆಗೆ ಪರಕೀಯವೆಂದು ಆರೋಪಿಸುವುದು ಸರಿಯಲ್ಲ. ಏಕೆಂದರೆ ಇಂತಹ ಸತ್ವವು ನಮ್ಮ ಕಾವ್ಯ ಸಂಪ್ರದಾಯಕ್ಕೂ ಸೇರಿರುತ್ತದೆ. ಪ್ರಸ್ತುತ ಕಣವಿಯವರ ಕೃತಿಗಳಲ್ಲಿ ಅನುಭಾವದ ಹೊಳಹು ಕಾಣುವುದು ಅವರ ಸ್ವಂತಿಕೆಗೆ ಸೇರಿದ ವಿಷಯವಾಗಿದೆ.

ಕಣವಿಯವರ ಅನುಭಾವದ ನಿಲುವು ಆನುವಂಶಿಕವಾಗಿ ಬಂದ ಕೊಡುಗೆ. ಒಮ್ಮೆ ತಮ್ಮ ತಂದೆಯವರ ಕೊನೆಯ ಘಳಿಗೆಯನ್ನೂ ಅದರ ಪರಿಯನ್ನೂ ನನಗೆ ಮನಬಿಚ್ಚಿ ಹೇಳಿರುವುದುಂಟು. (ಏಕೆಂದರೆ ಅವರ ತಾಯಿ ತಂದೆಗಳನ್ನು ನಾನು ಕಂಡಿದ್ದವನು.) ಆಗಿನ ಅವರ ಸ್ಥಿತಿಗತಿಯು ನನ್ನ ಮನಸ್ಸಿನಲ್ಲಿ ಅಚ್ಚೊತ್ತಿದೆ. ಆದುದರಿಂದ ಕಣವಿಯವರ ಅನುಭಾವಿಕ ಗುಣಗಳು ಅವರ ಕಾವ್ಯದಲ್ಲಿಯೂ ಮೂಲಭೂತ ಸ್ಥಾನವನ್ನು ಪಡೆದು ಕೊಂಡಿರುವುದಲ್ಲದೆ ಮಧುರಚೆನ್ನರ 'ನನ್ನ ನಲ್ಲ' ಎಂಬ ಕೃತಿಯ ಪ್ರಭಾವಕ್ಕೂ ಅವಕಾಶ ವುಂಟಾಗಿದೆ. ಇದರ ಜೊತೆಗೇ ಮೂಡಿಬರುವ ಇವರ ವಿಚಾರಗಳಿಗೆ ವಾಹಕವಾಗಿರುವ ಪ್ರಕೃತಿಯಲ್ಲಿ ಧಾರವಾಡದ 'ಅತ್ತಿಕೊಳ್ಳ' ಮೊದಲಾಗಿ 'ಸಾಧನಕೇರಿ'ಯ ಪರಿಸರವೂ ಸೇರಿಹೋಗುತ್ತದೆ, ಪ್ರಕೃತಿಯ ವೈಭವವು ಇದರ ಕಾವ್ಯದ ನೆಲೆಗಟ್ಟಿನಿಂದಲೇ ಶೋಭಿಸು ತ್ತದೆ, ಒಂದು ಪರಿಸರದ ಪ್ರಕೃತಿಯು ಹೀಗೆ ಜೀವಂತವಾಗಿ ಕಾವ್ಯರೂಪದಲ್ಲಿರುವುದು ಕಣವಿಯವರ ಅದೃಷ್ಟವೆಂದು ಹೇಳುವಂತಾಗಿದೆ. ಈ ಕವಿಯ ಮೊಕ್ಕಾಲು ಪಾಲು ಪ್ರತಿಮೆಗಳಲ್ಲಿ ಇಂಥ ಪರಿಸರದಿಂದ ಒಡೆದು ಮೂಡುವ ಕವಲು ಕವಲಾಗಿ ಅಲಂಕರಿಸುವ ವೈಷಯಿಕ (passionate) ಅಂಶಗಳಾಗುತ್ತವೆ. ಇದಕ್ಕೆ ಆಧಾರವಾಗಿ 'ಬೇಲಿಯ ಮೇಲಿನ ನೀಲಿಯ ಹೂಗಳು' ('ದೀಪಧಾರಿ') ಒಂದು ಹೆಗ್ಗುರುತು ಮತ್ತು ಮೊದಲ ಹಂತದಲ್ಲಿಯೇ ಕಾಣಿಸಿಕೊಂಡ ಕೃತಿ.

ಕವಿಯ ವಿದ್ಯಾಭ್ಯಾಸ (ಎಂ.ಎ.) ಮುಗಿದ ಯೌವನಾವಸ್ಥೆಯಲ್ಲಿ ಇವರ ಮನ ವನ್ನು ತುಂಬಿಕೊಂಡ ಧಾರವಾಡದ ಬದುಕು, ಎಲ್ಲ ಕವಿತೆಗಳಲ್ಲೂ ಹಾಸುಹೊಕ್ಕಾಗಿದೆ. ಇಂಥ ಹಿನ್ನೆಲೆ ಮುನ್ನೆಲೆಗಳ ಅವಸ್ಥಾಂತರಗಳನ್ನು ಒಳಗೊಂಡ ಕಾವ್ಯದ ಹಂದರದಲ್ಲಿ ಸಮಕಾಲೀನತೆಯನ್ನೂ ಅದರ ಕುಂದು ಕೊರತೆಗಳನ್ನೂ ಇವರು ಆಧ್ಯಾತ್ಮಿಕ ಮೌಲ್ಯ ದೊಡನೆ ತೂಕ ಮಾಡಿದವರೆನ್ನಬಹುದು. ಆದುದರಿಂದ 'ಬೇಲಿಯ ಮೇಲಿನ ನೀಲಿಯ ಹೂ'ಗಳಂತೆಯೇ ಮೌಲ್ಯಗಳು ಕಾಣಿಸಿಕೊಳ್ಳುತ್ತವೆ. ಇವರ 'ಕಾಲಾತೀತ' ('ದೀಪಧಾರಿ') ಎಂಬ ಕೃತಿಯನ್ನು ಓದಿದವರಿಗೆ ಉಳಿದ ಮುಂದಿನ ಕೃತಿಗಳೂ ಅರ್ಥಪೂರ್ಣ ವಾಗುತ್ತವೆ.

ಕಣವಿಯವರು ಬಳಸುವ ಪ್ರತಿಮೆಗಳ ನಿಲುವನ್ನೂ ಕಾವ್ಯವಸ್ತುವಿನ ಸಂಬಂಧ ದಲ್ಲಿ ಅವುಗಳ ವ್ಯಾಪಕತೆಯನ್ನೂ ಗಮನಿಸಿ ಪಟ್ಟಿಮಾಡುವುದು ಮುಖ್ಯವಲ್ಲ. ನವ್ಯ ಕವಿಗಳು ಅನುಸರಿಸಿದ ರೀತಿನೀತಿಯನ್ನೇ ಅವರು ತಮ್ಮ ಕಲ್ಪನೆಗಳಿಗೆ ಬಳಸಿದ್ದಾರೆ. ಅಂಥ ಪ್ರಯತ್ನದಲ್ಲಿ ಅವರು ತಮ್ಮ ಅನುಭವಕ್ಕೆ ಹತ್ತಿರವಾದ ವಸ್ತುಗಳನ್ನು ಬಳಸಿರು ತ್ತಾರೆ. ಹೀಗೆ ರೈಲು, ನಿಲ್ದಾಣದ ಇತರ ವಿವರಗಳು ಮತ್ತು ಧಾರವಾಡದ ಋತುಮಾನ ಗಳಲ್ಲಿ ಹೊರಡುವ ಪ್ರಕೃತಿಯ ಲಕ್ಷಣಗಳು, ಸ್ವಂತ ಅಂಗಳದ ಪರಿಸರ ಮತ್ತು ಅಲ್ಲಿ ಅಳವಡಿತವಾದ ವಸ್ತುಗಳನ್ನು ಅಚ್ಚುಮುರಿಯದಂತೆ ಬದುಕಿನ ಆಶೋತ್ತರಗಳಿಗೂ ಹೊಂದಿಸಿಯೇ ಬಳಸುತ್ತಾರೆ. ಉದಾ.ಗೆ ಮನೆಯ ಕಿಟಕಿ, ಶ್ರಾವಣದಲ್ಲಿ ಮರಗಳಿಗೆ

ಜೋಲುವ ಹಗ್ಗದ ಉಯ್ಯಾಲೆಗಳು, ಪಾರ್ಕು, ಟಾರು ಬೀದಿ ಇತ್ಯಾದಿಗಳು. ಇವುಗಳನ್ನು ಅವರು ಭಾವಗೀತಾತ್ಮಕವಾಗಿಯೇ ಬಳಸುತ್ತಾರೆ.

ಪ್ರತಿಮಾ ವಿಧಾನದಿಂದ ಮೊದಲಿಗೆ ಮಧುರಚೆನ್ನರ ಕಾವ್ಯಪ್ರೇರಣೆಯಿಂದ ಒಡ ಮೂಡಿದ್ದ ಇವರ ಕಾವ್ಯಶೈಲಿಕೂಡ ತನ್ನ ರೊಮ್ಯಾಂಟಿಕ್ ಪದರಗಳಲ್ಲಿಯೇ ನವ್ಯರೀತಿಯ ರೂಪಾಂತರಕ್ಕೆ ಒಳಗಾಗಿ ಸ್ಫುಟವೂ ಮಾರ್ಮಿಕವೂ ಆಯಿತೆಂದು ಹೇಳಬೇಕಾಗುತ್ತದೆ. 'ನೆಲ-ಮುಗಿಲು' ಮತ್ತು 'ವರ್ತುಳ' ('ನೆಲ-ಮುಗಿಲು') ಸುನೀತಗಳನ್ನು ಈ ಬೆಳಕಿನಲ್ಲಿ ನೋಡಿದಾಗ ಇದು ಸ್ಪಷ್ಟವಾಗಬಹುದು. ಇವುಗಳಲ್ಲಿ ಮಡುಗಟ್ಟಿ ನಿಂತಿರುವ ಭಾವುಕತೆ ರಮ್ಯವಾದುದಾದರೂ ಎರಡೂ ಕೃತಿಗಳು ಪ್ರತಿಮೆಗಳ ಮಾಲೆಯಾಗುತ್ತವೆ; ಅಲ್ಲದೆ ವಿಚಾರಪ್ರಧಾನವಾಗುತ್ತವೆ.

'ನೆಲ-ಮುಗಿಲು' ಕವನದಲ್ಲಿ ನೆಲದ ಆಕರ್ಷಣೆ ಮತ್ತು ಬಾನಿನ ಅತೀಂದ್ರಿಯಸ್ಪರ್ಶ ಗಳ ವಿಚಾರಮಾಲೆ ಅಥವಾ 'ಸಂಬಂಧಮಾಲೆ'ಯು ಮೂಡುತ್ತದೆ. ಇದರಲ್ಲಿ ದಾರಿ ಬಯಲು, ನೀರು, ಬಾಗಿಲು, ಹಕ್ಕಿ, ಚುಕ್ಕಿ, ತಾಯಿ-ಮಗು, ಮಳೆ, ಮುಗಿಲು-ಹೀಗೆ ಪ್ರಕೃತಿಯ ಅಂಶಗಳು ತಮ್ಮ ಸಹಜಾರ್ಥಗಳ ಮೂಲಕ ಸಂಬಂಧ ಪಡೆದಿದ್ದರೂ ಆಧ್ಯಾತ್ಮಿಕವಾದ ಒಂದು ಅನುಭವಕ್ಕೆ ಮಾರ್ಪಡುತ್ತವೆ. ಇಡೀ ಶಿಲ್ಪವೇ ರೂಪಕವಾಗು ವಂತೆ ಪರಿಣಾಮವಾಗುತ್ತದೆ. ಇಲ್ಲಿಯ ಶಬ್ದಗಳೆಲ್ಲಾ ಸೊಗಸಾಗಿ ನಿಶಬ್ದ ರೂಪತಾಳುವ ಒಂದು ವಿಶೇಷ ಪಾಕಕ್ಕೆ ಸೇರುತ್ತವೆ. ಶ್ರೇಷ್ಠವಾದ ಕಾವ್ಯದ ಗತಿ ಇದಕ್ಕಿಂತ ಭಿನ್ನವಾದು ದಲ್ಲ.

'ವರ್ತುಳ'ದಲ್ಲಿ 'ನೆಲ-ಮುಗಿಲು' ರಚನೆಯ ಪಾಕವೇ ಪ್ರಕಾಶಿಸುತ್ತದೆ. ಆದರೆ ಪ್ರತಿಮೆಗಳಾಗಿ ಸಂಕೇತಗಳಾಗಿ ಬಳಕೆಯಾಗಿರುವ ಎರಡು ಬಗೆಯ ವಸ್ತುಗಳನ್ನು ಗುರುತಿ ಸಬಹುದಾಗಿದೆ. ಒಂದು ವರ್ತುಳ, ಕೇಂದ್ರ, ತ್ರಿಕೋಣ, ಚೌಕೋಣ ಇತ್ಯಾದಿಗಳು ಸೇರುವ ನಾಗರಿಕ ವಿದ್ಯೆಯಿಂದ ಬಂದವು. ಎರಡು—ಪ್ರಕೃತ್ತಿದತ್ತವಾದ ಅಂಶಗಳ ಅಂದರೆ ಮೋಡ, ಆಕಾಶ, ಕಾಮನಬಿಲ್ಲು, ಮಿಂಚು, ಮಡುಗಳು, ಇತ್ಯಾದಿ ಇವೆರಡಕ್ಕೂ ಸಂಬಂದವನ್ನು ಆಧ್ಯಾತ್ಮಿಕತೆಯ ಸ್ತರವಾಗಿ ಕಂಡಾಗ ಇದರ ಅದ್ಭುತ ಪರಿಣಾಮವಾಗು ತ್ತದೆ.

ಮೇಲಿನ ಎರಡೂ ಸಂದರ್ಭಗಳಲ್ಲಿ ಬದುಕು ಮತ್ತು ಆಧ್ಯಾತ್ಮಿಕತೆಗಳ ಅರ್ಥ ಪುಟಿಯುತ್ತದೆ. ಅಲ್ಲದೆ ಇವೆರಡೂ ಕೃತಿಗಳು ಒಂದೊಂದು ಹೇಳಿಕೆ (Statement)ಗೆ ಸಗ್ಗದೆ ಕೇವಲ ಅನುಭವವಾಗುತ್ತವೆ. ಇದನ್ನೇ ಕಣವಿಯವರ ಪ್ರತಿಮಾ ವಿಧಾನದ ಸಫಲತೆಯೆಂದು ನಾನು ಗುರುತಿಸುತ್ತೇನೆ. ಇಂಥ ಸಾರ್ಥಕತೆ ಕಾವ್ಯವನ್ನು ಅವರದೇ ಆದ 'ಲಾಗ' ಎಂಬ ಲೌಕಿಕ ಕವಿತೆಯೊಡನೆ ಹೋಲಿಸಬಹುದು.

['ಮಣ್ಣಿನ ಮೆರವಣಿಗೆ'] 'ಲಾಗ'ದಲ್ಲಿ ಕಣವಿಯವರು ಆಧುನಿಕ ಬದುಕಿನ ವಕ್ರತೆ ಯನ್ನು ಹರಿತವಾದ ವ್ಯಂಗ್ಯದಲ್ಲಿ ಸಾಧಿಸಿದ್ದಾರೆ. 'ಲಾಗ ಹೊಡಿಯಲೊ ಮಂಗ ಲಾಗ

ಹೊಡಿಯೊ' ಎನ್ನುವಾಗ ಚುಚ್ಚು ಮಾತಾಗುವುದಾದರೂ ಮಾನವನ ಆಧ್ಯಾತ್ಮಿಕ ನಿಲುವಿಗೂ ಆಧುನಿಕ ಜೀವನದಲ್ಲಿ ಪೆಟ್ಟುಬಿದ್ದಿದೆಯೆಂಬ ರೀತಿಯಲ್ಲಿ ಕವಿಗೆ ನೋವಾಗಿದೆ ಎನ್ನಬಹುದು. ಅಥವಾ ಇಂದಿನ ಬದುಕಿನಲ್ಲಿ ಪ್ರಾಮಾಣಿಕವಾದ ಸಹಜ ಬದುಕಿಗೆ ಆತಂಕವುಂಟಾಗಿದೆ ಎಂಬ ನಿಲುವಿನಿಂದ ಇದು ರಚಿತವಾಗಿದೆ ಎನ್ನಬಹುದು. ಒಟ್ಟಿನಲ್ಲಿ 'ಲಾಗ'ವು ಮೇಲಿನ ಎರಡು ಕವಿತೆಗಳ ಮತ್ತೊಂದು ಮುಖವೆಂದು ಹೇಳಬೇಕಾಗುತ್ತದೆ.

ಹೀಗೆ ಪ್ರಕೃತಿಯ ಲಕ್ಷಣಗಳು ಕ್ರಿಯಾರೂಪ ತಾಳಿದಂತೆ ಪ್ರತಿಮಾ ವಿಧಾನದ ಬಳಕೆಯಲ್ಲಿ ಕಣವಿಯವರು ಯಶಸ್ವಿಯಾಗುತ್ತಾರೆ. ಇವುಗಳಲ್ಲಿ ಧ್ವನಿಸುವ ವಿಚಾರವು ರಮ್ಯವಾದರೂ ನವ್ಯ ಮಾರ್ಗಕ್ಕೆ ಸೇರಿಕೊಳ್ಳುವ ಕೃತಿಗಳು ಕೆಲವಂತೂ ಇಲ್ಲಿವೆ. ನವ್ಯ ಕಾವ್ಯದಲ್ಲಿ ವಸ್ತುವು ಇಂಥದೇ ಪಾಕದಲ್ಲಾಗಲಿ ಇಂಥದೇ ವಿಚಾರದ ಪರಿಮಿತಿಯಲ್ಲಾಗಲಿ ಇರಬೇಕೆಂದು ಯಾವ ವಿಮರ್ಶಕರಿಗೂ ಕಟ್ಟುನಿಟ್ಟಾಗಿ ಹೇಳಲು ಸಾಧ್ಯವಿಲ್ಲವೆಂಬುದನ್ನೂ ಮರೆಯುವಂತಿಲ್ಲ. ಕಾವ್ಯವು ವಿಚಾರಪರವಾಗಿರಬೇಕೆಂಬುದಷ್ಟೇ ಸೂತ್ರಿತ ಸೂಚನೆ ಯೆಂಬುದು ನನ್ನ ಅನಿಸಿಕೆ. ಇದಕ್ಕೆ ಆಧಾರವಾಗಿ ತನ್ನ ಆಧ್ಯಾತ್ಮಿಕತೆಯ ವಿವಿಧ ಸ್ತರಗಳನ್ನು ಕಾವ್ಯರೂಪದಲ್ಲಿ ಹರಿಸಿದ Hopkins ನನ್ನ ಆಂಗ್ಲ ಸಾಹಿತ್ಯದಲ್ಲಿ ನವ್ಯಕಾವ್ಯದ ಪ್ರವರ್ತಕ ನೆಂದು ಪರಿಗಣಿಸುತ್ತಾರೆ. ಆದುದರಿಂದ ಕಣವಿಯವರ ಕಾವ್ಯವನ್ನು ನವ್ಯಪಂಥಕ್ಕೆ ಸೇರಿಸ ಬಹುದಾಗಿದೆ.

ಅನುಭವವೇದ್ಯವಾದ ಐಂದ್ರಿಯಿಕ ಅಂಶಗಳೆಲ್ಲವೂ ಸಾರವತ್ತಾಗಿ ಕಣವಿಯವರ ಪ್ರತಿಮಾವಿಧಾನದಲ್ಲಿ ಸೇರಿಕೊಳ್ಳುತ್ತವೆ. ಅವು ಎಲ್ಲಿಯೂ ಅಸಂಗತ (Absurd) ಆಗುವುದಿಲ್ಲ. ಮನುಷ್ಯನ ಕಾಮದ ವಾಸನೆಯು ಇವರಲ್ಲಿ ಎಲ್ಲಿಯೂ ಅಸಹ್ಯರೂಪದಲ್ಲಿ ಒಡಮೂಡುವುದಿಲ್ಲ. ಇದಕ್ಕೆಲ್ಲಾ ಇವರ ಆಧ್ಯಾತ್ಮಿಕ ಒಲವು ಕಾರಣವೆನ್ನಬಹುದು. ನಮ್ಮ ನವ್ಯ ಕವಿಗಳು ಹೆಚ್ಚಾಗಿ ಬಳಸಿದ ಪ್ರತಿಮೆಗಳು ಕಾಮದಲ್ಲಿ ಮಿಂದು ಬಂದು ದೆಂಬುದನ್ನು ಗಮನಿಸಿದರೆ ಕಣವಿಯವರು ಅದರ ಅನುಲೇಪದಿಂದ ಮುಕ್ತರಾದವ ರೆಂದೇ ಹೇಳಬೇಕಾಗುತ್ತದೆ.

ನಮ್ಮ ನವ್ಯಕಾವ್ಯಕ್ಕೆ ಕಾಮವು ಸ್ವೇಚ್ಛೆಯಾಗಿ ಸೇರಿಕೊಂಡಿರುವುದಕ್ಕೆ ನಮ್ಮ ಆಧುನಿಕ ಜೀವನದ ಅತೃಪ್ತಿ ಅಸಮಾಧಾನಗಳೇ ಕಾರಣಗಳಾಗಿವೆ. ಸ್ವತಹಕವಿಗಳೂ ಇಂತಹ ಗೊಂದಲದಲ್ಲಿ ಸಿಕ್ಕಿಬಿದ್ದಿರಬಹುದಾಗಿದೆ. ಅದುದರಿಂದ ತಮ್ಮ ಜೀವನದ ಪ್ರಾಮಾಣಿಕ ಅನುಭವಗಳಿಗೆ ಅಭಿವ್ಯಕ್ತಿಯನ್ನು ಹುಡುಕುವಲ್ಲಿ ಕಾಮಕ್ಕೆ ನವ್ಯಕಾವ್ಯದಲ್ಲಿ ಪ್ರಮುಖತೆಯು ದೊರಕಿರುವುದೂ ಅನಿವಾರ್ಯವಾಗಿದೆ. ಹಾಗೆಯೇ ಕಣವಿಯವರ ಆನುವಂಶಿಕವಾದ ಪ್ರೇರಣೆಗಳೂ ಮಧುರ ಚೆನ್ನರ ಪ್ರಭಾವವೂ ಕಾಮದ ವಿಷಯದಲ್ಲಿ ನಿರ್ಲಿಪ್ತತೆಯನ್ನು ತಂದುಕೊಟ್ಟುವೆಂದರೆ ಸೋಜಿಗವಲ್ಲ. ಹೀಗೆಯೇ ಉಳಿದ ಆವೇಶ ಗಳೂ ಗಂಭೀರವಾಗಿಯೇ ಕಣವಿಯವರಲ್ಲಿ ಒಡಮೂಡುತ್ತವೆ. ಜೊತೆಗೆ ಹಾಸ್ಯದ ಎಳೆ ಗಳು ಇವರ ಕಾವ್ಯವನ್ನು ಆರೋಗ್ಯಕರವಾದ ಅರ್ಥದ ಪದರಗಳಲ್ಲಿಯೇ ಉಳಿಸುತ್ತವೆ.

ನಮ್ಮ ನವ್ಯಕವಿಗಳಲ್ಲಿ ಹಾಸ್ಯದ ಕೊರತೆಯನ್ನು ಅರಿತರೆ ಕಣವಿಯವರ ಕಾವ್ಯದ ಹದವನ್ನು ಚೆನ್ನಾಗಿ ಅರಿಯಲು ಸಾಧ್ಯವಾಗುತ್ತದೆ. ಒಟ್ಟಿನಲ್ಲಿ ಜೀವನ ಬೆಲೆಕಟ್ಟುವಲ್ಲಿ ಕಣವಿಯವರ ಕಾವ್ಯವು ಹಿಂದೆ ಬೀಳುವುದಿಲ್ಲ. ಮತ್ತು ಅಂತಹ ಮಹತ್ವವನ್ನು ಇವರ ಪ್ರತಿಮೆಗಳು ಧ್ವನಿಸುತ್ತವೆ.

ಕಣವಿಯವರು ಮಧುರ ಭಾವಜೀವಿ, ಹಾಗೂ ಅನುಭಾವಿಕಸಂಪನ್ನ ಕವಿ; ಕನಸುಗಾರರಲ್ಲ-ಎನ್ನಬಹುದು. ಕನಸುಗಳು ಐಂದ್ರಿಯವಾಗಿ ಮೂಡುತ್ತವೆಯಲ್ಲದೆ ಅಸ್ಪಷ್ಟವಾಗಿಯೂ ಇರುತ್ತವೆ; ತಾರ್ಕಿಕತೆಯನ್ನೂ ಮೀರುತ್ತವೆ. ಆದುದರಿಂದಲೇ ಕಣವಿಯವರು ಕನಸಿನ ರೂಪದ ಪ್ರತಿಮೆಗಳನ್ನು ಬಳಸದೇ ಇರಬಹುದಾಗಿದೆ, ಅವರು ಅನುಭಾವದ ಹಂತದಲ್ಲಿ ಕನಸುಕಾಣುವವರೆಗೂ ಅದು ಅವರ ಕಾವ್ಯಕ್ಕೆ ಬಳಕೆಯಾಗಲಾರದೆಂದು ನನಗನ್ನಿಸಿದೆ. ವಾಸ್ತವವಾಗಿ ಕಣವಿಯವರ ಕೃತಿಗಳಲ್ಲಿ ಅತಾರ್ಕಿಕ ದ್ವಂದ್ವವಾಗಲಿಲಿ ಸ್ಪಷ್ಟತೆಯಾಗಲಿ ರೂಪತಾಳದಂತೆ ಅವರ ಪ್ರತಿಮೆಗಳು ಬಳಕೆಯಾಗುತ್ತವೆ. ಇದೇ ಅವರ ಪ್ರತಿಮೆಗಳ ಹಿರಿಮೆಯೂ ಆಗಿರುತ್ತದೆ.

## ಸಿದ್ಧಲಿಂಗ ಪಟ್ಟಣಶೆಟ್ಟಿ

# ಕಣವಿಯವರ ಏಳು ಬಲ ಪದ್ಯಗಳು

೧೯೬೯ ರಲ್ಲಿ ಪ್ರಕಟವಾದ ಕಣವಿಯವರ ಎಂಟನೆಯ ಕವನ ಸಂಗ್ರಹ "ಎರಡು ದಡ" ದ ಬಲದಂಡೆಯ ಏಳು ಪದ್ಯಗಳು ಇಲ್ಲಿ ನನ್ನ ವಿವೇಚನೆಯ ವಸ್ತು. ಇವುಗಳಲ್ಲಿ 'ಹಾಡುಗಳೂ, ಒಂದೆರಡು ಗೀತರೂಪಕಗಳೂ ಇವೆ. ಒಂದೊಂದು ವಿಶಿಷ್ಟ ಸಂದರ್ಭ, ಪ್ರಸಂಗಗಳಿಗಾಗಿ ಇವು ರೂಪುಗೊಂಡುವು' ಎಂದು ಕಣವಿಯವರು ಮುನ್ನುಡಿ-ದಿದ್ದಾರೆ.

ಇಲ್ಲಿಯ ಏಳೂ ಪದ್ಯಗಳು ಸಮೂಹ ಮಾಧ್ಯಮಕ್ಕಾಗಿ, ಜನರ ಗುಂಪು ಹಾಡುವುದಕ್ಕಾಗಿ ಅಥವಾ ಜನರ ಗುಂಪಿನ ಸಲುವಾಗಿ, ರೇಡಿಯೋದಲ್ಲಿ ಹಾಡುವುದಕ್ಕಾಗಿ ರಚಿತವಾದುವು. ಇವುಗಳನ್ನು ಮೂರು ರೀತಿಯಲ್ಲಿ ವಿಂಗಡಿಸಬಹುದು:

(ಅ) ಹಾಡುಗಳು
- ೧. ವಿಶ್ವಭಾರತಿಗೆ ಕನ್ನಡದಾರತಿ
- ೨. ಭದ್ರಮಾಸ

(ಆ) ವ್ಯಕ್ತಿತ್ವ ಗೀತಗಳು
- ೧. ನೀಲಾಂಬಿಕೆ
- ೨. ಬಸವಣ್ಣನ ಬೆಳಗು
- ೩. ಅಕ್ಕಮಹಾದೇವಿಗೆ

(ಇ) ಗೀತ ರೂಪಕಗಳು
- ೧. ಸಂಕ್ರಮಣ
- ೪. ನೆಲದ ಮಕ್ಕಳಿಗೆ ನಲ್ವಾಡು

ಇವೆಲ್ಲವೂ ಪ್ರಸಂಗ ಗೀತಗಳೇ, ತಮ್ಮ ಗೀತ ತತ್ವಗಳಿಂದಾಗಿ ಈಗಾಗಲೇ ಇವು ಸಾಕಷ್ಟು ಪ್ರಸಿದ್ಧಿಯನ್ನೂ ಪಡೆದಿವೆ. 'ವಿಶ್ವಭಾರತಿಗೆ ಕನ್ನಡದಾರತಿ' ಕರ್ನಾಟಕ ವಿಶ್ವವಿದ್ಯಾಲಯದ ಘಟಿಕೋತ್ಸವ ಗೀತವಾಗಿ ಅಂಗೀಕರಿಸಲ್ಪಟ್ಟಿದೆ. ಈ ಏಳೂ ಹಾಡುಗಳಲ್ಲಿ ಅತ್ಯಂತ ಪ್ರಸಾರದಲ್ಲಿರುವ ಹಾಗೂ ಆತ್ಮೀಯವಾಗಿ ಹಲವಾರು ಸಂದರ್ಭ–ಕಾರ್ಯಕ್ರಮಗಳಲ್ಲಿ ಆರಂಭ–ಗೀತದಂತೆ ಹಾಡಲ್ಪಟ್ಟ ಇದನ್ನು ನಾನೂ ಕೇಳಿ ಆನಂದಿಸಿದ್ದೇನೆ. ಆದರೆ ಯಾವಾಗಲೂ ಹಾಡಿನ ಲಯ, ಪರಿಚಿತ, ದನಿಗಳ ಮಾಧುರ್ಯದ ಕಡೆಗೇ ಒಲವು ಆಕರ್ಷಿತಗೊಳ್ಳುವುದು ಈ ಹಾಡಿನ ಅತಿಗೀತಾತ್ಮಕತೆಯ ದೋಷವೂ ಆಗಿರುವುದರಿಂದ ಇಲ್ಲಿಯ

ಅರ್ಥಗಳ ಕಡೆಗೆ ಕೇಳುಗರ ಲಕ್ಷ್ಯ ಅಷ್ಟು ಹೋಗುವುದಿಲ್ಲ. ಕರ್ನಾಟಕದ ಸಂಸ್ಕೃತಿ, ಮತ-ಧರ್ಮಗಳು ಅರಸು ಮನೆತನಗಳು, ಧಾರ್ಮಿಕ ಪುರುಷರು, ಸಾಹಿತಿಗಳು, ಕಲಾವಿದರು ಮುಂತಾದವರನ್ನು ನೆನೆಯುವ ಈ ಹಾಡು ಸಹಜವಾಗಿ, ಸರಳವಾಗಿ ಹಾಡಿಸಿಕೊಂಡಷ್ಟೂ ತನ್ನ ಅರ್ಥ-ಶರೀರವನ್ನು ಹೊರಚಾಚುವುದೇ ಇಲ್ಲ. ನಾವು ಓದುವಾಗಲೂ ಕವಿಯ ಭಾವಗಳನ್ನು ತುಳುಕಿಸುವ ವಸ್ತುಗಳಾಗಿ ಈ ವರ್ಣನೆಗಳು ಬರದೇ ಹಾಡಿಗಾಗಿಯೇ ಬರೆದದ್ದು ಸ್ಪಷ್ಟವಾಗಿ ಗೋಚರಿಸುತ್ತದೆ, ಹೀಗಾಗಿ ಅನಿವಾರ್ಯವಾಗಿ ಪವಿತ್ರಿತ, ಕದಂಬಾ, ಚಲುಕ್ಯ ಮುಂತಾದ ಪ್ರಯೋಗಗಳೂ, 'ಮನೋಹಾರಿ', 'ತಮೋಹಾರಿ', 'ಸಮುದ್ರ ವಿಹಾರಿ', 'ಸಂಚಾರಿ', 'ಜಯಭೇರಿ'ಗಳ ಕೂಡ 'ವೀರಶ್ರೀ' ಹಾಗೂ 'ಧಾರಾನಗರಿ'ಗಳೂ ಅಂತ್ಯಪ್ರಾಸಗಳೆಂದು ಪುಚ್ಚ ಹಚ್ಚಿಕೊಂಡು ಒಳಸೇರಿಬಿಡುತ್ತವೆ. ಇದು ವಿಶ್ವ, ಭಾರತಗಳನ್ನು ನೆನಪಿಸಿ, ಕರ್ನಾಟಕ ಮಾತೆಯ ವರ್ಣನೆಯೆನಿಸಿ, ಧಾರವಾಡದ ವರ್ಣನೆಯಾಗುತ್ತ, ಕೊನೆಗೆ ವಿಶ್ವವಿದ್ಯಾಲಯದ ಮಹಿಮಾಗೀತವಾಗಿ ಸೀಮಿತವಾಗಿಬಿಡುವುದನ್ನು ಈ ಹಾಡಿನ ಧಾಟಿ, ಲಯ, ಸಂಗೀತ, ವಾದ್ಯಮೇಳಗಳೂ ಮುಚ್ಚದಾಗುತ್ತವೆ. ಕಣವಿಯವರ ಕಾವ್ಯಕಲೆಯ ನಯಗಾರಿಕೆ, ಶಬ್ದಗಳ ಶೃಂಗಾರಗಳಿಗೆ ಬದಲು ಅವುಗಳ ಹೊಂದಾಣಿಕೆಯನ್ನು ಮಾತ್ರ ಇಲ್ಲಿ ಕಾಣಬಹುದು.

'ಭದ್ರಮಾಸ' ಕಾವ್ಯಗುಣದ ದೃಷ್ಟಿಯಿಂದ ಮೊದಲ ಗೀತಕ್ಕಿಂತ ಒಳ್ಳೆಯ ಕವನ. ಪ್ರಕೃತಿ ವರ್ಣನೆಯ ಸುಂದರ, ಮನೋಹಾರಿ ಚಿತ್ರಗಳುಳ್ಳ ಸರಳ ಭಾವಗಳನ್ನೂ ಹಾಡುಗೊಳಿಸಿದ ಈ ಕವನದ ವರ್ಣನೆಗಳು ನಿರ್ಲಿಪ್ತವಾಗಿದ್ದರೂ ಆಪ್ತವಾಗಿವೆ. 'ಪಚ್ಚೆಯ ಪೈರಿಗೆ ಮುಗಿಲಿನ ಬೆಳ್ಗೊಡೆ', 'ಹಸುರಿನ ಹೊನಲೇ ಹರಿದಿದೆ', 'ಥಳಥಳ ನೀಲಿಯ ಬಾನಂಗಣದಲಿ ಶಾರದ ನೀರದ ತೇರು' ಮುಂತಾದ ಮಧುರ ಚಿತ್ರಗಳು, ಲೀಲಾಜಾಲವಾಗಿ ಬರುವ ಅನುಪ್ರಾಸಗಳು ಶರತ್‌ಕಾಲದ ಮುಗುಳನ್ನು ಸೂಸುತ್ತವೆ. ಉತ್ತರಿ ಮಳೆ 'ಹಸ್ತಾ' ಮುಂದಕ್ಕೆ ಚಾಚುವಲ್ಲಿ ಉತ್ತರಿಯ ನಂತರ ಬರುವ ಹಸ್ತಾ ಮಳೆ, ಕೈ ಚಾಚುವಿಕೆ, 'ಹಸ್ತಾ' ಎಂಬ ಆಡುಮಾತಿನ ಧಾಟಿ ಮುಂತಾದ ವಿವಿಧ ಅರ್ಥಾಯಾಮಗಳನ್ನು ಒಳಗೊಳ್ಳುವ ರೀತಿ ಮೋಹಕವಾಗಿದೆ. ಮಳೆ ಬಂದರೆ, ಮಗ ಉಂಡರೆ ಕೇಡೆ? — ಜನವಾಣಿಯ ಸಹಜ ಮಾತನ್ನು ಒಳಸಿ 'ಎರೆಯಲಿ ಮಲೆ-ತಲೆ ಬಾಚಿ' ಎನ್ನುವಲ್ಲಿ ಪರ್ವತಗಳ ನೆತ್ತಿಯ ಮೇಲೆ ಸುರಿಯುವ ಮಳೆಯನ್ನು ಸೂಚಿಸುವುದರ ಜೊತೆಗೇ 'ಮಲೆ-ತಲೆ ಬಾಚಿ ಎರೆಯಲಿ, ಎರೆಯುವ' ತುಂಟತನದ 'ಧ್ವನಿ' ಯನ್ನು ಮಿಂಚಿಸುವ ಕಾಮಾರ್ಥ ಮತ್ತು ವತ್ಸಲಾರ್ಥಗಳು ಮೆಚ್ಚುವಂತಿವೆ. ಶರತ್ ಮೇಘಗಳು ಬಾನ ತಳದಲ್ಲಿ ತೇಲುವುದನ್ನು 'ರ' 'ಲ' 'ಳ' ಗಳ ತೆಳು ಹಗುರ ಶಬ್ದಗಳ ಮೂಲಕ ತಿಳಿಯಾಗಿ ಮೂಡಿಸುವಲ್ಲಿಯೂ ಕಣವಿ ಯಶಸ್ವಿಯಾಗಿದ್ದಾರೆ. ಹೂ, ಬೆಳ್ಳಕ್ಕಿ ಹಾಗೂ ಹಕ್ಕಿಗಳ ರವ ಎಲ್ಲವೂ ತಿಳಿಬಿಳಿಯಾಗಿ ನೀಲಬಾನಿನ ಹಿನ್ನೆಲೆಯಲ್ಲಿ ಹರುಷಕ್ಕೆ ನೆಲೆಯಾಗಿವೆ.

ಹೀಗೆ ಕವನದುದ್ದಕ್ಕೂ ಹಲವಾರು ಚಿತ್ರಗಳನ್ನು ಬಿಡಿಸಿದ ನಂತರ, "ಆಯುಧ ಪೂಜೆಯನ್ನು ಮುಗಿಸಿ ರಾಕ್ಷಸರಿಂದ ನಾಡನ್ನು ರಕ್ಷಿಸಲು ಚಾಮುಂಡಿಯನ್ನು ವಿನಂತಿಸು

ವಲ್ಲಿ ಕವನ ತನ್ನ ಸಹಜ ವಿಸ್ತಾರವನ್ನು ಮೊಟಕಂಗೊಳಿಸಿ ಒಮ್ಮೆಲೆ ಆಕುಂಚನಗೊಳ್ಳುತ್ತದೆ. ಧಾರ್ಮಿಕ ಆಸ್ಥೆ, ಸಮಾಜ–ಹಿತ, ಜನಕಲ್ಯಾಣಕ್ಕಾಗಿ ಭಾವಭದ್ರತೆಯ ಅರ್ಥವನ್ನು ಬಿಂಬಿಸುತ್ತಿದ್ದರೂ ಪ್ರಯತ್ನದಿಂದ ಮಾಡಿದ ಕೊನೆಯ ನುಡಿ ಇಡಿಯ ಕವನದಲ್ಲಿ ಸರಿಯಾಗಿ ಹೊಂದಿಕೊಳ್ಳದೆ ಸಡಿಲಾಗುತ್ತದೆ.

ಹಾಡುವುದಕ್ಕಾಗಿಯೇ ಬರೆದಿದ್ದರೂ ದೀರ್ಘವಾಗಿರುವ ವ್ಯಕ್ತಿತ್ವ ಗೀತಗಳು ಇತಿಹಾಸದ, ಸಾಹಿತ್ಯದ ಅಭ್ಯಾಸವನ್ನು ಒಳಗೊಂಡಿವೆ. ಆ ವ್ಯಕ್ತಿಗಳ ಗುಣವಿಶೇಷಗಳನ್ನು, ಅವರ ವಚನಗಳ ಭಾಷಾ ಸೂಕ್ಷ್ಮಗಳನ್ನು ಆತ್ಮಸಾತ್‌ಗೊಳಿಸಿಕೊಂಡಿರುವ ಕಣವಿ ತುಂಬ ತೂಕದಿಂದ ನೀಲಾಂಬಿಕೆ, ಬಸವಣ್ಣ ಮತ್ತು ಅಕ್ಕಮಹಾದೇವಿಯ ಬದುಕನ್ನು ನಿಖರವಾಗಿ ಕಾವ್ಯದ ಪಡಿಯಚ್ಚಿನಿಂದ ಸ್ಪಷ್ಟವಾಗಿ ಮೂಡಿಸುತ್ತಾರೆ. ಬಸವಣ್ಣನಿಗಿಂತ ಹೆಚ್ಚು ಸಮಚಿತ್ತ, ಉದಾರ ಚಿಂತನೆ, ಹಾಗೂ ಸಹನೆಯನ್ನು ಹೊಂದಿದ್ದ 'ಮಹಾಮನೆಯ ಮಹಾತಾಯಿ' ನೀಲಾಂಬಿಕೆ ಸಹಜವಾಗಿಯೇ ಬಸವಣ್ಣನ ಮಹತ್ತಿಗೆ ಹಿನ್ನೆಲೆಯ ಬಂಧುರತೆಯನ್ನು ಒದಗಿಸಿದಳೆಂಬುದನ್ನು ಕಣವಿ ಸುಂದರವಾಗಿ ಹೇಳಿದ್ದಾರೆ. ಅವಳು ಪತಿಗೆ ನೆರಳಾದಳು, ಬೆರಳ ಹರಳಾದಳು, ಲಿಂಗದರಳಾದಳು, ಪರಿಮಳಿತ ಪುಷ್ಪವಾದಳು. ತನ್ನ ಸಾಧನೆಯ ಹಾದಿಯಲ್ಲಿ ಬಸವಣ್ಣ ಅವಳನ್ನು ನಿರ್ಲಕ್ಷಿಸಿಯೇ ಬಿಟ್ಟನೆನ್ನುವಷ್ಟು, ಅವನ ಬದುಕಿನ ಕತೆಯಲ್ಲಿ ಅವಳನ್ನು ಹಿಂದೆ ಇಡಲಾಗಿದೆ, ಮರೆಯಲಾಗಿದೆ. ಅವಳು ಮಾತ್ರ ಪತಿಯ ಸಾಧನೆಗೆ ಅಡ್ಡಿಯಾಗಲಿಲ್ಲ, ಅಡ್ಡ ನಿಲ್ಲಲಿಲ್ಲ. ಅವಳದು ಮೌನ ಸಾಧನೆ, ಕ್ರಾಂತ ಸಿದ್ಧಿ, ಅವಳಿರುವ ತಾಣವೆ ಮಹಾಮನೆಯಾಗುತ್ತದೆ, ಮಹಾ ಬೆಳಗಿನಲ್ಲಿ ಏಕಾಕಾರವಾಗುವ ಅವಳ ಪ್ರಾಣಲಿಂಗದಲ್ಲಿ ನೀಲಾಂಬರ ಮಿಂಚುತ್ತದೆ, ನೀಲ ನಭದಲ್ಲಿ ನೀಲಾಂಬಿಕೆಯ ಲೀಲಾ ಶರೀರ ಒಂದಾಗುತ್ತದೆ. ಅವಳ ಬದುಕಿನ ಯಾವ ಘಟನೆಯನ್ನೂ ವಿವರವಾಗಿ ಬಿಡಿಸದೆ ಸೂಚ್ಯವಾಗಿ, ಸಾಂಕೇತಿಕವಾಗಿ ಹೇಳಿ ಅಸ್ಪಷ್ಟತೆಯನ್ನು ಉಳಿಸಿಕೊಂಡುದರಿಂದಲೇ ಈ ಹಾಡು ಧರ್ಮ–ರಸವನ್ನು ಸೂಸುತ್ತದೆ.

ಬಸವಣ್ಣನ ಎಂಟನೆಯ ಜನ್ಮ ಶತಮಾನದ ಆಚರಣೆಯ ಸಂದರ್ಭದಲ್ಲಿ ಬರೆದ 'ಬಸವಣ್ಣನ ಬೆಳಗು' ಗಂಭೀರ ಗೀತೆ. ಇಂಥ ಸಂದರ್ಭ ಗೀತಗಳನ್ನು, ಪ್ರಾಸಂಗಿಕ ಕವನಗಳನ್ನು ಬರೆಯಲು ಈಗಿನ ಕಾಲದಲ್ಲಿ ಸಾಹಸಬೇಕು, ಸಾಮರ್ಥ್ಯಬೇಕು ಇಲ್ಲವೆ ಹುಚ್ಚು ಧೈರ್ಯ ಬೇಕು. ಇಂಥಲ್ಲಿ ಕವಿ ತನ್ನತನವನ್ನು ಉಳಿಸಿಕೊಳ್ಳುವುದು ಬಹಳ ಕಷ್ಟದ ಕೆಲಸ. ಆದರೆ ಈ ಆಹ್ವಾನವನ್ನು ದಿಟ್ಟವಾಗಿ ಸ್ವೀಕರಿಸಿದ್ದಾರೆ ಕಣವಿ. ಇಡೀ ಹಾಡಿನ ತುಂಬ ಬಸವಣ್ಣನ ವ್ಯಕ್ತಿತ್ವದ ಗಾಂಭೀರ್ಯವೇ ವ್ಯಾಪಿಸಿದೆ. ಶಿವಶರಣರ ವಚನಗಳ ಭಾಷಾ ವೈಭವವನ್ನು ನೆನಪಿಗೆ ತರುವ ಕಣವಿಯವರ ಸಾಲುಗಳು ವಚನ ಸಾಹಿತ್ಯದ ಬಗ್ಗೆ ಅವರಿಗಿರುವ ಅಧಿಕಾರಿಕತೆಯನ್ನು ತೋರುತ್ತವೆ.

> ಕರಗಿ ಕಾಳಿಕೆ ಕಳೆದು, ಒರೆಗೆ ಬಣ್ಣಕೆ ಬಂದು
> ದಿಟ ಭಕುತಿ ಪುಟಗೊಂಡು ಗೆಲುವ ಭಾಷೆ

ಬಸವಣ್ಣನದಂತೂ ಇದ್ದೇ ಇತ್ತು, ಅದು ಕಣವಿಯವರದೂ ಆಗಿ ಬಿಟ್ಟಿರುವುದು ಈ ಕವನದ ಸಾಲು ಸಾಲಿನಲ್ಲಿ ಕಂಡುಬರುತ್ತದೆ. ಮಧುರ ದ್ರಾಕ್ಷಿಯ ಹಣ್ಣಿನ ಗೊಂಚಲಿನಂತೆ ಬಂಧಯುಕ್ತ ಶಕ್ತಿಪೂರ್ಣ ಶಬ್ದ, ಸಾಲುಗಳು ಬಯಲಾಗುತ್ತ ಕಾವ್ಯ ಕಾಯಕದೊಂದಿಗೆ ಜೀವನ ಚಿತ್ರಣವನ್ನು ಭಕ್ತಿಯ ಸಂಗೀತದಲ್ಲಿ ಒಡಮೂಡಿಸುತ್ತವೆ.

ಮರ್ತ್ಯದ ಮಹಾಮನೆಯ ಮಣಿಹ ಮುಗಿಯಿತು ತಂದೆ
ಕರ್ತೃ ಕೂಡಲಸಂಗನೊಡಲು ತೆರೆದು–
ಹಳುವ ದಾಟಿದರುಳಿವೆ, ಹದುಳಗೊಂಡಿರೆ ಕದಳಿ
ಮಿಕ್ಕ ಪ್ರಮಥರ ಲಕ್ಷ್ಯ ದಿಕ್ಕಿಗೊಂದು.

ಬೆಳಗಿನೊಳಗಣ ಮಹಾ ಬೆಳಗಿನಲಿ ಮುಳುಗೆದ್ದು ಬಂದಿರುವ ಈ ಹಾಗೂ ಇಂಥ ಅನೇಕ ಸಾಲುಗಳು ಸಹಜವಾಗಿಯೇ ಹನ್ನೆರಡನೆಯ ಶತಮಾನವನ್ನು ಮತ್ತು ಶರಣ-ಸಂಸ್ಕೃತಿಯನ್ನು ಸಮೀಕರಿಸುವ ವಿನಮ್ರ ಪ್ರಯತ್ನದಲ್ಲಿ ಎತ್ತರದ ಮಟ್ಟಕ್ಕೆ ನಿಲ್ಲುತ್ತವೆ.

'ಅಕ್ಕಮಹಾದೇವಿಗೆಯ'ಲ್ಲಿ ಸಹ ಅಕ್ಕನ ಭಾಷೆಯ ಏಣಿಯ ಗುಂಟ ಏರುವ ಮತ್ತು ಇಳಿಯುವ ಭಾಷಾಭಾವ ಕ್ರೀಡೆಯ ವಿವಿಧ ಸ್ವರೂಪಗಳು ಮೈತಾಳುತ್ತವೆ. 'ಕದಳಿಯ ಬನ ಬಿಟ್ಟ ಗೊನೆಯ' ಆದ ಮಹಾದೇವಿ

ಆದಿ ಅನಾದಿಯ, ಕಾಮ ಸಂಗ್ರಾಮದ
ನಾಮ–ನೇಮಗಳೆಲ್ಲ ಹುರಿದು,
ಸ್ವಾನುಭಾವದ ಒಳಗೆ ತಾನು ತಾನಾದಳು
ಅನುವನರಗಿಸಿ ಘನವ ಬೆರೆದು.

'ತೆರಣೀಯ ಹುಳುವಿನ ಸರಣೆಯ ಬಿಡಿಸವ್ವ' ಎಂದು ಕವಿ ಅವಳನ್ನು ವಿನಂತಿಸುವಲ್ಲಿರುವ ತಲ್ಲೀನ ಸಮರ್ಪಣೆ ಗೀತದ ಘನತೆಯನ್ನು ಇನ್ನೂ ಹೆಚ್ಚಿಸುತ್ತದೆ.

'ಸಂಕ್ರಮಣ' ಎಂಬ ಗೀತ ಶ್ರವಣಿಕೆ ಮತ್ತು 'ನೆಲದ ಮಕ್ಕಳಿಗೆ ನಲ್ವಾಡು' ಎಂಬ ರೂಪಕಗಳು ಖಂಡಿತವಾಗಿಯೂ ರೇಡಿಯೋ ಮಾಧ್ಯಮಕ್ಕಾಗಿ ಮಾತ್ರ ರಚಿತವಾಗಿರುವುದು ಸುಸ್ಪಷ್ಟ. 'ಸಂಕ್ರಮಣ'ದಲ್ಲಿ ನಿವೇದಕ, ಭೂಮಿ, ಹಲವಾರು ರೈತರು, ಅವರ ಹೆಂಡಂದಿರು, ಕವಿ, ನದಿ, ಪಕ್ಷಿ ಎಲ್ಲರ ಸ್ವರಗಳೂ ಮೇಳಗೊಳ್ಳುತ್ತವೆ. ಸಂಕ್ರಮಣ ಕಾಲದಲ್ಲಿಯ ರೈತರ ಬದುಕಿನ ಹಲವಾರು ಮಗ್ಗಲುಗಳನ್ನು ಹಾಡುತ್ತ ಹಾಡುತ್ತ ಬಿಚ್ಚುವುದು ಈ ಶ್ರವಣಿಕೆಯ ವೈಶಿಷ್ಟ್ಯ. ಗೋದಿ ಬೆಳಸಿ, ಕುಸುಬಿ ಹೂವ ಕುಸುರಿನಂಥ ಕುಬಸ, ಹಸುರು ಹತ್ತಿಹೊಲ ಮುಂತಾದ ಹಲವಾರು ವಿವರಗಳು ಬೆಳವಲನಾಡಿನ ಚಿತ್ರಗಳನ್ನು ಕಣ್ಣೆದುರು ತರುತ್ತವೆ.

ಒಬ್ಬ ರೈತನ ಹೆಂಡತಿ ಹಾಡುತ್ತಾಳೆ :

ಒಡೆದ ತುಟಿಗೆ ಕಡಲೆಗಿಡದ
ಹುಳಿಯ ತೊಡೆಯುತ್ತಾನೆ,

ಕಾಯಿ ಸುಲಿದು ಕಾಳು ಮಾಡಿ
ನನಗೆ ತಿನಿಸುತಾನೆ,

ಇನ್ನೊಬ್ಬಳು :

ಕಾಲಪಿಲ್ಲೆ ಮೂಗುಬಟ್ಟು
ಮಾಡಿ ಕೊಡಿಸುತಾನೆ ;
ಜರದ ಪಟಕ ಸುತ್ತಿಕೊಂಡು
ಹೂವ ಮುಡಿಸುತಾನೆ.

ಎಳ್ಳೀಗೆ ಎಣ್ಣೀಗೆ ಮಿಂಚ್ಯುವ ಕಣ್ಣೀಗೆ
ಹಂಚ್ಯುವ ಬೆಲ್ಲದ ಕಣ್ಣಿಯಿದೆ.

ಇಂಥ ವಿವರಗಳು ಜಾನಪದ ಜೀವನದ ಮಣ್ಣಿನ ಆಳವಾದ ಆತ್ಮೀಯ ಪರಿಚಯದಿಂದ ಮಾತ್ರ ಸಾಧ್ಯ. ಇಂಥ ಬಹಳಷ್ಟು ಲಲಿತ ವಿವರಗಳಿಂದ ಕೂಡಿದ್ದರೂ ಇದು ಇಡಿಯಾಗಿ ಯಶಸ್ವಿಯಾಗುವುದಿಲ್ಲ. ಭಾಗಶಃ ತುಂಡುಗಳಿಗೆ ಅವುಗಳದೇ ಸೌಂದರ್ಯವಿರುವುದನ್ನು ಮಾತ್ರ ಅಲ್ಲಗಳೆಯಲಾಗದು. ಒಟ್ಟಿನಲ್ಲಿ ಹಾಡು, ನಲಿವು, ಕುಣಿತ, ಸಂಗೀತಗಳು ಅನಿವಾರ್ಯವಾಗುತ್ತವೆ, ಪ್ರಧಾನವಾಗುತ್ತವೆ, ಇವನ್ನು ಮೀರಿದ ಅರ್ಥ–ವಲಯಗಳು ಇಲ್ಲಿ ತರಂಗಿಸುವುದಿಲ್ಲ.

'ನೆಲದ ಮಕ್ಕಳಿಗೆ ನಲ್ವಾಡು' ರೂಪಕದಲ್ಲಿ ತುಂಗಭದ್ರೆ, ನದಿ ; ರೈತ, ಅವನ ಹೆಂಡತಿ ಹಾಗೂ ರೈತರ ಸಮೂಹ ; ಪಶ್ಚಾತ್ತಾಪ ಪಡೆದ ರಾಜಕಾರಣಿ ಮತ್ತು ಕವಿ ಈ ನಾಲ್ಕು ಮೂಲೆಗಳಿಂದ ಕಣವಿ ಗ್ರಾಮ ಜೀವನದ ಹಲವು ಚಿತ್ರಗಳ ಜೊತೆಗೇ ದೇಶ ಜೀವನದ ಎಳೆಗಳನ್ನೂ ಬಿಡಿಸುತ್ತ ಹೋಗುತ್ತಾರೆ.

ತುಂಗಭದ್ರೆಯ ಅಣೆಕಟ್ಟು ಹಾಗೂ ಅದರ ನೀರ-ವ್ಯಾಪ್ತಿಯಿಂದ ಅಸಂಖ್ಯ ರೈತರ ಜೀವನದ ಉದ್ಧಾರವಾಗಿದೆ. ಅದನ್ನು ರೈತನ ಹಾಗೂ ಅವನ ಹೆಂಡತಿಯ ಬಾಯಿಂದ ಕವಿ ಹೇಳಿಸುತ್ತಾರೆ. ಕವಿಯ ಭಾವಲಹರಿ ಗ್ರಾಮ ಪಾತ್ರಗಳ ಬಾಯಲ್ಲಿ ಬರುವಾಗ ಆ ಪಾತ್ರಕ್ಕೆ ಅದು ಒಗ್ಗಬೇಕು, ಹೋಲಬೇಕು. ಕವಿಯ ಭಾಷಾಜ್ಞಾನ, ವಿಷಯ-ವಿವೇಚನೆ ಪಾತ್ರಗಳಿಗೆ ಭಾರವಾಗದಂತೆ ಶಾಪವಾಗದಂತೆ ಎಚ್ಚರಿಕೆ ವಹಿಸಬೇಕು. ಇಲ್ಲಿ ರೈತನ ಹೆಂಡತಿ ತಾಯಿ-ತುಂಗಭದ್ರೆಯನ್ನು ಪ್ರಶಂಸಿಸುತ್ತ

ಬಡವರ ಮನೆ ಭಾಗೀರಥಿ
ಬೆಳಗುವೆನಿದೊ ಆರತಿ ;
ಮಣ್ಣಿನಲ್ಲಿ ಚಿನ್ನವಾಗಿ
ಬಂದೆಯಮ್ಮ ಭಾರತಿ

ಎನ್ನುತ್ತಾಳೆ. 'ಭಾಗೀರಥಿ'ಯಲ್ಲಿ 'ಗಂಗೆ'ಯ ಅರ್ಥ ಧ್ವನಿಸುವುದರಿಂದ ಅದು ಸಾರ್ಥಕ ಪದವಾಗುತ್ತದೆ. ಆದರೆ ತುಂಗಭದ್ರೆಯನ್ನು 'ಭಾರತಿ' ಎಂದು ಕರೆದಾಗ ಮಾತ್ರ ಅದು ಅರ್ಥಸೂಚಕವಾಗಿ ಬರದೇ ಬರೇ 'ಆರತಿ'ಯ ಕೂಡ ಪ್ರಾಸಯೋಜಕವಾಗಿ ಬಂದು

ಕಾವ್ಯಾರ್ಥದ ಆಸಕ್ತಿಗೆ ಅವರೋಧವಾಗುತ್ತದೆ. ಆರತಿ ಮತ್ತು ಭಾರತಿ ಹಾಡಲು–ಕೇಳಲು ಖುಷಿಕೊಟ್ಟರೂ ಈ ರೂಪಕದಲ್ಲಿ ಅದು ನುಡಿಸುತ್ತಿರುವ ವಸ್ತುವಿಗೆ ಹೊಂದದಿರುವುದರಿಂದ ಅದರ ಸಾರ್ಥಕತೆ ಅತರ್ಕಿತವಾಗಿ ಉಳಿಯುತ್ತದೆ. 'ಭಾರತಿ'ಗೆ ನಿಘಂಟುವಿನಲ್ಲಿ ಭಾರತಮಾತೆ, ವಾಣಿ–ಮಾತು, ಸರಸ್ವತಿ, ವರ್ಣನೆ ಶೈಲಿ, ಒಂದು ಪಕ್ಷಿ, ನಾಟ್ಯಕಲೆ, ಸಾಧುಗಳ ಒಂದು ಪದವಿ ಎಂಬ ಅರ್ಥಗಳಿವೆ. ರೈತನ ಹೆಂಡತಿ ಹೇಳಿದ 'ಭಾರತಿ' ಇವುಗಳಲ್ಲಿ ಯಾವುದನ್ನೂ ಧ್ವನಿಸುವುದಿಲ್ಲ.

ತುಂಗಭದ್ರೆ ಹರಿದು ಬರುವ ವೈಖರಿ ತುಂಬ ಮೋಹಕವಾಗಿದೆ :

ನೀರಾಗಿ ಹರಿದು ಪಾರಾಗಿ ಬಂದೆ ಝರಿ-ತೊರೆಯ ತೋಳಿನಲ್ಲಿ
ತುಂಗೆಯಲ್ಲಿ ನಾ ಭದ್ರೆಯಾಗಿ ತುಂತುಂಬಿ ಹಂಪೆಯಲ್ಲಿ
ಹಳೆಕೋಟೆಗಳನು ಹೊಸಪೇಟೆಗಳನು ನಾ ದಾಟುತಿರುವ ಹಾಗೆ
ಒಂದು ಬಿತ್ತಿ ಹತ್ತು ಬೆಳೆದು
ಮನೆಗೆ ಮುತ್ತು ತರುವೆವು.

ಮುಂತಾದುವು ಕಣವಿಯವರ ಚಿತ್ರಕ ಶಕ್ತಿಯ ದ್ಯೋತಕವಾಗಿವೆ. ರಾಜಕಾರಣಿಯ ನಾಟಕ ಸಹ ಖುಷಿ ಕೊಡುವ 'ದೊಡ್ಡಾಟ'ವೇ ಆಗಿದೆ. ಕವಿಯ ಮಾತಿನಲ್ಲಿ ಕಣವಿ ಹೇಳುವ ಒಂದೊಂದು ಮಾತೂ ಇಂದಿಗೂ ನಮ್ಮ ರೈತರಿಗೆ ಬದುಕಿನ ದಾರಿದೀಪ.

ಒಕ್ಕಲಿಗ ದುಡಿದದ್ದು ದಂಡಕ್ಕೆ ಹೆಂಡಕ್ಕೆ—
ಹಂಡಬಂಡರ ಮಾತು ಸುಳ್ಳುಮಾಡು.
ನಿನ್ನಮನೆ ಮಠ-ಮಾನ್ಯ, ನಿನ್ನ ಹೊಲ ಧನ–ಧಾನ್ಯ
ನೀ ಬೆಳೆದ ತೆನೆಗಳೇ ಹೊಂಬಾವುಟ.
ಗಡಿ ಕಾಯ್ದು ಮಡಿದವರು, ನೀವದಕೆ ದುಡಿದವರು
ಹೊಡೆಹಾಯ್ದು ಬಾಗುವುದೆ ಹಿರಿಯ ಬದುಕು ;
ನಿಮ್ಮ ನುಡಿಯನೆ ಹಿಡಿದು, ಮಿಡಿದು, ಕೇಕೆಯ ಹೊಡೆದು
ಪಡೆದ ಹಾಡಿದು ; ಅಲ್ಲ ಬೇರೆ ಸರಕು.

ಎಂದು ಕೊನೆಗೆ ಗ್ರಾಮ್ಯಜೀವನದಿಂದ ತಾವು ಪಡೆದಿರುವ ಭಾಷೆ, ವಸ್ತು, ಭಾವಗಳನ್ನು ಮತ್ತೆ ಅವರಿಗೇ ಅರ್ಪಿಸುವ, ಕೆರೆಯ ನೀರನು ಕೆರೆಗೆ ಚೆಲ್ಲುವ ಹೃದಯ ನೈರ್ಮಲ್ಯ, ಶುದ್ಧ ಮನಸ್ಸು ಇಲ್ಲಿ ವ್ಯಕ್ತವಾಗುತ್ತವೆ.

ಬಲದಂಡೆಯ ಈ ಏಳೂ ಹಾಡುಗಳು ಒಂದು ಅರ್ಥದಲ್ಲಿ ವೀರಶೈವ ಗೀತಗಳು. 'ಭದ್ರಮಾಸ' ಸಹ ಶಿವ–ಪುತ್ರನನ್ನು ಸ್ಮರಿಸಿಯೆ ಆರಂಭವಾಗುವುದರಿಂದ ಅದನ್ನೂ ಹೊರಗಿಡಲಾಗದು. 'ಸಂಕ್ರಮಣ'ದ ರೈತರೂ ಕೂಡಲ–ಸಂಗಮ–ಜಂಗಮರನ್ನು ಹಾಡಿ-ಹರಸುವ ಶಿವಭಕ್ತರು 'ಬಸವ ಬಸವಾ ಎಂದು ಪಂಕ್ತಿ ಮಾಡು'. ಎಂದು ನೆಲದ ಮಕ್ಕಳಿಗೆ ಹೇಳುವ ಕವಿಯ ಕೊನೆಯ ರೂಪಕವೂ ಶಿವ-ಗಾನವೇ.

ಆಧುನಿಕ ಕಾಲದಲ್ಲಿ ಇಂಥ ಬಲದಂಡೆಯ ಕವನಗಳಿಂದ ಕವಿಯ ವ್ಯಕ್ತಿತ್ವದ ಸಂಪೂರ್ಣ ಅಧ್ಯಯನ ಸಾಧ್ಯವಾಗುವುದಿಲ್ಲ ಇವು ಕವಿಯನ್ನು ಅವನ ಸ್ವಂತಿಕೆಯೊಂದಿಗೆ ಬೆಳೆಯಗೊಡುವುದಿಲ್ಲ. ಅವನ ಸ್ವಾತಂತ್ರ್ಯ ಬಂಧಿತವಾಗುತ್ತದೆ. ಕವಿಯ ನಿಜವಾದ ಶಕ್ತಿಯ ಪರಿಚಯವಾಗುವುದು. ಅವನು ಬದುಕಿನಲ್ಲಿ ಎಡದಲ್ಲಿ ನಿಂತಾಗ, ಎಡ ಪಕ್ಷವನ್ನು ವಹಿಸಿದಾಗ, ಎಡ ಸ್ಥಿತಿಯನ್ನು ಎದುರಿಸಿ ಎಡ ಭಾವಗಳನ್ನು ಚಿತ್ರಿಸಿದ ಕವನ-ಕೃತಿಗಳನ್ನು ರಚಿಸಿದಾಗ ಮಾತ್ರಸಾಧ್ಯ. ಯಾಕಂದರೆ ಎಡಪದ್ಯಗಳು ಸಹಜವಾಗಿ ಹೊರ ಹೊಮ್ಮುತ್ತವೆ, ಸೃಜನಾತ್ಮಕವಾಗಿರುತ್ತವೆ; ಸ್ವಯಂ-ಸ್ಫೂರ್ತವಾಗಿರುತ್ತವೆ. ಈ ಬಗೆಯ ಪದ್ಯಗಳನ್ನೂ ಕಣವಿಯವರು ಸಾಕಷ್ಟು ಬರೆದದ್ದುಂಟು; ಅದುಬೇರೆ ವಿಷಯ. ಬಲ ಪದ್ಯಗಳನ್ನು ಬರೆಯಬೇಕೆನಿಸಿ ಬರೆಯಲ್ಪಡುವುದು ತೀರ ವಿರಳ. ಬರೆಯಬೇಕಾಗಿ ಬರೆಯಲ್ಪಡುವುದೇ ಇವುಗಳ ಮುಖ್ಯ ಗುಣಧರ್ಮ. ಕವಿ ತನ್ನ ಎಡದಿಂದಲೇ ಬಲ ಪಡೆಯುತ್ತಾನೆ. ಮೊದಲೇ ಬಲವನ್ನು ತಬ್ಬಿದಾಗ ಕ್ಷಣಿಕತೆ, ಸಾಮಾನ್ಯತೆ, ಹೊಂದಾಣಿಕೆಗಳು ಅವನ ದಾರಿಯಲ್ಲಿ ಕಲ್ಲು ಚೆಲ್ಲುತ್ತವೆ. ಆದರೂ ಇಂಥ ಬಲ ಪದ್ಯಗಳಲ್ಲಿಯೂ ರುಚಿತ್ವ, ಸ್ವಾದಿಷ್ಟತೆ ಸಂಗೀತ, ಅತ್ಯಧಿಕ ಅನುಪ್ರಾಸ ಮುಂತಾದುವನ್ನು ಅಶ್ರಯಿಸಲೇ ಬೇಕಾಗುತ್ತದೆ. ಆಗ ಅವು ತಮ್ಮ ಸ್ವಾಭಾವಿಕ ಬಣ್ಣ ಮತ್ತು ಮೆರುಗನ್ನು ಕಳೆದುಕೊಂಡು ಸಂಗೀತ, ವಾದ್ಯ, ಹಾಡುಗಾರರ ಸಹಕಾರಕ್ಕಾಗಿ ಕೈಜೋಡಿಸಿ ನಿಂತುಬಿಡುತ್ತವೆ. ಹೀಗಾಗಿ ಇಂಥ ಬಲ ಪದ್ಯಗಳು ಕವಿಯನ್ನು ಎಡವಿಸುವುದೇ ಜಾಸ್ತಿ. ಕವಿ ಇಂಥಲ್ಲಿ ಅನಿವಾರ್ಯವಾಗಿ ಇತರ ಹಲವಾರು ಪರಿಕರಗಳೊಂದಿಗೆ ಸಮನ್ವಯ ಮಾಡಿಕೊಳ್ಳಬೇಕಾಗುವುದರಿಂದ ಕಾವ್ಯ ಗುಣವಿವೇಚನೆಯ ದೃಷ್ಟಿಯಿಂದ ಸೋಲು ಸಹ ಸಹಜವಾಗುವುದನ್ನು ಅವನು ಒಪ್ಪಬೇಕಾಗುತ್ತದೆ.

ಆದರೆ ಕೆ, ಎಸ್. ನ, ಕಣವಿ ಮುಂತಾದವರು ಇಂಥ ಬಲಪದ್ಯಗಳನ್ನು ರಚಿಸಿದಾಗ ಸಹಜತೆಗೆ ಹೆಚ್ಚು ಸಮೀಪವಾಗುವುದರಿಂದ ಅವರ ರಚನೆಯ ಮಾತು ಅಲ್ಲಲ್ಲಿ ಮುತ್ತಾಗಿ ಲಕಲಕಿಸಿ ಖುಷಿ ಕೊಡುತ್ತವೆ.

ಜ. ಚ. ನಿ.

# ನೆಲ–ಮುಗಿಲಿನ ‘ ಚಿರಂತನದಾಹ ’

ಮುಗಿಲ-ಬೆಳಕಿನ ಬೀಜ ಮರವಾಗಿ ನೆಲವ ತಬ್ಬಿತ್ತು.
ಗಾಳಿ ಜೋಕಾಲಿಯಾಡಿ ತೂಕ ಹಿಡಿದಿತ್ತು.
ಸುಖದ ಸಂವೇದನೆಯಲ್ಲಿ ಮಣ್ಣ ಬೀಜ ಮೊಳೆದೋರಿತ್ತು.
ಹೊಳೆದಿತ್ತು ಅಪೂರ್ವ ಚೆಲುವಿನಲಿ ಬಯಲು.
ಯಾವುದೋ ಲಯದ ಗತ್ತಿನಲಿ ಜೀವ ಮಿಡಿದಿತ್ತು.

["ಬರೆಯಲೊಲ್ಲದ ಕವಿತೆ "]

ಮೌನ ಮೊಗ್ಗೆಯನೊಡೆದು ಮಾತರಳಿ ಬರಲಿ ;
ಮೂರು ಗಳಿಗೆಯಬಾಳು ಮಗಮಗಿಸುತಿರಲಿ.

["ಮಾತು "]

ನಾವು ಮನಸಾರೆ ಮೆಚ್ಚಿದ ಇಂದಿನ ಕನ್ನಡ ಕವಿಗಳಲ್ಲಿ ಶ್ರೀ ಚೆನ್ನವೀರ ಕಣವಿ ಅವರೂ ಒಬ್ಬರು. ಒಬ್ಬರು ಮಾತ್ರವಲ್ಲ, ಕನ್ನಡಿಗರೆಲ್ಲರೂ ಮತ್ತೊಂದು ಮಾತಿಲ್ಲದೆ ಮೆಚ್ಚಿದ ಕವಿ ಚನ್ನವೀರ ಕಣವಿ. ಇದು ಇವರ ನಿಡುಗಾಲದ ಕಾವ್ಯಕೃತುಶಕ್ತಿಯ ಫಲ. ತಾಯ್ನಾಡಿನ ಮೇಲೆ ತನಿ ತನಿಯಾಗಿ ರಚಿಸಿದ ಗೇಯಗೀತ ಕನ್ನಡಿಗರೆಲ್ಲರ ನಾಲಗೆಯ ಮೇಲೆ ನಲಿದಾಡುತ್ತಿದೆ. ಇಂತಹ ಹೆಸರಾಂತ ನವೀನ ಕವನ ಕಲಾವಿದರ ಅಯ್ವತ್ತು ಬರಿಸಗಳ ಕುರುಹಿಗಾಗಿ ರೂಹಿಸಲಿರುವ ‘ಅಭಿನಂದನ ಗ್ರಂಥ’ ಕ್ಕಾಗಿ ಒಂದು ಚಿಕ್ಕಲೇಖನವನ್ನು ಬರೆವ ಮೂಲಕ ಇವರನ್ನು ಹೃದಯಾರೆ ಹರಸಲು ನಮಗೆ ಹಿರಿದಾದ ಹರುಷವೆನಿಸಿದೆ.

ಶ್ರೀ ಚೆನ್ನವೀರ ಕಣವಿ ಅವರು ಒಂದು ವ್ಯಕ್ತಿಯಲ್ಲ. ಕನ್ನಡದ ಇಂದಿನ ಒಂದು ಕಾವ್ಯಶಕ್ತಿ; ನವ್ಯದೀಪ್ತಿ. ಈ ಬಗೆಗೆ ಭಿನ್ನಾಭಿಪ್ರಾಯವಿರದು. ಶ್ರೀ ಕಣವಿ ಅವರು ಕಾವ್ಯ ಪ್ರಯೋಗ ಪರಿಣತತೆಯಲ್ಲಿ ‘ಚೆನ್ನ’ ಆಗಿದ್ದಾರೆ, ‘ವೀರ’ ಎನಿಸಿದ್ದಾರೆ. ನವ್ಯತೆ ಅವರಲ್ಲಿ ಕೇವಲ ಶೈಲಿನಿಷ್ಠವಾಗಿಲ್ಲ, ಭಾವನಿಷ್ಠವೂ ಧ್ವನಿ ನಿಷ್ಠವೂ ಆಗಿದೆ, ಜೊತೆಗೆ ಚಿಂತನ ನಿಷ್ಠವೂ ಆಗಿದೆ.

ಆ ಗಿಡಾ, ಈ ಗಿಡಾ
  ಒಂದೊಂದೂ ಜೇಂಗೊಡಾ,
ಬಾಂದೇವಿಗೆ ನೆಲದಾಯಿಯ
  ಹೂಗೊಂಡೆಯ ಹೊಂಗೊಡಾ ।

[‘ ಕಾವ್ಯಾಕ್ಷಿ ’]

ಎಂಬಲ್ಲಿ ನಮ್ಮಾ ಮಾತಿನ ಸತ್ಯತೆಯನ್ನು ಮನಗಾಣಬೇಕು. ಇಲ್ಲಿ ಪೂರ್ವಪರಂಪರೆಗಿಂತ ಭಿನ್ನದೃಷ್ಟಿಯ ಚನ್ನ ನೋಟವಿದೆ. ರಸವತ್ತಾದ ರೂಪಕಪ್ರತಿಮಾ ತಂತ್ರವಿದೆ. ಅಚ್ಚ

ಗನ್ನಡದ ಮೆಚ್ಚು ನುಡಿಗಟ್ಟು ಮೃದು ಮಧುರವಾಗಿ ಮನ ಮೋಹಕವಾಗಿದೆ. 'ಜೇಂಗೊಡಾ' ರಸಶ್ರಾವಿಯಾಗಿದ್ದರೆ, ಹೊಂಗೊಡಾ ರೂಪಶ್ರಾವಿಯಾಗಿದೆ. ಕೇವಲ ಗಿಡದ ಕೊನೆಯ ಹಣ್ಣುಗಳೇ ಜೇಂಗೊಡವಲ್ಲ, ಜೊತೆಗೆ ಇಡಿಗಿಡವೆ ಜೇಂಗೊಡಾ! ಅವ್ಯಕ್ತರಸದ ಅಭಿವ್ಯಕ್ತಿಯ ನೂತನ ಚಿಂತನವನ್ನು ನೋಡಬೇಕು. ರಸವ್ಯಾಪ್ತಿಯ ಅರ್ಥವತ್ತತೆಯನ್ನೂ ಅವಲೋಕಿಸಬೇಕು. 'ಹೂಗೊಂಡೆಯ ಹೊಂಗೊಡಾ' ಎಂಬಲ್ಲಿ ಭಾವದ ಆಭ್ಯಾಸವಿಲ್ಲದ ನುಡಿಗೊಂಡೆಯ ನೋಡಬೇಕು. ಬಾಂದೇವಿಗೆ ನೆಲದಾಯಿ ನಿವೇದಿಸುವ ರಸ-ರೂಪಗಳ ಅರ್ಚನ ಚಲ್ವಿಕೆ ಚಲ್ಲುವರಿದಿದೆ ನುಡಿಬನದಲ್ಲಿ! ಅವಳು ದೇವಿ, ಇವಳು ತಾಯಿ. ನಿಸರ್ಗದಲ್ಲಿ ನವ್ಯತೆಯ ನಿಲವಿದೆ. ಕವಿಯ ಈ ನುಡಿ-ಬನವ ನೋಡಲು 'ಕಾವ್ಯಾಕ್ಷಿ'ಯೇ ಬೇಕು. ಆಗ ಕವಿಯ ಬೆಡಗಿನ ಭಾವ–ಭಾವನೆಗಳ ಸಾಕ್ಷಾತ್ಕಾರವಾಗುತ್ತದೆ. ಸಂತೋಷ ಸ್ಫೂರ್ತಿಗಳು ತಲೆ ಎತ್ತುತ್ತವೆ.

ಕಣವಿ ಅವರ ಕವನ ಅಯನ ಬೆಟ್ಟಗಳ ನಡುವಿನ ಇಕ್ಕಟ್ಟಾದ ಕಣಿವೆಯಲ್ಲ; ವಸಂತ ಶ್ರೀಯ ವನದ ನಡುವಿನ ಕಮನೀಯ ಕಣಿವೆ. ಅಲ್ಲಿ ನಡೆದುಹೋದಷ್ಟೂ ಚಂದ; ಆಲಿದೆರೆದು ಕಂಡಷ್ಟೂ ಆನಂದ. ಕೃತ್ರಿಮತೆಯನ್ನು ಎಲ್ಲಿಯೂ ಕಾಣೆವು.

ಅವರದು ಅವರದೇ ಆದ ಕಾವ್ಯಪ್ರತಿಭೆ. ಆದು ಸಹೃದಯ ಸೇವ್ಯಪ್ರತಿಭೆ. ಅಂತೆಯೇ ಅವರ ಆ ಭಾವಾಭಿವ್ಯಕ್ತಿ! ಕವಿಸಹಜವಾಗಿ ಇವರಿಗೆ ಮೈಗೂಡಿ ಬಂದಿವೆ ರಸೋತ್ಪಾದನ ಶಕ್ತಿಯೂ ಧ್ವನಿಸುವ ದೀಪ್ತಿಯೂ ಸಹ!

ಕಣವಿಯವರದು 'ಚಿರಂತನದಾಹ'. ಯಾವ ದಾಹ? ನವೀನವೂ ನವ್ಯವೂ ಆದ ಕಾವ್ಯದಾಹ. ಆದೆಂತಹ ದಾಹ ? ಕವಿಯೇ ಕವನಿಸಿರುವಂತೆ. ' ನೂರು ಕಾರಂಜಿಗಳು ತೆಕ್ಕನೆಯೆ ಪುಟಿದಂತೆ' ಜೀವನದ ಬಗೆಗೆ, ಪ್ರಕೃತಿಯ ಬಗೆಗೆ ಭಾವಪೂರ್ಣವಾಗಿ ಧ್ವನಿವರ್ಣ ಸಂಕೀರ್ಣವಾಗಿ ಕನ್ನಡ ಕವನ ಕಾರಂಜಿಗಳ ಪುಟಿಸುವ ದಾಹ ಅವರದು. ಸಹೃದಯ'ಲೋಕ ಲೋಕಂಗಳ ತೊಳೆವ,' ತೊಳೆದು ತಿಳಿಯಾಗಿಸುವ, ತಣಿಸುವ ದಾಹ. 'ಬೊಗಸೆಗಂಗಳ ತೆರೆ ತೆರೆದು ಮೊಗೆ ಮೊಗೆದು' 'ಮೂಡಣದ ಬಾನ ಕರೆಯಂಚಿನ ಚೆಂಬೆಳಕ'ನು ಕುಡಿವ ದಾಹ–ಕವಿಗೆ! ಕುಡಿದರೂ ಕುಡಿದು ಕವನಿಸಿದರೂ 'ದಾಹ ತೀರದಲ್ಲಾ!'_ಎಂದು ದಾವಂತಿಸುವ ದಾಹ–ಕವನ ವನದ ಜೀವಂತ ಕಣಿವೆಗೆ! ಈ ಕವಿ ದೃಷ್ಟಿ ಸೃಷ್ಟಿಯ ಚೆಂಬೆಳಕನ್ನು ಚೆಂಬೊಗಸೆಯಿಂದ ಚೋದ್ಯವಾಗಿ ಚೇತೋಹಾರಿಯಾಗಿ ಮೊಗೆ ಮೊಗೆದು ಕುಡಿದು ಸೂಳ್ನುಡಿಯಲ್ಲಿ ಮಿಡಿ ಮೀಡಿದರೂ ' ಹೃದಯಾಂತರಾಳದಲಿ ಏನೋ ಅಸಮಾಧಾನ ' ವಂತೆ ; ' ಬಾಯ್ದೆರೆದು ಹೀರುತಿರೆ ತೃಪ್ತಿಯಿಲ್ಲ ' ವಂತೆ! ತವಕ ಕವಿಗೆ ಇನ್ನೂ ಮತ್ತೂ ತುಂಬಿ ಇಂತು ತುಳುಕಿದೆ :

ಬಣ್ಣ ಬಣ್ಣದ ಬೆಳಕ ಕಡಲಿನೊಡಲೊಳಗಲ್ಲಿ
ಕಲ್ಲು ಸಕ್ಕರೆಯಂತೆ ಕಲಗಿ ಬಿಡಲೆ ?
ಇಲ್ಲದಿರೆ ಎಲ್ಲವನು ಒಂದೆ ಬೊಗಸೆಯೊಳಾಂತು
ಆ ಅಗಸ್ತ್ಯನ ತೆರದಿ ಕುಡಿದು ಬಿಡಲೆ ?

ಅದೇನು ಕವಿಯ ಕಾಂಕ್ಷೆ! ಅದೆನಿತು ಬೃಹತ್ ಕಲ್ಪನೆ! ಅದೆನಿತು ಭಾವ ತೀವ್ರತೆ! ಕಡಲೊಡಲು ತನ್ನದಂತೆ! ಒಂದೆರಡು ಬೊಗಸೆ ಜಡಜಲವ ಕುಡಿದು ನೀರಡಿಕೆ ನೀಗಿ ತೃಪ್ತಿ ಬಡುವ ಜಡಮತಿ ಬ್ರಹ್ಮನಿತ್ತ ಈ ಪ್ರಾಕೃತಿಕ ಕಿರಿಯೊಡಲು ವಿಶ್ವವಿರಾಟ್‌ದಾಹದ ಕವಿಗೆ ಅದರಲ್ಲಿಯೂ ಚೆಂಬೆಳಕಿನ (ಚಿತ್ಕಳೆಯ) ದಾಹವುಳ್ಳ ಕವಿಗೆ ಏತಕ್ಕೆ ಸಾಲಬೇಕು? ಎಷ್ಟಕ್ಕೆ ಸಾಲಬೇಕು? ಕವಿಯದು ಹೆಬ್ಬಯಕೆಯ ಹೆಗ್ಗಡಲ ಒಡಲು ! ವಿಶ್ವಕವಿಗೆ ವಿಶ್ವವಿಶಾಲ ಒಡಲಿಗೆ ಈ ಕಿರುಮನೆ, ಈ ಕರಿಮಣ್ಣ ಮನೆ, ಇಲ್ಲಣದ ಬೆಳಕಿಂಡಿಯ ಬೆಳಕು ಸಾಲದಾಗಿದೆ. "ಇಲ್ಲಣವು ಜೋತಿರುವ ಜೇಡಬಲೆ ನೂತಿರುವ-ಬೆಳಕಿಂಡಿಯಲಿ ಬೆಳಕದೆಂತು ಬಹುದು?" ಎಂಬಲ್ಲಿದೆ ಕವನಕಲೆಯ ನವ್ಯತೆ ! ಜೊತೆಗೆ ಬೇಡ ಬಲೆಯ ನೆಯ್ದ ನೇಕಾರನ ಧ್ವನಿಯೂ ಧ್ವನಿಸಿ ಕೊರತೆಯ ಕೊರಗಿನ ಶೋಕಭಾವದಲ್ಲಿ ಶ್ಲೋಕ ಮೂಡಿ ಬಂದ ಕಲೆ. ಹೀಗೆ ನಿಮಿತ್ತವಾಗಿ ನಿಂತಿದೆ ಈ ಕಾವ್ಯಕಲಾವಾಣಿ ! ಬಾನಿನ ಬಾಳ ಬೆಳಗನಾಶಿಸುವ ಕವಿಯ ಕಳಾವಾಣಿ !!

ಹೊಗೆನಟ್ಟು ಹೋಗಿರುವ ಮನದ ಮನೆ ಗೋಡೆಗಳು
ಸುಣ್ಣ ಬಣ್ಣವನೆಂದು ಕಾಣಬಹುದು ?

ಎಂಬಲ್ಲಿನ ಕವಿಯ ರೂಪಕಯುಕ್ತ ಪ್ರತಿಮಾತಂತ್ರದ ಕುಟಿಲರಹಿತ ಕುಶಲತೆಯನ್ನು ಕಾಣಬೇಕು. ದೀನ–ದಲಿತರ ಬಾಳು ಬದುಕಿನ ದೃಶ್ಯ ಕವಿಯ ಕಾವ್ಯವಸ್ತುವಾಗಿದೆ. ನಾಡಿನ ಎಲ್ಲ ಬಡ ಮನೆಗಳ ಸಹಜ ಚಿತ್ರ ಕಣ್ಣುಮುಂದೆ ಕಟ್ಟಿದಂತಿದ್ದು ಜೊತೆಗೆ ಬಡ ಕಬ್ಬಿಗರ ಮನದ ಗೀಳು ಬೀಳುಗಳ ಚಿತ್ರವೂ ಕಣ್ಮುಂದೆ ಬಾರದಿರದು. ಸುಣ್ಣ ಬಣ್ಣವಿಲ್ಲದ ಗೋಡೆ ಅಲಂಕಾರವಿಲ್ಲದ ನುಡಿಗಡಣ. ಆಳವಾದ ಅನ್ವೇಷಣ ದೃಷ್ಟಿಯಿಲ್ಲದ ಹೊಸತನವಿಲ್ಲದ ಹಸಿ ಉರುವಲ ಹೊಗೆನಟ್ಟು ನಿಂತ ಬರಡುನುಡಿಗಡಣಗಳಲ್ಲಿ ಯಾವ ರೂಹನ್ನು ಕಾಣಬಹುದು? ಯಾವ ರಸವನ್ನು ಊಡಬಹುದು?

ಕವಿಯ ಬಗೆಯ ಬೇಗೆ ಮತ್ತು ಬಾಯಾರಿಕೆ ಇನಿತಕ್ಕೆ ತೀರಿಲ್ಲ :

ಪಂಚಭೂತಗಳೆಲ್ಲ ಮಾನವನ ದೇಹದಲಿ
ಹೊಂಚು ಹಾಕುತ ದಾರಿ ಕಾಯುತಿಹವು ;
ಕಿಂಚಿತಾದರು ಕರುಣೆ ಕೊನರೊಡೆದು ಬಾರದಿರೆ
ಈ ಪ್ರಂಪಚವೆ ಚಿತೆಯನೇರಲಿಹುದು !

ಇಂತಾದರೆ ಮಾನವ ಜೀವನದ ಯಾವ ಮೌಲ್ಯಗಳನ್ನು ಕಾಣಬಹುದು? ಯಾವ ಚಿರಂತನತೆಯು ಚಿಗುರಿ ಉದುರಿ ಹೋಗದಿರಬಹುದು? ತಾನಿಲ್ಲದಂತಾದ ಬಳಿಕ ತಿರೆ ಇದ್ದರೇನು? ಇಲ್ಲದಿದ್ದರೇನು? ದೈಹಿಕ ಭೌತವಿಕಾರ ವಿಹ್ವಲ, ದೈವಿಕ (ಆತ್ಮಿಕ) ಪ್ರಭೆಯ ಹಂಬಲ ಎರಡೂ ಇರುಳು ಹಗಲುಗಳಂತೆ ಕವಿಯಭಾವ ಭಾಷೆಗಳಲ್ಲಿ ಮರ್ಮಸ್ಪರ್ಶಿಯಾಗಿ ಸುಳಿದಿವೆ.

ಕಿಟಕಿಗಳನರೆತೆರೆದು ಕಟಕಿಯಾಡುವ ಗಾಳಿ
ಮಾಡು ನಿನ್ನಯ ದಾಳಿ ಇಂದು ಇಂದೇ!

ಜಗದೆಲ್ಲ ಪುಷ್ಪಗಳ ಪೈರುಗಳ ಪರಿಮಳದ
ಪನ್ನೀರುಗಳನೆರೆದು ಮೀಯಿಸಿಂದೇ !

ಇಲ್ಲಿ ಕವಿಯ ಕೊರತೆಯ ಕೊರಗಿನ ಆಳವನ್ನು ಕಂಡಂತೆ, ಜಗದೆಲ್ಲ ಪುಷ್ಪ ಪೈರುಗಳು ಪರಿಮಳದ ಪನ್ನೀರುಗಳು ಮೀಯಲೆಂಬ ಕೋರಿಕೆಯ ಅಗಲವನ್ನೂ ಕಾಣುತ್ತೇವೆ. ಇಷ್ಟೇ ಅಲ್ಲ, ಇನ್ನೂ ಆಲಿಸಿ.

" ಜಗವ ತುಂಬಿದ ಬೆಳಕು ನಮಗೇಕೋ ಸಾಲದಿದೆ
ಎನಿತು ಮಾನವನೆದೆಯ ಆಳ ಅಗಲ !
ಬಂದಷ್ಟು ಇಂಗುತಿದೆ ಮತ್ತೆ ಬರಿದಾಗುತಿದೆ
ಎಷ್ಟು ಸೆಲೆಯೊಡೆದರೂ ವಿಫಲ ವಿಫಲ !

ಸೃಷ್ಟಿಯ ಪೂರ್ಣತೆಯನ್ನೂ ನಮ್ಮ ದೃಷ್ಟಿ ಭಾವಗಳು, ವಾಸ್ತವವಾಗಿ ಆಳ ಅಗಲಗಳಾಗಿದ್ದರೂ ಬಂದುದನ್ನು ಉಳಿಸಿ ಬೆಳಸಿಕೊಳ್ಳದ, ಬೆಳಗಿಸಿಕೊಳ್ಳದ ಪ್ರಯತ್ನದ ಅಪೂರ್ಣತೆಯನ್ನೂ 'ವಿಫಲ ವಿಫಲ' ಎಂಬ ದ್ವಿರುಕ್ತಿಯ ಸಫಲತೆಯಲ್ಲಿ ಕವಿ ತನ್ನ ಚಿರಂತನದಾಹ (ಬಯಕೆ) ವನ್ನು ಮಹಂತವನ್ನಾಗಿಸಿದಾನೆ. ಜೊತೆಗೆ ಸರ್ವದರ್ಶನ ಶಕ್ತಿಯುಳ್ಳ ಆ ಚಿದ್ಬೆಳಗು ಚಿಮ್ಮಿಬಾರದೆ ' ಜಗವತುಂಬಿದ ಬೆಳಕು ನಮಗೇಕೋ ಸಾಲದಿದೆ' ಎಂದು ಹೇಳಿ ಕವಿ ತನ್ನ 'ಚಿರಂತನದಾಹ'ವನ್ನು ಅಂತಃ ಸತ್ವಗರ್ಭಿತವಾಗಿ ಅಭಿವ್ಯಕ್ತಿಮಾಡಿ, ತನ್ನ ವಿಶ್ವ ವಿಶಾಲ ವಿಶಿಷ್ಟ ವ್ಯಕ್ತಿತ್ವವನ್ನು, ಸಾಮಾನ್ಯ ದೃಶ್ಯದಲ್ಲಿ ತನ್ನ ಅಸಾಮಾನ್ಯ ಶಕ್ತಿತ್ವವನ್ನು ದಿಟಪುಟಗೊಳಿಸಿದ್ದಾನೆ. ಕಾಣುವ ಆ ಆಗಸದ ಬೆಳಕಿಗಿಂತ, ಅದರಿಂದ ಬಂದು ಅಂತರಂಗದಲ್ಲಿ ಬೆಳಗುವ ಕಾವ್ಯದೀಪ್ತಿ ಹೊಮ್ಮಿ ಇಂಗದಂತಿದ್ದರೆ ಆಗ ಸಫಲ, ಎಂಬ ಭಾವ ಕವಿ ಆಶಯವಾಗಿದೆ. ಇದರಿಂದ 'ಚಿರಂತನದಾಹ' ಇದೊಂದು ಇಂದಿನ ಎತ್ತರದ ಕಲಾಕೃತಿ ! ಈ ಒಂದು ಕವನ ಸಾಕು ಕವಿಯ ವಿಶಿಷ್ಟ ವ್ಯಕ್ತಿತ್ವಕ್ಕೆ ! ಇವರ ಈ 'ಚಿರಂತನದಾಹ' ಕನ್ನಡಸಾಹಿತ್ಯ ಮಾತ್ರಕ್ಕಲ್ಲ ಭಾರತ ಸಾಹಿತ್ಯ ಪ್ರಪಂಚಕ್ಕೆ ಕೊಟ್ಟ ಅನುಪಮವಾದ ವಿನೂತನ ಕೊಡುಗೆ, ಚಿರಂತನ (ಎಂದೆಂದೂಇರುವ) ಕೊಡುಗೆ !

ಕವಿ ಕಣವಿಯವರು ಬಾಳಿನ ತುಂಬು ಅನುಭೂತಿಯನ್ನು ಪರಿಣಮಿಸಿ ಪರಿಪಾಕಗೊಳಿಸಿಕೊಂಡು ನವ್ಯ ಕಾವ್ಯರೂಪದಲ್ಲಿ ಅಭಿವ್ಯಕ್ತಿಗೊಳಿಸುತ್ತಾರೆ. ನೂತನ ಪ್ರತೀಕ ಪ್ರತಿಮಾವಿಧಾನಗಳಿಂದ ರಮಣೀಯವಾಗಿಸುತ್ತಾರೆ ; ರಸಾತ್ಮಕವಾಗಿಸುತ್ತಾರೆ. ಹಲವು ಹತ್ತು ಅರ್ಥಭಾವಗಳಿಂದ ಕಾವ್ಯವ್ಯಾಪ್ತಿಯನ್ನು ದೀಪ್ತಿಯನ್ನು ಹೆಚ್ಚಿಸುತ್ತಾರೆ; ಧ್ವನಿಪೂರ್ಣವನ್ನಾಗಿಸುತ್ತಾರೆ.

ಹೊಸ ಕಾವ್ಯರಚನೆಯನ್ನು ಹಲವಾರು ಜನ ಕವಿಗಳು ಕೈಕೊಂಡಿದಾರೆ. ಆದರೆ ಹದಗೊಂಡ ಸುಧಾಮಯ ಶೀಲಶೈಲಿಯ ಹೊಸಕಾವ್ಯಕುಶಲತೆ ಕಣವಿಯವರ ಕೈವಶವಾಗಿರುವಲ್ಲಿದೆ ಇವರ ವಿಶಿಷ್ಟ ವ್ಯಕ್ತಿತ್ವ ! ಜೀವನದ ನವ ನವ ಸಂವೇದನಗಳ ಸೃಜಕತೆಯ ಸಂಮೋಹನ ಸಂವಿಧಾನ ಕವಿ ಕಣವಿಯವರದು. 'ಮಣ್ಣಿನಮೆರವಣಿಗೆ' 'ನೆಲ-ಮುಗಿಲು' 'ನಗರದಲ್ಲಿ ನೆರಳು' ಈ ಕವನ ಸಂಕಲನಗಳಲ್ಲಿ ಈ ನವ್ಯ ಶಕ್ತಿಯನ್ನು ನವ್ಯದೀಪ್ತ

ಧ್ವನಿಗಳನ್ನು ಕಾಣುತ್ತೇವೆ. ನಾವು ಕಂಡ ಇವುಗಳಲ್ಲಿ ಇವರದೇ ಆದ ಹೊಸಹೊಳಪು, ಹೊಸ ಸುಳುಹುಗಳಿವೆ. ಈ ಬಗೆಗೆ ಇವರದೇ ಆದ "ನವ್ಯತೆ ಒಂದು ತಂತ್ರವೆನಿಸಿದರೂ ಅದರ ನಿರ್ವಹಣೆಗೆ ತಕ್ಕ ಪರಿಕರಗಳು ಕವಿಯಲ್ಲಿ ಸಿದ್ಧಗೊಂಡಿರಬೇಕಾಗುತ್ತದೆ. ವೈಯಕ್ತಿಕ ಪ್ರಯೋಗಶೀಲತೆ ಆಂತರಿಕ ಅವಶ್ಯಕತೆಯಿಲ್ಲದೆ ಸತ್ವಪೂರ್ಣವಾಗಿ ನಿಲ್ಲಲಾರದು ನವ್ಯತೆ ಒಂದು ಆಭರಣವಲ್ಲ, ಆಲಂಬನವಲ್ಲ, ಕವಿಯ ಅಂತರಂಗದ ಒಂದು ವಿಶಿಷ್ಟ ಆವಿಷ್ಕಾರ." ಕವಿಯ ಈ ಸತ್ವಶಾಲಿಯಾದ ಸವಿಸೊಲ್ಲುಗಳಲ್ಲಿ ಇವರ ವ್ಯಕ್ತಿತ್ವದ ಸತ್ವವನ್ನು, ಹದಗೊಂಡ ಹೃದಯವನ್ನು, ಪರಿಪಾಕಗೊಂಡ ಪ್ರಜ್ಞೆಯನ್ನು ದಿಟಪುಟವಾಗಿ ಪ್ರದರ್ಶಿಸುತ್ತೇವೆ. ಇವರ 'ಸಾಹಿತ್ಯ ಚಿಂತನ' 'ಕಾವ್ಯಾನುಸಂಧಾನ' ಗಳು ಇವರ ವಾಙ್ಮಯ ವ್ಯಕ್ತಿತ್ವಕ್ಕೆ ಹಿಡಿದ ಕನ್ನಡಿಗಳು.

ಮನೆಯಬಾಳು ಇವರ ಕವನವಸ್ತುವಾಗುವಂತೆ ಮನದ ಬಾಳೂ ಆಗಿರುತ್ತದೆ. ಅಂತೆಯೆ ನೆಲದಾಯಿಯಂತೆ ಮುಗಿಲೂ ಆಗಿರುತ್ತದೆ. ಇದರಿಂದಾಗಿ ಇವರ ಅನ್ವೇಷಣ ಅವಲೋಕನ ವ್ಯಾಪ್ತಿಯ ಅರಿವಾಗುತ್ತದೆ. ಅನುಭಾವದೀಪ್ತಿಯ ಅರಿವಾಗುತ್ತದೆ. ಭಾವ ವಿಭಾವವಾಗದೆ ಅನುಭವವುಂಟಾಗದು.

ಕಣ ಕಣದ ಗತಿ–ಮತಿಯ ಗುರುತಿಸು, ಆದರೀಗಲೆ
ಅದರ ಇತಿ ವೃತ್ತವನು ಬರೆಯದಿರು, ನೀನಾಗಿ
ಕೊರೆಯದಿರು ದಾರಿಯನು............

ಆಕಾಶ ಕೈಹಿಡಿದು ಎತ್ತುವುದು, ಮುತ್ತಿಕ್ಕಿ
ಭೂಮಿಗಿಳಿಸುವುದು. ತೊಡೆಯ ಮೇಲಾಡುವುದು ಮಗು.

..................................
ಗುರುತ್ವಾಕರ್ಷಣ ಕರುಣೆ–ಕೇಂದ್ರ ನೆಲದೊಡಲು
ಬಾನತೀಂದ್ರಿಯ ಸ್ಪರ್ಶ–ತುಂಬಿ ತೇಲಿವೆ ಮುಗಿಲು.

ಕವಿ ಕಣವಿಯವರ ವ್ಯಕ್ತಿತ್ವವೇ ಅವರ ಈ ಕಾವ್ಯವಾಣಿಯಾಗಿ ರೂಪುಗೊಂಡಿದೆ. ಇವರು ಮಾನವ ಜೀವನದ ಕಣ ಕಣಗಳನ್ನು ಗುರುತಿಸಿದ ಕಣವಿ. ಗುರುತಿಸಿದುದನ್ನು ತಮ್ಮ ಒಂಬತ್ತು ಹತ್ತು ಕವನ ಸಂಕಲನಗಳಲ್ಲಿ ಹೊಸ ಹೊಲಬಿನಲ್ಲಿ ತಾನೆಂಬ ಬಗೆಯಿಲ್ಲದೆ (ಬರೆದ) ಕವಿ. ನೆಲ_ಮುಗಿಲ ಕವಿ. ನೆಲವಿಲ್ಲದ ಮುಗಿಲು, ಮುಗಿಲಿಲ್ಲದ ನೆಲ ಅರೆಕೊರೆಗಳು. ಇವೆರಡೂ (ನಡುವಿನವು) ಬಾಳಿಗೆ ಪರಸ್ಪರ ಪೂರಕಗಳು. ಮುಗಿಲಿಗೇರಿದರೂ ನೆಲದ ಆಕರ್ಷಣ ತಪ್ಪದು. ನೆಲದ ಮೇಲಿದ್ದರೂ ಮುಗಿಲ ಅತೀಂದ್ರಿಯ ಸ್ಪರ್ಶ ತಪ್ಪದು. ನೆಲ ಮುಗಿಲುಗಳ ಆಕರ್ಷಣೆಗೆ ಅಳವಟ್ಟ ಕವಿ, ಆಗು ಹೋಗುಗಳನ್ನು ಮನಗಂಡ ಕವಿ-ಇಹದ ಇರವನ್ನು ಪರದ ಅರಿವನ್ನು ತನ್ನ ಕಾವ್ಯಗಳಲ್ಲಿ ಕಾಣಿಸಿದ್ದಾನೆ. ಕಾಣಿಸುವ ಕಲಾಪ್ರತಿಭೆಯನ್ನು ಪಡೆದಿದ್ದಾನೆ.

ಕವಿ ಪ್ರತಿಭೆಗೆ ಯಾವುದು ದೂರ, ಯಾವುದು ಹತ್ತಿರ? ವಿಶ್ವದಲ್ಲಿ ಯಾವುದು ವಸ್ತುವಾಗದೆ ಉಳಿಯಬಲ್ಲದು. ಏರಬಲ್ಲ ಬಾನಿಗೆ, ಇಳಿಯಬಲ್ಲ ಭೂಮಿಗೆ ; ಕಣ ಕಣ

ದಲ್ಲಿಯೂ ಚಲುವನ್ನು ಕಾಣಬಲ್ಲ, ಕಾಣಿಸಬಲ್ಲ, ಆಗಸದ ಅಂತರ್ಗರ್ಭ ಭೇಧಿಸಬಲ್ಲ; ಸಾಧಿಸಬಲ್ಲ. ಮಣ್ಣಿನ ಮರೆಯಲ್ಲಿನ ನೋವನ್ನು, ಬಯಲಿನ ಬಗೆಯಲ್ಲಿನ ನಲಿವನ್ನು ಕಂಡು–ಉಂಡು ವಿಭಾವಿಯಾಗಿ–ಅನುಭಾವಿಯಾಗಿ ಭಾಷಾ ಮುದ್ರೆಯಲ್ಲಿ ಭದ್ರಿಸಿ ಧ್ವನಿಸಬಲ್ಲ; ಧ್ವನಿಸಿದ್ದಾನೆ. ಆಧುನಿಕ ಕವಿ ಸಹಜ ಜೀವನಸಿದ್ಧಿಯನ್ನು ಪಡೆದಿದ್ದಾನೆ.

**ಸಿದ್ಧಲಿಂಗ ದೇಸಾಯಿ**

# ಕಣವಿಯವರ ಕಾವ್ಯದಲ್ಲಿ ಧಾರವಾಡ ಪರಿಸರ

ಧಾರವಾಡದ ನೆಲದ ಗುಣವೇನೊ ಋಣವೇನೊ !
ಕವಿ-ಗಾಳಿ ಸವಿಗಾಳಿ ತೀಡುತಿಹುದು.

ಜನದ ಪರಿಯಂತಿರಲಿ, ನೆಲದಾಯ ಕಾರುಣ್ಯ
ಹಸಿರು ಸಾಮ್ರಾಜ್ಯದಲಿ ಕುಸುಮಿಸಿಹುದು,
ಕಂಡ ಕಣ್ಮನಗಳಲಿ ರಸಭಾವ ಸಂಚಾರ
ಕಿರುವಕ್ಕಳೂ ಕವಿಗಳಾಗಬಹುದು. (ಭಾವಜೀವಿ)

ನಾನು ಪ್ರಾಥಮಿಕ ಶಾಲೆಯ ಐದನೆಯ ಇಯತ್ತೆಯಲ್ಲಿ ಓದುತ್ತಿದ್ದಾಗ ಕನ್ನಡ ಪಠ್ಯಪುಸ್ತಕದಲ್ಲಿ ಕಣವಿಯವರ 'ಭಾವಜೀವಿ' ಯಲ್ಲಿನ ಕೆಲವು ಪದ್ಯಗಳಿದ್ದವು, ಆ ಏಳೆಂಟು ಪದ್ಯಗಳಲ್ಲಿ ಸೊಗಸಾಗಿ ಮೂಡಿರುವ ಹಳ್ಳಿಯ ಜೀವನದ ಆತ್ಮೀಯ ಚಿತ್ರಣವನ್ನು ಓದಿ ಇಡೀ ಆ ಕಾವ್ಯವನ್ನೇ ಎಲ್ಲಿಯಾದರೂ ದೊರಕಿಸಿಕೊಂಡು ಓದಬೇಕೆಂದು ಮನಸ್ಸು ಹಪ ಹಪಿಸುತ್ತಿತ್ತು. ಧಾರವಾಡದಿಂದ ಇಪ್ಪತ್ತು ಇಪ್ಪತ್ತೈದು ಮೈಲುಗಳ ಅಂತರದ ಮೇಲಿರುವ ಒಂದು ಹಳ್ಳಿಯಲ್ಲಿದ್ದದ್ದರಿಂದ ಹಾಗೆ ದೊರಕಿಸಿಕೊಂಡು ಓದಲು ಆಗ ನನಗೆ ಸಾಧ್ಯವಾಗಲಿಲ್ಲ.

ಮುಂದೆ ಆರನೆಯ ಇಯತ್ತೆಗೆ ಧಾರವಾಡದ ಆರ್. ಎಲ್. ಎಸ್. ಹಾಯಸ್ಕೂಲಿಗೆ ಹೆಸರು ಹಚ್ಚಿಸಿದ್ದರಿಂದ ನನ್ನ ಹಾಗು ಧಾರವಾಡದ ಸಂಪರ್ಕ ನಿಕಟವಾಯಿತು. ನನಗೆ 'ಭಾವಜೀವಿ' ಯನ್ನುಕೊಂಡು ಓದಬೇಕೆನ್ನುವ ಹಂಬಲ ಹಾಗೇ ಇದ್ದೇ ಇತ್ತು. ಒಂದು ದಿನ ಕರ್ನಾಟಕ ಸಾಹಿತ್ಯಮಂದಿರಕ್ಕೆ ಹೋಗಿ ಬೆಲೆಯನ್ನು ವಿಚಾರಿಸಿದೆ. ಆಗ ಅದರ ಬೆಲೆ ಎಂಟಾಣೆ. ಎಂಟಾಣೆ ಎಂದರೆ ಬಹಳವಲ್ಲವಾದರೂ ನಮಗೆ ಪಠ್ಯವಲ್ಲದ ಪುಸ್ತಕವನ್ನು ಕೊಳ್ಳಲು ಮನೆಯಲ್ಲಿ ಹಣವನ್ನಾದರೂ ಹೇಗೆ ಕೇಳುವದು? ಅಷ್ಟರಲ್ಲಿಯೇ ನನಗೊಂದು ಉಪಾಯ ಹೊಳೆಯಿತು : ನಾನಾಗ ಧಾರವಾಡದಿಂದ ಐದಾರು ಮೈಲುಗಳ ಅಂತರದಲ್ಲಿರುವ ನಮ್ಮ ಹಳ್ಳಿಯಿಂದ ದಿನವೂ ಬಸ್ಸಿನಲ್ಲಿ ಹೋಗೀಬಂದು ಮಾಡುತ್ತಿದ್ದೆ. ಒಂದು ದಿನ ನನಗೆ ಬಸ್ಸಿಗೆಂದು ಕೊಟ್ಟ ರೊಕ್ಕವನ್ನು ಕಿಸೆಯಲ್ಲಿಟ್ಟುಕೊಂಡು ಕಾಲ್ನಡಿಗೆಯಿಂದ ಧಾರವಾಡ ಮುಟ್ಟಿ ಪುಸ್ತಕದಂಗಡಿಗೆ ಹೋಗಿ 'ಭಾವಜೀವಿ'ಯನ್ನು ಖರೀದಿಸಿದೆ. ಅಂದು ಶಾಲೆ ತಪ್ಪಿಸಿ ಸಂಜೆಯವರೆಗೆ ಹೊಳ್ಳಾಮಳ್ಳಾ ಅದನ್ನೇ ಓದಿ ಆನಂದ ಪಟ್ಟೆ. ಹೀಗೆ ನನಗೆ ಕಾವ್ಯದ ಬಗ್ಗೆ ಹುಚ್ಚು ಹಿಡಿಸಿದ ಹಾಗು ನನ್ನ ಕಾವ್ಯ ಬರವಣಿಗೆಗೆ ಪ್ರೇರಕವಾದ ಕೆಲವೇ ಕೆಲವು ಪ್ರಾರಂಭಿಕ ಪ್ರಭಾವಗಳಲ್ಲಿ ಕಣವಿಯವರ ಕಾವ್ಯ ಪ್ರಮುಖವಾದದ್ದು. ನಾನು

ಎಂದಿನಂತೆ ಇಂದಿಗೂ ಸಹಿತ ಕಣವಿಯವರ ಕಾವ್ಯದ ಬಗ್ಗೆ ಅದೇ ಅಚ್ಚಳಿಯದ ಮೋಹವನ್ನು ಇಟ್ಟುಕೊಂಡವನಾಗಿದ್ದೇನೆ. ಇದಕ್ಕೆ ಅವರ ಕಾವ್ಯದ ಆಕರ್ಷಕ ಗುಣವೂ ಕಾರಣ.

ವಿಪುಲವೂ, ವೈವಿಧ್ಯಮಯವೂ ಆಗಿರುವ ಕಣವಿಯವರ ಕಾವ್ಯವನ್ನು ನಾವಿಂದು ಹಲವಾರು ಮಗ್ಗಲುಗಳಿಂದ ಹಾಗೂ ಹತ್ತಾರು ವಿಷಯಗಳಡಿ ಅಭ್ಯಾಸಮಾಡುವದು ಅವಶ್ಯಕವಾಗಿದೆ. " ಕಣವಿಯವರ ಕಾವ್ಯದಲ್ಲಿ ಧಾರವಾಡದ ಪರಿಸರ " ಅಂಥ ಪ್ರಯತ್ನಗಳಲ್ಲಿ ಒಂದು. ಅವರ ಏಳನೆಯ ಕವನ ಸಂಕಲನ "ನೆಲ–ಮುಗಿಲು" ನಲ್ಲಿ, ಬೇಂದ್ರೆಯವರು ; "ಧಾರವಾಡ ! ಭೂಮಿ ಅಂದರೂ, ಭಾರತ ಅಂದರೂ, ಕರ್ನಾಟಕ ಎಂದರೂ ಅಷ್ಟೆ, ಒಂದುನೆಲದ ಒಂದುಮಂದಿ. ಒಂದೇ ತನು–ಮನ–ಧನ ಎಂಬುತೆ ಒಂದು ಜನ ಆಗುವದು ಅವಸರದ ಅಡಿಗೆ ಅಲ್ಲ ; ಕಾಲದ ಪಾಕ..................ಸುಮ್ಮನೆ ರೂಪಗೊಂಡಿಲ್ಲ ವಿಶ್ವವಿದ್ಯಾಲಯದ ಪಾವಟೆ-ಗಿರಿ; ಮೈಲಾರಲಿಂಗದ ವಿದ್ಯಾಗಿರಿ ; ಕೃಷಿ ಕಾಯಕದ ಎತ್ತಿನಗುಡ್ಡ–ವೃಷಭಗಿರಿ. ಅಥಣಿಯ ಪಾದಗಳು ಸದಾಶಿವಪೇಟೆ ( ಹಾವೇರಿಪೇಟೆ ) ಯ ಬಯಲಿನಲ್ಲಿ ನಿಲಯ ನಿಲ್ಲಿಸಬೇಕಾದರೆ ಅನ್ನದಾನ ಎಷ್ಟು ! ವಿದ್ಯಾದಾನ ಎಷ್ಟು ! ಶ್ರದ್ಧಾದಾನ ಎಷ್ಟು ! ಬೇಂದ್ರೇನ 'ಅಂಬಿಕಾತನಯ' ನಂತೆ ಕಣವಿಯ ಚೆನ್ನವೀರನಿಗೂ ಇವೇ, ಇಂಥವೇ ಮಹಾ ಪ್ರೇರಣೆಗಳು..............ಮಿಂಚಿನ ಬಳ್ಳಿಯ 'ಸಂಚಿಕೆ', 'ನಡೆದು ಬಂದ ದಾರಿಯ ಮನ್ವಂತರ', ಬುನಾದಿ ಇಲ್ಲದೆ ಕಟ್ಟಿದ ಕಟ್ಟಡಗಳೆ ? ಹಿಂದೆ 'ಪ್ರಭಾತ' ಕಾವ್ಯ ಆಗಿಹೋಯಿತು, ಇಂದು 'ಸಂಕ್ರಮಣ' ಕಾವ್ಯ ಬಂದಿದೆ. ಕಾವ್ಯಾನುಭವ ಮಂಟಪ, ಸಾಹಿತ್ಯ ಮಂಟಪಗಳ 'ನಾಡಹಬ್ಬ' ದ ಹಂದರಗಳ ಮರಿ. 'ವಾಗ್ಭೂಷಣ' ನುಂಗಿ ನಿಂತಿರುವ 'ವಿದ್ಯಾವರ್ಧಕ ಸಂಘ' ವು ಬರುವವರಿಗೆ ಹರವು ; ಹೋಗುವವರಿಗೆ ತೆರವು. ಇದು ಧಾರವಾಡ" ಎಂದು ಉತ್ತರ ಕರ್ನಾಟಕದ, ಏಕೆ ಇಡೀ ಅಖಂಡ ಕರ್ನಾಟಕದ ಸಾಂಸ್ಕೃತಿಕ ಕೇಂದ್ರವಾದ ಧಾರವಾಡದ ಬಗ್ಗೆ ಸ್ಮರಣಾರ್ಹ ಮಾತುಗಳನ್ನು ಬರೆದಿದ್ದಾರೆ. ಬೇಂದ್ರೆಯವರಷ್ಟೇ ಏಕೆ, ಧಾರವಾಡದ ಪ್ರಭಾವಲಯದಲ್ಲಿ ಬಂದ ಇನ್ನುಳಿದ ಯಾವುದೇ ಕನ್ನಡ ಕವಿಯಂತೆ ಕಣವಿಯವರೂ ಸಹ ಧಾರವಾಡದ ಪರಿಸರದಿಂದ ಸ್ಫೂರ್ತಿಗೊಂಡು ಕಾವ್ಯ ರಚಿಸಿದ್ದಾರೆ. ಭೌಗೋಲಿಕ, ಪ್ರಾಕೃತಿಕ, ಸಾಂಸ್ಕೃತಿಕ ಇರುವಿಕೆಯನ್ನು ಕೆಲವೊಮ್ಮೆ ಆನುಷಂಗಿಕವಾಗಿ, ಮತ್ತೊಮ್ಮೆ ನೇರವಾಗಿ ಧಾರವಾಡ ಇವರ ಕಾವ್ಯದಲ್ಲಿ ಇಣಿಕಿರುವದುಂಟು,

ಅತ್ತ ಬೆಳುವೊಲ, ಇತ್ತ ಮಲೆನಾಡ ಜರಿ ಸೆರಗು.
ಸುತ್ತು ಪರ್ವತ ನೀಲಿ. ಗುಡ್ಡ ಕೊಳ್ಳವ ಇಳಿದು-
ಏರಿ ಚಿಗುರಿದ ಹಸಿರು. ಕೆಲದಿ ಕನ್ನಡಿ ಹಿಡಿದು
ನಿಂತ ಕೆಲಗೇರಿ ಕೆರೆ. ಗೆರೆ ಕೊರೆದು ಬರುವ ಜುಗು-
ಜುಗು ರೈಲು. ತಗ್ಗು ದಿನ್ನೆಯನೇರಿ ಯಾವುದೋ
ಹಿಗ್ಗಿನಲಿ ನುಗ್ಗಿ ಬರುತಿವೆ ಬಸ್ಸು. ನಿತ್ಯದು-
ದ್ಯೋಗದಲಿ ಅತ್ತ ಹೊರಳಿದೆ ನಗರ.

" ವಿದ್ಯಾಭವನ'ದ ಗೋಪುರದಿಂದ " ಎನ್ನುವ ಕವಿತೆಯಲ್ಲಿ ವಿಶ್ವ ವಿದ್ಯಾಲಯದ ಗೋಪುರದಮೇಲೆ ನಿಂತು ಬೈನಾಕ್ಯುಲರ ಹಿಡಿದು " ಅಗೋ ಈ ಕಡೆ ಇದು, ಆಕಡೆ ಅದು " ಎಂದು ಧಾರವಾಡದ ವಿಹಂಗಮ ದರ್ಶನ ಮಾಡಿಸುತ್ತಾರೆ. ಅದರಂತೆ ; ತಾವು ಕಲಿತ ಕರ್ನಾಟಕ ಕಾಲೇಜಿನ ಅಟ್ಟದಮೇಲೆ ನಿಂತು ಸವಿದ ರಸ ನಿಮಿಷಗಳನ್ನು ಒಬ್ಬ ಉತ್ತಮ ಫೋಟೊಗ್ರಾಫರ ಪ್ರಕೃತಿಯ ಸೌಂದರ್ಯವನ್ನು ಅದರೆಲ್ಲ ಆಯಾಮಗಳಿಂದ ಹಿಡಿದಿಡುವಂತೆ ಕಣವಿಯವರು ಹಲವಾರು ಪದ್ಯಗಳಲ್ಲಿ ಚಿತ್ರಿಸಿದ್ದಾರೆ.

ಕಾಲೇಜಿನಟ್ಟದಲಿ ನಿಂತು ನಾಲ್ದೆಸೆಗಳಲಿ
ಸೃಷ್ಟಿರಮಣೀಯತೆಯ ಕಂಡಿರುವೆನು,
ಕ್ಷಿತಿಜದಂಚಿನ ಮಿಸುನಿ ರೇಖೆ-ವಿನ್ಯಾಸವನು
ಬೆಟ್ಟ-ಕಾನಿನ ಬೆಡಗ ಸೆರೆವಿಡಿದೆನು.

ವಾಯುವ್ಯದೆಡೆಯಿಂದ ಕಂದರದ ಮರೆಯಿಂದ
ತೂರಿಬಹ ರೈಲು ಕಾಳಾಹಿಯಂತೆ-
ಶಾಂತ ನಿದ್ರೆಯಲಿರುವ ಹಸುರು ಬಯಲಿಂದೊಮ್ಮೆ
ಸಿಳ್ಳು ಹೊಡೆವುದು ಮಾಯಕಾರನಂತೆ.

" ಪ್ರಕೃತಿಯ ಮಡಿಲಲ್ಲಿ " ಎನ್ನುವ ಕವಿತೆಯಲ್ಲಿಯೂ ಕೂಡ ಕರ್ನಾಟಕ ಕಾಲೇಜಿನ ಅಟ್ಟದಿಂದ ನಾಲ್ಕೂ ಹೊತ್ತಿನ ನೋಟವನ್ನು ಬಣ್ಣಿಸಿದ್ದಾರೆ. ಧಾರವಾಡದ ಕೀರ್ತಿಗೇ ಕಳಶಪ್ರಾಯವಾದ ವಿಶ್ವ ವಿದ್ಯಾಲಯದ ಮುಖ್ಯ ಕಟ್ಟಡವನ್ನು "ವಿದ್ಯಾಭವನ" ಎನ್ನುವ ಕವಿತೆಯಲ್ಲಿ ಕೇವಲ ಕಟ್ಟಡದ ಹೊರಮೈಯನ್ನಾಗಲಿ, ಅಲ್ಲಿ ಅದನ್ನು ಉಪಯೋಗಿಸಿದ ಭವ್ಯವಾದ ಕಲ್ಲು, ಅದನ್ನು ಕಟ್ಟಿದ ಶಿಲ್ಪಿಯ ಜಾಣ್ಮೆಯನ್ನು ವರ್ಣಿಸದೆ ಇಡೀ ನಾಡಿನ ಸಮಗ್ರ ಪರಂಪರೆಯನ್ನೇ ಸುಳಿಂವುಗೈಯುತ್ತಾರೆ.

ಧಾರವಾಡದ ಶ್ರಾವಣಮಾಸದ ಮಳೆ ಬೇಂದ್ರೆಯವರಂತೆ ಇವರಿಗೂ ಕಾವ್ಯ ಬರೆಸದೆ ಬಿಟ್ಟಿಲ್ಲ. ಹಾಗೆ ನೋಡಿದರೆ ಮಳೆಯ ಪ್ರಸ್ತಾಪ ಇವರ ಕಾವ್ಯದಲ್ಲಿ ಜಾಸ್ತಿ ಎಂದೇ ಹೇಳಬೇಕು.

'ನೆಲ-ಮುಗಿಲು' ಸಂಗ್ರಹದಲ್ಲಿ " ಧಾರವಾಡದಲ್ಲಿ ಮಳೆಗಾಲ" ಎನ್ನುವ ಒಂದು ಪ್ರತ್ಯೇಕ ಕವನವೇ ಇದೆ.

ಏನಿದೀ ಹನಿ ಹನಿಯ ತೆನೆ ತೆನೆ ತೆನೆ ಸಿವುಡು ಗಟ್ಟುತ ಒಗೆವುದು !
ಗುಡ್ಡ ಗುಡ್ಡಕೆ ಗೂಡು ಬಡಿಯುತ ಬೇರೆ ಸುಗ್ಗಿಯ ಬಗೆವುದು.
ಸೆಳ ಸೆಳಕು ಬೆಳೆ ಕೊಯಿದರೂ ಆ ಮೋಡದೊಕ್ಕಲು ತಂಗದು
ಬಾನ ಮೇಟಿಗೆ ಸೋನೆ ತೂರುತ ರಾಶಿ ಮಾಡದೆ ಹಿಂಗದು.

ಹೀಗೆ ಇಡೀ ಕವನದುದ್ದಕ್ಕೂ ಧಾರವಾಡದ ಮಳೆಗಾಲವನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತಾರೆ. ಒಬ್ಬ ಒಳ್ಳೆಯ ಲ್ಯಾಂಡಸ್ಕೇಪ ಚಿತ್ರಿಸುವ ಕಲಾಕಾರ ಈ ಕವಿತೆ ಓದಿಯೇ ಒಂದು ಸುಂದರ ಮಳೆಗಾಲದ ಚಿತ್ರ ಬಿಡಿಸಬಹುದು !

' ಪಕ್ಷಿತಟಾಕ ' ಎನ್ನುವ ಇನ್ನೊಂದು ಕವನದಲ್ಲಿ ವಿಶ್ವ ವಿದ್ಯಾಲಯದ ಎದುರಿಗೆ ರೇಲ್ವೆಹಳಿ ದಾಟಿದ ನಂತರ ಕಾಣಸಿಗುವ ಒಂದು ಹೊಂಡ ಇದೆ. ದಿನವೂ ತಮ್ಮ ಮನೆಯ (ಹಿಂದೆ ಇದ್ದ ವಿಶ್ವ ವಿದ್ಯಾಲಯದ ಕ್ವಾರ್ಟರ್ಸ್) ಹಿತ್ತಲ ಬಾಗಿಲಿಂದ ಆ ಹೊಂಡವನ್ನು ವೀಕ್ಷಿಸಿರಬಹುದು. ಅದನ್ನೂ ಹೇಗೆ ತಮ್ಮ ಕಾವ್ಯದ ವಸ್ತುವನ್ನಾಗಿ ತೆಗೆದುಕೊಂಡಿದ್ದಾರೆಂಬುದನ್ನು ನೋಡಬಹುದು :

ಮುಂಜಾವು-ಇಲ್ಲ-ಸಂಜೆ ಈ ಕೆರೆಯ ದೂರದಿ
ಕುಳಿತು ಕಣ್ಣೋಡಿಸುವೆ ; ದಂಡೆ ಗಿಡಗಂಟೆಗಳ
ದುಂಡುಕಟ್ಟಿನಲಿ ಕನ್ನಡಿಯಾಗಿ, ಮೋಡಗಳ
ನಭದ ಚಿತ್ತಾರವನು ಬಿಡಿಸಿ ತರೆ ಹತ್ತಿರದಿ-
ರಾಮಚಂದ್ರ ಬಿಂಬವ ಹಿಡಿದು ಆಳುವ ನಿಲ್ಲಿಸಿ-
ದಂತೆ ನನಗೂ ವಿರಾಮ. ರೈಲು ಕಂಬಿಯ ಜೋಡು-
ಗೆರೆ ; ಆಚೆ ಕೆಂಪು ಮೊಗವೆತ್ತಿರುವ ಕಾಲೇಜು.
ನೆನಪಿನ ಮೋಜು ; ಹೊಗೆಯಾಡುವಿಟ್ಟಂಗಿ ಭಟ್ಟಿ,
ಕೊಕ್ಕರೆ, ಕಪ್ಪೆ, ಮೀನು ; ಇರಬಹುದಲ್ಲೆ ಹಾವು.
ಜೋತಿರುವ ಗೀಜಗ ಗೂಡು ; ಒಂದೆರಡು ಗೋವು.
ತೆರೆಗೆ ಬಂದೆರಗಿ ಹಾರುವ ಹಕ್ಕಿ ನಾಲ್ಕಾರು-
ಇದಕು ಸಾಕಷ್ಟು ಪರಿವಾರ ; ಸನಿಹದಲಿ ಬೇವು
ಮಾವು. ಕೆರೆಯ ತುಂಬು ಬಾಳಿಗೆ ನೀರೆ ಜೀವಾಳ,
ಕೆಸರು-ಕ್ಲೇಶವ ಸಹಿಸಿ ತಿಳಿದಾಗ ಭಾವಮೇಳ.

ಕರ್ನಾಟಕ ವಿಶ್ವವಿದ್ಯಾಲಯದ ಎದುರಿಗೆ ನಿಂತು ಇಂದಿಗೂ ನೋಡುವವರಿಗೆ ಕಾಣುವ ಈ 'ಪಕ್ಷಿತಟಾಕ' ಹೇಗೆ ಕಾವ್ಯಮಯವಾಗಿ ಕೊನೆಯ ಎರಡು ಸಾಲಿನಲ್ಲಿ Sublimity ಪಡೆದಿದೆ ಎನ್ನುವದನ್ನು ಗಮನಿಸಬಹುದು.

'ಹಾಗು ಹೀಗೂ ನೀರ ತಪ್ಪಿದ ಮೀನು ತೊಳಲಿದಂತೆ' ಬಾಲ್ಯದಲ್ಲಿ ಧಾರವಾಡಕ್ಕೆ ಪಯಣಮಾಡಿದ ಕವಿ ಧಾರವಾಡದ ನೆಲ, ಜಲ, ಜನ, ಪ್ರಕೃತಿಯಿಂದ ಸ್ಫೂರ್ತಿಗೊಂಡು ಕನ್ನಡ ಕಾವ್ಯ ಪ್ರಪಂಚದಲ್ಲಿ ಎಂದೆಂದಿಗೂ ನಿಲ್ಲಬಹುದಾದ ಗಟ್ಟಿಕಾವ್ಯವನ್ನು ಕೊಟ್ಟಿರುವದು, ಇನ್ನೂ ಕಾವ್ಯೋದ್ಯೋಗದಲ್ಲಿ ಶ್ರದ್ಧೆಯಿಂದ, ಸಂಯಮ ಕಳೆದುಕೊಳ್ಳದೆ ನಿರತರಾಗಿರುವದು ತುಂಬ ಸಂತೋಷದ ವಿಷಯ. ಸ್ವತಃ ಕವಿ ಕಣವಿಯವರೇ ಧಾರವಾಡ ಪರಿಸರದ ಒಂದು ಅಂಗವಾಗಿರುವದರಿಂದ ಹಾಗೆ ನೋಡಿದರೆ, ಜ್ಯೂನಿಯರ ಕವಿಗಳಿಗೆ ಅವರೇ ಒಂದು ಕಾವ್ಯವಸ್ತು.

## ಕೀರ್ತಿನಾಥ ಕುರ್ತಕೋಟಿ

# ಕಣವಿಯವರ ಕಾವ್ಯದ ಎರಡು ದಡ

ಶ್ರೀ ಚೆನ್ನವೀರ ಕಣವಿಯವರ ಕೃತಿಗಳಲ್ಲಿ ಎರಡು ಬಗೆಯ ಕಾವ್ಯಜಾತಿಗಳು ಜೊತೆ ಜೊತೆಯಾಗಿಯೇ ಬೆಳೆದು ಬಂದಿರುವ ಸಂಗತಿ ಅವರ ಇತ್ತೀಚಿನ ಸಂಕಲನಗಳನ್ನೋದಿದಾಗ ಸ್ಪಷ್ಟವಾಗುತ್ತದೆ. ಕವಿಯ ವ್ಯಕ್ತಿತ್ವ ಬಹಿರ್ಮುಖವಾಗಿ ಬಾಹ್ಯ ಲೋಕದ ಘಟನೆಗಳಿಗೆ ಸ್ಪಂದಿಸಿದಾಗ ಹುಟ್ಟುವ ಕಾವ್ಯ ಒಂದು ಬಗೆಯದಾದರೆ ಕವಿಯ ಅಂತರಂಗದ ಬೆಳವಣಿಗೆಯನ್ನು ಪ್ರತಿಫಲಿಸುವ ಕಾವ್ಯ ಇನ್ನೊಂದು ಬಗೆಯದಾಗಿದೆ. ಮೊದಲ ಜಾತಿಯ ಕಾವ್ಯದಲ್ಲಿ ವಿಶೇಷವಾದ ಬೆಳವಣಿಗೆಯಿಲ್ಲ. ಅದು ಒಂದು ರೀತಿಯ ತಟಸ್ಥ ಕಾವ್ಯ. ಇಂಥ ಪ್ರಾಸಂಗಿಕ ಕಾವ್ಯಕ್ಕಾಗಿ ಒಂದು ವಿಶಿಷ್ಟ ಶೈಲಿಯನ್ನು, ವಿನಯವೇ ಸ್ಥಾಯಿಯಾಗಿಉಳ್ಳ ಒಂದುಭಾವ ಸಂದೋಹವನ್ನು, ಗುಣಗ್ರಾಹಕ ಪ್ರಜ್ಞೆಯನ್ನು ಕಣವಿಯವರ ಕಾವ್ಯ ಮೊದಲಿನಿಂದ ರೂಢಿಸಿಕೊಂಡು ಬಂದಿದೆ. 'ಎರಡು ದಡ' ಸಂಕಲನದಲ್ಲಿರುವ ಬೇಂದ್ರೆಯವರ ಮೇಲಿನ ಸುನೀತ ಈ ಬಗೆಯ ಕಾವ್ಯದ ಒಂದು ಶ್ರೇಷ್ಠ ಉದಾಹರಣೆಯಾಗಿದೆ. ಬೇಂದ್ರೆಯವರ ವ್ಯಕ್ತಿತ್ವವನ್ನು, ಅವರ ಕಾವ್ಯದ ಪ್ರಭಾವವನ್ನು, ಅಲ್ಲದೆ ಸಾಂಸ್ಕೃತಿಕ ಇತಿಹಾಸಕ್ಕೆ ಅವರು ಕೊಟ್ಟಿರುವನ್ನು, ಈ ಕವಿತೆಯ ಪ್ರತಿ ಶಬ್ದ ಸಾರ್ಥಕವಾಗಿ ಒಡಮೂಡಿಸುತ್ತದೆ. ಹಿಂದೆ ಮಾಸ್ತಿಯವರು ಬೇಂದ್ರೆಯವರ ಬಗ್ಗೆ ಬರೆದಿದ್ದ ಅಷ್ಟಪಟ್ಪದಿಯೊಂದಿಗೆ ಕಣವಿಯವರ ಕವಿತೆಯನ್ನು ಹೋಲಿಸಿದಾಗ ಕಣವಿಯವರ ಕಾವ್ಯದ ತೂಕ ಕಡಿಮೆಯದಲ್ಲವೆಂದು ತಟ್ಟನೆ ತಿಳಿಯುವಂತಿದೆ. ಬೇಂದ್ರೆ ಕುವೆಂಪು, ಮಾಸ್ತಿ ಮೊದಲಾದ ಹಿರಿಯ ಕವಿಗಳು ತಮ್ಮ ಸಮಕಾಲೀನ ಕವಿಗಳ ಬಗ್ಗೆ, ಅಲ್ಲದೆ ಹಿರಿಯ ವ್ಯಕ್ತಿಗಳ ಬಗ್ಗೆ ಇಂಥ ಕವಿತೆಗಳನ್ನು ಬರೆದು—ಬಹುಶಃ ನಮ್ಮಲ್ಲಿ ಹೆಚ್ಚು ಸುನೀತಗಳು ಇದಕ್ಕೇ ವಿನಿಯೋಗಿಸಲಾಗಿವೆ—ಇಂಥ ಕಾವ್ಯ ಜಾತಿಯನ್ನು ಸೃಷ್ಟಿಸಿದ್ದಾರೆ. ಕವಿಯ ಸ್ವಂತ ಅನುಭವಗಳ ಅಭಿವ್ಯಕ್ತಿಯಲ್ಲಿ ಕಾಣುವ ತೀವ್ರತೆ ಈ ಬಗೆಯ ಕಾವ್ಯದಲ್ಲಿ ಕಾಣುವುದಿಲ್ಲವಾದ್ದರಿಂದ ಹೊಸ ಕಾವ್ಯದ ಸ್ವರೂಪದ ದೃಷ್ಟಿಯಿಂದ ಪ್ರತಿಸ್ಪಂದನದಲ್ಲಿ ತಾರತಮ್ಯ ಹುಟ್ಟುವುದು ಸಹಜವಾಗಿದೆ. ವಿನಾಯಕರು 'ಬಾಳದೇಗುಲದಲ್ಲಿ' ಸಂಕಲನದಲ್ಲಿ ಈ ಬಗೆಯ ಕಾವ್ಯದಲ್ಲಿಯೇ ಹೆಚ್ಚಿನದನ್ನು ಸಾಧಿಸಿ ತೋರಿಸಿದರು. ಕವಿ ಕಲ್ಪಕ ಶಕ್ತಿಯ ಜೊತೆಗೆ ಶ್ರೇಷ್ಠ ದರ್ಜೆಯ ವಿಚಾರ ಶಕ್ತಿಯನ್ನೂ ಬೆಳೆಸಿಕೊಂಡಿದ್ದರೆ ಮಾತ್ರ ಇತಿಹಾಸದ ಸೂಕ್ಷ್ಮ ಚಿತ್ರಗತಿಯನ್ನು ಇಂಥ ಕಾವ್ಯದ ಮೂಲಕವಾಗಿ ಪ್ರಕಟಿಸಬಲ್ಲ. ಕನ್ನಡದಲ್ಲಿ ಇನ್ನೂ ಈ ಕ್ಷೇತ್ರದಲ್ಲಿ ಆಗಬೇಕಾದ ಕೆಲಸ ಬಹಳಷ್ಟಿದೆ.

ಕಣವಿಯವರ ಅಂತರ್ಮುಖವಾದ ಕಾವ್ಯ ಸಾಕಷ್ಟು ಬೆಳವಣಿಗೆಯನ್ನು ಪಡೆದಿದೆಯೆಂಬುದು ಈ ಸಂಕಲನಗಳಲ್ಲಿ ಕಾಣಿಸುತ್ತದೆ. ಇಲ್ಲಿಯೂ ಕಣವಿ-ಮಾದರಿಯ ಕವಿತೆ

ಗಳು ಸಾಕಷ್ಟಿವೆ. 'ಮಣ್ಣಿನ ವಾಸನೆ' (ಎರಡು ದಡ), 'ಮಂದಿ' (ಎರಡು ದಡ) 'ಮತ್ತೆ ಮಳೆ' (ನಗರದಲ್ಲಿ ನೆರಳು) ಇಂಥ ಕವಿತೆಗಳ ಸೌಂದರ್ಯಕ್ಕೆ ಕಣವಿಯವರ ವಿಶಿಷ್ಟವಾದ ಕಲೆಗಾರಿಕೆಯೇ ಕಾರಣವಾಗಿದೆ.

'ದಟ್ಟ ಕಾಡಿನ ನಟ್ಟ ನಡುವಣ ಗವಿಗೆ ಬ್ಯಾಟರಿ ಬಿಟ್ಟು
ಹಗಲು ಕಾಣದ ಬಾವಿಯಲ್ಲಿ ಮುಳುಗಿ, ಎಚ್ಚರದಪ್ಪಿ
ಬೆಳಗಿನಲಿ ಎದ್ದು ಬ್ಲೇಡಿಗೆ ಮುಖವನೊಡ್ಡಿ ಕನ್ನಡಿ ಹಿಡಿದು
ಇಸ್ತ್ರಿಬಟ್ಟೆಯತೊಟ್ಟು ಹೊರಡಬೇಕು.'

ನೆನೆನೆನೆದೂದುವ ಸಿಳ್ಳಿನ ಹೊಗೆಯುಗುಳುವ ಬಂಡಿ
ಈಚೆಗೆ ಉಗಿ ಹಾಯುವ ಬಿಸಿ ಬಿಸಿ ತಿಂಡಿ; ಅಬ್ಬಾ ಈ ಥಂಡಿ!
ಪಂಚಮಿ ಹಬ್ಬದ ಉಂಡಿ, ಜೊತೆಯಲಿ ತುಪ್ಪದ ಗಿಂಡಿ
ಶ್ರಾವಣ ಮುಗಿಯಲು ಚಿಗಿವುದು ಉದ್ದಾಗಿಹ
ಮುದ್ದಾಗಿಹ ಗಣಪತಿ ಸೊಂಡಿ.'

'ಇರುಳೆಲ್ಲ ಸಖೆ:
ಗಾಳಿಯಿರದಿದ್ದರೂ ಅಲ್ಲಾಡುತಿರುವ ನೌಕೆ;
ನಿದ್ದೆ-ಬಂದರು ದೂರ
ಕಣ್ಣು ಮಿಟುಕಿಸಿವೆ ಚಿಕ್ಕೆ.

ಈ ಕಾವ್ಯ ಪಂಕ್ತಿಗಳಲ್ಲಿ ಕಂಡುಬರುವ ಆಕರ್ಷಕತೆಗೆ ಮುಖ್ಯ ಕಾರಣವೆಂದರೆ ಅವುಗಳ ಕಲೆಗಾರಿಕೆ. ಸಾಮಾನ್ಯವಾದ ಅನುಭವಕ್ಕೆ ಅಭಿವ್ಯಕ್ತಿಯ ಕ್ರಮದಲ್ಲಿ ಶಬ್ದಗಳ ಕಸೂತಿ ಕೆಲಸದಿಂದ ಹೆಚ್ಚಿನ ಕಳೆ ತಾನಾಗಿ ಬರುತ್ತದೆ. ಶಬ್ದಯೋಜನೆಯಲ್ಲಿ ಮೌಲಿಕವಾದ ಮತ್ತು ವಿದೇಶೀ ಶಬ್ದಗಳ ಹಿತಮಿತವಾದ ಬೆರಕೆ, ಪ್ರಾಸ ಯೋಜನೆಯಲ್ಲಿ ಉಸಿರಾಟದ ಗತಿಯಂತೆ ಸಹಜವಾಗಿ ಬೆಳೆದು ಮಾಗಿಯುವ ಲಯ, ಚಿತ್ರರಚನೆಯಲ್ಲಿ ಅಮೂರ್ತತೆಯ ಸೋಂಕು ತಗಲಿದ ಮೂರ್ತತೆ—ಇವು ಎಂದಿನಿಂದಲೂ ಕಣವಿಯವರ ಕಲೆಗಾರಿಕೆಯ ವಿಶೇಷತೆಗಳಾಗಿವೆ. 'ನೆನೆನೆನೆದೂದುವ ಸಿಳ್ಳಿನ ಹೊಗೆಯುಗುಳುವ ಬಂಡಿ'ಗೂ 'ಈಚೆಗೆ ಉಗಿ ಹಾಯುವ ಬಿಸಿ ಬಿಸಿ ತಿಂಡಿ'ಗೂ ಇರುವ ಕಲಾತ್ಮಕ ಸಂಬಂಧ ಮಳೆಯ ತತ್ವದಿಂದ ಐಕ್ಯಗೊಂಡ ಹೊಸ ಲೋಕವೊಂದನ್ನು ಸೃಷ್ಟಿಸುವಷ್ಟು ಸಮರ್ಥವಾಗಿದೆ. ಆದರೆ ಅಲ್ಲಿಯೂ ಹೊಗೆ ಮತ್ತು ಉಗಿ ಇವುಗಳಲ್ಲಿಯ ದೃಶ್ಯ ಸಾಮ್ಯವನ್ನು ಕಣವಿಯವರ ವಾಸ್ತವ ಪ್ರಜ್ಞೆ ಮರೆಯಗೊಡುವುದಿಲ್ಲವೆಂಬ ಮಾತು ಮಹತ್ವದ್ದಾಗಿದೆ.

ಆದರೆ ಈ ಚಿತ್ರಗಳ ಸೊಗಸುಗಾರಿಕೆ ಕಣವಿಯವರ ಕಾವ್ಯದಲ್ಲಿ ಹೊಸದೇನೂ ಅಲ್ಲ. ನಿಸರ್ಗದ ಚೆಲುವು, ದೈನಂದಿನ ಜೀವನದ ಮೂಡಿ ಮಸುಳುವ ಚಿತ್ರಲೋಕ, ವಿಭೂತಿ ಪುರುಷರ ಜೀವನದ ವಿಸ್ಮಯ, ಅಲ್ಲಲ್ಲಿ ಅಷ್ಟಿಷ್ಟು ರಾಜಕೀಯದ ದುಷ್ಟತನ—ಇವು ಅವರ ಕಾವ್ಯಲೋಕದ ನಿತ್ಯ ವಸ್ತುಗಳಾಗಿವೆ. ವಾಸ್ತವ ಅನುಭವದ ಈ ಪಡಿಯಚ್ಚುಗಳಿಗೆ ಕವಿಯ ಕಲ್ಪಕ ಶಕ್ತಿ ಚಿತ್ರಕತೆಯನ್ನು ನಾದಮಯತೆಯನ್ನು ನೀಡಿರುವದರಿಂದ ಅದ ಕ್ಕೊಂದು ಮೆರುಗು ಬರುತ್ತದೆ. ಯಾವ ಅನುಭವವನ್ನೂ ಜೀವಂತವಾಗಿ ಮಾತಾಡಿಸುವ ಶಕ್ತಿ ಕಣವಿಯವರ ಕಾವ್ಯಕ್ಕಿದೆ. ಆದರೆ ಇದಕ್ಕೂ ಮುಂದೆ ಹೋಗಿ ಶಾಬ್ದಿಕ ಅನುಭವ

ವಾಸ್ತವ ಅನುಭವದಿಂದ ಪ್ರತ್ಯೇಕವಾಗಿಸುವ ಸಾಮರ್ಥ್ಯ ಕಣವಿಯವರ ಕಾವ್ಯಕ್ಕಿದೆಯೇ ಎಂಬ ಪ್ರಶ್ನೆಯೇಳುತ್ತದೆ. ಕಾವ್ಯ ನಿಯತಿಕೃತ ನಿಯಮರಹಿತವಾಗುವದೆಂದರೆ ಇದೇ ಎಂದು ತೋರುತ್ತದೆ. ಕವಿ ಅನುಭವದ ಈ ರೂಪಾಂತರಕ್ಕೆ ಅನೇಕ ಉಪಾಯಗಳನ್ನು ಯೋಜಿಸುತ್ತಾನೆ. ವರ್ಣನೆ, ಅಲಂಕಾರಿಕತೆ, ಚಿತ್ರವಿನ್ಯಾಸ, ನಾದಮಯತೆ, ಧ್ವನಿ— ಇವೆಲ್ಲ ಅಂಥ ಉಪಾಯಗಳೇ. ಆದರೆ ಮುಖ್ಯವಾಗಿರುವುದು ಅನುಭವ ಪುನಃ ಸೃಷ್ಟಿಯಾಗಲೇಬೇಕೆಂಬ ಆಂತರಿಕ ಒತ್ತಡ. ಅದಿಲ್ಲದಿದ್ದರೆ ಕಲೆ ಹೂಡುವ ಉಪಾಯಗಳೆಲ್ಲ ಕಾವ್ಯಕ್ಕೆ ಅನವಶ್ಯಕವಾದ ಹೊರೆಯಾಗಬಹುದು.

ಕಣವಿಯವರ ಇತ್ತೀಚಿನ ಸಂಕಲನಗಳಲ್ಲಿಯ ಕೆಲವು ಕವಿತೆಗಳು ಹೆಚ್ಚಿನ ಭರವಸೆಯನ್ನು ಹುಟ್ಟಿಸುತ್ತವೆ. 'ನಂಬಿಕೆ' ಮತ್ತು 'ಎರಡು ದಡ' ಈ ಎರಡು ಕವಿತೆಗಳಲ್ಲಿ ಕಣವಿಯವರ ಕಲೆಗಾರಿಕೆ ಮೂಲಭೂತವಾದ ಅನುಭವವನ್ನು ಕಾವ್ಯತತ್ವವನ್ನಾಗಿ ಮಾರ್ಪಡಿಸುವ ಸಾಮರ್ಥ್ಯವನ್ನು ಪಡೆದಿದೆ.

ನನ್ನ ನಂಬಿಕೆಯೊಂದು ಆಕಾಶ :
ನಿಜ, ಅದಕೆ ತಳಬುಡವಿಲ್ಲ. ನಾನೆಷ್ಟು ಬೆಳೆದರೂ
ನನಗೆ ನಿಲುಕುವದಿಲ್ಲ, ದೂರದಿಂದಲ್ಲದೆ ನಾನದನು
ಮುಟ್ಟಿ ಅನುಭವಿಸಿಲ್ಲ. ಮೇಲೆ ನೋಡದೆ ಸೆಟೆದುಕೊಂಡೇ
ನಡೆದರೂ ಅದು ಸದಾ ನನ್ನ ತಲೆಯ ಮೇಲೆ.
ಹಗಲು ಹೊತ್ತಿನಲಿ ಅದರೆಡೆಗೆ ಲಕ್ಷ್ಯವಿಲ್ಲ. ನಮ್ಮ ಬದುಕಿನಲಿ
ನಾವು ಮಗ್ನರಾದರೆ ಸಾಕು, ಅದಕೆ ಚಿಂತೆಯಿಲ್ಲ.
ರಾತ್ರಿ ವಿದ್ಯುದ್ದೀಪ ಕೈಕೊಟ್ಟು, ಮಿಣಿಮಿಣಿ ಮೇಣ
ಬತ್ತಿಯ ಹಚ್ಚಿ, ಅಂಜಿ ಆಕಳಿಸುತ್ತ ಕುಳಿತಾಗಲೂ
ಆಕಾಶದಲ್ಲಿ ಹೊಳೆವ ನಕ್ಷತ್ರಕ್ಕೆ ಲೆಕ್ಕವಿಲ್ಲ. (ನಂಬಿಕೆ)

ಎರಡು ದಡಗಳ ನಡುವೆ ಏಸು ಸಂಸಾರ ಮುಳು
ಗೆದ್ದು ಗಾಸಿಗೊಂಡಿವೆ ಈಸುಗುಂಬಳಕಾಯಿಗಾಸೆ ಪಟ್ಟು.
ನಿದ್ದೆ-ಎಚ್ಚರದ ನಡುವಣಚ್ಚರಿ ಬದುಕೆ? ಕೆದಕಿದರೆ
ಒಂದಿಷ್ಟು ರಕ್ತ ಮಾಂಸ; ಮೂಲದಲಿ ಮೂಳೆ; ನಿನ್ನೆಗೂ
ನಾಳೆಗೂ. ಯುಗಯುಗದಿಂದ ಬರೆದು ಗೀಚಿದ್ದೆಲ್ಲ
ಹಾಳೆ? ಜೋಗಿತಿಯಾದಳಂತೆ ಮುಪ್ಪಾದ ಸೂಳೆ.
.....................................
.....................................
.......................ಸ್ವಚ್ಛಂದ ಛಂದೋ ಬಂಧ
ಕ್ಷಿತಿಜದಂಚಿಗೆ ತನ್ನ ಉದ್ಬಾಹುಗಳ ಚಾಚಿ- ಒಡಲ
ತೆರೆದಿದೆ ಕಡಲ ಕುಡಿವೆನೆಂದು, ಹಿಡಿದು ಕಡೆವೆ—
ನೆಂದು, ತಳಸೋಸಿ ಮುತ್ತುಗಳ ಪಡೆವೆನೆಂದು.
(ಎರಡು ದಡ)

ಈ ಎರಡೂ ಕಾವ್ಯಭಾಗಗಳು ಕಲಾತ್ಮಕತೆಯ ದೃಷ್ಟಿಯಿಂದ ಒಂದಕ್ಕೊಂದು ವಿರುದ್ಧವಾಗಿವೆ. ಮೊದಲ ಕಾವ್ಯಭಾಗ ಗದ್ಯದ ಅರ್ಥವ್ಯಕ್ತಿಯನ್ನು ದಟ್ಟವಾಗಿ ಉಪಯೋಗಿಸುತ್ತ ಅನುಭವಕ್ಕೆ ಕಾವ್ಯದ ಆಕಾರವನ್ನು ಕೊಟ್ಟಿದೆ. ಅನುಭವ ಅಪೂರ್ವವಾಗಿದ್ದರೆ ಅದು ನಿರಾಭರಣವಾಗಿಯೇ ತನ್ನ ಚಲುವನ್ನು ಪ್ರದರ್ಶಿಸಬಲ್ಲದು. ಆಕಾರದ ರೂಪಕ ಆಕಾಶದಂತೆಯೇ ನಮ್ಮ ಅರಿವಿಗೆ ಹೊರೆಯಾಗುವುದಿಲ್ಲ. ಅದರ ಕಡೆಗೆ ಲಕ್ಷ್ಯವೀಯದಿದ್ದರೂ ಅದರ ಸೌಂದರ್ಯ ಕಡಿಮೆಯಾಗುವದಿಲ್ಲ. ಅಂದರೆ ಈ ಕಾವ್ಯದ ಮಟ್ಟಿಗೆ, ಶರಣರ ವಚನಗಳಲ್ಲಿಯಂತೆ, ವಾಸ್ತವ ಮತ್ತು ಅಲಂಕಾರಿಕಗಳ ನಡುವಿನ ಸೀಮರೇಖೆ ಅಳಿಸಿಹೋಗಿದೆ. ಅನುಭವದ ಖಚಿತತೆಯೇ ಕಾವ್ಯದ ಅರ್ಥವನ್ನೂ ಆಳವಾಗಿಸುತ್ತ, ಗೂಢವಾಗಿಸುತ್ತದೆ. ಎರಡನೆಯ ಕಾವ್ಯ ಭಾಗದಲ್ಲಿ ಮುಖ್ಯವಾಗಿರುವುದು ಅಲಂಕಾರಿಕತೆ, 'ನನ್ನ ನಂಬಿಕೆಯೊಂದು ಆಕಾಶ' ಎಂದು ಸ್ಪಷ್ಟವಾಗಿ ರೂಪಕವನ್ನು ಸ್ಥಾಪಿಸಿದ್ದರೂ ಅದು ಪರಿಚಿತವಾದ ಅನುಭವವೇ. ಆದರೆ ಎರಡನೆಯ ಕಾವ್ಯಭಾಗದಲ್ಲಿ ನೀರಿನ ರೂಪಕ ಆಚೆಯ ದಡವನ್ನು ಸೂಚಿಸುತ್ತದೆಯೇಹೊರತು ಬಿಚ್ಚಿ ತೋರುವುದಿಲ್ಲ. ಅಲಂಕಾರ ಮತ್ತು ಪ್ರಾಸಗಳ ಯೋಜನೆ ಅದಕ್ಕಾಗಿಯೇ ಸಾರ್ಥಕವಾಗಿದೆ. ಗೊತ್ತಿರದ ಅನುಭವ ಇಲ್ಲಿ ಅಲಂಕಾರವಾಗಿರುವದರಿಂದ ಅಲಂಕಾರಿಕತೆಗೆ ಅಷ್ಟೊಂದು ಮಹತ್ವ ಬರುತ್ತದೆ. ಆದರೆ ಎರಡೂ ಕಾವ್ಯಗಳಲ್ಲಿಯ ಸಾಮ್ಯವೆಂದರೆ ಶಬ್ದದಾಚೆಗೆ ಇರುವ ನಿಶ್ಶಬ್ದ ಅರ್ಥ ಸಂಚಯವನ್ನು ಹಿಡಿಯುವ ಬಯಕೆ. ಅಂತಲೇ ಕಾವ್ಯಸಿದ್ಧಿಗಿಂತ ಕಾವ್ಯ ಪ್ರಯತ್ನ ಇಲ್ಲಿ ಹೆಚ್ಚು ಮಹತ್ವದ್ದಾಗಿದೆ.

ಚನ್ನವೀರ ಕಣವಿಯವರ ಕಾವ್ಯೋದ್ಯೋಗ ಕಳೆದ ಮೂರು ದಶಕಗಳಿಂದ ಅವ್ಯಾಹತವಾಗಿ ಸಾಗಿ ಬಂದಿದೆ. ಅವರ ಕಾವ್ಯ ಶರೀರದಲ್ಲಿ ಮುಪ್ಪಿನ ಲಕ್ಷಣಗಳು ಕಾಣಿಸದಿದ್ದರೂ ಆಗಾಗ ಸ್ವಸಂತೋಷದ, ಆತ್ಮ ತೃಪ್ತಿಯ ಅವಸ್ಥೆಗಳು ಮಧ್ಯವಯಸ್ಸಿನ ಕುರುಹುಗಳಾಗಿ ಕಾಣುತ್ತವೆ. ಆದರೆ ಮೇಲೆ ವಿಶ್ಲೇಷಿಸಿದಂಥ ಕವಿತೆಗಳು ಅವರಲ್ಲಿ ಹೆಚ್ಚಿನದನ್ನು ಸಾಧಿಸುವ ಆದಮ್ಯವಾದ ಬಯಕೆಯನ್ನು ಸೂಚಿಸುತ್ತವೆ. ಇವು ಭರವಸೆ ನೀಡುವ ಪ್ರಯತ್ನಗಳು. ಅವರ ಕಾವ್ಯ ಇನ್ನೂ ಹೆಚ್ಚಾಗಿ ಬೆಳೆದು ಹೊಸ ಅನುಭವ ಕ್ಷೇತ್ರಗಳನ್ನು ವಶಪಡಿಸಲೆಂದು ಹಾರೈಸಿದರೆ ಅದು ವಿಫಲವಲ್ಲ.

ಕಾಳೇಗೌಡ ನಾಗವಾರ

# ಕಣವಿಯವರ ಕಾವ್ಯದಲ್ಲಿ ವಿಡಂಬನೆ

ಸಮನ್ವಯ ಮಾರ್ಗದ ಕವಿಗಳೆಂದು ಚನ್ನವೀರ ಕಣವಿ ಮತ್ತು ಶಿವರುದ್ರಪ್ಪನವರನ್ನು ಹೊಸಗನ್ನಡ ಕಾವ್ಯದ ಸಂದರ್ಭದಲ್ಲಿ ಗುರುತಿಸಲು ಅಪೇಕ್ಷಿಪಡುವವರೆಲ್ಲರೂ—ಪ್ರಧಾನವಾಗಿ ಈ ಇಬ್ಬರು ಕವಿಗಳ ಉತ್ಕಟವಾದ ಸಾಹಿತ್ಯ ನಿಷ್ಠೆಯ ಕಾರಣಕ್ಕಾಗಿ ಅವರ ಕಾವ್ಯಾಭಿವ್ಯಕ್ತಿಯ ಕ್ರಮದಲ್ಲಿ ಕೂಡಿಕೊಂಡ ನವೋದಯ ಹಾಗೂ ನವ್ಯಕಾವ್ಯ ಪಂಥಗಳಲ್ಲಿನ ಉತ್ತಮಾಂಶಗಳನ್ನು ಎತ್ತಿ ಹಿಡಿಯುವ ಸದುದ್ದೇಶವನ್ನು ಹೊಂದಿರುತ್ತಾರೆ. ಯಾವ ಅತಿರೇಕಗಳಿಗೂ ಎಡೆಗೊಡದೆ, ಕಾವ್ಯಬಂಧ ಮತ್ತು ಧೋರಣೆಗಳ ಗುಣದೋಷಗಳಿಗೂ ಎಚ್ಚರವಾಗಿದ್ದು ಈ ಕವಿಗಳಿಬ್ಬರು ನವೋದಯವು ತುಳಿಯುತ್ತಾ ನಡೆದ ಸಿದ್ಧ ಪದಪುಂಜಗಳ ಜಾಳುಜಾಳಿಕೆಗಾಗಲಿ, ಎಷ್ಟೋ ಸಲ ಜನದೂರವೆನಿಸಬಹುದಾದ ನವ್ಯದ ಕ್ಲಿಷ್ಟತೆಗಾಗಲಿ ಪಕ್ಕಾಗದೆ ತಂತಮ್ಮ ವೈಶಿಷ್ಟ್ಯಗಳನ್ನು ಕಾಯ್ದಿಟ್ಟುಕೊಂಡವರು. ಈ ಎಲ್ಲ ವೈಶಿಷ್ಟ್ಯಗಳ ಹಿನ್ನೆಲೆಯಲ್ಲಿ ಕಣವಿಯವರ ಕಾವ್ಯದಲ್ಲಿನ ವಿಡಂಬನೆಯನ್ನು ಕುರಿತು ವಿವೇಚಿಸುವುದು ಈ ಲೇಖನದ ಉದ್ದೇಶವಾಗಿದೆ.

ಕಣವಿಯವರ ಕಾವ್ಯದಲ್ಲಿ ವಿಡಂಬನೆಯು ಸಾಕಷ್ಟು ಹೆಚ್ಚಿನ ಪ್ರಮಾಣದಲ್ಲಿಯೇ ಕಂಡುಬರುತ್ತದೆ. ಒಬ್ಬ ಮುಖ್ಯ ಕವಿಯ ತಾತ್ವಿಕ ಚಿಂತನೆಯ ನಿಟ್ಟನ್ನು ಗುರುತಿಸುವಲ್ಲಿ ವಿಡಂಬನೆಯೂ ಕೂಡ ಪರಿಣಾಮಕಾರಿಯಾಗಿ ಹೇಗೆ ಕೆಲಸಮಾಡಬಲ್ಲದೆಂಬುದನ್ನು ನಾವು ಇಲ್ಲಿ ನೋಡಬಹುದಾಗಿದೆ. ತುಂಬು ಮಾನವೀಯ ಸೆಲೆಯುಳ್ಳ ಅಂತರಂಗವೊಂದು ತನ್ನ ಗುರಿಯ ಕಡೆಗೆ ಹೊರಟು ಅಲ್ಲಿನ ವಿವಿಧ ದನಿಗಳನ್ನು ಪತ್ತೆ ಹಚ್ಚುತ್ತಾ ಯಾವುದಕ್ಕೂ ಬೆನ್ನು ತಿರುಗಿಸದಿದ್ದಲ್ಲಿ ಎಷ್ಟೋ ಸಲ ತತ್ತರಿಸುವಿಕೆ, ಸೋಜಿಗ ಹಾಗೂ ವಿಷಾದಗಳಲ್ಲಿ ಮುಳುಗಬೇಕಾಗುತ್ತದೆ. ತುಳಿವವರಿಲ್ಲದ ದಾರಿ ಸಮೆಯದ ಸ್ಥಿತಿಯಲ್ಲಿ "ಹೇಳುವವರೇ ಎಲ್ಲ, ಕೇಳುವವರೇ ಇಲ್ಲ! ಹೇಳಿಕೇಳೀ ಬಾಳ ಏಕತಾರಿಯ ಪದವ। ಯಾರು ಕೇಳುತ್ತಾರೆ ಹೇಳಿರಣ್ಣ ?" ಅನ್ನುವ ನಿಟ್ಟುಸಿರು ಕವಿಯನ್ನು ಕಾಡುತ್ತದೆ. ಇನ್ನೂ ಬರೆಯದಿರುವ, ಬರೆಯಲಾಗದ ಕವಿತೆಯ ಅಗಾಧತೆಯೂ ಕವಿಯ ಮನಸ್ಸನ್ನು ಕೆಣಕುತ್ತದೆ. ಅಂಥ ಸಂದರ್ಭಗಳಲ್ಲಿ ಸುತ್ತಲಿನ ಸಂಗತಿಗಳ ಬಗ್ಗೆ ಕೆರಳುವಿಕೆಗಿಂತಲೂ ಸ್ವವಿಮರ್ಶೆ ಹಾಗೂ ನಿಸ್ಸಹಾಯಕತೆಯ ನಡುವೆ ಸ್ಪಷ್ಟವಾದ ದಾರಿಯ ಕಡೆಗೆ ಕವಿಯ ದೃಷ್ಟಿ ಹರಿಯುವುದನ್ನು ಕಾಣುತ್ತೇವೆ :

> ಉರಿಯಿರದ, ನೆಲದ ಸಾರವ ಹೀರಿ ಬಣ್ಣದೈಸಿರಿ ತಳೆದ
> ಪರಿಮಳದ ಹೂವ ಹಣತೆಯಲಿ ಬೆಳಗುವುವು
> ಲೌಕಿಕ ಜಿನಾಗಮಗಳೆರಡೂ (ಬರೆಯಲೊಲ್ಲದ ಕವಿತೆ)

ಈ ದಾರಿಯು ಸ್ಪಷ್ಟತೆಯಲ್ಲಿಯೂ ನಮ್ಮ ಮೈಮರೆವು, ಆಲಸ್ಯಗಳು ತುಂಬಾ ಭೀಕರವಾಗಿದ್ದು ನಗೆಯ ಹೂ ಅರಳಲು ಬಾಧಕವಾಗಿರುವ ಸ್ಥಿತಿಯನ್ನು ನಾವೇ ನಿರ್ಮಾಣಮಾಡಿಕೊಂಡಿರುವುದನ್ನು ಕುರಿತು ಕವಿ ನಿಸ್ಸಂಕೋಚವಾಗಿ ವಿವರಿಸುತ್ತಾರೆ. ತಪ್ಪು ದಾರಿಯ ನಮ್ಮ ವೈಭವ ಸಾಕಷ್ಟು ದೊಡ್ಡದಾಗಿಯೇ ಇರುವುದರಿಂದ ಆ ಬಗೆಯ ವಿವರಣೆ ಸಹಜವಾಗಿಯೇ ವಿಡಂಬನೆಯ ದಾರಿಯನ್ನು ಹಿಡಿಯುತ್ತದೆ :

ಹೊಸ ವರುಷವೇ ಬಾ, ಹಿಂಜರಿಯದಿರು
ನಿನಗು ಗೊತ್ತಿರಬೇಕು; ನಾವು ಸತ್ಕಾರ ಶೂರರು ಎಂದು.
ತತ್ಕಾಲದಲ್ಲಿ ಸಭೆಗೂಡಿ, ಕೊರಳಿಗೆ ಪುಷ್ಪ ಹಾರವ ಬಿಗಿದು
ಪುಕ್ಕಟೆಯಾಗಿ ಚಪ್ಪಾಳೆ ತಟ್ಟುವವರು.
ಪೇಟೆಯಲಿ ಸಿಗದ ಸಕ್ಕರೆಯನೆಲ್ಲ ಮಾತಿನಲಿ ತಂದು ಸುರಿವವರು
ಗಾಯದ ಮೇಲೆ ಅಹಿಂಸಕ ಜೇನು ತುಪ್ಪವ ಸವರಿದವರು.
ಬೆಳ್ಳಗಿನ ಬಟ್ಟೆ ತೊಟ್ಟ ಬೆಳ್ಳಕ್ಕರಿಗರು.
ಮನದ ಬೇವೆಲ್ಲ ಹರಿದು ನಾಲಗೆ ತುದಿಯ ಬೆಲ್ಲದಲಿ ಕೂಡಿ
ರಸಸಿದ್ಧಿ ಪಡೆದವರು.
ಸತ್ಯದ ಮಿಸುನಿ–ಮಿಂಚನು ಅಸತ್ಯದ ಖನಿಯ ತೋಡಿ ಹುಗಿದವರು.
(ಹೊಸ ವರುಷದ ಸ್ವಾಗತ ಭಾಷಣ)

ಇಂಥ ಸಂದರ್ಭದಲ್ಲಿಯೇ ಆದರ್ಶದ ದಾರಿಯನ್ನು ತುಳಿದ ಚೇತನಗಳ ನೆನಕೆಯೂ ಕಂಡು ಬಂದು ಆ ಕಡೆಗೆ ಹಾಯಲಾಗದವರ ಜಡತ್ವವನ್ನು ಚುಚ್ಚುವ ಕ್ರಿಯೆಯೂ ಅಲ್ಲಲ್ಲಿ ಇಣುಕುತ್ತದೆ. ಈ ಎರಡೂ ದಡಗಳ ನಡುವಣ ಅಂತರ ಹಾಗೂ ವ್ಯತ್ಯಾಸಗಳು ಸೂಕ್ಷ್ಮವಾಗಿ ಚಿತ್ರಿತವಾಗಿರುವ 'ಲಾಲಬಹಾದ್ದೂರ ಶಾಸ್ತ್ರಿ' ಮತ್ತು 'ಗಾಂಧಿ' ಕವನಗಳು ಈ ದೃಷ್ಟಿಯಿಂದ ತುಂಬ ಮುಖ್ಯವಾಗುತ್ತವೆ. ಇದರ ಜೊತೆಗೆ ನಗೆ ಮತ್ತು ವಿನೋದದ ರಸನಿಮಿಷಗಳಲ್ಲಿ ಮುಳುಗಿಸಿಕೊಳ್ಳುವ ಮಕ್ಕಳ ಆಟ ಪಾಟಗಳನ್ನು ಕುರಿತ ಕಣವಿಯವರ ಕವನಗಳು ತುಂಬಾ ಕುತೂಹಲಕರವಾದ ರೀತಿಯಲ್ಲಿವೆ. ಆನಂದದ ಕ್ಷಣಗಳಿಗೆ ಕಟ್ಟು ಹಾಕಲು ಹೆಣಗಿರುವ ಇಲ್ಲಿನ ಲವಲವಿಕೆಯ ಅಭಿವ್ಯಕ್ತಿಕ್ರಮಕ್ಕೆ ಉದ್ದಕ್ಕೂ ವಿಡಂಬನೆಯ ಧಾಟಿಯನ್ನು ಬಳಸಿಕೊಂಡಿರುವುದು ತೀರಾ ಅಪರೂಪವಾದುದು :

ಪದವಿಟ್ಟುದೇ ಭಂಗಿ
ನಡೆದದ್ದೆ ದಾರಿ,
ಕಣ್ಣು ತಪ್ಪಿದರಿವನು ವಿಶ್ವಸಂಚಾರಿ !
ಹಿಡಿದದ್ದೆ ಹಟ
ಇವನು ನುಡಿದದ್ದೆ ವೇದ,
ತಳಕಿತ್ತು ಓಡುವವು ಎಲ್ಲ ವಾಗ್ವಾದ.

ಎದ್ದನೋ—
ತೊತ್ತಳಂದುಳಿವ ಯಜ್ಞದ ಕುದುರೆ

ಬಿದ್ದನೋ—
ಇವಗಿಲ್ಲ ಅದರ ಪರಿವೆ.
ಎದ್ದೆದ್ದು ಬಿದ್ದು ಮುನ್ನುಗ್ಗಿ ನಡೆಯುವ ಹಿಗ್ಗು
ಸಾಹಸದ ದಂಡಯಾತ್ರೆ——

(ದೀಪಧಾರಿ)

೦ ೦ ೦

ಮೂರು ಸಲ ಒಪ್ಪಂದ, ನೂರು ಸಲ ಯುದ್ಧ
ಅವರಿವರ ಸಂಧಾನ ಮೊದಲೇ ನಿಷಿದ್ಧ!
ಪಡುವಣಕೆ ಸಂದ ರವಿ ಮೂಡಣದಿ ಎದ್ದ
ರಂಗಭೂಮಿಗೆ ಮತ್ತೆ ರಥ ಕುದುರೆ ಸಿದ್ಧ.

ಈ ಬಗೆಯ ಲವಲವಿಕೆಯನ್ನು ಅವರ ಇತರ ಮುಖ್ಯ ಕವನಗಳಲ್ಲಿಯೂ ನಾವು ಕಾಣಬಹುದು. ಆಡುನುಡಿಯ ಹಲವಾರು ಧಾಟಿಗಳನ್ನು ಲೀಲಾಜಾಲವಾಗಿ ಪ್ರಯೋಗಿಸುತ್ತಾ ಕವನದ ವಸ್ತು ಮತ್ತು ಅದರಿಂದ ಹೊರಡುವ ವಿಚಾರಗಳಿಗೆ ತಕ್ಕಂತೆ ಅವನ್ನು ಕವಿ ಬಗ್ಗಿಸಿಕೊಳ್ಳುವುದರಲ್ಲಿ ಯಶಸ್ವಿಯಾಗಿದ್ದಾರೆ. ಎಂದೂ ಎಲ್ಲೂ ನಿಲ್ಲದ, ಕೈಗೆ ಸಿಕ್ಕದ ಕಾಲ ನಮ್ಮನ್ನೆಲ್ಲಾ ಅಣಕಿಸುತ್ತಾ, ನಮ್ಮೆಲ್ಲ ಸಾಧನೆಗಳನ್ನೂ ಬೆಲೆಗಟ್ಟುತ್ತಾ, ನಮ್ಮ ನಿರರ್ಥಕ ಪ್ರಯತ್ನಗಳ ಕಡೆಗೆ ಸದಾ ಗಮನ ಸೆಳೆಯಲು ಹಾತೊರೆಯುತ್ತಿರುವುದನ್ನು ಕುರಿತ ಚಿತ್ರಣ ಆ ಸಮಸ್ಯೆಯ ವಿವಿಧ ಮಗ್ಗಲುಗಳ ಕಡೆಗೆ ಗಮನ ಸೆಳೆಯುತ್ತದೆ. ಕಿಂಚಿತ್ತೂದಯೆಯಿಲ್ಲದ ಆ ನಿರ್ದಯಿ, ಉಗ್ರವಾದ ಸತ್ಯವಾದಿಯೂ ಆಗಿರುವುದರಿಂದ ಕವಿ ಮೆಚ್ಚುಗೆಯ ಮಾತುಗಳ ಮೂಲಕವೇ "ನಮ್ಮೆದೆಯಲ್ಲಿ ತುಡಿವ ತಬಲವಾಗಿದ್ದಾನೆ ಹಿಡಿಯಿರೋ ಅವನ" ಎಂದು ಗದರಿಸುತ್ತಾ ಮುನ್ನುಗ್ಗುವಲ್ಲಿ ವ್ಯೈತಳೆದಿರುವ ಸ್ವವಿಡಂಬನೆ ಚೇತೋಹಾರಿಯಾಗಿದೆ. ಹಾಗೆಯೇ ಕಾಲರಾಯನ ವಿರುದ್ಧದ ಸೆಣಸಾಟದಲ್ಲಿನ ಪರಾಜಯದಲ್ಲಿ ದಣಿದ ಕ್ರೀಡಾಪಟುವಿನ ಮನೋಭಾವವನ್ನು ಕಾಣುತ್ತೇವೆ :

ಗಡಿಯಾರದಲ್ಲವನ ಹಿಡಿದು ಗಾಣವಾಡಿಸಲು
ಹೆಣಗಿದ್ದೇವೆ :
ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿದು
ಒದೆಸಿಕೊಂಡಿದ್ದೇವೆ.
ತುಡಿವೆದೆಗೆ ಕಿವಿಗೊಟ್ಟು, ಮಿಡಿವ ನಾಡಿಯ
ಹಿಡಿದು ನೋಡಿದ್ದೇವೆ :
ಒಳ-ಹೊರಗೆ ಉಸಿರು ಆಡುತ್ತಿದೆ ನಿರಾಯಾಸ.

ಕಾಲ ನಿಲ್ಲುವುದಿಲ್ಲ)

೦ ೦ ೦

ಕಣವಿಯವರ ಕವನಗಳಲ್ಲಿ ಸಂಪೂರ್ಣ ವಿಡಂಬನೆಯನ್ನೇ ಕಾಣಲು ಸಾಧ್ಯವಾಗುವ ಅವರ ಕವನಗಳು: 'ಅಪರಾವತಾರ', 'ಲಾಗ', 'ಜಗದೇಕಮಲ್ಲ', 'ಕೃತಾರ್ಥ', 'ಮನುಷ್ಯ

ಪ್ರಾಣಿ'—ಇತ್ಯಾದಿ. ಇವುಗಳಲ್ಲಿ ಕೆಲವಂತೂ ಶ್ರೇಷ್ಠ ಮಟ್ಟದ ವಿಡಂಬನೆಯ ಮಾದರಿಗಳಾಗಿವೆ. ಸಾಮಾಜಿಕ ವಿಸಂಗತಿಗಳಿಗೆಲ್ಲಾ ಮನುಷ್ಯನ ಲೆಕ್ಕಾಚಾರಪೂರ್ವಕವಾದ, ತನ್ನ ಕೆಲಸವಷ್ಟೇ ಹೇಗಾದರೂ ಗೆಲ್ಲಬೇಕೆನ್ನುವ ಆತುರದ ಯೋಜನೆಗಳೇ ಕಾರಣವಾಗಿರುವುದನ್ನು ವಿವರಿಸುವ ವಿಷಾದದ ಹಿನ್ನೆಲೆಯಲ್ಲಿ ಆತ ಮನುಷ್ಯತ್ವಕ್ಕೆ ಎಲ್ಲ ವಿಧಗಳಲ್ಲೂ ದೂರವಾಗುತ್ತಿರುವುದನ್ನು ಕವಿ ಇಲ್ಲೆಲ್ಲಾ ಚಿತ್ರಿಸಿದ್ದಾರೆ. "ಪ್ರಾಣಿ ಸಂಗ್ರಹಾಲಯದೊಳಗೆ। ತಿರುಗಿ ಸ್ಥಾನವಿಲ್ಲದ್ದಕ್ಕೆ ಮರುಗಿ, ಉಳಿದಿದ್ದಾನೆ ಹೊರಗೆ." ಎಲ್ಲ ಸಂತ್ತು ಬಳಸುಗಳೂ ತಮ್ಮ ಏಣಿಯ ಮೆಟ್ಟಿಲುಗಳಾಗಿಯೇ ಪರಿವರ್ತನೆಗೊಳ್ಳುವಂತೆ ನೋಡಿಕೊಳ್ಳುವ ಹಲವರ ಜಾಣ್ಮೆಗಾಗಿ ಅಚ್ಚರಿಗೊಳ್ಳುತ್ತಾರೆ ('ಕೃತಾರ್ಥ'). ಹಾಗೆಯೇ ಆ ಬಗೆಗಿನ ಜಾಣ್ಮೆಯ ಇನ್ನಿತರ ಮುಖಗಳ ಚಿತ್ರಣವೂ ಇಲ್ಲಿ ಸೊಗಸಾಗಿ ಮೂಡಿಬಂದಿದೆ.

"ಕೊಬ್ಬರಿಯ ಜೊತೆಗದರ ಕರಟವನ್ನೂ" ಬಿಡದೆ ತಿನ್ನುವ ಯಾವ ನಾಗರಿಕ ಮೌಲ್ಯಗಳೂ ಇಲ್ಲದ, ಎಲ್ಲೆಲ್ಲೂ ಗೆಲ್ಲುವ ಆಧುನಿಕ ಮಂತ್ರವಾದಿಯೂ, ಶಾಂತ ಹಾಗೂ ಗಂಭೀರ ಮುಖ ಮುದ್ರೆಯ ಆಷಾಢಭೂತಿಯೊಬ್ಬನ ವಿವರಣೆ, 'ಅಪರಾವತಾರ' ಕವನದಲ್ಲಿದೆ. ಅವನ ಗುಣವರ್ಣನೆಗಾಗಿಯೇ ಇಡೀ ಕವನ ಮೀಸಲಾಗಿದೆ.

ಬುದ್ಧನೊಬ್ಬನು ಬೇರೆ ಆಗಿ ಹೋಗಿದ್ದ
ಇಲ್ಲದಿದ್ದರೆ ಅವನೆ ಇಂದಿಗೂ ಮುಂದಿಗೂ ಜಗದೆಲ್ಲ ಮಂದಿಗೂ
ಸುಪ್ರಸಿದ್ಧ.........
ಆಕಾಶದಲ್ಲೆ ಯಾವ ದೇವರಿಗೊ ಪ್ರದಕ್ಷಿಣೆ ಹಾಕುತಿದ್ದವನು
ಕೆಳಗೆ ಸರ್ರನೆ ಇಳಿದು ಕೋಳಿಮರಿಗಳ ಮೇಲೆ
ಬಂದೆರಗಿದ.
ಪೂರ್ವಜನ್ಮದ ಸುಕೃತ
ಈ ಮಹೋದಯ ಕೃಪಾಕಟಾಕ್ಷಕ್ಕೆ ನಾಬಿದ್ದೆ ಅಪ್ರಬುದ್ಧ.

ಈತ ಯಾವಾಗಲೂ ಇತರರಿಗೆ ಹೇಗೆ ಮಂಕುಬೂದಿ ಎರಚಬೇಕೆನ್ನುವ ಧ್ಯಾನ–ತಲ್ಲೀನನಾಗಿದ್ದು, ನೈತಿಕಭಯದ ಪರಿಶುದ್ಧರ ಮತ್ತು ಮುಗ್ಧರ ಮೇಲೆ ಆಗಾಗ್ಗೆ ಕೆಸರು ಚೆಲ್ಲುತ್ತಾ ಸಾಗುವ ಮೋಡಿಯಲ್ಲಿ ಆ ಬಗೆಯ ಕೊಂಡಿ ಮಂಚಣ್ಣ ಮತ್ತು ಶಕುನಿಯನ್ನು ನಾಚಿಸುವ ಮಟ್ಟದಲ್ಲಿರುವುದನ್ನು ಕಂಡ ಕವಿ 'ಆತ್ಮೀಯ'ವಾದ ಧಾಟಿಯಲ್ಲೇ ಪರಿಚಯಿಸುತ್ತಾರೆ; ಆ 'ದಿವ್ಯದರ್ಶನ'ದ ಪರಿಚಯದಿಂದ ತಾವು ಆಯಾಸಗೊಂಡ ಬಗೆಯೂ ಅಲ್ಲಿ ಮರೆಯದಂತೆ ದಾಖಲಾಗಿದೆ:

ಕಂಡಿರಾ ನೀವಿವನ, ಪರಮ ಸ್ನೇಹಿತನ?
ಸ್ನೇಹಕೆಂದೇ ಮೂರ್ತಿ ಮತ್ತಾಗಿ ಈ ಇಳೆಗೆ ಅವತರಿಸಿದವನ?
ಮೊನ್ನೆ ಮೊನ್ನೆಯೆ ಅಯಿತೆನಗೆ ತಾನಾಗಿಯೇ
ಇವನೊಡಲ ಬ್ರಹ್ಮಾಂಡದ ಮಹಾದ್ಭುತ ವಿಶ್ವರೂಪದ ದರ್ಶನ
ಸಿಡಿಲೆರಗಿದಂತಾಯ್ತು, ನಡುಗಿ ಹೋಯಿತು ನನ್ನ ಅತ್ಯಲ್ಪ ಚೇತನ.

ಈ ಮೇಲಿನ ವಸ್ತುವೇ 'ಲಾಗ' ಕವನದಲ್ಲಿ ಇನ್ನೂ ವ್ಯಾಪಕವೂ, ಧ್ವನಿಪೂರ್ಣವೂ ಆಗಿ ವಿಡಂಬನೆಗೆಳಾಗಾಗಿದೆ. ತನ್ನ ಗುರಿಯ ಈಡೇರಿಕೆಗಾಗಿ ಎಲ್ಲಕುಟಿಲೋಪಾಯಗಳನ್ನೂ ಬಳಸುವ ಮಂಗನ ರೂಪಕದೊಡನೆ ಕವನ ಬೆಳೆಯುತ್ತಾ ಹೋಗುತ್ತದೆ. ಕೋತಿಯ ಆಟ, ನಟನೆಗಳನ್ನು ಲಯಬದ್ಧ ಸಾಲುಗಳಲ್ಲಿ ಹೊಂದಿಸಿ ವರ್ಣಿಸಿರುವುದರ ಜೊತೆಯಲ್ಲಿಯೇ ಆ ಬಗ್ಗೆ ಕಂಡು ಕೇಳಿದ ಜನಜನಿತ ಕಥೆಗಳ ವಿವರಗಳನ್ನು ಕಳೆಗಟ್ಟುವಂತೆ ಬಳಸಿಕೊಳ್ಳಲಾಗಿದೆ;

ನೀ ಕೊಟ್ಟ ಹಣ್ಣಿ ರುಚಿ, ಹೃದಯಿವಿನ್ನೆಷ್ಟು ಸವಿ!
ಕಡಲ ತಳದಲಿ ಮೊಸಳೆ ತೆರೆದ ಬಾಯಿ-
ಮರದಲ್ಲಿ ಹೃದಯವನು ಬಿಟ್ಟ ಸೋಜಿಗವ ನುಡಿ
ಬದುಕಿಕೊಳ್ಳಲು ಇದೇ ತಕ್ಕದಾರಿ.

ಬೆಕ್ಕು-ಬೆಣ್ಣೆಯ ಜಗಳದಲ್ಲಿ ತಕ್ಕಡಿ ತೂಗಿ
ನ್ಯಾಯದಾನವ ಗೈದ ನಿನ್ನ ಬುದ್ಧಿ—
ರಾಜಕಾರಣಿಗಳನು ತಲೆದೂಗಿಸಿಹುದಿಲ್ಲಿ
ನಿನಗಿಂತ ಅವರಿಗೇ ಹೆಚ್ಚು ಸಿದ್ಧಿ.

ಇದೇ ಮಾದರಿಯ "ಜಗದೇಕಮಲ್ಲ" ಕವನವೂ ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ್ದಾಗಿದೆ. ಲೋಕೋದ್ಧಾರಕನ ಸೋಗಿನಲ್ಲಿಯೇ ತನ್ನ ಯೋಜನೆಗಳನ್ನು ಯಶಸ್ವಿಯಾಗಿ ಪೂರೈಸಿಕೊಳ್ಳುವ ವ್ಯಕ್ತಿತ್ವದ ಇನ್ನಷ್ಟು ಮುಖಗಳ ಅನಾವರಣವನ್ನು ಇಲ್ಲಿ ನಾವು ಕಾಣುತ್ತೇವೆ. ಎಲ್ಲ ಬಲ್ಲವನಂತೆ ವೇಷ ಹಾಕುವ ಈತ ಯಾವುದಕ್ಕೂ ಹಿಂಜರಿಯುವ ಮಾತೇ ಇಲ್ಲ;

ದಿನದ ಇಪ್ಪತ್ನಾಲ್ಕು ತಾಸು ಪಿರಿ ಪಿರಿ ತಿರುಗಿ
ದೇಶದುದ್ಧಾರಕ್ಕೆ ದೇಹವನು ತೇಯಬಲ್ಲ ;
ಮಂದಿ ಹೊಲಗಳ ನುಗ್ಗಿ ಮೇಯಬಲ್ಲ.
ಇವನಿಲ್ಲದೆಯೇ ಯಾವ ಸಭೆ ಸಮಾರಂಭಕ್ಕು
ಶೋಭೆಯಿಲ್ಲ.
ಇಲ್ಲ, ಪುರುಸೊತ್ತಿಲ್ಲ,
ಪಂಚೇತಿಯಿಂದ ಆ ವಿಧಾನಸೌಧದವರೆಗು
ಬಲೆ ಬೀಸಿ, ಬಕನಂತೆ ಕಾಯಬಲ್ಲ.

ಕವನ ಮುಂದುವರಿದಂತೆ ಕೊನೆಯ ಸಾಲುಗಳಲ್ಲಿ ಈತನನ್ನು ಹೊರಗಟ್ಟಬೇಕೆನ್ನುವ ಕಡುಸಿಟ್ಟನ್ನು ಕೂಡಸಾಕಷ್ಟು ವಿನೋದಪೂರ್ಣವಾಗಿಯೇ ಕವಿ ಪ್ರಕಟಿಸುತ್ತಾರೆ; ಎಲ್ಲ ಪಟ್ಟುಗಳಿಗೂ ನುಣುಚಿಕೊಳ್ಳುವವನು ಹೇಗೂ ಇಂಥ ಯಾವ ಬಡಪೆಟ್ಟಿಗೂ ಸುಲಭವಾಗಿ ದಕ್ಕುವವನಲ್ಲ ಅನ್ನುವ ವಾಸ್ತವಿಕ ಎಚ್ಚರವೂ ಅಲ್ಲಿ ಅಡಕವಾಗಿದೆ. ಈ ವ್ಯರ್ಥ ಪ್ರಯತ್ನದ ಬೆನ್ನಿನಲ್ಲಿಯೇ ಈ ವಿಷಪೂರಿತ ಸಂಗತಿಗಳ ಅರಿವಿನ ಜೊತೆಗೇ ಯಾವಾಗಲೂ

ಕೂಡ ಮುಂದಿನ ಹೊಸದಾರಿ ತೆರೆಯಬೇಕಾಗುತ್ತದೆನ್ನುವ ಆಶಯ ಇಲ್ಲಿ ಇದ್ದೇ ಇದೆ. ಅಷ್ಟರ ಮಟ್ಟಿಗೆ ಕವಿಯೊಬ್ಬನ ಕೆಲಸ ಇಲ್ಲಿ ಆತನ ಪ್ರಮುಖ ಶೋಧನೆಯ ಗಟ್ಟಿ ಹಂದರ ವನ್ನು ಸ್ಪಷ್ಟಪಡಿಸಿಕೊಳ್ಳುವುದೇ ಆಗಿರುತ್ತದೆ. ಈ ಅರ್ಥದಲ್ಲಿ ಇದೆಲ್ಲಾ ಅದಕ್ಕೆ ಪೂರಕ ವಾದ ಕೆಲಸ. ತುಂಬು ಕರಾಳತೆಯ ನಡುವೆ ಸಾತ್ವಿಕವಾದದ್ದಕ್ಕೆ ಯಾವ ಬೆಲೆಯೂ ಇಲ್ಲವಲ್ಲ ಅನ್ನುವ ಆಳವಾದ ನೋವು ಮತ್ತು ಸಿಟ್ಟು ಇಲ್ಲಿ ಪದೇಪದೇ ಹಲವಾರು ಬಗೆಯಲ್ಲಿ ಪ್ರಕಟವಾಗುತ್ತಲೇ ಬಂದಿದೆ, ಹಾಗೆಯೇ ಇಲ್ಲಿನ ವಿಡಂಬನೆ ಕವಿಯ ಒಟ್ಟು ತಾತ್ವಿಕ ನೆಲೆಯನ್ನು ಅರ್ಥೈಸಿಕೊಳ್ಳುವ ದಾರಿಯ ಒಂದು ಅನಿವಾರ್ಯ ಪ್ರಕಾರವೂ ಆಗಿರುವುದು ಈ ಸಂದರ್ಭದಲ್ಲಿನ ಹೆಚ್ಚಳವಾಗಿದೆ.

ಅಲ್ಲಮಪ್ರಭು ಬೆಟ್ಟದೂರು

# ಕಣವಿಯವರ ಕಾವ್ಯದಲ್ಲಿ ಸಮಕಾಲೀನ ಪ್ರಜ್ಞೆ

ಚೆನ್ನವೀರ ಕಣವಿಯವರ ಕವಿಗಣ್ಣು ತೆರೆದದ್ದು ಕಾವ್ಯಾಕ್ಷಿಯ ಮುಖಾಂತರ. ಆಗ ಹೆಚ್ಚು ಕಡಿಮೆ ರೋಮ್ಯಾಂಟಿಕ್ ಮನೋಧರ್ಮದವರ ಪೊಗರಿಳಿದು ಪ್ರಗತಿಶೀಲರ ಪೊಗರೇರುತ್ತಿದ್ದ ಕಾಲ. ಆದರೂ ಕಾವ್ಯದಲ್ಲಿ ಇನ್ನೂ ಗುಂಗುಂಗಾನಕ್ಕೆ ಬೆಲೆ ಇದ್ದೇ ಇತ್ತು. ಆಗ ಕಣವಿಯವರು ಹೂ, ಕಾಯಿ ಹಣ್ಣುಗಳನ್ನು ಕುರಿತು ಹಾಡಿದರೂ ಸ್ವಾತಂತ್ರ್ಯ ಹೋರಾಟಗಾರರ ಬಗ್ಗೆ, ಅಂದಿನ ನೇತಾ ಆಗಿದ್ದ ತಾತನ ಬಗ್ಗೆ—ಆತನ ಸಮಕಾಲೀನರ ಬಗ್ಗೆ ಹಾಡದೇ ಇರಲಿಲ್ಲ. ಸ್ವಾತಂತ್ರ್ಯ ಬಂದ ನಂತರ ಬಡತನ ಮತ್ತು ಜನರ ಮೌಢ್ಯತೆಯು ವಿಚಾರವಂತರ ಮನ ಕಲಕಿದ್ದುಂಟು. ಆಗ ಕಣವಿಯವರು ಹಾಡಿದ್ದು ಹೀಗೆ......

ಬಾಳಿನ ಬೀಳಿದು ಕೂಳಿನ ಗೋಳಿದು
ಸಾವಿನ ಸಂತೆಯು ನೆರೆಯುತಿದೆ ;
ವೇದ ಪುರಾಣದ ವಾದಕೆ ಸಿಲುಕದ
ವೇದನೆಯೊಂದಿದು ಕೊರೆಯುತಿದೆ.

ತನ್ನ ಸಮಕಾಲೀನ ಜನರ ನೋವು ಕವಿಗೆ ಅರ್ಥವಾಗಿರುವದಲ್ಲದೆ, ಸಮಸ್ಯೆಯನ್ನು ತುಂಬಿ ಕೊಂಡ ಮನ ಪರಂಪರೆಯನ್ನು ಮೆಟ್ಟಿ ನಿಲ್ಲಲೂ ಸಿದ್ಧವಾಗುತ್ತಿದೆಯೆಂಬುದನ್ನು ನೋಡ ಬಹುದು.

ಸ್ವಾತಂತ್ರ್ಯಾನಂತರದ ಕವಿಗಳಲ್ಲಿ ಸಹಜವಾಗಿ ದೇಶಪ್ರೇಮದ ಗುಣ ಎದ್ದುಕಾಣು ತ್ತಿತ್ತು. ಕಣವಿಯವರ ಕವಿತೆಗಳಲ್ಲಿ ದೇಶಪ್ರೇಮದ ಜೊತೆಗೆ ನಾಡಪ್ರೇಮವನ್ನೂ ಕಾಣ ಬಹುದು. ಇವರ ಮೊದಮೊದಲಿನ ಗೀತಗಳು ಕೇವಲ ಭಾವನಾತ್ಮಕವಾಗಿರದೆ ವೈಚಾರಿ ಕತೆಯ, ಸಮಕಾಲೀನತೆಯ ಮೆರಗನ್ನೂ ಪಡೆದಿವೆ.

ಕೆರವು ಹೊಲಿಯುವ ದೀನದಲಿತ ಮಾದರ ದುರುಗ
'ಮುಟ್ಟಬೇಡಿರಿ ತಂದೆ' ಎಂಬ ನುಡಿಗೆ
ನನ್ನೆದೆಯ ಕಸವಿಸಿಯ ಹೇಳತೀರದು ಆಗ
ಬಾಲಕರಿಗೆಲ್ಲಿಯದು ಮಡಿ ಮೈಲಿಗೆ ?

ನಾಡಿನಲ್ಲಿ ಅಸ್ಪೃಶ್ಯತೆ ಇದ್ದದ್ದು, ಜೊತೆಗೆ ಪ್ರಗತಿಪರರು ಅಂಥಭಾವನೆಗಳಿಂದ ದೂರ ಸರಿಯುತ್ತಿದ್ದುದು ಗೋಚರಿಸಿದರೂ, 'ನನ್ನೆದೆಯ ಕಸಿವಿಸಿಯು ಹೇಳತೀರದು' ಎನ್ನುವಲ್ಲಿ ಅಸ್ಪೃಶ್ಯತೆ ಉಳಿಯುತ್ತಿರುವುದರ ಸೂಚನೆ ಇದೆ. ಹಳ್ಳಿಗರಲ್ಲಿರುವ ದೇವತೆಗಳ ಬಗೆಗಿನ

ಭೀತಿ, ಧರ್ಮದಿಂದುದ್ಭವಿಸಿದ ಮೌಢ್ಯತೆ 'ಭಾವಜೀವಿ' ಯಂಥ ಕವನ ಸಂಕಲನದಲ್ಲಿ ಗೋಚರಿಸಿದೆ.

'ಆಕಾಶ ಬುಟ್ಟಿ'ಯಲ್ಲಿ ಕವಿ ಆದರ್ಶ ರಾಜ್ಯದ ಕನಸನ್ನು ಕಾಣುತ್ತಲಿದ್ದಾನೆ. ಸಮಕಾಲೀನ ಬದುಕಿನ ಕೊಳೆಯೆಲ್ಲ ತೊಳೆದು ಹೊಸ ಬಾಳು ಬರಲಿ ಎನ್ನುವ ಹಾರೈಕೆಯನ್ನು ನೋಡಬಹುದು.

ಹೊಸ ಜಗವು ರೂಪುಗೊಂಡಿಹುದೀಗ, ಹೊಸಬಾಳು
ನಮ್ಮದಿದೆ, ಹೊಸತೆಲ್ಲ ನಮ್ಮದಿನ್ನು:
ಹಳೆಯ ಕಾಲದ ರೂಢಿ— ಜಡ ಮತೀಯರನೆಲ್ಲ
ಬಿಟ್ಟು ಬಿಡಿ ಅವರವರ ಪಾಡಿಗಿನ್ನು.

ಎಂದಿನಿಂದಲೊ ನಿಮ್ಮ ಎದೆಗಳಲಿ ಹುದುಗಿಹುದು
ಹೊಸ ಸಮಾಜದ ರೂಪು ರೇಖೆ ಬಯಕೆ
ನಿಮ್ಮ ಹೊಂಗನಸುಗಳ ಕಂಡರಿಸಲೆಂದೀಗ
ಹದಗಾಲ ಬಂದಿರಲು ಮುದುರಲೇಕೆ ?

ಸಮಕಾಲೀನ ಪ್ರಜ್ಞೆ ಮತ್ತು ಯುಗಪ್ರಜ್ಞೆಯಿರುವಂಥ ಕವಿ ತನ್ನ ನಾಡಿನ ಜನರನ್ನು ಎಂಥ ಹಾದಿಯಲ್ಲಿ ಮುನ್ನಡೆಸಬೇಕೆಂಬುದನ್ನು ಕಂಡುಕೊಂಡಿರುತ್ತಾನೆ.

ಬಡವ ಬಲ್ಲಿದರೆಂಬ, ಜಾತಿಗೀತಿಗಳೆಂಬ
ವಿಷಮತೆಯ ನಂಟೇಕೆ ಹೊಸಬಾಳಿಗೆ ?
ಹೆಣ್ಣೆಂದು ಹೀಗಳೆವ ಕುನ್ನಿತನವಿನ್ನೇಕೆ ?
ಕಸವೇಕೆ ನಳನಳಿಪ ಹುಲುಸು ಬೆಳೆಗೆ ?

ಜಾತಿಗೀತಿಗಳು ನಮ್ಮ ಬದುಕೆಂಬ ಹಸನಾದ ಹೊಲದಲ್ಲಿ ಕಳೆ–ಹುಲ್ಲಾಗಿವೆ. ವಿಚಾರವಿಲ್ಲದ ಆಚಾರಕ್ಕೆ ಅರ್ಥವೇ ಇಲ್ಲ. ಇಂಥ ಆಚಾರದ ಮೌಢ್ಯತೆಯು ಜಿಡ್ಡು ನಮ್ಮ ಜನಮನಕ್ಕೆ ಮೆತ್ತಿದೆ. ಅದು ಹೀಗಿದೆ.........

ಮಡಿಯ ಮಾಡಿ ಉಡುವೆನೆಂದು
ಬೊಗಸೆ ನೀರು ಸುರುವಿ ಕೊಳಕು
ಪಂಚೆ ತೊಳೆದ ಮಾತ್ರಕೆ
ಅಚ್ಚ ಹಸನುಗೊಳಿಸದಿರಲು
ಮಡಿಯಾಯಿತೆ ಪೂಜೆಗೆ?

ಮನುಷ್ಯ ಮನುಷ್ಯನನ್ನು ತುಳಿಯುವುದು ಅತ್ಯಂತ ಹೇಯಕರವಾದ ವಿಚಾರ. ಸಮಕಾಲೀನ ಬದುಕಿನಲ್ಲಿ ಅಂತಹ ದೃಶ್ಯ ಕಂಡ ಕವಿ ಮರುಗುತ್ತಾನೆ. ಅಲ್ಲದೆ ಸಂಸ್ಕೃತಿಗೆ ಕಲಂಕ ಹತ್ತುತ್ತದೆಂಬುದನ್ನು ಹೇಳುತ್ತಾನೆ.

ಅರರೆ, ನರಜೀವಿ ನರನನಿರಿಯುವುದೊಳ್ಳಿತೆ?
ಜಾತಿಮತ ಪಂಥಗಳ ಕೊಳಚೆಯಲಿ ಕಚ್ಚಾಡಿ
ಸೋದರತೆ ಮಾನವತೆ ದಾನವತೆಯುಂ ಕೂಡಿ
ಪಾಳ್ಗೈದುದೇನಿದುವೆ ಸುಸಂಸ್ಕೃತಿಯ ಘನತೆ?

ಮತ ಮೌಢ್ಯತೆ, ಅಜ್ಞಾನ, ಗೊಡ್ಡಾಚಾರಗಳು ಬದುಕಿನಲ್ಲಿ ಎಬ್ಬಿಸುವ ಗೊಂದಲ ಒಂದು ಕಡೆಯಾದರೆ ನಗರ ಜೀವನದ ನರಕ ಒಂದು ಕಡೆ.

ಬಿಡುವಿಲ್ಲ ಅರ್ಜಂಟು! ಟಾರು ಬೀದಿಯ ತುಡಿತ
ಕಾರು ಮೋಟಾರು ಸೈಕಲ್ಲು ಟಾಂಗಾಟ್ರಕ್ಕು
ಉಸಿರು ಕಟ್ಟುವ ತೆರದಿ ಬಟ್ಟೆಯಲಿ ಹಾಸು-ಹೊಕ್ಕು

ನಮಗೆ ಸಮಯದ ಪ್ರಜ್ಞೆ ಇಲ್ಲ. ಅಸ್ತವ್ಯಸ್ತತೆ ಬದುಕಿನ ಒಂದು ಅನಿವಾರ್ಯ ಅಂಗ ಎಂಬ ಹಾಗೆ ನಮ್ಮಲ್ಲಿ ಬೆಳೆದುಬಿಟ್ಟಿದೆ. ಜೊತೆಗೆ ನಿಷ್ಠೆಯಿಲ್ಲದ ಕಾರ್ಯವೂ ಭ್ರಷ್ಟಾಚಾರವೂ ಜೊತೆಗೂಡಿವೆ.

ವರ್ಷಗಟ್ಟಲೆ ರಿಪೇರಿ ನಡೆಯುತ್ತಿರುವ ರಾಜ ಮಾರ್ಗ.
ಗಂಟೆಯಾಯಿತು, ಈಗ ಹೊರಟದ್ದು ನಿನ್ನೆಯ ರೈಲು
ಇಂದಿನದು ನಾಳೆ ಎಷ್ಟೊತ್ತಿಗೋ
ದಾರಿಯಲ್ಲಿ ಬರುವ ಸೇತುವೆಯೆಲ್ಲ ಭದ್ರವೋ?
ಭದ್ರಂ ಶುಭಂ ಮಂಗಲಂ

ಸಾಹೇಬರಿಗೆ ಕೊಡೆ ಹಿಡಿಯುವ ಪ್ರವೃತ್ತಿ ನಮ್ಮಲ್ಲಿ ಬಹಳ. ನೇರ ನಡೆ ನುಡಿ ಅಪರಿಚಿತ. ನಾಲಿಗೆ ಕಚ್ಚಿ, ಕೈಕಟ್ಟಿ, ಚಮಚಾಗಿರಿ ಮಾಡಿ ಹಲ್ಲು ಕಿರಿದರೆ ಅನೇಕ ತರದ ಲಾಭ ಲಭ್ಯ. ಮೇಲಿನವರು ಹೇಳಿದಂತೆ ಲಾಗ ಹಾಕಿದರೆ ಸಾಕು ಏನನ್ನಾದರೂ ದಕ್ಕಿಸಿಕೊಳ್ಳಬಹುದು; ಆತ್ಮಾಭಿಮಾನವೊಂದನ್ನುಳಿದು. ಇಂಥ ರೀತಿ ಆಧುನಿಕರಲ್ಲಿ ಬಹಳ.

ಲಾಗ ಹೊಡಿಯಲೋ ಮಂಗ, ಲಾಗಹೊಡಿಯಲೋಮಂಗ
ಬಗ್ಗಿ ದಣಿಯರ ಮುಂದೆ ಲಾಗ ಹೊಡಿಯೋ
ಲಾಗ ಹೊಡೆದರೆ ಬೇರೆ ತ್ಯಾಗ ಬೇಡ
ಹಾಕು ಅಂತರ್ಲಾಗ, ಹಾಕು ಜಂತರ್ಲಾಗ
ಡೋಲು ಬಡಿಸುವದಕ್ಕೆ ಮರೆಯಬೇಡ.

ಕಾಲ ಬದಲಾಗುವದೆಂದರೆ ಗಡಿಯಾರದಲ್ಲಿ ಸಮಯ ಹೊರಳುವದಲ್ಲ. ಬುಶ್ ಕೋಟು, ಪ್ಯಾಂಟುಗಳು, ನಡಿಗೆ ಬದಲಾಗುವದಲ್ಲ. 'ಮುಖ್ಯ ಬೇಕಾದದ್ದು ಜೀವಂತಗತಿ ಹೊಸ ನೆತ್ತರಿನ ಕೊಡುಗೆ,' ಬರುವ ಪ್ರತಿ ವರ್ಷವೂ ಸಮಸ್ಯೆಗಳ ಜೊತೆಗೆ ಹೊಸ ಸಮಸ್ಯೆಗಳನ್ನು ತರುತ್ತದೆ. ಅದರ ಜೊತೆಗೆ ಈಗಾಗಲೇ ನಾವು ಒಪ್ಪಿಕೊಂಡ ಕೆಲವು ಸಮಸ್ಯೆಗಳಿವೆ.

ದಿನವೂ ನಮಗೆ ಶಿವರಾತ್ರಿ
ಪ್ರತಿಯೊಂದು ಹಗಲಿರುಳ ಸಂಧಿಕಾಲವೂ ನಮಗೆ ಸಂಕ್ರಾಂತಿ
ಸರ್ವಧರ್ಮ ಸಹಿಷ್ಣುತೆಯ ಜಗಜ್ಜಾಹೀರುಗೊಳಿಸಿ
ಜಾತಿಕೂಪಕೆ ಮತ್ತೆ ಜಾರಿಕೊಂಡವರು;
ಗಾಳಿ ಬೀಸಿದ ಹಾಗೆ ತೂರಿಕೊಂಡವರು.

ಭಾರತೀಯರಲ್ಲಿ ಹಬ್ಬ ಹರಿ ದಿನಗಳಿಗೇನು ಕಡಿಮೆಯಿಲ್ಲ. ಸಮಕಾಲೀನ ಬದುಕಿನ ಕನ್ನಡಿಯಲ್ಲಿ ಇಂಥ ಹಬ್ಬಗಳನ್ನು ಹಿಡಿದುನೋಡಿದಾಗ ಅವುಗಳ ವಿಕಾರ ಮುಖ ಕಾಣಿಸು ತ್ತವೆ, ಸಮಕಾಲೀನ ಬದುಕಿನ ಅನರ್ಥತೆಯಿಂದ.

ಹೊಲ, ಗದ್ದೆ, ಗಿರಣಿ, ಕಚೇರಿ, ಕಾರ್ಖಾನೆಯಲಿ ಬೆವರು ಸುರಿಸಿ
ಸಂಪು, ಹರತಾಳ, ಕೊಲೆ, ಸುಲಿಗೆ, ಅಪಘಾತ ರಕ್ತ ಕುಂಕುಮವಿರಿಸಿ
ವಿಧಾನಸಭೆಯ ವಿಧಿಯಿರದ ಗೋಂದಲದೊಳಗೆ ಸಿಕ್ಕುಪಾರಾಗಿ
ಪಕ್ಷಾಂತರಕ್ಕೆ ಮನಸೋಲದೆ ತನ್ನ ಹಾದಿಯ ತಾನು ಹಿಡಿದು
ಕಲ್ಲಿನೇಟಿಗೆ ಎಲ್ಲ ವಿದ್ಯುದ್ದೀಪ ಒಡೆದು ಚೂರಾಗಿರಲು
ಹಣತೆಗಳ ಹುಡು ಹುಡುಕಿಕೊಂಡು ಬಂತು ದೀಪಾವಳಿ.

ನಮ್ಮ ಯೋಜನೆಗಳು ಜನರಿಂದ ಯೋಜನ–ಯೋಜನ ದೂರದಲ್ಲಿವೆ. ಜನರ ಕೈಗಳಿಗೆ ಕೆಲಸಕೊಡದೆ ಜನರೇ ಕಡಿಮೆ ಆಗುವಂಥ ಯೋಜನೆ ಕೈಕೊಂಡಿದ್ದೇವೆ. ಇದರಲ್ಲಿ ಅಸ ಮರ್ಥತೆ ಗೋಚರಿಸಿದೆ.

ನಮ್ಮ ಯೋಜನೆಗಳೆಲ್ಲ ಸ್ವಲ್ಪ ನಿಧಾನ ಯೋಚನೆ ಮಾಡುವದಂತೂ
ಅದಕ್ಕೂ ನಿಧಾನ. ಗಡ್ಡಕ್ಕೆ ಬೆಂಕಿ ಹತ್ತಿದ ಮೇಲೆ
ಬಾವಿ ತೋಡುವಜನ

ಅದಕ್ಕೆ ಇಂದು ಎಲ್ಲಿ ನೋಡಿದರೂ ಕಣ್ಣು ತಿವಿಯುತ್ತಿದೆ ಕೆಂಪುತ್ರಿಕೋನ.

ಈ ದೇಶದಲ್ಲಿ ಹೇಳುವವರು ಕೇಳುವವರು ಯಾರು ಇಲ್ಲವೇನೋ ? ಯಾಕೆಂದರೆ ಪ್ರತಿಯೊಬ್ಬರಿಗೂ ವೈಯಕ್ತಿಕ ಪ್ರತಿಷ್ಠೆ ಬಹು ಮುಖ್ಯ. ವ್ಯಕ್ತಿಯ ಭ್ರಷ್ಟಾಚಾರಕ್ಕೆ ಕಡಿವಾಣವೇ ಇಲ್ಲ.

ಮೇಜು ಗುದ್ದುತ್ತಾರೆ, ಮೈಕು ಮುರಿಯುತ್ತಾರೆ
ಮಾಲೆ ಬೇಡುತ್ತಾರೆ, ಮೋಜು ಮಾಡುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ

o o o

ಘಂಡು ಎತ್ತುತ್ತಾರೆ, ಎತ್ತಿಹಾಕುತ್ತಾರೆ
ಬಂಡು ಹೂಡುತ್ತಾರೆ, ಬೆಂಡು ಸುಲಿಯುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ

ಯಾರು ಹೇಳುವವರು ಕೇಳುವವರು ಇಲ್ಲದ ದೇಶದಲ್ಲಿ ನಾಡ ಪ್ರೇಮದ ಹೆಸರಿ ನಲ್ಲಿ, ಭಾಷೆಯ ಹೆಸರಿನಲ್ಲಿ ಏನಾದರೂ ಮಾಡುತ್ತಾರೆ. ಗಡಿಯ ಹೆಸರಿನಲ್ಲಿ ನಾಡಿನ ತುಂಬಾ ಗಡಿಬಿಡಿ. ಬಾಳ ಠಾಕರೆಯಂಥ ಠಕ್ಕರು ಕಂಡದ್ದನ್ನು ಲೂಟಿಮಾಡಿಸುತ್ತಾರೆ, ಅಷ್ಟೇಕೆ ಇಂಥವರು ದೇಶದ ಭಾವೈಕ್ಯತೆಯನ್ನೇ ಲೂಟಿ ಮಾಡಿಸುತ್ತಾರೆ. ಪೊಳ್ಳು ನಾಡಪ್ರೇಮ ವನ್ನು, ಭಾವೋದ್ವೇಗವನ್ನು ತುಂಬುತ್ತಾರೆ. ಗಡಿ ಮೀರಿ ವರ್ತಿಸುವವರ ಭಾನಗಡಿ ಇಲ್ಲಿದೆ—

ವಾರೆವ್ಹಾ, ಗಡಿ-
ಮೀರಿ ವರ್ತಿಸುವ ವಾ—ನರಸೇನೆ
ಹೆಂಡ ಕುಡಿಸಿ ಕುಂಡಿಗೆ ಚೇಳು ಕಡಿಸಿ
ದೂಡಿದ ಮುಖಂಡ ಬಾಳಠಕ್ಕ— ಅರೆ
ಹೊಕ್ಕು ನೆರೆಮನೆ —ತೋಟ ಹೋಟಲು
ಕೊಳ್ಳಿ, ಲೂಟಿ, ಲಂಕಾದಹನ
(ಸೀತೆ—ಮಂಡೋದರಿಗು ವಸ್ತ್ರಾಪಹರಣ)

ಪಾಕಿಸ್ತಾನ, ಬಂಗ್ಲಾ, ಚೀನಾ ಯುದ್ಧವಾದಾಗ ಕವಿ ಸಹಜವಾಗಿ ಹಾಡಿದ್ದಾನೆ. ಅಲ್ಲಿ ವಿಶೇಷತೆ ಇಲ್ಲ; ಸಮಕಾಲೀನ ಪ್ರಜ್ಞೆಯೊಂದನ್ನೂ ಬಿಟ್ಟರೆ.

ಲಾಲ್ ಬಹದ್ದೂರ್ ಶಾಸ್ತ್ರಿ ಕುರಿತ ಹಾಡು ಮಾತ್ರ ಭಿನ್ನವಾಗಿದೆ. ಶಾಸ್ತ್ರಿಯ ವರು ನಮ್ಮ ಮಧ್ಯೆ ಇದ್ದರೆಂಬುದೇ ಆಶ್ಚರ್ಯದ ವಿಚಾರ. ಪ್ರಧಾನಿಯಾಗಿಯೂ ಬಡವ ರಾಗಿದ್ದರು; ಪ್ರಾಮಾಣಿಕತೆಯಲ್ಲಿ ಶ್ರೀಮಂತರಾಗಿದ್ದರು. ಜನರ ಕಷ್ಟಗಳ ಬಗ್ಗೆ ಅವರಿಗೆ ಲಕ್ಷವಿತ್ತೇ ಹೊರತು ಉಳಿದ ರಾಜಕಾರಣಿಗಳ ಹಾಗೆ, ತನಗೆ ಬಂಗ್ಲೆಬೇಕು, ಅದು ಬೇಕು, ಇದು ಬೇಕೆಂದು ಆಸೆಪಟ್ಟವರಲ್ಲ. ಭ್ರಷ್ಟ ರಾಜಕಾರಣಿಗಳ ಮಧ್ಯೆ ಶಾಸ್ತ್ರಿಯನ್ನು ನಿಲ್ಲಿಸಿ ಹೇಳುವ ಮಾತುಗಳು ಅರ್ಥಪೂರ್ಣ,

ಹೆಂಡತಿ ಮಕ್ಕಳಿಗೆ ಆಸ್ತಿ ಸಂಪಾದಿಸದ
ಮನೆಯಿರದ ಪ್ರಧಾನಿ: ಇವನೆಂಥ ಭಾರತೀಯ?
ಬಂದದ್ದು ಹಂಚಿಯ ಮಾಡಿ ರಾಟಿ ತಿರುಗಿಸಿದ.

ಶಾಸ್ತ್ರಿಯವರ ಪ್ರಾಮಾಣಿಕತೆ, ಸಚ್ಚಾರಿತ್ರ್ಯದ ಬಗ್ಗೆ ಹೇಳುವಾಗಲೇ ಸಮ ಕಾಲೀನ ರಾಜಕಾರಣಿಗಳ ಅಪ್ರಮಾಣಿಕತೆ, ಚಾರಿತ್ರ್ಯಹೀನತೆ ಕಣ್ಣಿಗೆ ಕಟ್ಟುತ್ತವೆ. ಈಕವಿತೆ ವ್ಯಕ್ತಿಯ ಹೊಗಳಿಕೆಗೆ ಸೀಮಿತಗೊಳ್ಳದೆ ತನ್ನ ಕಾಲದ ಅವಗುಣಗಳನ್ನು ಎತ್ತಿ ಹಿಡಿಯುವಲ್ಲಿ ಸಂಕೀರ್ಣವಲ್ಲ. ಈ ಕವಿತೆ ಸರಳ ಮಾತುಗಳ ಮುತ್ತಿನಿಂದ ಎದ್ದು ಕಾಣುತ್ತದೆ.

ತಮ್ಮ ಕಾಲದ ವ್ಯಕ್ತಿಗಳಾದ ಶಿ. ಶಿ. ಬಸವನಾಳ್. ಉತ್ತಂಗಿ, ಬೇಂದ್ರೆ, ಹಳಕಟ್ಟಿ, ಬಿಸಮಿಲ್ಲಾಖಾನ, ದ. ಬಾ. ಕು, ತೀ. ನಂ ಶ್ರೀ. ಮಧುರ ಚೆನ್ನ, ಗೋವಿಂದಪೈ ವಿಶ್ವೇಶ್ವರಯ್ಯ ಪಾವಟೆ ಮುಂತಾದ ವ್ಯಕ್ತಿಗಳ ಬಗೆಗಿನ ಹಾಡುಗಳು ಸಮಕಾಲೀನ ಸಂಸ್ಕೃತಿ ಸಜ್ಜನಿಕೆಯನ್ನು ಕಟ್ಟಿಕೊಂಡು ಪ್ರಾಮಾಣಿಕವಾಗಿ ಮೂಡಿವೆ.

ಕಣವಿಯವರು 'ನಗರದಲ್ಲಿನೆರಳಿನ' 'ಮೃತ್ಯು ಘೋಷಣೆ' ಎಂಬ ಕವಿತೆಯಲ್ಲಿ ನ್ಯಾಯಾಧೀಶನಂತೆ ತೂಕ ಬದ್ಧವಾಗಿ ಮಾತನಾಡಿದ್ದಾರೆ. ಜೊತೆಗೆ ಕಾವ್ಯದುದ್ದಕ್ಕೂ ನಿರ್ಭಿಡೆ ಪ್ರವೃತಿ, ಚುಚ್ಚುವ ವ್ಯಂಗ್ಯ ಮನ ತಟ್ಟುತ್ತದೆ. ಕಣವಿಯವರ ಕಾವ್ಯ ಸರಿಯಾದ ಪಾಕಕ್ಕೆ ಬರುತ್ತಿದೆ ಎಂಬುದಕ್ಕೆ ಈ ಕವಿತೆ ಉದಾಹರಣೆಯಾಗಿ ನಿಲ್ಲುತ್ತದೆ.

ನವೋದಯ ಕಾವ್ಯ ಎಂದೋ ಸತ್ತು ಹೋಗಿದೆ
ಈಗಾಗಲೇ ಇದು ನಿಮಗೆ ಗೊತ್ತಿದೆ.
ನವ್ಯಕಾವ್ಯ
ಅದಂತೂ ಈಗ ಸಂಪೂರ್ಣ ಸತ್ತು ನಾರುತ್ತಿದೆ.

o o o

ಸತ್ತ ಕಾವ್ಯವನ್ನು ಹೊತ್ತು ಕುಣಿಯುವ ತೊತ್ತುಗಳೇ
ಬೋಳೆ ವಿಮರ್ಶಕರೇ
ಲೋಳೆ ಕವಿಗಳೇ
ಸಟ್ಪಾನಪುಂಸಕರೇ
ಎಚ್ಚರಿಕೆ.

ಕಣವಿಯವರು ಅಂದಂದಿನ ಮಹತ್ವದ ಘಟನೆಗಳನ್ನು ಅಂದಂದಿನ ಮಹತ್ವದ ವ್ಯಕ್ತಿಗಳನ್ನೂ ಕುರಿತು ಬರೆದಿದ್ದಾರೆ. ತುರ್ತು ಪರಿಸ್ಥಿತಿಯ ಬಗ್ಗೆಯೂ ಅವರು ಮೂರು ನಾಲ್ಕು ಕವಿತೆಗಳನ್ನು ಬರೆದಿದ್ದಾರೆ. ಅಧಿಕಾರಕ್ಕೆ ಸಿಕ್ಕು ತತ್ತರಿಸಿದ ಜನದ ಸ್ವಾತಂತ್ರ್ಯ ಹರಣ ಕುರಿತು ನೇರ ನುಡಿಗಳಲ್ಲಿ ಅಭಿವ್ಯಕ್ತಿಸಿದ್ದಾರೆ.

ಚಂದ್ರಶೇಖರ ಪಾಟೀಲ

# ಕಣವಿಯವರ ನಾಲ್ಕು ಕವನಗಳು : ಒಂದು ಟಿಪ್ಪಣಿ

ತುರ್ತು ಪರಿಸ್ಥಿತಿಯ ಅವಧಿಯಲ್ಲಿ ಚೆನ್ನವೀರ ಕಣವಿಯವರು ಬರೆದು, ಬೇರೆ ಬೇರೆ ಪತ್ರಿಕೆಗಳಲ್ಲಿ ಪ್ರಕಟಿಸಿದ ಕವನಗಳು ನಾಲ್ಕು : 'ಒಣ ನಿಗ್ಗರ', 'ಇಳಿದ ಬೆಲೆ,' ಒಂದು ವ(೦) ಚನ' 'ಆದರೂ ಅವನ ನೆನಪು.' (ಇವು ಸಂಕ್ರಮಣ ಪ್ರಕಾಶನದ 'ಜೂನ 75 ಮಾರ್ಚ 77' ಹಾಗೂ 'ಗಾಂಧಿ ಗಾಂಧಿ' ಸಂಕಲನದಲ್ಲಿ ಸೇರಿವೆ.) ಕಣವಿಯವರ ಮನೋಧರ್ಮ ಮತ್ತು ಬದುಕಿನ ಮಿತಿಗಳ ಹಾಗೂ ಅವರ ಅಭಿವ್ಯಕ್ತಿ ಕ್ರಮದ ಹಿನ್ನೆಲೆಯಲ್ಲಿ ಈ ಕವನಗಳ ಅಧ್ಯಯನ ಮಾಡುವುದು ಸಮಂಜಸ.

ನವಂಬರ 75ರ 'ತಾಯಿನುಡಿ' ಪತ್ರಿಕೆಯ ದೀಪಾವಳಿ ವಿಶೇಷಾಂಕದಲ್ಲಿ 'ಒಣ ನಿಗ್ಗರ' ಬೆಳಕು ಕಂಡಿತು. ನವಂಬರ 75 ಅಂದರೆ ಅಷ್ಟೊತ್ತಿಗಾಗಲೇ ತುರ್ತು ಪರಿಸ್ಥಿತಿ ಜಾರಿಗೆ ಬಂದು 4–5 ತಿಂಗಳಾಗಿ ಅದರ "ಯಮ–ನಿಯಮದ ಗುಟ್ಟು" ಸಾವಕಾಶವಾಗಿ ರೂಢಿಯಾಗುತ್ತಿರುವ ಪ್ರಸಂಗ. ಬುದ್ಧಿಜೀವಿಗಳೆನ್ನಿಸಿಕೊಂಡವರು, ಪ್ರಜ್ಞಾವಂತರಾದ ಬರಹಗಾರರು 'ಅತ್ತಿತ್ತ ಸುತ್ತು ಹಾಕಿ ಮಾತಾಡುತ್ತ", ಮಬ್ಬುಗತ್ತಲಿನಲ್ಲಿ ಒಬ್ಬೊಬ್ಬರೇ ಹುತ್ತ ಸೇರಿಕೊಳ್ಳುತ್ತಿರುವ ಸ್ಥಿತಿ—ಆಗ ಕಣವಿಯವರು ಕಂಡ ಯಥಾಸ್ಥಿತಿ. ಬದುಕಿಗೆ ಯಾವ ಗಂಡಾಂತರ ಒದಗಿ ಬಂದರೂ ಅದನ್ನು ನೇರವಾಗಿ ಪ್ರತಿಭಟಿಸದೆ, ಸಹಿಸಿಕೊಂಡು, ಅದಕ್ಕೆ ಅಪ್ಯಾಯಮಾನವಾಗಿ ತಾವೇ ಬದಲಾಗುತ್ತ ಹೋಗುವ ನಮ್ಮ ಜನರ ಚಿತ್ರ ಇಲ್ಲಿ ಸ್ಫುಟವಾಗಿಮೂಡಿದೆ. ಆದರೆ ಎಲ್ಲ ಒಳಗೇ ಹತ್ತಿಕ್ಕಿಕೊಂಡು ನುಂಗಿ ನೀರು ಕುಡಿದರೆ, ಕುಡಿಯುತ್ತಲೇ ಹೋದರೆ...ಆಗುವ ಅನಾಹುತ ಎಂಥದು? ತುಂಬಿದ ಕೆರೆ ಕೋಡಿ ಒಡೆದರೆ?

> ವಾಚಕರೆ,
> ಪಾಚಕ ಶಕ್ತಿಗೂ ಒಂದು ಮಿತಿಯುಂಟು,
> ಅಲ್ಲದೇ ಅದರದೇ ಗತಿಯುಂಟು.

—ಎನ್ನುವಲ್ಲಿ ಸಕಾಲಿಕ ಎಚ್ಚರಿಕೆಯ ಗಂಟೆಯೂ ಇದೆ. ಆದದ್ದೆಲ್ಲ ಬರೋಬರಿ. ಕ್ರಿಮಿನಾಶಕ ಹೊಡೆಯುವಾಗ ಮೂಗು ಬಾಯಿ ಕಟ್ಟಿಕೊಂಡದ್ದು ಸರಿಯೇ. ಆದರೆ ಆ ಮೇಲೂ ಈ ಸೋಗು ಎಷ್ಟೊತ್ತಿನ ತನಕ? ಎಂಬ ಪ್ರಶ್ನೆಯಲ್ಲಿ, ತುರ್ತು ಪರಿಸ್ಥಿತಿಯ ಅನಿವಾರ್ಯತೆಯನ್ನು ಕವಿ ಒಪ್ಪಿಕೊಂಡಂತಿದೆ. ಆದರೆ ಅದು ತನ್ನ ಉದ್ದೇಶ ಸಾಧನೆ(?) ಆದ ಮೇಲೂ ಹೀಗೇ ಮುಂದುವರಿಯಬೇಕೇ? ಎಂಬ ಕಾತರ ಅವನ ಧ್ವನಿಯಲ್ಲಿದೆ.

ಒಂದು ನಿಟ್ಟಿನಲ್ಲಿ ಆತ್ಮ ವಿಮರ್ಶೆಯೂ ಆಗಿರುವ 'ಒಣ ನಿಗ್ಗರ'ಕ್ಕಿಂತ ಭಿನ್ನವಾದ ವಸ್ತುನಿಷ್ಠವೆನ್ನಿಸುವ ಕವನ "ಇಳಿದ ಬೆಲೆ". ತುರ್ತುಪರಿಸ್ಥಿತಿಯಲ್ಲಿ ಕಳ್ಳ ಸಾಗಾಣಿಕೆದಾರರ

ಮೇಲೆ ಕೈಕೊಂಡ ಕ್ರಮದಿಂದಾಗಿ ಪೇಟೆಯಲ್ಲಿ ವಸ್ತುಗಳ ಧಾರಣೆ ಇಳಿದದ್ದು ಸರ್ವಾಧಿಕಾರಿಯ ಪ್ರಚಾರದ ವಸ್ತುವಾಗಿತ್ತು. ಈ ಕವನದಲ್ಲಿ "ಬೆಲೆ" ಶಬ್ದ ದ್ವಂದ್ವಾರ್ಥದ್ದು. ಬೆಲೆ = ಧಾರಣೆ : ಮೌಲ್ಯ.) ಪ್ರಜಾಪ್ರಭುತ್ವದಲ್ಲಿ ನಾವು ನಂಬಿಕೊಂಡು ಬಂದಿದ್ದ ಮೌಲ್ಯಗಳೆಲ್ಲ ಅಪಮೌಲ್ಯ ಹೊಂದಿದ ಸ್ಥಿತಿ—'ಭಯಂಕರ' ಸ್ಥಿತಿ—ಈಗ. ಆದರೆ ಈ ಕವನದ ಮೊದಲ ನುಡಿಗಟ್ಟಿನಲ್ಲಿ ಸಾರ್ಥಕವಾಗಿ ಬಂದ ದ್ವಂದ್ವ ಮುಂದಿನ ನುಡಿಗಟ್ಟುಗಳಲ್ಲಿ ಮಾಯವಾಗಿ, 'ಬೆಲೆ' ಅಂದರೆ ಪೇಟೆಯ ಧಾರಣೆಯೇ ಆಗಿ, ಅಂಥ ಬೆಲೆ ಇಳಿತದ ಅಭಾಸದ ಚಿತ್ರ ಸಿಗುತ್ತದೆ. (ಉದಾ: ರೇಶನ್ ಕಾಳಿನ ಕಲ್ಲು—ಕಸ, ಗಾಳಿಗೆ ಹಾರಿ ಹೋಗದೆ ಉಳಿದ ಒಂದು ನಯಾ ಪೈಸಾ ಇತ್ಯಾದಿ.) ರಾಜಕಾರಣಿಗಳ ಪ್ರಚಾರ ತಂತ್ರದ ಪೊಳ್ಳುತನವನ್ನು, ಹೊಟ್ಟೆ ತುಂಬಿಸುವ ಭರವಸೆಗಳನ್ನು ವಿಡಂಬಿಸುವ ಇಂಥ ಕವನಕ್ಕೆ ತುರ್ತು ಪರಿಸ್ಥಿತಿಯಂಥ ಪರಿಸ್ಥಿತಿ 'ಅನಿವಾರ್ಯ'ವೆಂದೇನೂ ಅನಿಸುವುದಿಲ್ಲ. ಕಣವಿಯವರ ಇನ್ನಿತರ ವಿಡಂಬನ ಕವನಗಳ ಧಾಟಿಯಲ್ಲಿಯೇ ಇದೂ ಇದೆ.

ಜೂನ್ 76ರಲ್ಲಿ 'ಸಂಕ್ರಮಣ'ದಲ್ಲಿ ಪ್ರಕಟವಾದ 'ಒಂದು ವ(ಂ)ಚನ' ಸಮಕಾಲೀನ ಪರಿಸರಕ್ಕೆ ಕಣವಿಯವರು ನೇರವಾಗಿ ಪ್ರತಿಕ್ರಿಯಿಸಿದ ಕವನ. ಆದರೆ ಅಭಿವ್ಯಕ್ತಿಗೆ ಆರಿಸಿಕೊಂಡ 'ವಚನ'ದ ಚೌಕಟ್ಟು ಈ ನೇರತನವನ್ನು ಅಡ್ಡಾದಿಡ್ಡಿಯಾಗಿಸಿ, ಅಷ್ಟರ ಮಟ್ಟಿಗೆ ಮಾತಿನ ವ್ಯಂಗ್ಯವನ್ನು ಮೊಂಡುಮಾಡಲು ಅನುಕೂಲವಾಗಿದೆ. ಆಕಾಶವಾಣಿ 'ಅವಕಾಶ ವಾಣಿ' ಯಾಗಿದೆ. 'ವರ್ತಮಾನ' (ಪತ್ರಗಳ) ಪುಟ ಪುಟದ 'ಸಂಕಟ'ದಿಂದ ಅವನ ('ಎತ್ತೆತ್ತ ನೋಡಿದತ್ತತ್ತ ನೀನೇ ದೇವಾ') ನಾಮವೇ ಪುಟಿದೇಳುತ್ತಿದೆ. 'ರಾಕ್ಷಸನಾಮ' ಸಂವತ್ಸರದಲ್ಲಿ ದಾರಿಗೆ ಅಡ್ಡ ಬಂದವರನ್ನೆಲ್ಲ ಉದ್ದ ಮಲಗಿಸಿದ್ದಾಯಿತು. ಉದ್ದಾನ ವೀರಭದ್ರೇಶ್ವರನ ಮಹಿಮೆಯ ವಿಡಂಬನೆ ಸಾಲಿನಿಂದ ಸಾಲಿಗೆ ಏರೇರುತ್ತ ಓದುಗರೂ ಕಣ್ಣು ಕಣ್ಣು ಬಿಡುವಂತಾಗುತ್ತದೆ.

1977ರ ಜನವರಿ 30 ರಂದು ಧಾರವಾಡದಲ್ಲಿ ಸಂಕ್ರಮಣ ಸಾಹಿತ್ಯ ಕೂಟ ನಡೆಸಿದ "ಗಾಂಧಿ ಕವಿ ಸಮ್ಮೇಳನ"ಕ್ಕಾಗಿ ಬರೆದ್ದ ಕವನ 'ಆದರೂ ಅವನ ನೆನಪು.' ಮೊದಲ ಮೂರು ಕವನಗಳ ಹಿನ್ನೆಲೆಯಲ್ಲಿ ಈ ಕವನ ಇನ್ನೂ ಹೆಚ್ಚು ನೇರವಾಗಿ, ಖಾರವಾಗಿ, ವಿಷಾದಮಯವಾಗಿ ಧ್ವನಿಸುತ್ತದೆ. ಗಾಂಧಿ ಈಗ "ಶಬ್ದಗಳಿಗೆ ಸಿಲುಕದ, ಅರ್ಥಕ್ಕೂ ನಿಲುಕದೆ ಬರಿಯ ಧ್ವನಿಯಾಗಿ ಬಿಟ್ಟಿದ್ದಾನೆ." ಗಾಂಧಿ ಸಂಕೇತಿಸಿದ ಮೌಲ್ಯಗಳು ಸಮಾಧಿ ಕಂಡಿದ್ದರೂ ಆ ಮೌಲ್ಯಗಳ ಅರಿವು ಇರುವ ಪ್ರಜ್ಞೆಗೆ "ಅವನ ನೆನಪು ಪದೇ ಪದೇ ಕಾಡುತ್ತದೆ." ನಮ್ಮ ಹಾಗೂ ಗಾಂಧಿಯ ನಡುವಿನ ವೈರುಧ್ಯಗಳ ಎರಡು—ಮೂರು ಚಿತ್ರಗಳು ಸ್ವಾತಂತ್ರ್ಯ ನಂತರದ ಇಂಡಿಯದ ದುರಂತವನ್ನು ತಣ್ಣಗಿನ ದನಿಯಲ್ಲಿ ಕಟ್ಟಿ ಹಾಕುತ್ತವೆ.

ಹುಚ್ಚ—ಮಹಾತ್ಮ ಎಂದು ಶಿಫಾರಸು ಕೊಟ್ಟು
ಕೇವಲ ಮನುಷ್ಯರಾದ ನಾವು ಸೆರೆ
ಮನೆಗೆ ಮರಳುತ್ತೇವೆ.

ಈಗಲೂ ಅದರ ಬಾಗಿಲುಗಳು
ತೆರೆದೇ ಇವೆ.

ಕೊನೆಯ ಎರಡು ಸಾಲುಗಳ ವಾಸ್ತವ ಕ್ರೌರ್ಯ ಕಣವಿಯವರ ಸಮಕಾಲೀನ ಎಚ್ಚರಕ್ಕೆ ಸೂಚಿಯಾಗಿವೆ.

ಈ ಕವನಗಳ ಆಂತರಿಕ ರಚನೆಯ ಕೌಶಲ್ಯದ ಬಗ್ಗೆ, ಮಾತಿನ ಸಂಯಮದ ಬಗ್ಗೆ, ದನಿಯ ಸ್ಫೋಟಕತೆಯ ಬಗ್ಗೆ ಇನ್ನೂ ವಿಸ್ತಾರವಾಗಿ ಬರೆಯಬಹುದು. ಆದರೆ ಈ ಕವನಗಳ ಆಶಯ ಏನು? ತುರ್ತು ಪರಿಸ್ಥಿತಿಯಲ್ಲಿ ಪ್ರಜ್ಞಾವಂತರಾದ ಜನರು "ಏನು ಮಾಡಬೇಕು" ಎಂಬ ಬಗ್ಗೆ ಕವಿಯ ಧೋರಣೆ ಏನು ?—ಅಂತ ಪ್ರಶ್ನೆ ಕೇಳುತ್ತ ಹೋದಂತೆಲ್ಲ, ಕಣವಿಯವರ ಮೂಲ ಮನೋಧರ್ಮವಾದ 'ತಾಟಸ್ಥ್ಯ'ವನ್ನು ಗಮನಿಸಲೇ ಬೇಕಾಗುತ್ತದೆ. ಭಾವಾನಾತ್ಮಕವಾಗಿ, ವೈಚಾರಿಕವಾಗಿ ಒಂದು ಪೂರ್ವ ನಿಶ್ಚಿತವಾದ (ಸುರಕ್ಷಿತ) ನೆಲೆಯನ್ನು ಕಂಡುಕೊಂಡು, ಆ ನೆಲೆಯಿಂದಲೇ ಒಂದು ಬಗೆಯ ಸಿಂಹಾವಲೋಕನ ಮಾಡುತ್ತ, ಕಣ್ಣಿನ ಚೌಕಟ್ಟಿನಲ್ಲಿ ಬರುವ ಚಿತ್ರಗಳನ್ನು ಚಿತ್ರಿಸುತ್ತ ಹೋಗುವುದು, ಯಥಾಸ್ಥಿತಿಯನ್ನು ಪ್ರಾಮಾಣಿಕವಾಗಿ ಶಬ್ದಗಳಲ್ಲಿ, ಪ್ರತಿಮೆಗಳಲ್ಲಿ ಕಡೆಯುತ್ತ ಹೋಗುವುದು ಕಣವಿಯವರು ಒಪ್ಪಿಕೊಂಡ ಕಾವ್ಯದ ರೀತಿ. ಬರಹವನ್ನು ಮೀರಿದ ಬದುಕಿನಲ್ಲಿ 'ಕ್ರಿಯೆ' ಎಂಥದಿರಬೇಕು? ಅಂಥ ಕ್ರಿಯೆಗೆ ಪ್ರಚೋದನೆಯಾಗಿ ಬರಹ ಬರಬೇಕೇ? ಕವನ ಓದಿದವರು ಓದಿ ತಲೆದೂಗಬೇಕೇ, ಅಥವಾ ಓದಿದ ನಂತರ ಕ್ರಿಯೆಯ ಸಾಧ್ಯತೆಗಳನ್ನು ಕುರಿತು ಚಿಂತಿಸಬೇಕೇ ?—ಇಂಥ ಪ್ರಶ್ನೆಗಳಿಗೆ ಬಹುಶಃ ಕಣವಿಯವರ ಕಾವ್ಯದಲ್ಲಿ ಉತ್ತರ ಸಿಗುವುದಿಲ್ಲ.

ಆದರೆ, ಸಾಹಿತ್ಯ ಕೃತಿಗಳನ್ನು ಸಾಹಿತ್ಯೇತರ ಮಾನದಂಡಗಳಿಂದಲೂ ನೋಡಬೇಕು ಎಂಬ ವಾಸ್ತವ ಧೋರಣೆ ತಳೆಯುತ್ತಿರುವ ಇತ್ತೀಚಿನ ಕನ್ನಡ ವಿಮರ್ಶಕರು ಒಬ್ಬೊಬ್ಬ ಕವಿಯ ಮನೋಧರ್ಮವನ್ನೂ, ಬದುಕಿನ ಮಿತಿಗಳನ್ನೂ ಗುರುತಿಸಿ, ಆ ಮಿತಿಗಳಲ್ಲಿಯೇ ಅವರು ಪ್ರಾಮಾಣಿಕವಾಗಿ ಸಾಧಿಸಿದ್ದನ್ನು ದಾಖಲೆಗೊಳಿಸುವುದು ಯೋಗ್ಯ. ಈ ದೃಷ್ಟಿಯಿಂದ ತಮ್ಮ ಪೀಳಿಗೆಯ ಎಲ್ಲರಿಗಿಂತಲೂ ಚೆನ್ನವೀರ ಕಣವಿಯವರು ಹೆಚ್ಚು ಜೀವಂತರಾಗಿರುವ ಕವಿ. ಅಂತಲೇ ಅವರ ಕಾವ್ಯ ಎಲ್ಲ ಪೀಳಿಗೆಯವರಿಗೂ ರೆಲವಂಟ್ ಆಗುವ ಸಾಧ್ಯತೆಯನ್ನು ಒಳಗೊಂಡಿದೆ.

ದೇವೇಂದ್ರ ಕುಮಾರ ಹಕಾರಿ

# ಕಣವಿ ಅವರ ಕಾವ್ಯದಲ್ಲಿ ಎರಡು ಪ್ರಮುಖ ಜಾನಪದ ಅಂಶಗಳು

ಸಾಮಾನ್ಯವಾಗಿ ಕವಿಗಳು ತಮ್ಮ ಜನಾಂಗದ ಧ್ವನಿಯಾಗುವುದು ವಿರಳ. ಚೆನ್ನವೀರ ಕಣವಿ ಅಂಥ ವಿರಳ ಕವಿಗಳಲ್ಲಿ ಒಬ್ಬರು. ಏಕೆಂದರೆ ಅವರ ಕಾವ್ಯದಲ್ಲಿ ನಮ್ಮ ಜನಾಂಗಿಕ ಜೀವನದ ವಿಭಿನ್ನ ಮುಖಗಳು ತಮ್ಮದೇ ಆದ ವಸ್ತು ಪ್ರತಿ-ರೂಪವನ್ನು ಪಡೆದಿವೆ. ಜನಪದ ಬದುಕಿನ ಹತ್ತಾರು ಮುಖಗಳು ಈ ಕವಿಯ ಪ್ರತಿಭೆಗೆ ತಮ್ಮ ಹೃದಯವನ್ನು ತೆರೆದಿಟ್ಟು ಕಾವ್ಯಕೃಷಿಗೆ, ಅಭಿವ್ಯಕ್ತಿಗೆ ಕುಮ್ಮಕ್ಕು ಕೊಟ್ಟಿವೆ ; ಬೆನ್ನು ಹುರಿಯಾಗಿವೆ. ಪಂಪನ ಭವ್ಯತೆ, ಹರಿಹರ ಕುಮಾರವ್ಯಾಸರ ಅದ್ವಿತೀಯ ಕಲ್ಪಕತೆ, ಬಸವ ಅಲ್ಲಮ ಪುರಂದರಾದಿಗಳ ಅನುಭಾವ, ಬೆಡಗು, ಸರಳತೆ, ಬೇಂದ್ರೆ, ಕುವೆಂಪು ಅವರ ಕಲ್ಪನಾವಿಲಾಸ, ರಸದೃಷ್ಟಿ ಕವಿಯ ಸೃಷ್ಟಿಗೆ ಒತ್ತಾಸೆಯಾಗಿದ್ದರೂ ಪರಂಪರೆಗೆ ಈ ಕವಿ ಸೆರೆಯಾಗುವುದಿಲ್ಲ. ಅನಾದಿ ಕಾಲದಿಂದಲೂ ಅನೂಚಾನವಾಗಿ ವ್ಯಾಪಕವಾಗಿ ಹರಿದು ಬಂದ ಜಾನಪದ ಕಾವ್ಯದ ಸಂಪ್ರದಾಯ, ಸೊಗಡುಗಳಿಂದ ವಂಚಿತರಾಗದ ಕಣವಿಯವರ ಕಾವ್ಯ ಈ 'ಎರಡುದಡ'ಗಳನ್ನು ಮೈಗೂಡಿಸಿಕೊಂಡು ಪ್ರವಹಿಸುವುದು ಒಂದು ವೈಶಿಷ್ಟ್ಯ. ಶಿಷ್ಟಕವಿ ಜಾನಪದ ಪ್ರಜ್ಞೆಯಿಂದ ವಂಚಿತನಾದರೆ ಅಷ್ಟರಮಟ್ಟಿಗೆ ಆ ಕವಿಯ ಕಾವ್ಯ ಕೊರೆಯಾಗುತ್ತದೆ. ಶಿಷ್ಟಸಾಹಿತ್ಯ ಪರಂಪರೆ, ಜಾನಪದ ಸಂಪ್ರದಾಯ ಮತ್ತೆ ಸಮಕಾಲೀನ ಬದುಕಿನ ಸಂಕೀರ್ಣತೆಗಳಿಂದ ಮುಪ್ಪುರಿಗೊಂಡ ಕಣವಿಯವರ ಕಾವ್ಯವನ್ನು ಜಾನಪದ ದೃಷ್ಟಿಯಿಂದ ವಿಶ್ಲೇಷಣೆ ಮಾಡುವುದು ಸಹೃದಯರ ಆಸಕ್ತಿಯನ್ನು ಕುದುರಿಸುತ್ತದೆ.

ಜಾನಪದ ತುಂಬ ವ್ಯಾಪಕವಾದ ಕ್ಷೇತ್ರ. ಆದಿಮಾನವನ ಮನರಂಜನೆಯ ಸಾಧನಗಳಾದ ಹಾಡು, ಕುಣಿತ ಕಥೆಗಳು, ಪುರಾಣ ಐತಿಹ್ಯ ಧಾರ್ಮಿಕ ವಿಧಿಗಳಲ್ಲಿ ಅವನ ನಂಬುಗೆ, ನಿಷೇಧ ಮತ್ತು ಮೂಢ ಶ್ರದ್ಧೆಗಳ ಬಗೆಗೆ ಅವನಲ್ಲಿ ಮೂಡಿಬಂದ ಭಯ, ಜನಪದ ಆಡುನುಡಿಯಲ್ಲಿಯೇ ಹುದುಗಿದ ವಿಭಿನ್ನ ರೂಪದ ಅಭಿವ್ಯಕ್ತಿಗಳು ಹೀಗೆ ಜಾನಪದ ನಾನಾ ಮುಖವಾಗಿ ಹರಡಿದೆ. ಯಾವುದೇ ಕವಿ ತನ್ನಕಾವ್ಯದಲ್ಲಿ ಈ ಎಲ್ಲ ಜಾನಪದ ಅಂಶಗಳನ್ನು ಪ್ರಜ್ಞಾ ಪೂರ್ವಕವಾಗಿ ತುಂಬುತ್ತಾನೆ ಎನ್ನುವುದಲ್ಲ ; ಆದರೆ ಜಾನಪದ ಅಂಶಗಳು ಅತಿ ಸಹಜವಾಗಿ, ನಿರಾಯಾಸವಾಗಿ ಆ ಕವಿಯ ಸೃಷ್ಟಿಕ್ರಿಯೆಯಲ್ಲಿ ಪಾಲ್ಗೊಳ್ಳುತ್ತಿವೆ ಎನ್ನುವುದು ಮುಖ್ಯ. ಮಾನವ ಜನಾಂಗದ ತೀವ್ರಗತಿಯ ಬೆಳವಣಿಗೆಯ ರಭಸದಲ್ಲಿ ಕವಿಯಾದವನು ಜಾನಪದ ಪ್ರಜ್ಞೆಯಿಂದ ಜಾರಿಕೊಳ್ಳುವ ಅಥವಾ ನುಸುಳಿ

ಕೊಳ್ಳುವ ಸಾಧ್ಯತೆಯಿರುತ್ತದೆ. ನಾಗರಿಕ ಶಿಷ್ಟ ಪರಿಸರದ ಗಾಢವಾದ ಪ್ರಭಾವಕ್ಕೆ ತುತ್ತಾದ ಅಥವಾ ಸಿಕ್ಕ ಒಬ್ಬ ಸೃಷ್ಟಿಶೀಲ ಕವಿ ಪರಂಪರೆಯ ಜಾನಪದ ಸೊಗಡನ್ನು ರಮಣೀಯತೆಯನ್ನು, ಉತ್ತಮಾಂಶಗಳನ್ನು ತನ್ನ ಅಭಿವ್ಯಕ್ತಿಯಲ್ಲಿ ಆತ್ಮಸಾತ್ ಮಾಡಿ ಕೊಂಡಷ್ಟೂ ಆತ ಅಭಿಜಾತ ಮತ್ತು ಮಹತ್ವದ ಕವಿಯಾಗುತ್ತಾನೆ. ಈ ದೃಷ್ಟಿಯಿಂದ ಕಣವಿ ಒಬ್ಬ ಅಭಿಜಾತ ಮತ್ತು ಮಹತ್ವದ ಕವಿ.

'ಕಾವ್ಯಾಕ್ಷಿ' 'ಭಾವಜೀವಿ'ಯಿಂದ ಮೊದಲುಗೊಂಡು 'ನಗರದಲ್ಲಿ ನೆರಳು' 'ಚಿರಂತನ ದಾಹ'ದ ವರಗೆ ಸುಮಾರು ಹತ್ತು ಕವಿತಾ ಸಂಕಲನಗಳ ಮೂಲಕ ಕನ್ನಡಿಗರ ಹೃದಯ ವನ್ನು ಸೂರೆಗೈದ ಕವಿ ಕಣವಿ ಹತ್ತು ದಿಕ್ಕುಗಳಿಂದ ಬೀಸಿ ಬರುವ ಗಾಳಿಗೆ, ಸೂಸಿ ಬರುವ ಬೆಳಕಿಗೆ ತಮ್ಮ ಹೃದಯವನ್ನು ಅಖಂಡವಾಗಿ ತೆರೆದಿಟ್ಟವರು.

ಜಗತ್ತಿನ 'ಮೊರೆ-ಕರೆ'ಗಳ ಮಧ್ಯದಲ್ಲೂ ಚೆಲುವಿನ ಉಪಾಸನೆಗೆ ಕಾತರಿಸಿ ಕನಸಿ ನಲ್ಲೂ ದನಿಗೂಡಿ ಹಾಡಿದ 'ಒಳದನಿ'[1]ಗೆ ಓಗೊಟ್ಟವರು. ಕವಿತೆ ಒಳದನಿಗೆ ಉಸಿರಾಗ ಬೇಕು ಎಂದು ಹಂಬಲಿಸಿದ್ದರಿಂದಲೋ ಏನೋ ಈ ಕವಿಯ ರಚನೆಗಳಲ್ಲಿ ಅಂತರಂಗದ ಸೂಕ್ಷ್ಮತಮ ಭಾವನೆಗಳೂ ಉಸುರಿನ ಸೊಗಸು ಹೊಂದಿ ಚಿತ್ರಸ್ಥವಾಗುತ್ತವೆ, ಬಹಿರಂಗದ ಸೃಷ್ಟಿ ಅಂತರಂಗದ 'ಕಮ್ಮಲರಿನ ಕವಿ-ಗಾಳಿ' ಏಕ-ಕಾಲಕ್ಕೆ ಸೃಜನ ಕ್ರಿಯೆಯಲ್ಲಿ ಬೆರೆಯು ತ್ತವೆ. 'ತಿರೆಯನವಿರು ಹುಲ್ಲು ಹಸಿರು, ಮಳೆಮಲ್ಲಿನ ಮುಸುಗು' ಮನೆಗೆಲಸದಿ ಮುಗುದೆ ಗುಣುಗುಣಿಸುವ ಹಾಡು ಎರಡನ್ನೂ ಬಳಸಿಕೊಂಡು ತುಳುಕಿದ ಭಾವನೆಗಳಿಗೆ ಕವಿ ಬೆರಗಾಗಿ 'ತುಳುಕಿತಹಹ' ಎಂದು ವಂದಿಸುತ್ತಾನೆ. ಈ ಸಹಜ ಮುಗ್ಧತೆ, ಬೆರಗು ಸವಿ ಹಾಡಿನ ರಿಂಗಣಕ್ಕೆ ಕವಿಯನ್ನು ಕರೆದೊಯ್ಯುತ್ತದೆ.

'ಜುಳು ಜುಳು ನದಿ'ಯ ಕಲರವದಲ್ಲಿ 'ಜೋಗುಳದುಲಿ'[2] ಕೇಳುವ ಕವಿಗೆ ಜಾನಪದ ಪ್ರಜ್ಞೆ ಬೆಳಕಾಗಿದೆ ; ಮುನ್ನಡೆಸಿದೆ. ಜೋಗುಳ ಹಾಡಿ ಮಗುವನ್ನು ಲಾಲಿಸಿ ಪೋಷಿಸಿದ ತಾಯಿಯ ವಾತ್ಸಲ್ಯ, ಭೂಮಿ ತಾಯಿಯ ಕರುಣೆಯ ಜೋಗುಳವಾದ ಜಲ ಜಲನೆ ಹರಿವ ನದಿಯ ಕಲರವ ಸಮಾನ ಸ್ಪಂದನ ಪಡೆದು 'ಲಾಲಿ'ಯ ಮೂಲಕ ತನ್ನೊಳಗೆ ಸೇರಿದ ನಂಡಿ ಅಪಾರವಾದ ನಿಸರ್ಗದ ಪ್ರತಿಕ್ರಿಯೆಗಳನ್ನು, ಚೆಲುವಿನ ಚಿಗುರು, ಹೂ ಫಲಗಳನ್ನು ನೀಡುವ ಅಭೀಪ್ಸೆಯೊಂದಿಗೆ ಸಾರ್ಥಕ ರೂಪ ತಾಳುತ್ತದೆ. ಆದ್ದರಿಂದಲೇ ಜನಪದ ಭಾಷೆಯ ಸರಳತೆ 'ಜೇಂಗೊಡಾ, ಹೊಂಗೊಡಾ, ತೋರಣ, ಕಂಕಣ'[3] ಮುಂತಾದ ಶಬ್ದಗಳ ಬಳಕೆಯಲ್ಲಿ ಸ್ಫುಟಗೊಳ್ಳುತ್ತದೆ.

ಕಣವಿಯವರ ಕಾವ್ಯದಲ್ಲಿ ಕಂಡುಬರುವ ಎರಡು ಪ್ರಮುಖ ಜಾನಪದ ಅಂಶ ಗಳನ್ನು ಮಾತ್ರ ಇಲ್ಲಿ ವಿಶ್ಲೇಷಿಸಲಾಗುವುದು, ಒಂದು : ಕವಿ ತನ್ನ ಗ್ರಾಮೀಣ ಜೀವನ

---

1. 'ಒಳದನಿ' ಕಾವ್ಯಾಕ್ಷಿ. ಪು. ೧೧.
2. ಕಾವ್ಯಾಕ್ಷಿ, ಪು. ೧೨.
3. ಅದೇ ,, ,,

ದಿಂದ ಮೊದಲುಗೊಂಡು ನಾಗರಿಕ ಜೀವನದವರೆಗೆ ವಿಭಿನ್ನ ವಸ್ತುಗಳನ್ನು ತನ್ನ ಕಾವ್ಯ ಸೃಷ್ಟಿಗೆ ಆಯ್ದುಕೊಂಡಿದ್ದರೂ ಜನಪದ ಭಾಷೆಯ ಸತ್ತ್ವ ಸೊಗಸುಗಳನ್ನು ಹೇಗೆ ಬಳಸಿ ಕೊಳ್ಳುತ್ತಾನೆ, ಉಳಿಸಿಕೊಳ್ಳುತ್ತಾನೆ ಎನ್ನುವುದು, ಮತ್ತೊಂದು: ಜನಪದ ಪರಂಪರೆ ಯಲ್ಲಿ ಬಂದ ವಿಭಿನ್ನ ಬುಡಕಟ್ಟು ಅಥವಾ ಜನಸಮುದಾಯಗಳ ಸಂಬಂಧ ಸಂಪರ್ಕ ಗಳನ್ನು ಅತ್ಯಂತ ಸಹಜವಾಗಿ ಮತ್ತು ಅಷ್ಟೇ ಉಚಿತವಾಗಿ ತನ್ನ ಕಾವ್ಯದ ವಸ್ತುವಿಗೆ ಒದಗಿಸಿಕೊಳ್ಳುತ್ತಾನೆ ಎನ್ನುವುದು.

ತನ್ನ ಸುತ್ತೂ 'ಬಡತನದ ಶಾಪ'[1] 'ಒಡಲುರಿ ತಾಪ'ವನ್ನು ಕಂಡ ಕವಿ 'ಕಣ್ಣಿಗೆ ಕತ್ತಲು ಗಟ್ಟುತಿದೆ' ಎನ್ನುತ್ತಾನೆ. ಜೀವ 'ತೆಕ್ಕಿಮುಕ್ಕಿ' ಹೊರಳಾಡುತಿದೆ. ಪ್ರಾಣದ ಸಂಕಟ 'ದಿಂಕಿಟ ಧುಮುಧುಮುಗುಟ್ಟು'ತಿದೆ. ನೊಂದ ಜೀವನ ಸಂಕಟವನ್ನು ವ್ಯಕ್ತಗೊಳಿ ಸಲು ತಮ್ಮ ಗ್ರಾಮೀಣ ಪರಿಸರದ ಆಡುನುಡಿ 'ಕಣ್ಣಿಗೆ ಕತ್ತಲುಗಟ್ಟು' 'ತೆಕ್ಕಿಮುಕ್ಕಿ' 'ಧುಮು ಧುಮುಗುಟ್ಟು'ಗಳನ್ನು ಬಳಸುವುದರಿಂದ ಕವಿತೆಗೆ ಸಹಜತೆ ಪ್ರಸಾದ ಗುಣವಂತೂ ಪ್ರಾಪ್ತವಾಯಿತು. ಜೊತೆಗೇ ಈ ನುಡಿಗಳನ್ನು ಬಳಸುವುದರಿಂದ, ಅಮೂರ್ತವಾದ ಪ್ರಾಣದ ಯಾತನೆ ಕ್ರಿಯಾಶೀಲವಾಗಿ ನಮ್ಮ ಕಣ್ಣೆದುರು ಅಭಿನಯಿಸಿ ನಿಲ್ಲುತ್ತದೆ. ಇಂಥ ನುಡಿಗಟ್ಟುಗಳನ್ನು ಈ ಕವಿ ಪುಕ್ಕಟೆಯಾಗಿ ಬಳಸುವುದಿಲ್ಲ. ಅದು ಆ ರಚನೆಯ ಒಂದು ಅನಿವಾರ್ಯ ಅಂಗವಾಗಿ–ಅಭಿವ್ಯಕ್ತಿಯ ಸಹಸಾ ಭಂಗಿಯಾಗಿ-ಬಂದು ಅವರ ಕಾವ್ಯ ಶೈಲಿಯ ದಿಕ್ಸೂಚಿಯಾಗುತ್ತದೆ. ಅಂತರಂಗದ ತಳಮಳಕ್ಕೆ ನಂಬುಗೆ ನುಚ್ಚುನೂರಾಗದೆ ವ್ಯಕ್ತಿ ಸ್ಥಿರಚಿತ್ತನಾಗಿ ಭದ್ರನಾಗಿ, ಧೀರನಾಗಿ ಜೀವನವನ್ನು ನಿರ್ವಹಿಸುವ ಸಂದೇಶವುಳ್ಳ ಬಸವಣ್ಣನ ವಚನ 'ಗೆಲ್ಲುವೆನೆಂಬ ಭಾಷೆ'[2] ಕವಿತೆಗೆ ವಸ್ತು. ಸಂಸಾರದ ಸಂಕಷ್ಟಗಳಲ್ಲಿ ಶಾಪತಾಪಗಳಲ್ಲಿ ನೊಂದ ಜೀವದ ಸ್ಥಿತಿಯನ್ನು ಕಣವಿ ವಿವರಿಸುವ ರೀತಿ ಅಪೂರ್ವ. ಸಂಸಾರ ದಂದುಗದಲ್ಲಿ ಜೀವ 'ಹುರಿ ಹಂಚಿನಲಿ ಬೆಂದು' ಎಂದು ಹೇಳುತ್ತಲೇ ನೊಂದ ನೋವು ಯಾತನೆ ಒಂದು ಲಘು ಪ್ರತಿಮೆಯಾಗಿ ನಿಲ್ಲುತ್ತದೆ. ಹುರಿ ಹಂಚು—ಅದರಲ್ಲಿ ಹಾಕಿದ ಯಾವುದೇ ವಸ್ತು 'ಬೆಂದು ಹುರುಪಳಿಸು'ವ ಕ್ರಿಯೆ ಸಾಂದ್ರವಾಗಿ ಓದುಗನ ಅನುಭವಕ್ಕೆ ನಿಲುಕುತ್ತದೆ; ಮನಮುಟ್ಟುತ್ತದೆ. ಸಂದರ್ಭೋಚಿತವಾಗಿ ಜನಪದ ಭಾಷೆಯ ನುಡಿಗಟ್ಟುಗಳನ್ನು ಸಹಸಾ ಬಳಸಿಕೊಂಡು ತನ್ನ ಶೈಲಿಯನ್ನು ರೂಪಿಸಿಕೊಳ್ಳುವ ಪ್ರತಿಮಾ ವಿಧಾನದಿಂದ ಕಣವಿ ಕಾವ್ಯ ಓದುಗ ಮತ್ತು ಕವಿತೆಯ ವಸ್ತುವಿನ ನಡುವೆ ಇರಬಹು ದಾದ ಅಂತರವನ್ನು ಅಳಿಸಿ, ಆಂತರಾಳಕ್ಕೆ ಇಳಿಯುತ್ತದೆ. ಅಂತಃಕರಣದಲ್ಲಿ ಕರಗುತ್ತದೆ.

ಮೇಘೋಪಾಸನೆಯಲ್ಲಿ ಓಡುವ, ಸಾಗುವ ಮೋಡಗಳನ್ನು ವರ್ಣಿಸುವಾಗ 'ಹಸುಳರಂತೆ ನಸುನಕ್ಕು ಅಂಬೆಗಾಲಿಕ್ಕಿ ನಡೆಯುತಿಹವು' ಪಾದ ಬರುತ್ತದೆ. 'ಹಸುಳರಂತೆ ನಸುನಕ್ಕ' ಶಿಷ್ಟಭಾಷೆಯೇ ಇದರ ಮುಂದೆ 'ಅಂಬೆಗಾಲಿಕ್ಕಿ' ಎನ್ನುವುದು ಆಡುನುಡಿ.

---

(1) 'ಬಾಳಿನ ಬೀಳಿದು' ಕಾವ್ಯಾಕ್ಷಿ-ಪುಟ ೨೩.

(2) 'ಗೆಲುವೆನೆಂಬ ಭಾಷೆ' ಕಾವ್ಯಾಕ್ಷಿ ಪುಟ.೪೦.

ಆದರೆ ಈ ಶಬ್ದ ಶಿಷ್ಟಪದಗಳಜೊತೆಗೆ ಬೆಳೆಸಿದ ಸಖ್ಯ ಅಪೂರ್ವ. ಭಾವಾಭಿವ್ಯಕ್ತಿಯ ದೃಷ್ಟಿಯಿಂದ ಇದು ಅಂಬೆಗಾಲಿಕ್ಕುವ ಮಗುವಿನ ಚಿತ್ರವನ್ನು ಮೂಡಿಸಿದರೆ ಶೈಲಿಯ ದೃಷ್ಟಿಯಿಂದ ಮೋಡಗಳ ನಡೆಯನ್ನು ನಿರ್ದೇಶಿಸುವಲ್ಲಿ ಸಫಲವಾಗುತ್ತದೆ. ಅಭಿವ್ಯಕ್ತಿಯ ವಸ್ತು ಮತ್ತು ಶೈಲಿ ಎರಡೂ ಎರಕಗೊಂಡು ಮೋಡಗಳು ಮಗ್ಗುಲಲ್ಲಿಯೇ ನಗುವ ಅಂಬೆಗಾಲಿಡುವ ಮಗುವಿನಷ್ಟು ಸಹಜವಾಗಿ ನಮ್ಮ ಕೈಗೆ ಎಟುಕುತ್ತವೆ,

ಹಳ್ಳಿಯ ಪರಿಸರದಲ್ಲಿ ಬೆಳೆದು, ಅಲ್ಲಿಯ ಜೀವನದ ವಿವಿಧ ಮಾನವ ಸಮುದಾಯಗಳ ಸಂಪರ್ಕದಲ್ಲಿ ಬಂದ ಕವಿ ಚಿತ್ತದ ಮೇಲೆ ಅಲ್ಲಿಯ ಅನೇಕ ಜನರು, ಬೇರೆ ಬೇರೆ ವೃತ್ತಿಯ ಕಸಬಿನ ಗುಂಪುಗಳು ಗಾಢವಾದ ಪ್ರಭಾವ ಬೀರುತ್ತವೆ. ಅದೆಲ್ಲವೂ ಕಾವ್ಯದ ಅಭಿವ್ಯಕ್ತಿಗೆ ವಸ್ತುವಾಗುವ ರೀತಿ ಮಾತ್ರ ತುಂಬ ಮೋಜಿನದಾಗಿದೆ.

ಮುದ್ದಿನ ಕುರಿಮರಿ, ಗೋದಿ ಹೊಲ, ಜೇನು ಮಾಮರ, ಗುಡಿಸಲು, ಕುಡಿ ಚಾಚಿದ ಜಾಜಿಯಂಬಳ್ಳಿ, ದನಕರುಗಳ ಗುಂಪು. ದನಗಾಹಿ, ಮುಳ್ಳುಕಂಟಿ, ಹುಲುಗಲ, ಹೊಂಗೆ, ಹಕ್ಕಿ, ಇವೆಲ್ಲ ಕವಿಯನ್ನು ಬೆರಗುಗೊಳಿಸಿದ ವಸ್ತುಗಳು. ಸೌಂದರ್ಯೋಪಾಸನೆಯ ಉನ್ಮತ್ತ ಭಾವೋದ್ರಿಕ್ತ ಮನಸ್ಸಿನ ಕವಿಗೆ ಗ್ರಾಮೀಣ ಪರಿಸರದ ಅನುಭವಗಳು ಆತನ ಕಾವ್ಯ ರಚನೆಯ ಅಕ್ಷಯ ಭಂಡಾರಗಳಾಗಿವೆ. 'ಸಂತೆಗದ್ದಲ'[1] ದಿಂದ ದೂರಾಗಿ 'ಹೈರಾಣ'ದಿಂದ ತುಂಬಿದ ಜನ ಜಂಗುಳಿಯಿಂದ ಸರಿದು 'ಮೌನಬೇಕಾಯಿತು' ಎಂದು ಕವಿ ಹೇಳಿದರೂ ಗ್ರಾಮೀಣ ವಸ್ತು ವ್ಯಕ್ತಿಗಳು ಒದಗಿಸಿದ — ಮೋಜು, ಸರಸ ಸಲ್ಲಾಪ, ಬೆಡಗು, ಆಟ, ಕುಣಿತ, ಸುಗ್ಗಿ ಹಾಡು—ಎಲ್ಲ ಅನುಭವಗಳನ್ನೂ ತನ್ನ ಕಾವ್ಯಕ್ಕೆ ಹದವಾಗಿ ಒಗ್ಗಿಸಿಕೊಳ್ಳುತ್ತಾನೆ ಎನ್ನುವುದು ಗಮನಾರ್ಹ. ಆಟ, ಬಯಲಾಟ, ಕೋಲಾಟ, ಹಂತಿ, ಮುಂತಾದ ಪ್ರಸಂಗಗಳು ಕವಿಗೆ ಪ್ರೇರಣೆಯಿತ್ತಿರುವುದಕ್ಕೆ ಕವಿಯ ಮಾತೇ ಪ್ರಮಾಣವಾಗಿವೆ. ಅಲ್ಲದೆ ಅವು ತಕ್ಕ ಕಾವ್ಯ ರೂಪವನ್ನು ತಳೆದಿವೆ. ತಾನು ಕೇಳಿದ ಬೀಸುಕಲ್ಲಿನ, ಆಟಗಳ, ಸುಗ್ಗಿಯ ಜನಪದ ಹಾಡುಗಳು ಕವಿಯ ಅನಿಸಿಕೆಗಳಲ್ಲಿ ಒಂದಾಗಿ ತಮ್ಮಲಯ, ಧಾಟಿ, ನುಡಿಯ ಬೆಡಗುಗಳನ್ನು ಧಾರಾಳವಾಗಿ ಸುರಿಸಿ ಕಾವ್ಯ ಸ್ಫುರಣೆಗೆ ಮೂಲ ನೆಲೆಯಾಗಿ ನಿಂತುದನ್ನು ಕವಿ ಸ್ಮರಿಸಿಕೊಳ್ಳುತ್ತಾನೆ.

ಮುಕ್ಕು ಮುಕ್ಕಿಗೆ ಬೀಸುಗಲ್ಲ ಜೊತೆ ಹಾಡುಗಳ
ಸುರಿ ಮಳೆಯು ಜನಪದವ ಪ್ರೇರಿಸುತಿರೆ

ಊರಗುಡ್ಡ, ಗುಡ್ಡದ ಬದಿಯಹಳ್ಳ, ಆಲದಮರ, ಎಲೆತೋಟ, ಗುಡಿ ಕಟ್ಟೆ, ಮಾದರ ಕೇರಿ, ಕೆಮ್ಮರಡಿ ಈ ಒಂದು ನೋಟ ನಮ್ಮ ಯಾವುದೇ ಗ್ರಾಮೀಣ ಪರಿಸರದ ಚಿತ್ರಣ. ಇಂಥ ಒಂದು ಹಳ್ಳಿಯ ಗುಂಡುಗಜಗ, ಚಿಣ್ಣಿಕೋಲಿ, ಬೆಲ್ಲವತ್ತದ ಕಾಯಬುಗುರಿ, ಕಣ್ಣುಮುಚ್ಚಾಲೆ ಆಟ — ಇವೇ ಮುಂತಾದವು ಕವಿಯ ಹೃದಯದಲ್ಲಿ 'ನಾದ'ವನ್ನು

[1]ಭಾವಜೀವಿ ಪು. ೨

ಬಿಚ್ಚಿದ ಪರಿಕರಗಳು. ಲಮಾಣಿತಾಂಡೆ, ಅವರ ಹೆಂಗಸರ ಉಡುಪು, 'ಗಿಲ್‌ಗಿಲ್' ಸದ್ದು 'ಏ ಪಡಿರೆ' ಪಲ್ಲವಿ, ಸುಡುಗಾಡಸಿದ್ಧ, ಕಮ್ಮಾರ ಮಾರಪ್ಪನ ಕುಲುಮೆ ತಿದಿ, ಕುಂಬಾರ ಮಲ್ಲಣ್ಣನ ತಿಗುರಿ, ಅವನ ಪಂಚಿನ ಮನೆ, ಹೀಗೆ ಎಲ್ಲರನ್ನೂ ಎಲ್ಲವನ್ನೂ ಸ್ಥಿರವಾಗಿ ಸೆರೆ ಹಿಡಿಯುವ ಕವಿಯ ಮನಸ್ಸು ದೀನದಲಿತರಿಗಾಗಿ ಸ್ಪಂದಿಸುವ ರೀತಿ ಅಪರೂಪದ್ದಾಗಿದೆ. ಕವಿಯ ಚಿಂತನ ಶೀಲ ಮನಸ್ಸಿನಲ್ಲಿ ಮೂಡಿದ ಅನುಕಂಪ, ಕರುಣೆ ಅವು ಒಂದು ಕಾಲಕ್ಕೆ ಮಾತ್ರ ಸೀಮಿತವಾಗಿರುವುದಿಲ್ಲ. ಅಥವಾ ಯಾವುದೇ ರಾಜಕೀಯ ಗಿಮಿಕ್‌ಗೂ ತಿರುಗು ವುದಿಲ್ಲ. ಜೀವನದ ಮೂಲಭೂತವಾದ ಮಾನವೀಯತೆಯ ಸ್ಪಂದನೆಯನ್ನು ಅಲ್ಲಿ ಗುರುತಿಸಬಹುದು.

ಕೆರವು ಹೊಲಿಯುವ ದೀನ ದಲಿತ ಮಾದರ ದುರಗ
'ಮುಟ್ಟಬೇಡಿರಿ ತಂದೆ' ಎಂಬ ನುಡಿಗೆ—
ನನ್ನೆದೆಯ ಕಸವಿಸಿಯ ಹೇಳತೀರದು ಆಗ

ಹೀಗೆ ಬದುಕಿನ ಎಲ್ಲ ಸಂಬಂಧಗಳಲ್ಲೂ ತನ್ನನ್ನು ತಾನು ತೊಡಗಿಸಿಕೊಂಡ ಕವಿ ಅಂಥ ವ್ಯಕ್ತಿ ವಸ್ತುಗಳನ್ನು ರಮ್ಯವಾಗಿ ವರ್ಣಿಸಿ ತೃಪ್ತನಾಗದೇ, ಅವುಗಳಿಗೆ ತನ್ನ ಪ್ರತಿಕ್ರಿಯೆ ವ್ಯಕ್ತ ಮಾಡುತ್ತ ಮಾನವೀಯ ಸಂಬಂಧಗಳಲ್ಲಿ ಕಂಡುಬರುವ ಅಸಹಜತೆ, ಅಮಾನುಷತೆ ಗಳಿಗಾಗಿ ಕಸಿವಿಸಿಗೊಂಡು ಕೊರಗುವುದು ಕವಿಗೂ ಜನಪದ ಬದುಕಿಗೂ ಆಗಿರುವ ಸಾಮ ರಸ್ಯವನ್ನು 'ಏಕಜೀವ'ವನ್ನು ತೋರಿಸುತ್ತದೆ. ಇಂಥ ಪ್ರತಿಕ್ರಿಯೆಗಳು ಬದುಕಿನ ಕ್ರಮ ರೀತಿ-ನೀತಿಗಳ ಅಸಹಜತೆಗಳಿಗೆ ಕವಿ ತೋರುವ ಕಾಳಜಿಯಿಂದಾಗಿ ಆತನ ಕಾವ್ಯದಲ್ಲಿ ಅರ್ಥವಂತಿಕೆ ಅರಳುತ್ತದೆ.

ಕೆಲಸಿಗರ ಕೆಂಚನ ಮೊಂಡುಗತ್ತಿಯ ಭಯ ಇವನಿಗಿದ್ದರೂ ಅವನ ಮೇಲೆ ಅಳಿಸ ಲಾಗದ ಅಕ್ಕರೆ. ದನಕಾಯುವ ನಿಂಗನ ಕೊಳಲ ಇಂಪು, ಅವನ ಕಿಸೆತುಂಬ ಇದ್ದ ಕಾರಿ, ಬೋರೆಯ ರುಚಿ, ಹಳ್ಳದ ದಂಡೆಗೆ ಎಣ್ಣೆ ಉಣ್ಣುತ್ತ ಇದ್ದ ವೀರಗಲ್ಲು, ಮಾಸತಿಕಲ್ಲು, ಅಪ್ಪ ಓದುತ್ತಿದ್ದ 'ಅನುಭವಾಮೃತ'ದ ನಾದಲಹರಿ, ಜಂಗಮನ ತಂಬೂರಿಯಲ್ಲಿ ಮೂಡಿದ ಮುಪ್ಪಿನ ಷಡಕ್ಷರಿಯ ಹಾಡು ಸಾರುವಯ್ಯಗಳ

ಸುವ್ವಿ ಬಾ ಚೆನ್ನಯ್ಯ ಸುವ್ವಿ ಬಾ ಲಿಂಗಯ್ಯ

ಹೀಗೆ ಎಲ್ಲದೂ ನೆನಪಿನ ರೀಲಿನಲ್ಲಿ ಮುದ್ರಿತ ಚಿತ್ರ, ಅದೆಲ್ಲ 'ಇರುಳಿನಲಿ ಕಂದೀಲ ಬೆಳಕಿ ನಲಿ ಬರುವಂತೆ' ಮರಳಿ ಮೂಡಿ ಕರೆಯುತ್ತದೆ. ಸಾರುವಯ್ಯಗಳ ವೇಷ ಭೂಷಣ, ಕೈಯಲ್ಲಿ ಕೊಡೆಹಿಡಿದು, ಕಂದೀಲ ಬೆಳಕಿನಲ್ಲಿ ಅವರು ಹಾಡುತ್ತ ಬರುವ ಈ ಪ್ರತಿಮೆ ಕಣವಿಯವರ ಜಾನಪದ ಪ್ರಜ್ಞೆಗೆ, ಅವರ ರೂಪಣಶಕ್ತಿಗೆ ಸಾಕ್ಷಿಯಾಗಿದೆ. ಸಾರುವಯ್ಯ ಬಂದರೆ ಹಳ್ಳಿಗರಿಗೆ ಆತ ಯಾವುದೋ ಲೋಕದಿಂದ ಬಂದ ವ್ಯಕ್ತಿಯಂತೆ ಅವನ ಹಾಡು, ನುಡಿ-ನಡೆ ಎಲ್ಲ ಒಂದುಕಡೆ ; ಕತ್ತಲು, ಕಂದೀಲ ಬೆಳಕು ಇನ್ನೊಂದು ಕಡೆ. ಜಾನಪದ ಪರಿಸರದ ವಿವಿಧ ವ್ಯಕ್ತಿ, ಚಿತ್ರ, ವಸ್ತುಗಳಿಗೆ ಪ್ರತೀಕವಾಗಿ ಬರುವ ಕಂದೀಲು ತುಂಬ

ಸಾರ್ಥಕವಾದ-ಬೆಳಕು-ನೆನಪು ಪ್ರಭಾವಳಿ ಅಗಣಿತ ಸ್ಮರಣೆ. ಹೀಗೆ 'ಇರುಳಿನಲಿ ಕಂದೀಲ ಬೆಳಕಿನಲ್ಲಿ ಬರುವಂತೆ' ಬರುವ ಬಾಲ್ಯದ ಅನುಭವ ಚಿತ್ರಣ ಚಲತ್ ಪ್ರತಿಮೆಯಾಗಿ ಕಾವ್ಯದ ಸಾಂದ್ರತೆಗೆ ಚೆಲುವು ತುಂಬುತ್ತದೆ; ಒಂದು ಜನಪದ ಪರಂಪರೆಯ ಮೂಲ ಘಟಕಕ್ಕೆ ಧ್ವನಿ ದಾನಮಾಡುತ್ತದೆ.

ಕೆಲವು ಜನಪದ ಆಡು ನುಡಿಗಳನ್ನು, ದಿನನಿತ್ಯದ ಬಳಕೆಯಲ್ಲಿರುವ ಶಬ್ದಗಳನ್ನು ಬಳಸಿ ಕಾವ್ಯವಸ್ತುವಿನ ವಿಡಂಬನೆಗೆ ವ್ಯಂಜಕತೆಯನ್ನು ಈ ಕವಿ ಎಷ್ಟು ಹದವಾಗಿ-ಅಷ್ಟೇ ತೀಕ್ಷ್ಣವಾಗಿ ತುಂಬುತ್ತಾನೆ ಎನ್ನುವುದು ಸಹೃದಯನನ್ನು ಬೆರಗುಗೊಳಿಸುತ್ತದೆ. ಕವಿತೆ ಆಧುನಿಕ ಬದುಕಿನ ಸಂಕೀರ್ಣತೆಯನ್ನು ಬಿಚ್ಚಿ ಹೇಳುವ ಪ್ರಸಂಗದಲ್ಲಿ ಶಿಷ್ಟ ರಚನೆಯ ಶೈಲಿಗೆ ತುಡಿದರೂ ಅದರ ನಾಡಿಯ ಮಿಡಿತಗಳಲ್ಲಿ ಜಾನಪದ ಜೀವತಂತು ಸಮರಸಗೊಳ್ಳುತ್ತದೆ. ಬರುವ ಹೊಸ ವರುಷದ ಸ್ವಾಗತಮಾಡುತ್ತ 'ವಿಶ್ವಾವಸು'ವನ್ನು ವ್ಯಕ್ತೀಕರಣಗೊಳಿಸಿ 'ನಾವು ಹಸಿದಿದ್ದೇವೆ.[1] ಏನೇನು ಬಡಿಸುತ್ತೀ' ಎಂದು ಕೇಳುವಾಗ, 'ಹೆರಚಿ-ಪಚಡಿ' 'ಕುಟ್ಟಿ ಚಟ್ನಿ', 'ಕುದಿಸಿ ಗುಗ್ಗರಿ' 'ಹಪ್ಪಳ' 'ಬಾಳೆಲೆ' ಪದಗಳ ದ್ವಂದ್ವಾರ್ಥ ವಸ್ತುವಿನ ವ್ಯಾಪ್ತಿಯನ್ನು ಬೆಡಗಿಸುವ ಹೊಂಚುಹಾಕುತ್ತವೆ.

ದಾಸರ-ದರ್ಶನದಲ್ಲಿ 'ದಾಸರೆ ನಾವು ನರದಾಸರು'[2] ಎನ್ನುವ ಅಭಿವ್ಯಕ್ತಿ ಶಿಷ್ಟವಾದರೂ ಜಾನಪದ ಪರಂಪರೆಯ ದಾಸರ ಪರಿಶುದ್ಧ ಹೃದಯದಿಂದ ವಂಚಿತರಾದ ನಾವೂ ದಾಸರೇ. ಆದರೆ ನಾವು 'ನರದಾಸರು' ಎನ್ನುವಾಗಿನ ಕಟಕಿ ತಟ್ಟನೆ ನಮ್ಮ ಒಳಗನ್ನು ಎಚ್ಚರಿಸುತ್ತದೆ. ಅದರಂತೆ ದಾಸರ 'ರಾಗಿ ತಂದೀರಾ' ಎನ್ನುವ ರಚನೆಯಲ್ಲಿ ಬರುವ. 'ರಾಗಿ' ಶಬ್ದಕ್ಕ ಶ್ಲೇಷೆಯ ಅಂಜನ ಲೇಪಿಸಿ ಆ 'ರಾಗಿ'ಯನ್ನು ನಾವಿನ್ನೂ ಬಿತ್ತಿ ಬೆಳೆದಿಲ್ಲ 'ರಾಗಾನುರಾಗಗಳ ಬಲೆಯಲ್ಲಿ ಸಿಕ್ಕು ಕಂಗಾಲರಾಗಿ' ಕೂತಿದ್ದೇವೆ ಎನ್ನುವಲ್ಲಿ ನಮ್ಮ ಸಮಗ್ರ ಜನಜೀವನ ಆವೇಷಗಳಲ್ಲಿ ಮುಳುಗಿ ವಿಷಣ್ಣತೆಯನ್ನು ಸೋಲನ್ನು ಅನುಭವಿಸುತ್ತಿದೆ ಎನ್ನುವುದರ ಧ್ವನಿ ಸ್ಪಂದಿಸುತ್ತಿದೆ, ಕಾಲು ಕೆದರಿ ಯುದ್ಧ ಬಯಸುವ ಹಿಂದಿನ ಇತಿಹಾಸವನ್ನು ಮರೆತು ರಾಷ್ಟ್ರವೋದರ ಹುಚ್ಚು ಸಾಹಸವನ್ನು ವಿಡಂಬಿಸುವಾಗ ಕವಿ ಬಳಸುವ ಜನಪದ ನುಡಿಗಳು ತಮ್ಮ ತಾಜಾ ಕಸುವಿನಿಂದಾಗಿ ಭಾವದ ಮೊನಚಿಗೆ ಸಾಣೆ ಹಿಡಿಯುತ್ತವೆ.[3] 'ಅಡ್ಡಾತಿಡ್ಡ ಗಡಿ ಕೊರೆ' 'ಹುಡುತುತು' 'ಆಡಾಡ್ತ ಅಡವಿ ಬಿಟ್ಟ' 'ಪ್ಯೆ ಹುಳೀ ಬಡಿ' 'ಕೊಂಡವಾಡೆ' 'ಛೀ ಹಚಾ' ಹೀಗೆ ಅದೊಂದು ಹುಚ್ಚು ನಾಯಿಯ ಹಂಬಲ ಎನ್ನುವುದನ್ನು ಈ ಪದಗಳ ಕಟಕಿ ಬಿಚ್ಚಿ ತೋರಿಸುತ್ತದೆ. ಗಾಂಧೀಜಿಯವರ ವ್ಯಕ್ತಿತ್ವದ ಸಿದ್ಧಿ ಪರಿಶುದ್ಧಿಯನ್ನು ಹೇಳುವುದಕ್ಕೆ ಬಳಸುವ ಮಾತು ಉದ್ದಕ್ಕೂ ಶಿಷ್ಟಪದಗಳಿಂದ ತುಂಬಿದ್ದರೂ, ಅವರೊಬ್ಬ

---

1 'ಹೊಸ ವರುಷದ ಸ್ವಾ(ಸ್ವ)ಗತ ಭಾಷಣ': ಎರಡುದಡ. ಪು. ೯

2. 'ದಾಸರ ದರ್ಶನ': ಎರಡು ದಡ. ಪು. ೧೨–೧೩.

3. 'ಯುದ್ಧ': ಎರಡು ದಡ. ಪು. ೧೫.

ಪಂಚೇಂದ್ರಿಯಗಳನ್ನು-ಅವುಗಳ ಉಲ್ಬಣ ಉನ್ಮಾದವನ್ನು ಗೆಲಿದ ಉನ್ನತ ಸಾತ್ವಿಕ ಸತ್ಯಾಗ್ರಹಿ ಎನ್ನುವುದನ್ನು ಸೂಚಿಸಲು ಬಳಸುವ ಜಾನಪದ ಶಬ್ದ ಚಿತ್ರದಲ್ಲಿ ಒಂದು ಹೊಚ್ಚ ಹೊಸ ಪ್ರತಿಮೆಯೇ ಸೃಷ್ಟಿಗೊಳ್ಳುತ್ತದೆ. 'ಹೆಡಮುರಿಗೆ ಬಿಗಿದ ಹಾವ ಕೊಲ್ಲದೆ, ವಿಷವ ಕಕ್ಕಿಸಿ ಹುತ್ತ ಸೇರಿಸಿದ ಗಾರುಡಿಗ'[1] ಎನ್ನುವಲ್ಲಿ ಏಕ ಕಾಲಕ್ಕೆ ನಡೆಯುವ ಕ್ರಿಯೆಗಳ ತೀಕ್ಷ್ಣ ನಿರೂಪಣೆಯನ್ನು ಮತ್ತೆ ಮತ್ತೆ ಮೆಲುಕು ಹಾಕಬೇಕಾಗುತ್ತದೆ. ಹೆಡಮುರಿಗೆ ಬಿಗಿದ ಹಾವು ಆ ವ್ಯಕ್ತಿಯನ್ನು ಬಿಗಿದು ಮುಕ್ಕುವ ಆಮಿಷ, ಆಸೆ, ಉನ್ಮಾದ, ಕಾಮಗಳಿಗೆ ಪ್ರತೀಕವಾದರೆ ವಿಷವನ್ನು ಕಕ್ಕಿಸುವ, ಮತ್ತೆ ಹುತ್ತಕ್ಕೆ ಸೇರಿಸುವ ಕ್ರಿಯೆಗಳು ಸಂಯಮ-ನಿಗ್ರಹಗಳಿಗೆ ಸಂವಾದಿಯಾಗಿದೆ.

ನಿಸರ್ಗದ ಚೆಲುವು ಕವಿಯ ಮನಸ್ಸಿನ ಮೇಲೆ ಬೀರುವ ಪರಿಣಾಮ ಪ್ರಭಾವಗಳನ್ನು ಕಣವಿ ಪ್ರತಿಸ್ಪಂದಿಸುವ ರೀತಿ ಗಮ್ಮತ್ತಿನದಾಗಿದೆ. ನಿಸರ್ಗದ ಜೊತೆ ಸಲುಗೆ ಸದರಗಳನ್ನು ಬೆಳೆಸಿಕೊಳ್ಳುವ ಆತ್ಮೀಯ ಮನೋಭಾವದಿಂದ ಕವಿ ಗಿಡಮರಗಳ ಜೊತೆ ಮಾತಾಡಿದಂತೆ ಭಾಸವಾಗುತ್ತದೆ. ಅದಕ್ಕೆ ಕಾರಣ ಆತ ಅಲ್ಲಿ ಇಲ್ಲಿ ಬಳಸುವ ಒಂದೊಂದು ಜಾನಪದ ಆಡುನುಡಿ. ಸ್ಥಿರವಾಗಿ ಕೊಡೆಹಿಡಿದಂತೆ ನಿಂತ ಮಾವನ್ನು ಕವಿ ಸಂಬೋಧಿಸುವ ರೀತಿ: ಕಾಮ ಬಿಸಿಲಲ್ಲಿ ನಡೆದುಬರುತ್ತಾನೆ. ಆಗ ಮಾವು ಚಿಗುರು ಉಟ್ಟಿದೆ. ಹೂವ ತೊಟ್ಟಿದೆ. ಅದನ್ನು ಕಂಡ ಕವಿ 'ಮಾವು ಹೊರಟಿದೆ ಎತ್ತರೀ' ಎಂದು ಕೇಳಿದಾಗ ಅತನ ಸಂಬೋಧನೆಯಲ್ಲಿ ಸಮಗ್ರ ನಿಸರ್ಗವನ್ನೇ ಪ್ರಶ್ನಿಸುವ ವ್ಯಾಪಕ ಧ್ವನಿ ಅನುರಣನಗೊಳ್ಳುತ್ತದೆ.

ಮುಗಿಲನ್ನು ಗಂಡು, ನೆಲವನ್ನು ಹೆಣ್ಣು ಎಂದು ಪರಿಭಾವಿಸಿ ಬಣ್ಣಿಸುವಲ್ಲಿ ಸಂಜೆಯ ಸೂರ್ಯನ ಹೊಂಗಿರಣ ಏಕಕಾಲಕ್ಕೆ ನೆಲಮುಗಿಲನ್ನು ಬಾಚಿ ನಿಲ್ಲುವ ಕ್ರಿಯೆ ಹುದುಗಿದೆ; ಸೀಮಾತೀತವಾದ ವಸ್ತುಗಳೆರಡು ಕವಿಯ ಪರಿಕಲ್ಪನೆಯ ಪರಿಧಿಗೆ ಸಿಲುಕುತ್ತವೆ. ಆಗ ಸೂರ್ಯ ಬಾನಿನ ಹೆಗಲಿಗೆ 'ಜರದಸೆಲ್ಲೆ' ಇಳೆಗೆ 'ಇಳಕಲ್‌ಸೀರೆ ಹೊದಿಸುತ್ತಾನೆ–ಉಡಿಸುತ್ತಾನೆ. ಈ ಉಡುಗೊರೆ ಉತ್ತರ ಕರ್ನಾಟಕದ ಜಾನಪದ ವೇಷ ಭೂಷಣಗಳಲ್ಲಿ ಮಂಗಲ ಸೂಚಕವಾಗಿದ್ದು, ಬದುಕಿನ ಸ್ವರೂಪಕ್ಕೆ ಶುಭದ ನಾಂದಿ ಹಾಡುವ ರೀತಿಯಲ್ಲಿ ವರ್ಣಿತವಾಗಿವೆ. ಮಗುವಿನ ನಗು 'ಸಕ್ಕರೆಹಳುಕು.' ಹುಣ್ಣಿಮೆ ರಾತ್ರಿಯಲ್ಲಿ ಜಗತ್ತು 'ಹಾಲಿನ ಹೊಂಡ,' ನೀಲಕೊಡೆ ಎಲ್ಲರ ತಲೆಮೇಲೆ ಇರುವಾಗ 'ಏರಿಸಿಹಿಡಿ, ನಡೆ ಯಾರಭಿಡೆ' ಈ ಮುಂತಾದ ಸನ್ನಿವೇಶಗಳಲ್ಲಿ ಬರುವ ದಿನನಿತ್ಯದ ಬಳಕೆಯ ನುಡಿಗಳ ಹೊಂದಿಕೆ ಆ ಪರಿಸರದ ಸಹಜತೆಗೆ ಪೋಷಕವಾಗುತ್ತದೆ.

ಆಧುನಿಕ ಪ್ರಜ್ಞೆ ಸಮಕಾಲೀನಜೀವನದ ಸಂಕೀರ್ಣತೆಗಳನ್ನು ತನ್ನಕಾವ್ಯದಲ್ಲಿ ವ್ಯಕ್ತಗೊಳಿಸುವ ರೀತಿಯಲ್ಲೂ ಈ ಕವಿ ಬಳಸುವ ಆಡುಮಾತಿನ ಕಸುವು ಹೇಗೆ ಕವಿಯ ಸೃಷ್ಟಿ ಕ್ರಿಯೆಯಲ್ಲಿ ಸಮರ್ಥವಾಗಿ ಬರುತ್ತದೆ ಎನ್ನುವುದಕ್ಕೆ 'ಮುಂಬೈ' ನಗರವನ್ನು ಕುರಿತ

1. 'ಗಾಂಧಿ': ಎರಡು ದಡ, ಪು, ೪೪,

ನಾಲ್ಕು ಸಾಲು ಸಾಕ್ಷಿಯಾಗಿವೆ. ಮನೆ, ಗೂಡು, ಜನ ಜನ. 'ಹೊರಚೆಲ್ಲಿದೆ' ರೋಡು. ರೈಲು ಬಸ್ಸಿನ ರೆಕ್ಕೆಗಳ ಮೂಲಕ ವೇಳೆಯನ್ನು 'ಮುಕ್ಕು'ತಿಹನು. ಮುಂಬೈಯಲ್ಲಿ 'ಇವನು ಹೀಗೆ ಬೇಳೆ ಬೇಯಿಸು'ವನು. ಇವನು ಯಾರು? ಎನ್ನುವಲ್ಲಿ ಅಮೂರ್ತ ಶಕ್ತಿಯೊಂದರ ಕಡೆಗೆ ನಮ್ಮ ಗಮನ ಸೆಳೆಯುವ ಮಾರ್ಮಿಕ ಧ್ವನಿ ಪ್ರಶ್ನೆಯಾಗಿ ನಿಲ್ಲುತ್ತದೆ. ಕವಿಯ ಅನುಭೂತಿಗೂ ಸಂಕೇತವಾಗುತ್ತದೆ.

ಕನ್ನಡ ಭಾಷೆಯ ಜಾಯಮಾನವನ್ನೂ, ಸ್ವರೂಪ-ಸತ್ತ್ವವನ್ನು ಕಸುವು-ಕಮ್ಮಕ್ಕುಗಳನ್ನು ಕಣವಿಯವರು ಅರಿತುದರಿಂದಲೇ ಅವರ ಶೈಲಿಯಲ್ಲಿ ಒಂದು ಸಹಜವಾದ ಗಾಡಿ, ಮನ ಸೆಳೆಯುವ, ಅಂತಃಕರಣವನ್ನು ಕಕಗಿಸುವ ಮೋಡಿ ಒಡಗೊಂಡು ಬರುತ್ತವೆ. 'ಚಿನ್ನಗನ್ನಡದ ಅಕ್ಕಸಾಲಿಗರು ಅವರು'[1] ಎನ್ನುವ ಮಾತು ಎಷ್ಟು ಸತ್ಯವೋ ಅಷ್ಟೇ ಸತ್ಯವಾದದ್ದು ಅವರು ಕನ್ನಡದ 'ಏಕತಾರಿ'ಯಲ್ಲಿ ಬದುಕಿನ ಸಪ್ತಸ್ವರಗಳನ್ನು ಮೇಳವಿಸಿ ಮಿಡಿಯುವ ಕುಶಲ ಕಲೆಗಾರ. ಕನ್ನಡನುಡಿಯ ಬೆಡಗು, ಛಂದಸ್ಸಿನ ಲಯ, ಹಾಡಿನ ನಾದ ಮಾಧುರ್ಯಗಳ ರಸಾಯನ ಕಣವಿಯವರ ಕಾವ್ಯ. ನಿರೂಪಣೆಯಲ್ಲಿ ಲಯವಿದೆ. ಆದರೆ ಅದು ಅರ್ಥಸಂಗೀತಕ್ಕೆ ದಾರಿಮಾಡಿಕೊಡುವಂಥದು. ಮೂರು, ನಾಲ್ಕು, ಒಮ್ಮೊಮ್ಮೆ ಐದು ಮಾತ್ರೆಯ ಗಣಗಳು ಇವರ ರಚನೆಯಲ್ಲಿ ಮೂಡುತ್ತವೆ. ಆದರೆ ಪ್ರತಿ-ಪಾದದ ಒಳಗೆ, ಅರ್ಥ, ಧ್ವನಿ, ಚಿತ್ರ, ಪ್ರತಿಮಾ ಸೃಷ್ಟಿಗೆ ಅನುಗುಣವಾಗಿ ಅವು ತಾಳ ಹಾಕುತ್ತವೆ. ಇದರಿಂದಾಗಿ ಕಣವಿಯವರ ಕಾವ್ಯ ಅರ್ಥ ಸುಭಗತೆಯಿಂದ ಕೂಡಿ, ಶೈಲಿಗೆ ನವ್ಯ ಪಾಕದ ಹದವನ್ನು ತುಂಬುವಲ್ಲಿ ಯಶಸ್ವಿಯಾಗುತ್ತದೆ.

ಜಾನಪದ ಭಾಷೆಯ ಬೆಡಗು ಮೋಜುಗಳಿಗೆ ಮಾರುವೋದ ಕವಿ ಒಮ್ಮೊಮ್ಮೆ ಮರವೆಗೆ ಸಿಲುಕಿದ್ದೂ ಉಂಟು. ಕೆಂಡದ ರೂಪಣ ಶಕ್ತಿ 'ನಿಗಿನಿಗಿ' ಕ್ರಿಯೆಯಲ್ಲಿ ವ್ಯಕ್ತವಾಗುತ್ತದೆ. 'ವಿಕಾರಿ'ಯಲ್ಲಿ 'ದೇವತಾ ಪೃಥಿವಿ'ಯನ್ನು ಕುರಿತು ಹೇಳುವಾಗ 'ಅಗ್ನಿಗೆಂಡ'ವ ಹಾಯ್ದು[2] ಎನ್ನುವ ಪದಪ್ರಯೋಗ 'ಯುಗ ಯುಗದ ವಿಸ್ಮೃತಿಯ' ಮುಂದೆ ತಟ್ಟನೆ 'ಬಾವಿ' ಶಬ್ದ 'ಹಕ್ಕಿ ಧ್ವನಿ' 'ಮೇರೆಗೆ ಮರಿಯಿಕ್ಕಿರುವ ಶೂನ್ಯ ಮಂಡಲ' 'ಊರು ಕೇರಿಯ ಹೊಕ್ಕು ನೀರಿನೋಘ' 'ಒಂದೊಂದೂ ಪ್ರಸ್ಫುಟ' ಈ ಕಡೆಗಳಲ್ಲೆಲ್ಲ ಭಾವದ ಮೆರಗಿಗೂ ಶಬ್ದದ ನಿರುಗೆಗೂ ಮೈತ್ರಿ ಬೆಳೆಯದೆ 'ಕೆಂಡ' 'ಬಾವಿ' 'ಹಕ್ಕಿ' 'ಇಕ್ಕಿರುವ' 'ಹೊಕ್ಕು' 'ಒಂದೊಂದೂ' ತಬ್ಬಲಿಯಾಗಿ ನಿಲ್ಲುತ್ತವೆ. ಅಥವಾ ಹಿಂದೆ ಮುಂದೆ ಬರುವ ಶಬ್ದಗಳ ಭಾರಕ್ಕೆ ಅಂಕುಡೊಂಕಾಗುತ್ತವೆ. ಹಲವು ಹತ್ತಾರು ವಸ್ತುಗಳು ಚಿತ್ತದಲ್ಲಿ ಅಚ್ಚೊತ್ತಿದಾಗ ಕನಸು ಗುನುಗುನಿಸಿ ಪ್ರೇರಿಸಿದಾಗ ಉಂಟಾಗುವ ರಭಸದಲ್ಲಿ ಕೆಲವು ಬೆಣಚುಗಲ್ಲು ಆಚೆ ಈಚೆಯ ದಡಗಳಲ್ಲಿ ಒಂಟಿ ಒಂಟಿಯಾಗಿ ಚೆಲ್ಲಬಹುದು; ಆದರೆ ಪ್ರವಾಹಕ್ಕೆ ಕುಂದಿಲ್ಲವಲ್ಲ.

---

'ಮುಂಬೈ': ಎರಡು ದಡ: ಪುಟ ೫೪.

1. 'ಮಣ್ಣಿನ ಮೆರವಣಿಗೆ' ಮೆರವಣಿಗೆಯ ಮುಂದೆ ಮಶಾಲು-ಗೌರೀಶ ಕಾಯ್ಕಿಣಿ ಪು. ೫೪,

2 ವಿಕಾರಿ: ಮಣ್ಣಿನ ಮೆರವಣಿಗೆ ಪು. ೩೫,

ಬೆಣಚುಗಲ್ಲಿಗೂ ರಂಗೋಲಿ ಹಿಟ್ಟಾಗುವ ಭಾಗ್ಯ ಇದ್ದೇ ಇದೆ. ಸಹೃದಯನಾದವನು ಮುಖ್ಯ ಪ್ರವಾಹಕ್ಕೆ ಗಮನ ಕೊಟ್ಟಾಗ ಈ ಕವಿ ಆಡುನುಡಿಯ ಅತಿ ಮಮತೆಯಿಂದ ಇಂಥ ಮೆರವೆಗೆ ಒಳಗಾಗಿರುವ ಸಾಧ್ಯತೆ ಕಂಡುಬರುತ್ತದೆ.

'ಅಂತರಂಗದ ಸೊಲ್ಲು' ಸೇನಾಧಿಪತಿಯಾಗಿ ಬಾಳಿನ ಸಂಘರ್ಷವನ್ನು ಗೆಲ್ಲಬೇಕು ಎಂದು ಹೇಳುವ ಕವಿಗೆ ಇಂದಿನ ಪ್ರಪಂಚದ ಸಂಕೀರ್ಣವಾದ ಪ್ರಗತಿ ಮಾನವ ಕುಲವನ್ನೇ ದುರಂತದ ಅಂಚಿಗೆ ತಂದಿರಿಸಿದ ಪ್ರಜ್ಞೆಯಿದೆ.

ಮಹಾಸಾಗರದ ಮಧ್ಯದಲ್ಲಿ ಉದ್ದ ನಿಂತು ವಿಷಧೂಮದ ವಿಜಯಸ್ತಂಭದ ವಿನಾಶಕಾರೀ ಕೃತಿಗೆ ಕಾರಣವಾದ 'ಮಾನವ ಶುದ್ಧ ಹುಂಬ'[1]. ಇವನು ಮೆದುಳಿನ ಮೇಲೆ ಬೆಳೆಸಿಕೊಂಡಿರುವ 'ನಾಯಿ ಕೊಡೆ'. 'ನಾಯಿಕೊಡೆ' ಒಂದು ಸಾಮಾನ್ಯ ಶಬ್ದ ಮತ್ತು ಅತಿ ನಿರರ್ಥಕ ವಸ್ತು. ಅದರ ಬೆಳೆ ಮಾನವನ ಬದುಕಿನ ದುರಂತಕ್ಕೆ ಸಂಕೇತ. ಮಾನವ ತನ್ನ ಬುದ್ಧಿಯ ಮೂಲಕ—ಸಾಧನೆಗಳ ಮುಖಾಂತರ ಏನೆಲ್ಲ ಪ್ರಗತಿ ವಿಕಾಸ ಸಾಧಿಸಿದ್ದರೂ ಅವನು ನೆಟ್ಟಿದ್ದ ವಿಷಧೂಮದ ವಿಜಯಸ್ತಂಭ 'ನಾಯಿಕೊಡೆ'ಯ ಬೆಳೆಯಷ್ಟೇ ಸತ್ತ್ವಶೂನ್ಯ-ಅರ್ಥಶೂನ್ಯ. ಸನ್ನಿವೇಶದ ವಿಷಣ್ಣತೆ ಘಟನೆಯ ಗಾಂಭೀರ್ಯದ ಹಿನ್ನೆಲೆಯಲ್ಲಿ 'ನಾಯಿಕೊಡೆ' ಚಿಂತನೆ ಮಾಡಿದಷ್ಟೂ ಅರ್ಥದ ಪದರುಗಳನ್ನು ಪ್ರತಿಮೆಯ ದೃಶ್ಯಾವಳಿಗಳನ್ನೂ ಬಿಚ್ಚಿಕೊಳ್ಳುತ್ತ ಹೋಗುತ್ತದೆ. ಇಂಥ ಅಪೂರ್ವ ವಸ್ತುರಚನೆಗಳಿಂದಾಗಿ ಕಣವಿಯವರ ಕಾವ್ಯ ಮತ್ತೆ ಮತ್ತೆ ಅಧ್ಯಯನಕ್ಕೆ ಆಹ್ವಾನಿಸುತ್ತದೆ, ಇದೇ ಈ ಕವಿಯ ಪ್ರಜ್ಞೆಯ ವಿಲಕ್ಷಣತೆ. ಏಕೆಂದರೆ ಪ್ರಜ್ಞೆ ಎನ್ನುವುದು ಒಂದು ಸದಾ ಜಾಗರ, ವ್ಯವಧಾನ, ಸಮ್ಮುದ, ಸಮ್ಮೋಹನ ಭಾವಗಳಿಂದ ಕೂಡಿದ ನಿರೀಕ್ಷಣ, ಚಿಂತನ. ಕವಿ ತೆರೆದ ಮನಸ್ಸಿನಿಂದ ಮೈಗೂಡಿಸಿಕೊಳ್ಳುವ ತನ್ನ ಜಾನಪದ ಪರಂಪರೆ, ಸಮಕಾಲೀನ ಬದುಕನ್ನು ಇಡಿಯಾಗಿ ಪರಿಭಾವಿಸುವ ಪರಿವೀಕ್ಷಿಸುವ ಸಂವೇದನಾಶೀಲ ಸಮಷ್ಟಿದೃಷ್ಟಿ, ಕಾವ್ಯ ಪ್ರಜ್ಞೆಗೆ ಸೌಂದರ್ಯ ದರ್ಶನದ ವಿನ್ಯಾಸ ತುಂಬುವ ಉನ್ನತ ಅಂಶಗಳಾಗಿವೆ. ಕಣವಿಯವರ ಕಾವ್ಯ ನಿರಂತರವೂ ಜಾನಪದ ಪ್ರಜ್ಞೆಯ ಕೇಂದ್ರ ಬಿಂದುವನ್ನು ತನ್ನ ಕಾವ್ಯದ ನೆಲೆಗಟ್ಟನ್ನಾಗಿ ಪಡೆದು ತಾನೇ ತಾನಾಗಿ ಹಿಗ್ಗಿ ಅಖಂಡ ಚಲುವಿನ ಸೃಷ್ಟಿಗೆ ಹೊಂಚು ಹಾಕುತ್ತದೆ.

ಟಿ. ಎಸ್. ಈಲಿಯಟ್ ಅವರ ಮಾತು ಈ ದಿಸೆಯಲ್ಲಿ ಗಮನಾರ್ಹ

The poetry of the peoble takes its life from the people's speach and in turn gives life to it, and represents its highest point of consciousness, its great power and its most delicate sensibility

ಜನತೆಯ ಕಾವ್ಯವು ಆಡುನುಡಿಯಿಂದ ತನ್ನ ಹುಟ್ಟನ್ನು ಪಡೆದು ಪುನಃ ಅದಕ್ಕೆ ಜೀವ

---

1 ಮಣ್ಣಿನ ಮೆರವಣಿಗೆ: 'ಜೀರ್ಣೋದ್ಧಾರ' ಪು. ೨೧

ದಾನ ಮಾಡುತ್ತದೆ. ಅದು ಪ್ರಜ್ಞೆಯ ಉದಾತ್ತ ಬಿಂದುವನ್ನು ಅದರ ಅದ್ಭುತ ಶಕ್ತಿ ಮತ್ತು ಸೂಕ್ಷ್ಮತಮ ಸಂವೇದನಾಶೀಲತೆಗಳನ್ನು ಪ್ರತಿನಿಧಿಸುತ್ತದೆ. ಕಣವಿಯವರ ಕಾವ್ಯ ಜನತೆಯ ಕಾವ್ಯವಾಗಿರುವುದು ತನ್ನ ಜನಾಂಗದ ಪ್ರಾತಿನಿಧಿಕ ಸಂವೇದನಾಶೀಲತೆಗಳಿಂದಾಗಿ.

ಎಂ. ಎಚ್. ಕೃಷ್ಣಯ್ಯ

# ಕಣವಿಯವರ ಕಾವ್ಯ ಭಾಷೆ

ನವೋದಯ ಕಾವ್ಯದಿಂದ ನವ್ಯಕಾವ್ಯದವರೆಗೂ ಶ್ರೀ ಚೆನ್ನವೀರ ಕಣವಿಯವರು ಕವನಗಳನ್ನು ರಚಿಸಿದ್ದಾರೆ. ಅವರ ಕಾವ್ಯಭಾಷೆಯನ್ನು ಕುರಿತು ವಿಚಾರ ಮಾಡುವಾಗ, ಅವರ ಸಮಕಾಲೀನ ಮಿಕ್ಕ ಕವಿಗಳಿಗಿಂತಲೂ ಅವರ ಭಾಷೆ-ಶೈಲಿಯ ವೈಶಿಷ್ಟ್ಯವೇನು. ಕಾವ್ಯದಲ್ಲಿ ಅವರ ಮನೋಧರ್ಮ ಹೇಗೆ ವ್ಯಕ್ತವಾಗಿದೆ, ಕಾಲ ಕಾಲಕ್ಕೆ ಅವರು ನಡೆಸಿದ ಪ್ರಯೋಗಗಳು,—ಅಥವಾ ಅಭಿವ್ಯಕ್ತಿಯಲ್ಲಿ ಕಂಡುಬರುವ ಬದಲಾವಣೆ—ಪ್ರಜ್ಞಾ ಪೂರ್ವಕವಾಗಿ ಮಾಡಿದ್ದು ಮಾತ್ರವೇ, ಇಲ್ಲವೆ ಕಾವ್ಯದೃಷ್ಟಿಯೂ ಮನೋಧರ್ಮವೂ ಬದ ಲಾಗಿದೆಯೇ—ಈ ಹಲವಾರು ಪ್ರಶ್ನೆಗಳು ಕಾವ್ಯಾಭ್ಯಾಸಿಯನ್ನು ಕಾಡುತ್ತವೆ. ಕಲೆ-ಅಭಿ ವ್ಯಕ್ತಿಯ ದೃಷ್ಟಿಯಿಂದ ಒಂದೆರಡು ಅನಿಸಿಕೆಗಳನ್ನು ಇಲ್ಲಿ ಹೇಳಲಾಗಿದೆ.

ಸಾಮಾನ್ಯವಾಗಿ ಮಾತನಾಡುವಾಗ ಸಾಹಿತ್ಯವನ್ನು ಕಲೆಗಳಿಂದ ಹೊರತಾಗಿಸಿ ಹೇಳಿ ದರೂ ಸಾಹಿತ್ಯವೂ ಒಂದು ಕಲೆ, ಅದರ ಮಾಧ್ಯಮ ಭಾಷೆ ಎಂಬುದನ್ನು ಗಮನಿಸಿದಾಗ ರೂಢಿಯ ಕೆಲವು ವಿಚಾರಗಳು ಬೇರೆಯೇ ಅರ್ಥವ್ಯಾಪ್ತಿಯನ್ನು ಪಡೆಯುತ್ತವೆ. ತೀವ್ರ ಸಂವೇದನೆ ಅಭಿವ್ಯಕ್ತಿ ಪಡೆಯುವಲ್ಲಿ, ಮಾಧ್ಯಮದಿಂದ ಹೊರತಾದ ಅಮೂರ್ತ ಕಲ್ಪನೆ ಯಾಗಿದ್ದು ಅನಂತರ ರೂಪಧಾರಣೆ ಮಾಡುತ್ತದೆ ಎನ್ನುವಂತಿಲ್ಲ. ಏಕೆಂದರೆ ಒಂದೇ ವಿಚಾರ ಅನುಭವ ಅಥವಾ ಅನುಭೂತಿ ವಿಭಿನ್ನ ಕಲೆಗಳಲ್ಲಿ ಮೈದೋರಿದಾಗ ಅಲ್ಲಿ ಕೇವಲ ಮಾಧ್ಯಮದ ವ್ಯತ್ಯಾಸವಿದೆ ಎನ್ನಲಾಗದು. ಶಿಲ್ಪ, ಚಿತ್ರ, ಸಂಗೀತ, ಸಾಹಿತ್ಯ ಮೊದಲಾದ ಕಲೆಗಳು ಕಲ್ಪನೆಯ ನೆಲೆಯಲ್ಲಿಯೇ ತಮ್ಮ ತಮ್ಮ ಮಾಧ್ಯಮದೊಂದಿಗೆ ರೂಪ ಧಾರಣೆ ಮಾಡುತ್ತವಾದ್ದರಿಂದ ಅಭಿವ್ಯಕ್ತಿಯಲ್ಲಿ ಭಿನ್ನವಾಗಿರುತ್ತವೆ, ವೈವಿಧ್ಯಪೂರ್ಣ ವಾಗಿರುತ್ತವೆ ; ಅವುಗಳ ಉದ್ದೇಶವೂ ಸಾರ್ಥಕ್ಯವೂ ಬೇರೆ ಬೇರೆ ಬಗೆಯಾದದ್ದು ಎನ್ನ ಬಹುದು. ಕಲಾವಿದನಲ್ಲಿ ಬಣ್ಣ-ವಿನ್ಯಾಸಗಳಲ್ಲಿ ಕಲ್ಪಿತವಾಗಿ ವ್ಯಕ್ತವಾದ ಅನುಭವ ಹಾಗೂ ಸಂವೇದನೆಯನ್ನೆ ಸಂಗೀತಗಾರ ನಾದದ ಮೂಲಕ ವ್ಯಕ್ತಪಡಿಸುವ ಪ್ರಯತ್ನ ಮಾಡಿದರೆ, ಕವಿ ಶಬ್ದಾರ್ಥಗಳ ಮೂಲಕ ಭಾಷೆಯ ಮೂಲಕ—ಹೇಳಲು ಯತ್ನಿಸಿದರೆ ಅದು ಕೃತಕ ವಾಗುತ್ತದೆ ; ಸಾರ್ಥಕವಾಗುವುದಿಲ್ಲ, ಸಫಲವಾಗುವುದಿಲ್ಲ. ಆಯಾ ಮಾಧ್ಯಮದ ಇತಿ ಮಿತಿ ಬೇರ ಬೇರೆ, ನೋಡುವ ದೃಷ್ಟಿಯೂ ಭಿನ್ನ. ಎರಡನೆಯದಾಗಿ, ಒಂದು ನಿರ್ದಿಷ್ಟ ವಾದ ಅನುಭವ ಕವಿ ಕಲಾವಿದರ ಮನೋಭೂಮಿಕೆಯ ಮತ್ತು ಮಾಧ್ಯಮದ ಪರಿಣಾಮ ವಾಗಿ ತನಗೆ ಉಚಿತ-ಯೋಗ್ಯ-ಸಹಜ ರೂಪಧಾರಣೆಯನ್ನು ತಾನೇ ಮಾಡುತ್ತದೆ. ಆಗ ಮಾತ್ರ ರೂಪ-ಸಾಂಗತ್ಯ, ಬಣ್ಣ-ವಿನ್ಯಾಸ, ನಾದ-ಲಯ. ಶಬ್ದ-ಅರ್ಥ ಸಹಜವಾದ ಸಾವಯವ ಸಂಬಂಧ ಪಡೆಯುತ್ತವೆ.

ಕಾವ್ಯವನ್ನು ಕುರಿತು ವಿಚಾರ ಮಾಡುವಾಗಲೂ ಈ ವಿಷಯವನ್ನು ಮರೆಯುಂ ವಂತಿಲ್ಲ. ಭಾಷಾಶೈಲಿಯನ್ನು ಒಂದು ಮಾಧ್ಯಮ ಮಾತ್ರವೆಂದು ಗಣಿಸಿದರೆ ಅದನ್ನು ಕವಿ ತನ್ನ ಇಚ್ಛೆಯಂತೆ ಬದಲಾಯಿಸಬಹುದು—ಫ್ಯಾಷನ್ನಿಗೆ ತಕ್ಕಂತೆ ಉಡುಪನ್ನು ಬದಲಾಯಿಸಿದಂತೆ—ಎಂದಾಗುತ್ತದೆ. ಕಣವಿಯವರ ರಚನೆಗಳಲ್ಲಿ ಆಗಿರುವ ಬದಲಾವಣೆ ಈ ಬಗೆಯದಲ್ಲ. ವುತ್ತು ವಸ್ತುವೇ ತನಗೆ ತಕ್ಕ ಅಭಿವ್ಯಕ್ತಿಯ ರೂಪವನ್ನು ನಿರ್ಧರಿಸುತ್ತದೆ, ಆರಿಸಿಕೊಳ್ಳುತ್ತದೆ ಎಂದರೆ ಇಲ್ಲಿ ಕವಿಯ ಕಾರ್ಯವೇನು, ಎಂದರ್ಥವಲ್ಲ. ಆ ಸೂಕ್ಷ್ಮ ಸ್ಪಂದನದ ವ್ಯತ್ಯಾಸವನ್ನು ಕಂಡು, ಅದರ ಜಾಡನ್ನು ಎಳೆಯನ್ನು ಹಿಡಿದು ಕವಿಪ್ರತಿಭೆ ಉದ್ದೇಶ ಸಫಲವಾಗುವಂತೆ ಅದಕ್ಕೆ ಪೂರ್ಣರೂಪ ಕೊಡುತ್ತದೆ. ಸಂಭಾಷಣೆಯ ಮಾತುಗಳ ಸದ್ಯಃಪ್ರಯೋಜನಾತ್ಮಕ ಅರ್ಥಕ್ಕೂ ಕಾವ್ಯದ ಧ್ವನ್ಯಾತ್ಮಕ ಅರ್ಥಕ್ಕೂ ವ್ಯತ್ಯಾಸ ಇಲ್ಲಿದೆ. ದಿನಬಳಕೆಯ ಭಾಷೆ ಕಾವ್ಯವಾಗುವುದು ಕವಿಯ ಪ್ರತಿಭಾಸ್ಪರ್ಶದಿಂದ.

ಕವಿ ಭಾಷೆಯಿಂದ ಹೊರತಾಗಿ ಆಲೋಚಿಸುವುದು ಸಾಧ್ಯವಿಲ್ಲ ; ಆಲೋಚನೆ ಭಾಷೆಯರೂಪದಲ್ಲಿಯೇ ಇರಬೇಕಾಗುತ್ತದೆ. ಕವಿಯ ಆಳವಾದ ಅನುಭವ ವಿಚಾರಗಳು ಕವಿಮನೋಧರ್ಮಕ್ಕನುಸಾರವಾಗಿ ಸ್ಪಷ್ಟರೂಪ ತಳೆಯುತ್ತ ಖಚಿತವಾಗುತ್ತ ಸೂಚ್ಯ ವಾಗುತ್ತ ಹೋಗುತ್ತವೆ. " ...his capacity for experiencing and his power of communicating are indistinguishable ; not merely because we should not know of the one without the other, but because his power of making words express what he feels is indistinguishable from his awareness of what he feels."[1] ಆದರೆ ಓದುಗರ ದೃಷ್ಟಿಯಿಂದ ಮೊದಲು ಭಾಷೆ; ಆ ಮೂಲಕ ಕವಿಯ ಮನಸ್ಸಿನಾಳಕ್ಕಿಳಿಯಬೇಕಾಗುತ್ತದೆ. ಎಷ್ಟರ ಮಟ್ಟಿಗೆ ಕವಿ ಭಾಷೆಯಲ್ಲಿ ತನ್ನ ಸಂವೇದನೆಯನ್ನು ಸಂವಹನಿಸಬಲ್ಲನೋ ಅಷ್ಟರಮಟ್ಟಿಗೆ ಅವನ ರಚನೆ ಸಾರ್ಥಕ, ಸಫಲ ಎನ್ನಬಹುದು. ಕಾವ್ಯಾಭಿವ್ಯಕ್ತಿಯಲ್ಲಿ ಆಲೋಚನೆ ಮತ್ತು ಭಾಷೆಗೆ ಇಂತಹ ಅವಿನಾಸಂಬಂಧವಿರುವುದನ್ನು ಕಾಣಬಹುದು.

ಕಣವಿಯವರ ಮನೆಯ, ಸುತ್ತಲ ಸಮಾಜದ ಕನ್ನಡ ಒಂದುಬಗೆ. ಸಮಾಜ ಒಪ್ಪಿತ ಶಿಷ್ಟಭಾಷೆ ಬೇರೆ, ಹಿರಿಯ ಕವಿಗಳು ಪ್ರಯೋಗಿಸಿ ಸಾಧಿಸಿರುವ ವಿಭಿನ್ನ ಭಾಷಾ ಶೈಲಿ. ಇಂತಹ ಸ್ಥಿತಿಯಲ್ಲಿ ಅವರು ವಿದ್ಯಾರ್ಥಿದೆಸೆಯಲ್ಲಿದ್ದಾಗ ರಚಿಸಿದ ಕವನಗಳಲ್ಲಿ ಅನಿಶ್ಚಿತ ಹೊಯ್ದಾಟವನ್ನೂ, ಅವರ ಮೇಲಾದ ಹಿರಿಯ ಕವಿಗಳ ಪ್ರಭಾವವನ್ನೂ ಕಾಣ ಬಹುದಾಗಿದೆ. ಅವರಿನ್ನೂ ತಮ್ಮ ಕಾವ್ಯದ ನೆಲೆಯನ್ನು, ಅದಕ್ಕೆ ತಕ್ಕ ಭಾಷಾಶೈಲಿಯನ್ನು ರೂಪಿಸಿಕೊಳ್ಳುವ ಮುನ್ನಿನ ಸ್ಥಿತಿಯನ್ನು ಮೊದಲ ಸಂಗ್ರಹಗಳ ಭಾವಗೀತೆಗಳು ಪ್ರತಿ ಬಿಂಬಿಸುತ್ತವೆ ಎನ್ನಬಹುದು. ಆ ದಶಕಗಳ ಪ್ರಮುಖ ಕವಿಗಳಾದ ಬೇಂದ್ರೆ, ಕುವೆಂಪು ಅವರ ಪ್ರಭಾವ ಅರಿತೋ ಅರಿಯದೆಯೋ ಮೂಡಿಬಂದಿದೆ. ಒಮ್ಮೆ ಸಂಸ್ಕೃತಯುಕ್ತ

[1] F. R. Leavis : New bearings in English poetry.

ಭಾಷೆ. ಒಮ್ಮೆ ಸರಳ ಆಡುನುಡಿ. ಛಂದಸ್ಸು ಲಯಗಳ ಆಯ್ಕೆಯಲ್ಲಿಯೂ, ಮಾತ್ರಾಲಯ ಜಾನಪದ ಲಯ ಇತ್ಯಾದಿ, ಅನುಕರಣ ಅಥವಾ ಪ್ರಭಾವವನ್ನು ಕಾಣಬಹುದಾಗಿದೆ. ಆಗ ಪ್ರಚಲಿತವಾಗಿದ್ದ ತಳವೂರಿದ್ದ ರೊಮಾಂಟಿಕ್ ಭಾಷಾಶೈಲಿ—ಗೇಯಗುಣ ಪ್ರಧಾನವಾದದ್ದನ್ನು—ಗುರುತಿಸಬಹುದು. 'ಕಾವ್ಯಾಕ್ಷಿ' ಯಲ್ಲಿ ಬೇಂದ್ರೆಯವರ ಮುನ್ನುಡಿಯ ಮಾತುಗಳಿವು : "ಅರ್ಜನೆಯೊಡನೆ, ಅವರು ಉಂಡದ್ದನ್ನು ಮೈಗೂಡಿಸಿಕೊಳ್ಳುವುದಲ್ಲದೆ, ತನ್ನತನದ ಅರಿವಿನ ಅಂಕುರಗಳನ್ನು ಸಹಜ ವೈಖರಿಯಿಂದ ಹೊಮ್ಮಿಸುತ್ತಿದ್ದಾರೆ. ಮಾತೃವಾತ್ಸಲ್ಯ, ಮಾತೃಭಾಷಾ ವಾತ್ಸಲ್ಯ, ಸೌಂದರ್ಯ ದೃಷ್ಟಿ, ಅಭೀಪ್ಸೆಯ ತೀವ್ರತೆ,...ರಾಷ್ಟ್ರಾಭಿಮಾನ, ಆದರ್ಶ ಪ್ರೀತಿ ಇವೇ ಮೊದಲಾಗಿ ಅವರ ಕಾವ್ಯಸ್ಫೂರ್ತಿಯ ವಿಷಯಗಳಾಗಿವೆ. ಅವರ ಕವನದಲ್ಲಿ ಜೀವಂತ ಗತಿಯಿದೆ, ಮಾತಿಗೆ ಅಚ್ಚುಕಟ್ಟು ಇದೆ. ಅಲ್ಪ ಸಂತುಷ್ಟಿ ಇಲ್ಲ, ಮಹತ್ತಿನ ಕಡೆಯ ಎಳೆತವಿದೆ, ಅವರ ಬೆಳೆವ ಮನಸ್ಸೂ ಅಂತಃಕರಣವೂ ವಿಕೃತ ಕ್ಷೋಭದಿಂದ ಮುದುಡಿಕೊಂಡಿಲ್ಲ ; ವಿಪರೀತ ವಿಕಾರಗಳಿಂದ ಹರಿತವಾಗಿಲ್ಲ." ನಿಸರ್ಗ ಪ್ರೇಮವೂ ಸೇರಿದರೆ, ಬೇಂದ್ರೆಯವರ ಮಾತು ಭವಿಷ್ಯವಾಣಿಯಂತೆ ತೋರುತ್ತದೆ. ಕಣವಿಯವರ ಈ ಮೂಲ ರೊಮ್ಯಾಂಟಿಕ್ ಮನೋಧರ್ಮ ಇತ್ತೀಚಿನ ಕವನಗಳವರೆಗೂ ನೆಲೆಬಿಟ್ಟು ಚಲಿಸಲಿಲ್ಲ ; ಭೂಮಿಕೆಗೆ ಆಳ ವಿಸ್ತಾರ ಲಭಿಸಿದೆಯಷ್ಟೆ. ಪ್ರಾರಂಭದ ಅವರ ಪ್ರಯತ್ನಗಳಿಗೆ ಕೆಲವು ಉದಾಹರಣೆಗಳು ;

ಆ ಗಿಡಾ ಈ ಗಿಡಾ
ಒಂದೊಂದೂ ಜೇಂಗೊಡಾ
ಬಾಂದೇವಿಗೆ
ನಲದಾಯಿಯ
ಹೂ ಗೊಂಡೆಯ ಹೊಂಗೊಡಾ

'ಕಾವ್ಯಾಕ್ಷಿ'ಯ ಈ ಸಾಲುಗಳು ಬೇಂದ್ರೆಯವರನ್ನು ನೆನಪಿಗೆ ತರುವಂತೆ, ಕುವೆಂಪು ಅವರ 'ಹೋಗುವೆನಂ ನಾ' ಕವನದ ಪ್ರಭಾವವನ್ನು 'ನೆನಸಿನ ಕನಸು' ಕವನದಲ್ಲಿ ಸ್ಪಷ್ಟವಾಗಿ ಕಾಣಬಹುದಾಗಿದೆ :

ಹೋದೆ ಹೋದೆನು ದೂರ ನಡೆದೆನು
ಕನಸು ಕೈಹಿಡಿದಾಚೆಗೆ,
ಊರಿನಾಚೆಗೆ ಗಿರಿಯ ಶೃಂಗಕೆ
ಚೆಲುವು ಚಿಮ್ಮುವ ಕಾಡಿಗೆ ;
ಕಾಡ ಗಿಡಗಳು ಮುಗಿಲ ಮುತ್ತಿಡೆ
ಈರ್ಷೆ ತೋರಿಸುವಲ್ಲಿಗೆ,
ಹಚ್ಚ ಹಸುರಿನ ಪಚ್ಚಪಯಿರಿನ
ನಿಚ್ಚ ಸುಂದರ ಬೀಡಿಗೆ !

ಕಣವಿಯವರ ಪ್ರೇಮ ಕವನಗಳಲ್ಲಿಯೂ, ಮುಖ್ಯವಾಗಿ 'ಮಧು ಚಂದ್ರ'ದ ಕೆಲವೆಡೆ ಕೆ. ಎಸ್.ನ. ಅವರ ಭಾಷೆಯ ಧಾಟಿಯನ್ನು ಗಮನಿಸಬಹುದು. ಕೆ.ಎಸ್.ನ. ಅವರು ಮಧ್ಯಮ

ವರ್ಗ ಸಮಾಜದ ಒಂದು ಪರಿಸರದ ಭಾಷೆಯನ್ನು ಬಳಸಿದರು. ಕಣವಿಯವರು ಆ ಒಂದು ಮಿತಿ ಹಾಕಿಕೊಳ್ಳದೆ ಎಲ್ಲೆಡೆ ಪ್ರಚಲಿತ ಶಿಷ್ಟ ಸಮಾಜದ ಭಾಷೆಯನ್ನು ಸ್ವೀಕರಿಸಿದ್ದಾರೆ. ಪ್ರಾರಂಭದಲ್ಲಿ ಹತ್ತು ಹಲವು ಅನುಭವಗಳನ್ನು ವ್ಯಕ್ತಪಡಿಸುವಲ್ಲಿ, ಆಗುಹೋಗುಗಳಿಗೆ ಪ್ರತಿಕ್ರಿಯಿಸುವಲ್ಲಿ ಭಾಷೆ ಮತ್ತು ಲಯ ವಿನ್ಯಾಸದ ಪ್ರಯೋಗ ನಡೆಸಿರುವುದನ್ನು ಗಮನಿಸ ಬಹುದು. 'ಗಿರಿ ಗಿರಿ ಗಿಂಡಿ'ಯಲ್ಲಿ ಬರುವ ಜಾನಪದದ ಈ ಸೊಗಡನ್ನು ನೋಡಿ :

ಗಿರಿ ಗಿರಿ ಗಿಂಡಿ
ಇಬತ್ತಿ ಉಂಡಿ
.........
ಬಗಾಟ ಬುಗುರಿ
ತಿರುಗುವ ತಿಗರಿ
ತೆಂಗಿನ ಚವರಿ
ಗಾಳಿ ಸವಾರಿ......

ಅಥವಾ 'ಆನಿ ಬಂತವ್ವ ಆ್ಯನಿ'ಯಲ್ಲಿ ಭಾವಕ್ಕೆ ಉಚಿತವಾದ ಭಾಷಾ ಶಿಲ್ಪವನ್ನು ಕಾಣ ಬಹುದು :

ಆನಿ ಬಂತವ್ವ ಆ್ಯನಿ
ಇದು ಎಲ್ಲಿತ್ತವ್ವ ಮರಿಯಾನಿ ।।
ಕಳ್ಳಿ ಸಾಲಾಗ ಮುಳ್ಳ ಬೇಲ್ಯಾಗ
ಓಡಿಯಾಡತಿತ್ತ್ಯಾನಿ
ಕಾಲಮ್ಯಾಲ ಅಂಗಾತ ಮಲಗಿ
ತೂರನ್ನತೈತಿ ಈ ಆ್ಯನಿ
ಎಂಥ ಚಿಟ್ಟಾನಿ
ನನ್ನ ಕಟ್ಟಾಣಿ
ಇದಕ ಯಾರಿಲ್ಲ ಹವ್ವಣಿ

ಶಬ್ದಗಳ ಬೀಸು, ರಾಗ-ಲಯದ ಎಳೆತ, ಪ್ರಾಸಾನುಪ್ರಾಸಗಳ ಅನುರಣನ ಒಪ್ಪವಾಗಿ ಆಕರ್ಷಕವಾಗಿ ಮೂಡಿ ಬಂದಿದೆ. ಕಣವಿಯವರು ರಚಿಸಿರುವ ಮಕ್ಕಳ ಆಟಪಾಟಗಳನ್ನು ಕುರಿತ ಕವನಗಳು ಅತ್ಯಂತ ಸುಂದರವಾಗಿವೆ. ಮೇಲಿನ ಕವನದೊಂದಿಗೆ 'ದೀಪಧಾರಿ' ಯನ್ನು ಹೋಲಿಸಿ. ಭಾಷೆ ಲಯ ಪ್ರತಿಮಾವಿಧಾನದಲ್ಲಿ ಬದಲಾವಣೆಯಾಗಿದ್ದರೂ ಇಷ್ಟೇ ಸೊಗಸಾಗಿ ಸಾವಯವ ಸಂಬಂಧ ಹೊಂದಿ ರಚಿತವಾಗಿದೆ. ಗೇಯದ ಅವಲಂಬನೆ ತಪ್ಪಿದಾಗಲೂ ಕಣವಿಯವರ ಸಿದ್ಧಹಸ್ತ ಹದ ತಪ್ಪುವುದಿಲ್ಲ.

ಭಾಷೆಯ ಮೇಲಿನ ಹಿಡಿತ ಇನ್ನೂ ಸಾಧಿಸದ ಆ ಕಾಲದಲ್ಲಿ, ಶಬ್ದನಾದಕ್ಕಾಗಿ, ಪ್ರಾಸಕ್ಕಾಗಿ ಮಾತ್ರ, ಶಬ್ದಾರ್ಥ ಮೈತ್ರಿಯಾಗದ ಶೈಲಿಯ ಹದಕ್ಕೆ ಹೊಂದದ ಪದಗಳ ಪ್ರಯೋಗವಾಗಿರುವುದೂ ಉಂಟು :

ಈ ಮಲ್ಲಿಗೆ ಈ ಗುಲಾಬಿ
ಚೆಲುವಿನೆರಡು ಕಣ್ಣಗೊಂಬಿ
ರಾಗದಾ ಪರಾಗ ತುಂಬಿ
ಬದುಕು ಬಣ್ಣ ಪಡೆಯಿತೆಂಬಿ
 ನಸುಕು ತುಟಿಯ ತೆರೆದಿದೆ
 ಜೀವರಸವನೆರೆದಿದೆ ! (ಈ ಮಲ್ಲಿಗೆ ಈ ಗುಲಾಬಿ)

ಇಲ್ಲಿ ಕವನದುದ್ದಕ್ಕೂ ಬಳಕೆಯಾಗಿರುವ ಶೈಲಿಗೆ, ಪದಶಯ್ಯೆಗೆ ಒಗ್ಗದಂತೆ. (ಗುಲಾಬಿ-ತುಂಬಿ, ತೆರೆದಿದೆ-ಎರೆದಿದೆ ಇತ್ಯಾದಿ) ಈ ಪದ್ಯದಲ್ಲಿ 'ಕಣ್ಣಗೊಂಬಿ,' 'ಪಡೆಯಿತೆಂಬಿ' ಶಬ್ದಗಳು ಪ್ರಯೋಗವಾಗಿವೆ, ಇವು ಪ್ರಾಸಕ್ಕಾಗಿಯೇ ತಟಕ್ಕನೆ ಬಂದು, ಆದರೆ ಹೊರತಾಗಿ, ನಿಲ್ಲುತ್ತವೆ. ಅನಂತರದ ಕವನಗಳಲ್ಲೂ ಅಲ್ಲಲ್ಲಿ ಇಂತಹ ಉದಾಹರಣೆಗಳು ಸಿಗುತ್ತವೆ. 'ಕೊನೆಯ ನಿಲ್ದಾಣ' ದಲ್ಲಿ ಅರ್ಥಹಿನ್ನೆಲೆಗೆ ಸರಿದು ಪ್ರಾಸ ಹಾಗೂ ಶಬ್ದನಾದವೇ ಮುಖ್ಯವಾಗುವ ಈ ಸಾಲುಗಳು—

ಇದು ದೊಡ್ಡ ನಿಲ್ದಾಣ ಕೂಟ :
ಇಲ್ಲಿಂದಲೇ ಹೊರಟು ಇಲ್ಲಿಗೇ ಬಂದು ಕೂಡುವವೆಲ್ಲಕಡೆಯ ಗಾಡಿ ;
ದೇಹಾದ್ಯಂತ ಸಂಚರಿಸಿ ಪುಪ್ಪುಸಕೆ ಹರಿವಂತೆ ರಕ್ತನಾಡಿ.
ನಮ್ಮ ಗಾಡಿಗೆ ಏನು ಬಂತೊ ಧಾಡಿ
ನಿಂತು ನಿಂತಲ್ಲಿಯೇ ಗೊರಕೆ ಹೊಡೆಯುತ ಮಲಗಿಬಿಡುವ ರೂಢಿ.

ಕಣವಿಯವರ ಕಾವ್ಯದೃಷ್ಟಿ, ಜೀವನದೃಷ್ಟಿ 'ಕವಿತೆಗೆ' ಎಂಬ ಅಷ್ಟಷಟ್ಪದಿಯಲ್ಲಿ ಸ್ಪಷ್ಟವಾಗುತ್ತದೆ :

ಆವುದೋ ಮೂಲೆಯಲಿ ಕುಳಿತು, ಭೂರಂಗದಲಿ
ನಡೆವ ಅಕಟೋವಿಕಟ ನಾಟಕದ ಹಿನ್ನೆಲೆಯ
ಬಗಿದು ನೋಡುವ ಬಯಕೆ ಬಗೆಯೊಳಿದೆ ; ಮನ್ನಣೆಯ

ಆಳಿಯಾಸೆ ಮಣ್ಣುಗೂಡಲಿ, ಮಹಾಪೂರದಲಿ
 ಜಾಲಿಸಲಿ ಬಾಳಕೊಳೆ, ಬದುಕು ಮಡಿಯಾಗಿರಲಿ
 ಮೂಡು ಮುದ್ದಿನ ಕವಿತೆ ಋತಶಿವಾನಂದದಲಿ,

ಈ ಮನೋಧರ್ಮವೇ ಅವರ ಕಾವ್ಯಮಾರ್ಗದ ನೆಲೆಗಟ್ಟು. ಈ ದೃಷ್ಟಿಯೇ ಕಾಲ ಸರಿದರೂ, ಸುತ್ತಲ ಬಣ್ಣ ಬದಲಾದರೂ, ಆಕರ್ಷಣೆ ಪ್ರಚೋದನೆಗಳಿಗೆ ಒಳಗಾದರೂ ಭಾವಾವೇಶಕ್ಕೆಡೆಗೊಡದೆ ಪರದಂತೆ ಬೀಳದಂತೆ ಅವರ ಕಾವ್ಯರಚನೆಯಲ್ಲಿ ಒಂದು ಹದ-ಬನಿಯನ್ನು ತಂದಿದೆ ಎನಿಸುತ್ತದೆ. ರೋಷ, ನಿರಾಶೆಯ ಆಕ್ರೋಶ, ಕೆಚ್ಚು ಅವರ ಕಾವ್ಯಕ್ಕೆ ಹೊರತು.

'ಕಾವ್ಯಾಕ್ಷಿ'ಯಿಂದ 'ನಗರದಲ್ಲಿ ನೆರಳಿ'ನವರೆಗೂ ಕಣವಿಯವರು ಸಾನೆಟ್‌ಗಳನ್ನು ರಚಿಸುತ್ತ ಬಂದಿದ್ದಾರೆ. ನವ್ಯಪ್ರಯೋಗ ನಡೆಸಿದರೂ ತಪ್ಪದೆ ಸಾನೆಟ್ ಬರೆದಿರುವವರು

ಇವರೊಬ್ಬರೇ ಎಂದು ತೋರುತ್ತದೆ. ಆ ಕಾರಣ ಅವರ ಶೈಲಿಯಲ್ಲಾದ ಮಾರ್ಪಾಡು ಗಳು ಇಲ್ಲೂ ಸೂಕ್ಷ್ಮವಾಗಿಯಾದರೂ ಕಾಣಿಸಿಕೊಳ್ಳುತ್ತವೆ. ಅಲ್ಲದೆ ಅವು ಅವರ ಮನೋಧರ್ಮಕ್ಕೆ ಕಾವ್ಯಮಾರ್ಗಕ್ಕೆ ಕನ್ನಡಿಯಂತಿವೆ. ಈಗಿನವರಿಗೆ ಆ ರಚನೆ ತಿಣುಕಾಟ ಎನಿಸಬಹುದು.

ಸಾನೆಟ್ ಹದಿನಾಲ್ಕು ಸಾಲುಗಳ ಮಿತರೂಪ. ರಚನೆಯಲ್ಲಿ ಕೈಕಟ್ಟುವಂತ-ಹದು. ಆದರೂ ಕಣವಿಯವರು ಪ್ರಯೋಗಿಸುತ್ತ ಬಂದಿದ್ದಾರೆ. ಎಂಟು ಆರು, ಅಥವಾ ಎಂಟು ನಾಲ್ಕು ಎರಡು ಸಾಲುಗಳಾಗಿ ವಿಭಜಿಸಬಹುದಾದವು ಇವರಲ್ಲಿ ಹೆಚ್ಚು. ಬಹುಪಾಲು ಸಾನೆಟ್‌ಗಳಲ್ಲಿ ಎಂಟನೇ ಸಾಲಿನ ಕೊನೆಗೆ ಬಿಡುವು ಬರುತ್ತದೆ. ಆದ್ದರಿಂದ ಇವನ್ನು ಅಷ್ಟಷಟ್ಪದಿ ಎಂದೇ ಹೇಳಬಹುದು. ಕೊನೆಯ ಎರಡು ಸಾಲುಗಳು ಮೊನಚಾದ ಪರಿಣಾಮಕಾರಿ ಮುಕ್ತಾಯವನ್ನು ಪಡೆಯುತ್ತವೆ. ಉದಾ :

ಮಧ್ಯ ರಾತ್ರಿಯಲಿಂತು ಕೊರೆದು ಮಿಂಚಿನ ಗೆರೆಯ
ಮರೆಯಾದ : ದಡಕ್ಕೆ ಮುಟ್ಟಿಸಿದ ಹೊತ್ತ ಹೊರೆಯ.
(ಲಾಲ್‌ಬಹದ್ದೂರ್ ಶಾಸ್ತ್ರಿ)

ಉದ್ಧರಿತ ವಾಕ್ಯದಿಂದ ಮುಕ್ತಾಯಗೊಳಿಸಿರುವುದೂ ಉಂಟು, (ಗೆಲುವೆನೆಂಬುವ ಭಾಷೆ). ಮೇಲಿನ ಉದಾಹರಣೆಯ ದಡಕ್ಕೆ, ಹೊತ್ತಹೊರೆ, ಮುಟ್ಟಿಸು ಶಬ್ದಗಳು, ಕ್ಷಿಪ್ರ ಗತಿಯಲ್ಲಿ ಭಾರತಕ್ಕೆ ಬಂದಿದ್ದ ಯುದ್ಧದ ಪಿಡುಗನ್ನು ಏಕಾಂಗಿಯಾಗಿ ನಿರ್ವಹಿಸಿದ. ಆ ಪ್ರಯತ್ನದಲ್ಲಿ ಮಿಂಚಿನಂತೆ ಬೆಳಗಿ ಕಣ್ಮರೆಯಾದ ಶಾಸ್ತ್ರಿಯವರ ಮಹತ್ವದ ಕಾರ್ಯ ಮನಮುಟ್ಟುತ್ತದೆ. ಹಾಗೆ, ತೀ. ನಂ. ಶ್ರೀ. ಕುರಿತ ಅಷ್ಟಷಟ್ಪದಿಯ ಮುಕ್ತಾಯ ಅರ್ಥಗರ್ಭಿತವಾಗಿದೆ :

ಇಂದಿಲ್ಲ ನಾಳೆ ಬಂದು, 'ಎಲ್ಲಿಗೆ ಬಂತು ಕೆಲಸ ?'
ಎಂದಾರು ; ಈ ಗುಡಿಗೆ ಯಾರಿಡಬೇಕು ಕಳಸ ?

ಇವು ತೀನಂಶ್ರೀಯವರ ವ್ಯಕ್ತಿತ್ವ, ಅಂತಃಕರಣ, ಮಿತ್ರಸ್ನೇಹ, ಶಿಷ್ಯವಾತ್ಸಲ್ಯ, ಕಾರ್ಯಕ್ಷಮತೆ, ಕನ್ನಡದ ಕೆಲಸದ ಬಗ್ಗೆ ಕಾಳಜಿ ಏನೆಲ್ಲವನ್ನು ಸೂಚಿಸುತ್ತವೆ. ಕೆಲಸ, ಕಳಸ ಪ್ರಾಸವಶಾತ್ರವಾಗಿ ಬಂದಿಲ್ಲ ಎಂಬುದು ಅವರನ್ನು ಬಲ್ಲವರಿಗೆ ಗೊತ್ತು. ಕಣವಿ ಯವರು ಪ್ರಾಸ, ಅನುಪ್ರಾಸ, ಶಬ್ದಗಳ ವಿನ್ಯಾಸ, ಧಾಟಿ-ನಡೆ, ಸರಳಪದ ಪ್ರಯೋಗ ದಲ್ಲೂ ಅರ್ಥದ ವಿವಿಧ ಸ್ತರಗಳನ್ನು ತೆರೆಸುತ್ತಾರೆ. ಅವರ ಹೆಚ್ಚು ಸಾನೆಟ್‌ಗಳಲ್ಲಿ ಆವೃತ ಪ್ರಾಸವನ್ನು ಕಾಣುತ್ತೇವೆ. ಅನಾವೃತ ಪ್ರಾಸ ಪ್ರಯೋಗದ ಉದಾಹರಣೆ ಗಳೂ, ಮೊದಲ ಅಷ್ಟಪಾದಗಳ ಪ್ರಾಸ ಬಿಟ್ಟ ಒಂದೆರಡು ಸಾನೆಟ್‌ಗಳೂ ಉಂಟು.

ಸಾನೆಟ್‌ಗಳ ಭಾಷಾಗಾಂಭೀರ್ಯ, ಬದ್ಧನಡೆ, ಶಿಲ್ಪ ಅವರ ಮನೋಧರ್ಮಕ್ಕೆ ಹೊಂದಿ, ಅಭಿವ್ಯಕ್ತಿ ಮತ್ತು ಸಂವಹನ ಕ್ರಿಯೆಗಳಲ್ಲಿ ಇತರ ಕವಿತೆಗಳ ರಚನೆಯ ಮೇಲೂ ಪ್ರಭಾವ ಬೀರಿವೆ ಎನಿಸುತ್ತದೆ. ಇಲ್ಲಿ ಸಾಧಿಸಿದ ಕೈಯ ಬಿಗಿ, ಹಾಳತ ಅನಂತರದ ಕವಿತೆಗಳಲ್ಲೂ ಮಾತು ಜಾಳಾಗದಂತೆ, ಸೂಚ್ಯವಾಗುವಂತೆ ಮಾಡಿದೆ. ಅಂತಹ ಕ್ರಮಯುಂತ

ಬದಲಾವಣೆಯನ್ನು ಸಾನೆಟ್‌ಗಳ ಮೂಲಕವೇ ಗುರುತಿಸಬಹುದು. ಮೊದಮೊದಲ ರಚನೆಗಳಲ್ಲಿ ಬಂಧದ ಗಾಂಭೀರ್ಯ, ಬಿಗಿಗಾಗಿ ಹಳಗನ್ನಡ, ಸಂಸ್ಕೃತ ಮಿಶ್ರಭಾಷೆಯ ಆಧಿಕ್ಯವನ್ನು ಕಾಣಬಹುದು.

ಸಂದೇಶಕಿನಿತಿನಿತು ಕುಂದಿಲ್ಲ ಭಾಸುರಂ
ಮರೆವುದೆಂತೀ ಜಗವು ? ನಿನ್ನುಸಿರು ಶಾಶ್ವತಂ, (ಅಮರ ತೇಜಃ ಪುಂಜಿ)

ಸುಲಲಿತ ಭಾವಸಂಪ್ರೀತೆ, ನನ್ನೆದೆಯ
ಸುಪ್ತ ಸುಖದುಃಖ ವೀಣಾಕ್ವಣಿತ ಸಂಗೀತೆ
ಚೈತ್ರಮುಖಿ...... ವಿಮಲ ವಿಖ್ಯಾತೆ (ಕವಿತೆಗೆ)

"ನಡುವಗಲ ಪೊಳ್ತು", "ತಣಿಸಿ ತೀರ್ಚಲಿಕಿದೋ, ಈ ಘಟ ಪ್ರವಾಹ," "ಜನಿಸಿರ್ದ ಮಾಯೆ...... ಮೈಸೋತ ಮಾಯೆ ಚಿಂತಾಕುಲಂ...... ಕೋಲಾಹಲಂ". "ಪಾಳ್ಗೃದುದೇನಿದುವೆ" ಇತ್ಯಾದಿ. 'ಶ್ರೀ ರಾಮಾಯಣದರ್ಶನವವನೋದಿ' 'ಮುದ್ದಣ-ಮನೋರಮೆ'ಯಂತಹ ಸಾನೆಟ್‌ಗಳಲ್ಲಿ ವಸ್ತುವಿನ ದೃಷ್ಟಿಯಿಂದ ಈ ಶೈಲಿಯ ಔಚಿತ್ಯ ಒಪ್ಪಬಹುದು. ಕೈಯ ಹದ ಸಾಧಿಸಿದಂತೆ ಇದು ಕಾಲಕ್ರಮೇಣ ಸರಳತೆಯ ಕಡೆಗೆ ತಿರುಗಿತು. ವ್ಯತ್ಯಾಸ ಸ್ಪಷ್ಟ :

ಮೊನ್ನೆ ದೀಪಾವಳಿಗೆ ಒಂದು ತಿಂಗಳು ದಣೇ
ತುಂಬಿಹುದು ; ಆಗಲೇ ಸುಳಿವು ಹಿಡಿಯುವ ಮೋಡಿ !

ತೆರೆದು ಬಟ್ಟಲಗಣ್ಣ ಬಿಟ್ಟೂ ಬಿಡದೆ ನೋಡಿ
ಮಿಟ್ಟು ಮಿಸುಕದೆ ಇರುವ (ನಾನು ಅಪರಿಚಿತನೇ ?)...... (ತುಂಬುದಿಂಗಳು)

ಸಾನೆಟ್‌ನಲ್ಲೂ, ಇತರ ಕವಿತೆಗಳಲ್ಲಿನ ಹಾಗೆ, ಈ ಬಗೆಯ ಶಬ್ದ ಪ್ರಯೋಗ ನಡೆದಿರು ವುದೂ ಉಂಟು :

'ಬಿಡುವಿಲ್ಲ, ಅರ್ಜೆಂಟು!' ಟಾರು ಬೀದಿಯ ತುಡಿತ
ಕಾರು ಮೋಟಾರು ಸೈಕಲ್ಲು ಟಾಂಗಾ ಟ್ರಕ್ಕು
ಉಸಿರು ಕಟ್ಟುವ ತೆರದಿ ಬಟ್ಟೆಯಲಿ ಹಾಸುಹೊಕ್ಕು.
ಗಡಿಯಾರದೆಡೆಬಿಡದ ಟಿಕ್ಕು ಟಿಕ್ಕಿನ ಬಡಿತ......"
(ಕಾಲಾತೀತ)

ಈ ಸರಳ ಭಾಷೆಯೂ ಮುಂದೆ ರೂಪಕ ಭಾಷಾ ಶೈಲಿಯಾಗಿ ಮಾರ್ಪಟ್ಟುದನ್ನು ಕಾಣಬಹುದು. ಈ ಶೈಲಿ ಸಾನೆಟ್‌ನ ಬಿಗಿ ಬಂಧಕ್ಕೆ ಸೊಗಸಾಗಿ ಹೊಂದಿಕೊಳ್ಳುತ್ತದೆ. ಕೆಲವೇ ಶಬ್ದಗಳಿಂದ ಭಾವ ಸ್ಪಷ್ಟವಾಗುತ್ತದೆ. ವ್ಯಕ್ತಿಚಿತ್ರಗಳಲ್ಲಿ ವ್ಯಕ್ತಿತ್ವ ಸ್ಫುಟ ವಾಗುತ್ತದೆ. 'ಎಪ್ಪತ್ತರ ಬೇಂದ್ರೆ'ಯಲ್ಲಿ "ಕಡಲ ಗುಟಕರಿಸಿ. ಚಿಕ್ಕೆಗಳ ಮುಕ್ಕಳಿಸುವರು." ಅಥವಾ 'ತೀನಂಶ್ರೀಯವರ ಪಯಣ'ದಲ್ಲಿ—

ಕನ್ನಡದ ಕಲಶ ತುಳುಕಿತ್ತೆ ? ಕೈಯಹೊತ್ತಗೆ
ಜಾರಿ, ಸರಸತಿಯ ವಜ್ರದ ಓಲೆ ಕಳಚಿತ್ತೆ ?

ಕಲ್ಪ ವೃಕ್ಷದೆಳ ನೀರು, ಬಾಗಿರುವ ಗೊನೆ ಬಾಳೆ,
ವಸಂತ ಚಂದನ ಗಂಧ, ಒಲುಮೆ ಹೂಮಾಲೆ...

ಒಂದೊಂದು ಪದಪುಂಜವೂ, ವಾಕ್ಯ ಭಾಗವೂ ಧ್ವನಿಪೂರ್ಣವಾಗಿ ಒಪ್ಪವಾಗಿ ಕಂಡು ಬರುತ್ತದೆ. "ಕಣ್ಣೀರ ತೀರ್ಥವ ಕುಡಿದು......ಭೈರವ ರೂಪದೆದುರು ಸೌಮ್ಯ ನಂದಾ ದೀಪ." "ಮಳೆಗೆ ಮೈದೊಳೆದು, ಗಾಳಿಯ ಹೊದೆದು, ಬಯಲಿನಲಿ ಆತ್ಮದೊಳ ಮುಗುಳ ತೆರೆದು ನಿಂತಿಹ ನಿರಾಲಂಬ...", "ನೆತ್ತರಿನ ತಳಿ, ಪ್ರಾಣದೂದಿನ ಕಡ್ಡಿ ಪರಿ ಮಳದ ಸ್ಮಾರಕ" ಇತ್ಯಾದಿ. ಇತರ ಕವನಗಳಲ್ಲೂ ಈ ಬಗೆಯ ಶೈಲಿಯನ್ನು ಕಾಣಬಹುದು.

ಬರ ಬರುತ್ತ ಕ್ರಿಯಾಪದಗಳ ಬಳಕೆ ಕುಡಿಮೆಯಾಗುವುದನ್ನೂ, ಕೆಲವೊಮ್ಮೆ ವಾಕ್ಯಗಳಲ್ಲಿ ಕ್ರಿಯಾಪದವೇ ಇಲ್ಲದೆ ವಾಕ್ಯ ಭಾವವಾಚಿಯಾಗಿ ನಿಲ್ಲುವುದನ್ನೂ ಗಮನಿಸ ಬಹುದು. ಇಂತಹ ಪ್ರಯೋಗಕ್ಕೆ ಅಡಿಗರು ಪ್ರಸಿದ್ಧ. ಅಲ್ಲದೆ ಕ್ರಿಯೆಯನ್ನು ಆರಂಭದಲ್ಲಿ ತಂದು, ಮುಂದಿನ ಸಾಲುಗಳ ತುಂಬ ಭಾವ ಹೆಪ್ಪಾಗುವಂತೆ, ಆವರಿಸುವಂತೆ ಮಾಡುವ ರಚನೆಗಳೂ ಸಿಗುತ್ತವೆ. ಪ್ರತಿಮೆಗಳು, ಶಬ್ದಚಿತ್ರಗಳನ್ನು ಬಳಸುವಲ್ಲಿ ಈ ಭಾಷಾತಂತ್ರ ಪ್ರಯೋಜನಕಾರಿ. ಕೆಲವು ಉದಾಹರಣೆಗಳು :

ಗುಂಡಿಯೊತ್ತಿದರೆ ಬಲ್ಬು ಇದ್ದಲ್ಲೆಲ್ಲ ಬೆಳಕು
ಝಗ್ಗೆನುವಂತೆ ನಾಡಿನುದ್ದಗಲಕ್ಕು ಅವರ
ನೆನಪು, ಕಲ್ಲು ಕಟ್ಟಿಗೆಯಲ್ಲು ಕಿಡಿ, ಮಡಿದವರ
ಮೇಲೆ ನಕ್ಷತ್ರ ಮಾಲೆ; ಬಾನ ಮೌನದ ಮಿಡುಕು."

(ಗಡಿಯಲ್ಲಿ ಮಡಿದ ಯೋಧರು)

ದುಂಡು ಮಂಡಿಸಿದ ಪಕಳೆಯ ಹೃದಯ ಮೃತ್ಪಿಂಡ
ಚಿತ್ತ ಚಿತ್ರಾಕಾರ ಪತ್ರಪುಷ್ಪವಖಂಡ,
ಕೆಂಪು ಹಳದಿಯ ಒಳಗೆ ಬಾನ ನೀಲಿಯ ನುಣುಪು :
ಒಲವಿನೊನಪು, ಜನ್ಮಾಂತರದ ನೆನಪು : ಅಲರಿಪು
ಕುಣಿತ...... (ಕಲಾಕೃತಿ.)
......ಒಗು ಮಿಗುವ ನಮ್ರ ಪ್ರತಿಭೆಯ ಮಿನುಗು
ಕಣ್ಣಿನಲಿ : ಬಾನ ಬೆಳ್ಳಕ್ಕಿ ಹಾರಿದ ಬೆರಗು, (ಪುತಿನ)

ಸೌನೆಟ್‌ಗಳ ರಚನೆಯಿಂದ ಹದವಾದ ಹಸ್ತಕೌಶಲ ಇತರ ಕವನಗಳಲ್ಲೂ ಕಂಡು ಬರುತ್ತದೆ. ಭಾವಗೀತೆಗಳಾಗಲೀ, ಅಷ್ಟಷಟ್ಪದಿಗಳಾಗಲಿ ಉಪಮೆ, ರೂಪಕ, ಶಬ್ದ ಚಿತ್ರಗಳು, ವಾತಾವರಣ ಸೃಷ್ಟಿ, ವರ್ಣನೆಗಳಲ್ಲಿ ಭಾಷೆಯ ಬಳಕೆಯಲ್ಲಿ ಸೌಮ್ಯ ರೀತಿ ಯನ್ನೂ ಮಾರ್ದವತೆಯನ್ನೂ ಕಾಣಬಹುದು. ಕರ್ಕಶ ಭಾವ ಭಾಷೆ ಕಣವಿಯವರಿಂದ ದೂರ. ಅನಂತರದ ಅಂದರೆ ನವ್ಯ ಪ್ರಯೋಗದಲ್ಲಿ ಕೆಲಮಟ್ಟಿನ ಬದಲಾವಣೆಯನ್ನು ಕಂಡರೂ ಅವರ ಕಾವ್ಯ ಮಾರ್ಗದ ಸ್ಥಾಯೀಗುಣದಿಂದ ಭಿನವಾಗಿಲ್ಲ ಎನ್ನಬಹದು.

'ದೀಪಧಾರಿ,' ಸಂಗ್ರಹ ಕಣವಿಯವರ ಕಾವ್ಯಮಾರ್ಗದಲ್ಲಿ ಒಂದು ತಿರುವನ್ನು ತೋರುತ್ತದೆ, ಅದಕ್ಕೆ ಮುನ್ನ 'ಆಕಾಶ ಬುಟ್ಟಿ'ಯಲ್ಲಿ ಒಂದೆರಡು ಕಡೆ ಹೊಸ ಪ್ರಯತ್ನ

ವನ್ನು ಕಾಣಬಹುದಾದರೂ ಇಲ್ಲಿ ಅದು ಪ್ರಚಿತವಾಯಿತು. ಇವು ಅವರ ಭಾವಗೀತೆಗಳಿಗಿಂತ ಭಾಷೆ ಹಾಗೂ ರಚನೆಯ ದೃಷ್ಟಿಯಿಂದ ಭಿನ್ನವಾಗಿವೆ. ಆ ಸಂಗ್ರಹದ ಪೀಠಿಕೆಯಲ್ಲಿ ಅವರು ಹೀಗೆ ವಿವರಿಸಿದ್ದಾರೆ. "ಕನ್ನಡ ಕವಿತೆ ಈಚೆಗೆ ಒಂದು ಹೊಸ ಆಕೃತಿಯಲ್ಲಿ ನೂತನ ರಚನಾ ವಿಧಾನದೊಂದಿಗೆ ರೂಪುಗೊಳ್ಳುತ್ತಿದೆ. 'ನವ್ಯಕಾವ್ಯ'ದ ಹೆಸರಿನಲ್ಲಿ ಅದು ಮತ್ತೊಂದು ಮಜಲು ಮುಂದುವರಿಯುತ್ತಿದೆ. ಒಂದೇ ಗಿಡದ ಕೊಂಬೆಗಳಾದರೂ ಅವುಗಳ ಆಕಾರ ಮಣಿತ, ಭಂಗಿ, ರಸಪುಷ್ಟಿ ಬೇರೆ ಬೇರೆಯಾಗಿರುವಂತೆ ಇತ್ತೀಚಿನ ಕವಿತೆಗಳಲ್ಲೂ—ಶೈಲಿ, ಛಂದ, ಪದಗಳ ಬಳಕೆ, ಒಟ್ಟಂದದ ಪರಿಣಾಮ ಇತ್ಯಾದಿಗಳಲ್ಲಿ —ಹಿಂದಿನ ಕವಿತೆಗಳಿಗಿಂತ ವಿಭಿನ್ನವಾದ ಹಾಗೂ ತೀಕ್ಷ್ಣವಾದ ಒಂದು ಹೊಸರುಚಿ ಕಂಡು ಬರುತ್ತಿದೆ. ಇಂಥದೇ ನಿರ್ದಿಷ್ಟ ಸ್ವರೂಪವನ್ನು ಅದು ತಳೆದಿದೆಯೆಂದು ಈಗಲೇ ಹೇಳ ಬರುವಂತಿಲ್ಲವಾದರೂ ತನ್ನದೇ ಆದ ಸ್ವತಂತ್ರ ರೀತಿಯಲ್ಲಿ ಅದು ಬೆಳೆದು ಬರಬೇಕಾದದ್ದು; ಅದನ್ನು ಹಾಗೆ ಬೆಳೆಯಗೊಟ್ಟು ನೋಡಬೇಕಾದುದು ...ಈ ಸಂಗ್ರಹದ ಕೆಲ ಕವಿತೆಗಳಲ್ಲಿ ನವ್ಯ ಕಾವ್ಯ ಮಾರ್ಗದ ಹಲವು ಅಂಶಗಳನ್ನು ಓದುಗರು ಕಾಣಬಹುದು. ಆ ಮಾರ್ಗದಲ್ಲಿ ನಡೆದ ಯಶಸ್ವಿ ಪ್ರಯೋಗಗಳೆಂದು ನಾನಿವನ್ನು ಕರೆಯುತ್ತಿಲ್ಲವಾದರೂ ಆಧುನಿಕ ಭಾವಗೀತೆ ಹಾಗೂ ನವ್ಯ ಮಾರ್ಗಗಳ ನಡುವೆ ನಿರ್ಮಾಣಗೊಂಡಿರುವ ಕಂದರಕ್ಕೆ ಇದು ಸೇತುವೆಯಾದೀತೆಂಬ ನಮ್ರ ಭಾವನೆ ನನಗಿದೆ." ಈ ಮಾತುಗಳು ಅವರ ಕಾವ್ಯ ರಚನಾ ದೃಷ್ಟಿಯನ್ನೂ ವಿವರಿಸುತ್ತವೆ. ಮಾತ್ರವಲ್ಲ, ವಿಮರ್ಶಕರು ಅವರ ಕಾವ್ಯವನ್ನು 'ಸಮನ್ವಯ' ಮಾರ್ಗಕ್ಕೆ ಸೇರಿಸಿ, ಅವರಿಗೆ 'ಸಮನ್ವಯ ಕವಿ' ಎಂಬ ಪಟ್ಟಿ ಹಚ್ಚಿ ಕರೆಯಲೂ ಕಾರಣವಾಗಿರಬಹುದು.

ಕಣವಿಯವರ ಮಾತುಗಳಿಂದ ನೂತನ ರಚನಾ ವಿಧಾನ, ಭಾಷೆ ತಂತ್ರಕ್ಕೆ ಸಂಬಂಧಿಸಿದುದು ಎಂಬ ತಪ್ಪು ಅಭಿಪ್ರಾಯ ಉಂಟಾಗುವ ಸಾಧ್ಯತೆ ಇದೆ, ಈ ಬಗ್ಗೆ ಸ್ವಲ್ಪ ವಿವರಣೆ ಅಗತ್ಯ. ಈ ಶತಮಾನದ ಆರಂಭದ ದಶಕಗಳಲ್ಲಿ ಯೂರೋಪಿನಲ್ಲಿ ಅನೇಕ ಪಂಥಗಳು ಚಿತ್ರಕಲೆಯಲ್ಲಿ ಮೈದೋರಿದುವು. ವಾಸ್ತವತೆಯ ಹೆಸರಿನಲ್ಲಿ ಪ್ರಾರಂಭವಾದ ಪ್ರಯೋಗಗಳು ಬಗೆ ಬಗೆಯ ಮಾರ್ಗಗಳಿಗೆ ಕಾರಣವಾದುವು : impressinism. cubism, expressionism, fauvism, surrealism ಇತ್ಯಾದಿ. ಈ ಪಂಥ ಅಥವಾ ಮಾರ್ಗಗಳು ಕೇವಲ ಶೈಲಿ, ತಂತ್ರ, ವಿನ್ಯಾಸಗಳ ಪ್ರಯೋಗ ಮಾತ್ರವಾಗಿರದೆ ಸಮಾಜ ಜೀವನ ತಾತ್ವಿಕ ದೃಷ್ಟಿಗಳ ಬದಲಾವಣೆಯ ಪ್ರತಿಕ್ರಿಯಾ ರೂಪವಾಗಿದ್ದುವು, ಒಂದು ಉದಾಹರಣೆ : cubism ಚಿತ್ರಗಳಲ್ಲಿ ಸೃಷ್ಟಿ ಸಮಸ್ತವನ್ನೂ, ನಿಸರ್ಗವಿರಲಿ ವಸ್ತುಗಳಿರಲಿ. ಘನಾಕೃತಿಗಳ ರೂಪದಲ್ಲಿ ವಿಶ್ಲೇಷಿಸಿ ಕಾಣುವ, ಸರಳೀಕರಿಸಿ ಚಿತ್ರಿಸುವ ದೃಷ್ಟಿ ಕೇವಲ ತಂತ್ರ ವೈಶಿಷ್ಟ್ಯವಲ್ಲ. ಇದು ಮೊದಲು ಕಲಾಮಾಧ್ಯಮದ ಸಾಧ್ಯತೆಗಳನ್ನು ವಿಸ್ತಾರಗೊಳಿಸುತ್ತ ಹೋದರೂ ಕೊನೆ ಕೊನೆಗೆ, ಕಲೆಯ ಮೂಲ ಧಾತುವನ್ನೇ ಕಳೆದು ಕೊಂಡ, ಪ್ರಯೋಗಕ್ಕಾಗಿಯೇ ಪ್ರಯೋಗ ಎನ್ನುವ ಸ್ಥಿತಿಯನ್ನೂ ಮುಟ್ಟಿತು, ಕಲಾಮಾಧ್ಯಮದ ಪ್ರಭಾವ ಪರೋಕ್ಷವಾಗಿ

ಸಾಹಿತ್ಯದ ಮೇಲೂ ಆದಾಗ ಕಾವ್ಯದಲ್ಲೂ ಇಂಥ ಪ್ರಯೋಗಗಳಾದುವು, (ಸಿಂಬಲಿಸಮ್ ಇತ್ಯಾದಿ) ಆದರೆ ಈ ಎಲ್ಲ ಬದಲಾವಣೆಯ ಹಿಂದೆ ಮೂಲಸೆಲೆಯಾಗಿ ಮಾರ್ಪಾಟಾದ ಜೀವನಾನುಭವವಿತ್ತು. ಇಂತಹ ಹಿನ್ನೆಲೆಯ ಅನಿವಾರ್ಯ ಪರಿಣಾಮವಾಗಿ 'ನವ್ಯತೆ' ತಲೆದೋರಿತು. ಆದ್ದರಿಂದ ನವ್ಯತೆ ಕೇವಲ 'ರಚನಾ ವಿಧಾನ' ಮಾತ್ರವಲ್ಲ; ಶೈಲಿ ಛಂದ ಪದಗಳ ಬಳಕೆಯಲ್ಲಿ ಮಾತ್ರ ನವ್ಯ ಮಾರ್ಗದ ಭಿನ್ನ ಸ್ವರೂಪವಿಲ್ಲ. ಅದೊಂದು ಮನೋಧರ್ಮ. ತಂತ್ರ ಶೈಲಿಗೂ ಆಳದಲ್ಲಿ ಜೀವನವನ್ನು ಕಾಣುವ ಪ್ರತಿಕ್ರಿಯಿಸುವ ದೃಷ್ಟಿಯಲ್ಲಾದ ಬದಲಾವಣೆಯ ಪ್ರತೀಕ. ಕನ್ನಡದಲ್ಲಿ ಇಂತಹ ಬದಲಾವಣೆ ಶತಶತಮಾನಗಳಿಂದಲೂ ಆಗಾಗ್ಗೆ ಆಗಿದೆ. ಭಾವಗೀತೆಯಿಂದ ಭಿನ್ನವಾದ ನವ್ಯಕಾವ್ಯ ಇಂತಹ ಒಂದು ಮಜಲು.

ಆದರೆ ಕನ್ನಡದಲ್ಲಿ ನವ್ಯತೆ ಅನಿವಾರ್ಯ ಕಾರಣಗಳಿಂದ, ಇಂಗ್ಲೀಷಿನಲ್ಲಿ ಆದಂತೆ ಪರಿಸ್ಥಿತಿಯ ಪರಿಣಾಮರೂಪವಾಗಿ ಮೂಡಿ ಬರಲಿಲ್ಲ ಎಂಬುದು ಗಮನಾರ್ಹ. ಅಡಿಗರು, ಕೆ. ಎಸ್. ನ. ಅವರಲ್ಲಿ ಅವರ ಮನೋಧರ್ಮ ಕಾರಣವಾಗಿ ನವ್ಯ ಕಾವ್ಯ ವ್ಯಕ್ತಿ ವಿಶಿಷ್ಟವಾಗಿ ರೂಪುಗೊಂಡಂತೆ ಇತರರಲ್ಲಿ ಆಗಲಿಲ್ಲ. ತಂತ್ರ ಶೈಲಿಯೇ ಪ್ರಧಾನ ಆಕರ್ಷಣೆಯಾಗಿ ಸತ್ಯ ಮರೆಯಾಯಿತು. ಫ್ರಾಯ್ಡ್ ಯುಂಗರ ಥಿಯರಿಗಳು ಕ್ಲೀಷೆಯಾಗುವಷ್ಟು ಬಳಕೆಯಾದುವು, ಅಡಿಗರಲ್ಲೆ ಆದ ಬದಲಾವಣೆ ಅಗಾಧ. ಚಂಡೆ ಮದ್ದಳೆಯ ಕವನಗಳಲ್ಲಿ ರೋಷ ಕೆಚ್ಚು ಆವೇಶ ನಿರಾಶೆಗಳನ್ನು, ದಿನ ಬಳಕೆಯ ಮಾತುಗಳನ್ನು, ಮುಕ್ತ ಛಂದದಲ್ಲಿ ಭಿನ್ನ ಗತಿಯನ್ನು ತಂದ ಬಳಸಿದ ಅಡಿಗರೆ ಮುಂದೆ ವರ್ಧಮಾನ, ಕೂಪ ಮಂಡೂಕಗಳಲ್ಲಿ ಕೈ ಬಿಟ್ಟರು. ಭಾಷೆಯನ್ನು ಹುರಿಗೊಳಿಸುತ್ತ ನಯಗೊಳಿಸುತ್ತ ಸೂಚ್ಯವಾಗಿಸಿ ಸಂಕೀರ್ಣಾನುಭವಗಳನ್ನು ಒಂದೆರಡು ಸರಳನುಡಿಗಳಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯತೋರಿದರು. ಬದ್ಧ ಛಂದಸ್ಸಿಗೆ ನಿಯತ ಲಯ ವಿಧಾನಕ್ಕೆ ಹಿಂದಿರುಗಿದ್ದು ಮಾತ್ರವಲ್ಲ 'ಕೂಪ ಮಂಡೂಕ'ದಲ್ಲಿ ಪರಂಪರೆಯ ಸಾಂಗತ್ಯದ ಲಯವನ್ನೆ ಅತ್ಯಂತ ಜಾಣ್ಮೆಯಿಂದ ಬಳಸಿದರು. ಒಬ್ಬಿಬ್ಬರನ್ನು ಬಿಟ್ಟರೆ ಇತರರು ನವ್ಯ ತಂತ್ರ ವೈವಿಧ್ಯಕ್ಕಿಂತ ಆಳಕ್ಕಿಳಿಯಲಿಲ್ಲ, C. Day Lewis ಅವರ ಅಭಿಪ್ರಾಯ ಈ ಬಗ್ಗೆ ಸ್ಪಷ್ಟವಾಗಿದೆ: "He [the poet] may, of course, deliberately sit down to write in the contemporary idiom. But to use assonance to day, for example or to cut prose up into more or less irregular lengths, or to fill his verse with images of machines, or to drone on about the Death Will–none of this can make poet modern "* ಒಂದು ಮಾತು ನಿಜ. ರೊಮಾಂಟಿಕ್ ಕವಿತೆ ಪೇಲವವಾಗತೊಡಗಿದ ಹಿನ್ನೆಲೆಯಲ್ಲಿ ಹೊಸ ಸಂವೇದನೆಯ ನವ್ಯ ಅಭಿವ್ಯಕ್ತಿಯ ಅವಶ್ಯಕತೆಯಿತ್ತು. ನವ್ಯಕಾವ್ಯದ ಹೊಸಗಾಳಿ ಬೀಸಿ ಕನ್ನಡ ಕಾವ್ಯಕ್ಕೆ

* C. Day Lewis : The Poetic Image

ನವಚೈತನ್ಯ ತುಂಬಿತು. ಆದರ ಸಾಧನೆ ಮತ್ತೇನಿಲ್ಲವೆಂದರೂ ಸಂಪ್ರದಾಯ ಶರಣತೆಯ ಪರಂಪರೆಯ ಚಳಿಯನ್ನು ಬಿಡಿಸಿತು ಎನ್ನ ಬಹುದು.

ಈ ವಿವರಣೆಯ ಉದ್ದೇಶವಿಷ್ಟೆ: ಕಣವಿಯವರು ನವ್ಯಕಾವ್ಯ ಪ್ರಯೋಗ ಮಾಡಿದರು ಎಂದಾಗ ಛಂದ ಶೈಲಿ ಪದಗಳ ಬಳಕೆಗಿಂತ ಅವರ ಮನೋಧರ್ಮದಲ್ಲಿ ಆ ಬದಲಾವಣೆ ಕಂಡುಬರುತ್ತದೆಯೇ ಎಂದು ಗುರುತಿಸುವುದು. ಅವರೇ ಇವು ಮಾರ್ಗ ದಲ್ಲಿ ನಡೆಗ ಯಶಸ್ವೀ ಪ್ರಯೋಗಗಳೆಂದು ಕರೆಯುತ್ತಿಲ್ಲ ಎಂದಿದ್ದಾರೆ. 'ಮಣ್ಣಿನ ಮೆರ ವಣಿಗೆ'ಯ ಕವನಗಳನ್ನು ನವ್ಯಕವನಗಳೆಂದು ಕರೆದರೂ(ನೆಲ–ಆಕಾಶ-ಮನುಷ್ಯ; ನಗರದ ಮಧ್ಯೆ ಇದ್ದೂ– ಗುಂಪಿನ ನಡುವೆ ಇದ್ದೂ ಏಕಾಕಿತನದ ಅನುಭವ–ಇಂದು ಕ್ಲೀಷೆಯಾ ಗಿರುವ ಅನಾಥ ಪ್ರಜ್ಞೆ? : ನೆರಳು ಕಾಡುವ ಅನುಭವ ಇತ್ಯಾದಿ) ಅಲ್ಲೂ ಸಹ ಅವರು ರೊಮಾಂಟಿಕ್ ದೃಷ್ಟಿಯಿಂದ ಹೊರತಾಗಿಲ್ಲ. ಅವರ ಭಾವುಕ ಮನೋಧರ್ಮವೇ ಭಿನ್ನ ರೂಪದಲ್ಲಿ ವ್ಯಕ್ತ ವಾಗಿದೆ. ಅವರ ನಿಲುವೇ ಬೇರೆ. ಕನ್ನಡದಲ್ಲಿ ನವ್ಯಕಾವ್ಯ ಬೆಳೆದನಂತ ರದ ಸ್ಥಿತಿಗತಿಯ ಎಚ್ಚರ ಅವರಿಗಿತ್ತು ಎಂಬುದಕ್ಕೆ 'ವಿನೂತನ ಕವಿಯ ಕೈಫಿಯತ್ತು' 'ಎರಡುದಡ' ಕವನಗಳು ಸಾಕ್ಷಿ. ಅವುಗಳಲ್ಲಿ ಅವರ ನಿಲವು ಒಲವು ಸ್ಪಷ್ಟ.

"ಏನೋ ಚಂದ್ರ ಪೆಂಗೆ, ನಾಚ್ಕೆ ಇಲ್ವೆ ನಿಂಗೆ" ಎಂದು ಪ್ರಾರಂಭವಾಗುವ ಕವನ ನವ್ಯಕಾವ್ಯ ಸಮರ್ಥಕರ ನವೋದಯ ಕಾವ್ಯ ನಿಂದೆಯನ್ನು ವಿಡಂಬನಾತ್ಮಕವಾಗಿ ವರ್ಣಿ ಸುತ್ತಲೇ ಅವರ ಅಬ್ಬರದ ಹುರುಳಿಲ್ಲದ ಮರುಳುತನವನ್ನು ಬಿಚ್ಚುತ್ತ ಹೋಗುತ್ತದೆ.

> ಮೇಲಾಗಿ ನಿನ್ನಲ್ಲಿ ಬೆಳವಣಿಗೆಯೇ ಇಲ್ಲ.
> ..................
> ಬೆಳೆ ಬೆಳೆದು ತಳವಿತಳ ಪಾತಾಳವನ್ನು ಕಲಕಿ ಕಾಲಾಡಿಸಿಲ್ಲ,
> ನೋಡಿಲ್ಲಿ : ಎಷ್ಟು ಬೆಳೆಸಿದ್ದೇವೆ-
> ನಮ್ಮ ತಲೆ.

ಸಾಲಿನಿಂದ ಸಾಲಿಗೆ ಬೆಳೆಯುವ ವಿಡಂಬನೆ 'ನಮ್ಮ ತಲೆ' ಎಂದು ನಿಂತಾಗ, ಬಳಕೆಯ ನಿಂದೆಯ ಅರ್ಥದ ಸಾಹಚರ್ಯದಿಂದ ತಟಕ್ಕನೆ ವಿರುದ್ಧಾರ್ಥಕೊಡುತ್ತ ನಿಂದಿಸುವವರನ್ನೂ ತಾಗುತ್ತದೆ.

> ಕದಹಾಕಿ, ಕಿಟಕಿ ಮುಚ್ಚಿ, ನಾವೆ ಹುಟ್ಟಿಸಿಕೊಂಡ ಚಿಂತೆಗಳ ಕಂತೆ ಬಿಚ್ಚಿ ಹಾಯಾಗಿ ಮಲಗುತ್ತೇವೆ.
> ..................
> ನಮ್ಮಂತೆ ಬದುಕಿನ ಬಾವಿಯಾಳಕ್ಕಿಳಿದು
> ಜೊಂಡು ಪಾಚಿಯ ಕಂಡು ಉಂಡವರೆಷ್ಟು ಮಂದಿ
> ..................
> ಹೋಗು, ನಮ್ಮಂತೆ ಸದಾ ಅಸ್ವಸ್ಥನಾಗು
> ಬೇನೆಯಿರದಿದ್ದರೂ ನರಳು.

ಇದು ನವ್ಯಕಾವ್ಯದ ಹೆಸರಿನಲ್ಲಿ ಕೆಲವರು ನಡೆಸಿದ ಆಭಾಸಕ್ಕೆ ಕನ್ನಡಿಯಾಗಿದೆ. ಕಣವಿಯವರು ಯಾವುದರ ತಿರಸ್ಕಾರ ಅಥವಾ ಸಮರ್ಥನೆಯನ್ನು ಮಾಡದಿದ್ದರೂ ಅವರ ಒಲವು ಎತ್ತ ಎಂಬುದು ಸ್ಪಷ್ಟ.

ಕಾವ್ಯ ಭಾಷೆಯ ದೃಷ್ಟಿಯಿಂದ ವಿಚಾರ ಮಾಡಿದಾಗ, ಒಂದು ವೇಳೆ ನವ್ಯ ಕಾವ್ಯದ ಉಗಮವಾಗದಿದ್ದರೂ, ಜೀವನದ ಗತಿಗೆ ತಕ್ಕಂತೆ ಹೊಸ ಅನುಭವಗಳ ಸಂವಹನೆಗೆ ತಕ್ಕ ಭಾಷೆ ಸ್ವಾಭಾವಿಕವಾಗಿ ರೂಪುಗೊಳ್ಳುತ್ತಿತ್ತು. ಕುವೆಂಪು; ವಿ.ಸೀ. ಅವರ ಕೆಲವು ಕವನಗಳು, ನವ್ಯ ಕಾವ್ಯದ ಉಗಮಕ್ಕೆ ಮೊದಲೇ, ಹೊಸದಾರಿಯ ಅನಿವಾರ್ಯತೆಯ ದಿಕ್ಸೂಚಿಯಂತೆ ರಚಿತವಾಗಿವೆ. ಹೀಗೆ ರೊಮಾಂಟಿಕ್ ಕಾವ್ಯ ಭಾಷೆಯಲ್ಲೂ ಮಾರ್ಪಾಟಾಗುತ್ತಿತ್ತು. ಆದ್ದರಿಂದ 'ನವ್ಯ' ಎಂದು ಕರೆಯದೆ ಕವಿತೆ ರಚಿಸುತ್ತ ನಡೆದ, ಪಂಥ ಮಾರ್ಗಗಳ ಚರ್ಚೆ ಘರ್ಷಣೆಗಿಂತಲೂ ಪ್ರಾಮಾಣಿಕ ಅಭಿವ್ಯಕ್ತಿಗೆ, ಓದುವವರನ್ನು ಮುಟ್ಟುವುದಕ್ಕೆ ಬೆಲೆಕೊಟ್ಟ ಕೆಲವು ಕವಿಗಳನ್ನು ಒಂದಲ್ಲ ಒಂದು ವರ್ಗಕ್ಕೆ ಸೇರಿಸುವ ಅಥವಾ ಅವರಿಗಾಗಿ ಒಂದು ಹೊಸ ಮಾರ್ಗದ ನಾಮಕರಣ ಮಾಡುವ ಅವಶ್ಯಕತೆಯಿಲ್ಲ ಎನಿಸುತ್ತದೆ. ಇದೊಂದು ಸ್ವಾಭಾವಿಕ ಬೆಳವಣಿಗೆ ಎನ್ನಬಹುದು. ಕಣವಿಯವರ ಕಾವ್ಯ "ಅಪೆರೆಡರ ನಡುವಿನ ಸೇತುವೆ" ಎಂದಾಗಲೀ, ಅವರು "ಹಳೆ ಹೊಸ ಸಂಪ್ರದಾಯಗಳ ನಡುವೆ ಹೊಯ್ದಾಡು ತ್ತಿದ್ದಾರೆ" ಎಂದಾಗಲಿ ಹೇಳುವುದಕ್ಕಿಂತ, ಅವರ ಮಾರ್ಗ 'ಸಮನ್ವಯ' ಮಾರ್ಗ ಎಂದು ಕರೆಯುವುದಕ್ಕಿಂತ ಸಂಕ್ರಮಣ ಕಾಲದ ಕವಿ ಸ್ವಾಭಾವಿಕವಾಗಿ ಬೆಳೆದ ಬಗೆಯೆಂದು ಹೇಳ ಬಹುದು. ಕಣವಿಯವರ ಸಾನೆಟ್‌ಗಳಲ್ಲಿ ಆದ ಭಾಷೆಯ ಬದಲಾವಣೆಯನ್ನು ಹಿಂದೆ ವಿವರಿಸಿದೆ. ಇತರ ಕವನಗಳಲ್ಲಿಯೂ ಅದನ್ನು ಗುರುತಿಸಬಹುದು.

ಮೊದಲ ಸಂಗ್ರಹಗಳಲ್ಲಿ ಕಾಣಬರುವ ನಿಯತಗಣಲಯದ ಬದ್ಧಛಂದ ಕಾಲ ಕ್ರಮೇಣ ಮುಕ್ತವಾಗುತ್ತ ಬರುತ್ತದೆ, ಕವನದ ವಸ್ತು ಭಾವಕ್ಕೆ ತಕ್ಕಂತೆ ಪೂರಕವಾಗಿ 3, 4, 5, ಮಾತ್ರಾಗಣಗಳ ಪ್ರಯೋಗ ಗೇಯತೆಯನ್ನು ನೀಡಿದೆ.

ಮೂರು ಮಾತ್ರೆಗಳ ಲಯ-

ಪಕಳೆ ಪಕಳೆ ತೆರೆಯುವಂತೆ<br>
ಚೆಲುವನೊಲಿದು ಕರೆಯುಂತೆ (ಎತ್ತು ಮೇಲಕೆನ್ನನು)

ನಾಲ್ಕು ಮಾತ್ರೆಗಳ ಲಯ-

ಚಿಂತೆಯ ಕಾಡಿನ ಎಲುವಿನ ಗೂಡಿನ<br>
ಜೀವನ ಹಕ್ಕಿಯು ನರಳುತಿದೆ, (ಬಾಳಿನ ಬೀಳಿದು

ಹಾಗೆಯೇ 3+4, 3+5ರ ಮಿಶ್ರ ಗಣಲಯವನ್ನೂ ಪ್ರಯೋಗಿಸಿದ್ದಾರೆ. ಐದು ಮಾತ್ರೆಗಳ ಗಣ ವಿನ್ಯಾಸ ಮೊದಲಿನಿಂದಲೂ ಪ್ರಯೋಗವಾಗಿದೆ, ಅಷ್ಟ ಷಟ್ಪದಿಯಿಂದ ಹದಗೊಂಡ ಕೈಗೆ ಸಹಜವಾಗಿ ಈ ಲಯ ಒಗ್ಗಿದೆ. ಭಾವಗೀತೆಗಳಲ್ಲಿ ಅಲ್ಲದೆ ಮುಕ್ತ ಛಂದದ ಕವನಗಳಲ್ಲೂ ಈ ಲಲಿತಲಯ ವಿನ್ಯಾಸ ಭಾವ ವ್ಯಂಜಕವಾಗಿ ಪ್ರಯೋಗವಾಗಿದೆ ಒಂದೇ ಬಗೆಯ ಲಯವಿನ್ಯಾಸ ಏಕತಾನವಾಗಿ ಬೇಸರ ಬರಿಸುವುದುಂಟು. ಅದು ಆಗದೆ ಹಾಗೆ ಗಣ ಪರಿವೃತ್ತಿಯನ್ನೂ, ಬಿಡುವು, ಹುಸಿಗಣಗಳನ್ನೂ ಅಲ್ಲಲ್ಲಿ ಬಳಸಿದ್ದಾರೆ, ಜಾನಪದ ಛಂದಸ್ಸಿನ ಪ್ರಯೋಗವನ್ನೂ ನಡೆಸಿದ್ದಾರೆ. (ಗಿರಿ ಗಿರಿ ಗಿಂಡಿ, ಆನಿ ಬಂತವ್ವಾ ಆನಿ)

ಇತ್ಯಾದಿ) ವ್ಯಕ್ತ ಛಂದದ ಕವನಗಳು ಹಾಡಲು ಬಾರದಂತೆ, ಮೇಲು ನೋಟಕ್ಕೆ ಗೇಯತೆಯನ್ನು ಕಳೆದುಕೊಂಡು, ಗದ್ಯದ ಮಾತಿನ ಧಾಟಿ ಎಂದು ಕಂಡು ಬಂದರೂ ಅಂತರ್ಲಯವನ್ನು ಹೊಂದಿರುತ್ತವೆ. ಬೇರೊಂದು ಸಂದರ್ಭದಲ್ಲಿ ಬೇರೆ ಅರ್ಥದಲ್ಲಿ ಕಣವಿಯವರು ಹೇಳಿರುವ ಈ ಮಾತುಗಳು ಗಮನಾರ್ಹ.

ಮಾತು ಗದ್ಯಕ್ಕಿಳಿಯಿತೆಂದು ಬೇಸರ ಪಡಬೇಡಿ
ಪದ್ಯದಲ್ಲೂ ಹತ್ತು ಕಟ್ಟುವ ಕಡೆಗೆ ಒಂದು ಮುತ್ತು ಕಟ್ಟುವುದುಂಟು.
ಹಾಗಿದ್ದರೇನೆ ಅದಕ್ಕೆ ಬೆಲೆಯುಂಟು.

ಕಾವ್ಯದಲ್ಲಿ ಗದ್ಯತನವೂ ಹೊಸ ಬಗೆಯ ಕವಿತೆಯ ಒಂದು ಧೋರಣೆ. ಈ ಗದ್ಯತನದ ಅರ್ಥ ಮತ್ತು ಉದ್ದೇಶವನ್ನು ಹೀಗೆ ಹೇಳಬಹುದು. ಹಾಡುವಿಕೆ ಅಥವಾ ಗೇಯ ಗುಣಕ್ಕೆ ಕೊಡುವ ಪ್ರಾಧಾನ್ಯವನ್ನು ಕಳೆಯುವುದು, ಕಾವ್ಯವನ್ನು ಸಂಗೀತವಾಗಿಸದೆ ಕಾವ್ಯವಾಗಿಯೆ ಉಳಿಸುವುದು, ಒಂದು. ಕಾವ್ಯವನ್ನು ದಂತ ಗೋಪುರವಾಗಿಸದೆ ಓದುಗರಿಗೆ ಹತ್ತಿರ ವಾಗಿಸುವುದು, ಎರಡು. ಇದರಿಂದ ಕಾವ್ಯ ಆಡು ನುಡಿಗೂ, ವಾಸ್ತವತೆಗೂ ಹತ್ತಿರವಾಗುತ್ತದೆ. ಆದರೆ ಇದು ನೀರಸ ಗದ್ಯವಾಗದೆ. ದಿನ ಬಳಕೆಯ ಮಾತು ಮಾತ್ರ ಆಗದೆ, ಕಾವ್ಯವಾಗಬೇಕಾದರೆ ಕವಿತೆಯುದ್ದಕ್ಕೂ ಸಾಧಿಸುವ ಅಂತರ್ಲಯ ಹಾಗೂ ಶಬ್ದಾರ್ಥ ಕೋಶಾರ್ಥಕ್ಕೆ ನಿಲ್ಲದೆ, ಅನುಭವವನ್ನು ಮುಟ್ಟಿಸುವ ಧ್ವನಿಯನ್ನು ಅನುರಣನ ಗೊಳಿಸುವ ಶಕ್ತಿ ಅಗತ್ಯ. ಕಣವಿಯವರು ಇದನ್ನು ಸಾಧಿಸಿದ್ದಾರೆ. ಸಾಮಾನ್ಯವಾಗಿ ಭಾವಕ್ಕೆ ತಕ್ಕಂತೆ ಸೂಕ್ಷ್ಮ ವ್ಯತ್ಯಾಸಗಳಿದ್ದರೂ ಐದು ಮಾತ್ರೆಗಳ ಲಯ ಅದರ ಸ್ಥಾಯಿ :

ಸೇದಿ ಬೀ. ಸಾಡಿರುವ ,ಸಿಗರೇಟು. ತುಂಡಿನೊಲು
ದೂರದಲಿ, ಕಾಣಿಸಿತು. ಮಂಕು ಚಿ. ಕ್ಕೆ— (ವಿರಹಿ : ಸಂಜೆ)

ಜೇನು ಹು. ಟ್ಟಿಗೆ ಯಾರೊ. ಹೊಗೆಯಿಟ್ಟು, ಹೋದಂತೆ
ಮಂದಿ ಗಿಜಿ. ಗಿಟ್ಟಿರುವ. ನಿಲ್ದಾಣ (ಕೊನೆಯ ನಿಲ್ದಾಣ)

ಜೋಲಿ+ಹೊಡೆಯುತ+ತಂತಿ, ಮೇಲೆ+ಓಡುವ+ನಡೆವ
ವಿವಿಧ ಕಸ. ರತ್ತು. (ದೀಪಧಾರಿ)

ಕಾವ್ಯದಲ್ಲಿ ಬಳಸುವ ಭಾಷೆ ಮತ್ತು ಲಯ ಸಂಬಂಧ ಕಾರಣವಾಗಿ ಕಣವಿಯವರು ಮಾರ್ದವತೆಗೂ ಲಾಲಿತ್ಯಕ್ಕೂ ಒಲಿದಿರುವುದು ಸ್ಪಷ್ಟ. ಭಾವಗೀತೆಗಳಲ್ಲಿ ಸಾಲು ಬಿಟ್ಟು ಸಾಲಿಗೆ ಅಂತ್ಯ ಪ್ರಾಸ ಸಂಯೋಜನೆ ಬಹುವಾಗಿ ಕಾಣುತ್ತದೆ. ಆದರೆ ಅದೂ ಎರಡು ನಾಲ್ಕನೆಯ ಸಾಲುಗಳಿಗೆ ಸೀಮಿತ. ಅವರ ಒಲವು ಅನುಪ್ರಾಸದತ್ತ. ಅನುಪ್ರಾಸ ಭಾವ ಪುಷ್ಟಿಯಾಗಿದ್ದಾಗ ಕವಿತೆಗೆ ಸೊಗಸು ತರುತ್ತದೆ.

ಎದುರು ಗೋಡೆಗೆ ಸಿಲುಬೆಗೇರಿಸಿದ ಗಡಿಯಾರ
ಸುತ್ತು ಸುತ್ತಿಗೆ ಗಂಟೆ ಟಿಂಟಣಿಸಿದೆ (ಮಧ್ಯಾಹ್ನದ ಮಜಲು)

ಯುಗ ಯುಗಗಳಿಂದ ತಂಗುಳಾಗಿದೆ ನಿನ್ನ ಬೆಳುದಿಂಗಳು (ವಿನೂತನ ಕವಿಯ ಕೈಫಿಯತ್ತು)

ಭೇದವಿಷ್ಟೇ, ಹರಿದಾಸರೆ ನಾವು ನರದಾಸರು (ದಾಸರ ದರ್ಶನ)

ಅನಾಯಾಸವಾಗಿ ಬಂದ 'ಹರಿದಾಸರು' 'ನರದಾಸರು' ಅನುಪ್ರಾಸದಿಂದ ವ್ಯಂಗ್ಯ ತೀಕ್ಷ್ಣವಾಗಿ ಅರ್ಥದ ಸ್ತರಗಳನ್ನೆ ಬಿಡಿಸುತ್ತದೆ. ಔಚಿತ್ಯ ಪೂರ್ಣವಾದ ನಾದಲಯ ಸಾಧನೆಗೆ "ಯಾರು ಕೇಳುತ್ತಾರೆ, ಹೇಳಿರಣ್ಣ" ಉತ್ತಮ ಉದಾಹರಣೆಯಾಗಿದೆ. ಇಲ್ಲಿ ಶಬ್ದದ ಹ್ರಸ್ವ ದೀರ್ಘಕೆ, ಕಾಕು, ಪ್ರಾಸಾನು ಪ್ರಾಸ. ಜಾನಪದ ಸತ್ವದ ಅರಿವುಂಟು ಮಾಡುತ್ತದೆ.

ಬಾಯಿ ಬಡಿಯುತ್ತಾರೆ, ಕಾಯಿ ಒಡೆಯುತ್ತಾರೆ
ಮರ್ಜಿ ಹಿಡಿಯುತ್ತಾರೆ, ಕುರ್ಚಿ ಪಡೆಯುತ್ತಾರೆ
ಯಾರು ಕೇಳುತ್ತಾರೆ ಹೇಳಿರಣ್ಣ.

ಮೇಜು ಗುದ್ದುತ್ತಾರೆ, ಮೈಕು ಮುರಿಯುತ್ತಾರೆ
ಮಾಲೆ ಬೇಡುತ್ತಾರೆ, ಮೋಜು ಮಾಡುತ್ತಾರೆ
ಯಾರು ಕೇಳುತ್ತಾರೆ, ಹೇಳಿರಣ್ಣ. ಇತ್ಯಾದಿ.

ಆದರೆ ಮಾತಿನ ಮಾಟಕ್ಕೆ ವಶವಾದಾಗ ಅರ್ಥದ ಕಡೆ ಹೊರಳ ಬೇಕಾದ ಗಮನಕ್ಕೆ ಅಡ್ಡಿಯಾಗುವ ಸಂಭವವುಂಟು, ಇಂತಹ ಉದಾಹರಣೆಗಳು ಅವರ ಕವನಗಳಲ್ಲಿ ಕಂಡು ಬರುತ್ತವೆ. ಪದಗಳಲ್ಲಿನ ಲಘು-ಗುರು ವಿನ್ಯಾಸವನ್ನೂ, ಸಂಯುಕ್ತಾಕ್ಷರಗಳ ಒತ್ತನ್ನೂ ಭಾವಕ್ಕೆ ಪುಷ್ಟಿ ಕೊಡುವಂತೆ ಪ್ರಯೋಗಿಸಿರುವುದನ್ನೂ ಕಾಣಬಹುದು. "ಸುವಿಶಾಲ ಆಲ" "ತಳಿರು ನಾಲಿಗೆ ಚಾಚಿ....ನೆಳಲು ಮೈ ಚಾಚಿ" "ಭೂಮಂಡಲವ ನೆತ್ತಿಯಲಿ ಹೊತ್ತು ಮೇಲೆತ್ತುವೊಲು ಏಳುವನನಾಮತ್ತು" ಇತ್ಯಾದಿ.

ಹೊಸ ಬಗೆಯ ರಚನೆಗಳಲ್ಲಿ ವಾಕ್ಯಗಳನ್ನು ಒಡೆದು ಸಾಲುಗಳನ್ನಿರಿಸುವಾಗ ಕಣವಿಯವರು ಭಾವ ವ್ಯಂಜಕವೂ ಅರ್ಥವ್ಯಕ್ತಿಯೂ ಆದ ಕ್ರಮ ಅನುಸರಿಸುತ್ತಾರೆ. ಬೇಕೆಂದೆ ಸಾಲುಗಳನ್ನು ಮೊಟಕು ಮಾಡಿ, ಅಥವಾ ಪದವನ್ನು ವಿಭಜಿಸಿ ವಿಭಿನ್ನಾರ್ಥ ಸಾಧಿಸುವ ತಂತ್ರಕ್ಕೆ ಅವರು ಮಾರು ಹೋಗಿಲ್ಲ. ಕವಿತೆಯ ಓಟಕ್ಕೆ ಸಹಜವಾದ ಬಿಡುವು ನಿಲುಗಡೆಗಳನನ್ನೆ ತರುತ್ತಾರೆ. ಒಂದು ವೇಳೆ ಅನಾಯಾಸವಾಗಿ ತಾನಾಗಿ ವಿವಿಧ ಅರ್ಥಛಾಯೆಗಳು ಬರುವಂತಿದ್ದರೆ ಅಂತಹ ಸಂದರ್ಭವನ್ನು ಜಾಣ್ಮೆಯಿಂದ ಬಳಸಿ ಕೊಂಡಿದ್ದಾರೆ. ಉದಾ:

ಬನ್ನಿ :
ಆ ಭೂತ ಇನ್ನೂ ಸತ್ತಿರದಿದ್ದರೆ
ಎಲ್ಲರೂ ಕೂಡಿ
ಇನ್ನೊಂದು ಬಾರಿಗೆ
ಗುಂಡು ಹಾಕೋಣ (ಮೃತ್ಯು ಘೋಷಣೆ)

ಆ ಭೂತ ನವ್ಯ ಕವಿತೆ! ಗುಂಡು ಹಾಕುವುದಕ್ಕೆ ಇನ್ನೊಂದು ಅರ್ಥವೂ ಇದೆ. ಆದ್ದರಿಂದ ಸಾಲುಗಳ ವಿನ್ಯಾಸದಿಂದಲೇ ವಿಭಿನ್ನಾರ್ಥ ಮೂಡಿ, ಕವನದ ನಡೆಗೆ ಅತ್ಯಂತ ಉಚಿತವಾದ ವ್ಯಂಗ್ಯ ಮುಕ್ತಾಯವನ್ನು ತರಲಾಗಿದೆ. ಹಾಗೆ ಈ ಸಾನೆಟ್‌ನ ಸಾಲಿನ ಪದ ವಿಭಾಗ ನೋಡಿ :

ತುಂಬಿದುದು ತುಳುಕಿ ಹೋಗದ ಹಾಗೆ ತುಟಿಯಂಚಿ
ನಲ್ಲೆ ನಗು................ (ಪು. ತಿ. ನ)

ತಂಡಿಯಂಚಿನಲ್ಲೆ+ನಗು,+ನಲ್ಲೆ ನಗು. ಪದ ವಿಭಾಗದಲ್ಲಿ ಕೃತಕತೆ ಇಲ್ಲ.

ಸ್ವಾಂತತೆ ಭಾವಗೀತೆಯ ಮುಖ್ಯ ಲಕ್ಷಣವಾದರೂ ಕವಿ ಮಾರು ದೂರ ನಿಂತು ಅನುಭವವನ್ನು ಮೆಲುಕುಹಾಕುತ್ತ ವರ್ಣಿಸುತ್ತಿರುವಂತೆ ಪರಿಣಾಮವಾಗುತ್ತದೆ. ಕಣವಿಯವರು ಕಾಲಕ್ರಮೇಣ ಈ ನಿರ್ಲಿಪ್ತ-ತಟಸ್ಥ ಸ್ಥಿತಿಯಿಂದ ಓದುಗರನ್ನು ಆತ್ಮೀಯವಾಗಿ ಸೆಳೆವ, ಹೃದಯ ಬಿಚ್ಚಿಡುವ, ಸಂವಾದಿಸುವ ನಿರೂಪಣ ಕ್ರಮಕ್ಕೆ ತಿರುಗುವುದನ್ನು ಗುರುತಿಸಬಹುದು. ನವ್ಯ ಕಾವ್ಯದಲ್ಲಿ ನಾಟಕೀಯ ಶೈಲಿ ಒಂದು ಲಕ್ಷಣ. ನವ್ಯಕವಿತೆಯ ನಾಟಕೀಯ ಗುಣ ಅವರ ಕವಿತೆಗಳಲ್ಲಿಲ್ಲವಾದರೂ ಆತ್ಮೀಯ ಸಂವಾದ-ಆತ್ಮಸಂವಾದ ಗುಣವಿದೆ.

ಓ, ಅಂದ ಹಾಗೆ ಬಂದೇ ಬಿಟ್ಟಿರಾ! ಬನ್ನಿ
ಎಷ್ಟು ವರುಷದ ಮೇಲೆ ನಿಮ್ಮ ದರ್ಶನವಾಯ್ತು
(ದಾಸರ ದರ್ಶನ)

ಮೊನ್ನೆ ಮೊನ್ನೆ ಯುದ್ಧವಾಯ್ತು ಮನುಕುಲದುದ್ಧಾರಕೆ
ಕಳೆಯಲೆಂದೆ ಬಂದಿತೆನ್ನಿ
ದೇಶ ದಿಗ್ದೇಶಗಳ
ಶಾಂತಿಯ ಬಾಯಾರಿಕೆ ;
(ಪಡುಗಡಲು)

ಎಂಥ ಹುಚ್ಚನೊ ನೀನು
ಸುಮ್ಮನೆ ದಂಗು ಬಡಿದೇಕೆ ನಿಂತಿ ?
..............
ಇದು ಹೊರಟದ್ದೇ ಲೇಟು
ಬಂದು ಮುಟ್ಟಿದ್ದು ಇನ್ನೂ ಲೇಟು
..............
ಅರೆ, ಎಲ್ಲಿ ಹೋಯಿತು ಕೋಟಿನೊಳಗಿಟ್ಟ ಪಾಕೀಟು ?
(ಕೊನೆಯ ನಿಲ್ದಾಣ)

ಉದ್ದಕ್ಕು ಅಲ್ಲಲ್ಲಿ ಪ್ರಶ್ನೆಗಳು, ಅವಕ್ಕೆ ಉತ್ತರ ಹೇಳುವ ಬದಲು, ಪ್ರಶ್ನೆಯ ರೂಪದಲ್ಲಿ ಉತ್ತರವೂ ಸಿಗುವಂತೆ ಇರುವುದು 'ದೀಪಧಾರಿ'ಯನಂತರದ ಕವನಗಳ ಮತ್ತೊಂದು ವೈಶಿಷ್ಟ್ಯ. ಆದರೆ ನಿರೂಪಣೆಯ ನಡುವೆ, ಓರೆಮಾತಿನ ಧಾಟಿಯಲ್ಲಿ, ಕಂಸದೊಳಗೆ ಸೇರಿಸುವ ಮಾತುಗಳು ಅರ್ಥಪುಷ್ಟಿಗಿಂತಲೂ ಬಿಡಿಯಾಗಿ ಹೊರೆಯಾಗಿ ನಿಲ್ಲುತ್ತವೆ. ಕವಿತೆಯ ಏಕಮುಖತೆಗೆ ಭಾವಗತಿಗೆ ಓಟಕ್ಕೆ ಧಕ್ಕೆಯಾಗುತ್ತದೆ.

ತೆರಳಿದರು
ಅತಿಥಿಗಳು ಮರಳಿದರು ಮನೆಗೆ.

ನನ್ನ ಮನೆ
(ಗುಬ್ಬಿ ಹೆರವರ ಮನೆಗೆ
ತನ್ನ ಮನೆ ಎಂದಂತೆ)
ಬರಿದಾಯ್ತು ಕೊನೆಗೆ. (ಚಿಂತನ)

ಕವನದ ಕೊನೆಯುವರೆಗೆ ಓದಿದರೂ ಈ ಸಾಲು ತಲೆಹಾಕಿದ್ದರ ಔಚಿತ್ಯ ತಿಳಿಯುವುದಿಲ್ಲ.

ನಿಟ್ಟು ಸಿರನೆಳೆದು
ದಾಟಿತು ಕೊನೆಯ ರೈಲು :
(ತಕ್ಕೊ ಕೈಮರದ ಕರಡೀ ಸಲಾಮು! )
ಕೈಯ ಚಾಚಿದ ನೆರಳು ಚಲಿಸುತ್ತಿದೆ...... (ನೆರಳು)

ಭಾವಗೀತೆಯ ವರ್ಣನಾತ್ಮಕ ಶೈಲಿ ಬರಬರುತ್ತ ರೂಪಕ ಭಾಷಾಶೈಲಿಯಾದುದನ್ನು ಹಿಂದೆಯೇ ಸೂಚಿಸಿದೆ. ಅಮೂರ್ತವಿಷಯುಗಳೂ ಅಚೇತನ ವಸ್ತುಗಳೂ ಸಜೀವ, ಚೇತನಾತ್ಮಕವಾಗಿ ಸ್ಪಂದಿಸುತ್ತವೆ, ಈ ಶೈಲಿಯುಲ್ಲಿ.

''ಹಗಲು ಮೂರ್ಛೆಗೆ ಸಂದ ಗಾಳಿ......''
''ಮಾವು ಹೂವಿನ ಕೊಡೆ ವಿಮಾನದಿಂದಿಳಿತಂದು''
''ಕತ್ತಲೆಯಚ್ಚಿನಲಿ ಬೆಳಕಿನೆರಕವ ಹೊಯ್ದು''
''ವರ್ಷಗಟ್ಟಲೆ ರಿಪೇರಿ ನಡೆಯುತ್ತಿರುವ ರಾಜಮಾರ್ಗ''
''ಪಾತಾಳದಿಂದ ಪುಟಿದು, ನೆಲದ ವಾಸನೆ ಹಿಡಿದು, ಮುಗಿಲಕೆಚ್ಚಲ
ಗುಮ್ಮಿ, ಹಗಲ ಬೆಳಕನು ನೆಕ್ಕಿ......''
''ಗಿರಣಿಬಂಬಿನ ಹುತ್ತದಿಂದ ಹೊಗೆಯೆದ್ದು
ಹಾವುಹೆಡೆ ಬಿಚ್ಚಿತು.''
''ತಳಿರು ನಾಲಿಗೆ ಚಾಚಿ ತೇಕುತಿತ್ತು'' ಇತ್ಯಾದಿ.

ಪದಪುಂಜ, ವಾಕ್ಯಗಳ ಪ್ರಯೋಗದಲ್ಲಿ ಮೊದಲೆ ಕ್ರಿಯಾಪದವನ್ನು ಹಾಕಿಯೋ ಅಥವಾ ಕ್ರಿಯಾಪದರಹಿತ ವಾಕ್ಯಗಳ ಬಳಕೆಯಿಂದಲೋ ಮಾಲೆಮಾಲೆಯಾಗಿ ಶಬ್ದಚಿತ್ರಗಳು ಪ್ರತಿಮೆಗಳು ಸಾಗುತ್ತ ಒಂದೊಂದೂ ಸ್ಫುಟವಾಗಿ ಎದ್ದು ಕಾಣುವಂತೆ ಮಾಡುತ್ತಾರೆ. ಆದರೆ ಸಾಧಿಸಬಹುದಾದ ಸಂಕ್ಷಿಪ್ತತೆ, ಭಾವದೀಪ್ತಿ ಇವರಲ್ಲಿ ಅಷ್ಟು ತೀವ್ರವಾಗಿಲ್ಲ. ಹಾಗೆ ಆದಾಗ ಕವಿತೆ ಜಾಳಾಗದೆ ಹೆಪ್ಪಾಗುತ್ತ ಸಾಗಿ ಅರ್ಥ ಸಂಕೀರ್ಣತೆಯನ್ನು ಮೈಗೂಡಿಸಿಕೊಳ್ಳುವುದು ಸಾಧ್ಯ.

ಕಣವಿಯವರಲ್ಲಿ ಅಪರೂಪಕ್ಕಾದರೂ ಕಾಣಬರುವ ಮತ್ತೊಂದು ವೈಶಿಷ್ಟ್ಯವೆಂದರೆ ಒಂದೇ ಶಬ್ದ ಬೇರೆ ಬೇರೆ ಸಂದರ್ಭಗಳಲ್ಲಿ ಸಾಮಾನ್ಯಾರ್ಥಕ್ಕಿಂತಲೂ ವಿಭಿನ್ನವಾದ ಅರ್ಥ ಛಾಯೆಗಳನ್ನು ಹೊರಡಿಸುವುದು ಉದಾ : 'ನೆರಳು' ಶಬ್ದ ಒಂದೇ ಕವನದಲ್ಲಿ ಬೇರೆ ಬೇರೆ ಅನುಭವ ತರುತ್ತದೆ ;

ಮಟ ಮಟ ಮಧ್ಯಾಹ್ನದಲ್ಲಿ
ನೆರಳು ಹುಡುಕುತ್ತ ಹೊರಟಿದ್ದೇನೆ.

ನೆಲಕೆ ತೊನ್ನು ಹತ್ತಿದ ಹಾಗೆ ನೆರಳು

.................

ಹೀಗೆ

ಮಂದಿಯ ನಡುವೆ

ನೆರಳು ಹುಡುಕುತ್ತ ನಡೆಯುವಾಗ (ನಗರದಲ್ಲಿ ನೆರಳು)

ಕೈಯ ಚಾಚಿದ ನೆರಳು ಚಲಿಸುತ್ತಿದೆ

ನೆರಳು ತೆವಳುತ್ತಿದೆ

ನೆರಳು ನರಳುತ್ತಿದೆ (ನೆರಳು)

ಮಳೆಯನ್ನು ಕುರಿತ ಚಿತ್ರಗಳು ಮನಸ್ಸಿನ ಸ್ಥಿತಿಗತಿಯ ಬಿಂಬವಾಗಿ, ಅಂತರಂಗದ ತುಮುಲಕ್ಕೆ, ವೈಚಾರಿಕ ಘರ್ಷಣೆಗೆ ಸಾಂಕೇತಿಕವಾಗಿ ಬರುತ್ತವೆ. ಕಟಕಿ, ವಿಡಂಬನೆ, ವ್ಯಂಗ್ಯಾರ್ಥವನ್ನು ಶಬ್ದಗಳ ಬಳಕೆ, ವಿನ್ಯಾಸ, ಕಾಕುವಿನಿಂದ ಸಾಧಿಸಿರುವುದನ್ನು ವಿಸ್ತರಿಸಿ ಹೇಳಬೇಕಿಲ್ಲ. 'ವಿನೂತನ ಕವಿಯು ಕೈಫಿಯತ್ತು' 'ಲಾಗ', 'ಯಾರು ಕೇಳುತ್ತಾರೆ, ಹೇಳಿರಣ್ಣ' 'ಅಪರಾವತಾರ'ಗಳಂಥ ಕವನಗಳು ಅವರ ಪ್ರತಿಭೆಗೆ ಸಾಕ್ಷಿ.

ಇದುವರೆಗೆ ಕಣವಿಯವರು ಅಭಿವ್ಯಕ್ತಿಗೆ ಭಾಷೆಯನ್ನು ಬಳಸಿಕೊಂಡಿರುವ ಸಾಧ್ಯತೆಗಳನ್ನು ಹುಡುಕಿರುವ ಬಗೆಯನ್ನೂ ಭಾಷೆಯ ಹದ ಬನಿ ಸಾಧಿಸಿರುವ ರೀತಿಯನ್ನೂ ಸೂಚಿಸಿದೆ. ಇಷ್ಟಾದರೂ ಒಂದು ಕೊರತೆ ಇದೆ ಎನಿಸುತ್ತದೆ. ಸಮಕಾಲೀನ ಕವಿಗಳಿಗಿಂತ ಭಿನ್ನವಾದ ವಿಶಿಷ್ಟವಾದ, ಓದುತ್ತಿದ್ದಂತೆ ಕೂಡಲೆ ಗುರುತಿಸಬಹುದಾದ ಭಾಷಾ ಶೈಲಿಯನ್ನು ರೂಪಿಸಿಕೊಳ್ಳಲಿಲ್ಲ ಎನಿಸುತ್ತದೆ. ಮುಖ್ಯವಾಗಿ ಅವರ ಜೀವನ ದೃಷ್ಟಿ, ಕಾವ್ಯ ದೃಷ್ಟಿ, ವೈವಿಧ್ಯ ಪೂರ್ಣ ವಸ್ತುವೂ ಇದಕ್ಕೆ ಕಾರಣವಾಗಿರಬಹುದು.

ಎಂ. ಚಿದಾನಂದಮೂರ್ತಿ

# ಕಣವಿಯವರ ಕವಿತೆಗಳ ಛಂದಸ್ಸನ್ನು ಕುರಿತು

ಕಣವಿಯವರ ಕವಿತೆಗಳ ಮುಖ್ಯ ಲಕ್ಷಣ ಅವುಗಳ ಅಕೃತಕ ಸೌಂದರ್ಯ. "ಕವಿತೆ ಏತಕೆ ಬೇಕು ಹೇಳಿ", "ಮೇಲಾಗಿ ಬರೆಯುವ ಮನಸ್ಸಿಲ್ಲ" ಎಂದು ಹೇಳುತ್ತಲೇ ಸೊಗಸಾದ ಕವಿತೆಗಳನ್ನು ರಚಿಸಬಲ್ಲರು. ಅವರ ಸಮೃದ್ಧವಾದ ಅನುಭವ ಭಾಷೆಯಲ್ಲಿ ಮೂಡಿ ಬರಲು ಎಲ್ಲೂ ತಡ ಕಾಡಿದಂತೆ ಕಾಣುವುದಿಲ್ಲ. ಇದರ ಅರ್ಥ ಅವರು ಬರೆದದ್ದೆಲ್ಲ ಕವಿತೆಯಾಯಿತೆಂದಾಗಲಿ, ಅಥವಾ ಒಮ್ಮೆ ಬರೆದದ್ದನ್ನು ತಿದ್ದುವ ಗೋಜಿಗೆ ಹೋಗದೆ ಹಾಗೆಯೇ ಪ್ರಕಟಿಸಿದರೆಂದಾಗಲಿ ಅಲ್ಲ. ಅಥವಾ ಅದು ನನ್ನ ಅಭಿಪ್ರಾಯವಲ್ಲ. ಅವರ ಕೆಲವು ಕವಿತೆಗಳ ಹಸ್ತ ಪ್ರತಿಗಳನ್ನು ನೋಡಿದರೆ ಅವರು ಅಲ್ಲಲ್ಲಿ ಕೆಲವು ಭಾಗಗಳನ್ನು ತಿದ್ದಿರುವುದು, ತೆಗೆದು ಹಾಕಿರುವುದು ಗೋಚರವಾಗುತ್ತದೆ. ಮತ್ತು ಈ ಕಾರ್ಯವನ್ನು ಯಾವನೇ ಯಶಸ್ವೀ ಲೇಖಕನೂ ಮಾಡಿರುತ್ತಾನೆ. ನನ್ನ ಅಭಿಪ್ರಾಯವನ್ನು ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ, ಓದುಗನಾಗಿ ಅವರ ಕವಿತೆಗಳನ್ನು ನೋಡಿದಾಗ ಅವು ತೀರ ಸ್ವಾಭಾವಿಕವಾಗಿ ಲೀಲಾ ಜಾಲವಾಗಿ ಮೂಡಿದಂತೆ ಅನುಭವವಾಗುತ್ತದೆ. ಕಾವ್ಯ ಮೂಡಿ ಬರುವ ವೇದನೆಯ ಅನುಭವವನ್ನೂ ಓದುಗರಿಗೆ ತಂದು ಕೊಡುವ ಕವಿಗಳು ಇಲ್ಲದಿಲ್ಲ. ಅಂತಹ ಕವಿಗಳು ಕವಿನಾಮಧಾರಕರು, ಅವರದು ಕೆಟ್ಟ ಕವಿತೆ ಎಂಬುದನ್ನು ಮತ್ತೆ ಹೇಳ ಬೇಕಾಗಿಲ್ಲ. (ಯಾವುದೇ ಕವಿತೆ ಹುಟ್ಟುವ ವೇದನೆ ಕವಿಯದು, ಅದು ಅವನ 'ಪಾಡು') ಕಣವಿ ಆ ವರ್ಗಕ್ಕೆ ಸೇರಿದವರಲ್ಲ.

ಈ ಪೀಠಿಕೆಯ ಹಿನ್ನೆಲೆಯಲ್ಲಿ ಅವರ ಕವಿತೆಗಳ ಛಂದಸ್ಸಿನ ಅಧ್ಯಯನವನ್ನು ಕೈಗೊಳ್ಳಬಹುದು. ಅವರು ವಿದ್ಯಾರ್ಥಿಯಾಗಿದ್ದಾಗ, ಸುಮಾರು 1949ರ ಸರಿ ಸುಮಾರಿನಲ್ಲಿ ಬರೆದ ಅವರ "ಕಾವ್ಯಾಕ್ಷಿ"ಯಲ್ಲೇ ಕಣವಿ ಎಂತಹ ಭರವಸೆ ಮೂಡಿಸಿದ್ದಾರೆ ಎಂಬುದನ್ನು ನೋಡಿದರೆ ಆಶ್ಚರ್ಯವಾಗುತ್ತದೆ. ಭಾಷೆ ಮತ್ತು ಛಂದಸ್ಸುಗಳ ಬಳಕೆಯಲ್ಲಿ ಬೇಂದ್ರೆಯವರ ಪ್ರಭಾವ ಮುದ್ರೆ ದಟ್ಟವಾಗಿದ್ದರೂ ಇಲ್ಲಿ ಯುವ ಕವಿ ಕೇವಲ ಅನುಕರಣಶೀಲರಾಗಿಲ್ಲವೆಂಬುದು ಗಮನಿಸಬೇಕಾದ ಸಂಗತಿ. ಸಹಜ ಭಾವುಕನಾದ ಕವಿ ಭಾಷೆಯ ಸೊಗಸಿಗೆ ಮನಸೋತು ಅಲ್ಲೇ ತನ್ಮಯಗೊಳ್ಳುವ ಆಕರ್ಷಣೆಗೆ ಬಳಗಾಗಿ, ಪ್ರಾಸವ್ಯಾಮೋಹಕ್ಕಾಗಿ 'ಸ್ಪರ್ಶನಾ' ಎಂಬ ಅನುಕೂಲ ರೂಪವನ್ನು ಸೃಷ್ಟಿಸಿಕೊಂಡಿದ್ದರೂ, ಕೆಲವೆಡೆ ಪ್ರತಿಮೆಗಳು ಪೂರ್ಣವಾಗಿ ಪಡಿಮೂಡದಿದ್ದರೂ ಒಟ್ಟು ಕವಿತೆ ಹಿತವಾದ ಅನುಭವವನ್ನು ತಂದುಕೊಡುತ್ತದೆ. ಸೃಷ್ಟಿಯ ಚೆಲುವಿನ ಭಿನ್ನಭಿನ್ನ ಮುಖಗಳನ್ನು ಕವಿ ಬೇರೆ ಬೇರೆ ಚಿತ್ರಗಳನ್ನು ರೇಖಿಸುತ್ತ ವರ್ಣಿಸುತ್ತಾ ಹೋಗುತ್ತಾನೆ.

"ತನಗೆ ತಾನೆ ತಿಳಿಯದಂತೆ! ತುಳುಕಿತಹಹ ಭಾವನಾ" ಎಂಬ ಕೊನೆಯ ಪದ್ಯದ ಸಾಲುಗಳು ಒಟ್ಟು ವರ್ಣನೆಗೆ ಒಂದು ರೀತಿಯ ಸಹಜ ಮುಕ್ತಾಯದಂತೆ ಬರುತ್ತವೆ. ಮತ್ತು ಈ ಮಾತುಗಳು ಕಣವಿಯವರ ಒಟ್ಟು ಕವಿತೆಯ ಬಗ್ಗೆ ಧ್ವನಿಸುವ ಸಂಗತಿಗಳಾಗಿ ಮುಖ್ಯವೆನಿಸುತ್ತವೆ. "ಜುಳು ಜುಳು ನದಿ ಕಲಕಲ ರುತಿ", "ಹಾಲುಗಳ್ಳಿ! ಜೋಲು ಬಳ್ಳಿ! ತೂಗುವಂಚ ಚಂಚಲಾ" ಮೊದಲಾದ ಪದ್ಯ ಭಾಗಗಳಲ್ಲಿ ಕವಿ ಸಾಧಿಸಿರುವ ಛಂದೋಲಯ ಬಹಳ ಗಮನಾರ್ಹವಾದುದು. ಇಡೀ ಕವಿತೆ ಒಂದು ಹಾಡಿನಂತೆ, ತೇಲುದೋಣಿಯ ಒನೆತದಂತೆ, ನರ್ತನದಂತೆ ಸಾಗುತ್ತದೆ.

ಕಣವಿಯವರ ಆರಂಭದ ಕವಿತೆಗಳು ನಮಗೆ ಪರಿಚಿತವಾದ ಲಯದಲ್ಲೇ ಸಾಗುತ್ತವೆ. ಮೂರು ಐದು ಮಾತ್ರೆಗಳ ಲಯವಾಗಲಿ, ಐದು ಮಾತ್ರೆಯ ಲಯವಾಗಲಿ ನವೋದಯ ಕಾವ್ಯ ಪರಂಪರೆಯಲ್ಲಿ ಪರಿಚಿತವೇ. ಆದರೆ ಕಣವಿಯವರು ತಿಳಿದೋ ತಿಳಿಯದೆಯೋ ಯಾವ ಲಯ ತನ್ನ ಒಂದೇ ರೀತಿಯ ನಡಗೆಯಿಂದ ಬೇಸರವನ್ನು ತರಬಹುದಿತ್ತೋ ಅಲ್ಲಿ ಬಹು ಬೇಗ ಲಯವನ್ನು ಒಡೆದು ವೈವಿಧ್ಯವನ್ನು ತರುತ್ತಾರೆ.

ಂ ಂ ಂ

ಉಣ್ಣೆಯಾಗಿ ಮಿದು ಬೆಣ್ಣೆಯಾಗಿ ಹಿಂಜಿರುವ ಅರಳೆಯಾಗಿ

ಈ ಸಾಲಿನಲ್ಲಿ ಲೆಕ್ಕಾಚಾರಕ್ಕೆ 3+5 ಮಾತ್ರೆಗಳ ಲಯವನ್ನು ತೋರಿಸಬಹುದಾದರೂ, ಲಕ್ಷ್ಯವಿಟ್ಟು ಓದಿದಾಗ ಕೇಳುವ ಲಯ ಒಟ್ಟು ಅರ್ಥಕ್ಕೆ ಅನುಸಾರಿಯಾಗಿರುವುದನ್ನು ಗುರುತಿಸಬಹುದು. ಮೋಡ ಕ್ಷಣ ಕ್ಷಣಕ್ಕೆ ತಾಳುವ ಬೇರೆ ಬೇರೆ ಆಕಾರಗಳನ್ನು ವಿಧಾನಗಳನ್ನು ಸೂಚಿಸುವುದನ್ನು ಲಕ್ಷಿಸಬೇಕು. ಇಲ್ಲಿ ಬಂದಿರುವ ಮೃದು ಸ್ವನಗಳು, 'ಮಿದು' ಎನ್ನುವುದು ಲಯದಿಂದ ಹೊರಗೆ ಉಳಿದು 'ಬೆಣ್ಣೆಯಾಗಿ' ಎಂಬ ಮಾತಿನ ಹಿಂದೆ ವಿಶೇಷಣವಾಗಿ ನಿಂತಿರುವುದು, 'ಹಿಂಜಿರುವ ಅರಳೆಯಾಗಿ' ಎನ್ನುವುದು ಅಖಂಡ ಭಾಗವಾಗಿ ನಿಂತು ಹಿಂಜಿದ ಭಾವವನ್ನು ಅಭಿನಯಿಸಿರುವುದು, ಮಧ್ಯೆ ಬಂದಿರುವ ಪ್ರಾಸಗಳು ಇವೆಲ್ಲ ಈ ಸಾಲನ್ನು ಸಾರ್ಥಕಗೊಳಿಸುತ್ತವೆ.

"ಗಿರಿ ಗಿರಿ ಗಿಂಡಿ" ಎಂಬುದು ಕಣವಿಯವರ ಸಾರ್ಥಕ ಕವನಗಳಲ್ಲಿ ಒಂದು. "ಗಿರಿ ಗಿರಿ ಗಿಂಡಿ । ಇಬತ್ತಿ ಉಂಡಿ" ಎಂಬ ಶಿಶುಗೀತೆಯ ಎರಡು ಸಾಲುಗಳ ಧಾಟಿಯಲ್ಲಿ ಇಡೀ ಕವನ ಸಾಗಿದೆ, ಮಕ್ಕಳು ಕೈ ಕೈ ಹಿಡಿದುಕೊಂಡು ಗಿರಿ ಗಿರಿ ಸುತ್ತುತ್ತ ಆ ಎರಡು ಸಾಲುಗಳನ್ನು ಹೇಳಿ ಕೊಂಡು ಸಂತೋಷ ಪಡುತ್ತವೆ. 'ಗಿಂಡಿ'ಗೂ ವಿಭೂತಿ ಉಂಡೆಗೂ ಏನೂ ಸಂಬಂಧವಿಲ್ಲ—ಪ್ರಾಸದ ಸಾಹಚರ್ಯವೊಂದನ್ನು ಬಿಟ್ಟರೆ, ಆ ಎರಡು ಸಾಲುಗಳಿಂದ ಸ್ಫೂರ್ತಿಗೊಂಡು ಕವಿ ಒಂದು ಅತ್ಯಂತ ಲವಲವಿಕೆಯ ಕವನವನ್ನು ರಚಿಸಿದ್ದಾರೆ. ಗೆಳತಿಯರು ಒಂದೆಡೆ ಸೇರಿ ನರ್ತಿಸುತ್ತ ಬಾಳಿನ ಸೊಗಸನ್ನು ಕುರಿತು ಹಾಡುತ್ತಾರೆ. ಇಲ್ಲಿ ಬರುವ ಮಂದಾನಿಲ ಲಯ ನರ್ತನಕ್ಕೆ, ಬಾಳಿನ ಹಗುರತೆಗೆ, ಜೀವನದ ಚೆಲುವಿಕೆಗೆ ಸಹಾಯಕಾರಿ. ಇಲ್ಲಿ ತತ್ವ ಚಿಂತನೆಯಿಲ್ಲ, ಬಾಳಿನ ಚಿಂತೆಯೂ ಇಲ್ಲ. ಇಡೀ

ಲೋಕ ಬದುಕಿನ ಸವಿಯಲ್ಲಿ ಭಾಗಿಯಾಗಿದೆ. ಮೋಡ, ಹಕ್ಕಿ, ಹಿತ್ತಲಿನ ಕುಂಬಳ ಬಳ್ಳಿ, ಪಾತರಗತ್ತಿ. ತೋಟ, ನವಿಲು ಎಲ್ಲವೂ ಆ ಸಂತಸದ ಕ್ಷಣದಲ್ಲಿ ಭಾಗಿ.

ಗೆಳತಿಯರೆಲ್ಲ
ಬಂದಾರೇನ ?
ಮಲ್ಲಿಗೆ ಹೂವ
ಮುಡಿದಾರೇನ ?
ಗುಲಾಬಿ ಲಂಗ
ಉಟ್ಟಾರೇನ ?
ನೀಲಿ ಪೋಲಿಕ
ತೊಟ್ಟಾರೇನ ?

ಇದೇ ಧಾಟಿಯಲ್ಲಿ ಸಾಗುವ ಕವನ ಸಂತೋಷದ ಕ್ಷಣವನ್ನು ನಿರಂತರ ಗೊಳಿಸುತ್ತದೆ. ಇಂಥ ಸಮಯದಲ್ಲಿ ಒಂಟಿಯಾಗಿರುವುದು ಅಸಾಧ್ಯವೆನ್ನಿಸಿ ಬಿಡುತ್ತದೆ. ಸುಮ್ಮನೆ ಕೂರುವುದೂ ಅಸಾಧ್ಯವಾಗುತ್ತದೆ. ಕೈ ಕೈ ಹಿಡಿದು ಸುಮ್ಮನೆ ಕುಣಿಯುತ್ತಿರುವುದು ಮಾತ್ರ ಸಾಧ್ಯ.

ಇತತ್ತ ಬಾರ
ಇದಿರಿಗೆ ಬಾರ
ಬಲಗೈ ತಾರ
ಎಡಗೈ ತಾರ
ಗಿರಿ ಗಿರಿ ಗಿಂಡಿ
ಇಬತ್ತಿ ಉಂಡಿ

ಇಡೀ ಕವನದಲ್ಲಿ ಯಾವುದೇ ದೊಡ್ಡ ಪದ ಇಲ್ಲ. ಇರುವುವೆಲ್ಲ ಪರಿಚಿತ ಮಾತುಗಳೇ. ಮಕ್ಕಳ ಅರ್ಥವಿಲ್ಲದ, ಕೇವಲ ಹಾಡಿಗಾಗಿ ಸೇರಿರುವ ಪದಗಳುಳ್ಳ ಲಯ ಇಲ್ಲಿಯದು. ಆದರೆ ಅವುಗಳಲ್ಲೇ ಎಂತಹ ಲವಲವಿಕೆಯ ಕವನವನ್ನು ಸೃಷ್ಟಿಸಿದ್ದಾರೆ !

ಮೂರು ನಾಲ್ಕು ಮಾತ್ರೆಗಳ ನಡಗೆ ನವೋದಯ ಕಾವ್ಯ ಪರಂಪರೆಯಲ್ಲಿ ಬಹು ಪರಿಚಿತವಾದ ಲಯ. "ಬಸವನಾಳರಿಗೆ ಬಾಷ್ಪಾಂಜಲಿ" ಕವನದಲ್ಲಿ ಬಳಕೆಯಾಗಿರುವ ಆ ಲಯ ಉದ್ದಕ್ಕೂ ಆ ಮಹಾವ್ಯಕ್ತಿಯ ಔನ್ನತ್ಯವನ್ನು ಸೂಚಿಸುವಂತೆಯೇ ಆ ವ್ಯಕ್ತಿಯ ಅನಿರೀಕ್ಷಿತ ನಿಧನದಿಂದ ಕವಿಯ ಮನಸ್ಸಿನ ಮೇಲೆ ಆದ ಆಘಾತವನ್ನೂ ಸೂಚಿಸುತ್ತ ಹೋಗುತ್ತದೆ. ಮಧ್ಯೆ ಬಸವಣ್ಣನವರ ಮಾತುಗಳನ್ನು ಹಾಗೆ ಹಾಗೆಯೇ ಬಳಸಿಕೊಳ್ಳುತ್ತ ಬಸವನಾಳರು ಹಿಂದಿನ ಬಸವಣ್ಣನವರ ಬದುಕನ್ನು ಆಧುನಿಕ ಕಾಲದಲ್ಲಿ ಬದುಕಿ ಅಂದಿನ ಆದರ್ಶಕ್ಕೆ ತಮ್ಮ ಬದುಕಿನ ಭಾಷ್ಯ ಬರೆದ ರೀತಿಯನ್ನು ಉದ್ದಕ್ಕೂ ನೆನಪು ಮಾಡಿಕೊಡುತ್ತ ಹೋಗಿದ್ದಾರೆ. ಈ ಗಂಭೀರ ಕವನಕ್ಕೆ ಬಳಸಿದ ನಡಗೆಯನ್ನೇ "ಧಾರವಾಡದಲ್ಲಿ ಮಳೆಗಾಲ" ಎಂಬ ಲಘುಕವಿತೆಯಲ್ಲೂ ಬಳಸಿಕೊಂಡಿದ್ದಾರೆ. "ಏನಿದೀ

ಹನಿಹನಿಯು ತೆನೆ ತೆನೆ ಸಿವುಡು ಗಟ್ಟುತ ಒಗೆವುದು" ಎಂಬ ಅದ್ಭುತ ಪ್ರತಿಮೆಯೊಂದಿಗೆ ಆರಂಭವಾಗುವ ಈ ಕವನದ ನಾಲ್ಕು ಸಾಲುಗಳು ಹೀಗಿವೆ :

ಬೂಟು ಚಪ್ಪಲಿ ಮಾಡದಲ್ಲಿಯೆ ಬುರುಸುಗಟ್ಟಿವೆ ಥಂಡಿಗೆ
ಕೋಟು ಸ್ವೆಟರಿನ ಮೇಲೆ ಸ್ಕಾರ್ಫನು ಹಾಕಿ ಹೊರಟಿರ ದಂಡಿಗೆ ?
ಬಿಸಿಲ ಮೋರೆಯು ಕಾಂಬುದಾಯಿತು ಬರಿಯ ಮನಸಿನ ಮಂಡಿಗೆ
ಜೀವ ಬೇಡಿದೆ ಕಾಫಿ ದೋಸೆಯ, ಕರಿದ ಹಪ್ಪಳ ಸಂಡಿಗೆ,

ಇಲ್ಲಿ ಬಂದಿರುವ ಅಂತ್ಯ ಪ್ರಾಸಗಳು ಸ್ವಾಭಾವಿಕವಾಗಿವೆ. 'ಮನಸಿನ ಮಂಡಿಗೆ' ಒಂದು ಕನಸು : ಬಿಸಿಲು ಆ ಮಳೆಗಾಲದಲ್ಲಿ ದೊರಕದಿದ್ದರೂ 'ಕರಿದ ಹಪ್ಪಳ ಸಂಡಿಗೆ' ಖಂಡಿತ ದೊರಕುತ್ತವೆ-'ಮಂಡಿಗೆ', 'ಸಂಡಿಗೆ' ಕನಸು, ನನಸುಗಳಾಗಿ ಹೀಗೆ ಪ್ರಾಸದಲ್ಲಿ ಹೊಂದಿ ಕೊಂಡು ಲಘುಕವಿತೆಗೆ ಒಂದು ಲವಲವಿಕೆಯನ್ನು ತಂದುಕೊಡುತ್ತವೆ.

ಕಣವಿಯವರ ಕವನಗಳ ಸೊಗಸು ಈ ಅಂತ್ಯ ಪ್ರಾಸಗಳಲ್ಲಿ ಮಾತ್ರವಲ್ಲ, ಅದಕ್ಕಿಂತ ಹೆಚ್ಚಾಗಿ ಅವರು ತರುವ ಒಳ ಪ್ರಾಸಗಳಲ್ಲಿ ಇದೆ. ಬಹುತೇಕ ಕಡೆಗಳಲ್ಲಿ ಪ್ರಾಸಗಳು ತೀರ ಸ್ವಾಭಾವಿಕವಾಗಿವೆಯೆಂದು ಅನ್ನಿಸುವುದಲ್ಲದೆ ಅಲ್ಲಿಯು ಅರ್ಥಕ್ಕೆ ಸಮುಚಿತವಾಗಿ ಕಾಣಿಸಿ ಕೊಳ್ಳುತ್ತವೆ. "ಬಂದ ಬೆವರೆಲ್ಲ ಇಂಗಿ, ಒಳ ಅಂಗಿ ಒಣಗಿ ಒತ್ತುಗರಡಾಗಿದೆ", "ಒಬ್ಬರ ಮೇಲೊಬ್ಬರು ಹತ್ತಿ ಹತ್ತಿಕ್ಕಿ ಹತ್ತಿಯಂಡಿಗೆಯಂತೆ ತುಳಿಯುತ್ತಿಹರು" ಎಂಬ ಚರಣ ಗಳನ್ನು ಅದಕ್ಕೆ ಉದಾಹರಿಸಬಹುದು.

ಎಲ್ಲಿ ಏನಾದರೂ ಅನರ್ಥ ಸಂಭವಿಸಿದರೆ
ಅದರ ಅಡಿಗಲ್ಲಿವನ ಅಮೃತ ಹಸ್ತ
(ಎಲ್ಲದಕ್ಕೂ ಬರಿಯ ಹಲ್ಲು ಕಿಸ್ತ)

'ಅಮೃತ ಹಸ್ತ', 'ಹಲ್ಲು ಕಿಸ್ತ' ಇವುಗಳಿಗಿರುವ ಅರ್ಥ ಸಾಹಚರ್ಯಗಳ ಕಡು ವೈಷಮ್ಯ ಇಡೀ ವ್ಯಂಗ್ಯವನ್ನು ಮೊನಚಾಗಿಸುತ್ತದೆ. ಹೀಗೆ ಸಾಮಾಜಿಕ ವಿಡಂಬನೆಯೇ ಪ್ರಧಾನ ವಾಗಿರುವ ಅನೇಕ ಕವಿತೆಗಳಲ್ಲಿ ಪ್ರಾಸ ಭಾಷೆಯನ್ನು ಮೊನಚುಗೊಳಿಸುತ್ತದೆ.

ಬಡಿವಾರ ಮಾಡುತ್ತ ಬಸನಿಂಗಿ ಬಂದಾಗ
ಓಡಿ ಹೋಗುವರೇನೊ ಬಡೇಮಿಯಾ ?

ಎಂಬ ಚರಣಗಳನ್ನೇ ಉದಾಹರಿಸಬಹುದು.

ಒಮ್ಮೊಮ್ಮೆ—ವಿರಳವಾಗಿ—ಪ್ರಾಸದ ಹಾವಳಿಯಿಂದ ಕವನಕ್ಕೆ ಹೊಂದಿಕೆ ಯಾಗದ ಸಾಲುಗಳು ಬಂದು ಸೇರಿಕೊಂಡು ಬಿಡುವುದುಂಟು. 'ನಮ್ಮ ಮನು ವಿನ ಕಥೆ' ಎಂಬ ಬಹು ಮೋಹಕವಾದ ಕವನ ಭಾಗವನ್ನೇ ನೋಡಬಹುದು. ತಮ್ಮ ಮನೆಯಲ್ಲಿ ಬೆಳೆಸಿದ ಮನು ಎಂಬ ಹೆಸರಿನ ನಾಯಿ ಕವನದ ವಸ್ತು. ತೀರ ಸ್ವಾಭಾವಿಕವಾದ, ಆಡು ಶೈಲಿಯ ಧಾಟಿಯಲ್ಲೇ ಸಾಗುವ ಕವನ ಆ ಎಳೆಯ ನಾಯಿ ಮನೆಗೆ ಬಂದ ಸ್ವಲ್ಪ ಕಾಲ ದಲ್ಲೇ ಎಲ್ಲರಿಗೂ ಪ್ರಿಯವಾದುದು, ಅದರ ಆಟ ಊಟ ಓಟಗಳು ಇತ್ಯಾದಿಗಳು ಸರಳ

ರೀತಿಯಲ್ಲೇ ನಿರೂಪಿತವಾಗುತ್ತವೆ, 'ಮನು' ಬಹು ಬೇಗ ಓದುಗರ ಆಪ್ತನೂ ಆಗಿ ಬಿಡುತ್ತಾನೆ. ಮನೆಯ ಯಜಮಾನಿ—ಮಕ್ಕಳನ್ನು ಬೆಳಸಿದವಳು-ಪುಟ್ಟ ಮರಿಯ ಸ್ವಭಾವ ಮನೆಯ ಯಜಮಾನನಿಗಿಂತ ಅವಳಿಗೆ ಚನ್ನಾಗಿ ಗೊತ್ತು. ಅದು ಸ್ವಲ್ಪ ಕುಂಯ್ ಎಂದರೆ ನೋವಾಯ್ತು ಎಂದು ಯಜಮಾನ ಚಡಪಡಿಸಿದರೆ, ಅದನ್ನು ಯಜಮಾನಿ ಹಗುರವಾಗಿ ತೆಗೆದುಕೊಳ್ಳುತ್ತಾಳೆ. ಮನೆಯಲ್ಲಿ ಸಣ್ಣ ಸಣ್ಣದನ್ನೂ ಗಂಭೀರವಾಗಿ ತೆಗೆದು ಕೊಳ್ಳುತ್ತ ಹೋದರೆ ಅವಳ ಗತಿಯೇನು? ಆದರೆ ಆ ಮನೋಭಾವದ ಹಿಂದೆ ನಾಯಿಯ ಬಗ್ಗೆ ಅವಳಿಗೂ ಪ್ರೀತಿಯಿಲ್ಲವೆಂದಲ್ಲ, ಈ ಭಾಗದಲ್ಲಿ ಬರುವ ಸಾಲುಗಳು ಹೀಗಿವೆ:

ಕಂಯ್ ಎಂದರೆ ಸಾಕು ನನ್ನ ಕಿವಿ ನಿಮಿರುತ್ತಿತ್ತು.
ಹುಡುಗರಿಗೆ ಬಾಯಿ ಮಾಡುತ್ತಿದ್ದೆ—ಅಲ್ಲೇ ಕುಳಿತಲ್ಲಿಯೇ
'ಅದಕ್ಕೇನು ಧಾಡಿ, ಬರೇ ಡೋಂಗಾರತನ'—ಮನೆಯ ಯಜಮಾನಿ,'
(ಐದು ಮಕ್ಕಳನ್ನು ಹೆತ್ತು ಬೆಳಸಿದವಳಲ್ಲವೇ)
ಆದರೂ ಕುನ್ನಿಯ ಕಾಳಜಿಯ ಬಗ್ಗೆ ನನಗೆ ಗುಮಾನಿ.

ಕೊನೆಯ ಸಾಲು 'ಯಜಮಾನಿ' ಎಂಬ ಪದಕ್ಕೆ ಪ್ರಾಸವಾಗಿ ಹೊಳೆದ 'ಗುಮಾನಿ' ಪದ ದಿಂದ ಮೂಡಿ ಬಂದದ್ದೇ ಹೊರತು, ಯಜಮಾನಿ ನಿಜವಾಗಿಯೂ ಕುನ್ನಿಯ ಕ್ಷೇಮದ ಬಗ್ಗೆ ಆಸಕ್ತಿ ವಹಿಸುವುದರ ಬಗ್ಗೆ ಇರುವ ಸಂದೇಹವನ್ನು ಹೇಳುವುದಲ್ಲ.

ಈ ಕವಿತೆ ಕಣವಿಯವರ ಈಚಿನ ಕವಿತೆಗಳಲ್ಲೊಂದು. ಅವುಗಳ ಛಂದಸ್ಸು ಆಡು ಮಾತಿನ ಧಾಟಿಯನ್ನನುಸರಿಸಿ ಬಂದದ್ದು. "ನಮ್ಮ ಮನುವಿನ ಕಥೆ" ಕವನ ಓದುಗರಿಗೆ ವರ್ಣಿಸಿದ್ದಲ್ಲ, ಅವರೊಡನೆ ಆಪ್ತ ಸಂಭಾಷಣೆ ಮಾಡುವಾಗ ನಿರೂಪಿಸಿದ್ದು, ಹೇಳಿದ್ದು ಎಂದು ಅನ್ನಿಸುವಷ್ಟು ಅದರ ಭಾಷೆ ಸ್ವಾಭಾವಿಕವಾಗಿದೆ. ಆಡು ಮಾತನ್ನು ಕಲಾತ್ಮಕ ವಾಗಿ ಬಳಸಿಕೊಂಡಿರುವುದಕ್ಕೆ ಈ ಸಾಲುಗಳನ್ನು ನೋಡಬಹುದು:

ಮನೆಗೆ ಯಾರಾದರೂ ಗುರುತಿನವರು ಬಂದರೆ ಸಾಕು
ಎರಡೂ ಮುಂಗಾಲು ಎತ್ತಿ ಅವರ ಬಟ್ಟೆಯ ಮೇಲೆ ಒತ್ತಿ
ಸ್ವಾಗತಿಸಿದಾಗಲೇ ಅದಕ್ಕೆ ಸಮಾಧಾನ.

'ಎತ್ತಿ', 'ಒತ್ತಿ' ಎಂಬ ಪದಗಳ ಪ್ರಾಸ ಜೋಡಣೆ ಇಲ್ಲಿ ಎದ್ದು ಕಾಣುತ್ತದೆ. ('ಒತ್ತಿ', ಎನ್ನುವಾಗ ಬರಿಯ ಒತ್ತುವ ಕ್ರಿಯೆ ಮಾತ್ರವಲ್ಲ, ನಾಯಿ ತನ್ನ ಧೂಳು ತುಂಬಿದ ಕಾಲುಗಳಿಂದ ಬಟ್ಟೆಯ ಮೇಲೆ ಮುದ್ರಿಸುವುದು ಸೂಚಿತವಾಗುತ್ತದೆ.) ಈ ಸಾಲು ಗಳಲ್ಲಿ 'ಕಾವ್ಯಭಾಷೆ' ಎನ್ನಿಸಿಕೊಳ್ಳತಕ್ಕದ್ದು ಯಾವುದೂ ಇಲ್ಲ. ಇರುವ ಸಹಜಸಾಮಗ್ರಿ ಯನ್ನೇ ಯಾವುದೋ ರೀತಿಯಲ್ಲಿ ಜೋಡಿಸಿದಾಗ, ಕಲಾತ್ಮಕತೆ ತಂತಾನೆ ಒದಗಿ ಬಂದಿದೆ. (ಬಹುಶಃ ಯಾವುದೇ ಉತ್ತಮ ಕವಿತೆ ಅನುಭವದ, ಭಾಷೆಯ 'ಜೋಡಣೆ' ಆಗಿರುತ್ತದೆ ಎಂಬುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು).

ಸಂಭಾಷಣೆ ಧಾಟಿಯ ಕವಿತೆಗೆ "ಬರೆಯಲೊಲ್ಲದ ಕವಿತೆ" ಇನ್ನೊಂದು ಉತ್ಕೃಷ್ಟ ಉದಾಹರಣೆ. ಈ ಕವಿತೆಯಲ್ಲಿ ಎರಡು ಭಾಗಗಳನ್ನು ಕಾಣಬಹುದು: ಒಂದು, ಮಳೆ

ಗಾಲದಲ್ಲಿ ಮನೆಯ ಮುಂದಿನ ಕಾಂಪೋಂಡಿನಲ್ಲಿ ಬೆಳೆದಿರುವ ಹೂಗಿಡಗಳ ವರ್ಣನೆ. ಪಂಪ, ಹರಿಹರರ ಪರಂಪರೆಯನ್ನು ಇದು ಮುಂದುವರಿಸಿದೆ. ಆಧುನಿಕ ಕವಿ ಬಗೆ ಬಗೆಯ ಹೂಗಳಿಗೆ ಮನಸೋತ ಪರಿಯನ್ನು ಇದು ತೋರಿಸಿದೆ. "ವಿಜಯದಶಮಿಗೆ ಸುಗಂಧದ ಸೀಮೋಲ್ಲಂಘನ" ಎಂಬ ಮಾತು ಇಡೀ ಚಿತ್ರವನ್ನು ಅದ್ಭುತ ರೀತಿಯಲ್ಲಿ ನಮ್ಮ ಮುಂದೆ ಇಡುತ್ತದೆ. ಹೂವ ಹಣತೆಯಲ್ಲಿ 'ಲೌಕಿಕ ಜಿನಾಗವಂಗಳೆರಡೂ ಬೆಳಗುತ್ತಿರುವ ಆ ತಂಪ್ಪೊತ್ತಿನಲಿ' ಕವಿತೆ ಏಕೆ ಬೇಕು ಎಂಬ ಮಾತಿನೊಂದಿಗೆ ಕವಿತೆಯ ಎರಡನೆಯ ಭಾಗ ಆರಂಭ. ವಿಶೇಷ ಸಂಚಿಕೆಗೆ ಕವನವೊಂದನ್ನು ಕೋರಿ ಬರೆದಿರುವ ಪತ್ರಕ್ಕೆ ಉತ್ತರ ರೂಪ ದಲ್ಲಿದೆ ಈ ಎರಡನೆಯ ಭಾಗ.

ಇಂಥ ತಂಪ್ಪೊತ್ತಿನಲಿ ಮಾನ್ಯ ಸಂಪಾದಕರೆ,
ಕವಿತೆ ಏತಕೆ ಬೇಕು ಹೇಳಿ, ಗೌರವಧನದ ಚೌರಿ ಬೀಸಿ
ಮುಂಗಡ ಚೆಕ್ಕು ಕಳಿಸಿ ಪೀಡಿಸಬೇಡಿ. ಬಾಡಿರುವ
ಹೂಗಳ ತೆಗೆದು, ಒಣಗಿದೆಲೆಗಳ ಗುಡಿಸಿ, ಅಲ್ಲಲ್ಲಿ
ಅಸ್ತಿತ್ವಕ್ಕೆ ಧಕ್ಕೆ ಬಾರದ ಹಾಗೆ ಬೆಳೆದ ಕಸ—ಕಳೆಯ
ಕೆತ್ತಿ, ಕುರುಪಿಯಾಡಿಸಿ, ಜರಜರಿಯಿಂದ ನೀರೆರೆಯುವಲ್ಲಿ
ನನಗೆ ಸುಖವುಂಟು, ನಿಮಗೆ ಗೊತ್ತಿಲ್ಲ, ನಮ್ಮ ನಾಯಿ
ಮಣ್ಣು ಕೆದರಿ ತಣ್ಣಗೆ ಮಲಗಿ, ಅಕ್ಕ ಪಕ್ಕದ ಹೂ
ಗಿಡವ ಮುರಿದು ಮುದುಡಿಸಿದೆ.–ಅದಕೆ ಸಲಿಗೆ
ಕೊಟ್ಟವನು ನಾನೇ ಎಂದು ಈಕೆಯ ಸ್ಪಷ್ಟ ಹೇಳಿಕೆ.
ನೋಡಿ ಅದನೆಲ್ಲ ಈಗ ಸರಿ ಪಡಿಸಬೇಕು ; ಬಿಡುವಿಲ್ಲ.
ಮೇಲಾಗಿ ಬರೆಯುವ ಮನಸ್ಸಿಲ್ಲ. ನನ್ನ ಕವಿತೆ ಇರದಿದ್ದರೆ
ವಿಶೇಷ ಸಂಚಿಕೆಯ ಬೆಲೆಯೇನೊ ಇಳಿಯುವುದಿಲ್ಲ:
ತಪ್ಪು ತಿಳಿಯಬೇಡಿ : ಅರ್ಥವಿಷ್ಟೆ ; ಬರೆದ ಕವಿತೆಯ
ಭಾರ ಬರೆಯದ ಕವಿತೆಗಿಂತ ಹೆಚ್ಚಲ್ಲ.

ಕೊನೆಯಲ್ಲಿ ಬಂದಿರುವ ವಾಕ್ಯ ಇಲ್ಲದಿದ್ದರೇ ಚನ್ನಾಗಿತ್ತು ಎಂದು ನನ್ನ ಭಾವನೆ. 'ಭಾರ ಎನ್ನುವ ಮಾತಿಗೆ 'ಬೆಲ' ಎಂಬರ್ಥವನ್ನು ಸ್ವಲ್ಪ ಕಷ್ಟಪಟ್ಟು ಹೊಂದಿಸಿಕೊಳ್ಳಬೇಕು. ಹೂಗಳ ಚೆಲುವಿನ ಅನುಭವ ಬರೆಯದ ಕವಿತೆ, ಆ ಅನುಭವವನ್ನು ಬರೆದರೆ ಅದು ಆ ಮೂಲ ಅನುಭವದ ದುರ್ಬಲ ಪಡಿನೆರಳು ಎಂಬ ಅರ್ಥವೇನೋ ಹೊರಡುತ್ತದೆ. ಆದರೆ, ಆ ವಾಕ್ಯ ನಮಗೆ ಕೀಟ್ಸನ ಸುಪ್ರಸಿದ್ಧ ವಾಕ್ಯವನ್ನು ಸಹಜವಾಗಿಯೇ ನೆನಪಿಗೆ ತಂದು ಕವಿತೆಯನ್ನು ದುರ್ಬಲಗೊಳಿಸುತ್ತದೆ. 'ಲೌಕಿಕ ಜಿನಾಗಮ' ಎಂದಾಗ ಕವಿ ಪಂಪ ನನ್ನು ಬೇಕೆಂದೇ ಬಳಸಿಕೊಂಡಿದ್ದಾರೆ ಮತ್ತು ಆ ಬಳಕೆಯಲ್ಲಿ ಒಂದು ಕಾವ್ಯೋದ್ದೇಶವಿದೆ. ಇಲ್ಲಿ ಕೀಟ್ಸನ ಅನುಕರಣೆಯಿದೆ ಎಂದು ಮಾತ್ರ ಅನ್ನಿಸುತ್ತದೆ. ಅದೇನೇ ಇರಲಿ, ಕವನದ ಉತ್ತರಾರ್ಧ ಆಡು ಮಾತಿಗೆ ಹತ್ತಿರವಾಗಿದ್ದು ಅಥವಾ ಆಡು ಮಾತೇ ಆಗಿದ್ದು ಕವಿತೆಗೆ ಆತ್ಮೀಯತೆಯನ್ನು ತಂದು ಕೊಡುತ್ತದೆ. ಮೊದಲ ಭಾಗ ಕವಿಯಾಗಿ ಹೂಗಳನ್ನು

ಕಂಡದ್ದು, ಬೇರೆ ಮಾನಸಿಕ ಸ್ಥಿತಿಗೆ ಸೇರಿದ್ದು. ಈ ಎರಡನೆಯ ಭಾಗ ಬದುಕಿಗೆ ಹತ್ತಿರವಾದ್ದು, ಇಲ್ಲಿ ಗೌರವಧನದ ಚೆಕ್ಕಿನ ವಿಷಯವುಂಟು, ಕುರುಪಿಯಿಂದ ಹೂಗಿಡಗಳನ್ನು ಕಳೆ ತೆಗೆದು ಸರಿಪಡಿಸುವುದು ಮಾತ್ರವೇ ಅಲ್ಲ, ನಾಯಿ ಮಲಗಿ ಮುದುಡಿಸಿರುವ ಗಿಡಗಳನ್ನು ನೆಟ್ಟಗೆ ಮಾಡುವ ಮಾತೂ ಉಂಟು. ನಾಯಿಗೆ ಬಹಳ ಸಲಿಗೆ ಕೊಟ್ಟಿದ್ದೀರಿ ಎಂಬ ಹೆಂಡತಿಯ ಆಕ್ಷೇಪಣೆಯ ಪ್ರಸ್ತಾಪವೂ ಇಲ್ಲಿದೆ. ('ಅದನೆಲ್ಲ ಈಗ ಸರಿಪಡಿಸಬೇಕು' ಎಂಬಲ್ಲಿ ಗಿಡಗಳನ್ನು ಮತ್ತು ಹೆಂಡತಿಯ ಮನಸ್ಸನ್ನು ಎಂಬ ಎರಡು ಅರ್ಥಗಳೂ ಉಂಟು) ಮೊದಲ ಭಾಗಕ್ಕಿಂತ ಎರಡನೆಯ ಭಾಗ ಶೈಲಿಯಲ್ಲಿ ಹೆಚ್ಚು 'informal' ಆಗುತ್ತದೆ. ಮೊದಲ ಭಾಗದಲ್ಲಿ ಬರುವ ಪ್ರಾಸಗಳು ('ಮಫಾ—ಓಫ', ಮೊಗ್ಗೆ—ಹಿಗ್ಗು ಇತ್ಯಾದಿ) ಎರಡನೆಯ ಭಾಗದಲ್ಲಿ ಮಾಯವಾಗುತ್ತದೆ, ಇದು ಭಾಷಾ ಪ್ರಯೋಗದ ಔಚಿತ್ಯದ ಬಗ್ಗೆ ಕವಿಗಿರುವ ಪ್ರಜ್ಞೆಯ ಕುರುಹು. ಈ ಔಚಿತ್ಯವನ್ನು ಅವರ ಅನೇಕ ಕವಿತೆಗಳಲ್ಲಿ ಗುರುತಿಸಬಹುದು. "ರಂಜನಾ". "ನಗರದಲ್ಲಿ ನೆರಳು" "ದೀಪಾವಳಿ" ಇತ್ಯಾದಿ ಕವಿತೆಗಳನ್ನು ಇಲ್ಲಿ ಸ್ಮರಿಸಬಹುದು.

'ರಂಜನಾ: ಇವಳ ದೀರ್ಘಸ್ವರದ ನಡುವೆ ಅವರಿಬ್ಬರೂ ಬರಿ ವ್ಯಂಜನ' ಇಂತಹ ನೂರಾರು ಸಾಲುಗಳು ಓದುಗರ ಮನಸ್ಸಿನಲ್ಲಿ ಮುದ್ರೆಯೊತ್ತಿ ನಿಲ್ಲುವುದಲ್ಲದೆ ಅವು ಮತ್ತೆ ಮತ್ತೆ ನೆನಪಿಗೆ ಬಂದು ಕಾಡುತ್ತವೆ. "ಹತ್ತಿ ಹತ್ತಿಕ್ಕಿ ಹತ್ತಿಯುಂಡಿಗೆಯಂತೆ ತುಳಿಯುತ್ತಿಹರು" ಎಂಬಲ್ಲಿನ ಪ್ರತಿಮೆ ಎಷ್ಟು ಸಾರ್ಥಕ! ಹತ್ತಿಯ ಉಂಡಿಗೆಯನ್ನು ತುಳಿಯುವುದನ್ನು ನೋಡಿದವರಿಗಂತೂ ಅದು ಅಷ್ಟು ಸಜೀವ. ಪ್ರಾಸ ತಾನೇ ತಾನಾಗಿ ಎದ್ದು ಕಾಣದಂತೆ ಮಾಡುವ ಸಂಯಮ ಅದು ಒಟ್ಟು ಅನುಭವದ ಭಾಗವಾಗಿ ಬರುವಂತೆ ಮಾಡುವ ಕೌಶಲ ಎರಡೂ ಕಣವಿಯವರಿಗೆ ಸಮಾನವಾಗಿ ಸಿದ್ಧಿಸಿವೆ.

ಕಣವಿಯವರ ಭಾಷೆ ಭಾವಕ್ಕೆ ತಕ್ಕಂತೆ ಬಾಗುವ, ಬೀಗುವ, ಓಡುವ, ನಿಲ್ಲುವ ಶಕ್ತಿಯನ್ನು ಪಡೆದುಕೊಂಡಿದೆ. ಇದಕ್ಕೆ ಅವರ ಕವಿತೆಗಳಿಂದ ಅನೇಕ ಸಂಖ್ಯೆಯ ಉದಾಹರಣೆಗಳನ್ನು ಕೊಡಬಹುದು.

ಓಡಿ ಹೋಗುವ ಮೋಡಗಳ ಹಿಡಿದು ಹಿಂಡು.
ಬಳುಕಿ ಬಾಗುವ ಮಳೆಯ ಸೆಳಕುಗಳ
ಸೇವಿಗೆಯ ಸಿವುಡು ಕಟ್ಟಿಡು.

ಸೇವಿಗೆ ಮಣೆಯಿಂದ ಕೆಳಗೆ ಇಳಿಯುವ ಸೇವಿಗೆಯ ದಾರಗಳನ್ನು ಹಿಡಿದು ಸುತ್ತಿದವರಿಗೆ ಈ ಚಿತ್ರ ತಂದುಕೊಡುವ ಅನುಭವ ಅಪೂರ್ವ, ಗಾಳಿಯಿಂದ ಬಾಗುವ ಮಳೆಯ ಹೊಳೆಯುವ ಚಿತ್ರವನ್ನು ಮೇಲಿನ ಸಾಲುಗಳ ಭಾಷೆ ಪರಿಣಾಮಕಾರಿಯಾಗಿ ಅಭಿನಯಿಸುತ್ತದೆ. (ಮುಂದೆ ಬರುವ ಸಾಲುಗಳು ಮಳೆಗೂ ಪ್ರತಿಮೆಗೆ ಸಂಬಂಧಪಡದೇ ಹೋಗುವುದರಿಂದ ಅವು ಪ್ರತ್ಯೇಕವಾಗಿ ಉಳಿದು ಕವನದ ದೌರ್ಬಲ್ಯಕ್ಕೆ ಕಾರಣವಾಗಿವೆ.)

ಅತ್ತಿದ್ದು, ಮತ್ತೆ ನಕ್ಕಿದ್ದು, ಸಂತೋಷ ಉಕ್ಕಿದ್ದು
ನೆನಪಾಗುತ್ತದೆ—

ಮೊದಲ ಸಾಲಿನಲ್ಲಿ ಬರುವ ಅರ್ಧ ವಿರಾಮ ಚಿಹ್ನೆ ಜಾಗದಲ್ಲಿ ನಾವು ನಿಲ್ಲಿಸಿ ನಿಲ್ಲಿಸಿ ಓದುತ್ತೇವೆ ಮತ್ತು ಆ ಯತಿ ಭಾಗಗಳ ಮಧ್ಯೆ ಬರುವ ಸ್ವನಗಳು ಗಣಗಳಾಗುತ್ತವೆ, ಆ ಗಣಗಳು ಗಾತ್ರದಲ್ಲಿ ದೊಡ್ಡದಾಗುತ್ತ ನಡೆದು ಸಂತೋಷವು ಅಳುವಿನಿಂದ ಆರಂಭಿಸಿ ವಿಸ್ತೃತಗೊಳ್ಳುತ್ತ ನಡೆದುದನ್ನು ಚೆನ್ನಾಗಿ ಸೂಚಿಸುತ್ತವೆ. 'ಸಂತೋಷ' ಎಂಬುದು ಒಂದು ಸಾಲಿನ ಕೊನೆಯಲ್ಲಿ ನಿಂತು, ಅದರ ಜೊತೆ ಬರಬೇಕಾದ 'ಉಕ್ಕಿದ್ದು' ಎಂಬುದೊಂದೇ ಸಾಲಲ್ಲಿ, ಸಾಲಿನ ಕೊನೆಯಲ್ಲಿ ನಿಂತದ್ದು ಆ ಉಕ್ಕುವಿಕೆಯ ಗಾಢತೆ, ತೀವ್ರತೆಯನ್ನು ಸೂಚಿಸುತ್ತದೆ,

ಹೀಗೆ ಸಾಲುಗಳನ್ನು ಬೇಕೆಂದೇ ಒಡೆದಿರುವುದಕ್ಕೆ ಇನ್ನೂ ಅನೇಕ ಉದಾಹರಣೆಗಳನ್ನು ಕೊಡಲು ಸಾಧ್ಯ. 'ರಾತ್ರಿ' ಎಂಬ ಅಷ್ಟ ಷಟ್ಪದಿಯ ಈ ಸಾಲುಗಳನ್ನು ನೋಡಿ:

ನಡುನೀರ ತಿರುಗಣೆಗೆ ಕನಸು
ಕಾಣುವ ದೋಣಿ, ಮುಂದೆಲ್ಲೋ ಜಲಪಾತ ದಬ್ಬ-
ರ, ತಳದ........

ಜಲಪಾತದ ಅಬ್ಬರವೂ ಇಲ್ಲಿ ಸೂಚಿತವಾಗಿದೆ ; 'ಅಬ್ಬ'ದಿಂದ ಸಾಲು ಕೊನೆಗೊಳ್ಳುವುದರಿಂದ ಜಲಪಾತವನ್ನು ಕಂಡಾಗ ಹೊರಡುವ ವಿಸ್ಮಯದ 'ಅಬ್ಬ' ಎಂಬ ಉದ್ಗಾರವೂ ಸೂಚಿತವಾಗುತ್ತದೆ.

ಕೊಡೆ ಹಿಡಿಯುತ್ತೇವೆ ;
ಬಿಸಿಲಿಗೆ, ಮಳೆಗೆ, ದೊಡ್ಡವರ ಕಾರು
ಸಿಡಿಸುವ ಕೊಳೆಗೆ,.........

'ಕೊಡೆ' ಎಂಬ ಕವನದ ಈ ಸಾಲುಗಳಲ್ಲಿ 'ದೊಡ್ಡವರ ಕಾರು' ಎಂಬುದು ಸಾಲಿನ ಕೊನೆಯಲ್ಲಿ ನಿಲ್ಲುವುದರಿಂದ ಆ ಕಾರಿನ ಬಗ್ಗೆ ಏನೋ ಮಹತ್ವದ್ದು ಸೂಚಿತವಾಗುತ್ತದೆ ಎಂಬ ನಿರೀಕ್ಷೆ ಹುಟ್ಟುತ್ತದೆ. ದೊಡ್ಡವರ ಕಾರು ತೋರಿಸುವ ದೊಡ್ಡಸ್ತನ ಎಂದರೆ ಅದು ಬೇಕೆಂದೇ ಕೊಳೆ ಸಿಡಿಸುವುದು ಎಂಬುದು ಎಷ್ಟು ಅರ್ಥಪೂರ್ಣ ! ಇಲ್ಲಿ ಒತ್ತು 'ದೊಡ್ಡವರ ಕಾರು' ಎಂಬುದರ ಮೇಲೆ ಬೀಳುವ ಉದ್ದೇಶವಿರುವುದರಿಂದ ಅದನ್ನು ಪ್ರತ್ಯೇಕಿಸಿ ಕೊಡಲಾಗಿದೆ ಎಂಬುದು ಸ್ಪಷ್ಟ. ಆದರೆ ಅದೇ 'ಕೊಡೆ' ಕವನದ ಅಂತ್ಯದಲ್ಲಿ 'ಅಭಿರುಚಿ-ಗೆ', ನಾಯಿ-ಗೆ' ಎಂಬುದಾಗಿ ಒಡೆದು 'ಗೆ' ಭಾಗವನ್ನು ಮುಂದಿನ ಸಾಲಿಗೆ ಕೊಂಡೊಯ್ದಿರುವುದರ ಔಚಿತ್ಯ ತಿಳಿಯದು.

ಕಣವಿಯವರನ್ನು ಅಭ್ಯಾಸಮಾಡುವವರಿಗೆ ಒಂದು ಸಂಗತಿ ಸ್ಪಷ್ಟವಾಗುತ್ತದೆ, ಅವರು ಕವಿತೆಯ ಉದ್ದೇಶಕ್ಕೆ ಉಳಿದ ಎಲ್ಲ ಪರಿಕರಗಳನ್ನು ಸಹಾಯಕವಾಗಿ ಸಾಧನವಾಗಿ ಮಾಡುತ್ತಾರೆ, ಅವರಲ್ಲಿ ಛಂದಸ್ಸು ಒಂದು 'ಅಲಂಕಾರ'ವಾಗಿ ಕವಿತೆಯ ಅರ್ಥವನ್ನು ಹಿಡಿದಿಡಲು ಅಥವಾ ವ್ಯಂಜಿಸಲು ಒಂದು ಸಾಧನವಾಗಿ ಬರುತ್ತದೆ. ಅದೇ ಎಲ್ಲವನ್ನೂ ಹಿಂದಿಕ್ಕಿ ತಂತಾನೆ ಮುಂದೆ ನಿಲ್ಲುವುದಿಲ್ಲ. ಕಣವಿಯವರು ಛಂದಸ್ಸಿನಲ್ಲಿ ಅಂತಹ

ಪ್ರಯೋಗಶೀಲರು ಎಂದು ಅನ್ನಿಸದಿದ್ದರೂ ಒಟ್ಟು ಕವಿತೆಗೆ ಛಂದಸ್ಸನ್ನು ಸಾಮಗ್ರಿಯಾಗಿ ಬಳಸಿಕೊಳ್ಳುವವರಲ್ಲಿ ತೋರಿಸುವ ವಿವೇಕ ಮೆಚ್ಚತಕ್ಕದ್ದು. ವಿಶೇಷವಾಗಿ ಅವರು ಅಷ್ಟಪಟ್ಟದಿಗಳಲ್ಲಿ ಸಾಧಿಸಿರುವುದು ಬಹು ದೊಡ್ಡದು. ಅಲ್ಲಿ ಅವರು ತರುವ ಗಣಗಳಿಗಿಂತ ಮಧ್ಯೆ ಮಧ್ಯೆ ಅವರು ತಂದಿರುವ ವಿರಾಮ ಸ್ಥಾನಗಳು ಅಧ್ಯಯನ ಯೋಗ್ಯವಾಗುತ್ತವೆ. "ವಿನಾಯಕರಿಗೆ ವಂದನೆ" ವ್ಯಕ್ತಿ ಚಿತ್ರಗಳನ್ನು ಕೊಡುವ ಅವರ ಶ್ರೇಷ್ಠ ಅಷ್ಟಪಟ್ಟದಿಗಳಲ್ಲಿ ಒಂದು. ಮೊದಲ ಎರಡು ಸಾಲುಗಳಲ್ಲಿ ಯತಿ ಚರಣದ ಕೊನೆಗೆ ಬಂದರೆ, ಮುಂದೆ ಚರಣಗಳ ಮಧ್ಯೆ ಮಧ್ಯೆ ಅವು ಬಂದು ಒಟ್ಟು ಕವಿತೆಗೆ ಅಪೂರ್ವ ಹದವನ್ನು ತಂದುಕೊಡುತ್ತವೆ.

ಪ್ರಭುಸ್ವಾಮಿಮಠ

# ನವೋದಯ ಪರಂಪರೆ ಮತ್ತು ಕಣವಿ

ಹೊಸಗನ್ನಡ ಕಾವ್ಯದ ಪ್ರಮುಖ ಕವಿಗಳಲ್ಲೊಬ್ಬರಾದ ಕಣವಿಯವರ ಕಾವ್ಯ ಈ ಮೂರು ದಶಕಗಳಲ್ಲಿ ತನ್ನ ಸಾಧನೆಯ ಅನೇಕ ಮಜಲುಗಳನ್ನು ದಾಟಿ ಇನ್ನೂ ವಿಶೇಷ ಸಮೃದ್ಧಿಯಿಂದ ಮುಂದುವರಿಯುತ್ತಲಿದೆ. ನವೋದಯ ಪರಂಪರೆಯಲ್ಲಿ ಬಂದ ಇಂಥ ಕವಿಗಳು ಇನ್ನೂ ಅದೇ ಬಗೆಯ ಲವಲವಿಕೆಯಿಂದ ಬರೆಯುತ್ತಿರುವುದನ್ನು ಗಮನಿಸಿ "ನಮ್ಮ ನವೋದಯ ಕವಿಗಳಿಗಿದ್ದ ಜೀವನಶ್ರದ್ಧೆಯಾಗಲಿ ಕಾವ್ಯ ಶ್ರದ್ಧೆಯಾಗಲಿ ನವ್ಯರಲ್ಲಿ ಇರಲೇ ಇಲ್ಲ. ಅವರೆಲ್ಲ ಪ್ರತಿಕ್ರಿಯೆಗೆ ಹುಟ್ಟಿದವರಾದ್ದರಿಂದಲೇ ಬಹುಬೇಗ ಉತ್ಸಾಹ ಕಳೆದುಕೊಂಡರು. ಆದರೆ ನವೋದಯ ಕವಿಗಳು ಮಾತ್ರ ಇನ್ನೂ ಬರೆಯುತ್ತಲೇ ಇದ್ದಾರೆ, ಬಹುಶಃ ಕೀರ್ತಿ ಕಾಸು ಎರಡೇ ಇದಕ್ಕೆ ಕಾರಣವಾಗಿಲಾರದು, ಅವರ ಕಾವ್ಯ ಶ್ರದ್ಧೆಯ ಗುಟ್ಟನ್ನು ನಾವಿನ್ನೂ ತಿಳಿಯಬೇಕಾಗಿದೆ.[1]" ಎಂಬಂಥ ಮಾತುಗಳು ಇತ್ತೀಚೆಗೆ ವಿಶೇಷವಾಗಿ ಕೇಳಿಬರುತ್ತಿವೆ. ಒಂದು ಘಟ್ಟದಲ್ಲಿ "ಕಣವಿಯವರ ಕಾವ್ಯ ಪರಿಪಾಕದ ಯಾವ ನೆಲೆಯನ್ನು ಮುಟ್ಟಬಹುದೆಂಬ ಚಿಂತೆ ಕುತೂಹಲಗಳು[2]" ವಿಮರ್ಶಕರನ್ನು ಕಾಡಿದ್ದುಂಟು. ಆದರೆ ಇಂದು ಆ ಎಲ್ಲ ಆತಂಕಗಳನ್ನು ದಾಟಿ ಅವರ ಕಾವ್ಯ ಮತ್ತೆ ಹೊಸ ಸತ್ವ-ಸಿದ್ಧತೆಗಳೊಂದಿಗೆ ಮುಂದುವರಿಯುತ್ತಿದೆ. "ತಮ್ಮ ಕಾವ್ಯ ಧೋರಣೆಯಲ್ಲಿ ನವೋದಯದ ರೀತಿಯ ಬಗೆಗೆ ಹೆಚ್ಚಿನ ಒಲವುಳ್ಳವರಾಗಿದ್ದರೂ, ನವ್ಯ ಸಾಹಿತ್ಯ ಮಾರ್ಗದ ಅಭಿವ್ಯಕ್ತಿ ವಿಧಾನದ ಕೆಲವು ಅಂಶಗಳ ಬಗೆಗೆ ಹೆಚ್ಚಿನ ಒಲವು ಬೆಳಸಿಕೊಂಡವರು. ಹೀಗಾಗಿ ಅವರು ಸಮನ್ವಯ ಕಾವ್ಯವನ್ನು ಪ್ರತಿಪಾದಿಸಿದರು.[3]" "ಆದರೆ ನವ್ಯತೆ ಅವರ ಕಾವ್ಯದ ಆಂತರಿಕ ಅವಶ್ಯಕತೆಯಾಗಿ ಬಂದಿರದೆ ಹೊರಗಿನ ಪ್ರಭಾವವಾಗಿ ಬಿದ್ದಿದೆ[4]" "ತಮ್ಮ ಸಮಕಾಲೀನ ಇತರ ಕೆಲವರಂತೆ ಮಧ್ಯಮಾರ್ಗ (centrist)ದಲ್ಲಿ ನಡೆದವರು. ಅವರು ಕೇವಲ ನವ್ಯರೆನ್ನುವುದಕ್ಕಿಂತ ನವ್ಯ ಧ್ವನಿಯ ಕವಿಗಳು.[5]"

ಹೀಗೆ ಅವರ ಕಾವ್ಯಮಾರ್ಗ ನಡೆದು ಬಂದ ರೀತಿಯನ್ನು ಕುರಿತು ಅನೇಕ ಅಭಿಪ್ರಾಯಗಳು ವ್ಯಕ್ತವಾಗಿವೆ. ಒಂದು ದೃಷ್ಟಿಯಿಂದ ಯಾವುದೇ ಒಂದು ಕಾವ್ಯದ ಗುಣ

---

1. ಚಂದ್ರಶೇಖರ ಕಂಬಾರ : ಮುನ್ನುಡಿ : ವೆಂ. ಶ್ರೀನಿವಾಸರ 'ಇಣುಕುನೋಟ'
2. ಕೀರ್ತಿನಾಥ ಕುರ್ತಕೋಟಿ : 'ಚಿರಂತನದಾಹ'ದ ಹಿಂಬರಹ.
3. ಜಿ. ಹೆಚ್. ನಾಯಕ : ಸಮಕಾಲೀನ : ಪು. ೯೧-೯೨.
4. ಕೀರ್ತಿನಾಥ ಕುರ್ತಕೋಟಿ : ಮನ್ವಂತರ-೨. ಪು. ೯೦.
5. ಗೌರೀಶ ಕಾಯ್ಕಿಣಿ : ಚೆನ್ನವೀರ ಕಣವಿಯವರ ಕಾವ್ಯದೃಷ್ಟಿ : ಪು. ೧೦.

ವನ್ನು ಗುರುತಿಸುವುದಕ್ಕೆ ಅಭ್ಯಾಸದ ಸೌಲಭ್ಯಕ್ಕಾಗಿ ಆಯಾ ಕಾವ್ಯ ನಡೆದು ಬಂದ ಅದರದರ ಪರಂಪರೆಯ ಮಾರ್ಗಗಳ ಹಿನ್ನೆಲೆಯನ್ನು ತಿಳಿಯುವುದು ಅವಶ್ಯವಾಗಿದೆ. ಆದರೆ ಒಂದು ಕಾವ್ಯದ ಶ್ರೇಷ್ಠತೆ ಅಥವ ಸಾರ್ಥಕತೆ ನಿರ್ಧಾರಿತವಾಗುವುದು ಆ ಕಾವ್ಯ ಯಾವ ಪರಂಪರೆಯ ಹೆಸರಿನ ಕೆಳಗೆ ರಚಿತವಾಗಿದೆ ಎಂಬುದಾಗಿರದೆ, ತಾನು ಬಂದ ಅಂದಿನ ಪರಂಪರೆಗೆ ಬದ್ಧವಾಗಿಯೂ ಎಷ್ಟರ ಮಟ್ಟಿಗೆ ಅದರ ಮಿತಿಗಳನ್ನು ದಾಟಿ ಎಲ್ಲಕಾಲಕ್ಕೂ ನಿಲ್ಲಬಲ್ಲ ಉನ್ನತ ಕಾವ್ಯದ ಉತ್ತಮಾಂಶಗಳನ್ನು ಹೊಂದಿದೆ ಎಂಬುದೇ ಆಗಿದೆ. ಈ ದೃಷ್ಟಿಯಿಂದ ಕಣವಿಯವರ ಕಾವ್ಯ ತನ್ನ ಸಫಲತೆಯ ಅನೇಕ ಎತ್ತರಗಳನ್ನು ಇತ್ತೀಚಿನ ವರ್ಷಗಳಲ್ಲಿ ಕಾಣುತ್ತಿರುವಾಗ, ಅದರ ಪ್ರಾರಂಭಿಕ ದಿಶೆಯ ಕಾವ್ಯ ಸಂದರ್ಭ, ಸನ್ನಿವೇಶ ಹಾಗೂ ಸ್ವರೂಪವನ್ನು ಕುರಿತು ಯೋಚಿಸುವುದೇ ಪ್ರಸ್ತುತ ಪ್ರಬಂಧದ ಉದ್ದೇಶವಾಗಿದೆ.

**ಕಾವ್ಯಸಂದರ್ಭ :** ಕಣವಿಯವರು ಕಾವ್ಯ ಕ್ಷೇತ್ರಕ್ಕೆ ಬರುವ ಮೊದಲೇ ಕನ್ನಡದಲ್ಲಿ ಬಿ.ಎಂ. ಶ್ರೀಯವರ 'ಇಂಗ್ಲೀಷಗೀತ' (೧೯೨೦) ಗಳಿಂದ ಪ್ರೇರಿತವಾದ ರಮ್ಯ ಸಂಪ್ರದಾಯವೊಂದು ಪ್ರಚಲಿತವಾಗಿತ್ತು. "ಧಾರವಾಡ, ಮೈಸೂರು, ಮಂಗಳೂರು ಈ ಮೂರು ಕಡೆಯ ಕವಿಗಳ ಮೇಲೂ ಇಂಗ್ಲೀಷ್ ರೊಮ್ಯಾಂಟಿಕ್ ಕವಿಗಳ ಪ್ರಭಾವ ತೀವ್ರವಾಗಿತ್ತು.[6]" ಧಾರವಾಡದಲ್ಲಿ ಗೆಳೆಯರ ಬಳಗವು ಆಯ್‌ರಿಶ್ ಕವಿ ಎ.ಇ, (ಜಾರ್ಜರಸೆಲ್) ಅವರ ಕೃತಿಗಳಿಂದ ಪ್ರೇರಿತವಾಗಿ, ಬೇಂದ್ರೆ, ಮಧುರಚೆನ್ನ, ಆನಂದಕಂದ, ಮುಗಳಿ, ಗೋಕಾಕ್. ಅವರ ಮುಖಾಂತರ ಮುಂದಾದರೆ, ಮೈಸೂರಲ್ಲಿ ಮಾಸ್ತಿ, ಕುವೆಂಪು, ಪು.ತಿ.ನ., ರಾಜರತ್ನಂ, ಕೆ.ಎಸ್, ನರಸಿಂಹಸ್ವಾಮಿ ತೊಡಗಿದರು; ದಕ್ಷಿಣ ಕನ್ನಡದಲ್ಲಿ ಗೋವಿಂದ ಪೈ, ಪಂಜೆಮಂಗೇಶರಾಯರು, ಕಡೆಂಗೋಡ್ಲು ಶಂಕರಭಟ್ಟ, ಎಂ.ಎನ್, ಕಾಮತ, ಪೇಜಾವರ ಸದಾಶಿವರಾಯ ಮೊದಲಾದವರು ಕನ್ನಡದಲ್ಲಿ ನವೋದಯ ಪರಂಪರೆಯ ನಿರ್ಮಾಣಕ್ಕೆ ಕಾರಣರಾದರು.[7] ಅಲ್ಲದೆ ನವೋದಯ ಕಾವ್ಯ ತನ್ನ ವಸ್ತು, ಭಾಷೆ, ಬಂಧ, ಅಭಿವ್ಯಕ್ತಿ ರೀತಿ ಧೋರಣೆಗಳಲ್ಲಿ ತನ್ನದೆ ಆದ ದಾರಿಯನು ಕಂಡು ಕೊಂಡಿತ್ತಲ್ಲದೆ, ತನ್ನ ಉಚ್ಛ್ರಾಯ ಕಾಲದಲ್ಲ, ಗೋವಿಂದಪೈ, ಬೇಂದ್ರೆ, ಕುವೆಂಪು ಅವರಂಥ ಕವಿಗಳಲ್ಲಿ ತನ್ನ ಸಂಪ್ರದಾಯದ ಅತ್ಯುತ್ತಮವಾದ ಕಾವ್ಯವನ್ನೂ ಪ್ರಕಟಿಸಿತ್ತು.

ಇನ್ನೊಂದು ಕಡೆಯಲ್ಲಿ ನವೋದಯದ ಜಾಡಿನಲ್ಲೇ (ಭಾವತರಂಗ-೧೯೪೬) ನಡೆಯುತ್ತಿದ್ದರೂ ಅಡಿಗರು ಸ್ವಾತಂತ್ರ್ಯನಂತರದ ಭ್ರಮನಿರಸನಗೊಂಡ ವಾತಾವರಣದಿಂದ ಪ್ರೇರಿತರಾಗಿ "ಅನ್ಯರೊರೆದುದನೆ ಬರೆದುದನೆ ನಾ ಬರೆಬರೆದು ಬಿನ್ನಗಾಗಿದೆ ಮನವು"

---

6. ಎಸ್. ಅನಂತನಾರಾಯಣ: ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ ಪು: ೪೩೫

7. ಕೀರ್ತಿನಾಥ ಕುರ್ತಕೋಟಿ: ನಡೆದು ಬಂದದಾರಿ: ಯುಗಧರ್ಮ ಹಾಗೂ ಸಾಹಿತ್ಯವಿಕಾಸ,

ಎಂದು ತಮ್ಮ ಕಾವ್ಯದ ಹೊಸ ಹಾದಿಯೊಂದರ ಶೋಧನೆಗಾಗಿ ತಡಕಾಡುತ್ತಿದ್ದರು. ಈ ಸಂಧಿ ಕಾಲಗಲ್ಲಿಯೇ ಕಣವಿಯವರು ತಮ್ಮ ಮೊದಲ ಕವನ ಸಂಕಲನ 'ಕಾವ್ಯಾಕ್ಷಿ' (೧೯೪೯)ಯ ಮೂಲಕ ಕಾವ್ಯ ಕ್ಷೇತ್ರಕ್ಕೆ ತಮ್ಮನ್ನು ಪರಿಚಯಿಸಿಕೊಂಡರು. ಹೀಗೆ ಒಂದು ಕಡೆ ತನ್ನ ಹಿಂದಿನಿಂದಲೂ ಬಂದ ಪರಂಪರೆಯೊಂದು ಜೀವಂತವಾಗಿ ಮುಂದುವರಿಯುತ್ತಿದ್ದಾಗ, ಇನ್ನೊಂದು ಕಡೆ ಹೊಸ ಕಾವ್ಯವೊಂದರ ಮಾರ್ಗ ಹೊಳಹು ಕಾಣದಿದ್ದಾಗ, ಇಂಥ ಪ್ರಾರಂಭಿಕದಿಶೆಯ ಯಾವುದೇ ಕವಿಯೊಬ್ಬನಿಗೆ ಸಿದ್ಧಪರಂಪರೆಯೊಂದನ್ನು ಅನುಸರಿಸುವುದು ಅನಿವಾರ್ಯವೂ ಸಹಜವೂ ಆಗುತ್ತದೆ. ಇದಕ್ಕೆ ಕಣವಿಯವರು ಹೊರತಾಗುವದಿಲ್ಲ.

ದೃಷ್ಟಿಧೋರಣೆ : ಕನ್ನಡದಲ್ಲಿ ಬಂದ ನವೋದಯ ಪರಂಪರೆ ಮೂಲದಲ್ಲಿ ಇಂಗ್ಲೀಷಿನ ಪ್ರಸಿದ್ಧರಮ್ಯ ಕವಿಗಳಾದ ವರ್ಡ್ಸ್‌ವರ್ತ್, ಕೋಲ್‌ರಿಜ್, ಕೀಟ್ಸ್, ಷೆಲ್ಲಿಯವರಿಂದ ಪ್ರಭಾವಿತವಾದದ್ದು, ಕಾವ್ಯಕ್ಕೆ ವಸ್ತು ಯಾವುದಾದರೂ ಆಗಬಹುದೆಂದ ವಿಶಾಲ ದೃಷ್ಟಿ, ನಿಸರ್ಗ ಪ್ರೀತಿ, ಪ್ರಕೃತಿಯಾರಾಧನೆಯಲ್ಲಿ ತಾದಾತ್ಮ್ಯ, ಆಂತರಂಗಿಕ ನಲಿವು, ನೋವು, ಪ್ರೀತಿ, ಪ್ರಣಯದ ಮಧುರ ಕ್ಷಣಗಳು, ಮತ್ತು ಆಧ್ಯಾತ್ಮಕ ಸಾಧನೆಯ ಸಂಘರ್ಷ, ಇವುಗಳಿಗೆ ಪೂರಕವಾಗಿ ಕನ್ನಡ ಕಾವ್ಯದಲ್ಲಿ ಸ್ವಾತಂತ್ರ್ಯ ಪೂರ್ವದ ಸಾಮಾಜಿಕ ಅರಿವಿನಿಂದ ರಾಷ್ಟ್ರದ ಬಂಧವಿಮೋಚನೆ. ಕರ್ನಾಟಕ ಏಕೀಕರಣ, ಸಂಸ್ಕೃತಿಯ ಪುನರುಜ್ಜೀವನ, ಸಾಮಾಜಿಕ ಪರಿವರ್ತನೆಯಂಥ ವಿಷಯಗಳು ಕಾಣಿಸಿಕೊಂಡವು. ಇದಕ್ಕೆ ಪರಮಹಂಸ ವಿವೇಕಾನಂದ, ಅರವಿಂದ, ರಮಣ ಮಹರ್ಷಿಗಳಂಥವರ ಆಧ್ಯಾತ್ಮಿಕ ವಿಚಾರಗಳೂ ಬಂದು ಸೇರಿದವು.

ಭಾಷೆಯ ದೃಷ್ಟಿಯಿಂದ ಜನ ಸಾಮಾನ್ಯರ ಬದುಕಿಗೆ ಹತ್ತಿರವಾದ ವಸ್ತುವನ್ನಾಯ್ದುಕೊಂಡು ಅವರ ಭಾಷೆಯಲ್ಲೇ ಕಾವ್ಯವನ್ನು ರಚಿಸಬೇಕೆಂಬ ರೊಮ್ಯಾಂಟಿಕ್ ಕವಿಗಳ ಆದರ್ಶ ಬಂದದ್ದು "ವರ್ಡ್ಸ್‌ವರ್ತ ಮತ್ತು ಕೋಲ್‌ರಿಜ್ ಕವಿಗಳ ಲಿರಿಕಲ್ ಬ್ಯಾಲಡ್ಸ (೧೭೯೮) ಕಾವ್ಯದಿಂದಲೇ[8]" ಭಾಷೆ ಮತ್ತು ಕಾವ್ಯ ವಸ್ತುವಿನ ಬಗೆಗಿನ ಈ ಧೋರಣೆ ಕನ್ನಡದಲ್ಲಿ ಈ ಮೊದಲು ವಚನಕಾರರಲ್ಲಿ ಹಾಗೂ ಅವರ ದಾರಿಯಲ್ಲೇಬಂದ ಹರಿಹರ ರಾಘವಾಂಕರು ಮತ್ತು ದಾಸರಲ್ಲಿ ಬಂದಿತ್ತಾದರೂ ಬಹುಶಃ ಈ ದೃಷ್ಟಿ ಕನ್ನಡದಲ್ಲಿ ಇಷ್ಟು ವ್ಯಾಪಕತೆಯನ್ನು ಪಡೆದದ್ದು ಈ ಕಾಲದಲ್ಲಿಯೇ ಎನ್ನಿಸುತ್ತದೆ. ಈ ನಿಟ್ಟಿನಲ್ಲಿ ಬಿ. ಎಂ. ಶ್ರೀಯವರು ತಮ್ಮ ಇಂಗ್ಲೀಷ ಗೀತೆಗಳ ಮುಖಾಂತರ ಸರಳ ಲಲಿತವಾದ ಒಂದು ಬಗೆಯ ಭಾಷೆಯನ್ನು ಹೊಸ ಛಂದೋ ರೂಪಗಳನ್ನು ಮಾದರಿಯಾಗಿ ತಂದಿದ್ದರು. ಆದರೆ ಅನಂತರ ಬಂದ ನವೋದಯ ಕವಿಗಳ ಕನ್ನಡ ಭಾಷೆ "ಸಂಸ್ಕೃತದಿಂದ, ಹಳಗನ್ನಡದಿಂದ, ಜಾನಪದ ಭಾಷೆಯಿಂದ ಮತ್ತು ಸಮಕಾಲೀನ ಶಿಷ್ಟ ಭಾಷೆಯಿಂದ ಸಿದ್ಧವಾಗಿ ಒಬ್ಬೊಬ್ಬರಲ್ಲಿ ಒಂದೊಂದರ ಆಧಿಕ್ಯವನ್ನು ಪ್ರಕಟಿಸುತ್ತದೆ."[9]

---

8. ಪ್ರಭು ಶಂಕರ: ಭಾವಗೀತೆ: ಪು. ೫೬
9. ಜಿ. ಎಸ್. ಶಿವರುದ್ರಪ್ಪ; ಚೆನ್ನದ ಬೆಳಸು: ಹೊಸಗನ್ನಡ ಕಾವ್ಯ: ಪು. ೨೩

ಸಿದ್ಧಪರಂಪರೆಯ ಜಾಡಿನಲ್ಲಿ : ನವೋದಯ ಕಾಲದ ಉತ್ತರ ಕರ್ನಾಟಕದ ಎಲ್ಲ ಪ್ರಮುಖ ಕವಿಗಳಂತೆ ಕಣವಿಯವರ ಕಾವ್ಯವೂ ಪ್ರಾರಂಭದಲ್ಲಿ ಧಾರವಾಡದ ಗೆಳೆಯರ ಬಳಗದಿಂದಲೇ ಸ್ಫೂರ್ತವಾದಂತೆ ತಿಳಿಯುತ್ತದೆ.[10] ಅವರ ಕಾವ್ಯ ಧಾರವಾಡದ ಸುತ್ತ ಮುತ್ತಲ ಪ್ರಕೃತಿ ಮತ್ತು ಜನ ಜೀವನದಿಂದ ಉದ್ದೀಪಿತವಾದದ್ದು. "ಅಂಬಿಕಾತ ಯನಂತೆ ಕಣವಿಯ ಚನ್ನವೀರನಿಗೂ ಇವೇ ಇಂಥವೇ ಮಹಾ ಪ್ರೇರಣೆಗಳು...'ವಿನಾ ಯಕ' ಹಾಡಲಿ 'ಕಣವಿ' ಹಾಡಲಿ ಧಾರವಾಡ ತತ್ವ ಅದು.[11]" ಈ ಹಿನ್ನೆಲೆಯಲ್ಲಿ ಕಾವ್ಯ ಸೃಷ್ಟಿಯನ್ನು ಕುರಿತ ಅವರ ಧೋರಣೆಗಳು ಅವರ ಕಾವ್ಯದ ಅಭ್ಯಾಸದ ದೃಷ್ಟಿಯಿಂದ ಉಪಯುಕ್ತವಾಗಿವೆ[12]:

೧) ಕಾವ್ಯ ಸೃಷ್ಟಿ ಸೌಂದರ್ಯಾನುಭೂತಿಯ ಚಟುವಟಿಕೆ.
೨) ಮಾತು ಪಡೆದ ಪ್ರಭಾವೀರೂಪ.
೩) ಭಾಷೆಯಲ್ಲಿರೂಪುಗೊಂಡ ಕವಿಯ ಭಾವನಿರೂಪಣೆ.
೪) ಒಂದು ಅವಸ್ಥೆಯಲ್ಲಿ ಕವಿಗೆ ಆವೇಶ ಉಂಟಾಗಿ ಬುದ್ಧಿ ಭಾವಗಳು ಸಮ್ಮಿಳನ ಗೊಂಡು ವಸ್ತುವಿಗೆ ಆಕಾರ ಬರುವುದು.
೫) ಸಹೃದಯನಲ್ಲಿ ಪ್ರತಿಕ್ರಿಯೆ ಹುಟ್ಟಿಸುವಂಥದು.
೬) ಅನುಭವ ತೀವ್ರತೆಯನ್ನೂ ಗಾಢತೆಯನ್ನೂ ಪಡೆದು ಕಲಾಭಿಜ್ಞತೆಯಲ್ಲಿ ರೂಪಗೊಂಡದ್ದು.
೭) ಉದ್ದೀಪನಗೊಂಡಭಾವ ತನಗೆ ಅನುರೂಪವಾದ ಭಾಷೆಯಲ್ಲಿ ಮೈದೋರುವುದು.
೮) ಕವಿಯ ಭಾವ ಅದರಲ್ಲಿ ಜೀವನ ಕಂಡುಕೊಳ್ಳುವುದು.
೯) ಉನ್ನತ ಮಟ್ಟದ ಸೌಂದರ್ಯಾನುಭೂತಿಯ ಜೊತೆಗೆ ಮಾತು ಸಹಜತೆಗೆ ಒಲಿದದ್ದು.
೧೦) ಈಶ್ವರನಿರ್ಮಿತಸೃಷ್ಟಿಯಂತೆಯೇ ಕವಿಯ ಕಾವ್ಯವೂ ಅನಂತ ಮುಖ ವಾದುದು, ಅಗಮ್ಯವಾದುದು.
೧೧) "ಯಾವಸಂದರ್ಭದಲ್ಲಿಯೂ ಕಾವ್ಯ ಸಾಮಾನ್ಯ ಜನತೆಯಿಂದ ತೀರ ದೂರ ಉಳಿಯ ಬಾರದು."[13] ಮೊದಲಾದ ಈ ಬಗೆಯ ಧೋರಣೆಗಳ ನೆಲೆ ಯಿಂದ ಅವರ ಕಾವ್ಯ ಹಲವು ಮುಖಗಳಲ್ಲಿ ವ್ಯಕ್ತವಾಗಿದೆ.

---

10. ದ.ರಾ. ಬೇಂದ್ರೆ: ನೆಲಮುಗಿಲು: ನಾಲ್ಕು ಮಾತು.
11. ,, ,, ,, vi-vii
12. ಚನ್ನವೀರ ಕಣವಿ: ಕಾವ್ಯಾನುಸಂಧಾನ: ಕಾವ್ಯಸೃಷ್ಟಿ-ಲೇಖನ ನೋಡಿ.
13. ,, : ಚಿರಂತನದಾಹ: ಮುನ್ನುಡಿ.

ಪ್ರಕೃತಿಪ್ರೇಮ : ಯಾವುದೇ ಹೊಸಕವಿಯ ಕಾವ್ಯದಂತೆ ಕಣವಿಯವರ ಕಾವ್ಯವೂ ಪ್ರಕೃತಿಪ್ರೇಮ, ಪ್ರಣಯ ಭಾವಗಳ ಸೆಳೆತದಿಂದಲೇ ಪ್ರಾರಂಭವಾಗುತ್ತದೆ. ಪ್ರಕೃತಿಪ್ರೇಮ ಅವರ ಕಾವ್ಯದ ಸ್ಥಾಯೀ ಭಾವವೆಂಬಂತೆ, ಅಲಂಕಾರವಾಗಿ ಶಬ್ದಚಿತ್ರ ವಾಗಿ, ರೂಪಕ ಪ್ರತಿಮೆಯಾಗಿ ಒಂದಿಲ್ಲೊಂದು ರೂಪದಲ್ಲಿ ಪ್ರಕಟವಾಗುತ್ತಲೇ ಹೋಗುತ್ತದೆ. ಈ ಪ್ರೀತಿ ಅವರು ಹವ್ಯಾಸದಿಂದ ಉದ್ದೇಶ ಪೂರ್ವಕವಾಗಿ ಬೆಳೆಸಿ ಕೊಂಡಿದ್ದಾಗಿರದೆ ಅವರು ಬೆಳೆದು ಬಂದ ಜಾನಪದ ಪರಿಸರದಿಂದಲೇ ಮೈಗೂಡಿಬಂದಂತಿದೆ. ಅವರ ಬಾಳ ಸಂಪುಟದಲ್ಲಿ ಇಂದಿಗೂ ಅಳಿಸಲಾರದ ಮಧುರ ಭಾವ ಗೀತವಾಗಿ ಉಳಿದ ಅವರ ಬಾಲ್ಯದ ಮನಸ್ಸು ಎಂಥ ಆವರಣದಲ್ಲಿ ರೂಪುಗೊಂಡಿತೆಂಬುದನ್ನು ನೋಡಬಹುದು: ಆಟ ಬಯಲಾಟ, ಕೋಲು–ಕುಣಿತ, ಹಂತಿ, ಬೀಸು ಕಲ್ಲ ಜೊತೆ ಹಾಡು, ಎತ್ತುಗಳ ಕೊರಳ ಗೆಜ್ಜೆ ಟಿಂಟಿಣಿ, ಆಳುಮಗನ ಲಾವಣಿ, ಜೋಳದಪೈರು ಹೊಡೆಹಾಯ್ದ ಹೊಲದಲ್ಲಿ, ಬನ್ನಿ ಗಿಡದಡಿಯಲ್ಲಿ ಬುತ್ತಿ ಉಂಡು ತತ್ರಾಣಿ ತಣ್ಣೀರ ಕುಡಿದು ಸೊಂಪಾಗಿ ಬೆಳೆದದ್ದು.

ನಮ್ಮೂರ ಗುಡ್ಡದೋರೆಯ ಬದಿಯ ಕಿರುಹಳ್ಳ
ಸುವಿಶಾಲ ಆಲ, ಎಲೆವಳ್ಳಿತೋಟ,
ಈಶ್ವರನ ಗುಡಿ, ಕಲ್ಲು ಕಟೆ , ಮಾದರಕೇರಿ
ಕೆಮ್ಮರಡಿ-ಏನೆಲ್ಲ ಎಂಥ ನೋಟ."

(ಭಾವಜೀವಿ)

ಒಂದೊಂದು ಬಿಡಿಬಿಡಿ ಚಿತ್ರದಂತೆ ಅವರ ಮನಸ್ಸಿನಾಳದಲ್ಲಿ ನೆಲೆಗೊಂಡಿವೆ. ದನಕಾಯುವ ನಿಂಗ ಕಾರಿಬೋರೆ ಹಣ್ಣು ತುಂಬಿಕೊಂಡು ಮಹಿಷವಾಹನನಾಗಿ ಕೊಳಲ ನೂದುತ ಬರುವ ಚಿತ್ರ "ಲಂಬಾಣಿಗಿಲ್‌ಗಿಲ್, ನಾ ಬಂದೆ ನಿಲ್ ನಿಲ್, ಕಟಗಿ ಹೊರಿಚಲ್ ಚಲ್" ಲಂಬಾಣಿಗಳನ್ನು ಅಣಕಿಸುವ ತುಂಟತನ, ಕೆಲಸಿಗರ ಕೆಂಚನ ಒಡೆದಕನ್ನಡಿ ಮೊಂಡಗತ್ತಿಯ ಅನುಭವ, ಕೆರವು ಹೊಲಿಯುವ ದೀನ ದಲಿತ ಮಾದರ ದುರುಗ, 'ಮುಟ್ಟಬೇಡಿರಿ ತಂದೆ' ಎಂದಾಗ ಕಸಿವಿಸಿಗೊಳ್ಳುವ ಮನಸ್ಸು; ಇವುಗಳ ಜೊತೆಗೆ ಮೋಡ ಪಡೆ, ಮದುಮಗನ ಸ್ವಾಗತಿಸುವ ದಿಬ್ಬಣವಾಗಿ, ಹಂಸ ಕುರಿ ಮರಿ, ಆನೆ ಒಂಟೆ ಹಸು ಪ್ರಾಣಿ ರೂಪವಾಗಿ ಉಣ್ಣೆಯಾಗಿ, ಮಿದುಬೆಣ್ಣೆಯಾಗಿ. ತೂಗುವ ತೊಟ್ಟಿಲು ನಡೆವ ಬೆಟ್ಟ, ಸಾಗುವ ಬೆಳ್ಳಿತೇರು, ನರಿಮದುವೆಯಲ್ಲಿ ಮುತ್ತು ಚಲ್ಲಿದಂಥ ನೋಟ- ಇಂಥ ಅನೇಕ ಚಿತ್ರಗಳು ಚಿತ್ತಾರದಂತೆ ಅವರ ಕಾವ್ಯವನ್ನು ಆವರಿಸುತ್ತವೆ. "ಹಿರಿದು ಮನಸು ಹಿರಿದಾದ ಭಾವ ಮುಗಿಲಗಲವಾಗಬೇಕು" ಎಂದು ಬದುಕಿನ ಹಾಗೂ ಕಾವ್ಯದ ಆಕಾಂಕ್ಷೆಯ ವಿಸ್ತಾರಕ್ಕೂ ಕಾರಣವಾಗುತ್ತದೆ.

ಈ ಘಟ್ಟದಲ್ಲಿ ಕಣವಿಯವರ ಪ್ರಕೃತಿ ಗೀತೆಗಳ ಮೇಲೆ ಬೇಂದ್ರೆ, ಕುವೆಂಪು ಅವರ ಪ್ರಕೃತಿ ಗೀತಗಳ ಪ್ರಭಾವ ವಿಶೇಷವಾಗಿದ್ದರೂ, ಈ ಪ್ರೇರಣೆಯನ್ನು ಸ್ವೀಕರಿಸುವ ರೀತಿ ಭಿನ್ನವಾಗಿದೆ. ಬೇಂದ್ರೆಯವರು ಪ್ರಕೃತಿಯ ಅನಂತ ಲೀಲೆ–ಲಾಸ್ಯಗಳಲ್ಲಿ ಓಲಾಡಿ

ಅದರ ನಾದಲಯದಲ್ಲಿ ತಾದಾತ್ಮ್ಯ ಹೊಂದಿದರೆ, ಕುವೆಂಪು ಅದರ ಆರಾಧನೆಯಾಚೆ ಅನಂತದರ್ಶನಕ್ಕೆ ಹಾರೈಸುತ್ತಾರೆ. ಆದರೆ ಕಣವಿಯವರ ಪ್ರಕೃತಿಪ್ರೇಮ ಇಂದ್ರಿಯ ಗಮ್ಯವಾದ ಅನುಭವಕ್ಕೆ ಕಲ್ಪನೆಯ ಬಣ್ಣವನ್ನು ಬಳಿದು ಅದರ ಚಲುವಿನ ವಿಸ್ತಾರವನ್ನು ಸೂರೆಗೈಯ್ಯಲು ಪ್ರಯತ್ನಿಸುತ್ತದೆ. ಋತುಗಳ ಬದಲಾವಣೆ, ಗಿಡ, ಬಳ್ಳಿ, ಹಕ್ಕಿ, ಹೂ, ಮೋಡ, ಮಳೆ. ಎಲ್ಲದರ ಸೊಬಗನ್ನು ಸೂರೆಗೈಯ್ಯುವ ಕಲ್ಪನೆಗೆ ನೂರು ಕಣ್ಣು ಮೂಡುತ್ತವೆ.

ಮಳೆಗಾಲ ವೈತರಲು ನನ್ನ ಕವಿತೆಯ ನವಿಲು
ನೂರು ಕಣ್ಣನು ತೆರೆದು ನರ್ತಿಸುವುದು
(ನಿಯಮೋಲ್ಲಂಘನ)

ಅವರು ಯಾವುದೇ ಭಾವವನ್ನು ಹೇಳಲು ಹೊರಟರೂ ಅವುಗಳ ಅನಿವಾರ್ಯ ತೊಡಿಗೆ ಯಾಗಿ ಪ್ರಕೃತಿಯ ಚೆಲುವು ಪ್ರಕಟವಾಗುತ್ತದೆ.

ಮುಂಜಾವದಂಗಳದಿ ಹೊನ್ನ ಬೆಳಕಿನ ಹುಂಜ
ಕೂಗಿ ಕುಣಿಸುವುದದರ ಹೂ ತುರಾಯಿ
(ಮನೆ-ಕಿಟಕಿ)

ಮುಳುಗುತಿಹ ನೇಸರನು ಮುದಿಸಿಂಹನಂತಾಗಿ
ಪಶ್ಚಿಮಾದ್ರಿಯ ಗವಿಯ ಸೇರುತಿಹನು
(ಪ್ರಜಾಪ್ರಭುತ್ವ)

ಮಳೆಗಾಲದ ಗುಡುಗಿನ ಧ್ವನಿಯು ಹೃದಯದಲ್ಲಿ ನೂರುಗೀತೆಗಳ ಹುಟ್ಟಿಗೆ ಕಾರಣವಾದರೆ, ಒಂದು ಪುಟ್ಟಹಕ್ಕಿಯ ಹಾಡು ತನ್ನ ಹಾಡಿನ ನೆಲೆಯನ್ನು ಕಂಡು ಕೊಳ್ಳಲು ಕಾರಣವಾಗುತ್ತದೆ :

ನಿನ್ನ ಹಾಡಿನ ಮುಂದೆ ನನ್ನದೇತರ ಪಾಡು
ನನ್ನ ಹಾಡಿಗೂ ನನಗು ಜನ್ಮಗಂಟು
(ಒಂದು ಪುಟ್ಟ ಹಕ್ಕಿಗೆ)

ಇವಲ್ಲದೆ ನಮ್ಮ ಜಾನಪದ ಜೀವನದ ಸಂದರ್ಭಗಳ ಚೆಲುವಿನಿಂದಲೂ ಅವರ ಕಾವ್ಯ ಹೇಗೆ ಪ್ರೇರಣೆ ಪಡೆಯುತ್ತದೆಂಬುದಕ್ಕೆ ಬೆಳುದಿಂಗಳಲ್ಲಿ ಹೆಣ್ಣುಮಕ್ಕಳು ಆಡುವ ಬಗಾಟಬಗರಿ ಆಟದ ಲಯದಲ್ಲಿ ಪ್ರಕಟವಾಗಿರುವುದನ್ನು ನೋಡಬೇಕು :

ಬಗಾಟ ಬಗರಿ
ತಿರುಗುವ ತಿಗರಿ
ತೆಂಗಿನ ಚವರಿ
ಗಾಳಿ ಸವಾರಿ
ಬಣ್ಣದ ಹಕ್ಕಿ
ಕೊರಳಲ್ಲುಕ್ಕಿ

ಸುವ್ವೀಚವ್ವಿ
ಹಾಡಿದೆ ಟುವ್ವಿ
(ಗಿರಿಗಿರಿಗಿಂಡಿ)

ಇಲ್ಲಿ ಕವಿಯು ಪ್ರಕೃತಿಯು ಚೆಲುವಿನಲ್ಲಿ ಪರವಶತೆಯನ್ನು ಪಡೆಯುವ ಒಂದು ಮಾತು ಹೇಳಬೇಕು :

ಮೋಡನೋಡಿ ವಿಜ್ಯೂಢನಾಗಿ ಮೈಮರೆವನಲ್ಲ ಸಾಕು
(ಮೇಘೋಪಾಸನೆ)

ಯಾರಿಗೀ ಸುಂದರತೆ ? ಯಾರಿಗೀ ಪರವಶತೆ ?
ಯಾರ ಸುಖಕೀ ಸೃಷ್ಟಿ ನಿನಗಲ್ಲದೆ ?
(ಪಥಿಕ)

ಈ ಪರವಶತೆ ಅಥವ ಮೈಮರೆಯುವಿಕೆಯು ರಮ್ಯ ಸಂಪ್ರದಾಯದ ಒಂದು ಮುಖ್ಯ ಮನೋಧರ್ಮ. ಇಂಥ ಪರವಶತೆಯ ಅನುಭವದಲ್ಲಿ ಕವಿಗೆ ತನ್ನದೇ ಆದ ಒಂದು ಬಗೆಯ ತೃಪ್ತಿ ಇದೆ. ಈ ತೃಪ್ತಿ ಪ್ರಾಮಾಣಿಕವಾದದ್ದೂ ಹೌದು. ಅದನ್ನು ಯಾರೂ ಪ್ರಶ್ನಿಸಲಾರರು. ಆದರೆ ಆ ಬಗ್ಗೆ ಪ್ರಜ್ಞಾಪೂರ್ವಕವಾಗಿ ಅದೊಂದು ಇದೆಯಲ್ಲ ಸಾಕು ಎಂಬಂಥ ಮಾತು ಆತನ ನೈಜ ಅನುಭವದ ತೃಪ್ತಿಯನ್ನೇ ಸಂದೇಹಿಸುವಂತಾಗುತ್ತದೆ. ಅಭಿಪ್ರಾಯವಿಷ್ಟು : ಬರುಬರುತ್ತ ನಮ್ಮ ನವ್ಯಕವಿಗಳಲ್ಲಿ ಪ್ರಜ್ಞೆ, ಬುದ್ಧಿವಂತಿಕೆ, ಜಾಣ್ಮೆಗಳು ಒಂದು ಭಂಗಿಯಾದಂತೆ ಕಣವಿಯವರಂಥ ಹೊಸಕವಿಗಳಂ ಬರೆಯಲು ಪ್ರಾರಂಭಿಸಿದಾಗ ಆಗಲೇ ಇದೊಂದು ರಮ್ಯ ಸಂಪ್ರದಾಯದ ಭಂಗಿಯಾಗಿತ್ತೇನೋ ಎನ್ನಿಸುತ್ತದೆ.

ಪ್ರೇಮ-ಪ್ರೀತಿ : ಪ್ರೀತಿ–ಪ್ರೇಮ ಅದಕ್ಕೆ ಕಾರಣವಾಗುವ 'ರತಿ'ಭಾವ ಜೀವಿಗಳನ್ನು ಅತ್ಯಂತ ಆಳದಲ್ಲಿ ಅದಮ್ಯವಾಗಿ ಕಾಡುವ ಪ್ರಬಲವಾದ ಶಕ್ತಿ. ಇನ್ನೊಂದು ದೃಷ್ಟಿಯಿಂದ ಬದುಕನ್ನು ಗಾಢವಾಗಿ ಬಂಧಿಸುವ ಶಕ್ತಿಯೂ ಹೌದು. ಅದು ಪರಿಣಾಮದಲ್ಲಿ ಭೀಕರವಾಗಿ, ಸುಕುಮಾರವಾಗಿ, ನೋವು, ನಲಿವು, ಹತಾಶೆಗಳ ರೂಪವಾಗಿ ಜೀವನದಲ್ಲಿ ಹಲವು ಮಗ್ಗಲುಗಳಲ್ಲಿ ಪ್ರಕಟವಾಗುತ್ತದೆ. ಅದರಿಂದ ಯಾವ ಜೀವಿಯೂ ತಪ್ಪಿಸಿಕೊಳ್ಳಲಾರದು. ಆದರೆ ಕಣವಿಯವರ ಸಂದರ್ಭದಲ್ಲಿ ವೈಯಕ್ತಿಕ, ವಿವಾಹ ಪೂರ್ವದ ಪ್ರಣಯಭಾವದ ಗೀತೆಗಳಿಗಿಂತ ಗೃಹಸ್ಥಜೀವನದ ಮಧುರ ಅನುಭವಗಳನ್ನು ಕೊಡುವ ಗೀತೆಗಳೇ ವಿಶೇಷವಾಗಿವೆ. ಆದರೂ ಆ ಪೂರ್ವದ ತಾರುಣ್ಯದ ಜಾಗೃತಭಾವ ಪ್ರಕೃತಿಯ ಚೆಲುವಿನ ಸ್ಪರ್ಶದಲ್ಲಿ ಕಚಗುಳಿಇಟ್ಟಂತೆ ಪ್ರಕಟವಾಗುತ್ತದೆ.

ಹೂ ಹೂವಿಗೆ ದುಂದುಂಬಿಯ
ಮೈ ಕೈಗಳ ಸ್ಪರ್ಶನಾ
ಅಪರಂಜಿಯ
ಅನುರಾಗದ
ಮಾಧುರ್ಯದ ಬಂಧನಾ

ತಿರೆಯ ನವಿರು ಹುಲ್ಲುಹಸಿರು
ಮಕಮಲ್ಲಿನ ಮುಸುಗಲಾ
ಮುಗುದೆ ತನ್ನ
ಮನೆಗೆಲಸದಿ
ಗುಣುಗುಣಿಸುವ ಹಾಡಲಾ
(ಕಾವ್ಯಾಕ್ಷಿ)

ಇಂಥವೇ ಭಾವಗಳು, ಕಾವ್ಯಸ್ಫೂರ್ತಿಯ ಸೆಲೆಯಾದ ಶ್ವೇತಪುತ್ರಿ-ಧೂಮಾಕ್ಷಿಯಲ್ಲಿ, ಬಿಡುಗಣ್ಣ ಬಾಲೆಯ ಕಣ್ಣಿನೋಟದ ಕಡೆಯಂಚಿನಾಕಡೆಯ ರಹಸ್ಯವನ್ನು ತಿಳಿಯುವ ಪ್ರಯತ್ನದಲ್ಲಿ ವ್ಯಕ್ತವಾಗಿವೆ.

ಗೃಹಸ್ಥಜೀವನದ ಮಧುರ ಕ್ಷಣಗಳ ಅನುಭವಗಳನ್ನು ಕಣವಿಯವರು ಕಾವ್ಯದಲ್ಲಿ ಪ್ರಕಟಿಸುವ ಮೊದಲೇ, ಕೆ. ಎಸ್. ನರಸಿಂಹಸ್ವಾಮಿಗಳ 'ಮೈಸೂರು ಮಲ್ಲಿಗೆ'ಯಂಥ ಸಂಕಲನವೊಂದು ಪ್ರಕಟವಾಗಿ ಆ ಬಗ್ಗೆ ಒಂದು ಮಾದರಿ ಎನ್ನುವಂತೆ ಕನ್ನಡನಾಡಿನ ತುಂಬ ಜನಪ್ರಿಯವಾಗಿತ್ತು. ಮಧ್ಯಮವರ್ಗದ ಕುಟುಂಬದ ವೈವಾಹಿಕಜೀವನದ ಸೊಗಸು, ಆಕಾಂಕ್ಷೆ, ಉದ್ಯೋಗ, ಜೀವನದ ಏರಿಳಿತಗಳು ಬದುಕಿನ ತಾಪತ್ರಯ ಅದರಿಂದುಂಟಾಗುವ ಅನುಭವಗಳು ಹಾಗೂ ಬಾಳಿಗೆ ಬರುವ ಹದ, ಅತ್ಯಂತ ಹೃದ್ಯವಾಗಿ ಚಿತ್ರಿತವಾಗಿದ್ದವು. ಅಂಥವೇ ಪರಿಸರದಲ್ಲಿ ಬಾಳುವ ಯುವಕವಿಯಾಗಿ ಕಣವಿಯವರಲ್ಲಿ, ನೌಕರಿಯ ಚಾಕರಿ, ಮದುವೆಯಾಗಿ ಒಬ್ಬಂಟಿಹೊಸಹೆಣ್ಣು ಗಂಡನ ಬರುವಿಗಾಗಿ ಕಾಯುವುದು, ಅದಕ್ಕಾಗಿ ಹಂಬಲಿಸಿ ದಿನದಿನವೂ ಹಲವು ಹೊಸ ಕನಸುಗಳನ್ನು ಹೊತ್ತು ಮನೆಗೆ ಬರುವ ಯುವಕನ ಅನುಭವಗಳು ವ್ಯಕ್ತವಾಗಿವೆ :

ಸಂಜೆಯಾಯಿತು ಈಗ ಬಂದೆಬರುವರು ಎಂದು
ಒಂದೆ ಚಿಕ್ಕೆಯ ತೆರದಿ ಜಾನಿಸಿಹಳು

ತುಂಬುಗೈ ಬಾಗಿಲಿಗೆ.........

ನೆಟ್ಟದಿಟ್ಟಿಯ ದಾರಿನೋಡಿ ನಿಟ್ಟುಸಿರಿಡಲು
ಜಡೆಯುದ್ದಕೂ ಚಿಂತೆ ಹೊಯ್ದಾಡಿದೆ

ಇಲ್ಲಿ 'ಜಡೆಯುದ್ಧಕೂ ಚಿಂತೆ' ಎಂಬ ಮಾತು ಅನುಭವವನ್ನು ಚೆನ್ನಾಗಿ ಮೂಡಿಸುತ್ತದೆ. ಇಂಥ ನಿರೀಕ್ಷೆ, ಮಿಲನಗಳ ಸೆಳೆತಗಳೇ ಬದುಕಿನ ಗಾಲಿಯನ್ನುರುಳಿಸುತ್ತವೆ.

ಸಣ್ಣಮನೆಯನು ತುಂಬಿ
ನುಣ್ಣಗಿನ ದನಿಯಲ್ಲಿ
ಬಣ್ಣವೇರಿದ ಹೆಣ್ಣು ಹಾಡುತಿಹಳು
ಕೈ ತುಂಬ ಹಸಿರು ಬಳೆ
ಹಣೆಗೆ ಕುಂಕುಮ ಚಂದ್ರ,
ಜಡೆತುಂಬ ಮಲ್ಲಿಗೆಯ ಮುಡಿದಿರುವಳು.

ನಗೆಯ ಹೊಂಗೇದಗೆಯ ಮುಗುದೆ ಇವಳು
(ಜೀವಜೀವಾಳದಲಿಕೂಡಿದವಳು)

ಇಂಥ ಹೊಸ ಜೀವನಕ್ಕೆ ಕಾಲಗತಿಸಿದಂತೆ ಬದುಕಿನ ವಾಸ್ತವದ ಬಿಸಿ ತಾಗಿ ಜೀವನ ಕೇವಲ ಹಾಲ್ಜೇನಿನ ಹೊಳೆಯಲ್ಲ ಎಂಬ ಅರಿವು ಮೂಡುತ್ತದೆ. ಒಮ್ಮೊಮ್ಮೆ ಜೀವನ ತುಂಬ ಭಾರವಾಗಿ ಬದುಕು ದುಸ್ಸಹನೀಯವಾದಾಗ :

ಅಳಲಕಂಬನಿಯೊರಸಿ
ಸೊಗದ ಹೂಮಳೆ ಸುರಿಸಿ
ಮೌನವಾಗಿಯೆ ಮನವ ಮಿಡಿಯುವಳು
(ಜೀವಜೀವಾಳದಲಿ ಕೂಡಿದವಳು)

ಗಂಡು ಹೀಗೆ ತೀವ್ರವಾದ ನೋವಿಗೊಳಗಾಗಿ ನೊಂದು ಸ್ಥೈರಣೆಗೆಟ್ಟಾಗ ಹತಾಶನಾದಾಗ ಹೆಣ್ಣಿನ ಇಂಥ ಹಿತದ ಆಸರೆ ಬಾಳನ್ನು ಸಹ್ಯವಾಗಿಸುತ್ತದೆ. ಆದರೆ ಇದು ಬೇಂದ್ರೆಯವರ 'ಸಖೀಗೀತ'ದ ಕಟುಮಧುರ ಅನುಭವದಷ್ಟು ದಟ್ಟವಾಗಿರದಿದ್ದರೂ ಆ ಅಳಲಿನ ನೋವನ್ನು ಮಿಡಿಯುತ್ತದೆ.

ವಾತ್ಸಲ್ಯ : ದಾಂಪತ್ಯಜೀವನದಲ್ಲಿ ನೆಲಮುಗಿಲಿನ ಕನಸುಗಳನ್ನು ಹೊತ್ತು ಈ ನೆಲಕ್ಕೆ ಅವತರಿಸುವ ಚೊಚ್ಚಿಲ ಮಗುವಿನ ಆಗಮನವೇ ಒಂದು ವಿಶಿಷ್ಟ ಅನುಭವವನ್ನು ಕೊಡುವಂತಹದು. ಇಂಥ ಅನುಭವವನ್ನು ಕುರಿತು ನಮ್ಮ ನವೋದಯ ಹಿರಿ ಕಿರಿ ಕವಿಗಳೆಲ್ಲ ಆಗಾಗ ಬರೆಯುತ್ತಲೇ ಬಂದಿದ್ದಾರೆ. ಆದರೆ ಆ ಮುಗ್ಧ ಎಳೆಯ ಮಗುವಿನ ಆಗಮನದ ಆಶ್ಚರ್ಯ, ಬೆರಗು, ಸುಕುಮಾರ ಕೋಮಲ ಭಾವನೆಯ ತರಂಗಗಳನ್ನು ಒಂದು ಹಿತದಲ್ಲಿ ತುಳುಕಿಸಿರುವ ರೀತಿ ಕಣವಿಯವರಲ್ಲಿ ವಿಶಿಷ್ಟವಾಗಿದೆ : ಬಾಳಬಳ್ಳಿಗೆ ಹೊಚ್ಚ ಹೊಸತು ಮಲ್ಲಿಗೆಯಾಗಿ ಬಂದ ಮಗುವಿನ ಸೊಲ್ಲಿಗೆ ತುಂಬಿ ತೋಟ ಪರಿಮಳಿಸಿತು, "ಕೊಳದ ಸ್ವಪ್ನವೀಚಿಯಲ್ಲಿ ತೇಲುತಿರುವ ಮುದ್ದು ಹಂಸ" "ಎಸಳಿನಂಥ ಕೈಗಳನ್ನು ಮುಟ್ಟಲೇನು ?" ಎಂಬ ಪ್ರಶ್ನೆಯಲ್ಲಿಯೇ ಅದರ ಮುಟ್ಟಲೋಬೇಡೋ ಎಂಬ ತವಕ, ಆಶ್ಚರ್ಯ ವ್ಯಕ್ತವಾಗಿರುವ ರೀತಿಯಲ್ಲಿಯೇ ಮಗುವಿನ ಕೋಮಲ ಅನನ್ಯ ಭಾವ ಪ್ರಕಟವಾಗುತ್ತದೆ. ಎಳೆಯ ಶಿಶು ಬೆಳೆಯುವ ಹಂತದಲ್ಲಿ ತೋರುವ ಅವಯವಗಳ ಎಡೆಬಿಡದ ಚಲನವಲನಗಳನ್ನು "ಗಾಳಿಗಡಲಿನಲ್ಲಿ ಹುಟ್ಟು ಹಾಕುತಿರುವ ಕೈಗಳು" "ಮಲಗಿದಲ್ಲೇ ಬೈಸಿಕಲ್ಲು ತುಳಿವ ಪುಟ್ಟಕಾಲ್ಗಳು" ಎಂಬ ಮಾತುಗಳಲ್ಲಿ ಆ ಚಿತ್ರ ಕಣ್ಣಿಗೆ ಕಟ್ಟುವಂತೆ ಮಾಡುತ್ತದೆ. "ಹೊಚ್ಚಹೊಸತುಮಲ್ಲಿಗೆ, ಕೊಳದಲ್ಲಿ ತೇಲುವ ಮುದ್ದು ಹಂಸ" ಮಗುವಿನ ಕೋಮಲತೆ ಮತ್ತು ಅಚ್ಚಹೊಸತನವನ್ನು ಸೂಚಿಸಿದರೆ "ನಿದ್ದೆಯಲ್ಲಿ ನಗುತ ನೀನು ನಮ್ಮ ಬುದ್ಧಿಯಾಚೆಗೆ" ಎಂಬುದಂತೂ ವಿಶೇಷವಾದ ಧ್ವನಿಸೂಕ್ಷ್ಮತೆಯನ್ನುಂಟು ಮಾಡುತ್ತದೆ. ಇದು ಕೌಟುಂಬಿಕ ಮುಖವಾದರೆ ಅವರ ಸಾಮಾಜಿಕ ಮುಖ ಇನ್ನೊಂದು ರೀತಿಯಲ್ಲಿ ಅವರ ಕಾವ್ಯದಲ್ಲಿ ಅಭಿವ್ಯಕ್ತಿ ಪಡೆದಿದೆ,

ವ್ಯಕ್ತಿಚಿತ್ರ : ಆಗಾಗ ಕಣವಿಯವರು ತಮ್ಮ ಕಾವ್ಯದಲ್ಲಿ ಅನೇಕ ವ್ಯಕ್ತಿಚಿತ್ರಗಳನ್ನು, ಕೊಡುತ್ತಲೇ ಬಂದಿದ್ದಾರೆ, ಬಸವನಾಳ, ಮಧುರಚೆನ್ನ, ಗೋವಿಂದ ಪೈ, ಉತ್ತಂಗಿ ದ. ಬಾ. ಕುಲಕರ್ಣಿ, ದೊಡ್ಡಮನಿ, ಹಳಕಟ್ಟಿ, ವಿಶ್ವೇಶ್ವರಯ್ಯ, ಮೊದಲಾದವರು,

ಯಾವುದೇ ವ್ಯಕ್ತಿ ಅಥವಾ ವಸ್ತು ವಿಷಯಗಳು ಕವಿಯನ್ನು ಅತ್ಯಂತ ಆಳದಲ್ಲಿ ಗಾಢವಾಗಿ ಕಲಕದಿದ್ದರೆ, ಕಾಡದಿದ್ದರೆ, ಅಂಥವನ್ನು ಕುರಿತು ಕೇವಲ ಮಾತಿನ ಮಾಲೆಯನ್ನು ಹೆಣೆಯುತ್ತ ಹೋಗಬೇಕಾಗುತ್ತದೆ. ಆದರೆ ಬಸವನಾಳ ಮತ್ತು ಮಧುರಚೆನ್ನರು ತಮ್ಮ ವ್ಯಕ್ತಿತ್ವ ಹಾಗೂ ಕೃತಿಗಳಿಂದ ಕವಿಯ ಮೇಲೆ ವಿಶೇಷವಾದ ಪ್ರಭಾವವನ್ನು ಬೀರಿದವರು. ಹಾಗೆಂದೆ ಇಲ್ಲಿಯೂ ಯಾವುದೇ ಇಂಥ ವ್ಯಕ್ತಿತ್ವಗಳ ಅಗಲುವಿಕೆಯನ್ನು ಕುರಿತ ಹಂಬಲಿಕೆಯ ಪರಂಪರಾಗತಮಾತು, ಹೇಳಿಕೆಗಳು ಬಾರದೇಯಿಲ್ಲ. ಆದರೂ ಶರಣರ ಅನುಭಾವಿಕ ಪರಿಶುದ್ಧ ಜೀವನದಿಂದ ಪ್ರೇರಿತವಾಗಿ ಉದಾತ್ತ ಬದುಕನ್ನು ನಡೆಸಿದ ಬಸವನಾಳರ, ಮಧುರಚೆನ್ನರ, ಅಗಲುವಿಕೆಯ ನೋವನ್ನು ವಚನ ಪರಿಭಾಷೆಯಲ್ಲಿ ಹಿಡಿದಿಟ್ಟ ಭಾಗಗಳು ಸೊಗಸಾಗಿವೆ :

ಏನು ಬಂದಿರಿ ಹದುಳವಿದ್ದಿರಿ ನಾಲ್ಕುದಿನ ಇರಲಾಗದೆ ?  
ಏನಿದವಸರ ಕಟ್ಟಿಕೊಂಡಿರಿ ಹೊರಟು ನಿಂತಿರಿ ಆಗಲೆ ?  
ಇವನು ಆವನಾರು ಎನಿಸದೆ ಇವನು ಎಮ್ಮವನೆನಿಸಿರೆ  
ಮಾಡಿದೆನು ಎಂಬತಿಶಯದ ಅಳಿಗಾಳಿ ಸೋಕದ ಆತ್ಮನೆ  
ನಿಚ್ಚವೂ ಶಿವರಾತ್ರಿಪೂಜೆಗೆ ಅಚ್ಚಮಲ್ಲಿಗೆ ಒಡಗಿತು

(ಬಸವನಾಳರಿಗೆ ಭಾಷ್ಪಾಂಜಲಿ)

ಮಧುರ ಚೆನ್ನರ ಜಾನಪದ ಸತ್ವ, ಅನುಭಾವಿಕ ದೃಷ್ಟಿ, ಉದಾರಜೀವನಗಳಿಂದ ಕಣವಿಯವರು ಪ್ರಾರಂಭದಿಂದಲೂ ಬಹಳಷ್ಟು ಪ್ರಭಾವಿತರಾದವರು.

ಜಾನಪದ ಜೀವನದ ಸಂಗೀತಕೆದೆಯೋತು

.............................

ಸುಗ್ಗಿ ಮಾಡಿದಿರಂದು ನಾಡ ನಲಿಸಿ,  
ಅಂದಿನಿಂದೆನ್ನೆದೆಗೆ ಮೂಡಿಹುದು ಮಳೆಬಿಲ್ಲು  
ಆಡಿದವು ನಿಮ್ಮೂರ ನವಿಲು ಹೆಜ್ಜೆ

ಎಂದು, ಸಾಧನೆಯ ದಾರಿಯಲ್ಲಿ ಅವರ ವ್ಯಕ್ತಿತ್ವ ಪರಿಪಾಕಗೊಂಡ ಬಗೆಯನ್ನು :

ದೇಹ ಮೋಂಬತ್ತಿಯೊಲು ಮುಡಿದ ಬೆಳಕಿನ ಕುಡಿಗೆ  
ಕರಗಿ ಮಿದುವಾಗಿತ್ತು ಅಂತರಂಗ

.............................

ಭಾವ ದೇವಾಲಯದಿ ನಿತ್ಯ ನಂದಾದೀಪ  
ಶರಣು ಶರಣೆಂಬುದೇ ಕೊನೆಯ ಸೊಲ್ಲು

(ಮಧುರ ಚನ್ನರ ನೆನಪಿಗೆ)

ಈ ಎರಡೂ ಕವನಗಳಲ್ಲಿ ನಾಡು, ನುಡಿ ಸಂಸ್ಕೃತಿಗಳಿಗೆ ಅವರಿಂದ ಸಂದ ಸೇವೆ, ಅಗಲುವಿಕೆಯಿಂದ ಭರಿಸಲಾಗದ ನಷ್ಟ, ನೋವು ವ್ಯಕ್ತವಾಗಿವೆ. ಈ ವ್ಯಕ್ತಿಗಳು ಕವಿಗಿಂತ ವಯಸ್ಸಿನಲ್ಲಿ, ಸಾಧನೆಯಲ್ಲಿ ಅಂದು ವಿಶೇಷ ಎತ್ತರದಲ್ಲಿದ್ದವರಾದ್ದರಿಂದ ಅವರೊಡನೆಯ ಖಾಸಗಿ ಜೀವನದ ಒಡನಾಟಗಳಿಗಿಂತ ಅವರಲ್ಲಿರುವ ಗೌರವದ ಭಾವನೆಗಳು ವಿಶೇಷವಾಗಿ

ವ್ಯಕ್ತವಾಗಿವೆ. ಬಸವನಾಳರನ್ನು ಕುರಿತ ಕವನ ಸ್ವಲ್ಪ ದೀರ್ಘವಾಗಿದ್ದು ಬಂಧ ಸಡಿಲಾಗಿದೆ; ಮಧುರಚೆನ್ನರನ್ನು ಕುರಿತದ್ದು ಸಂಕ್ಷೇಪದಲ್ಲಿದ್ದು, ಭಾವನೆಗಳೂ ಸಮತೂಕದಲ್ಲಿವೆ. ಆದರೆ ಈ ಎರಡೂ ಕವನಗಳ ಒಂದು ವಿಶೇಷತೆಯೆಂದರೆ : ಸಾಮಾನ್ಯವಾಗಿ ಇಂಥ ಗೀತಗಳು ಅಂದು ವ್ಯಕ್ತವಾಗುತ್ತಿದ್ದ ಭಾವಾತಿರೇಕದ ಗೋಳಾಟದ ಗೀಳಿನಿಂದ ಮುಕ್ತವಾದದ್ದು.

ರಾಷ್ಟ್ರಪ್ರೇಮ: ಅವರ ದೀಪಧಾರಿ ಕವನಸಂಕಲನದಿಂದಲೇ ಅವರ ಈ ನವೋದಯದ ಮಾರ್ಗಕ್ಕೆ ನವ್ಯತೆಯ ಕವಲೊಡೆದಂತೆ ಕಂಡುಬರುತ್ತದೆ. 'ಮನೆ-ಕಿಟಕಿ' 'ಮಧ್ಯಾಹ್ನದ ಮಜಲು' 'ಋತುಸಂಸಾರ' 'ಕೊನೆಯ ನಿಲ್ದಾಣ' 'ದೀಪಧಾರಿ' ಕವನಗಳು ಇದನ್ನು ಸೂಚಿಸುತ್ತವೆ. ಆದರೆ ಈ ಪೂರ್ವದ ಕವನವೊಂದರಲ್ಲಿ ಸ್ವಾತಂತ್ರ್ಯಾನಂತರದ ಸಾಮಾಜಿಕ ಆಶೋತ್ತರದ ಭಾವನೆ ವ್ಯಕ್ತವಾಗಿರುವ ರೀತಿಯು ಅಂದಿನ ನಮ್ಮ ನವೋದಯ ಕವಿಗಳ ಭಾವನೆಯನ್ನು ಸರಿಯಾಗಿ ಸೂಚಿಸುವಂಥದಾಗಿದೆ. ಸ್ವಾತಂತ್ರ್ಯ ಪೂರ್ವದ ನಮ್ಮ ಎಲ್ಲ ನವೋದಯ ಕವಿಗಳಂತೆ ಸ್ವಾತಂತ್ರ್ಯಾನಂತರವೂ ಅನೇಕ ಕವಿಗಳು ನಮ್ಮ ಜನತೆಯೊಡನೆ ಅದೇ ಭಾವಸಮುದ್ರದಲ್ಲಿ ತೇಲಾಡಿದರು. ಎಲ್ಲೆಲ್ಲೂ ಸ್ವಾತಂತ್ರ್ಯದ ಸಡಗರ, ಉತ್ಸಾಹ, ಆದರ್ಶ ಕಾಣಿಸಿಕೊಂಡವು. ಸರ್ವಾಧಿಕಾರತ್ವ ಹೋಗಿ ಸಮಾನತಾ ತತ್ವವನ್ನು ತಂದೀತೆಂದು ಎಲ್ಲ ಕವಿಗಳಂತೆ ಕಣವಿಯವರೂ ಹಿಗ್ಗಿದರು :

ಮುಳುಗುತಿಹ ನೇಸರನು ಮುದಿಸಿಂಹನಂತಾಗಿ
ಪಶ್ಚಿಮಾದ್ರಿಯ ಗವಿಯ ಸೇರುತಿಹನು
ಬಿತ್ತರದ ಬಾನಿನಲಿ ಮತ್ತೆ ಜನತಾ ರಾಜ್ಯ
ಮೆರೆಯುತಿದೆ ಚಿಕ್ಕೆಯ ಪ್ರಜಾಪ್ರಭುತ್ವ
(ಪ್ರಜಾಪ್ರಭುತ್ವ.)

ನಮ್ಮ ದೇಶದ ಅಂದಿನ ಅನೇಕ ಕವಿಗಳಿಗಿದ್ದ ಈ ಭ್ರಮೆ ಹೇಗೆ ಮತ್ತೆ ಮತ್ತೆ ನಿರಸನಗೊಂಡು ನಮ್ಮ ಕಾವ್ಯಕ್ಕೆ ಹೊಸದೃಷ್ಟಿಯನ್ನು ನೀಡಿತೆಂಬುದನ್ನು ನೋಡಬೇಕು.

ತಾತ್ವಿಕದೃಷ್ಟಿ-ಕಾವ್ಯದೃಷ್ಟಿ: ಕಣವಿಯವರ ಕಾವ್ಯದಲ್ಲಿ ಒಂದು ಬಗೆಯ ತಾತ್ವಿಕದೃಷ್ಟಿ ಕೋನದ ಅನ್ವೇಷಣೆ, ಚಿರಂತನದಾಹವಾಗಿ, ಕಾವ್ಯದ ನಿರಂತರಶೋಧನೆಯಾಗಿ ಪ್ರಾರಂಭದಿಂದಲೂ ಕಾಣಿಸಿಕೊಳ್ಳುತ್ತಲೇ ಬಂದಿದೆ. ಆ ಬಗೆಯ ಶೋಧನೆಯ ಭಾರದಿಂದ ಅವರ ಕಾವ್ಯ ಕೃಶವಾಗದೆ, ಬರಡಾಗದೆ ಇನ್ನೂ ಪಿಂಡಗೊಂಡು ಸಮೃದ್ಧವಾಗುತ್ತಲೇ ಬಂದಿದೆ. ಅದು ಪ್ರಕೃತಿಗೀತವಾಗಿರಲಿ, ಪ್ರೇಮಗೀತವಾಗಿರಲಿ, ಸಾಮಾಜಿಕ ವಿಡಂಬನಾತ್ಮಕ ಪದ್ಯವಾಗಿರಲಿ ಎಲ್ಲದರಲ್ಲೂ ಅದರ ಸಾಹಿತ್ಯವನ್ನು ಕಾಪಾಡಿಕೊಂಡು ಹೋಗುತ್ತದೆ :

ತನಗೆ ತಾನೆ ತಿಳಿಯದಂತೆ
ತುಳುಕಿತಹಹ ಭಾವನಾ
(ಕಾಮಾಕ್ಷಿ)

ಇಂಥ ಸಮಯದಿ ಹಂಬಲದಿ ಬಾಯ್ದೆರೆದ ಸಿಂಪಿದು ಭಾವನ
ತರಗೆಲೆಯು ಗಿರುಕಿನಲು ಮೌನವೆ ಬಿಕ್ಕಿದೊಲು ಬರಿಕಲ್ಪನ
(ಚರಿದಿರ)

ಈ ಭಾವನೆಯು ಕಲ್ಪನೆ ಮೌನವನ್ನು ಮುರಿದು ಮಾತಿನ ಮೊಗ್ಗಾಗಿ ಒಡೆಯುತ್ತದೆ :

ಮೌನ ಮೊಗ್ಗೆಯನೊಡೆದು ಮಾತರಳಿ ಬರಲಿ
ಮೂರು ಗಳಿಗೆಯ ಬಾಳು ಮುಗಮುಗಿಸುತಿರಲಿ

(ಮಾತು)

ಬಿಡುಗಣ್ಣ ಬಾಲೆಯ ರಹಸ್ಯವನ್ನರಿಯುವ ಕುತೂಹಲ ಅವರ ಕಾವ್ಯ ಕುತೂಹಲವೂ ಹೌದು :

ಬಿಡುಗಣ್ಣ ಕಡೆಯಂಚಿನಂಚಿನಾ ಕಡೆಯಲ್ಲಿ
ಏನಿಹುದು, ಏನಿಹುದು ? ಬಲ್ಲರಾರು!

(ಬಿಡುಗಣ್ಣಬಾಲೆ)

ಈ ಕುತೂಹಲದೊಂದಿಗೆ ಕಾವ್ಯೋನ್ನತಿಯ ಸಾಧನೆಯು ಮೂಡಿಸುವ ಅರಿವು ಭರವಸೆ :

ಊರ್ಧ್ವಮುಖಿಗಲ್ಲದಿದು ಉಳಿದವರಿಗಳವೆ ?
ಆತ್ಮಬಲದೆದುರು ಮೇಣುಳಿದ ಬಲವೆ ?

(ಆಕಾಶಬುಟ್ಟಿ)

ಈ ಅರಿವಿನ ಸಾಧನೆಯಿಂದ ಮತ್ತೆ ಮತ್ತೆ ಸೆಲೆಯೊಡೆದರೂ ಇದು ಚಿರಂತನದಾಹ :

ಬಂದಷ್ಟು ಇಂಗುತಿದೆ ಮತ್ತೆ ಬರಿದಾಗುತಿದೆ
ಎಷ್ಟು ಸೆಲೆಯೊಡೆದರೂ ವಿಫಲ ವಿಫಲ

(ಚಿರಂತನ ದಾಹ)

ಎತ್ತರೆತ್ತರಕ್ಕೆ ಬೆಳೆಯಬೇಕೆಂಬ ಕವಿಗೆ ಸಫಲತೆಯ ಪೂರ್ಣವಿರಾಮವಿಲ್ಲ. ಆದರೆ ಮತ್ತೆ ಮತ್ತೆ ಉಂಟಾಗುವ ವಿಫಲತೆ ವಿಷಣ್ಣತೆಯನ್ನುಂಟುಮಾಡದೆ ಕಾಯುವ ತಾಳ್ಮೆಯನ್ನು ಕೊಡಬೇಕಾಗುತ್ತದೆ.

ಎಂದು ಬರುವದೊ ಕಾಲ, ನನ್ನಿನಿಯ ಮಳೆಗಾಲ
ವಿರಹ ವೈಶಾಖವನು ದಾಟಬೇಕೆ ?

(ನಿಯಮೋಲ್ಲಂಘನ)

ತನ್ನ ಕಾವ್ಯಸ್ಫೂರ್ತಿಯ ಸೆಲೆಯಾದ ಪುಟ್ಟಹಕ್ಕಿಗೆ ಕವಿಯು ಮಾಡಿಕೊಂಡ ಬಿನ್ನಪ ತನಗೆ ತಾನೇ ಮಾಡಿಕೊಂಡಂತಿದೆ ; ಇದರೊಡನೆ ನಾವೂ ಸೇರಬಹುದು :

ಏನಾದರೂ ಇರಲಿ, ಹಾಡ ನಿಲ್ಲಿಸಬೇಡ
ದೀಪ ಪಟ್ಟನೆ ಆರಿಹೋಗಬಹುದು
ಬದುಕು ಸೋಲಾದರೂ ಕಾಡುಪಾಲಾದರೂ
ಹಾಡು ಬಿಟ್ಟುಳಿದವನ ಪಾಡು ಬೇಡ

(ಮತ್ತೊಂದು ಪುಟ್ಟ ಹಕ್ಕಿಗೆ)

ಇದು ಒಂದು ಘಟ್ಟದವರೆಗಿನ ಅವರ ಕಾವ್ಯದ ವಿವೇಚನೆ. ಹೀಗೆ ನವೋದಯ ಮಾರ್ಗದಿಂದ ಪ್ರವೇಶಿಸಿ ಯಾವ ಮಾರ್ಗಕ್ಕೂ ತಮ್ಮನ್ನು ಕಟ್ಟಿಕೊಳ್ಳದೆ, ಅಂದಂದಿನ

ಬದುಕನ್ನು ಗಾಢವಾಗಿ ಕಲಕಿ ಉದ್ದೀಪನಗೊಳಿಸಿದ ಒತ್ತಡಗಳಿಗೆ ಅರ್ಥಪೂರ್ಣವಾಗಿ ಸ್ಪಂದಿಸುತ್ತ ಕಾವ್ಯದ ಚಲನಶೀಲತೆಯನ್ನು ಕಾಪಾಡಿಕೊಂಡು ಬಂದವರು, ಸಂಪ್ರದಾಯದ ನೆರಳಿನಲ್ಲೇ ತಮ್ಮ ಅನಿಸಿಕೆ, ಭಾವನೆಗಳನ್ನು ತೋಡಿಕೊಳ್ಳಬೇಕಾಗಿ ಬಂದರೂ ತಮ್ಮದೇ ಆದ ಭಾವ ಸ್ನಿಗ್ಧತೆ, ಅದಕ್ಕೆ ತಕ್ಕಮಾತಿನ ಪ್ರಯೋಗ, ಮೌಲ್ಯ ಪ್ರಜ್ಞೆಗಳ ಮೂಲಕ ತಮ್ಮ ವಿಶಿಷ್ಟತೆಯನ್ನು ಕಾಪಾಡಿಕೊಂಡು ಬಂದವರು. ಕಾವ್ಯದ ಅಸಲು ಕಸುಬಿನ ಬಗ್ಗೆ ಅಡಿಗರು ಪ್ರತಿಪಾದಿಸಿದ ಅನೇಕ ಎಚ್ಚರಗಳನ್ನು ಹೊಂದಿದ ಕೆಲವೇ ನವೋದಯ ಕವಿಗಳಲ್ಲಿ ಕಣವಿಯವರೂ ಒಬ್ಬರು. ಕಾವ್ಯದ ವಸ್ತು, ಭಾಷೆ, ಬಂಧ. ಅಭಿವ್ಯಕ್ತಿ ರೀತಿಗಳಲ್ಲಿ ಸದಾ ಪ್ರಯೋಗದೃಷ್ಟಿಯನ್ನುಳಿಸಿಕೊಂಡು, ತಮ್ಮ ಕಾವ್ಯದ ಆಳ-ಆಗಲಗಳನ್ನು ವಿಸ್ತರಿಸಿಕೊಂಡವರು. ಹೊಸಗನ್ನಡ ಕಾವ್ಯವಲ್ಲದೆ, ಪ್ರಾಚೀನ ಕನ್ನಡ ಕಾವ್ಯ ಪರಂಪರೆಯ ಎಲ್ಲವನ್ನೂ ಅರಗಿಸಿಕೊಂಡು, ಜಾನಪದ, ಆಡುಮಾತು, ಸಂಸ್ಕೃತ ನುಡಿಗಟ್ಟುಗಳಿಂದ ತಮ್ಮ ಅಭಿವ್ಯಕ್ತಿಗೆ ಒಂದು ವಿಶಿಷ್ಟ ಹದದಲ್ಲಿ ಭಾಷೆಯನ್ನು ಮಿದ್ದಿಕೊಂಡವರು. ಹೊಸಗನ್ನಡದ ಎಲ್ಲ ಲಯಗತಿಗಳ ಜೊತೆಗೆ ಜಾನಪದ ಮಟ್ಟುಗಳ ಮೋಡಿಯನ್ನು ಕರಗತಮಾಡಿಕೊಂಡು ಅವುಗಳನ್ನು ಕಾವ್ಯದಲ್ಲಿ ಪ್ರಯೋಗಿಸುತ್ತ ಬಂದವರು. ಬದುಕಿನಲ್ಲಿ ತಾನು ನಂಬಿರುವ ಮೌಲ್ಯಗಳಿಗೆ ಬದ್ಧವಾಗಿರುತ್ತ, ತಮ್ಮ ಸೌಮ್ಯ ನಾಗರಿಕ ಸಜ್ಜನಿಕೆಯ ವ್ಯಕ್ತಿತ್ವದ ಮೂಲಕ ಎಷ್ಟೇ ಸಂಕೋಚಗಳು ಬಂದರೂ, ಅದರಿಂದುಂಟಾಗುವ ಎಲ್ಲ ಇಕ್ಕಟ್ಟು ನೋವುಗಳನ್ನು ಮೌನವಾಗಿ ಸಹಿಸುತ್ತ ಆ ಅನುಭವಗಳನ್ನು ಅರ್ಥಪೂರ್ಣವಾಗಿ ಅಭಿವ್ಯಕ್ತಿಗೊಳಿಸುತ್ತ ಬಂದವರು, ಈಗ ಆ ಎಲ್ಲ ದಾರಿಗಳನ್ನು ತುಳಿದು ಅನುಭವವಾಗಿ ಬದುಕಿಗೆ ಒಂದು ಹದಬಂದಿರುವ ಕಾಲದಲ್ಲಿ ಕಣವಿಯವರಿಂದ ಇನ್ನೂ ಮಹತ್ವದ ಕಾವ್ಯವನ್ನು ನಾವು ನಿರೀಕ್ಷಿಸಬಹುದಾಗಿದೆ,

ಶಾಮಸುಂದರ ಬಿದರಕುಂದಿ

# ಕಣವಿಯವರ ನವ್ಯಮಾರ್ಗ

## (ಒಂದು ಸಮೀಕ್ಷೆ)

ಸ್ವಾತಂತ್ರ್ಯೋತ್ತರದ ತರುಣ ಕಾಲ (೧೯೪೮) ದಿಂದಾರಂಭಿಸಿ, ಇಂದಿನ ತನಕವೂ (ಒಂದು ತಲೆಮಾರಿನ ಕಾಲಾವಧಿ) ಕನ್ನಡದಲ್ಲಿ ಕಾವ್ಯ ರಚಿಸುತ್ತಿರುವ ಕವಿಗಳಲ್ಲಿ ಚೆನ್ನವೀರ ಕಣವಿಯವರದು ಪ್ರತ್ಯುತ್ಪನ್ನ ಮತಿಯಿಂದ ಕೂಡಿದ ವ್ಯಕ್ತಿತ್ವ. ಈ ಕಾಲಾವಧಿಯ ಹೊಸ ಕಾವ್ಯದ ಧಾಟಿ, ಧೋರಣೆ ಮೇಲೆ ಇವರೇನೂ ಮಹತ್ವದ ಪ್ರಭಾವ ಬೀರಿಲ್ಲವಾದರೂ ಬದಲಾದ ಪ್ರಪಂಚದ ವಾಸ್ತವತೆಯನ್ನು ಬಿಚ್ಚುಹೃದಯದಿಂದ ಆತ್ಮೀಕರಿಸಿಕೊಂಡು, ತಮ್ಮ ಅಭಿವ್ಯಕ್ತಿಮಾರ್ಗ, ರಚನಾ ಕೌಶಲ. ನುಡಿಗಟ್ಟಿನ ಪರಂಪರೆಯ ರಕ್ಷಣೆಯಲ್ಲಿ ವಿಶಿಷ್ಟತೆಯನ್ನು ಸಾಧಿಸಿದವರು. ನವೋದಯ, ಪ್ರಗತಿಶೀಲ ಮಾರ್ಗಗಳನ್ನು ಕ್ರಮಿಸಿದ ಆಧುನಿಕ ಕಾವ್ಯ, ೧೯೫೪ರಿಂದೀಚೆ ಸ್ಪಷ್ಟವಾಗಿ ನವ್ಯಮಾರ್ಗ ತುಳಿಯಲಾರಂಭಿಸಿದ ಕಾಲಕ್ಕೂ ಮುಂಚೆಯೇ ಕಾವ್ಯಕೃಷಿಗೆ ತೊಡಗಿದ್ದ ಕಣವಿಯವರು ಸೀಮಿತ ದೃಷ್ಟಿಯ ತಾರುಣ್ಯಾನುಭವದ ಫಲವಾಗಿ ಮತ್ತು ಪೂರ್ವ ಕವಿಕಾವ್ಯಗಳ ಪ್ರಭಾವ–ಸಂಸ್ಕಾರದ ಫಲವಾಗಿ, ನವೋದಯ ಮಾರ್ಗದ ಭಾವುಕ ಪ್ರಪಂಚದಿಂದ ಪ್ರೇರಿತರಾಗಿ ಭಾವಗೀತಗಳನ್ನು ರಚಿಸಿದವರು. ಹಳ್ಳಿಯಲ್ಲಿ ಹುಟ್ಟಿಬೆಳೆದ ಈ ಕವಿಗೆ ಅಲ್ಲಿಯ ಮುಗ್ಧ ಸಮೃದ್ಧ ವಾತಾವರಣ, ಜನಪದ ಸಂಸ್ಕೃತಿಯ ನಿಕಟ ಸಂಪರ್ಕವಿದ್ದುದನ್ನು ಆರಂಭದ ಕವಿತೆ (ಕಾವ್ಯಾಕ್ಷಿ, ಭಾವಜೀವಿ)ಗಳಲ್ಲಿಯೂ, ಹೊಸಕಾವ್ಯದಲ್ಲಿ ಪ್ರತಿಮಾರೂಪದಲ್ಲೂ ವಿವರ ವಿವರವಾಗಿ ಕಾಣಬಹುದಾಗಿದೆ,

'ಆಕಾಶಬುಟ್ಟಿ' ಕಾವ್ಯ ಬರುವ ಸಮಯಕ್ಕೆ ಭಾವಪ್ರಪಂಚವನ್ನೂ ವಿಚಾರ ಪರ ನೋಟದಿಂದ ಕಾಣುವ ಅಂಶ ಈ ಕವಿಯಲ್ಲಿ ಸಂಚಯವಾಗತೊಡಗಿತ್ತು. ಅನುಭವವನ್ನು ಬರಿ ಹೇಳಿಕೆಯಾಗಿ, ವರ್ಣನೆಯಾಗಿಸುವದಕ್ಕೆ ಹೊರತಾಗಿ ತಾತ್ತ್ವಿಕವಾಗಿಸುವ ಪ್ರಬುದ್ಧ ಪ್ರಯತ್ನವನ್ನು 'ಆಕಾಶಬುಟ್ಟಿ', 'ಚಿರಂತನದಾಹ' ಕವಿತೆಗಳೆರಡರಲ್ಲಿ ನಿದರ್ಶಿಸಬಹುದು :

ಉತ್ಸಾಹ–ಸಾಹಸದಿಂದ ಚೈತನ್ಯದಾಕಾಶಕ್ಕೆ ಕವಿ ತೇಲಿಬಿಟ್ಟ 'ಆಕಾಶಬುಟ್ಟಿ'ಯು–

ಏರುವುದೊ
ಇಳಿಯುವುದೊ
ಗಾಳಿಯಾಘಾತದಲಿ ಜೋಲಿ ಹೊಡೆದುರುಳುವುದೊ

ಮೈಸುಟ್ಟು ಕೊಳ್ಳುವುದೊ

...........................

..................... ........

ಯಾರು ಕಂಡಿಹರಿದನು

—ಎಂಬ ತೀವ್ರ ಆತಂಕದಲ್ಲಿ ; ಹಾಗೂ—

ಏನೊ ಅಸಮಾಧಾನ ಹೃದಯಾಂತರಾಳದಲಿ
ಬಾಯ್ದೆರೆದು ಹೀರುತಿರೆ ತೃಪ್ತಿಯಿಲ್ಲ.

ಎಂಬ ತೀವ್ರ ಹಂಬಲದ ನಿಕಾಶೆಯಲ್ಲಿ ಕಣವಿಯವರ ಕಾವ್ಯ ದೃಷ್ಟಿ—ಸೃಷ್ಟಿ ಯಾವುದೇ ಪೂರ್ವ ನಿಯೋಜಿತ ಹಿಡಿತಕ್ಕೆ ಒಳಗಾಗಿ ನಿಲ್ಲುವಂತಹದಲ್ಲ ; ಹೊಸದಾರಿ, ಹೊಸ ನೋಟದತ್ತ ಅದಕ್ಕೆ ಮುಂಧೋರಣೆಯ ಯುಕ್ತಿ ಉಂಟು ಎಂಬುದು ಸ್ಪಷ್ಟವಾಗುತ್ತದೆ.

ತರುಣ ಚೈತನ್ಯವನ್ನು ಕಾವ್ಯಾಭಿವ್ಯಕ್ತಿಗೆ ಒಗ್ಗಿಸಿಕೊಂಡ ಯುವಕ ಕವಿ ಕಣವಿಯವರು ಮೊದಲಿನಿಂದಲೂ ಸ್ವಾನುಭವ ನಿಷ್ಠರು. ಭಾವಗೀತೆ ಹಾಡಲಿ, ವಿಡಂಬನ ಪದ್ಯ ರಚಿಸಲಿ, ಕಾವ್ಯಾಭಿವ್ಯಕ್ತಿಯನ್ನು ಎಷ್ಟೇ ಸಲೀಸಾಗಿ ಹೊರಹೊಮ್ಮಿಸಿರಲಿ, ಕವಿತೆಯಾಗಿ ಒಡಮೂಡಿದ್ದರಲ್ಲಿ ಅನುಭವದ ಗಟ್ಟಿತನ ಪ್ರತಿಫಲಿಸಿರುತ್ತದೆ. ಪ್ರೇಮ-ವಾತ್ಸಲ್ಯದಿಂದ ಕೂಡಿದ ದಾಂಪತ್ಯದ, ಕುಟುಂಬದ ಆತ್ಮೀಯ ಅನುಭವಗಳನ್ನು ಬಿಂಬಿಸುವ 'ಮಧುಚಂದ್ರ'ದ ಕಾವ್ಯ ಕಣವಿಯವರ ಆಳವಾದ, ಸಹಜವಾದ ಆತ್ಮರತಿ ಸ್ವಭಾವಕ್ಕೆ ನಿದರ್ಶನವಾಗುತ್ತದೆ. ಆತ್ಮರತಿ ಸ್ವಭಾವ ಒಬ್ಬ ಕವಿಗಿರುವುದು (ಭಾವಗೀತ ಪ್ರಪಂಚದ ಭಾವುಕನಿಗೆ) ಅನಿಷ್ಟದ ಅಂಶವೇನಲ್ಲ. ಇಂದಿನ ಕಾವ್ಯ-ಸಂದರ್ಭದ ನೆಲೆಯಲ್ಲಿ ನಿಂತು, ಒಂದು ತಲೆಮಾರಿನುದ್ದಕ್ಕೂ ಬೆಳೆದು, ಮಾಗಿದ ಕವಿಯೊಬ್ಬರ ಸಾಧನ–ಸಾಧ್ಯತೆಗಳನ್ನು ಪರಿಶೀಲಿಸುವಾಗ ಈ ಅಂಶವನ್ನು ಅಲಕ್ಷಿಸಲಿಕ್ಕಾಗದು. ತರುಣ ಕವಿಯೊಬ್ಬನಿಗೆ ಹೊರ ಜಗತ್ತಿನ ಒಳಿತು ಕೆಡಕುಗಳತ್ತ ತೀಕ್ಷ್ಣ ಪ್ರಜ್ಞೆಯ ಗಮನವಿರದೆ, ವೈಯಕ್ತಿಕ ನೋವು-ನಲಿವಿನ ಕಡೆಗಷ್ಟೇ ಗಮನವಿರುವ ಅಂಶ, ಆ ಕವಿಯ ಒಟ್ಟು ಪ್ರತಿಭೆಯ ಸೀಮಿತತೆಯನ್ನು ನಿರ್ಧರಿಸುತ್ತದೆ. ಈ ಕಾರಣಕ್ಕಾಗಿ, ಈ ಅಂಶದ ಕಡೆಗೆ ಅನಿವಾರ್ಯವಾಗಿ ಬೆರಳು ತೋರಿಸಬೇಕಾಯಿತು.

ಭಾವಪ್ರಪಂಚದ ಗಟ್ಟಿನೆಲೆಯ ಮೇಲೆ ಕಾಲೂರಿ ನಿಂತ ಕಣವಿಯವರ ಆರಂಭದ ಕಾವ್ಯ, ಅವರ ಭಾವೀ ಕಾವ್ಯಸಾಧನೆಯ ಮೇಲೆ ಬೀರಿದ ಪರಿಣಾಮ ಕೂಡ ಮಹತ್ವದ್ದು. ಭಾವಗೀತೆಯ ಛಂದೋಬದ್ಧ ತಾಳ-ಲಯ, ಧಾಟಿ ಹಾಗೂ ನುಡಿಯ ಹಾಸು ಬೀಸು-ಈ ಲಕ್ಷಣಗಳನ್ನು ಕಣವಿಯವರು ಸ್ವಾಭಾವಿಕವಾಗಿ ಮೈಗೂಡಿಸಿಕೊಂಡದ್ದರಿಂದ, ಅವರು ನವ್ಯಮಾರ್ಗಕ್ಕೆ ತಿರುಗಿದಾಗಲೂ ಕಾವ್ಯದ ಆಕಾರಕ್ಕೆ ಶಿಸ್ತನ್ನೂ, ನಿಯಮಿತತೆಯನ್ನೂ, ಮೌಲ್ಯಾತ್ಮಕ ಧ್ವನಿಶಕ್ತಿಯನ್ನೂ-ಹೊಸ ಕಾವ್ಯದಲ್ಲಿ ತುಂಬಲು ಸಾಧ್ಯವಾಯಿತು.

ಕಾವ್ಯವಸ್ತು ದೃಷ್ಟಿಯಿಂದ ಆರಂಭ ಕಾಲದಲ್ಲಿ ಕಣವಿಯವರು ನವೋದಯ ಮನೋಧರ್ಮದ ಪರಿಶುದ್ಧ ಜೀವನ ಕಲ್ಪನೆ ; ರಸಪೂರ್ಣ ಸೌಂದರ್ಯಾನುಭೂತಿ ; ಸರಸ-

ಸಜ್ಜನಿಕೆಯ ಆದರ್ಶಗಳನ್ನು ಮೈಗೂಡಿಸಿಕೊಂಡಿದ್ದರು. ಕಾಮಕ್ಕಿಂತ (ಶುದ್ಧ) ಪ್ರೇಮ; ಸ್ವೈರಕ್ಕಿಂತ ರಸಿಕತೆ; ವಿಹ್ವಲತೆಗಿಂತ ಸಹನೆ; ನಿಸರ್ಗಪ್ರೀತಿ, ಪ್ರಶಂಸಾಪ್ರಿಯತೆ-ಈ ಗುಣಗಳನ್ನು ಆತ್ಮೀಕರಿಸಿಕೊಂಡರು. 'ವಿನಾಯಕ'ರ ಸೌಂದರ್ಯಾನುಭೂತಿ, 'ಅಂಬಿಕಾತನಯದತ್ತ'ರ ಪದಮಾಂತ್ರಿಕತೆ; ಕುವೆಂಪುವಿನ ನಿಸರ್ಗಪ್ರಿಯತೆ; ಮಧುರಚೆನ್ನರ ಆಧ್ಯಾತ್ಮಿಕ ಶೃಂಗಾರ ಭಾವ; ಅಡಿಗರ ಆಧುನಿಕ ಪ್ರಜ್ಞೆ ಇವುಗಳ ಅರಿವು, ಅಭ್ಯಾಸ ಕಣವಿಯವರಿಗಿದ್ದುದರಿಂದ ನವೋದಯ ಕವಿಗಳು ಹಿಂದಿನ ಮೂವತ್ತು ವರ್ಷಗಳಲ್ಲಿ ಸಾಧಿಸಲಾಗದ ಕಾವ್ಯದ ಉತ್ಕರ್ಷ ಸ್ಥಿತಿಯನ್ನು ಅವರು ಸಾಧಿಸುವುದಕ್ಕೆ ಶಕ್ಯವಾಯಿತು. 'ಭಾವ ಜೀವಿ'ಯ ಪದ್ಯ ಕಣ್ಣೆದುರು ಮೂಡಿಸುವ ಚಿತ್ರ ಈ ಮಾಲೆಗೆ ಸಾಕ್ಷಿಯಾಗಿದೆ :

ಜೋಳದಾ ಪಯಿರು ಹೊಡೆಹಾಯ್ದು ಹೊಂದಲೆದೂಗೆ
ಅಕ್ಕಡಿಯ ಬಳ್ಳಿಗಳು ಹುಲುಸಾಗಿರೆ
ಬನ್ನಿಗಿಡದಡಿಯಲ್ಲಿ ತತ್ರಾಣಿ ತಣ್ಣೀರ
ಕುಡಿದು ಬುತ್ತಿಯನುಂಡು ಸೊಂಪಾಗಿದೆ

ತರುಣ ಕವಿಗೆ ಬಾಲ್ಯದ ಮರುಕಳಿ ಎಷ್ಟು ತಿವ್ರವಾಗಿದೆಯೆಂದರೆ

ಸುವ್ವಿ ಬಾ ಚೆನ್ನಯ್ಯ, ಸುವ್ವಿ ಬಾ ಲಿಂಗಯ್ಯ,
ಸುವ್ವಿ ಬಾ ಎನ್ನುತ್ತ ಸಾರುವಯ್ಯ,
ಇರುಳಿನಲಿ ಕಂದೀಲ ಬೆಳಕಿನಲಿ ಬರುವಂತೆ
ಬಾಲ್ಯದನುಭವ ಮರಳಿ ಕರೆವುದಯ್ಯ.

ಇಡೀ ಪದ್ಯಕ್ಕೆ, ಓದುಗನನ್ನೂ ಭಾವಜೀವಿಯಾಗಿಸುವ ಶಕ್ತಿ ಇರುವದರಿಂದ ನವೋದಯ ಪರಂಪರೆಯ ಕಾವ್ಯಕ್ಕೆ ಅರ್ಥಪೂರ್ಣ ಕಳಸವನ್ನು ಇಟ್ಟ ಕಟ್ಟಕಡೆಯ ಕವಿಯಾಗಿ ಕಣವಿಯವರು ಕಂಗೊಳಿಸುತ್ತಾರೆ.

೨

ಕನ್ನಡದಲ್ಲಿ ನವ್ಯಕಾವ್ಯ ಪರಂಪರೆ ಹುಟ್ಟಿಕೊಳ್ಳಲಿಕ್ಕೆ ಸಾಹಿತ್ಯಕ, ಸಾಂಸ್ಕೃತಿಕ ಅಥವಾ ವೈಯಕ್ತಿಕ ಕಾರಣ, ಉದ್ದೇಶ ಏನೇ ಇರಲಿ, ೧೯೫೦ ರ ಹೊತ್ತಿಗೆ ನವ್ಯಮಾರ್ಗ ಖಚಿತ ರೂಪ-ಲಕ್ಷಣದೊಂದಿಗೆ ಮೈದಾಳಿತು. ಸ್ವಾತಂತ್ರ್ಯೋತ್ತರ ದೇಶದ ಜೀವನದ ಒಳ ಹೊರಗುಗಳಿಗೆ ಸ್ವಚ್ಛಂದ ಆಕಾರದಲ್ಲಿ, ವಾಸ್ತವ ಪ್ರಪಂಚದಲ್ಲಿ ರೂಪುಗೊಂಡ ಪ್ರತಿಮೆ, ಪ್ರತೀಕ ಸಂಕೇತಗಳ ಮೂಲಕ ಹೊಸ ಕವಿಗಳು ರೂಪಕೊಡತೊಡಗಿದರು. ಕಾವ್ಯದ ಅನುಭವಲೋಕ ಅಮೂರ್ತದಿಂದ ಮೂರ್ತಕ್ಕೆ; ಭ್ರಮೆಯಿಂದ ವಾಸ್ತವತೆಗೆ ಮಾರ್ಪಾಟಾದುದರಿಂದ ಅದರ ವಿಷಯ ವ್ಯಾಪ್ತಿ ಹಿಗ್ಗಿತು. ಬಯಲಾಯಿತು. ಕವಿತೆಯ ಪದವ್ಯಾಪ್ತಿ ಸಾಮಾಜಿಕವಾಯಿತು; ಹಿಂದಿನ ಕಾವ್ಯಮಾರ್ಗಗಳಲ್ಲಿದ್ದ ಕಟ್ಟು ನಿಟ್ಟು ಸಡಿಲುಗೊಂಡು. ಮಡಿವಂತಿಕೆಯ ಸಂಕೋಚದಿಂದಲೂ ಕಾವ್ಯ

ಬಿಡುಗಡೆ ಪಡೆಯಿತು. ಇಂದ್ರಿಯಗಮ್ಯ ಅನುಭವಕ್ಕೆ ನಿಷ್ಠವಾದ, ವಿಚಾರ ವಿಶ್ಲೇಷಣೆಯುಳ್ಳ ಕಾವ್ಯ ವಸ್ತುವಿಗಾಗಿ ಹೊಸಕವಿ ತಡಕಾಡಬೇಕಾಯಿತು. ಕಾವ್ಯ ಭಾಷೆಯಲ್ಲಿ ಗದ್ಯದ ಸಹಜ ಲಯಗಾರಿಕೆ, ಕಠಿಣತೆ ಕಾಣಿಸಿಕೊಂಡು, ಕಾವ್ಯಪ್ರಪಂಚದ ಚಟುವಟಿಕೆ ಎಲ್ಲ ಬಗೆಯ ಕವಿಗಳಿಗೂ ಆಹ್ವಾನ ನೀಡುವಂತಾಯಿತು. ತರುಣರಲ್ಲದ, ಮಾರ್ಪಟ್ಟ ವಾತಾವರಣಕ್ಕೆ ಸ್ಪಂದಿಸಲಾರದ ಕವಿಗಳು ನಿಷ್ಕ್ರಿಯವಾಗಿ ಉಳಿಯುವಂಥ ಸಂದರ್ಭ ಸೃಷ್ಟಿಗೊಂಡಿತು. ನವ್ಯತೆಯ ವ್ಯಾಖ್ಯೆ ನೀಡಿದ (೧೯೫೦ ರಲ್ಲಿ) 'ವಿನಾಯಕ' ರೇ ಸ್ವತಃ ಈ ಮಾರ್ಪಾಟಿನಿಂದ, ಬೆಳವಣಿಗೆಯಿಂದ ದಂಗುಬಡಿದು, ಕಾವ್ಯ ಮಾರ್ಗದಲ್ಲಿ 'ಸಮನ್ವಯ' ದ ಪ್ರಸ್ತಾಪ ಮಾಡಬೇಕಾಯಿತು. ವೈಯಕ್ತಿಕ ನಿರಾಶೆ, ತೀವ್ರ ಹತಾಶೆ, ಮಾನವೀಯ ಏರು-ಪೇರುಗಳನ್ನು ತಾತ್ವಿಕವಾಗಿ ವ್ಯಾಖ್ಯಾನಿಸುವ ಹೊಣೆಯನ್ನು ಗೋಪಾಲಕೃಷ್ಣ ಅಡಿಗ, ಬಿ.ಸಿ. ರಾಮಚಂದ್ರಶರ್ಮ, ಗಂಗಾದರ ಚಿತ್ತಾಲರಂಥ ಕವಿಗಳು ಸಮರ್ಥವಾಗಿ ಹೊತ್ತರು. ಆದಾಗಲೇ ಭಾವಗೀತ ಪರಂಪರೆಯಲ್ಲಿ ಈ ಕವಿಗಳು ಗಳಿಸಿದ್ದ ಪರಿಣತಿ ಹಾಗು ಸಮಕಾಲೀನ ಕಾವ್ಯದ ನೆಲಗಟ್ಟಿನ ಬಗ್ಗೆ ಇವರಿಗಿದ್ದ ಖಚಿತ ನಿಲುವಿನಿಂದಾಗಿ ಹೊಸಕಾವ್ಯ, ಅಸ್ವಾಭಾವಿಕ ಬೆಳವಣಿಗೆಯಾಗಿ ಕಾಣಲಿಲ್ಲ. ಬದಲಾಗುತ್ತಿರುವ ಪರಿಸರಕ್ಕೆ ತಕ್ಕುದಾದ ಸಂವೇದನೆಯನ್ನು ಗುರುತಿಸಿ, ನವ ಅಭಿವ್ಯಕ್ತಿ ಮಾರ್ಗವನ್ನು ರೂಢಿಸಿಕೊಳ್ಳುವುದು ಪ್ರತಿಭಾವಂತ ಕವಿಯ ಎದುರಿಗಿದ್ದ ಮುಖ್ಯ ಕೆಲಸವಾಗಿತ್ತು. ಸಾಮಾನ್ಯ ಕವಿಗಳು ಮಾತ್ರ ಬದಲಾದ ಪರಿಸರವನ್ನು ಗಮನಿಸಲಿಲ್ಲ ; ತಾವು ಬದಲಾಗಲೂ ಇಲ್ಲ. ಇಂತಹವರು ಕಾವ್ಯದ ಸೆಲೆ ಬತ್ತುವಂತೆಯೂ, ಕಾವ್ಯ ಪರಂಪರೆ ಮಲೆತ ನೀರಾಗುವಂತೆ ಮಾಡಲು ಕಾರಣರಾಗುವವರು. ತರುಣರೂ ಮಹತ್ವಾಕಾಂಕ್ಷಿಗಳೂ ಆದ ಚನ್ನವೀರ ಕಣವಿಯವರು ಕಾವ್ಯಮಾರ್ಗದಲ್ಲಿ ಉಂಟಾದ ಪರಿವರ್ತನೆಯ ಪ್ರವೃತ್ತಿಯನ್ನು ಗುರುತಿಸಿದರಲ್ಲದೆ ತಮ್ಮ ಕಾವ್ಯ ಪ್ರತಿಭೆಯ ಸಕಲಶಕ್ತಿಯನ್ನು ಹೊಸ ಸಂವೇದನೆಗೆ ಒಗ್ಗಿಸಿಕೊಳ್ಳಲು ಹವಣಿಸಿದರು. ಆವರೆಗೆ, ಅಂತರಂಗದ ಭಾವುಕ ತುಡಿತ, ಮಿಡಿತಕ್ಕೆ ಮಾತ್ರ ಸೀಮಿತಗೊಂಡಿದ್ದ ಕಲ್ಪಕಶಕ್ತಿ, ಬಾಹ್ಯ ಪ್ರಪಂಚದ ಆಗು-ಹೋಗುಗಳಿಗೆ, ಸಾಮಾಜಿಕ ಕಾಳಜಿಗಳಿಗೆ ಪ್ರತಿಕ್ರಿಯಿಸುವ ಕ್ರಿಯಾತ್ಮಕ ದೃಷ್ಟಿಯನ್ನು ಮೈಗೂಡಿಸಿಕೊಂಡಿತು. ಈ ಪರಿವರ್ತನೆಯಿಂದ ಕಣವಿಯವರು ಹಳೆ ಸಂಪ್ರದಾಯಕ್ಕೆ ಪೂರ್ಣ ವಿಮುಖವಾದರೆನ್ನುವುದಕ್ಕಿಂತ, ಅವರ ಕಾವ್ಯ ದೃಷ್ಟಿಯು ಮೊದಲಿನದಕ್ಕಿಂತ ಹೆಚ್ಚು ಹರವಾಯಿತು ಅಥವಾ ತನ್ನ ಸಾರ್ಥಕತೆಯ ಮೂಲ ಪ್ರೇರಣೆಯನ್ನು ಶೋಧಿಸಿಕೊಂಡಿತೆನ್ನುವುದು ಶ್ರೇಯಸ್ಕರ.

ನೈಜ ಬದುಕಿನ ಬಹುಮುಖ ಸಂಘರ್ಷ ವಿಕರ್ಷಗಳನ್ನು ಈ ಕವಿ ಕಂಡುಂಡರೂ ತಮ್ಮ ಸ್ವಭಾವಕ್ಕೆ ಸಹಜವಾದ ಸಾಮರಸ್ಯದ ಪ್ರತಿಪಾದನೆಯನ್ನು ಬಿಟ್ಟುಕೊಡಲಿಲ್ಲ. ಈ ಒಂದು ಸಾಹಿತ್ಯಕ ಗುಣಕ್ಕಾಗಿಯೇ ಕೆಲವರು ಕಣವಿಯವರನ್ನು 'ಸಮನ್ವಯ'ದ ಪ್ರತಿಪಾದಕರೆಂದು ವಿಮರ್ಶಿಸುತ್ತಾರೆ. ಕ್ರಾಂತಿಕಾರೀ ಮನೋಧರ್ಮದಿಂದ ಸುರುವಾದ ನವ್ಯಮಾರ್ಗದ ಕಾವ್ಯ, ಹತ್ತಾರು ವರ್ಷಗಳಲ್ಲೇ ತಾತ್ತ್ವಿಕ ನೆಲೆಗಟ್ಟಿನಲ್ಲೇ ಪೊಳ್ಳಾಗುತ್ತ

ನಡೆದುದನ್ನೂ ; ಸ್ವಚ್ಛಂದ ಅಭಿವ್ಯಕ್ತಿಯ ಸಲೀಸುತನದಿಂದಾಗಿ ಆಕಾರದ ಅಂದಗೆಡಿಸುತ್ತ ಬಂದುದನ್ನೂ ಗಮನಕ್ಕೆ ತಂದುಕೊಂಡಾಗ, ಕಣವಿಯವರು ಅನುಸರಿಸಿದ ಸುವರ್ಣ ಮಾಧ್ಯಮ ಮಾರ್ಗದ ಒಳ್ಳೆಯ ಗುಣಗಳ ಮಹತ್ತ್ವ ಅರ್ಥವಾಗುತ್ತದೆ. ಇವರು, ಎರಡು ಪರಂಪರೆಯ ನಡುವಿನ ಕೊಂಡಿ ಮಾತ್ರವಾಗಿ ದಾಖಲೆಯಲ್ಲಿ ಉಳಿಯದೆ, ಕಾವ್ಯ ಪರಂಪರೆಯ ಉಳಿವಿಗೆ ಅಗತ್ಯವಿರುವ ಸತ್ತ್ವವನ್ನು ನವ್ಯ ಕಾವ್ಯದ ಆಶಯ–ಅಭಿವ್ಯಕ್ತಿ ಗಳೆರಡರಲ್ಲೂ ತುಂಬಿದರು. ಈ ಕಾರಣದಿಂದಲೆ, ಬಂಡಾಯ ಸಾಹಿತ್ಯದ ಹೊಸ ಲಕ್ಷಣಗಳು ಕಾಣುತ್ತಿರುವ ಇಂದಿನ (1978–79) ಸಂದರ್ಭದಲ್ಲೂ ಚಿಗಿಯುವ ಗುಣ ಧರ್ಮವನ್ನು ತೋರಿಸಬಲ್ಲ ಶಕ್ತಿ–ಯುಕ್ತಿವಂತರಾಗಿ ಉಳಿದಿದ್ದಾರೆ.

೩

'ದೀಪಧಾರಿ' (೧೯೫೬) ಯಿಂದ 'ನಗರದಲ್ಲಿ ನೆರಳು (೧೯೭೪) ವಿನ ವರೆಗಿನ ಕಣವಿ ಕಾವ್ಯದ ನವ್ಯಮಾರ್ಗದ ಉದ್ದಗಲ, ನವ್ಯ ಪರಂಪರೆಯ ಉತ್ತಮ ಗುಣ-ಲಕ್ಷಣ ತೋರುವುದರ ಜೊತೆಗೆ, ಕನ್ನಡ ಕಾವ್ಯದ ಆರೋಗ್ಯಕರ ಬೆಳವಣಿಗೆಗೆ ಕಾರಣವಾದ ಚಿಕಿತ್ಸಕ ನೋಟವನ್ನೂ ಒದಗಿಸುತ್ತವೆ. ಕನ್ನಡ ಕಾವ್ಯಪ್ರಪಂಚದಲ್ಲಿ ನವ್ಯತೆ ಪ್ರಾದುರ್ಭವಿಸಿದೊಡನೆಯೆ ಭಾವುಕ ಕಣವಿಯವರಲ್ಲಿ ವಿಮರ್ಶಕನೂ ಉದ್ಭವಗೊಂಡನು. ಇದೊಂದು ಸಕಾಲಿಕ ಬೆಳವಣಿಗೆ. ಆಧುನಿಕತೆಯ ಲೇಪನವಿಲ್ಲದ, ಶಾಂತ, ಸಮೃದ್ಧ ಭಾವಲೋಕದ ನೆನಪಿನ ಬುತ್ತಿಯ ಸಾಮಗ್ರಿ ಒಂದೆಡೆಗೆ ; ಆತಂಕ, ತಳ್ಳಂಕ, ಗೊಂದಲ ಗಡಿಬಿಡಿಗಳ ಜ್ವಲಂತ ಪ್ರಪಂಚದ ಸದಾ ಸೆಳೆತದ ಸಾಮಗ್ರಿ ಇನ್ನೊಂದೆಡೆಗೆ ಪರಸ್ಪರ ವಿರುದ್ಧದ ವಸ್ತು ಪ್ರಪಂಚವನ್ನು ವಸ್ತುನಿಷ್ಠವಾಗಿ ಕಂಡು, ಸಮಕಾಲೀನ ಬದುಕಿನ ಮೌಲ್ಯವನ್ನು ಬೆಲೆಗಟ್ಟುವುದು ಎಂಥ ಕವಿ ಪ್ರತಿಭೆಗಾದರೂ ಮಹತ್ತ್ವದ ಸವಾಲೇ ಸರಿ. ಕಣವಿಯವರು ಈ ಬಗೆಯ ಸವಾಲಿಗೆ ಸಾಕಷ್ಟು ಜಾಣ್ಮೆಯಿಂದ, ಪ್ರಾಮಾಣಿಕ ಹವಣಿಕೆ ಯಿಂದ ಎಡೆಗೊಟ್ಟಿದ್ದಾರೆ. 'ನವ್ಯ' ಎಂದ ಕೂಡಲೆ, ಹೊಸದೇನನ್ನೊ, ಅದರ ಹೊಸ ತನಕ್ಕಾಗಿ ಸ್ವೀಕರಿಸಿ, ಸಂಭ್ರಮಿಸುವ ಹುಂಬತನವನ್ನಿವರು ಪ್ರದರ್ಶಿಸಿಲ್ಲ. ಪರಿಸರದ ವಿಕೃತಿ, ಅಶಾಂತಿ, ವೈಷಮ್ಯಗಳನ್ನು ಮುಗ್ಧವಾಗಿ ನೋಡದೆ, ಚಿಕಿತ್ಸಕ ದೃಷ್ಟಿಯಿಂದ ಪರಿಶೀಲಿಸುವದರಲ್ಲಿ ವ್ಯಂಗ್ಯವಾಗಿ ವ್ಯಾಖ್ಯಾನಿಸುವದರಲ್ಲಿ ಮತ್ತು ತನ್ನ ಮಣ್ಣಿನ ಗುಣ–ಶೀಲಗಳನ್ನು ಬಲಿಗೊಡದೆ ಹೊಸತರಲ್ಲಿಯ ಉತ್ತಮಿಕೆಯನ್ನು ತನ್ನದಾಗಿಸಿಕೊಳ್ಳು ವುದರಲ್ಲಿ ಅವರ ನವ್ಯ ದೃಷ್ಟಿಯ ಪರಿಣತಿ ಎದ್ದು ಕಾಣುತ್ತದೆ.

'ಬಿಡುವಿಲ್ಲ ಅರ್ಜಂಟು : ಟಾರು ಬೀದಿಯ ತುಡಿತ'. ಗಡಿಬಿಡಿಯ ಯಾಂತ್ರಿಕ ಜೀವನವನ್ನು ವರ್ಣಿಸುತ್ತಲೇ, ಕವಿಯ ಕಣ್ಣು ಬೀದಿಯಂಚಿನಲಿ ಸಾಗಿರುವ ದನಗಾಹಿ ಯತ್ತ ಹರಿಯುತ್ತದೆ. ಎಮ್ಮೆಯ ಮೇಲೆ ಕೂತ ಆ ದನಗಾಹಿ, ಕೊಳಲನ್ನೂದುತ್ತ, ಚಿಂತೆಯ ಪರಿವೆ ಇಲ್ಲದೆ ಶಾಂತ ಮನಸ್ಕನಾಗಿ ನಡೆದಿದ್ದಾನೆ. ನಾಗರಿಕ ಮನುಷ್ಯನು ಸುಧಾರಣೆ, ಯಂತ್ರ ಜೀವನದ ಪರಾವಲಂಬನೆಯಿಂದ ತಂದುಕೊಂಡಿರುವ ಮನಸ್ಸಿನ

ಅಶಾಂತತೆಯನ್ನು ವಿಡಂಬಿಸುವ 'ಕಾಲಾತೀತ' ಎಂಬ ಒಂದು ಸಾನೆಟ್, ಕಣವಿಯವರ ಆರಂಭ ಕಾಲದ ನವ್ಯ ರಚನೆಗಳಲ್ಲಿಯೇ ಅರ್ಥಪೂರ್ಣ. 'ಕಾಲ' ದ ವಿವಿಧ ಸ್ವರೂಪ, ಪರಿಣಾಮಗಳ ಕುರಿತು ಅವರು ಬೇರೆ ಕವನಗಳನ್ನೂ, ಅಲ್ಲಲ್ಲಿ ಕಾಲದ ಪರಿವೆಯ ಬಗ್ಗೆ ತಮಗಿರುವ ಕುತೂಹಲವನ್ನೂ ವ್ಯಕ್ತಪಡಿಸಿದ್ದಾರೆ, 'ಕಾಲ'ವು ಅವರ ಚಿಂತನೆಗೆ ಪಕ್ಕಾಗಿರುವ ಒಂದು ಮಹತ್ತ್ವದ ಕಾವ್ಯವಸ್ತು.

ಸುಕುಮಾರ ಪದ ಪ್ರಯೋಗ, ಸೌಹಾರ್ದ ಜೀವನದ ಸಲೀಸು ಚಿತ್ರಣಗಳಿಂದ ಸವುಕಲಾಗಿದ್ದ ಕಾವ್ಯಭಾಷೆಗೆ ಕವಿ ಅಡಿಗರು ದೇಶೀಯ ಸಹಜತೆಯನ್ನು, ವ್ಯಂಜಕಶಕ್ತಿಯನ್ನು ತುಂಬಿದರು. ಜೀವನದ ನಿಷ್ಠುರತೆ, ವಿಕೃತಿಯ ಉಲ್ಲೇಖದಲ್ಲಿಯೇ ಸೌಂದರ್ಯ ಪ್ರತೀತಿಯನ್ನುಂಟುಮಾಡಿಕೊಳ್ಳುವ ದೃಷ್ಟಿಯೊಂದು ಹೊಸ ಕಾವ್ಯದಲ್ಲಿ ಮೂಡಿತು, ಈ ತರದ ಭಾಷಾಭಿವ್ಯಕ್ತಿಯನ್ನು ರೂಪಿಸಿಕೊಳ್ಳುವುದು ಕಣವಿಯವರಿಗೆ ಶ್ರಮದ ಕೆಲಸ ವಾಗಿರಲಿಲ್ಲ.

ಕಾಗೆ ಬೇವಿನಕಾಯ ಕುಕ್ಕಿ ಚುಂಚನು ತಿಕ್ಕಿ
ಹೊತ್ತು ಗೊತ್ತಿಲ್ಲದೆಯೆ ಕಿರಿಚುತ್ತಿದೆ;
ಹುಲ್ಲಿನಲಿ ಹುಳವನಾರಿಸುತಿಹವು ಗೊರವಂಕ
ಗೂಡಿನಲಿ ಗುಬ್ಬಚ್ಚಿ ಅರಚುತ್ತಿದೆ.
..............................
..............................
ಎದುರು ಗೋಡೆಗೆ ಶಿಲುಬೆಗೇರಿಸಿದ ಗಡಿಯಾರ
ಸುತ್ತುಸುತ್ತಿಗೆ ಗಂಟೆ ಟೆಂಟಣಿಸಿದೆ;
ಹತ್ತಿರದ ಹೋಟಲಿನ ಹಾಡು—ಹಲಗೆಯು ಕೂಗಿ
ಬಸಿಯ ಮಧುವೀಂಟಲ್ಕೆ ಕರೆಯುತ್ತಿದೆ.

ಇಲ್ಲಿ ಬಳಸಲಾದ ಭಾಷೆಗೆ ಚಿತ್ರಕಶಕ್ತಿ ಇರಲು ಕಾರಣ : ಭಾಷೆ ಹೊಸದಾದರೂ ಅದನ್ನು ಕ್ರಿಯಾತ್ಮಕವಾಗಿ ಬಳಸಿಕೊಂಡು, ಕಾವ್ಯದ ವಾತಾವರಣಕ್ಕೆ ಜೀವ ತುಂಬಬೇಕೆಂಬ ಬೌದ್ಧಿಕ ಶ್ರಮ, ವ್ಯಕ್ತವಾದದ್ದು.

ನವ್ಯಕಾವ್ಯದ ಸಫಲತೆ, ಕೇವಲ ಭಾಷಾ ಪ್ರಯೋಗದ ಚಮತ್ಕಾರ ಅಥವಾ ಗಹನ ಸಾಂಕೇತಿಕ ನುಡಿಗಟ್ಟಿನಲ್ಲಿಲ್ಲ. ವಸ್ತುವನ್ನು ಆಯ್ದುಕೊಳ್ಳುವಲ್ಲಿ ; ಗಂಭೀರ ಚಿಂತನೆಯ ಮೂಲಕ ಭಾಷೆಯನ್ನು ದುಡಿಸಿಕೊಳ್ಳುವಲ್ಲಿ ನವ್ಯತೆಯ ತಿರುಳು ಇದೆ ಎಂಬುದನ್ನು ಗುರುತಿಸಿಕೊಂಡ ಕಣವಿಯವರು, ತಮ್ಮ ಸಾಹಿತ್ಯ ಜ್ಞಾನವೆಲ್ಲವನ್ನು ಅಭಿವ್ಯಕ್ತಿಗೆ ಒಗ್ಗಿಸಿ ಕೊಳ್ಳುವತ್ತ ಲಕ್ಷ್ಯವಹಿಸಿದರು. ಅಡಿಗರಂತೆ ಇಡೀ ತಮ್ಮ ವ್ಯಕ್ತಿತ್ವವನ್ನು ಆವೇಶದಿಂದ ಅಭಿವ್ಯಕ್ತಿಯಲ್ಲಿ ತೊಡಗಿಸಿಕೊಳ್ಳುವ ಪೂರ್ಣ ತನ್ಮಯತೆಯಾಗಲಿ, ಗಂಗಾಧರ ಚಿತ್ತಾಲ ರಂತೆ ಗಹನ ಚಿಂತನೆಯಲ್ಲಿ ಮುಳುಗುವ ಕಲ್ಪಕತೆಯಾಗಲಿ ಕಣವಿಯವರಲ್ಲಿ ಕಾಣುವುದಿಲ್ಲ. ಒಂದು ವಿಚಾರ ಇಲ್ಲವೆ ಯೋಚನೆಯನ್ನು ಪದರು ಪದರಾಗಿ ಬಿಡಿಸಿ, ತಿರುಳನ್ನು

ಅನ್ವೇಷಿಸುವ ಕುತೂಹಲ, ಆಸಕ್ತಿ ಮಾತ್ರ ಇವರ ಚಿಂತನಶೀಲ ಪದ್ಯಗಳಲ್ಲಿ ಕಾಣುವ ಅಂಶ. ಆರಿಸಿಕೊಂಡ ವಸ್ತುವಿನ ಅಥವಾ ಚಿಂತನೆಯ ವಿವಿಧ ಮೈಯನ್ನು ಮುಟ್ಟಿ, ತಟ್ಟಿ ಪರೀಕ್ಷಿಸುವುದು ಕಣವಿಯವರಿಗೆ ಸಾಧ್ಯವಾಗದುದಕ್ಕೆ ಕಾರಣ: ಅವರಿಗೆ ಅನಾಯಾಸ ಲಭಿಸಿದ ಭಾಷೆಯ ಮೇಲಿನ ಪ್ರೌಢಿಮೆಯೇ ಆಗಿದೆ. ಜನಪದದ ನುಡಿಗಟ್ಟು, ಗಾದೆ ಮಾತು, ಪಡೆನುಡಿ, ದಾಸರ–ಶರಣರ ಸೂಳ್ನುಡಿಗಳನ್ನು ಚಿಂತನೆಯ ಸಿದ್ಧಾಂತಕ್ಕಾಗಿ ಅವಲಂಬಿಸುವ ಕಣವಿಯವರು, ಆ ಮಟ್ಟಿಗೆ, ಸ್ವತಂತ್ರ ನಿಲುವಿನಿಂದ ದೂರ ಉಳಿದು ಬಿಡುತ್ತಾರೆ. ಕವಿಯ ವಿಚಾರ ಕಲ್ಪನೆ (concept)ಗೆ ಒದಗುವ ಇಂಥ ಪರಿಮಿತಿ ಯಿಂದಾಗಿಯೇ, 'ದೀಪಧಾರಿ' ಸಂಕಲನದ ಕೆಲವು ಪದ್ಯಗಳ ಕೆಲವೇ ಬಿಡಿ ಬಿಡಿ ಗಟ್ಟಿ ಮಾತುಗಳನ್ನು ಬಿಟ್ಟರೆ, ಅವರ ನವ್ಯ ಮಾರ್ಗದ ತಾತ್ತ್ವಿಕ ಧೋರಣೆ ಏನು ಎಂಬುದು ಅಲ್ಲಿ ಸ್ಫುಟಗೊಳ್ಳುವುದಿಲ್ಲ.

'ಮಣ್ಣಿನ ಮೆರವಣಿಗೆ' (೧೯೬೦)ಯಲ್ಲಿ ಸಮಕಾಲೀನ ಜೀವನಕ್ಕೆ ಇನ್ನಷ್ಟು ನಿಕಟ ವಾಗಿ ಸ್ಪಂದಿಸಬೇಕೆಂಬ ಆಶೆ–ಆಶಯ ಒಡೆದು ಕಾಣುತ್ತದೆ. ಬದುಕಿನ ಚಿರಂತನತೆಯ ಬಗೆಗಿನ ಕಾಳಜಿಯೂ ಇಲ್ಲಿದೆ. ಗತಕಾಲದ ಸ್ವಚ್ಛಂದ, ಸಮೃದ್ಧ ಬಾಳಿನ ನೆನಪು ಬಾಲ್ಯದ ಹಳವಂಡಗಳನ್ನು ಕಣ್ಣೆದುರು ಮೂಡಿಸುವ ಪ್ರಯತ್ನ ಮಾಡುತ್ತದೆ ಮಣ್ಣಿನ ಮೆರವಣಿಗೆ,

ಬಂದುಹೋದವು ಬಂಡುಹೂಡಿ ಒಂದರ ಮೇಲೊಂದು ಮಳೆಗಾಲ
ಗುಡುಗಿ, ಗದ್ದಲಿಸಿ, ಮದ್ದಳೆ ಬಡಿದು ಕುಣಿದಾಡಿ
ಹಿಡಿದು ಹೆಂಡದ ಬುಂಡಿ ಎತ್ತಿ ಕುಡಿದು—
ಹಾಗು ಹೀಗೂ ಗೋಡೆ ನಿಂತಿಹವು ಜೋಲಿ ಹೊಡೆದು ;
ಕುಸಿಯ ತೊಡಗಿದೆ ಕೆಳಗೆ ನೆಲಗಟ್ಟು ; ಮೇಲೆ ಬಿದ್ದಿದೆ ಭಾರ
ನೀಗದಷ್ಟು;
ಎಷ್ಟು ಮಣ್ಣನು ಹಾಕಿ ಮೆತ್ತಿದರು ಪ್ರತಿವರುಷ ಇದರ
ಹಾಡೇ ಇಷ್ಟು ;

ಪ್ರಾಚೀನ—ಅರ್ವಾಚೀನ ನೆಲೆಗಳಲ್ಲಿ ನಿಂತು ಇಂದಿನ ಭಾರತವನ್ನು ವಿಮರ್ಶಿಸುವ 'ಜೀರ್ಣೋದ್ಧಾರ' ಕವಿತೆ, ಇನ್ನೊಂದು ಚಿಂತನಶೀಲ ರಚನೆ. ಪದ್ಯದ ಕೊನೆಯ ಭಾಗ ದಲ್ಲಿ ವ್ಯಕ್ತಗೊಂಡ ಆಶಾಭಾವ, ಕಣವಿಯವರ ಪ್ರಗತಿಪರ ಮನೋಧರ್ಮದ ಅನಿಸಿಕೆ ಯಾಗಿರುವುದು ಮಹತ್ವದ ಅಂಶ.

ನವ್ಯಕಾವ್ಯದಲ್ಲಿ ವ್ಯಂಗ್ಯ-ವಿಡಂಬನೆ ಕವಿಗಳ ಧೋರಣೆಯಾಗಿಯೇ ಕಾಣಿಸಿವೆ. ಬದುಕಿನ ವಿವಿಧ ರಂಗಗಳಲ್ಲಿಯ ವಿಷಮತೆ, ವಿಕಾರಗಳನ್ನು ನಾಟಕೀಯವಾಗಿ ಹೀಗಳೆಯುವ ಒಂದು ಬಗೆಯ ಶೈಲಿಯೇ ರೂಪುಗೊಂಡಿತು. ಹಲವರು ಸ್ವಂತ ವ್ಯಕ್ತಿತ್ವದ ಲೋಪ–ದೋಷ ಗಳನ್ನೇ ವಿಡಂಬನೆಗೆ ಒಳಪಡಿಸಿಕೊಂಡರು. ಆರೋಗ್ಯಕರ ಮನೋಭಾವದ ಕಣವಿಯವರು ಮಾತ್ರ ಆತ್ಮಾವಹೇಳನೆ ಮಾಡಿಕೊಳ್ಳುವ ಗೋಜಿಗೆ ಹೋಗದಿರುವುದು ಗಮನಾರ್ಹ.

ಅವರ 'ಲಾಗ' ಕವನ, ಉಳಿದೆಲ್ಲರ ರಾಜಕೀಯ ವಿಡಂಬನ ಪದ್ಯಗಳಿಗಿಂತ ಭಿನ್ನವಾಗಿ, ಆಕರ್ಷಕವಾಗಿ ಕಾಣಲು ಕಾರಣ : ಕವಿತೆಯ ಕುಶಲ ತಂತ್ರ ಹಾಗೂ ಪ್ರತಿಮಾವಿಧಾನ ದಲ್ಲಿಯ ಸರಳತೆ. ಬೀದಿಯಂಚಿನಲ್ಲಿ ಕೇವಲ ಹೊಟ್ಟೆಪಾಡಿಗಾಗಿ ಗಂಡು–ಹೆಣ್ಣು ಮಂಗ ಗಳೆರಡನ್ನು ಚಮತ್ಕಾರಿಕವಾಗಿ ಆಟವಾಡಿಸುವವನ ಮೂಲಕ ಕವಿ, ನಮ್ಮೆಲ್ಲರ ಇಂದಿನ ರಾಜಕೀಯ-ಸಾಮಾಜಿಕ ನಡವಳಿಕೆಯನ್ನು ಮಾರ್ಮಿಕವಾಗಿ ಟೀಕಿಸುತ್ತಾರೆ. ಪ್ರಜಾ ಪ್ರಭುತ್ವದ ಸೋಗಿನ ರಾಜಕಾರಣ, ಲಂಚಗುಳಿತನ, ಸ್ವಾರ್ಥಪರತೆ, ವ್ಯಕ್ತಿಯ ಅಹಂಭಾವ ಮೂರ್ಖತನ, ಪ್ರಚಾರ ಪ್ರಿಯತೆ— ಈ ಎಲ್ಲ ಅವಗುಣಗಳಿಗೆ ಪಂಚತಂತ್ರಕತೆಗಳಲ್ಲಿಯ ಬೇರೆ ಬೇರೆ ಪ್ರಸಂಗಗಳು ಅನ್ಯೋಕ್ತಿಯಾಗಿ ಬರುತ್ತವೆ. ಅನ್ಯೋಕ್ತಿಯ ಈ ವಿಧಾನ, ಕಣವಿಯವರ ಕಲ್ಪಕತೆಗೆ, ಸ್ವೋಪಜ್ಞತೆಗೆ ಶ್ರೇಷ್ಠ ಉದಾಹರಣೆಯಾಗಿದೆ. ಆದರೆ 'ಜಗದೇಕಮಲ್ಲ' ಎಂಬ ಇನ್ನೊಂದು ವಿಡಂಬನ ಪದ್ಯದಲ್ಲಿ ಇಂತಹ ಪರಿಪಾಕ ಕಾಣಸಿಗುವು ದಿಲ್ಲ.

ವರ್ಣನಪರತೆಯಿಂದ ಚಿಂತನದೆಡೆಗೆ ಕವಿವ್ಯಕ್ತಿತ್ವ ಮಾಗಿರುವದರ ಲಕ್ಷಣಗಳು 'ನೆಲಮುಗಿಲು'(೧೯೬೫) ಪ್ರಕಟವಾದ ನಂತರ ಸ್ಪಷ್ಟ ಕಾಣುತ್ತವೆ.

ಕಣಕಣದ ಗತಿ-ಮತಿಯ ಗುರುತಿಸು. ಆದರೀಗಲೆ
ಅದರ ಇತಿವೃತ್ತವನು ಬರೆಯದಿರು.........
............ಬಯಲ ಬಿಡುಗಡೆ ನುಂಗಿ
ನೀರು ಹಿಡಿಯಲಿ, ವಿಶ್ವವೆಲ್ಲವು ತೆರೆದ ಬಾಗಿಲೆ

ವಯಸ್ಸು ಮಾಗಿದಂತೆಲ್ಲ ಕವಿಯ ಅನುಭವ ಪ್ರಪಂಚ, ಹರವುಗೊಳ್ಳುವ ಬದಲು ಆಳಕ್ಕಿಳಿಯುವುದರ ಸೂಚನೆ ಇಲ್ಲಿದೆ. ನವ್ಯತೆ, ತನ್ನ ಉನ್ನತಿ ಕಾಲದಲ್ಲಿದ್ದುದರಿಂದ ತರುಣ ಕವಿಗಳ ಹೊಸ ಪಡೆಯೇ ಕಾವ್ಯ ಕ್ಷೇತ್ರದಲಿ ಬಹುಮುಖ ಪ್ರಯೋಗದಲ್ಲಿ ತೊಡಗಿತ್ತು. ನೆಲದ ಅನುಭವಗಳೊಂದಿಗೆ ಅವರೆಲ್ಲ ತೀವ್ರ ಸೆಣಸಾಟ ನಡೆಸಿದ ಚಟುವಟಿಕೆಯ ಕಾಲ ಇದು. ಬಾಹ್ಯ ಅನುಭವಗಳ ತೀವ್ರ–ನಿಕಟ ಸಂಪರ್ಕವಿಲ್ಲದ ಕಾರಣಕ್ಕಾಗಿ, ಕಣವಿಯವರು ನೆಲ-ಮುಗಿಲುಗಳ ಆಯ್ಕೆಯ ದ್ವಂದ್ವದಲ್ಲಿ ಉಳಿಯಬೇಕಾಯಿತು. ಆದರಿದನ್ನೊಂದು ತೊಳಲಾಟವೆಂದು ಬಗೆಯದ ಅವರು—

ಗುರುತ್ವಾಕರ್ಷಣ ಕರುಣೆ-ಕೇಂದ್ರ ನೆಲದೊಡಲು
ಬಾನತೀಂದ್ರಿಯ ಸ್ಪರ್ಶ-ತುಂಬಿ ತೇಲಿವೆ ಮುಗಿಲು.

ಎಂಬ ಸಮಾಧಾನ-ತೃಪ್ತಿ ತಾಳುತ್ತಾರೆ. ಈ ಕಾಲದಲ್ಲಿ ರಚನೆಯಾದ ಕೆಲವು ಸಾನೆಟ್‌ಗಳು ಶೈಲೀಕೃತ(ಸಿದ್ಧ) ರಚನೆಯಾಗಿ, ಪ್ರಯೋಗಶೀಲ ಕೃತಿಗಳಾಗಿ ಮಾತ್ರ ಕಾಣಿಸುತ್ತವೆ. 'ಮಾನಸ ಸರೋವರದಿ ಹಂಸ-ಕ್ಷೀರ ನ್ಯಾಯ' ಬಯಸುವ ಕವಿಗೆ 'ಒಡೆದ ಹಾಲನು ಕಡೆದು ನೋಡುವ ಕ್ರಮ' ತಪ್ಪಲೆಂಬ ಆಶೆಯಿದೆ. ಆದ್ದರಿಂದ ಕವಿಗೆ ತನ್ನೊಳಗಿನ ಸಂವೇದನೆಗಷ್ಟೇ ಸ್ಪಂದಿಸುವುದು ಶಕ್ಯವಾಗಿದೆ.

'ಬಿಸ್ಮಿಲ್ಲಾಖಾನರ ಶಹನಾಯಿ ವಾದನ' ಕೇಳಿ, ಸ್ಫೂರ್ತಿಗೊಂಡ ರಸಿಕ ಕಣವಿಯವರು ಆ ಭಾವರಸಪೂರ್ಣ, ಇಂದ್ರಿಯಾಗಮ್ಯ ಅನುಭವವನ್ನು ಶಬ್ದರೂಪದಲ್ಲಿಟ್ಟ ರೀತಿ ಅಪೂರ್ವವಾಗಿದೆ. ವಿಚಾರ-ವಿಮರ್ಶೆಯತ್ತ ದೃಷ್ಟಿ ಹರಿಸಿದ ನವ್ಯಕಾವ್ಯ, ಶುಷ್ಕ, ನೀರಸ ಆಗತೊಡಗಿದ್ದಾಗ, ರಸದ ಬುಗ್ಗೆಯನ್ನು ಪುಟಿಸಿದ ಶ್ರೇಯಸ್ಸು ಇವರದು. ಇಂತಹ ಗುಣಗ್ರಾಹಕ ಮನೋಧರ್ಮ ನವ್ಯ ಪರಂಪರೆಯಲ್ಲಿಯ ಅಪರೂಪ ವಸ್ತು.

ಕೋಟಿ ಮೈಲಂತರದ ನೀಹಾರಿಕೆಯ ನಾಡಿ
ಮಿಡಿತ ತಟ್ಟಿತು ಕಿವಿಗೆ ; ನಾದದ ಕೂದಲೆಳೆಯಲಿ
ಪೃಥ್ವಿ ತೂಗಿರೆ, ಸೂರ್ಯ ಚಂದ್ರರಿಗು ಜೋಕಾಲಿ
ಪಾತಾಳ ಗವಿಗೆ ತೆರೆದವು ನೂರು ಬೆಳಕಿಂಡಿ !

ತೀರ ವೈಯಕ್ತಿಕವಾದೊಂದು ವಿಶೇಷ ಅನುಭವಕ್ಕೆ ಮೂರ್ತರೂಪ ನೀಡುವಲ್ಲಿನ ಕವಿಯ ಯಶಸ್ಸು ಪ್ರಶಂಸಾರ್ಹ.

ಕಣವಿಯವರು ತಮ್ಮ ಕಾವ್ಯಸಾಧನೆಯುದ್ದಕ್ಕೂ ಒಂದಲ್ಲ ಒಂದು ಪ್ರಯೋಗ, ಶೋಧನೆಯಲ್ಲಿ ನಿರತರಾದವರು. ಬದುಕಿಗೆ ಸಂಕುಚಿತ ಅರ್ಥ ಹಚ್ಚಿ ವ್ಯಾಖ್ಯಾನಿಸುವ ಗೋಜಿಗೆ ಹೋಗದೆ, ಚಿಂತನಶೀಲರನ್ನಾಗಿ ತಮ್ಮನ್ನು ಮುಕ್ತವಾಗಿರಿಸಿಕೊಂಡವರು ಅವರು

ನನ್ನ ನಂಬಿಕೆಯೊಂದು ಆಕಾಶ :
ನಿಜ, ಅದಕೆ ತಳಬುಡವಿಲ್ಲ; ನಾನೆಷ್ಟು ಬೆಳೆದರೂ
ನನಗೆ ನಿಲುಕುವುದಿಲ್ಲ ; ದೂರದಿಂದಲ್ಲದೆ ನಾನದನು
ಮುಟ್ಟಿ ಅನುಭವಿಸಿಲ್ಲ' ಮೇಲೆ ನೋಡದೆ ಸೆಟೆದುಕೊಂಡೇ
ನಡೆದರೂ ಅದು ಸದಾ ನನ್ನ ತಲೆಯ ಮೇಲೆ.

ಕಣವಿಯವರಲ್ಲಿಯ ಸಜ್ಜನಿಕೆಯ ಮನೋಭಾವ, ನವ್ಯಕವಿಗಳ ನಿಷ್ಠುರ, ಅತಿ ವಾಸ್ತವವಾದಿ, ಒರಟುತನಗಳಿಂದ ಹೊರತಾಗಿದೆ. ಪ್ರಕೃತಿಯ ಸಹಜಸೌಂದರ್ಯವನ್ನು ಗ್ರಹಿಸಲೊಲ್ಲದ ನವ್ಯಕವಿಯ ಮೊಂಡುತನದ ಬಗ್ಗೆ ಅವರಲ್ಲಿ ಸಿಟ್ಟಿಗಿಂತ ಮರುಕವಿರುವಂತೆ ಕಾಣುತ್ತದೆ :—

ಹೋಗು, ನಮ್ಮಂತೆ ಸದಾ ಅಸ್ವಸ್ಥನಾಗು.
ಬೇನೆಯಿರದಿದ್ದರೂ ನರಳು
(ಅದೆ ವಾಸ್ತವದ ಬಾಳು).

ಈಕವಿಯ ಕಾವ್ಯ ವ್ಯಕ್ತಿತ್ವ, ಆರೋಗ್ಯಕರ ಮಾದರಿಯಲ್ಲಿ, ಕೃತಕತೆಗೆ ವಿಮುಖವಾಗಿ ರೂಪುಗೊಳ್ಳುವಂತಹದೆಂಬುದು ಇದರಿಂದ ವ್ಯಕ್ತವಾಗಿದೆ.

'ಎರಡುದಡ' ಪದ್ಯ, ಕಣವಿಯವರ ಆತ್ಮವಿಮರ್ಶೆಯ ವಿನಯಶೀಲ ಪ್ರಯತ್ನ. ತಮ್ಮ ಕಾವ್ಯಮಾರ್ಗವನ್ನು ಸ್ಪಷ್ಟವಾಗಿ ಖಚಿತಪಡಿಸಿಕೊಂಡ ಆತ್ಮವಿಶ್ವಾಸವನ್ನಿಲ್ಲಿ ಅರ್ಥವತ್ತಾಗಿ ಗುರುತಿಸಿದ್ದಾರೆ :

.........ಹೊಸನೀರು
ಹಳೆನೀರ ಕೊಚ್ಚಿ ಹುಚ್ಚೆದ್ದು ಎರಡೂ ದಡವ ಬಾಚಿ
ಬಗ್ಗಡವಾಗಿ, ತಟಸ್ಥ ತರು–ಮರದ ಬೇರಿಗೂ
ಕೈ ಚಾಚಿ, ಉರುಳಿ ಹೊರಳಾಡಿ ಮೈತುಂಬ ರಾಡಿಯು
ಬಡಿದು, ಈಗೀಗ ಶರತ್ಕಾಲದ ನಿಧಿಧ್ಯಾಸದಲಿ ಮೆಲ್ಲ
ತಿಳಿಗೊಂಡಿಹುದು

ಕವಿತೆಯ ಕೊನೆಯಲ್ಲಿ—

ಎರಡು ದಡಗಳ ನಡುವೆ ಹಾಯಿಬಿಚ್ಚಿವೆ ದೋಣಿ
ಮುಳುಗಿ ಮಿನುಗಾಡುತಿವೆ ಮೀನು; ದೂರ ನೀಲಶ್ರೇಣಿ.

ಒಂದು ಬಗೆಯ ತಾಟಸ್ಥ್ಯ, ಸಂತೃಪ್ತಿ ಕಂಡರೂ, ತಾನಿನ್ನೂ ಮುಂದಿನ ಶೋಧನೆಗೆ ತೊಡಗಬೇಕೆನ್ನುವ ಆಶೆ-ಕೌತುಕವೂ ವ್ಯಕ್ತವಾಗಿದೆ.

'ಯಾರು ಕೇಳುತ್ತಾರೆ ಹೇಳಿರಣ್ಣ?' ಎಂದು ಅಸಹಾಯಕ ಸಂತ ಕವಿಯಂತೆ, ಭ್ರಷ್ಟ ಸಮಾಜಕ್ಕೆ ಸವಾಲೆಸೆಯುವ ಕಣವಿಯವರ ಹೊಸಧಾಟಿ, 'ನಗರದಲ್ಲಿ ನೆರಳು' (೧೯೭೪) ವಿನಲ್ಲಿ ಪರಿಣಾಮಕಾರಿಯಾಗಿ ಕೇಳಿಸುತ್ತದೆ. ವಿಕ್ಷಿಪ್ತ, ಸ್ವಾರ್ಥ, ಬಹುಕೃತ ವೇಷದ ನಡೆ ವಳಿಕೆಯ ಸಮಾಜಪುರುಷನನ್ನು ಕಣವಿಯವರ ಲೇಖನಿ ಸಾಕಷ್ಟು ನಿಷ್ಠುರವಾಗಿಯೇ ಬಯಲಿಗೆಳೆಯುತ್ತದೆ.

ಹೇಳುವವರೇ ಎಲ್ಲ, ಕೇಳುವವರೇ ಇಲ್ಲ
ಹೇಳಿ ಕೇಳೀ ಬಾಳ ಏಕತಾರಿಯ ಪದವ
ಯಾರು ಕೇಳುತ್ತಾರೆ ಹೇಳಿರಣ್ಣ ?

ಸಾತ್ತ್ವಿಕಸಿಟ್ಟು, ಕ್ರಮೇಣ ನೋವಾಗುವಲ್ಲಿ ಭಾವನಿರ್ಭರತೆಯೂ ಕಾಣಿಸಿದೆ.

ಹೊತ್ತು ಹೊರೆವವರಿಲ್ಲ, ಕಿತ್ತು ತಿಂಬುವರೆಲ್ಲ
ಬಿತ್ತಿ ಬೆಳೆದವರಿಗೂ ತುತ್ತು ಭರವಸೆಯಿಲ್ಲ
ಎತ್ತ ಹೊರಳಿದರದೇ ನೋಟವಣ್ಣ.

ಸಾಮಾಜಿಕ ಕಾಳಜಿಯನ್ನು ಹೀಗೆ ಉತ್ತಮ ಕವಿತ್ವವಾಗಿಸುವ ಕೌಶಲ್ಯ, ಪದ್ಯದುದ್ದಕ್ಕೂ ವ್ಯಕ್ತವಾಗಿದೆ. ಕಣವಿಯವರ ಸಾರ್ಥಕ ರಚನೆಗಳಲ್ಲಿ ಈ ಪದ್ಯವೂ ಒಂದು,

೪

ಚನ್ನವೀರ ಕಣವಿಯವರ ನವ್ಯಮಾರ್ಗದ ಸಾಧನೆ-ವೈಫಲ್ಯವನ್ನು ಸೂತ್ರಬದ್ಧ ವಿವರಿಸುವ ಮುನ್ನ ಅವರ ಇತ್ತೀಚಿನ ಬೆಳವಣಿಗೆಯನ್ನೂ ತುಸು ಗಮನಿಸಬೇಕು. ಕಾವ್ಯ ಪರಂಪರೆಯ ಒಂದು ಅವಸ್ಥೆಯಾಗಿರುವ ನವ್ಯತೆ, ಕವಿ ಹೃದಯ, ಚೈತನ್ಯ, ಬೌದ್ಧಿಕತೆಗಳ ಫಲವಾಗಿ ಬರಬೇಕೆಂಬ ತಾತ್ವಿಕ ಧೋರಣೆ–ಕಣವಿಯವರಲ್ಲಿರುವುದು ವ್ಯಕ್ತವಾಗುತ್ತದೆ. ಕಾವ್ಯಕ್ರಿಯೆ ಯಲ್ಲಿ ಪರಂಪರೆಗೆ ಇವರು ಕೊಟ್ಟ ಸ್ಥಾನದಿಂದಾಗಿ, ಕಾವ್ಯದ ಬೆಳವಣಿಗೆಗೆ ಅರ್ಥಮೌಲ್ಯ ಬಂದಿದೆ. 'ಅಭಿವಂದನೆ' ಎಂಬ ಅವರ ಪದ್ಯ, ಕಾವ್ಯ-ಜೀವನ ಸಾಧನೆಯ ಔನ್ನತ್ಯವನ್ನು ತೋರಿಸುವಂತಿದೆ.

ಮಾನಸಗಂಗೋತ್ರಿಯ ಕನ್ನಡ ಸಂಘದ ಸಮಾರಂಭವೊಂದರಲ್ಲಿ (೧೯೭೫) ಕಣವಿಯವರು ವಾಚನ ಮಾಡಿದ ಈ ಪದ್ಯ, ಒಂದು ಸಾಂದರ್ಭಿಕ ರಚನೆಯಾಗಿದ್ದರೂ ನಾಡು–ಭಾಷೆ-ಸಂಸ್ಕೃತಿ–ಸಾಮರಸ್ಯದ ದೃಷ್ಟಿಯಿಂದ ಅದಕ್ಕೆ ಮಹತ್ವವಿದೆ. ಭಾವಗೀತದ ಎಲ್ಲ ಸಲ್ಲಕ್ಷಣಗಳನ್ನು ಹೊಂದಿಯೂ ಈ ಕವನ, ಒಂದು ಬೌದ್ಧಿಕ ಪ್ರತಿಕ್ರಿಯೆಯೂ ಆಗಿ ಸಫಲವಾಗಿದೆ. ಭಾವೈಕ್ಯದ ಸಂದೇಶ ಸಾರುವ ಪದ್ಯ, ನುಡಿಸಂಪತ್ತಿ ಭಾವಸಂಪತ್ತಿ ಹಾಗೂ ಸೌಹಾರ್ದಯುತ ಚಿಂತನ ಸಂಪತ್ತಿನಿಂದ ಮುಪ್ಪುರಿಗೊಂಡಿದೆ.

ಬರೆದುದೇನೊ ನಮಗರಿಯಲೆಂದೆ; ಅರಿತಾಗ ಬೇರೆ ಕೊರತೆ
ಮರೆತ ಮಾತು ನೂರೆಂಟು ಆದರೂ ಬೆರೆತ ಕುದಿಯು ಹೊರತೆ?
ಹಳತು-ಹೊಸತು ಎಳೆದಾಡಿ ಹರಿದು ಹೊಸಬಟ್ಟೆ ಬೇಡುತಿಹವು
ಅಳತೆ ಕೊಟ್ಟು ಹೊಲಿಸಿದರು ತೊಟ್ಟು ಮೈಕಟ್ಟು ಸಡಿಲು ಬಿಗಿಯು

ಇಲ್ಲಿಯ ಒಂದೊಂದು ಉಕ್ತಿಯೂ ಕಣವಿಯ ಜೀವನ ಧ್ಯೇಯದ ಪ್ರತೀಕವಾಗಿವೆ.

ನೂರುದಾರಗಳ ಗೋಜು ವ್ಯಕ್ತ, ಅವ್ಯಕ್ತ ತಳಕು-ಮಳಕು
ಒಳಗಿನೊರತೆ ತಿಳಿದಿಲ್ಲ ಇಲ್ಲ; ಔದಾರ್ಯದೊಂದು-ಹಳಕು
ಮೂಲೆ ಮೂಲ ಚಿಂತನೆಗೇ ಬಯಲು ಆಗೀಗ ಎಷ್ಟೊ ಅಷ್ಟೆ
ಬೆಳೆವ ಬದುಕು ಕಂಡಲ್ಲೆ ಹಿಗ್ಗಿ ಉಳಿದೆಲ್ಲ ಮರೆತುಬಿಟ್ಟೆ.

ಭಾವವಿಲಾಸದ ಕವಿಯಾಗಿ ಹುಟ್ಟಿ, ಮನೋವಿಲಾಸದ ಕವಿಯಾಗಿ ಬೆಳೆದು, ವಿಚಾರ ವಿಕಾಸದ ಕವಿಯಾಗಿ ಶ್ರೀ ಕಣವಿಯವರು ಸಾಧಿಸಿದ ಕಾವ್ಯ ಸಾಧನೆಯ ವಿಶಿಷ್ಟ ಗುಣ-ಲಕ್ಷಣಗಳಿವು :

೧. ನವ್ಯಮಾರ್ಗದ ಬಹುತೇಕ ಕವಿಗಳಂತೆ ಇವರು ಹೋರಾಟದ, ಬಂಡಾಯದ ಧ್ವನಿಯನ್ನು ಮುಖ್ಯವಾಗಿ ಎತ್ತಿದವರಲ್ಲ. ಇವರ ಹೋರಾಟದ ಬಗೆ ಬೇರೆಯದು. ಅದು-ಒಳದನಿಯೊಂದಿಗೆ, ಅಂತರಂಗದ ಶುಚಿತ್ವ, ರುಚಿತ್ವ ಕಾಯ್ದುಕೊಳ್ಳುವುದಕ್ಕಾಗಿ ಮಾಡಿದ್ದು.

೨. ಶಬ್ದದ ತಾಂತ್ರಿಕ ಚಮತ್ಕಾರಕ್ಕೆ, ಬೆಡಗು—ಬಿನ್ನಾಣಕ್ಕೆ ಮಾರುಹೋಗದೆ, ಸಹಜ ಸಿದ್ಧಿಸಿದ ಜನಪದ ನುಡಿಗಟ್ಟು, ಲಯಗಾರಿಕೆ, ಸೂಕ್ತಿ ಮೊದಲಾದವನ್ನು ಅಭಿವ್ಯಕ್ತಿಯ ಶ್ರೀಮಂತಿಕೆಗಾಗಿ, ಸುಲಭ ಸಂವಹನಕ್ಕಾಗಿ ಬಳಸಿಕೊಂಡಿದ್ದಾರೆ. ತಮ್ಮ ಕಾವ್ಯಶೈಲಿಯನ್ನು ಭಾವ-ವಿಚಾರಕ್ಕೆ ಒಗ್ಗಿಸಿ, ಭಾಷೆಯನ್ನು ಕ್ರಿಯಾಶೀಲವಾಗಿ ಉಪಯೋಗಿಸುವಲ್ಲಿ ಶ್ರಮ ಪಟ್ಟಿದ್ದಾರೆ.

೩. ಕಾವ್ಯಶಿಲ್ಪಕ್ಕೆ ಶಿಸ್ತು ಅವಶ್ಯ. ವಾಚಾಳಿತನದಿಂದ ಶಿಥಿಲಗೊಂಡು, ಆಶಯದ ಪರಿಣಾಮಕ್ಕೇ ಧಕ್ಕೆಗೊಂಡು ಕಾವ್ಯ-ಜಡವಾಗುತ್ತಿದ್ದಾಗ ಕಣವಿಯವರು ಕಲ್ಪನೆಗೆ, ಚಿಂತನೆಗೆ ನಿರ್ದಿಷ್ಟ ಚೌಕಟ್ಟು ಕೊಡಲು 'ಸಾನೆಟ್' ರೂಪವನ್ನು ದುಡಿಸಿಕೊಂಡರು.

೪. ಬಿ. ಸಿ. ರಾಮಚಂದ್ರಶರ್ಮ, ಚನ್ನಯ್ಯ–ಮೊದಲಾದ ಸಮಕಾಲೀನ-ಓರಗೆಯ ಕವಿಗಳು ಲಿಬಿಡೋ, ಲೈಂಗಿಕ ಪ್ರಜ್ಞೆಯ ಕಾವ್ಯರಚಿಸಿ, ಅದರಿಂದಲೇ ಕಾವ್ಯಕ್ಕೆ ಸತ್ತ್ವ, ಹೊಸ

ತನಗಳನ್ನು ತುಂಬುತ್ತಿದ್ದಾಗ, ಅಂಥದರಿಂದ ಪ್ರಭಾವಿತರಾಗದೆ ಉಳಿದ ಕಣವಿಯವರು, ಸರಸ-ಸಜ್ಜನಿಕೆಯ, ವಾತ್ಸಲ್ಯಪೂರ್ಣ ಕವಿತೆಗಳನ್ನು ('ರಂಜನಾ', 'ದೀಪಧಾರಿ' ಯಂತಹವು) ಬರೆದು, ಸಂಯಮವನ್ನು ತಂದುಕೊಟ್ಟರು.

೫. ತೆಕ್ಕೆಗೊಗ್ಗದ ಯಾವುದನ್ನೂ ಕಣವಿಯವರು ಕವಿತೆಯಾಗಿಸಿಲ್ಲ. ನವೋದಯದ ದಟ್ಟ ಮಾನಸಿಕ ಸ್ಥಿತಿ ಹೊಂದಿದ್ದರೂ ಅಧ್ಯಾತ್ಮ, ದೈವನಿಯಾಮಕತೆ, ಆತ್ಮ-ಮುಕ್ತಿ ಮೊದಲಾದ ಅಮೂರ್ತ, ಅತೀಂದ್ರಿಯ ವಿಷಯಗಳನ್ನಿವರು ಪ್ರಸ್ತಾಪಿಸಿಲ್ಲ. ಬರುಬರುತ್ತ ಇವರ ಕಾವ್ಯದಲ್ಲಿ ತಾತ್ವಿಕ ಅಂಶ ಪ್ರಸಕ್ತಿಗೊಂಡದ್ದು ಕೂಡ, ಶುದ್ಧ ವೈಚಾರಿಕ ಪ್ರೇರಣೆಯಿಂದ.
೬. ಇಲ್ಲಿಯವರೆಗಿನ ಅವರ ಕಾವ್ಯದಲ್ಲಿ, ಕಣವಿಯವರು ಸ್ವಭಾವ, ಸಾಂದರ್ಭಿಕ ಅನುಭವಗಳ ನೆಲೆಯಿಂದ ಒಳ ಹೊರಗಿನ ಪ್ರಚೋದನೆಗಳಿಗೆ ಸ್ಪಂದಿಸಿರುವುದು ಕಾಣುತ್ತದೆಯೇ ಹೊರತು, ಬದುಕಿನ ಒಟ್ಟು ಹಿನ್ನೆಲೆಯಲ್ಲಿ ತಮ್ಮ ವ್ಯಕ್ತಿತ್ವವನ್ನು ಒಟ್ಟಿಕೊಂಡು, ತಾತ್ವಿಕ ನಿಲುವೆಯನ್ನು ಶೋಧಿಸುವ ಮತ್ತು ನೆಲೆಯೂರುವಂಥ ಕವಿತೆ ಸೃಷ್ಟಿಸಿಲ್ಲ. ಮಣ್ಣಿನ ಮೆರವಣಿಗೆ, ನೆಲ-ಮುಗಿಲಲ್ಲಿನ ಚಿಂತನದ ಹವಣಿಕೆ, ಸಿದ್ಧಿಯ ಹಂತ ತಲುಪಿಲ್ಲ.
೭. ಉದಾರ ನೀತಿ, ಗುಣಗ್ರಾಹಕತೆಯಿಂದಾಗಿ, ಕಾವ್ಯದ ಮೂಲಕ ಸಮಕಾಲೀನ ವ್ಯಕ್ತಿತ್ವಗಳಲ್ಲಿಯ ಹಲವನ್ನು ಇವರು ಕಾವ್ಯಶಿಲ್ಪದಲ್ಲಿ ಕಡೆದಿಡುವ ಐತಿಹಾಸಿಕ ದಾಖಲೆ ನಿರ್ಮಿಸಿದ್ದಾರೆ. ಸ್ವ ನಿರೀಕ್ಷಣೆ, ವಿಮರ್ಶೆಯಲ್ಲಿ ತೊಡಗಿದ ನವ್ಯ ಕವಿಗಳಿಗಾರಿಗೂ ಈ ವಿಶೇಷ ದೃಷ್ಟಿ, ಸೃಷ್ಟಿ ಸಾಧಿಸಿಲ್ಲ.

೮. ಕಣವಿಯವರ ಬುದ್ಧಿ-ಭಾವಗಳಿಗೆ ದಟ್ಟವಾದ ಜನಪದ ಸಂಸ್ಕಾರವಿರುವುದರಿಂದ' ಜನಪದದ ಶ್ರೀಮಂತ ಅನುಭವಲೋಕದ ಜೊತೆಗೆ, ದೇಶಿ ಪದಬಂಧ, ಮಾತಿನ ಧ್ವನಿ-ಕಾಕುಗಳನ್ನು ಹದವರಿತು ಸ್ವೀಕರಿಸಿದ್ದಾರೆ. ಆಡುನುಡಿಯ ಧ್ವನಿಸಾಮರ್ಥ್ಯವನ್ನು ಸಾರ್ಥಕವಾಗಿ ಬಳಸಿ, ಕಾವ್ಯಭಾಷೆಗೆ ನಿಜವಾದ ಹೊಸತನ ಒದಗಿಸಿದ್ದಾರೆ.

ಕೆ. ಬಿ. ಪ್ರಭುಪ್ರಸಾದ

# ಶ್ರೀ ಚೆನ್ನವೀರ ಕಣವಿಯರ 'ಭಾವಜೀವಿ'

ತಮ್ಮ ಪ್ರಥಮ ಕವನಸಂಕಲನ 'ಕಾವ್ಯಾಕ್ಷಿ'ಯಿಂದಲೇ ಕನ್ನಡ ಕಾವ್ಯಪ್ರೇಮಿಗಳ ಗಮನ ಸೆಳೆದು, ಒಳ್ಳೆಯ ಆಸೆ, ಭರವಸೆಗಳನ್ನು ಹುಟ್ಟಿಸಿ ಕಾವ್ಯಕ್ಷೇತ್ರದಲ್ಲಿ ಕಾಲಿರಿಸಿದ ಶ್ರೀ ಚೆನ್ನವೀರ ಕಣವಿಯವರು ಎರಡನೆಯ ಕೃತಿ 'ಭಾವಜೀವಿ' ಎಂಬ ಈ ಖಂಡಕಾವ್ಯದಲ್ಲಿ ಕವಿಯಾಗಿ ವಿಕಾಸಗೊಂಡ ಭಾವಜೀವಿ ಬೆಳೆದು ಬಂದ ಬಗೆಯನ್ನು ನೆನಪುಗಳ ರೂಪದಲ್ಲಿ ಮುಂದಿರಿಸಿದ್ದಾರೆ.

ವಿಕಾಸಶೀಲವಾದ ಚೇತನ ಒಂದು ಕ್ಷಣ ನಿಂತು ತಾನು ಹತ್ತಿ ಬಂದ ಅನುಭವದ ಹಂತಗಳನ್ನು ಸಿಂಹಾವಲೋಕನ ಮಾಡುತ್ತ ತನ್ನ ಅಂತರಂಗವನ್ನು ನಿರುಕಿಸುತ್ತದೆ. ಮುಂದಿನ ವಿಕಾಸಕ್ಕೆ ಸ್ಪಷ್ಟವಾದ ದಾರಿ ಇಂತಹದು ಎಂದು ಕಂಡುಕೊಳ್ಳುತ್ತದೆ. ಈ ಬಗೆಯ ಭಾವಜೀವನದ ವಿಕಾಸವನ್ನು ಆತ್ಮೀಯವಾದ ಶೈಲಿಯಲ್ಲಿ ಚಿತ್ರಿಸುವ ಭಾವಗೀತಾತ್ಮಕವಾದ ಆತ್ಮ ಕಥೆ ಈ ಕಾವ್ಯ. ಇದಕ್ಕೆ ಮುನ್ನುಡಿಯನ್ನು ಅತ್ಯಂತ ಸಂತೋಷದಿಂದ ಬರೆದ ಪ್ರೊ। ವಿ. ಕೃ. ಗೋಕಾಕ್ ಅವರು ಇದನ್ನು 'ಮುದ್ದುಕಾವ್ಯ' ಎಂದು ಕರೆದಿರುವುದು ಸಮುಚಿತವಾಗಿದೆ. ಶ್ರೀ ಚೆನ್ನವೀರ ಕಣವಿಯವರ ಸುಕೋಮಲ ಸ್ವಭಾವಕ್ಕೂ, ಸದೃಢ ವ್ಯಕ್ತಿತ್ವಕ್ಕೂ, ಸೂಕ್ಷ್ಮ ಸಂವೇದನೆ ಹಾಗೂ ಸಮನ್ವಯ ದೃಷ್ಟಿಗೂ ಹಿಡಿದ ಕನ್ನಡಿಯಾದ ಈ ಕಾವ್ಯ, ಇತ್ತೀಚಿನ ಅವರ ಕವನ ಸಂಕಲನಗಳನ್ನು ನೋಡಿದರೆ ಅಂದಿನಿಂದ ಇಂದಿನವರೆಗೆ ಕವಿ ಹೇಗೆ ಬೆಳೆದಿದ್ದಾರೆ ಎಂಬುದು ಸುವ್ಯಕ್ತವಾಗುತ್ತದೆ. ಆಲೋಚನೆಯ ಬಗೆಯಲ್ಲಿ, ವಿಚಾರಗಳಲ್ಲಿ, ಪಕ್ವವಾದ ಪ್ರಜ್ಞೆಯಲ್ಲಿ; ಲೋಕಾನುಭವದಲ್ಲಿ ಮತ್ತು ಕಾವ್ಯಾಭಿವ್ಯಕ್ತಿಯ ಕಲೆಯಲ್ಲಿ ಬೆಳವಣಿಗೆಯಿಂದ ಕಾಣುವ ವ್ಯತ್ಯಾಸಗಳನ್ನು ಗಮನಿಸಬಹುದು. ಆದರೆ ಕವಿಯ ಮೂಲ ಸತ್ವ ಅರೆಬಿರಿಯುತ್ತಿರುವ ಮೊಗ್ಗಿನಂತೆ 'ಭಾವಜೀವಿ'ಯಲ್ಲಿ ಆಗಲೆ ತನ್ನ ನರುಗಂಪಿನಿಂದ ಸಹೃದಯರ ಮನವನ್ನು ಸೆಳೆಯುವಂತಿದೆ.

ಶ್ರೀ ಗೋಕಾಕ್ ಅವರ ವಿಚಾರ ಪೂರಿತವಾದ ಮುನ್ನುಡಿ ಸಹೃದಯತೆಯ ಹರಕೆ ನುಡಿ ಮಾತ್ರವಲ್ಲ, ಈ ಕಾವ್ಯದ ಉತ್ತಮ ವಿಮರ್ಶೆಯೂ ಆಗಿದೆ. ಭಾವಜೀವಿಯದು ಚೆಲುವು. ಒಲವಿನ ಹಾದಿ. ಹೃದಯ ಸಂಸ್ಕಾರ ಆತನ ಗುರಿ. ವಿವೇಕ ಅವನ ಕೈದೀವಿಗೆ ಕಲಾಕೃತಿ ಅವನ ಕೃತಿ. ಅದೇ ಅವನ ಕಲ್ಯಾಣಕ್ಕೂ, ಸಮಾಜದ ಕಲ್ಯಾಣಕ್ಕೂ ಸಾಧಕವಾದ ಶಕ್ತಿ. ಭಾವಜೀವಿ ಆತ್ಮ ಚಿಂತನ, ಆತ್ಮ ಪರೀಕ್ಷಣ್ಯ ಸಾಧನಗಳಿಂದ ತನ್ನ ವ್ಯಕ್ತಿತ್ವದ

ಸ್ವಯಂಶಿಲ್ಪಿಯಾಗುತ್ತಾನೆ—ಮುಂತಾಗಿ ಮುನ್ನುಡಿಕಾರರು ಕೊಡುವ ವಿವರಣೆಯ ಹಿನ್ನೆಲೆ ಈ ಕೃತಿಯ ಚಿಂತನಾಂಶವನ್ನು ಗ್ರಹಿಸಲು ಉಪಯುಕ್ತವಾಗಿದೆ.

ಕಣ್ಣೆದುರು ನಿಂತಂತಾಗುವ ನಿಸರ್ಗದ ಮನೋಹರ, ವರ್ಣಪೂರ್ಣ, ನೋಟವೊಂದರ ವರ್ಣನೆಯಿಂದ ಆರಂಭವಾಗುತ್ತದೆ ಈ ಕಾವ್ಯ. ಈ ಸುಂದರ ಪ್ರಶಾಂತತೆಯ ಏಕಾಂತದಲ್ಲಿ ಕವಿಯ ಮನಸ್ಸು ಅಂತರ್ಮುಖಿಯಾಗುತ್ತದೆ. ನೆನಹಿನ ಗಂಧದರ ಮನೆಯನ್ನು ಹೊಕ್ಕು ಕಳೆದ ದಿನಗಳ ಅನುಭವಗಳನ್ನೆಲ್ಲ ತುಲನೆ ಮಾಡುತ್ತ ಮೊದಲು ತನ್ನ ಭಾವ ವಿಕಾಸವನ್ನು ಗುರುತಿಸುತ್ತದೆ.

ನೆನಹಿನ ಗಂಧದರಮನೆಯನ್ನು ಹೊಕ್ಕ ವ್ಯಾಜದಲ್ಲಿ ಇಡೀ ಗ್ರಾಮದ ಮತ್ತು ಗ್ರಾಮಜೀವನದ ಸುಂದರವಾದ ಸಮಗ್ರಚಿತ್ರ ರೇಖೆರೇಖೆಗಳಾಗಿ, ವರ್ಣರಂಜಿತವಾಗಿ ಮೂಡಿ ನಿಲ್ಲುತ್ತದೆ. ಬರಿಯ ಮೂಕ–ಸ್ತಬ್ಧ–ಚಿತ್ರವಾಗಿ ಅಲ್ಲ. ವಾಸ್ತವತೆಯ ತನ್ನೆಲ್ಲ ಜೀವಂತಿಕೆಯನ್ನೂ ಸೂಸುತ್ತ ಕಂಗೊಳಿಸುತ್ತದೆ. 'ಪ್ರಕೃತಿ ಮಾತೆಯ ಮಡಿಲು', 'ನಿತಾಂತ ಏಕಾಂತ' ಮುಂತಾದವು ಕವಿಯ ಮನೋಧರ್ಮಕ್ಕೆ ಮಾತ್ರ ಗೋಚರವಾಗುವ ಸಂಗತಿಗಳಾಗಿ ಭಾವಗೀತೆಗೆ ಸಹಜವಾದ ವ್ಯಕ್ತಿನಿಷ್ಠ ಅಂಶ ಎದ್ದು ಕಂಡರೂ, ಹಳ್ಳಿಯ ಬದುಕಿನ ವಿಶ್ವಸಾಮಾನ್ಯ ಲಕ್ಷಣಗಳಿಂದಾಗಿ ವಸ್ತುನಿಷ್ಠ ಚಿತ್ರವಾಗಿಯೂ ನಿಲ್ಲುತ್ತದೆ.

ನೆರೆಹೊರೆಯಲ್ಲಿ ಹುಡುಗಾಟ ಮಾಡಿ ಕಾಡಿಸುವ ಕೆಲವು ದೊಡ್ಡವರು; ಮನೆಯೊಳಗೆ ಸಿಡುಕಾಡುವ ತಂದೆ; ಮನೆ ತುಂಬ ಕೆಲಸದಲ್ಲಿ ಓಡಾಡುವ ತಾಯಿ, ಹಿಂದೆ ಹಿಂದೆ ಸುತ್ತುವ ಮಗು; ಪ್ರೀತಿಯ ಅನ್ಯೋನ್ಯತೆಯಿಂದ (?) ಆಟದಲ್ಲಿ ಪೈಪೋಟಿವ ಅಕ್ಕ, ಅಣ್ಣಂದಿರು; ಸದಾ ಎಡಬಲದಲ್ಲಿ ಇರುವ ಚಿಕ್ಕ ಗೆಳೆಯರು; ಯಾರಾದರೊಂದು ಬಿರು ನುಡಿಯಾಡೆ ಕಪೋಲಗಳ ಮೇಲೆ ಕಂಬನಿಯಿಳಿವ ಮಿದುಮನಸಿನ ಮಕ್ಕಳು ಇತ್ಯಾದಿ ಪುಟ್ಟ ಕೌಟುಂಬಿಕ ಆವರಣವನ್ನು ಸೂಚಿಸಿದರೆ, ಹೊರಗಡೆ ಜನರ ಗುಂಪು, ಆಟ ಬಯಲಾಟ, ಕೋಲು ಕುಣಿತ; ಸುಗ್ಗಿಯ ನಾನಾ ಚಟುವಟಿಕೆಗಳು; ಹಳ್ಳಿಯ ಕಿರುಪ್ರಪಂಚವನ್ನೆ ತೆರೆದು ತೋರಿಸುತ್ತವೆ. ಅಲ್ಲಿಯ ರಮ್ಯ ದೃಶ್ಯಗಳನ್ನೂ ಬೀಸುವ ಕಲ್ಲಿನ ಶ್ರುತಿಗೆ ಹೊಂದಿ ಬರುವ ಇಂಪಾದ ಜಾನಪದ ಹಾಡುಗಳನ್ನೂ ಮರೆಯಲು ಸಾಧ್ಯವೇ?

ಕವಿ ನಾಲ್ಕೇ ಸಾಲುಗಳಲ್ಲಿ ಹಳ್ಳಿಯ ಸುಂದರ ಚಿತ್ರವನ್ನು ಪಡಿಮೂಡಿಸುತ್ತಾರೆ:

> ನಮ್ಮೂರ ಗುಡ್ಡದೋರೆಯ ಬದಿಯ ಕಿರುಹಳ್ಳ
> ಸುವಿಶಾಲ ಆಲ, ಎಲೆವಳ್ಳಿ ತೋಟ,
> ಈಶ್ವರನ ಗುಡಿ, ಕಲ್ಲುಕಟ್ಟೆ, ಮಾದರ ಕೇರಿ
> ಕೆಮ್ಮರಡಿ — ಏನೆಲ್ಲ ಎಂಥ ನೋಟ !

ಊರ ಹೊರಗಿನ ತೋಟ, ಬೇಲಿ, ಪಾತರಗಿತ್ತಿಯನ್ನನುಸರಿಸಿ ಅಲೆಯುವ ಹುಡುಗರ ನೋಟ ಒಂದು ಬಗೆ. ದೊಡ್ಡವರ ಕಣ್ತಪ್ಪಿಸಿ ಒಂದು ಜಾಗ ಹುಡುಕಿ ಮೂರು ಹೊತ್ತೂ ಗುಂಡು ಗಜಗ, ಚಿಣ್ಣಿಕೋಲು, ಬುಗುರಿ, ಕಣ್ಣಾಮುಚ್ಚಾಲೆ, ಗೊಂಬೆಮದುವೆ

ಮುಂತಾದ ಆಟಗಳಲ್ಲಿ ನಿರತರಾಗಿರುವ ಹುಡುಗ ಹುಡುಗಿಯರ ನೋಟ ಇನ್ನೊಂದು ಬಗೆ. ಚಿತ್ರವಿಚಿತ್ರವಾದ ಉಡುಗೆ ತೊಡಿಗೆಗಳಿಂದ ಅಲಂಕೃತವಾಗಿ ಗಿಲ್ ಗಿಲ್ ಎಂದು ಸದ್ದು ಮಾಡುತ್ತ ಬರುವ ತಾಂಡೆಯ ಲಂಬಾಣಿ ಹೆಂಗಸರು, ಅವರನ್ನು ನೋಡಿ ಅಣಕ ವಾಡನ್ನು ಕಟ್ಟಿ ಹಾಡಿ, ನಗೆಯಾಡಿ ಕುಣಿವ ತುಂಟರು; ಹೊಂದಲೆದೂಗುವ ಜೋಳದ ಪೈರು, ಹುಲುಸಾದ ಅಕ್ಕಡಿ ಬಳ್ಳಿಗಳು, ಬನ್ನಿಗಿಡದಡಿಯಲ್ಲಿ ಬುತ್ತಿಯುಂಡು ತತ್ರಾಣಿ ತಣ್ಣೀರ ಕುಡಿದು ಸುಖಿಸಿದ ಕ್ಷಣ — ಈ ಚಿತ್ರಗಳ ಮಾಲೆ ಎಂಥ ಸೊಗಸು!

ಕೊಲ್ಹಾರಿ ಚಕ್ಕಡಿ, ಎತ್ತುಗಳ ಕೊರಳ ಗೆಜ್ಜೆಯ ಇಂಪಾದ ನಾದ, ಮೂಕೆಯಲ್ಲಿ ಕುಳಿತ ಆಳು ಬಾನು ಬಯಲು ಕೇಳುವಂತಹ ಕಂಠದಲ್ಲಿ ಹಾಡುವ ಲಾವಣಿ, ಸಂಜೆಯ ಮುಸುಕಿನಲ್ಲಿ ಮನೆಯ ಮುಂದಿನ ಕಿರಿದಾದ ಕಟ್ಟೆಗಳ ಮೇಲೆ ನಡೆವ ಕತೆಯ ಹೋಳಿ — ಎಲ್ಲವೂ ಸೊಗಸು.

ಹಳ್ಳಿಯ ಹಲವು ವ್ಯಕ್ತಿಗಳೂ ಇಲ್ಲಿ ಕಣ್ಣಿಗೆ ಕಟ್ಟುತ್ತಾರೆ. ಕಮ್ಮಾರ ಮಾನಪ್ಪ ಮತ್ತು ಅವನ ಕೆಂಗುಲಿಮೆ; ಕುಂಬಾರ ಮಲ್ಲಣ್ಣ, ಅವನ ತಿಗುರಿ ಮತ್ತು ಗಡಿಗೆ ಮಡಕೆ ಗಳ ಸಾಲು; 'ಮುಟ್ಟಬೇಡಿರಿ ತಂದೆ' ಎಂದು ದೈನ್ಯದಿಂದ ದೂರವೇ ನಿಲ್ಲುವ ಮಾದರ ದುರುಗ (ಹಳ್ಳಿಯ ಮುಗ್ಧ ಮಕ್ಕಳ ಎದೆಯಲ್ಲಿ ಕಸಿವಿಸಿಯಾಗುವುದೊ ಇಲ್ಲವೊ, ಓದುವ ನಮಗಂತೂ ಕರುಳು ಹಿಂಡುವ ಚಿತ್ರ ಇದು); ಮಹಿಷವಾಹನನಾಗಿ ಬರುವ ದನಕಾಯುವ ನಿಂಗ (ದುರುಗನನ್ನು ನೋಡಿ ಉಂಟಾದ ವಿಷಾದವನ್ನು ಮರೆಯಿಸಿ ಲವಲವಿಕೆಯ ಹೊಂಬಿಸಿಲನ್ನು ಚೆಲ್ಲುವ ಚಿತ್ರ ಇದು); ಕೆಲಸಿಗರ (ಕ್ಷೌರಿಕ) ಕೆಂಚ, ಅವನ ಒಡೆದ ಕನ್ನಡಿ, ಮುರಿದ ಮೊಂಡುಗತ್ತಿ; ಆಗಾಗ ಜೋಳಿಗೆಯ ಬಾಯ್ದೆರೆದು ಮಕ್ಕಳನ್ನು ಹೆದರಿಸಿ ನಲಿವ ಸುಡುಗಾಡ ಸಿದ್ಧ; ಇರುಳ ಕತ್ತಲಿನಲ್ಲಿ ಕಂದೀಲು ಬೆಳಕನ್ನು ಹಿಡಿದು 'ಸುವ್ವಿ ಬಾ ಚೆನ್ನ ಯ್ಯಾ. ಸುವ್ವಿ ಬಾ ಲಿಂಗಯ್ಯಾ' ಎಂದು ಹಾಡುತ್ತಾ ಬರುವ ಕಾಲಜ್ಞಾನದ ಅಯ್ಯ — ಇವು ಎಂದೂ ಮರೆಯಲಾಗದ ಕೆಲವು ವ್ಯಕ್ತಿ ಮಾದರಿಗಳು.

ಹಳ್ಳದ ದಂಡೆಗಿರುವ ಮಾಸತಿ ಕಲ್ಲು, ಬಾವಿಕಟ್ಟೆಯ ಬಳಿಯ ವೀರಗಲ್ಲು ಹೊಲದ ಬದುವಿನ ಸಣ್ಣ ಗುಂಡುಕಲ್ಲು, ಅವುಗಳಿಗೆ ಸಲ್ಲುವ ಎಣ್ಣೆ ಸ್ನಾನ, ಪೂಜೆ, ಹಳ್ಳಿ ಗರ ಭಕ್ತಿಭಾವ — ಮೂಢನಂಬಿಕೆ ಎರಡನ್ನೂ ಏಕಕಾಲದಲ್ಲಿ ಸೂಚಿಸುವ ಚಿತ್ರಗಳು. ಇಂತಹ ಪರಿಸರದ ನಡುವೆ ಇರುವ ಒಂದು ಕನ್ನಡ ಶಾಲೆ, ಹಳ್ಳಿಯ ನೈಜ ಚಿತ್ರಣವನ್ನು ಪೂರ್ಣಗೊಳಿಸುತ್ತದೆ.

ಇಲ್ಲಿ ಚಿತ್ರಿಸಿರುವ ಹಳ್ಳಿಯ ಹಲವು ಸಂಗತಿಗಳಲ್ಲಿ ವಸ್ತುತಃ ಅವಾಸ್ತವವಾದುದು ಯಾವುದೂ ಇಲ್ಲ. ಆದರೂ ಇದೆಂತಹ ವಾಸ್ತವ ಚಿತ್ರಣ ಎಂದು ವಾಸ್ತವವಾದಿಗಳು ಮೂಗು ಮುರಿಯಬಹುದು ನಿಜ. ಇಲ್ಲಿ ಬರುವ ಹಳ್ಳಿಯ ಚಿತ್ರ ರಮ್ಯವಾದುದು. ವಾಸ್ತವ ಬದುಕಿನಲ್ಲಿರುವ ಮೈಮುರೇ ದುಡಿತ, ಸರಳ ಜೀವನ, ಸರಳವಾದ ನೋವು-ನಲಿವು, ಸಂತೃಪ್ತಿ, ಮೂಢನಂಬಿಕೆ, ಒರಟು ಹಾಸ್ಯ ಇವೆಲ್ಲ ಇದ್ದರೂ, ಹಳ್ಳಿಗರ ಹರಿದು

ತಿನ್ನುವ ಬಡತನ, ಕಷ್ಟ ಕಾರ್ಪಣ್ಯ; ಸತತವಾಗಿ ನಡೆವ ಶೋಷಣೆ; ಸೊಟ್ಟು ಸೊಟ್ಟಾದ ಮನೆಗಳು, ಅವುಗಳ ಮುಂದಿನ ಓಣಿಗಳು, ಉಬ್ಬು ತಗ್ಗು, ಕೊರಕಲು, ಗುಂಡಿಗಳಿಂದ ತುಂಬಿದ ಬೀದಿಗಳು, ಮನೆಯ ಮುಂದೇ ಇರುವ ದುರ್ಗಂಧ ತುಂಬಿದ ತಿಪ್ಪೆಗಳು, ಚರಂಡಿಗಳು, ಕೊಟ್ಟಿಗೆಯ ಸಗಣಿ–ಗಂಜಲದ ನಾತ, ರಕ್ತ ಹೀರಿ ಪೀಡಿಸುವ ಕ್ರಿಮಿಕೀಟ ಗಳು, ಸಾಲಿಗರು—ಇವೂ ಸಹ ಭಾವಜೀವಿಯ ವ್ಯಕ್ತಿತ್ವದ ಗಿಡ ಬೆಳೆಯಲು ನೆರವಾದ ಗೊಬ್ಬರವೇ ಆಗಿದ್ದರೂ ಇಲ್ಲಿನ ವರ್ಣನೆಯಲ್ಲಿ ಇವೊಂದೂ ಕಾಣುವುದಿಲ್ಲ. ಆದರೆ ಇವು ಕಾಣಬೇಕಾದುದು ಈ ಕಾವ್ಯದ ವಸ್ತುವಿಗೆ ಪ್ರಸ್ತುತವಾದುದಲ್ಲ, ಇಲ್ಲಿ ಬರುವುವು ಕೇವಲ ಭಾವಜೀವಿಯ ನೆನಪಿನ ಮೆಲುಕಿನಲ್ಲಿ ಮೇಲೆದ್ದು ಹೊರಳುವ ಕೆಲವು ಸಂಗತಿಗಳು ಮಾತ್ರ. ಭಾವಜೀವಿಯ ಮನೋಧರ್ಮಕ್ಕೆ, ದೃಷ್ಟಿಗೆ ಅನುಗುಣವಾದ ಚಿತ್ರ ಮಾತ್ರ ಇಲ್ಲಿ ಮೂಡಿದೆ.

ಕಾವ್ಯದ ಆರಂಭದಲ್ಲೇ ಈ ಮನೋಧರ್ಮ ಧ್ವನಿತವಾಗುವ ಪದಗಳು ಸಾಲು ಸಾಲುಗಳಲ್ಲಿ ಎದುರಾಗುತ್ತವೆ :—

ಪ್ರಕೃತಿ ಮಾತೆ, ಮೃದುಲ ತಲ್ಪ, ಹಾಯಾಗಿ ಮೈ ಚಾಚಿರೆ, ಬಾನದೇಗುಲ, ಮೌನ, ತಲೆಬಾಗಿ ಕೈ ಮುಗಿದಿರೆ, ಬಿಡುಗಣ್ಣು, ಹೊಂಬೆಳಕು, ಮನಸಿನೇಕಾಂತ, ಹಗಲು ಗನಸು, ಛಾಯೆ ಇತ್ಯಾದಿ.

ಸಂತೆ ಗದ್ದಲ, ಮಾತು ಮಾತು ದಿನವೆಲ್ಲ ಕೆಲಸಕ್ಕೆ ಬಾರದ ಮಾತು, ಕೀಟಲೆಯ ಕೋಟಲೆ, ಒಡಕು ಬಾಯಿಯ ಸಿಡುಕು, ಕೆಡುಕು ನುಡಿ—ಮಾರ್ನುಡಿ, ತಡಕಾಟ, ಪರ ದಾಟ—ಇವೆಲ್ಲ ಭಾವಜೀವಿಗೆ ಬೇಡದ ವಿಷಯಗಳಾಗಿ ಸೂಚಿತವಾಗಿವೆ. ಈ ಕಾವ್ಯದ ಗುರಿಗೆ ಹೊರಗಾದುದು. ಆದುದರಿಂದ ಅವಶ್ಯವಿಲ್ಲದ ಇವನ್ನು ಕವಿ ಬೆಳೆಸಲು ಹೋಗ ದಿರುವುದು–ವಿಹಿತವಾಗಿದೆ,

ಪೊಂಜೊಡರು ತೂಗಿದೊಲು ನೆಲ ಬಾನ ತಳ್ಕೆಯಲಿ
ನೇಸರನು ಬಿಡುಗಣ್ಣನಾಗುತಿರಲು,

ಎಂಬ ಸಾಲಿನಲ್ಲಿ ಬಿಡುಗಣ್ಣನಾಗುವುದು ಪರ್ಯಾಯವಾಗಿ ನೇಸರ, ಆದರೆ ವಾಸ್ತವ ವಾಗಿ ಪ್ರಕೃತಿಯಾರಾಧಕನಾದ ಭಾವಜೀವಿ. ಅವನ ಕಾವ್ಯಾಕ್ಷಿಗೆ ಎಲ್ಲವೂ ಸುಂದರ. ಎಲ್ಲವೂ ವಿಸ್ಮಯಕರ. ರವಿಯ ಹೊಂಬೆಳಕು ಸಿಂಗರದ ಬಂಗಾರದಂಗಾರ. ಅದು ಸೃಜಿಸುವುದು ಹಗಲುಗನಸಿನ ಸ್ವರ್ಣಮಂದಿರ. ಅದೂ ಮನಸಿನೇಕಾಂತದಲ್ಲಿ. (ಬೇಕಾ ದವರು ಒಪ್ಪಲಿ. ಬೇಡಾದವರು ಬಿಡಲಿ.) ಅದರ ಪ್ರಭಾವದಿಂದ ಹೊರಗಿನ ಬೆಟ್ಟ, ಕಾನು ಸಹ ಒಳಗಿನ ಭವ್ಯ ಕಲ್ಪನೆಯ ಛಾಯೆ ಮಾತ್ರ. ಆ ಭವ್ಯತೆಯ ಮುಂದೆ 'ನೀನು —ನಾನು' ಅಲ್ಪ ಜೀವಿಗಳು!

ಇಂತಹ ಮನೋಧರ್ಮದ ಹಿನ್ನೆಲೆಯಲ್ಲಿ ಮೂಡುವ ಹಳ್ಳಿಯ ಚಿತ್ರ ಭಾವ ಜೀವಿಯ ವಿಕಾಸದಲ್ಲಿ ಒಂದು ಮಧುರ ಸೋಪಾನ ಅಷ್ಟೆ.

'ನಾಗರಿಕ ನಾಗರವು ಹುತ್ತ ಕಟ್ಟದ' ಆ ಹಳ್ಳಿಯಲ್ಲಿ ಕಳೆದ ಬಾಲ್ಯ —

ಬಾಳ ಸಂಪುಟದಲ್ಲಿ ಬಾಲ್ಯವೆಂಬುವುದೊಂದು
ಅಳಿಸಲಾರದ ಮಧುರ ಭಾವಗೀತ !

ಸವಿನೆನಪಾಗಿ ಮತ್ತೆ ಮತ್ತೆ ಮನದಲ್ಲಿ ಸುಳಿಯುತ್ತಿರುತ್ತದೆ. ಆಶ್ಚರ್ಯ ಕುತೂಹಲ, ಮುಗ್ಧತೆ, ಭಾವನಿರ್ಭರತೆ ತುಂಬಿರುವ ಆ ಎಳೆಯ ವಯಸ್ಸಿನಲ್ಲಿ ಕಾಣುವುದೆಲ್ಲ ಹೊಸದು. ಸುಂದರವಾದುದು, ಅದ್ಭುತವಾದುದು,

ಹಂಚು ಹರಳುಗಳಾಗ ಮುತ್ತು ಹವಳ

ಭಾವಜೀವಿಯ ವಿಕಾಸದ ಎರಡನೆಯ ಮೆಟ್ಟಿಲು ಹೊರಗಿನ ವಿಶಾಲ ಪ್ರಪಂಚದ ಪರಿಚಯ, ಶ್ರೇಷ್ಠ ಗ್ರಂಥಾಧ್ಯಯನಗಳಿಂದುಟಾಗುವ ಬುದ್ಧಿವಿಕಾಸ. ಧಾರವಾಡದ ನಾಗರಿಕ ಜೀವನದ ಪರಿಚಯವಾಗುತ್ತದೆ, ಜನ, ಸಮಾಜಗಳಲ್ಲಿನ ದೋಷಗಳು, ಡಾಂಭಿಕತೆ, ಕುಹಕ ಅನ್ಯಾಯಗಳ ಬಗ್ಗೆ ಸಾತ್ವಿಕ ಕೋಪ ಉರಿದೇಳುತ್ತದೆ. ಜಗತ್ತನ್ನು ಸುಧಾರಣೆ ಮಾಡಬೇಕು ಎಂಬ ಕ್ರಾಂತಿಕಾರಕ ಆವೇಶ ಮೂಡುತ್ತದೆ. ಆದರೆ ಈ ಭಾವೋದ್ವೇಗ ತಗ್ಗಿ ಶಾಂತಚಿತ್ತನಾಗಿ ಆಲೋಚಿಸಿದಾಗ —

ಏಸೊ ಈಶರು ದಾಸರಾಗಿ ಕೈಂಕರ್ಯದಲಿ
ಜನದ ಬದುಕನು ತಿದ್ದಿ ಹಸನುಗೊಳಿಸಿ
ಮೌನ ಶರಧಿಯ ತಳದಿ ಮುತ್ತಾಗಿ ಮಲಗಿಹರು
ನಾವು ನೊರೆ ತೆರೆಗಳೊ ಜೊಂಡು ಪಾಚಿ.

ಎಂಬ ತಿಳಿವು ಮೂಡುತ್ತದೆ.

ಇರಲಿ ಲೋಕದ ಡೊಂಕ ತಿದ್ದುವಾಸೆಯು ಬೇಡ
ನನ್ನೊಡಲ ಬ್ರಹ್ಮಾಂಡ ನನ್ನ ಲೋಕ,

ಎಂದು ಅಂತರ್ಮುಖಿಯಾಗುತ್ತಾನೆ.

ಕಾವ್ಯ, ಕಲೆ, ಸಂಸ್ಕೃತಿಯ ಬೆಳವಣಿಗೆಯ ದಾರಿಯಲ್ಲಿ ಭಾವಜೀವಿಯ ಮನಸ್ಸು ಉತ್ಸಾಹದಿಂದ ಮುಂದೋಡುತ್ತದೆ. "ಕನ್ನಡ ಸರಸ್ವತಿಯ ಚೆಲು ರಥೋತ್ಸವ" ಕಂಡು ಅಪೂರ್ವ ರಸ ಸಂಚಾರವಾದಂತಾಗುತ್ತದೆ. ಸಾಹಿತ್ಯದ ರಸಗಂಗೆಯಲ್ಲಿ ಈಸಿ ಬರಬೇಕೆಂಬ ಹಂಬಲದಲ್ಲಿ ಉಳಿದ ನೋವುಗಳೆಲ್ಲ ಮರೆತು ಮಧು ಸುಹಾಸ ಮೂಡುತ್ತದೆ. ಪ್ರಕೃತಿ ಸೌಂದರ್ಯೋಪಾಸನೆಯಲ್ಲಿ ತೊಡಗಿದಾಗ "ವಿಶ್ವಮುನ್ಮೀಲಿಸುವುದಾವ ತೇಜಃಪುಂಜ" ಅದರ ದೇಗುಲ ಈ ಲೋಕ ಎಂಬಭವ್ಯವಾದ ಹೊಸ ಭಾವ ಜಾಗೃತವಾಗುತ್ತದೆ. ತಾರುಣ್ಯದ ಭಾವೋಜ್ವಲತೆಯ ಬುದ್ಧಿ ಪ್ರೌಢವಾಗುತ್ತದೆ, ವಿಚಾರ ಶಕ್ತಿ ಬೆಳೆಯುತ್ತದೆ. ಶ್ರೇಷ್ಠ ಗ್ರಂಥಗಳ ಅಧ್ಯಯನದಿಂದ ಜ್ಞಾನ ವಿಸ್ತಾರವಾಗುತ್ತದೆ. ಹಳೆಯ ಮೂಢನಂಬಿಕೆಗಳನ್ನೆಲ್ಲ ಬುದ್ಧಿಯ ಹರಿತವಾದ ಕತ್ತಿ ಕತ್ತರಿಸಿ ಹಾಕುತ್ತದೆ. ಆದರೂ ಅಂತರಂಗದ ಅಂತರಾಳದಲ್ಲಿ ಆಗಾಗ ತಲೆದೋರುವ ನಿಷ್ಕಾರಣ ವ್ಯಾಕುಲತೆ ಮಾತ್ರ ಅರ್ಥವಾಗದ ಒಗಟಾಗಿ ಉಳಿಯುತ್ತದೆ.

ಬಾಳಿನ ಆಧಾರವೂ, ಸರ್ವಸ್ವವೂ ಆದ ಪವಿತ್ರ ಪ್ರೇಮ ವಿವಿಧ ಮುಖಗಳಲ್ಲಿ ಹರಿದು ಬಂದು ಭಾವಜೀವಿಯ ಹೃದಯವನ್ನು ಸಂಸ್ಕಾರಗೊಳಿಸುತ್ತದೆ, ಪಕ್ವಗೊಳಿಸು ತ್ತದೆ, ಚಿರಸುಧಾಕರೆಯೋರ್ವಳ ಮಧುರ ಪ್ರೇಮವಾಗಿ, ಗೆಳೆಯರ ಒಲವಾಗಿ, ತಂಗಿ ಯೋರ್ವಳ ವಾತ್ಸಲ್ಯವಾಗಿ ಬಂದು ಸ್ಫೂರ್ತಿಯಿತ್ತು ಭಾವಜೀವಿಯನ್ನು ಕವಿಯನ್ನಾಗಿ ರೂಪಿಸುತ್ತದೆ. ಧಾರವಾಡದ ಗಾಳಿ ಕವಿಗಾಳಿ ಸವಿಗಾಳಿಯಾಗಿ ಪರಿಣಮಿಸುತ್ತದೆ.

ಹೀಗೆ ಸದಾ ಮಧುರ ಸ್ವಪ್ನವಿಹಾರಿಯಾಗಿ, ಕಾವ್ಯವಿಹಾರಿಯಾಗಿ ಭಾವಜೀವಿ ಇರಲು ಆಗುವುದಿಲ್ಲ. ಜೀವನದ ವಾಸ್ತವತೆ ಸುಖದ ಹಿಂದೆಯೆ ದುಃಖ ಗುಡುಗಾಡುವು ದನ್ನು ತೋರಿಸಿ ಅಣಕಿಸುವುದು.

ಹಾಡಲೆಳಸುವ ಜೀವ ಓಡಲೆಳಸುವುದು

ಜೀವನದ ಸಂಕಷ್ಟಗಳಿಂದ ತಪ್ಪಿಸಿಕೊಳ್ಳಬೇಕು ಎಂದಲ್ಲ, ಬಾಳಿನ ಗೂಢ ತತ್ವದ ತಿರುಳನ್ನು ಅರಿಯಬೇಕು ಎಂದು. ಬಾಳಿನ ಕಷ್ಟಗಳನ್ನು ನಿರ್ಭೀತನಾಗಿ ಎದುರಿಸು, ನುರಿವೋಗು, ಸ್ಥಿರವಾಗು ಎಂದು ಅಂತರಂಗದ ವಾಣಿ ಧೈರ್ಯ ತುಂಬುತ್ತದೆ. ಒಂದು ಕಡೆ ಕುಹಕ–ಕುಟಿಲತೆಗಳ ಜಗತ್ತು ಇನ್ನೊಂದು ಕಡೆ ಹಿರಿಯ ಆದರ್ಶ; ನೆಲ–ಗಗನ; ಯಾವುದು ಸರಿ ? ಯಾವುದು ತಪ್ಪು ? ಈ ಸೂಕ್ಷ್ಮವನ್ನು ತಿಳಿಸುವವರಾರು ? ವಿಚಾರಗಳ ತುಮುಲ ರಂಗವಾಗುತ್ತದೆ ಮನಸು. ತಲೆ ಚಿಟ್ಟು ಹಿಡಿಯುತ್ತದೆ.

ಹೇಗೆ ಸುತ್ತಿದರೂ ಮತ್ತೆ ಅಂತರಂಗದ ನಿರೀಕ್ಷೆಗೇ ಬಂದು ನಿಲ್ಲುತ್ತಾನೆ ಕವಿ. ಅಂತರಂಗದ ಶುದ್ಧಿಯಲ್ಲಿ ತೊಡಗುತ್ತಾನೆ. ಅಹಂಕಾರವಳಿದು ನಮ್ರತೆ ಮೂಡಲಿ ಎಂದು ಆಶಿಸುತ್ತಾನೆ. ಸಾಧನೆಯಲ್ಲಿ ತೊಡಗುತ್ತಾನೆ. ತನ್ನ ಮತ್ತು ಜಗತ್ತಿನ ಸಂಬಂಧವನ್ನು ವಿಚಾರ ಮಾಡುತ್ತ ವಿಪುಲವಾದ ಸೃಷ್ಟಿಯಲ್ಲಿ, ವಿಶಾಲವಾದ ವಿಶ್ವದಲ್ಲಿ 'ನಾನು' ಎಂಬುದು ಅಣುವಿನ ಅಣುವಾಗಿ ತೋರುತ್ತದೆ. ಈ ಪಾರಮಾರ್ಥಿಕ ಚಿಂತನೆ ಭಕ್ತಿ ಭಾವದ ಉಗ ಮಕ್ಕೆ ಕಾರಣವಾಗುತ್ತದೆ. ಸಾನಂದ ಸುಂದರನಾದ ಶ್ರೀಗುರು ಒಂದಲ್ಲ ಒಂದು ದಿನ ತನ್ನ ಎದೆಯ ಪೀಠಕ್ಕೆ ಬಿಜಯಮಾಡುವನು,

ಭಾವಜೀವಿಯ ವಿಮಲ ಭಾವಾನುಭಾವದಲಿ
ಒಳ ನಿಧಾನದ ಪರಿಯ ತೋರಬಹುದು.

ಎಂಬ ಭರವಸೆ ಉಂಟಾಗುತ್ತದೆ.

ಸುಖ–ಸಮತೆ–ಶಾಂತಿಗಳು ತುಂಬಿರುವ ನೂತನ ಜಗತ್ತಿನ ಉದಯವಾಗಬೇಕು ಎಂಬ ಕವಿಯ ಮಹದಾಸೆ ಅನೇಕ ಸುಂದರ ಕನಸುಗಳ ಚಿತ್ರವನ್ನು ನೇಯುತ್ತದೆ. ಕನಸು ಗಳಾದರೂ ನಂಬಿರುವುದು ಇಂತಹ ಭಾವಜೀವಿಗಳ ಎದೆಯ ಆಶ್ರಯವನ್ನು ತಾನೆ. ಕನಸು ಎಂದು ಉಪಹಾಸಮಾಡುವುದು ಸರಿಯಲ್ಲ. ಮನೆ ಕಟ್ಟುವ ಮೊದಲು ನಕ್ಷೆ ಬರೆ ದಂತೆ ಈ ಕನಸು. ನಾಳೆ ನನಸಾಗಿಯೇ ಆಗುತ್ತದೆ ಎಂಬ ಭರವಸೆಯಲ್ಲಿ ಈ ಕಾವ್ಯ ಮುಕ್ತಾಯವಾಗುತ್ತದೆ.

ಸಾಮಾನ್ಯವಾಗಿ ಕವಿಯ ಎಳೆಯತನದಲ್ಲಿ, ಆರಂಭದ ದೆಸೆಯಲ್ಲಿ ಕಾಣುವಂತಹ ಕೆಲವು ದೋಷ–ದೌರ್ಬಲ್ಯಗಳು ಇಲ್ಲಿಯೂ ಇಣಿಕಿ ಹಾಕಿವೆ. ಇದು ಸಹಜ. ಹಿರಿಯ ಕವಿಗಳ (ವಿಶೇಷವಾಗಿ ಕವಿಯು ಮೆಚ್ಚುಗೆಯ ಕವಿಗಳ) ಪ್ರಭಾವ, ಕೆಲವೆಡೆ ಅನುಕರಣೆ ಸಹ, ಸಹಜವಾದ ದೌರ್ಬಲ್ಯಗಳು. ಇವನ್ನು ದೋಷ ಎನ್ನಲಾಗದು. ಶೈಲಿಯಲ್ಲಿ, ಛಂದೋಕ್ರಮದಲ್ಲಿ ಮಧುರ ಚೆನ್ನರ 'ನನ್ನ ನಲ್ಲ' ಧಾರಾಳವಾಗಿ ಪ್ರಭಾವ ಬೀರಿರುವಂತೆ ತೋರುತ್ತದೆ. ಮಧುರ ಚೆನ್ನ ಭಾವಜೀವಿಯ ಮೆಚ್ಚಿನ ಕವಿ. ಆದುದರಿಂದ ಒಂದೆಡೆ ಅವರ ಅರ್ಧಪದ್ಯವೇ ಉದ್ಧೃತವಾಗಿದೆ. (ಪು. 27 ಮತ್ತು ಪು. 29) ಕಾಳಿದಾಸನ ಮೇಘದೂತದ ಸಂದೇಶ ಶೈಲಿಯ ಪ್ರಭಾವ ಕೂಡ ಸಾಕಷ್ಟಿದೆ. ದತ್ತವಾಣಿಗೆ ಎದೆಯು ಪ್ರತಿಸ್ಪಂದಿಸುವುದನ್ನು ಕವಿ ಹೇಳಿಕೊಂಡಿದ್ದಾರೆ. 'ಚಂದ್ರಕಿರಣಗಳಲ್ಲಿ ಓಲೆ ಬಹವೇ ?' ಎಂಬ ಸಾಲು ರವೀಂದ್ರನಾಥ ಠಾಕೂರರನ್ನೂ, 'ಹಾಡಲೆಳಸುವ ಜೀವ ಓಡಲೆಳಸುವುದಾಗ' ಎಂಬ ಸಾಲು ಅಡಿಗರ 'ಓಡಲೆಳಸುತಿಹುದು ಜೀವ' ಎಂಬ ಮಾತುಗಳನ್ನೂ ಪ್ರತಿಧ್ವನಿಸುವಾಗ ಆ ಪ್ರಾಯದಲ್ಲಿ ಹಿರಿಯ ಕವಿಗಳ ಭಾವನೆಗಳು, ಮಾತುಗಳು, ಕವಿಯ ಕಿವಿಗಳಲ್ಲಿ ಗುಂಯ್‌ಗುಟ್ಟುತ್ತಿರುವುದು ಸ್ಪಷ್ಟವಾಗುತ್ತದೆ. ಆದರೆ ಇವೆಲ್ಲ ಮಾರ್ದನಿಗಳು ಕಾವ್ಯದ ಓಟಕ್ಕಾಗಲಿ, ಸ್ವಂತಿಕೆಗಾಗಲಿ ಕುಂದು ತಾರದೆ ಸಹಜವಾಗಿ ರಮ್ಯವಾಗಿ ಬೆರೆತು ಹೋಗಿವೆ. ಕವಿಯ ಪ್ರತಿಭೆ, ಮತ್ತು ಸ್ವೋಪಜ್ಞತೆ ಇದರಿಂದಲೇ ಸುವ್ಯಕ್ತವಾಗುತ್ತವೆ.

ಬಹುದು-ಗಿಹುದೇನಯ್ಯ ಅಹುದಾದರಹುದೆನ್ನು
ಕಂಡುಂಡ ಮಾತನ್ನೆ ನಿರವಿಸಿರುವೆ.

ಎಂಬ ದಿಟ್ಟವಾದ ಮಾತಿನಲ್ಲಿ ವ್ಯಕ್ತವಾಗುವ ಪ್ರಾಮಾಣಿಕತೆ ಕಥನದ ಉದ್ದಕ್ಕೂ ಕಾಣುತ್ತದೆ. ಭಾವುಕತೆ, ಕಲ್ಪನಾವಿಲಾಸ, ಆದರ್ಶಪ್ರಿಯತೆ (ರಮ್ಯ ಕಾವ್ಯದ ಸಹಜ ಲಕ್ಷಣಗಳು) ಸಮೃದ್ಧವಾಗಿ ಕಾವ್ಯದುದ್ದಕ್ಕೂ ಹರಿಯುತ್ತಿವೆಯಾದರೂ ಎಲ್ಲೂ ಅತಿರೇಕಕ್ಕೆ ಹೋಗದಂತೆ ಮಾಡಿರುವ ಕವಿಯ ಸಂಯಮ ಶ್ಲಾಘನೀಯವಾದದು.

ಛಂದಸ್ಸಿನ ಮೇಲೆ, ಭಾಷೆಯ ಮೇಲೆ ಕವಿಗೆ ಅಸಾಧಾರಣವಾದ ಹಿಡಿತವಿದೆ.

ಮಳೆ ಬಂದು ನಿಂದಾಗ ಬನದೇವಿ ಮಿಂದಾಗ
ತಂಬೆಲರ ತಂದಾಗ ಸವಿಯು ಬೇಕು,

ಎನ್ನುವಾಗ ;

ಹೂ ಬಿಸಿಲು ಹೊಂಬಿಸಿಲು ಚೆಂಬಿಸಿಲು ಚುಂಬಿಸಲು
ಎದೆಯನ್ನೆ ತುಂಬಿಸಲು ಬಿಂಬಿಸುತಿರೆ

ಎಂಬ ಓಟದಲ್ಲಿ ಕಿವಿಗೆ ಹಿತವಾದ ಗೇಯ ಗುಣ, ನಾದ ಸೌಖ್ಯಗಳ ಜೊತೆ ಆ ಇಂದ್ರಿಯಾನುಭವಗಳನ್ನೇ ಪುನರ್‌ಸೃಜಿಸುವ ಶಕ್ತಿ ಈ ಮಾತುಗಳಲ್ಲಿವೆ:

ಆದರೆ ಕೆಲವು ಕಡೆ ಈ ನಾದಪ್ರಿಯತೆ ಅರ್ಥರಹಿತವಾಗಿ ತಲೆದೋರುತ್ತದೆ :

ಮದರಂಗಿಯುಗುರಿನಲಿ ಸಾರಂಗಿ ಬಾರಿಸುತ
ಬೋರಂಗಿ ಚಿತ್ರಾಂಗಿ ಭೋರಿಡುತಿರೆ (ಪು. 17)

ಹಾಗೆಯೇ

' ವಿಫಲ ಚಪಲವದೆಲ್ಲವಾಲ ಜಾಲ ' (ಪು. 23)

ಈ ಪದಗಳ ಬಳಕೆಯ ಹೆಚ್ಚಿನ ಅರ್ಥಸ್ವಾರಸ್ಯವನ್ನಾಗಲಿ, ಔಚಿತ್ಯವನ್ನಾಗಲಿ ಹೇಳು ವುದು ಕಷ್ಟ. ಜೊತೆಗೆ ಲಲಿತವಾಗಿ ಓಡುವ ಸಾಲುಗಳ ಮಧ್ಯೆ ' ಹದುಳಗಾಣದ ಮನವು ' (ಇಲ್ಲಿ ' ಗಾಣ '). ಕೊಳ್ಕುದಿಸುತಿರೆ—(ಪು. 13), ಅಲ್ಲಿ ಭಾವಂದೀವಿ (ವಂ ಎಂಬ ಒತ್ತು) (ಪು. 24) ಇಂತಹ ಶ್ರುತಿ ಕಷ್ಟವಾದ ಪದಬಂಧಗಳು ಎದ್ದು ಕೋಮಲ ಪಾದಗಳಿಗೆ ಒತ್ತುತ್ತವೆ.

ಅದೇ ಸಖ್ಯಯೋಗಿ, ಕಾವ್ಯಪೂರ್ಣೆ ಎಂಬ ಹೊಸ ಪದಗಳು ಅರ್ಥಪೂರ್ಣತೆ ಯಿಂದ ಗಮನ ಸೆಳೆಯುತ್ತವೆ.

ಇದು ಸಂಪೂರ್ಣವಾಗಿ ರಮ್ಯ ಕಾವ್ಯ ಪದ್ಧತಿಯಲ್ಲಿ ರಚಿತವಾದ ಕಾವ್ಯವಾದರೂ, ಆಧುನಿಕ ವೈಚಾರಿಕತೆ, ಆತ್ಮನಿರೀಕ್ಷೆ ಮತ್ತು ವಿಮರ್ಶೆ, ಸಾಮಾಜಿಕ ಪ್ರಜ್ಞೆ, ಅಲ್ಲಲ್ಲಿ ಸುಳಿದು ಹೊಸ ಸಂವೇದನೆಯ ಗಾಳಿ ಬೀಸುತ್ತಿರುವ ಸೂಚನೆಯೂ ಕಾಣುತ್ತದೆ.

ನಂಬುಗೆಗೆ ಇಂಬಿರದ ಮೌಢ್ಯ ಜಾಡ್ಯಗಳನ್ನು
ಜಳ್ಳು ಕಾಳುಗಳಂತೆ

ತೂರುವ ತಾರುಣ್ಯದ ಕೆಚ್ಚು, ವೈಚಾರಿಕತೆ ;

ಉಳ್ಳವರ ನಿರ್ದಯದ ಕಲ್ಲುಗಾಣದ ಹೀನ
ಕೃತ್ಯದಲ್ಲಿ ನಿರಿನಿಟಿಲು ಬಡವರೆದೆಯು ;
ಕ್ಷಾಮ ಡಾಮರ ಭೀಮಗದೆಯನಪ್ಪಳಿಸುತಿರೆ
ನಿತ್ರಾಣವಾಗುತಿದೆ ದಲಿತ ಜನವು.

ಅನ್ನದನ್ಯಾಯದಲಿ ಕರುಳು ಕುದಿದೇಳುತಿರೆ
ಸದೆಬಡಿಯಲುದ್ವೇಗ ಕೆರಳುತಿಹುದು ;
ವಿಧಿನಿಷೇಧದ ಕಟ್ಟುಕಟ್ಟಳೆಯ ಹುಟ್ಟಳಿಸಿ
ಹೊಸ ಸಮಾಜವ ಕಟ್ಟಿ ತೋರಬಹುದು. (ಪು. 12)

ಎಂಬ ಪದ್ಯಗಳಲ್ಲಿ ಕಾಣುವ ನೋವು, ತೀವ್ರ ಕೋಪ, ಆಕ್ರೋಶ, ಕ್ರಾಂತಿಯ ಕಿಡಿ, ' ಹೊಸ ಸಮಾಜ ' ಕಟ್ಟುವ ಉತ್ಕಟವಾದ ಹಂಬಲ, ತವಕ ಹೊಸ ಅಲೆಯ ಮುನ್ಸೂ ಚನೆಯಾಗಿವೆ.

ಈ ಕಾವ್ಯದಲ್ಲಿ ಒಂದು ವೈಶಿಷ್ಟ್ಯವೆಂದರೆ ನೆನಪಿನಲ್ಲಿ ಉಳಿಯಬಲ್ಲ ಸೂತ್ರರೂಪದ ಅನೇಕ ಭಾವೋಕ್ತಿಗಳು, ದ್ವಿಪದಿಗಳು ಹೇರಳವಾಗಿರುವುದು. ಸೌಂದರ್ಯಾಭಿರುಚಿ,

ಸಾಮಾಜಿಕ ಸೌಜನ್ಯ, ವಿಶ್ವಪ್ರೇಮ ಮಾತ್ರವಲ್ಲದೆ ಸುಸಂಸ್ಕೃತ ವ್ಯಕ್ತಿತ್ವದ ಪೂರ್ಣತೆಗೆ ನಯವಾದ ಹಾಸ್ಯರಸಿಕತೆಯೂ ಕೂಡಿರಬೇಕು. ಬಾಲ್ಯದ ನೆನಪುಗಳಲ್ಲಿ—

ನಾವು ಸಾಕಿದ ಬೆಕ್ಕು ತೀರಿಕೊಂಡಿರುವಾಗ
ಭೋರಾಡಿ ಅತ್ತಿರುವುದೆನಗೆ ನೆನಪು

ಎಂಬಲ್ಲಿ, ಮತ್ತು ಒಡೆದ ಕನ್ನಡಿ, ಮುರಿದ ಮೊಂಡುಗತ್ತಿಯ ಕೆಲಸಿಗರ ಕೆಂಚನ 'ಉಪಚಾರ'ಕ್ಕೊಳಗಾದಾಗ—

ಅವನ ಕಟಕಟೆಯಿಂದ ತಲೆಯೊಮ್ಮೆ ಪಾರಾಗೆ
ಮರುಜನ್ಮ ಪಡೆದಂತೆ ಉರಿವ ನೆತ್ತಿ

ಎಂಬಲ್ಲಿ ನವುರಾದ ಹಾಸ್ಯ ಮಿನುಗುತ್ತದೆ.

ಚಮ್ಮಾರನಾದ ಮಾದರ ದುರುಗ ಅಸ್ಪೃಶ್ಯನೆಂದು ದೂರ ಸರಿದಾಗ ಮನದಲ್ಲಿ ಕಸಿವಿಸಿಯಾಗುವುದು; ಮೂರ್ತಿ ಪೂಜೆಯ ಬಗ್ಗೆ ಅನಾದರವಿತ್ತು ಎನ್ನುವುದು ಹಳ್ಳಿಯಲ್ಲಿ ಬೆಳೆದ ಮುಗ್ಧ ಬಾಲಕನ ಸಹಜ ಭಾವನೆಗಳಾಗಿ ತೋರುವುದಿಲ್ಲ. ಕವಿ ತನ್ನ ಪ್ರೌಢ ಮನಸ್ಸಿನ ಭಾವನೆಗಳನ್ನು ತನ್ನ ಎಳೆಯ ವಯಸ್ಸಿನಲ್ಲಿ ಮೂಡಿದ ಭಾವನೆಗಳೆಂದು ಭ್ರಮಿಸಿದ್ದಾನೆ.

ಭಾವದಲ್ಲಿ ಸೂಕ್ಷ್ಮತೆ, ವಿಚಾರದಲ್ಲಿ ಸರಳತೆ ಮತ್ತು ಸದ್ಭಾವನೆ, ಮಾತಿನಲ್ಲಿ ನಯ, ಹೃದಯದಲ್ಲಿ ಉನ್ನತವಾದ ಆದರ್ಶ ಇರುವ ಸುಸಂಸ್ಕೃತ ಮನೋಧರ್ಮ ಈ ಕಾವ್ಯದುದ್ದಕ್ಕೂ ಕಾಣುತ್ತದೆ. ಸುಂದರವಾದ ವರ್ಣರಂಜನೆ, ಲಲಿತ ಪದಬಂಧದಿಂದ ಕೂಡಿದ ನಾದ ವಿಲಾಸ, ಈ ಕೃತಿಯ ರೂಪಾಂಶದ ವಿಶೇಷ ಗುಣಗಳು. ವರ್ಣಪೂರ್ಣವಾದ ನಿಸರ್ಗದ ನೋಟವೊಂದನ್ನು ಚಿತ್ರಿಸುತ್ತ, ಆಗಸದಲ್ಲಿ ಹಾರಿ ಹೋಗುವ ಗಿಳಿವಿಂಡು "ಮುಗಿಲಲ್ಲಿ ತೇಲುತಿಹ ಬಳ್ಳಿಯಂತೆ" ಕಾಣುತ್ತದೆ ಎನ್ನುವಲ್ಲಿ ಎಂತಹ ಸುಂದರ ಕಲ್ಪನೆ! ಎಂತಹ ಉಚಿತವಾದ ಉಪಮೆ! ಧಾರವಾಡದ ನಿಸರ್ಗ ರಮಣೀಯತೆಯನ್ನು ಬಣ್ಣಿಸುವಾಗ "ನೆಲದಾಯ ಕಾರುಣ್ಯ ಹಸಿರು ಸಾಮ್ರಾಜ್ಯದಲಿ ಕುಸುಮಿಸಿಹುದು." ಎಂಬ ಮಾತು ಸೃಜಿಸುವ ಸುಂದರ ಭಾವನೆಯೂ ಅಂತಹದೇ.

ನಿರ್ಮಲವಾದ ಕಾವ್ಯೋಲ್ಲಾಸವನ್ನು ಕೊಡುವುದರ ಜೊತೆಗೆ ಉನ್ನತವಾದ ಪರಿಭಾವನೆಗೂ ಒಯ್ಯುವ ಈ ಕಾವ್ಯ ಕನ್ನಡದಲ್ಲಿ ಒಂದು ಶ್ರೇಷ್ಠವಾದ ಆತ್ಮ ಕಥನಕಾವ್ಯ.

ಗುಂಡ್ಮಿ, ಚಂದ್ರಶೇಖರ ಐತಾಳ

# 'ಭಾವಜೀವಿ'

೧

ಧಾರವಾಡದ ಸಾಹಿತ್ಯಸ್ನೇಹಿತರಲ್ಲಿ ವ್ಯಕ್ತಿತ್ವದ ಸರಸಸಜ್ಜನಿಕೆಯಿಂದಲೂ, ವಿದ್ಯಾವಿನಯ ಸಂಪನ್ನತೆಯಿಂದಲೂ ಆಕರ್ಷಕರಾಗಿರುವವರು ಶ್ರೀ ಚೆನ್ನವೀರ ಕಣವಿಯವರಂತೆ ಬಹಳ ಮಂದಿ ಇಲ್ಲ. ಅವರು ತಮ್ಮ ಹೆಸರಿನಂತೆ ಚೆನ್ನ ; ಅವರ ಕವಿತೆ ಅದಕ್ಕಿಂತ ಭಿನ್ನವಲ್ಲ. ಹಲವರಲ್ಲಿ ಕವಿತೆ ಒಂದು ತೆರನದು ; ಅವರ ವ್ಯಕ್ತಿತ್ವ ಇನ್ನೊಂದೇ ತೆರನದು. ಶ್ರೀ ಕಣವಿಯವರಲ್ಲಿ ಅವರ ಅಂತರಂಗ ಬಹಿರಂಗಗಳು ಬೇರೆ ಬೇರೆಯಾಗಿಲ್ಲ ; ಎರಡೂ ಸಹಜ, ಸರಳ, ಸುಂದರ.

೨

ಶ್ರೀ ಕಣವಿಯವರ ಕವಿತೆಗಳಲ್ಲಿ ನನಗೆ ಇಂದಿಗೂ ಅವರ 'ಭಾವಜೀವಿ' ತುಂಬ ಮೆಚ್ಚಾಯಿತು. 'ಭಾವಜೀವಿ' ಎಂಬ ಅವರ ನೀಳ್ಗವಿತೆ ಅವರ ವ್ಯಕ್ತಿತ್ವದಿಂದ ಭಿನ್ನವಾಗಿಲ್ಲ ಎಂಬುದು ಮೊದಲನೆಯ ಕಾರಣ. ಅದು ಎಲ್ಲ ಭಾವಜೀವಿಗಳ ಹಾಡುಪಾಡನ್ನು ಹೇಳುವುದು ಎಂಬುದು ಎರಡನೆಯ ಕಾರಣ. ಕಾವ್ಯಕ್ಕೆ, ಕಲೆಗೆ ಬೆಲೆಕಟ್ಟುವುದು ಅದರ ಶಾಶ್ವತ ಮೌಲ್ಯದಮೇಲೆ ಎಂಬುದು ನಿಜವಾದರೆ 'ಭಾವಜೀವಿ' ಸಮಕಾಲೀನತೆಯ ಕ್ಷಣಿಕತೆಯಿಂದ ಪಾರಾಗಿ ಸಾರ್ವಕಾಲೀನತೆಯ ಪರೀಕ್ಷೆಯಲ್ಲಿ ಉತ್ತೀರ್ಣವಾಗುತ್ತದೆ. 'ಅಭಾವಜೀವಿ'ಗಳು ಎಲ್ಲೆಲ್ಲೂ ವಿಜೃಂಭಿಸುತ್ತಿರಲು, ವಿಡಂಬಿಸುತ್ತಿರಲು ಇಂಥ 'ಭಾವಜೀವಿ' ತನ್ನದೇ ಆದ ವೈಶಿಷ್ಟ್ಯದಿಂದ ಆಕರ್ಷಕವೆನಿಸುತ್ತದೆ.

'ಭಾವಜೀವಿ' ೫೮೦ ಪಂಕ್ತಿಗಳ ನೀಳ್ಗವಿತೆ. ಅಂದರೆ ನಾಲ್ಕು ಚರಣಗಳ ೧೪೫ ಪದ್ಯಬಂಧಗಳು. ಇದನ್ನು ಪ್ರಕಾಶಕರು 'ಖಂಡಕಾವ್ಯ' ಎಂದು ಕರೆದಿರುವುದು ಸರಿಯಲ್ಲ. ಶ್ರೀ ವಿ. ಕೃ. ಗೋಕಾಕರು 'ಮುನ್ನುಡಿ' ಯಲ್ಲಿ ಇದನ್ನು 'ನೀಳ್ಗವಿತೆ' ಎಂದು ಕರೆದಿರುವುದು ಸಮುಚಿತವಾಗಿದೆ. ಖಂಡಕಾವ್ಯಬೇರೆ, ನೀಳ್ಗವಿತೆ ಬೇರೆ; ಕಾವ್ಯ ಬೇರೆ; ಕವಿತೆ ಬೇರೆ. ಗೊಲ್ಗೊಥಾ, ವೈಶಾಖಿಗಳು ಖಂಡಕಾವ್ಯಗಳು; ಮಾದ್ರಿಯ ಚಿತೆ ಖಂಡ ಕಾವ್ಯ; ಸಖೀಗೀತ, ನನ್ನನಲ್ಲ, ಮಧುರಗೀತ, ಆಕಾಶಗಂಗೆ–ಇವು ನೀಳ್ಗವಿತೆಗಳು. ನೀಳ್ಗವಿತೆಯಲ್ಲಿ ಭಾವಗೀತದ ಅಂಶ ಹೆಚ್ಚು. ಖಂಡಕಾವ್ಯ ಬೆಳೆದರೆ ಮಹಾಕಾವ್ಯವಾಗುವ ಸಾಧ್ಯತೆ ಹೆಚ್ಚು. ಇದರಿಂದ ಒಂದು ಅಧಿಕ ಇನ್ನೊಂದು ಕನಿಷ್ಠ ಎಂಬ ಅರ್ಥವಲ್ಲ. ಎರಡರ ವ್ಯಾಪ್ತಿ–ಪರಿಮಿತಿಗಳು ಬೇರೆ ಬೇರೆ ಎಂಬುದಷ್ಟೇ ನಮ್ಮ ಇಂಗಿತ.

ಶ್ರೀ ಚೆನ್ನವೀರ ಕಣವಿಯವರ 'ಭಾವಜೀವಿ' ಅವರ ಕಾವ್ಯಾನುಭವ ಮಂಟಪದಲ್ಲಿ ಮೂಡಿದ 'ಮುದ್ದುಮಗು'. ಇಲ್ಲಿ ಬಂದ ಅನುಭಾವದ ಅನುಭವ ಸಹಜವಾದುದು. ಕವಿಯ ಎಳೆಯ ಪ್ರಾಯದಲ್ಲಿಯೇ ಈ ಅನುಭಾವವನ್ನು ಕಂಡು ನಾವು ವಿಸ್ಮಿತಚಿತ್ತರಾಗುತ್ತೇವೆ. ಇದು ಯೌವನದಲ್ಲಿಯೇ ಮೂಡಿದ ಮಾಡಿದ, ಕೃತಕ ಶ್ವೇತಕಚೋದಯವಲ್ಲ. ಎಳೆಯಂದರಲ್ಲಿಯೇ ಮೊಳೆತ ಅನುಭಾವದ ಅಂಕುರ. ಈ ಅನುಭಾವದ ಅಂಕುರವೇಕೋ ಏನೋ ಮುಂದೆ ಶ್ರೀ ಕಣವಿಯವರಲ್ಲಿ ಬೆಳೆಯಲಿಲ್ಲವೆಂಬುದು ಕನ್ನಡ ಕಾವ್ಯಕ್ಕೆ ಆದ ದೊಡ್ಡ ನಷ್ಟ. 'ಅನುಭಾವವೆಂಬುದು ಅಂತರಂಗದ ರತ್ನ ಕಾಣಿರೋ' ಎಂಬ ಬಸವಣ್ಣನವರ ವಚನದಿಂದ ಕಣವಿಯವರು ಅನುಭಾವದ ಅಮೌಲ್ಯತೆಯನ್ನು ಕಂಡುಕೊಂಡಿದ್ದಾರೆ. 'ಭಾವಜೀವಿ' ಎಂಬ ಕವಿತೆ ಆರಂಭವಾಗುವುದು ಅನುಭಾವದ ಅನುಭವದಿಂದ :

ಪಡುವಣದ ಬಾನದೇಗುಲದೆದುರು ಕಿರುಮೋಡ
ಮೌನದಲ ತಲೆಬಾಗಿ ಕೈಮುಗಿದಿರೆ, -
ಪೊಂಜೊಡರು ತೂಗಿದೊಲು ನೆಲಬಾನ ತಳ್ಕೆಯಲಿ
ನೇಸರನು ಬಿಡುಗಣ್ಣನಾಗುತಿರಲು, (ಪಂಕ್ತಿ : ೩-೬).

ಕವಿ ಯುವಕನಾಗಿದ್ದರೂ ಯೌವನದ ಸಂಕೇತಗಳೋ ರೂಪಕಗಳೋ ಹೋಲಿಕೆಗಳೋ ಕವಿಯ ಪ್ರಜ್ಞೆಯಲ್ಲಿ ಮೂಡದೆ ಬಾನನ್ನು ದೇಗುಲವಾಗಿ ಕಂಡಿರುವುದೂ, ಅಲ್ಲಿ ಕಿರುಮೋಡ ಭಕ್ತನಾಗಿ ಕೈಮುಗಿಯುವಂತೆ ಕಂಡಿರುವುದೂ ಪಡುವಣದ ನೇಸರನನ್ನು ಆ ದೇವಾಲಯದಲ್ಲಿ ಇಳಿಬಿಟ್ಟ ತೂಗುದೀಪವನ್ನಾಗಿ ಕಂಡಿರುವುದೂ ಕವಿಯ ಸಹಜ ಅನುಭಾವಪ್ರಜ್ಞೆಗೆ ಸಾಕ್ಷಿ. ಹೀಗೆ 'ಭಾವಜೀವಿ' ಯ ಆರಂಭವೇ ಅನುಭಾವದ ನಾಂದಿಯನ್ನು ಹಾಡುತ್ತದೆ ; ಸಾಮಾನ್ಯರು ಕಾಣದ ಅನುಭವವನ್ನು ನೋಡುತ್ತದೆ ; ಸೌಂದರ್ಯದ ಕಡಲಿಗೆ ಕಾಲುವೆಯನ್ನು ತೋಡುತ್ತದೆ !

ಭಾವಜೀವಿಯ ವೈಶಿಷ್ಟ್ಯವನ್ನು ಹೇಳುತ್ತ ಇದಕ್ಕೆ ಮುನ್ನುಡಿ ಬರೆದ ಶ್ರೀ ವಿ. ಕೃ. ಗೋಕಾಕರು ಹೀಗೆ ಹೇಳಿದ್ದಾರೆ : "ಭಾವಜೀವಿಯದು ಸೌಂದರ್ಯ-ಪ್ರೇಮಗಳ ಹಾದಿ. ಹೃದಯಕ್ಷೇತ್ರದ ನೇಗಿಲಯೋಗಿಯವನು. ಆತ್ಮಕೃಷೀವಲನಾಗಲು ಅವನು ಹವಣಿಸುತ್ತಾನೆ. ವಿವೇಕವೇ ಅವನ ಕೈದೀವಿಗೆಯಾಗುತ್ತದೆ. ಅದರ ಸಹಾಯದಿಂದ ಹೃದಯ ಸಂಸ್ಕಾರ ಹಾಗು ಭಾವಜೀವನವನ್ನು ಅವನು ಪವಿತ್ರವಾಗಿಯೂ ಸುಂದರತರವಾಗಿಯೂ ಮಾಡುತ್ತಾನೆ. ಕಲಾಕೃತಿಯೇ ಅವನ ಕೃತಿ........ಭಾವಜೀವಿಯ ದರ್ಶನವು ಮೇಲೆ ಹೇಳಿದಂತೆ ಆಳವನ್ನಲ್ಲದೆ ವಿಸ್ತಾರವನ್ನೂ ಪಡೆಯುತ್ತದೆ. ವಿಶ್ವಹೃದಯದ ಸೂಕ್ಷ್ಮ ಚಲನವಲನಗಳ ಪ್ರತಿಬಿಂಬವಾಗುತ್ತದೆ. ...... ...ಭಾವಜೀವಿಯು ಎಡವುತ್ತ ಮುಗ್ಗುತ್ತ ನಡೆದ ಮಾನವಕುಲಕ್ಕೆ ಹೇಳುತ್ತಾನೆ. ಸ್ವಂತದ ಸಮಸ್ಯೆಗಳನ್ನೆಲ್ಲ ಬದಿಗೊತ್ತಿ 'ಅರ್ಪಣ' ಭಾವದ ಉತ್ಕಟತೆಯ ಮೂಲಕ ಭಾವಜೀವಿಯು ವಿಶ್ವಹೃದಯದ ದರ್ಪಣವಾಗುತ್ತಾನೆ. ಅದರ ಆಸೆ-ಆಕಾಂಕ್ಷೆಗಳನ್ನೂ ಕನಸು-ನೆನಸುಗಳನ್ನೂ ಗುಣದೋಷಗಳನ್ನೂ ಅದ್ಭುತವಾಗಿ ಬಿಂಬಿಸಿ ತೋರಿಸುತ್ತಾನೆ. ವ್ಯಕ್ತಿತ್ವವು ತನ್ನ ಸೀಮೆಗಳನ್ನು ಮೀರಿ ಇಲ್ಲಿ ವಿಶ್ವದ ಕನ್ನಡಿ

ಯಾಗುತ್ತದೆ." ಅದರಿಂದಲೇ ಭಾವಜೀವಿ ವಿಶ್ವಮಾನವನಾಗುತ್ತಾನೆ. "ಈ ವ್ಯಕ್ತಿತ್ವಕ್ಕೆ ಆಳಬಿತ್ತರಗಳಲ್ಲದೆ ಎತ್ತರವೂ ಉಂಟು......ಇಂತಹ ವ್ಯಕ್ತಿತ್ವವು ಒಂದು ಬಿಂದು ವಾದರೂ ಆ ಬಿಂದುವು ವಿಶ್ವಶಕ್ತಿಗಳ ಕೇಂದ್ರವಾಗಿರುತ್ತದೆ."

ಈ ಕೃತಿಯನ್ನು ಕಣವಿಯವರು ಹಲಸಂಗಿಯ ಕಾವ್ಯರ್ಷಿ ಮಧುರಚೆನ್ನರಿಗೆ ಸರಿಯಾಗಿಯೇ ಅರ್ಪಿಸಿದ್ದಾರೆ. ಅವರು ಮಧುರಚೆನ್ನರಾದರೆ ಇವರು ಚೆನ್ನವೀರರು. ಹೆಸರಿನಲ್ಲಿ ಮಾತ್ರವಲ್ಲ ; ಉಸಿರಿನಲ್ಲಿಯೂ ಸಾದೃಶ್ಯವುಂಟು. ಇಬ್ಬರೂ ಅನುಭಾವದ ಬಾಂದಳದಲ್ಲಿ ರಸಯಾತ್ರೆಯನ್ನು ಕೈಕೊಂಡವರು.

ಅನುಭಾವದ ಅನುಭವವನ್ನುಂಡು ಕವಿ 'ಎನಿತಲ್ಪ ಜೀವಿಗಳೋ ನೀನು-ನಾನು!' ಎಂದು ವಿಷಾದಿಸುತ್ತಾನೆ. ಪ್ರಕೃತಿಯ ಸೌಂದರ್ಯದ ಆರಾಧನೆಯ ಮೂಲಕ ಅನುಭಾವಿ ಪರಮಾತ್ಮನ ಆರಾಧನೆಯನ್ನು ಮಾಡುತ್ತಾನೆ. ಗಿಳಿವಿಂಡು. ಬೆಳ್ಳಕ್ಕಿ ಮೊದಲಾದ ಪ್ರಕೃತಿಯ ಪ್ರಜೆಗಳೆಲ್ಲ ಅವನಿಗೆ ಆ ದೇವದೇವನ ಲೋಕದ ಚೈತನ್ಯವಾಗಿ ಕಾಣಿಸುತ್ತದೆ.

ತನಿವಣ್ಣು ತಿರಿದುಂಡು ಗಿಳಿವಿಂಡು ಹಾರುತಿದೆ
ಮುಗಿಲಲ್ಲಿ ತೇಲುತಿಹ ಬಳ್ಳಿಯಂತೆ,
ಬೆಳ್ಳಕ್ಕಿ ಬಳಿವಿಡಿದು ಓರಣದಿ ಸಾಗಿಹವು
ಮಾರುಗೈಯಲಿ ಮುಗಿಲನಳೆಯುವಂತೆ !

(ಪಂಕ್ತಿ : ೧೩-೧೬)

ಈ ಅನುಭಾವವನ್ನು ಅನುಭವಿಸಲು ಲೋಕಾಂತ ಕೂಡದು ; ಏಕಾಂತ ಬೇಡುವುದು. ನಿತ್ಯನಿತ್ಯವೂ ಈ ಏಕಾಂತಕ್ಕಾಗಿ ಭಾವಜೀವಿ ಹಂಬಲಿಸುತ್ತಾನೆ ; ತನ್ನನ್ನು ತಾನೇ ಕಾಣಬೇಕೆಂದು ಹಾತೊರೆಯುತ್ತಾನೆ :

ಯುಗಯುಗಾಂತಗಳನ್ನೆ ಈ ಬಗೆಯ ಏಕಾಂತ
ದೆಡೆಯಲ್ಲಿ ಮನವಾರೆ ಕಳೆಯಬಹುದು.

(ಪಂಕ್ತಿ : ೩೧-೩೨.)

ನನ್ನ ನಾನೇ ಅಳೆದು ಕಳೆದು ನೋಡಲು ಬೇಕು
ಎಂದು ಪೀಡಿಸದಿರುವ ದಿನವದಿಲ್ಲ.

(ಪಂಕ್ತಿ ೩೯-೪೦)

ಈ ಅನುಭಾವದ ವಿಶ್ವವನ್ನು ಇಣುಕುವುದಕ್ಕೆ ಪ್ರಕೃತಿ ಮಾತೆಯ ಮಡಿಲು ಮೊದಲು ಮೆಟ್ಟಿಲಾಗುತ್ತದೆ. ಅಂತರಂಗದ ನಿಸ್ತರಂಗದ ತಿಳಿಗೊಳ ಅದರ ತೊಟ್ಟಿಲಾಗುತ್ತದೆ. ಅಲ್ಲಿ ಅನುಭವಿಸಿದುದು ಅಮೃತಬಿಂದುವಾಗುತ್ತದೆ ; ಅಲ್ಲಿ ಉಂಡುದು ಮಹಾಕಂದವಾಗುತ್ತದೆ ; ಅಲ್ಲಿ ಕಂಡುದು ಆನಂದದ ಸೌಂದರ್ಯದ ಸಿಂಧುವಾಗತ್ತದೆ. ಇದನ್ನು ಕವಿ ಮರೆಯಲಾರದ ಮಾತುಗಳಲ್ಲಿ ಮೂಡಿಸಿದ್ದಾರೆ :

ಅದಕಾಗಿ ಪ್ರಕೃತಿಮಾತೆಯ ಮಡಿಲಿನಾಸರೆಗೆ
ಆಸತ್ತು ಬೇಸತ್ತು ಬಂದೆನಿಂದು ;

ಶಾಂತಿ ಬಯಸಿ ನಿತಾಂತ ಏಕಾಂತಕೇ ನೋಂತ
ಮನಕೆಂದು ದೊರಕೀತು ಅಮೃತ ಬಿಂದು ?
ಅಂತರಂಗದ ನಿಸ್ತರಂಗ ತಿಳಿಗೊಳದಲ್ಲಿ
ಲಲಿತಾರವಿಂದಗಳ ಮಕರಂದವು.

ಅಂತು ನೆನಹಿನ ಗಂಧದರಮನೆಯ ಹೊಕ್ಕಂದು
ಅಲ್ಲೇನು ? ಸ್ಮೃತಿಫಲದ ಮಾಕಂದವು !

ನಾಗರಿಕ ನಾಗರವು ಹುತ್ತು ಕಟ್ಟದ ಹಳ್ಳಿ
ಯಲ್ಲಿ ಬಳೆದಿಹ ಪರಿಯದಾವ ಸೊಗಸು !

(ಪಂಕ್ತಿ : ೪೧–೫೦)

ಮುಂದೆ ಭಾವಜೀವಿ ಹೇಗೆ ಬಳೆದು ಬಂದು ಅನುಭಾವದ ಅರವಿಂದದ ಮಕರಂದವಾದನೆಂಬ ಹಿನ್ನೆಲೆಯನ್ನು ಬಣ್ಣಿಸಿದ್ದಾರೆ ಕವಿ. ಬಾಲ್ಯದ ಹುಡುಗಾಟ, ಗೆಳೆಯರ ಹುಡುಕಾಟ, ಆಟ-ಕಾಟಗಳ ಗೊಂದಲದಿಂದ ಭಾವಜೀವಿ ತಪ್ಪಿಸಿಕೊಳ್ಳಲು ಯತ್ನಿಸುತ್ತಾನೆ. ಆಗ ಅವನು ಅನುಭಾವದ ಇನ್ನೊಂದು ಸೋಪಾನವನ್ನು ತಲುಪುತ್ತಾನೆ.

ಬರಬರುತ ಜನರ ಗುಂಪೆಂದೊಡನೆ ಮನವೇಕೊ
ಬಸವನಾ ಹುಳದಂತೆ ಮುದುಡುತಿತ್ತು ;
ಊರ ಹೊರಗಿನ ತೋಟ-ಬೇಲಿ, ಪಾತರಗಿತ್ತಿ
ಕಾಡ ಗಿಡಗಂಟಿಗಳ ಸಂಗವಾಯ್ತು.

(ಪಂಕ್ತಿ ೬೧-೬೪.)

ಆಟ. ಬಯಲಾಟ. ಕೋಲಾಟ, ಕುಣಿತ, ಹಂತಿ ಹೊಡೆತ, ಜನಪದ ಗೀತೆ, ಗುಡ್ಡ-ದೋರೆ, ಕಿರುಹಳ್ಳ, ಸುವಿಶಾಲ ಆಲ, ಎಲೆವಳ್ಳಿ ತೋಟ. ಈಶ್ವರನ ಗುಡಿ, ಕಲ್ಲುಕಟ್ಟೆ ಮಾದರ ಕೇರಿ, ಕೆಮ್ಮರಡಿ, ಗುಂಡಗಜುಗದ ಆಟ, ಚಿಣ್ಣಿಕೋಲು, ಬೆಲ್ಲವತ್ತಾದ ಕಾಯಿಯ ಬುಗುರಿಯಾಟ, ಗೊಂಬೆಮದುವೆಯಾಟದಲ್ಲಿ 'ಹಂಚು ಹರಳುಗಳಾಗ ಹವಳ ಮುತ್ತು' ಆದುದು, ಲಂಬಾಣಿ ತುಂಗಸರ ವೇಷವಸನ, ಸುಡುಗಾಡ ಸಿದ್ಧ ಹೆದರಿಸಿದುದು ಜೋಳದ ಪಯಿರಿನ ಹೊಂದಲೆ, ಬನ್ನಿಗಿಡದಡಿಯಲ್ಲಿ ಬುತ್ತಿಯುಂಡು ತಣ್ಣೀರನ್ನು ಕುಡಿದುದು – ಒಂದೇ ಎರಡೇ, ನೂರಾರು ಅನುಭವಗಳು ಅನುಭಾವಕ್ಕೆ ಮುನ್ನುಡಿ ನುಡಿಯುವುವು :

ಕೊಲ್ಲಾರಿ ಚಕ್ಕಡಿಗೆ ಹೂಡಿರುವ ಎತ್ತುಗಳ
ಕೊರಳ ಗೆಜ್ಜೆಯ ಸರವು ಟಿಂಟಿಣಿಸಲು
ಮೂಕೆಯಲಿ ಕುಳಿತಿರುವ ಆಳು ಲಾವಣಿ ಹಾಡೆ
ಕಿವಿಗೊಟ್ಟು ಕೇಳುವವು ಬಾನು ಬಯಲು.

(ಪಂಕ್ತಿ : ೯೩-೬೪)

ಬಾನು ಬಯಲು ಗಾಡಿಯಾಳಿನ ಲಾವಣಿ ಹಾಡನ್ನು ಕಿವಿಗೊಟ್ಟು ಕೇಳಿದುದನ್ನು ಭಾವಜೀವಿ ಕಂಡನಲ್ಲ, ಕೇಳಿಸಿಕೊಂಡನಲ್ಲ ಅದು ಅವನ ಅನುಭಾವದ ಮುಂದಿನ ಮೆಟ್ಟಲು.

ಮುಂದೆ ನೂರಾರು ಕತೆಗಳನ್ನು ಕೇಳುತ್ತಾನೆ ; ಚಂದ್ರಚಿಕ್ಕೆಗಳನ್ನು ಕಾಣುತ್ತಾನೆ ; ಜನನ-ಮರಣಗಳ ಅದ್ಭುತ ಭಯಂಕರತೆಯನ್ನು ಸಂದರ್ಶಿಸುತ್ತಾನೆ ; ಮಳೆಯಲ್ಲಿ ಮೈತೊಳೆದು ಮನಸ್ಸನ್ನೂ ಮೀಯಿಸುತ್ತಾನೆ ; ಬಿಕ್ಕು ತೀರಿಕೊಂಡಾಗ ಅಳುತ್ತಾನೆ, ಕಮ್ಮಾರನ ತಿದಿಯನ್ನು ಕಂಡು ಅಲ್ಲಿ ಕಬ್ಬಿಣ ಮೇಣವಾದುದನ್ನು ಕಂಡು ಆಶ್ಚರ್ಯಚಕಿತನಾಗುತ್ತಾನೆ. ಕುಂಬಾರನ ತಿಗರಿಯನ್ನು ಕಂಡು 'ನಮ್ಮೂರಿಗವನದೆಯೆ ಹಂಚಿನ ಮನೆ' ಎಂದು ನೆನೆದು ಕೊಳ್ಳುತ್ತಾನೆ ; ಮಾದರ ದುರುಗ 'ಮುಟ್ಟ ಬೇಡಿರಿ ತಂದೆ' ಎಂದಾಗ 'ನನ್ನೆದೆಯು ಕಸಿವಿಸಿಯ ಹೇಳತೀರದು ಆಗ ಬಾಲಕರಿಗೆಲ್ಲಿಯದು ಮಡಿ ಮೈಲಿಗೆ ?' ಎಂದುಕೊಳ್ಳುತ್ತಾನೆ. ದನಕಾಯುವ ನಿಂಗ ಮಹಿಷವಾಹನನಾದುದೂ ಕಿಸೆಯೆಲ್ಲ ಕಾರಿಬೋರೆಯ ಹಣ್ಣಿನಿಂದ ತುಂಬಿದುದೂ ಪ್ರಿಯವಾಗುತ್ತದೆ. ಮುಂದೊಂದು ವಿಶಿಷ್ಟ ಅನುಭವ :

ಕೆಲಸಿಗರ ಕೆಂಚನನು ಕಂಡರೀಗಲು ಭಯವು
ಒಡೆದ ಕನ್ನಡಿ ಮುರಿದ ಮೊಂಡುಗತ್ತಿ !
ಅವನ ಕಟಕಟಿಯಿಂದ ತಲೆಯೊಮ್ಮೆ ಪಾರಾಗೆ
ಮರುಜನ್ಮ ಪಡೆದಂತೆ ಉರಿವನೆತ್ತಿ ! (ಪಂಕ್ತಿ : ೧೩೩-೧೩೬)

ಹಳ್ಳದ ದಂಡೆಯ ಮೇಲಿರುವ ಮಾಸತಿಕಲ್ಲು, ವೀರಗಲ್ಲು, ಗುಂಡುಕಲ್ಲು—ಇವೆಲ್ಲ ಕಾಣುತ್ತಾನೆ, ಆದರೂ 'ಅಂದಿನಿಂದಿಂದುವರೆಗೆನ್ನ ಮನದೊಳು ಮಾತ್ರ ಮೂರ್ತಿ ಪೂಜೆಯ ಮಾತು ಅಷ್ಟಕಷ್ಟೆ.' ಎನ್ನುತ್ತಾನೆ. ಕವಿಯ ತಂದೆ ಮುಂಜಾನೆ ಎದ್ದು 'ಅನುಭವಾಮೃತ'ವನ್ನು ಓದಲು ಅದನ್ನು ಕೇಳಿ ಕವಿ ಸವಿಯುತ್ತಿದ್ದರಂತೆ, ಅಲ್ಲದೆ,

"ಅವರವರ ಭಾವಕ್ಕೆ ಅವರವರ ಅರ್ಚನೆಗೆ
ಅವರವರಿಗೇ ದೇವ ನೀನೊಬ್ಬನೆ"
ಮುಪ್ಪಿನ ಷಡಕ್ಷರಿಯ ಅನುಭಾವದಲೆಯೊಂದು
ಜಂಗಮನ ತಂಬೂರಿಯಲ್ಲಿ ಸೆಸಿನೆ. (ಪಂಕ್ತಿ : ೧೪೯-೧೫೨)

ಅನುಭವಾಮೃತ ಈ ಕವಿಯಲ್ಲಿ ಅನುಭಾವಾಮೃತದ ಬಿಂದುವಾಗಿ ರೂಪುಗೊಳ್ಳುತ್ತಿದ್ದಾಗ ಬಾಲ್ಯ ಹೋಗಿ ಯೌವನ ಬಂತು ; ಹಳ್ಳಿ ಬಿಟ್ಟು ನಗರಕ್ಕೆ ಹೋಗುವ ಕಷ್ಟದಲ್ಲಿ ಹಳ್ಳಿ, ಬಾಲ್ಯ, ಪ್ರಕೃತಿ ತಾಯಿ ಇವರನ್ನೆಲ್ಲ ಅಗಲುವುದು ಕವಿಗೆ ತುಂಬ ಹಿಂಸೆಯಾಗಿ ಕಾಣಿಸುತ್ತದೆ ;

ಸುವ್ವಿ ಬಾ ಚೆನ್ನಯ್ಯ ಸುವ್ವಿ ಬಾ ಲಿಂಗಯ್ಯ
ಸುವ್ವಿ ಬಾ ಎನ್ನುತ್ತ ಸಾರುವಯ್ಯ
ಇರುಳಿನಲಿ ಕಂದೀಲ ಬೆಳಕಿನಲಿ ಬರುವಂತೆ
ಬಾಲ್ಯದನುಭವ ಮರಳಿ ಕರೆವುದಯ್ಯ.

ನಾನು ಹುಟ್ಟಿದ ಹಳ್ಳಿ ತೊರೆದು ಬೇರೂರಲ್ಲಿ
ನೆಲಸುವಾ ಸಮಯ ಬರೆ ಸೋತು ಹೋದೆ ;
ಆ ಗೆಳೆಯರಾ ಎಳೆಯರಾ ನೋಟವಾ ಕೂಟ
ನೆನೆದು ಕಣ್ಣೀರ್ಮಿಡಿದು ಖಿನ್ನನಾದೆ.

ಇಂತಿಂತು ಈವರೆಗು ಹಳ್ಳಿ 'ಬೆಳ್ಳಿ'ಯ ತೆರದಿ
ಮಮ ಚಿದಂಬರದಲ್ಲಿ ಮಿನುಗುತಿಹುದು. (ಪಂಕ್ತಿ : ೧೫೭-೧೬೬)

ಕವಿಗೆ ಹಳ್ಳಿಯ ಬೆಳ್ಳಿಯನ್ನು ಬಿಡುವುದು ಕಷ್ಟವಾಯಿತು. ಆದರೆ ಬಿಡದೆ ಇರುವ ಹಾಗಿಲ್ಲ. ನೀರ ತಪ್ಪಿದ ಮೀನಿನಂತೆ ಕವಿ ತೊಳಲಿದರು. ಆ ಸಂಕಟ ಎಷ್ಟೆಂಬುದು ಕವಿಯ ಮಾತಿನಲ್ಲಿ ಪರಿಣಾಮಕಾರಿಯಾಗಿ ಮೂಡಿದೆ,

ಹತ್ತು ವರುಷಗಳಾಚೆ ನಮ್ಮೂರ ಬಿಡುವಂದು
ಕತ್ತು ಬಿಗಿಬಿಗಿದಿತ್ತು ನೋವ ಸಹಿಸಿ
ಅಗಲಿಕೆಯ ಅನುತಾಪ ಅನುಭವಿಸಲಸದಳವು
ಅದಕಿಂತ ಮರಣವೇ ಸ್ವಲ್ಪ ವಾಸಿ. (ಪಂಕ್ತಿ : ೧೭೭-೧೮೦)

ಈ ಅನುಭವ ಎಷ್ಟೊಂದು ಅಪೂರ್ವವಾದುದೆಂದು ತಿಳಿಯಲು ಇಂದಿನ ತರುಣರು ನಗರ ಜೀವನಕ್ಕೆ ಆಕರ್ಷಿತರಾಗಿ ನುಗ್ಗುವ ಹಿನ್ನೆಲೆಯಲ್ಲಿ ಪರಿಭಾವಿಸಬೇಕು. ಹಳ್ಳಿಯ ಬಾಳಿನ ಬೆಳ್ಳಿಯ ಬಾಲ್ಯವನ್ನು ಸ್ಮರಿಸಿ ಅದನ್ನು ಮರೆಯಲಾರದ ಮಾತಿನಲ್ಲಿ ಹಿಡಿದು ಕೊಟ್ಟಿದ್ದಾರೆ :

ಬಾಳ ಸಂಪುಟದಲ್ಲಿ ಬಾಲ್ಯವೆಂಬುವದೊಂದು
ಅಳಿಸಲಾರದ ಮಧುರ ಭಾವಗೀತ । (ಪಂಕ್ತಿ : ೧೮೧-೧೮೨)

'Heaven lies about us in our infancy' ಎಂಬ ವರ್ಡ್ಸ್‌ವರ್ತ್ ಕವಿಯ ಮಾತನ್ನು ಇದು ಜ್ಞಾಪಿಸುತ್ತದೆ. ನಗರಜೀವನದ ಸಿರಿಯಲಾಸ್ಯವನ್ನೂ, ನೂಕು ನುಗ್ಗಲನ್ನೂ ಕಂಡು ಕವಿ ಹೇಸಿ ಅದರಿಂದ ಮಾನಸಿಕವಾಗಿ ದೂರವಾಗಿ ಸೌಂದರ್ಯಾರಾಧಕರಾಗುತ್ತಾರೆ :

ಜಾತ್ರೆಯಲಿ ನೆರೆದ ಜನ ತೇರನೆಳೆಯುವ ಭರದಿ
ನುಗ್ಗಿರಲು ಮೈನುಗ್ಗು ಬೇರೆಯಿಲ್ಲ ;
ದೂರದಲ್ಲಿಯೆ ನಿಂತು ಹಣ್ಣು ಕಾಯ್ಗಳನಿತ್ತು
ಕೈಮುಗಿವ ಜನರೆಷ್ಟು ನಮ್ಮೊಳಿಲ್ಲ ?

o o o o

ಸೌಂದರ್ಯದರ್ಶನಕೆ ದೀಪ್ತವಾಗಿಹ ಮನವು
ಪ್ರಕೃತಿಯೌಪಾಸನೆಯ ಕೈಕೊಂಡಿತು.
ಚೆಂಗುಲಾಬಿಯ ಪಕಳೆ ಅಕಳಂಕವಾಗಿರುವ
ಭಾವವೀಣೆಗೆ ಬೆರಳನಾಡಿಸಿತ್ತು,

ಹೊನ್ನರಾಶಿಯು ಸುರಿದು ಕೊಂಡುಕೊಳ್ಳಲುಬಹುದೆ ?
ಚೆಲುವಿಕೆಯು ತಾನಲ್ಲ ಪಣ್ಯವಸ್ತು :
ದೇವದೇವನ ತೇಜದೋಜೆ ಪೂಜೆಗೆ ಸಂದು
ತೃಪ್ತಿಯಲಿ ಮೈದೋರೆ, ನುಡಿ "ನಮೋಸ್ತು"

ವಿಶ್ವಮುನ್ಮೀಲಿಸುವದಾವ ತೇಜಃಪುಂಜ
ಆ ಗಭಸ್ತಿಯ ಗರ್ಭಗುಡಿಯು ಲೋಕ ।
ಒಳಗಣ್ಣಿನೆದುರಿನಲಿ ಮೂಡಬಹುದಾ ಬಿಂಬ
ಅದಕೆ ಶರಣಾಗಿರಲು ಅದುವೆ ನಾಕ.

ಅಣುಕಣದ ಸೌಂದರ್ಯ ಬರಿಮಾತ ಜಳ್ಳಲ್ಲ
ಹಿರಿದು ಕಿರಿದೆಂಬುವದು ಅಲ್ಪಬುದ್ಧಿ ;
ಅಂತರಂಗದ ಶುದ್ಧಿ ಬುದ್ಧಿಗದು ಹೆದ್ದಾರಿ
ಓದುವಾದಗಳೆಲ್ಲ ಕಲಿತಬುದ್ಧಿ । (ಪಂಕ್ತಿ : ೧೯೩-೧೯೬ : ೨೦೬-೨೨೦)

ಭಾವಜೀವಿಯು ಲೋಕದ ಮಾತ್ಸರ್ಯ, ದ್ವೇಷ, ನರನ ನಾಯಿತನ, ಸ್ವಾರ್ಥ ಸಣ್ಣತನಗಳನ್ನು ಕಂಡು ತಿದ್ದಬೇಕು ಎಂದು ವೇದಿಕೆಯನ್ನೇರೋಣವೇ ಎಂಬ ಮನಸ್ಸು ಮಾಡುತ್ತಾನೆ. ಕೊನೆಗೆ ಅದಕ್ಕೂ ಅಸಹ್ಯಪಡುತ್ತಾನೆ.

ಏಸೊ ಈಶರು ದಾಸರಾಗಿ ಕೈಂಕರ್ಯದಲಿ
ಜನದ ಬದುಕನು ತಿದ್ದಿ ಹಸನುಗೊಳಿಸಿ
ಮೌನಶರಧಿಯ ತಳದಿ ಮುತ್ತಾಗಿ ಮಲಗಿಹರು
ನಾವು ನೊರೆ ತೆರೆಗಳೋ ಜೊಂಡು ಪಾಚಿ ! (ಪಂಕ್ತಿ : ೨೪೬-೨೫೨)

ಎಂಬಲ್ಲಿ ಲೋಕೋದ್ಧಾರಕರಿಗೂ ನಮಗೂ ಇರುವ ವ್ಯತ್ಯಾಸವನ್ನು ಸುಂದರವಾಗಿ ಮೂರ್ತೀಕರಿಸಿದ್ದಾನೆ. ಅನಂತರ ಒಂದು ನಿರ್ಧಾರಕ್ಕೆ ಬರುತ್ತಾನೆ :

ಇರಲಿ ; ಲೋಕದ ಡೊಂಕ ತಿದ್ದುವಾಸೆಯು ಬೇಡ
ನನ್ನೊಡಲ ಬ್ರಹ್ಮಾಂಡ ನನ್ನ ಲೋಕ (ಪಂಕ್ತಿ : ೨೫೩-೨೫೮)

ಎಂದು ಭಾವಜೀವಿಯು ತನ್ನ ಪರಿಮಿತಿಯನ್ನು ತಾನು ಅರಿತುಕೊಳ್ಳುತ್ತಾನೆ. ಮುಂದೆ ಪ್ರೇಮದ ಸಾಕ್ಷಾತ್ಕಾರ ಅವನಿಗಾಗುತ್ತದೆ. ಕಾಮವು ಪ್ರೇಮದ ಚಿನ್ನವನ್ನು ಸುಡುವ ದಿವ್ಯಾಗ್ನಿ. ನಮ್ಮ ಬಾಳಿಗೆ ಪರಮಪ್ರೀತಿಯೇ ನೆಲಗಟ್ಟು, ಪ್ರೀತಿಯೇ ಚೌಕಟ್ಟು ಎಂಬ ಸತ್ಯದರ್ಶನ ಅವನಿಗಾಗುತ್ತದೆ ; ಪ್ರೇಮ ಪ್ರಪಂಚದ ಮಂತ್ರದ್ರಷ್ಟಾರನಾಗುತ್ತಾನೆ :

ಚೆಲುವೆ ಗುಣವತಿಯಾಗೆ ಪ್ರೇಮಸಾಕ್ಷಾತ್ಕಾರ
ಹೃದಯದೊಳವೇ ಪರಂಜ್ಯೋತಿಯಯ್ಯ ! (ಪಂಕ್ತಿ : ೨೬೩_೨೬೪)

೦ ೦ ೦ ೦

ನಿಚ್ಚಳದ ನೋಟದಲಿ ಅಚ್ಚಳಿಯದಂತಿರುವ
ಸಚ್ಚಿದಾನಂದವೂ ಚೆಲುವಿಗಿಹುದು (ಪಂಕ್ತಿ : ೨೮೧-೨೮೨)

೦ ೦ ೦ ೦

ಇಲ್ಲಿ ಭಾವನೆ ಮೊದಲು ಬುದ್ಧಿಯದರಡಿಯಾಳು
ಮೊದಲ ನೋಟಕೆ ರತಿಯು ಸೌದಾಮಿನಿ !
ಪ್ರೇಮಿಗಳ ಹೃದಯಾಂತರಾಳದಲಿ ಮೌನದಲಿ
ಗುಪ್ತಗಾಮಿನಿ ಪ್ರೇಮ ಮಂದಾಕಿನಿ.

ಹೆಣ್ಣು ಮನುಕುಲದೊಂದು ಪುಣ್ಯದಾ ಬನದಲ್ಲಿ
ಕಕುಲಾತಿಯುರಳಿಸಿದ ಮಧುರ ಹೂವು !
ಎದೆಯ ಹೊಂಬಟ್ಟಲಲಿ ಪ್ರೇಮ ಪೀಯೂಷವಿರೆ
ಒರ್ಕುಡಿತೆಯನು ಕುಡಿದರಿಲ್ಲ ಸಾವು !

ಅಂಥ ತಿಳಿಯೊಲವಿಂಗೆ ಬಾಯಾರಿ ಕುಳಿತಿರಲು
ಮೋಡಗಳ ಕರುಮಾಡದಿಂದಲೊರ್ವ
ಯಕ್ಷಕನ್ಯೆಯು ಇಂದ್ರಚಾಪವನು ಕರಗಿಸುತ
ಹನಿಯಾಗಿ ಸುರಿಸಿದಳು ಓ ಅಪೂರ್ವ ! (ಪಂಕ್ತಿ : ೨೮೫-೨೯೬)

ಹೆಣ್ಣು ಭಾವಜೀವಿಗೆ ಬರಿಯ ಕಾಮದ ಕೆಸರಲ್ಲ; ವಿಷಯೋಪಭೋಗದ ಸಾಮಗ್ರಿಯುಲ್ಲ. ಅವಳು ಸೌದಾಮಿನಿ ; ಪ್ರೇಮ ಮಂದಾಕಿನಿ; ಮನುಕುಲದ ಬನದಲ್ಲಿ ಅರಳಿದ ಹೂವು. ಆ ಪ್ರೇಮಪೀಯೂಷವನ್ನು ಒಂದಿಷ್ಟು ಕುಡಿದವರಿಗೆ ಮತ್ತೆ ಸಾವಿಲ್ಲ. ಇಲ್ಲಿ ಭಾವಜೀವಿ ಪ್ರೇಮ ಪ್ರಪಂಚದ ಪಾವಿತ್ರ್ಯವನ್ನು ಕಂಡು ಅದರ ಪೂಜಾರಿಯಾಗಿದ್ದಾನೆ. ಆದರೆ ಸಮಾಜದ ನಿಂತ ಕೊಳಚೆಯ ನೀರು ಪ್ರೇಮವನ್ನು ಈ ಪವಿತ್ರ ದೃಷ್ಟಿಯಿಂದ ನೋಡ ಲಾರದು. ಭಾವಜೀವಿ ಅದನ್ನು ಲೆಕ್ಕಿಸದೆ ತನ್ನ ಪ್ರಿಯೆಗಾಗಿ ಪ್ರಕೃತಿಯ ಸಾನ್ನಿಧ್ಯದಲ್ಲಿ ಹಂಬಲಿಸುತ್ತಾನೆ :

ಬೆಳದಿಂಗಳಿರುಳಲ್ಲಿ ರಾತ್ರಿರಾಣಿಯ ಹೂವು
ನಾಲ್ದೆಸೆಗು ಅಚ್ಚ ಸೌಸವ ಬೀರಿರೆ,
ಅವಳ ಧ್ಯಾನದಲಿರುಳು ಹಗಲಾಗಿ ಹಗಲೊಂದು
ಇರುಳಾಗಿ ಮರುಳಾಗಿ ತೊಳಲುತ್ತಿರೆ (ಪಂಕ್ತಿ : ೩೧೩-೩೧೬)

ಸುಳಿಗಾಳಿಯೊಡನೊಮ್ಮೆ ಸಂದೇಶ ಕಳಿಸುವೆನೆ
ಚಂದ್ರಕಿರಣಗಳಲ್ಲಿ ಓಲೆ ಬಹವೆ ?
ಹೂ-ಪಕಳೆಯಲಿ ಹೊಳೆವ ಮಂಜುಹನಿ ಮಣಿಮಾಲೆ
ಕೊರಳ ಕಂಠಿಕೆಯಿಂದ ಜಗುಳಿರುವವೆ ? (ಪಂಕ್ತಿ : ೩೨೯-೩೩೨)

ಭಾವಜೀವಿಯು ಹೀಗೆ ಪ್ರೇಮದ ಸಾನ್ನಿಧ್ಯದಲ್ಲಿ ತಾನು ಕವಿಯೆಂಬುದನು ಕಂಡುಕೊಂಡ ; ಆ ಕಾವ್ಯದ ಉಪಾಸನೆಯ ರೀತಿಯೇನು ?

ಏಕಾಂತವಾಸದಲಿ ಏಕಾಕಿ ಜೀವಕ್ಕೆ
ಏಕತಾರಿಯು ದೊರೆಯಲೆನಿತು ಹರುಷ !
ಕಾವ್ಯದೌಪಾಸನೆಯುಲಂತು ಒಂದಾಗಿರಲು
ರಸಗಂಗೆಯಲಿ ತೇಲೆ ವರುಷ ವರುಷ

ಮಧುರಯಾತನೆಯಲ್ಲಿ ಕಾಲಯಾಪನೆಗೈಯೆ
ಬಂತು ಗೆಳೆತನ ಪುಣ್ಯಪಾಕದಂತೆ
ಹೇಗೊ ಹೇಗೋ ಹೆಗಲುಗೊಟ್ಟು ಬಂದಿರೆ ಗೆಳೆಯ-
ರೊಂದೆ ಕೊಂಬೆಯ ಹಲವು ಹೂಗಳಂತೆ ! (ಪಂಕ್ತಿ : ೩೪೫-೩೫೨)

ಕವಿಯು ಜನಪದ ಕವಿಯ ದೇಸಿಯ ಚೆಲುವನ್ನು ಕಾಣುತ್ತಾರೆ; 'ದತ್ತವಾಣಿ'ಗೆ ಎದೆ ಕೊಡುತ್ತದೆ. ಧಾರವಾಡದ ನಿಸರ್ಗ ರಮ್ಯ ಪರಿಸರಣ ಕವಿಯ ಎದೆಯ ಹಕ್ಕಿಯನ್ನು ಕೂಗಿಸುತ್ತದೆ. ಹೊಂಬಿಸಿಲು ಚುಂಬಿಸಲು ಬಂಗಾರವನ್ನೇ ಹಾಡಿವಾಡಿ ಮೋಡಗಳು ಸುರಿಸಿದವೋ ಎಂದುಕೊಳ್ಳುತ್ತಾನೆ. ಕಂದರದಡೆಯಿಂದ ರೈಲು ಬರುತ್ತಿರುವುದು ಕಾಳಾಹಿಯಂತೆ ಕಾಣುತ್ತದೆ. 'ಹುಲುಂಗಲದ ಟೊಂಗೆಯಲಿ ಹೂತಿರುವ ಹೊಂಗೆಯಲಿ ಮುಳ್ಳುಕಂಟಿಗಳಲ್ಲಿ ಸ್ವರ್ಣಕಲಶ 'ವೆತ್ತಿರುವುದನ್ನು ಕವಿ ಕಾಣುತ್ತಾನೆ. 'ಹೂವಿನೊಳು ಹುದುಗ್ಯಾನ ಮಾಲ್ಯಾಗ ಮಲಗ್ಯಾನ ಮೊಗ್ಗ್ಯಾಗ ಕಣ್ದೆರೆದು ಲಿಂಗಯ್ಯಾನು' ಎಂಬ ಜನಪದ ಕವಯಿತ್ರಿಯ ದಿವ್ಯ ದರುಶನಕ್ಕೆ ಆನಂದ ಪುಲಕಿತನಾಗುತ್ತಾನೆ. ಹಾಗೆಯೇ ತನ್ನ ದಿವ್ಯ ದರ್ಶನವನ್ನು ಹೇಳುತ್ತಾ :

ಸೂಕ್ಷ್ಮತಮ ಹೂವಿನೊಲು ಚೆಲು ಚಮತ್ಕೃತಿಯಾಗಿ
ಹೃತ್ಕಮಲವರಳುವದೆ ನನಗೆ ಮೆಚ್ಚು;
ಮನುಕುಲವು ಹೂವಾಗಿ ಜಗವು ಜೇಂಗೊಡವಾಗಿ
ಮನವು ತನಿವಣ್ಣಾಗಲೆಂಬ ಹುಚ್ಚು! (ಪಂಕ್ತಿ : ೩೩೭-೩೪೦)

ಮುಂದೆ ಕವಿಗೆ ತನ್ನ ಅರಿವಾಗುತ್ತದೆ; ಸತ್ಯ ಸಾಕ್ಷಾತ್ಕಾರವಾಗುತ್ತದೆ. ಕವಿಯ ಕಾವ್ಯದ ಕೊರಳು ಉತ್ಕಂಠಿತವಾಗಿ ಮೊರೆಯುತ್ತದೆ ಆ ಸತ್ಯವನ್ನು ಸುಂದರವಾಗಿ :

ಲೆಕ್ಕವಿಲ್ಲದ ಜನರ ಹೊತ್ತು ತಿರುಗುತ್ತಿರುವ
ನೆಲದ ಹುಡಿಯಲ್ಲಿ ನಾನೊಂದು ಕಣವು;
ಬಾನ್ನೆಲವ ಸುತ್ತಿ ನೆರೆಮುತ್ತಿ ಘೂರ್ಮಿಸುತಿರುವ
ಬೆಂಗಾಡ ಬಿರುಗಾಳಿಯೊಂದು ಅಣುವು.

ಭುಲ್ಲವಿಸಿ ಬಲ್ದೆರೆಗಳೆದ್ದು ಹೊಯ್ದಾಡುತಿಹ
ಕಡಲಾಳದಲ್ಲಿ ನಾನೊಂದು ಹನಿಯು;
ಇಕ್ಕೆಲದಿ ಎಕ್ಕೆಕ್ಕಿ ಗಜರಿ ಗರ್ಜಿಸುತಿರುವ
ನೀರ್-ಬೀಳಿನಲಿ ಸಿಡಿವ ಜಿನುಗು ಹನಿಯು.

ದಟ್ಟೈಸಿ ಹಳುಬೆಳೆದ ಕಟ್ಟರಣ್ಯದ ನಡುವೆ
ತರುಗುಲ್ಮಗಳಲಿ ನಾನೊಂದು ಎಲೆಯು;
ಅಂತವಿಲ್ಲದ ಗಗನ ವಿಸ್ತೀರ್ಣದಲಿ ತೇಲಿ
ಲೀನವಾಗುವ ಮೋಡದೊಂದು ಎಳೆಯು! (ಪಂಕ್ತಿ : ೫೦೧-೫೧೨)

ಕವಿ ಚೇತನ ಮಧುರ ಚೆನ್ನರ ಮಧುರವಾದ ನುಡಿಗೆ ಮಾರುಹೋಗಿದೆ. ಈ ಕವಿಯ ಕಾವ್ಯಮಾರ್ಗ ಯಾವುದೆಂಬುದನ್ನೂ, ಕಾವ್ಯದಿಂದ ಏನನ್ನೂ ಸಿದ್ಧಿಸಿಕೊಳ್ಳಬಹುದೆಂಬ ಆತ್ಮ ವಿಶ್ವಾಸವನ್ನೂ ಮುಂದಿನ ಪಂಕ್ತಿಗಳಲ್ಲಿ ಕವಿ ಹೇಳಿದ್ದಾನೆ :

ರಸವಂತಿ ವಾಸಂತಿ ಗುಣವಂತಿಯಾದಂದು
ಕೋಗಿಲೆಗು ಸವಿಹಾಡ ಕಲಿಸಬಹುದು;

ಕೊರಳ ಕೊಂಕಿಸಿ ಗರಿಯ ನೂರು ಕಂಗಳ ಹರಹಿ
ಕುಣಿವ ನವಿಲಿಗೆ ಕೇಕೆ ಹೊಡೆಯಬಹುದು ! (ಪಂಕ್ತಿ : ೩೨೭-೩೪೦)

ಅಲೆವ ಗಾಳಿಯ ಹಿಡಿದು ತಂತಿಗಳ ಹೆಣೆಹೆಣೆದು
ವೀಣೆಯಂದದಿ ಝಣತ್ಕರಿಸಬಹುದು !
ದೇಶದಿಗ್ದೇಶಗಳ ಒಡವಿನೊಡಗತೆಗಳನು
ಗಾಳಿಮೂಲಕ ಕೇಳಿ ಬಿಡಿಸಬಹುದು !

ಸೂರೆಪಾನದ ಹೂವ ಪುಷ್ಪಕವಿಮಾನದಲಿ
ಕುಳಿತು ಬಾಂದಳದಲ್ಲಿ ಏರಬಹುದು ;
ಅಲ್ಲಿ ಗ್ರಹತಾರೆಗಳ ಮಂಚದಲಿ ಮಂಡಿಸುತ
ಚಂದ್ರನೊಡ ಚದುರಂಗವಾಡಬಹುದು. (ಪಂಕ್ತಿ : ೩೪೫-೩೫೨)

ಕವಿಯು ತಾನು ಭಾವಜೀವಿಯೆಂಬುದನ್ನರಿತು ತನ್ನೆದೆಯನ್ನು ತುಂಬಿರುವ, ತಾನು ನಂಬಿರುವ ಕನಸುಗಳೆ ತನ್ನ ಪಾಲಿನ ಕಲ್ಪವೃಕ್ಷ ಎಂಬುದನ್ನು ಕಾಣುತ್ತಾನೆ. ಕಾವ್ಯವೆಂದರೇನು ಎಂಬುದನ್ನು ಕಣವಿಯವರು ಪರೋಕ್ಷವಾಗಿ ಇಲ್ಲಿ ಹೀಗೆ ಹೇಳಿದ್ದಾರೆ :

ಮನೆಯ ಕಟ್ಟುವ ಮೊದಲು ನಕ್ಷೆಯನು ತೆಗೆವಂತೆ
ಭಾವ ಕಾಣುವುದದನು ಕನಸಾಗಿಸಿ,
ಆಮೇಲೆ ಕಲ್ಲು ಇಟ್ಟಿಗೆ ಗಚ್ಚುಗಾರೆಯಲಿ
ಭದ್ರಗೊಳಿಸುವರದನು ರೂಪುಗೊಳಿಸಿ. (ಪಂಕ್ತಿ : ೩೬೧-೩೬೪)

ತನ್ನ ಅಂತರಂಗವನ್ನು ತಾನೇ ಕಾಣಬೇಕೆಂಬ ಪ್ರಯತ್ನ ಭಾವಗೀತೆ. ಹೀಗೆ ೩೮೦ ಪಂಕ್ತಿಯಲ್ಲಿ ಕವಿಯು ತಾನು ಕವಿ ಹೇಗಾದೆ ಎಂಬುದನ್ನು ಓದುಗನಿಗೆ ನಿವೇದಿಸುತ್ತಾನೆ, ಕಾವ್ಯದ ಮಾತಿನಲ್ಲಿ. ಇಲ್ಲಿ ಭಾವಜೀವಿಗೂ, ಅಭಾವಜೀವಿಗೂ ಇರುವ ವ್ಯತ್ಯಾಸವು ಈ ಕಾವ್ಯವನ್ನು ಓದುತ್ತಿರುವಂತೆಯೇ ಸಹೃದಯನಿಗೆ ಅರಿವಾಗುತ್ತದೆ.

೩

ಕವಿಯ ಹೃದಯವನ್ನೂ, ಕವಿತೆಯ ಹೃದಯವನ್ನೂ ‘ ಭಾವಜೀವಿ ’ ಬಹಳ ಚೆನ್ನಾಗಿ ಪರಿಚಯಿಸುತ್ತದೆ. ಅದರಿಂದ ಕಣವಿಯವರ ಕವಿತೆಗಳಲ್ಲಿ ನನಗೆ ‘ ಭಾವಜೀವಿ ’ ತುಂಬ ಮೆಚ್ಚಿನದಾಗಿದೆ. ಕವಿಹೃದಯವನ್ನೂ, ಕವಿತೆಯ ಹೃದಯವನ್ನೂ ಹೇಳ ಹೋಗಿ ‘ ಭಾವಜೀವಿ ’ ತಾನೆ ಕವಿತೆಯಾಗುತ್ತದೆ. ಇದು ಇಲ್ಲಿಯ ಸ್ವಾರಸ್ಯ. ‘ಅನುಭಾವವೆಂಬುವದು ಅಂತರಂಗದ ರತ್ನ’ ಎಂಬುದಕ್ಕೆ ಈ ಕವಿತೆಯಲ್ಲಿ ತುಂಬ ಮಾರು ಹೋದ ಈ ಕವಿ ಮುಂದೆ ಇದೇ ಮಾರ್ಗದಲ್ಲಿ ಮುಂಬರಿದಿದ್ದರೆ ಕನ್ನಡದ ಇನ್ನೊಬ್ಬ ಮಹಾಕವಿಯಾಗುತ್ತಿದ್ದರು ಎಂದು ನಮಗನ್ನಿಸುತ್ತದೆ.

ವೇಣುಗೋಪಾಲ ಸೊರಬ

# "ಕಾಲ ನಿಲ್ಲುವುದಿಲ್ಲ"

ಕಾಲದ ಬಗೆಗಿನ ಕಲ್ಪನೆ ಬದಲಾಗುವುದಕ್ಕೆ ವಿಜ್ಞಾನದ ಕೊಡುಗೆ ಪ್ರಭಾವಕಾರಿಯಾದ ಪಾತ್ರವಹಿಸಿದೆ. ಇದರ ಪರಿಣಾಮವಾಗಿ ಕಾಲ ಕೇವಲ ಒಂದು ಅಮೂರ್ತ ಕಲ್ಪನೆ ಎಂಬ ಭಾವನೆ ಬುಡಮೇಲುಗೊಂಡಿದೆ. ಕಾಲ ಇವೊತ್ತಿಗೂ ಅಮೂರ್ತವಾದದ್ದೇ–ವ್ಯವಹಾರ ಜಗತ್ತಿನಲ್ಲಿ. ಆದರೂ ಇಡೀ ಕಾಲವನ್ನು ತಂತಾನೆ ಕುರಿತು ಚಿಂತಿಸುವಾಗ, ಅದು ಮೂರ್ತತೆಯನ್ನು ಪಡೆಯುತ್ತದೆ. ನಮ್ಮಲ್ಲಿ 'ಕಾಲ' ಹಿಂದಿನಿಂದಲೂ ಖುತ ತತ್ವವನ್ನು ಪ್ರತಿನಿಧಿಸುವ ಒಂದು ಅಂಶವಾಗಿ, ಮೂರ್ತ ಸ್ವರೂಪ ಪಡೆದಿದೆ. ಕಾಲವನ್ನು ವ್ಯಕ್ತಿರೂಪದಲ್ಲಿ ಪ್ರತಿಮಿಸುವುದು, ಪುರಾಣ ಸಂಪ್ರದಾಯಕ್ಕೆ ಸಹಜವಾದರೂ, ಕಾಲವನ್ನು ಹರಿಯುವ ನದಿಗೆ ಹೋಲಿಸುವುದು ಅಪರೂಪವೇನಲ್ಲ. ಆದರೆ ಕಾಲದೇಶಗಳು ಪರಸ್ಪರ ವಿನಿಮಯಗೊಳ್ಳಬಹುದೆಂಬ ವೈಜ್ಞಾನಿಕ ಸತ್ಯದ ಬೆಳಕಿನಲ್ಲಿ ಕಾಲವನ್ನು ಅರ್ಥೈಸುವ ಪ್ರಯತ್ನ ಹೆಚ್ಚು ಕುತೂಹಲಕಾರಿಯಾಗುವುದು ಸಹಜ.

ಶ್ರೀ ಕಣವಿಯವರ 'ಕಾಲ ನಿಲ್ಲುವುದಿಲ್ಲ' ಕವಿತೆ, ಮೇಲಿನ ಅನೇಕ ಅಂಶಗಳನ್ನು ಒಳಗೊಳ್ಳುತ್ತದೆ. ಅದಕ್ಕಿಂತ ಹೆಚ್ಚಾಗಿ, ಈ ಅಂಶಗಳನ್ನು ಕೇವಲ ತಾರ್ಕಿಕವಾಗಿ ನೋಡುವ ಬದಲು, ಬದುಕಿನ ಅನುಭವದ ಒರೆಗಲ್ಲಿಗೆ ತಿಕ್ಕಿ ನೋಡುತ್ತದೆ. ಹೀಗೆ ಮಾಡುವಾಗ ಕಾಲ ಮತ್ತು ಬದುಕಿನ ನಡುವಿನ ಪರಸ್ಪರ ಸಂಬಂಧ ವಿವರಗೊಳ್ಳುತ್ತಾ ಹೋಗುತ್ತದೆ. ಪರಿಣಾಮವಾಗಿ 'ಕಾಲ ನಿಲ್ಲುವುದಿಲ್ಲ' ಒಂದು ಉತ್ತಮ ಕವಿತೆಯ ಲಕ್ಷಣವನ್ನು ಪಡೆದಿದೆ, ಎಂದು ಧಾರಾಳವಾಗಿ ಹೇಳಬಹುದು.

೧

'ಕಾಲ ನಿಲ್ಲುವುದಿಲ್ಲ' ಎನ್ನುವ ಮಾತಿನಲ್ಲಿ ಕಾಲದ ಬಗೆಗಿನ ಗುಣ—ಚಲನ ಗುಣ—ಒಪ್ಪಿಕೊಳ್ಳಲಾಗಿದೆ. ಇದೊಂದು ಮಾನವಿಕ ಮೌಲ್ಯವೆನ್ನುವುದು 'ಈ ಕಾಲನೆಂಬುವ ಪ್ರಾಣಿ ಕೈಗೆ ಸಿಕ್ಕರೆ ಚೆನ್ನಾಗಿ ಥಳಿಸಬೇಕೆಂದಿದ್ದೆ :'—ಎಂಬ ಮಾತಿನಲ್ಲಿ ದೃಢೀಕರಿಸಲಾಗಿದೆ. ಮುಂದಿನ ಸಾಲಿನ ಮಾತುಗಳಿಂದ—

'ಎಲ್ಲೊ ತಲೆ ಮರೆಸಿಕೊಂಡು ಓಡಾಡುತಿದ್ದಾನೆ'

ಇಲ್ಲಿನ 'ಪ್ರಾಣಿ' ಲಾಘವವಾಗಿ ಬಳಕೆಯಾದ ಪದ ಎನ್ನುವುದು ಸ್ಥಿರವಾಗುತ್ತದೆ. ಈತ–ಈ ಮನುಷ್ಯ 'ಪ್ರಾಣಿ'ಯಂತಹ ಪ್ರಾಣಿ 'ಅಣುವಿನಲ್ಲಿ ಅಣುವೂ ಮಹತ್ತಿನಲ್ಲಿ ಮಹತ್ತೂ' ಆಗಬಲ್ಲಂತಹ ವ್ಯಕ್ತಿತ್ವದವನು ಎಂಬುದು, ಮುಂದಿನ ಸಾಲುಗಳಲ್ಲಿ ಧ್ವನಿತ

ವಾಗುತ್ತದೆ. ಆದರೆ ಈ ಐದು (ಸಾಲು 4 ರಿಂದ 8) ಸಾಲಿನ ವಿವರಣೆಗಿಂತ, ಕವನದ ಮೂಲಧೋರಣೆಯನ್ನೂ, ಕವನದ ಮೂಲದ್ರವ್ಯಕ್ಕೆ ಚಾಲನೆಯನ್ನೂ ಕೊಡುತ್ತದೆ. ಒಂದು ತುಂಡು ಸಾಲು—

'ಹಿಡಿಯಿರೋ ಅವನ......'

ಈ ಸಾಲಿನಲ್ಲಿಯ ಸಮಷ್ಟಿ ಧ್ವನಿ (ಹಿಡಿಯಿರೋ)ಯನ್ನು ಗಮನಿಸಿದಾಗ, ಕವಿ ಇಲ್ಲಿ ವೈಯಕ್ತಿಕವಾಗಿ ಮಾತಾಡುತ್ತಿಲ್ಲ; ಒಂದು ಸಮಾಜದ ಅಥವಾ ಒಂದು ನಾಗರಿಕತೆಯ ಮುಖವಾಣಿಯಾಗಿದಾನೆ ಎಂಬ ಅಂಶ ಹೊರಬರುತ್ತದೆ.

ಎರಡನೆಯ ಪ್ಯಾರಾದ ಆರಂಭದ ಸಾಲುಗಳಲ್ಲಿ ಮನುಷ್ಯ ಹೇಗೆ ಕಾಲವನ್ನು ಹಿಡಿದು ನಿಲ್ಲಿಸಲು ಯತ್ನಿಸಿದ್ದಾನೆನ್ನುವುದು ವರ್ಣಿತವಾಗಿದೆ.

ಗಡಿಯಾರದಲ್ಲವನ ಹಿಡಿದು ಗಾಣವಾಡಿಸಲು
ಹೆಣಗಿದ್ದೇವೆ

—ವಸ್ತುಸ್ಥಿತಿಯ ಸರಳ ನಿರೂಪಣೆಯಾಗಿದೆ, ಆದರೆ.

ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿದು
ಒದೆಸಿಕೊಂಡಿದ್ದೇವೆ.

ಎನ್ನುವಲ್ಲಿ ಕಾಲನ ಪರ್ಯಾಯವಾಗಿ, 'ಕತ್ತೆಯ ಕಾಲು' ಸೂಚಿತವಾಗಿದೆ, ಈ 'ಕತ್ತೆಯ ಕಾಲು' ತಾತ್ವಿಕ ಕಾಲದ ಕೂಡ ಯಾವುದೇ ಸಂಬಂಧ ಪಡೆಯದಿದ್ದರೂ, ಪರಿಸರದ ಒತ್ತಡದಿಂದಾಗಿ, ಅದು ಕಾಲನಿಗೆ ಪರ್ಯಾಯವಾದ ವಸ್ತುವಾಗುವಷ್ಟು ಪ್ರಭಾವಕಾರಿಯಾಗಿದೆ. 'ಕಾಲ'ಕ್ಕೆ ಪರ್ಯಾಯ ಪದವಾದ 'ಹೊತ್ತು' ಆಡು ಮಾತಿನಲ್ಲಿನ ತನ್ನ ಅರ್ಥ ವಿಸ್ತಾರದಿಂದಾಗಿ, ಅಲ್ಲದೆ 'ಕತ್ತೆಯ ಕಾಲ' ಎಂಬಲ್ಲಿನ ಘಾತ (stress)ದ ಪೂರ್ವ ಸ್ಥಾನದಲ್ಲಿದ್ದು ಹೊತ್ತಿಗೂ ಕತ್ತೆಗೂ ಒಂದು ಬಗೆಯ ಅವಿನಾಭಾವ ಸ್ಥಾಪಿತವಾಗುತ್ತದೆ. ಹೊತ್ತು ಕತ್ತೆಯಾಗುವ ಈ ಸಂದರ್ಭದಲ್ಲಿ ಹೊತ್ತು ಎನ್ನುವ ಮಾತಿನ ಇನ್ನೊಂದು ಅರ್ಥವೂ (ಹೊರು ಹೊತ್ತು) ಹೊಳೆದು, ಹಿಂದಿನ ಸಾಲುಗಳ 'ಗಾಣವಾಡಿ'ಸುವ ಮತ್ತು 'ಹೆಣಗು'ವ ಕ್ರಿಯೆಗೆ ಹೊಸ ಅರ್ಥ ಗಾಂಭೀರ್ಯ ಸ್ಫುರಿಸುತ್ತದೆ. ಇಷ್ಟಲ್ಲದೆ 'ಒದೆಸಿಕೊಂಡಿದ್ದೇವೆ' ಎನ್ನುವ ಮಾತು, ಕಾಲ ಯಾರನ್ನೂ ಸುಮ್ಮನೆ ಬಿಡುವಂಥದ್ದಲ್ಲ ಎನ್ನುವುದಕ್ಕೆ ಸಾಕ್ಷಿಯಾಗುತ್ತದೆ.

ಇಲ್ಲಿಂದ ಮುಂದಿನ ಘಟ್ಟ ಆರಂಭವಾಗುತ್ತದೆ. ಇಲ್ಲಿ ಅಂತರ್‌ಮುಖತೆ ದೊರಕಿಸಿಕೊಳ್ಳುವ ರೀತಿ ಹದವಾಗಿದೆ—

ಒಳ ಹೊರಗೆ ಉಸಿರು ಆಡುತ್ತಿದೆ ನಿರಾಯಾಸ

ಇದು ನಿರಾಯಾಸವಾಗಿ ಸಾಗುವ ಕ್ರಿಯೆಯಾದರೂ, 'ತುಡಿವೆದೆ' ಮತ್ತು 'ಮಿಡಿವ ನಾಡಿ'ಯ ಸಂಪರ್ಕವಿಲ್ಲದೆ, ಈ ಜ್ಞಾನ ಮೂಡಲಾರದು. ಅಲ್ಲದೆ, ಈ 'ನಿರಾಯಾಸ' ಎನ್ನುವುದು ನಿಷ್ಕ್ರಿಯ ಸ್ಥಿತಿ ಅಲ್ಲ, ಒಳ ಹೊರಗೆ ಉಸಿರು ಆಡುವುದರಿಂದ, ಅಂದರೆ

ನಿರಂತರವಾದ ಕ್ರಿಯೆಯಿಂದ, 'ನಿರಾಯಾಸ' ಫಲಿಸುತ್ತದೆ. ಈ 'ನಿರಾಯಾಸ'ವನ್ನು ಆಗಗೊಳಿಸುವ ಇನ್ನೊಂದು ಅಂಶವೂ ಇದೆ—

ಬಯಲು ಆಲಯದೊಳಗೊ ? ಆಲಯವು ಬಯಲೊಳಗೊ ?

ಮೂಲಭೂತ ಪ್ರಶ್ನೆಯಾದದ್ದರಿಂದ, ಇದು ಕಾಲ ದೇಶಗಳಷ್ಟೇ ಅಥವಾ ದೇಶವನ್ನೂ ಒಳಗೊಂಡ ಕಾಲದಷ್ಟೇ ಹಳೆಯದು. ಉಸಿರು ಆಡಬೇಕಾದರೆ, ಒಳಹೊರಗಿನ ಅಸ್ತಿತ್ವವಿಲ್ಲದೆ ಸಾಧ್ಯವಿಲ್ಲ. ಆದರೆ ಒಳಹೊರಗಿನ ಪ್ರಶ್ನೆಯೊಂದಿಗೇ ಯಾವುದು ಮೂಲ, ಯಾವುದು ಮುಖ್ಯ ಎಂಬ ಸಮಸ್ಯೆ ಉಂಟಾಗುತ್ತದೆ. ಕಾಲದಿಂದ ಬಂಧಿತವಾದದ್ದು, ಕಾಲದ ಬಂಧಕ್ಕೆ ಒಳಗಾಗದ್ದು—ಎರಡರಲ್ಲಿ ಯಾವುದು ನಿಜವಾದ ಅಸ್ತಿತ್ವ ಪಡೆದಿದೆ ? ಕವಿ ಇದನ್ನು ಉತ್ತರಿಸುವ ಗೋಜಿಗೆ ಹೋಗುವುದಿಲ್ಲ—

ಕೊನೆಗೊಮ್ಮೆ ಅವನೇ ಎಲ್ಲ ಬಗೆಹರಿಸುತ್ತಾನೆ.

ಎಲ್ಲ ಸಮಸ್ಯೆಗಳಿಗೂ ಕಾಲನೇ ತಕ್ಕ ಉತ್ತರ. ಕಾಲನ ಉತ್ತರ ಏನೆಂಬುದು ಮನುಷ್ಯನ ಅರಿವಿಗೆ ಬರುವುದು ಅಸಾಧ್ಯವೇ ಸರಿ. ಆದ್ದರಿಂದಲೇ ಆ ಬಗ್ಗೆ ಅವಸರ ಪಡುವುದೂ ಬೇಡ. ಯಾಕೆಂದರೆ, ಅವಸರ ಪಟ್ಟುದಾದರೆ, ಜೀವನದ ಅನುಭವ ಸಂಪತ್ತನ್ನೇ ಕಳೆದುಕೊಳ್ಳಬೇಕಾಗುತ್ತದೆ. ಅಲ್ಲದೆ ಅದನ್ನು ಹಾಗೆ ಕಳೆದುಕೊಳ್ಳಲು ಯಾರೂ ಸಿದ್ಧರಾಗಿಯೂ ಇಲ್ಲ. ಆದ್ದರಿಂದ,

ಯಾರಿಗೂ ಅವಸರವಿಲ್ಲ ತಾನೆ ?

ಎನ್ನುವ ಮಾತಿನಲ್ಲಿ ಸಾಂತ್ವನಕ್ಕಿಂತ ಹೆಚ್ಚಾಗಿ, ವಾಸ್ತವಾಂಶದ ನಿರೂಪಣೆಯೇ ಇದೆ.

'ಈಕುದುರೆಯೇರಿ' ಎಂದು ಆರಂಭವಾಗುವ ಸಾಲಿನಿಂದ ಹಿಡಿದು, ಮೊದಲ ಭಾಗದ ಕೊನೆಯ ಸಾಲಿನವರೆಗೂ, ಕಣ್ಣಿಗೆ ಕಟ್ಟುವ ಚಿತ್ರ ನಾಗಾಲೋಟದ ಕುದುರೆಯ ಓಟದ ಚಿತ್ರ; ಇಲ್ಲಿನ ವೈಪರೀತ್ಯವೆಂದರೆ, ಸವಾರನಾಗಲೆಳಸುವ ಮನುಷ್ಯ ತಾನೇ ವಾಹನವೂ ಆಗುವುದು. ಆದರೆ ಈ ಓಟದ ಚಿತ್ರ 'ಸೆಕೆಂಡು, ಮಿನಿಟು, ತಾಸುಗಳ ಹಾಸು ಹೊಕ್ಕಿನಲಿ' ಮರೆಯಾಗಿ ಬಿಡುವುದೂ ಸಹ ಕಾಲ ನಮ್ಮನ್ನು ಯಾವಯಾವ ಕಡೆ ಹೇಗೆ ಹೇಗೆ ಸುತ್ತುಗಟ್ಟಿದೆ ಎಂಬ ಬಿಡಿಸಲಾಗದ ಸಮಸ್ಯೆಗೆ ಕನ್ನಡಿ ಹಿಡಿದಂತಿದೆ. ಕಾಲದೊಂದಿಗೆ ಉಳಿದ ನಾಲ್ಕು ಭೂತಗಳು (ಮಣ್ಣು, ಗಾಳಿ, ನೀರು, ಬಯಲು) ಬದುಕನ್ನು 'ಬೆತ್ತಲೆ ಬದುಕಿಗೆ ಬಣ್ಣದ ನೂಲು ಸುತ್ತಿ ತೋರಿಸುತ್ತಿದೆ ಡೌಲು.'

ಕೊನೆಯ ಎರಡು ಸಾಲುಗಳಲ್ಲಿನ ಬೆಳಕು–ಕತ್ತಲೆ ಮತ್ತು ಭೂಮಿ–ಆಕಾಶಗಳ ದ್ವಂದ್ವಭಾವನೆ, ಈ ಮೊದಲಿನ ಬಯಲು–ಆಲಯ ಮತ್ತು ಸವಾರ–ವಾಹನಗಳ ದ್ವಂದ್ವ ಕಲ್ಪನೆಯನ್ನು ನೆನಪಿಗೆ ತಂದು, ಬದುಕಿನ ಆಳದ ದ್ವಿಧಾವೃತ್ತಿಗೆ, ಕವನದ ಆಳದಲ್ಲಿ ಕಂಡು ಬರುವ ದ್ವಿಧಾವೃತ್ತಿಗೆ—ಚಲಿಸುವ ಕಾಲವನ್ನು ಹಿಡಿಯುವ ಭಾವನೆಗೆ — ಒತ್ತನ್ನು ಕೊಡುತ್ತದೆ.

ಹೀಗೆ ಮೊದಲನೆಯ ಭಾಗ ಕಾಲನ ವ್ಯಾಪ್ತಿಯ ಹಲವು ಹತ್ತು ಬಗೆಯನ್ನು ವಿವರಿಸುತ್ತದೆ. ಎರಡನೆಯ ಭಾಗ,

ವರ್ತನೆಯ ನರ್ತನಕೆ ಪರಿವರ್ತನೆಯ ಸೊಬಗು

ಎಂಬ ಸ್ಥಾಯೀ ಭಾವದ ಸುತ್ತ ಹೆಣೆದ ರೂಪಕಗಳಿಂದ ಸಮೃದ್ಧವಾಗಿದೆ. ಆದರೆ ಕವಿತೆ ಅಲ್ಲಿಗೇ ನಿಲ್ಲುವುದಿಲ್ಲ. ಕವನದ ಆರಂಭದಲ್ಲಿ ತೊಡಗಿದ 'ಹಿಡಿಯಿರೋ ಅವನ... ಎಂಬ ಸವಾಲು, ತನ್ನದೇ ಆದ ಕಾವ್ಯಾತ್ಮಕವಾದ ತಿರುವನ್ನು ಪಡೆದು

'ನಿಂತವರಿಗೂ ಉಂಟು ನೋಡಿ ಸಂತಸಪಡುವ ಭಾಗ್ಯ.'

ಎಂಬ ನಿಲುಗಡೆ ತಲಪುತ್ತದೆ. ಮೊದಲಿನ ಸವಾಲಿನ, ಮನೋಭಾವ ಹೇಗೆ ಬದಲಾಗಿದೆ ಎಂಬುದನ್ನು ಗಮನಿಸುವ ದಿಕ್ಕಿನಲ್ಲಿ 'ಪಂದ್ಯಾಟ' ಎಂಬ ಮಾತನ್ನು ವಿಶೇಷವಾಗಿ ಲಕ್ಷಿಸ ಬೇಕು, ಅಲ್ಲದೆ 'ಪಂದ್ಯಾಟ'ವಾದದ್ದರಿಂದಲೇ, ಇಲ್ಲಿ ಆಡುವವರಿಗಷ್ಟೇ ಅಲ್ಲದೆ, ನೋಡು ವವರಿಗೂ ಜಾಗವಿದೆ.

ಕವಿತೆ ಆರಂಭವಾದದ್ದೇ ಕಾಲವನ್ನು ಸೆರೆಹಿಡಿದು ನಿಲ್ಲಿಸಬೇಕೆಂಬ ಧೋರಣೆಯಿಂದ, ಕವನದ ಕೊನೆಯ ಸಾಲುಗಳಲ್ಲಿ ಆ ಧೋರಣೆ ಮಾಯವಾಗಿ, ಒಂದು ಬಗೆಯ ಒಪ್ಪಂದ ಮನೋಭಾವ ವ್ಯಕ್ತವಾಗುತ್ತದೆ. ಇಲ್ಲಿನ ಪ್ರಕಾರ, ನೋಡುವವರಿಗೆ 'ಸಂತಸಪಡುವ ಭಾಗ್ಯ'ವಷ್ಟೇ ಅಂತಿಮವಾದ ತೀರ್ಮಾನವಲ್ಲ. ಸೋತರೆ ಇನ್ನೂ ಹೆಚ್ಚಿನ ಪಾರಿತೋಷಕ ಇದೆ--

ಸೋತವರ ಸೊತ್ತು
ಗೆದ್ದವರನಳೆವ ಜಗದೆಲ್ಲ ಅನುಭವದ ಪಾಲು.

ಈ ತೀರ್ಮಾನಕ್ಕೆ ಕವಿ ಬರುವುದು, ಸ್ವಂತ ಮುಲಾಜಿನಿಂದಲ್ಲ. ಕವಿಯ ಪಾಲಿಗೆ ಇದೊಂದು ಸಾರ್ವತ್ರಿಕ ಅನುಭವ; ಸಾರ್ವತ್ರಿಕ ಅಭಿಪ್ರಾಯದ ಮೇಲೆ ರೂಪಿತವಾದದ್ದೂ ಸಹ, ಅಲ್ಲದೆ ಮೊದಲಿನ ಬೆಳಕು ಕತ್ತಲಿನ ದ್ವಿಧಾವೃತ್ತಿಯನ್ನು ಪ್ರತಿಬಿಂಬಿಸುವ ಹಗಲಿರುಳುಗಳು ಇಲ್ಲಿ ಗಾಲಿಗಳಾಗಿ, ಸಮತೋಲನವನ್ನು ಸಾಧಿಸುವ ಸಾಧನವಾಗಿವೆ ; ಮೇಲಾಗಿ ಈ ಗಾಲಿಗಳಿಗೆ ಸೋಲು ಗೆಲುವುಗಳು ಕೀಲುಗಳಾಗಿವೆಯೇ ಹೊರತು, ಗುರಿ ಆಗಿಲ್ಲ. ಆದ್ದರಿಂದಲೇ ಈ ಕಾಲನೊಂದಿಗಿನ ಓಟದ (ಅವನನ್ನು ಹಿಡಿಯಲು ಬೆಂಬತ್ತುವ ಪ್ರಯತ್ನದಲ್ಲಿ) ಪಂದ್ಯದಲ್ಲಿ ಸೋಲುಗೆಲವುಗಳಿಗೆ ಮೀರಿದ, ಓಡುವುದರಲ್ಲೇ ಸಾತತ್ಯ ಪಡೆಯುವ ಗುರಿಯೊಂದನ್ನು ಕವಿ ಕಂಡುಕೊಂಡಿದ್ದಾನೆ. ಈ ಬಗೆಯ ಬದಲಾವಣೆಯ ಹಿಂದಿನ ಮೂಲಭೂತ ತುಡಿತ—

ವರ್ತನೆಯ ನರ್ತನಕೆ ಪರಿವರ್ತನೆಯ ಸೊಬಗು

೨

ಎರಡನೆಯ ಭಾಗ ಪ್ರಾರಂಭವಾಗುವುದೇ 'ಸೂರ್ಯ ಚಂದ್ರರ ಸುಪರಿಚಿತ ಮೋರೆ'ಯ ಪ್ರಸ್ತಾಪದಿಂದ, ಈ 'ಅಮಾನವ' ಪ್ರಪಂಚ ಅರ್ಥವಾಗುವುದು ನಮ್ಮ ಪ್ರಪಂಚದ ಮೇಲೆ ಅದು ಉಂಟುಮಾಡುವ ಪರಿಣಾಮದಿಂದ. ಈ ಪರಿಣಾಮ

ಉಂಟಾಗುವುದಾದರೂ, ಇಬ್ಬರಿಗೂ ಸಹಜಗುಣವಾಗಿರುವ 'ತಿರುಗುವಿಕೆಯಿಂದ'. ಈ 'ತಿರುಗುವುದೊಂದೇ' ಇಬ್ಬರ 'ಹೋರೆ'ಯನ್ನೂ ನಿರ್ಧಾರವಮಾಡುವುದು.

ಕವಿ. ಈ ಮಾನವ ಮತ್ತು ಅಮಾನವ ಪ್ರಪಂಚವನ್ನು ಎರಡು ಬೇರೆ ಬೇರೆ ಜಗತ್ತುಗಳೆಂದೇ ನೋಡುತ್ತಾನೆ—

ಆಗೀಗ ಈಚೆಯದಡಕ್ಕು ಹಾಯುವುದು ಬೆಳಕಿನ ತೆರೆ.

ಇಲ್ಲಿನ 'ಹಸಿರು ಸಂಸಾರ'ದೊಂದಿಗೂ ನಮಗೆ 'ನಿತ್ಯ ಹೊಕ್ಕು ಬಳಕೆ' ಎನ್ನುವಾಗ, ಮತ್ತೆ ಮಾನವ ಹಾಗೂ ಪ್ರಕೃತಿ ಪ್ರಪಂಚಗಳು ಬೇರೆ ಎಂಬುವ ಅಂಶ ಧ್ವನಿಸುತ್ತದೆ. ಮೊದಲ ಪ್ಯಾರಾದ ಕೊನೆಗೆ ಬರುವ ಹೊತ್ತಿಗೆ ನಮಗೆ ವ್ಯಕ್ತವಾಗುವುದು. ಪ್ರಕೃತಿಯ ವಿವಿಧ ಅಂಗಗಳ ನಡುವಣ ಸಾಮರಸ್ಯ.

ಎರಡನೆಯ ಪ್ಯಾರಾದಲ್ಲಿ 'ಹೌದು ನಾವೆಲ್ಲ ಹೊಸಬರೆ :' ಎಂಬ ಹೊಸ ಬೆಳವಣಿಗೆ ಯೊಂದು ಕಾಣಿಸುತ್ತದೆ.

'ಎದುರಿಗಿದ್ದದ್ದೆಲ್ಲ ಅದಲು ಬದಲು ಕಂಚೀ ಬದಲು
ಹುಡುಕುತ್ತಿದ್ದೇವೆ ಕಣ್ಮುಚ್ಚಿ : ಇವರ ಬಿಟ್ಟವರಾರು ?'

ಇದೊಂದು ಮೂಲಭೂತ ಪ್ರಶ್ನೆ. ಜೀವನಾದ್ಯಂತ ಒಬ್ಬರನ್ನೊಬ್ಬರು ಅರ್ಥ ಮಾಡಿಕೊಳ್ಳಲು ಯತ್ನಿಸುವುದೇ, ಬದುಕನ್ನು ಅರ್ಥೈಸಲೆಳಸುವ ಹಾದಿಯಲ್ಲಿ ದೊಡ್ಡ ಘಟ್ಟ. 'ಮಾನವ-ಅಮಾನವ', 'ಮಾನವ-ಪ್ರಕೃತಿ' ಮತ್ತು 'ಮಾನವ-ಮಾನವ'ಗಳ ನಡುವಿನ ಸಂಬಂಧದ ಪ್ರಶ್ನೆ ಕಾಲದ ಸಮಸ್ಯೆಯೊಂದಿಗೇ ಅಭೇದ್ಯವಾಗಿರುವುದು, ಒಟ್ಟು ಕವನದ ಧೋರಣೆಯನ್ನು ಸಾಬೀತುಗೊಳಿಸುವಲ್ಲಿ ನೆರವಾಗಿದೆ.

ಮುಂದಿನ ಪ್ಯಾರಾ ಬದುಕಿನ ವಿವಿಧ ಚಟುವಟಿಕೆಗಳ ವರ್ಣನೆ ಮಾಡುತ್ತಾ ಹೋಗುತ್ತದೆ. ಆದರೆ ಕವನಕ್ಕೆ ಹೊಸ ಕಸುವು ಬರುವುದು, ನಾಲ್ಕನೆಯ ಪಾರ್‍ಯಾದ

ವರ್ತನೆಯ ನರ್ತನಕೆ ಪರಿವರ್ತನೆಯ ಸೊಬಗು

ಎಂಬ ಮಾತಿನಿಂದ ವರ್ತನೆ ಎಂಬ ಮಾತಿಗೆ ನಡವಳಿಕೆ ಎಂಬ ಅರ್ಥವಲ್ಲದೆ, ನಿತ್ಯದ ವ್ಯವಹಾರ ಎಂಬ ಅರ್ಥವೂ ಹಳೆಯ ಮೈಸೂರು ಭಾಷೆಯಲ್ಲಿದೆ, ಕವಿ, ಪರಿವರ್ತನೆ ಯನ್ನು ಸಮರ್ಥಿಸುವಲ್ಲಿ ಕನ್ನಡ ಸಾಹಿತ್ಯ ನಡೆದು ಬಂದ ವಿವಿಧ ಘಟ್ಟಗಳನ್ನು ಸೂಚ್ಯ ವಾಗಿ ಬಳಸಿಕೊಂಡಿದ್ದಾನೆ. ಆದರೆ ಜೀವನದ ಪಾಕ ಸಿದ್ಧಗೊಳ್ಳುವ ಬಗ್ಗೆ ಹೇಳಿರುವ

ಕುದ್ದು ಹಣ್ಣಾಗುವುದು ನೂರು ಅನುಭವದ ನವ್ಯಪಾಕ,

ಎಂಬ ಮಾತು ಹೆಚ್ಚು ಅರ್ಥಪೂರ್ಣವಾಗಿದೆ. ಹಾಗೆಯೇ ಮುಂದಿನ ಪ್ಯಾರಾದ-

ರೂಢಿಯಾಗಿದೆ ಒಬ್ಬೊಬ್ಬರಿಗೂ ಒಂದೊಂದು ಬಗೆಯ ನಡಿಗೆ.
ಮುಖ್ಯಬೇಕಾದದ್ದು ಜೀವಂತ ಗತಿ, ಹೊಸನೆತ್ತರಿನ ಕೊಡುಗೆ.

ಆದರೂ ಇವೆಲ್ಲ ಕೇವಲ ಉಪಮಾನ ಭರಿತ ವಿವರಣೆ; ಪ್ರತಿಮಾ ಬದ್ಧ ನಿರೂಪಣೆ. ಕವಿತೆ ಮತ್ತೊಮ್ಮೆ ತಾತ್ವಿಕ ಮಟ್ಟಕ್ಕೆ ಏರುವುದು ಕೊನೆಯ ಪ್ಯಾರಾದಲ್ಲಿ. ಇಲ್ಲಿನ,

'ಕಾಲ ನಿಲ್ಲುವುದಿಲ್ಲ, ನಾವು ಕೂಡುವುದಿಲ್ಲ'

ಎಂಬ ಹೇಳಿಕೆ 'ಹಿಡಿಯಿರೋ ಅವನ...ಎಂಬ ಮೊದಲ ಸವಾಲಿನ ಅರ್ಭಟ ನೀರಾಗಿ ಕರಗಿ ಹೋಗಿರುವುದನ್ನು ಧ್ವನಿಸುತ್ತದೆ. ಕಾಲದೆದುರು ಸೆಣಸುವುದು ಲಾಭ ದಾಯಕವಲ್ಲ ಎನಿಸಿದರೂ, ಮನುಷ್ಯ ಸುಮ್ಮನೆ ಕೂಡುವುದಿಲ್ಲ ಎನ್ನುವುದು ಅವನ ಹೋರಾಟದ ಗುಣವನ್ನು ತೋರಿಸುತ್ತದೆ. ಹೀಗೆ ಕವಿತೆ, ಒಂದರ್ಥದಲ್ಲಿ, ಹೊರಟ ಜಾಗಕ್ಕೇ ಮರಳಿ ಬರುತ್ತದೆ.

ಇಡೀ ಕವಿತೆಯನ್ನು ಇನ್ನೊಮ್ಮೆ ಗಮನಿಸಿದಾಗ, ಈ ಕೆಲವು ಅಂಶಗಳು ಹೊರ ಬೀಳುತ್ತವೆ.

1 ಕಾಲವನ್ನು ತಾತ್ವಿಕ ದೃಷ್ಟಿಯಿಂದ ನೋಡುವುದರಲ್ಲಿ ಕವಿ ಆಸಕ್ತಿ ಹೊಂದಿದ್ದರೂ, ಇಡೀ ಕವನದಲ್ಲಿ ಅದೊಂದೇ ಮುಖ್ಯವಾದ ಅಂಶವಾಗಿಲ್ಲ.

2 ಕಾಲವನ್ನು ಬದುಕಿಗೆ ಅನ್ವಯಿಸಿ ನೋಡುವಾಗ ಕವಿ, ಕಾಲ ಮತ್ತು ಬದುಕುಗಳ ದ್ವಂದ್ವವನ್ನು ವಿವಿಧ ಮಟ್ಟಗಳಲ್ಲಿ ಗ್ರಹಿಸುತ್ತಾನೆ.

3 ಕಾಲನೊಂದಿಗೆ ಸೆಣಸುವುದು ಅಸಾಧ್ಯವಲ್ಲವಾದರೂ, ಕಾಲನೊಂದಿಗಿನ ಸೆಣಸಾಟದಲ್ಲಿ ಮನುಷ್ಯ ತಕ್ಕಮಿತಿಯನ್ನು ಅರಿತುಕೊಳ್ಳಬೇಕಾಗಿದೆ.

4 ಕಾಲದ ಬಗೆಗಿನ ವಿವೇಚನೆ, ಮಾನವಜೀವನದ ಬಗೆಗಿನ ವಿವೇಚನೆ ಬೇರೆ ಬೇರೆಯಾಗಿರಲು ಸಾಧ್ಯವಿಲ್ಲ—ಎರಡೂ ಒಂದರಲ್ಲಿ ಒಂದು ಮಿಳಿತವಾಗಿವೆ.

5 ರೂಪಕ ಸಮೃದ್ಧವಾದ ಭಾಷೆಯನ್ನು ಬಳಸುವ ಗೀಳಿನಲ್ಲಿ, ಕೆಲವೊಮ್ಮೆ ಕವಿ ಮೈಮರೆತಿರುವುದುಂಟು :

"ಬಗಲಗಸೆ ಅಂಗಿಯಿಂದ ಬುಶ್‌ಕೋಟಿನವರೆಗು
ತೊಟ್ಟು ಕಳಚಿದ್ದೇವೆ'.

ಹಾಗೆಯೇ

'(ಕದ ತಿನ್ನುವವಗೆ ಹಪ್ಪಳ ಈಡೆ ?)' ಇತ್ಯಾದಿ ಇತ್ಯಾದಿ.

6 ಕವಿತೆಯ ಸಾವಯವ ಹಾಗೂ ಸಮಗ್ರ ಶಿಲ್ಪದ ದೃಷ್ಟಿಯಿಂದ ಕವಿತೆಯಲ್ಲಿ ಬೆಳವಣಿಗೆಯ ಅಂಶಗಳು ಹೆಚ್ಚಾಗಿಲ್ಲ.

7 ಕಾಲದಂತಹ ಅಮೂರ್ತ ಕಲ್ಪನೆಯನ್ನು ಅವಲಂಬಿಸಿ ಬರೆದ ಕವಿತೆ ಯಾದರೂ, ಕವಿತೆಯ ವ್ಯಾಪ್ತಿ ದೈನಂದಿನ ಚಟುವಟಿಕೆಗಳನ್ನೂ ಒಳಗೊಂಡಿದೆ.

8 ವ್ಯಂಗ್ಯ ಮತ್ತು ಕಟಕಿಗಳಿಂದ ಮುಕ್ತವಾದ ಮೊದಮೊದಲ ನವ್ಯಕವಿತೆಗಳಲ್ಲಿ 'ಕಾಲ ನಿಲ್ಲುವುದಿಲ್ಲ' ಒಂದಾಗಿದೆ.

9 ಕಣವಿಯವರ ಅನೇಕ ಮುಖ್ಯ ಕವಿತೆಗಳಂತೆ ಇದೂ ಸಹ ಮಾನವ-ಅಮಾನವ ಲೋಕಗಳ ನಡುವೆ ಕುರಿತ ಚಿಂತನೆ ಇಲ್ಲಿಯೂ ಹಾದು ಬಂದಿದೆ.

10 ಕವಿತೆ ಸ್ವಯಂಪೂರ್ಣವಾಗಿದ್ದರೂ, ಕಣವಿಯವರ ಕಾವ್ಯಜೀವನದ ಪ್ರಮುಖ ಘಟ್ಟಕ್ಕೆ ಸೇರಿದೆ. ಆದ್ದರಿಂದಲೇ ಅಭ್ಯಾಸ ಯೋಗ್ಯವಾಗಿದೆ.

ಎಂ. ವಿ. ಸೀತಾರಾಮಯ್ಯ

# ನಗರದಲ್ಲಿ ನೆರಳು

'ಮಣ್ಣಿನ ಮೆರವಣಿಗೆ' ಕವಿತಾ ಸಂಕಲನದಲ್ಲಿ ನವ್ಯ ವಿಧಾನದ ಕಾವ್ಯರಚನೆಯ ಕಡೆಗೆ ಹೊರಳಿದ ಚೆನ್ನವೀರ ಕಣವಿಯವರು, "ಯಾವ ಸಂದರ್ಭದಲ್ಲಿಯೂ ಕಾವ್ಯ ಸಾಮಾನ್ಯ ಜನತೆಯಿಂದ ತೀರ ದೂರ ಉಳಿಯಬಾರದೆಂಬ ಅಪೇಕ್ಷೆ ನನ್ನದಾಗಿದೆ" ಎಂದು ಹೇಳಿರುವ ಮಾತು [1]ಗಮನಾರ್ಹ. ಈ ವರೆಗೆ ಅವರು ಪ್ರಕಟಿಸಿರುವ ಒಂಬತ್ತು ಕವನ ಸಂಕಲನಗಳಿಂದ ಆಯ್ದು ಸಿದ್ಧಪಡಿಸಿ ಈಚೆಗೆ (1975) ಪ್ರಕಟವಾಗಿರುವ 'ಚಿರಂತನದಾಹ'ದ ಕವನಗಳನ್ನು ಓದಿಕೊಂಡು 'ಅವರ ಕಾವ್ಯ ನಡೆದುಬಂದ ದಾರಿ'ಯನ್ನು ಕಂಡುಕೊಂಡವರಿಗೆ, 'ಸಾಮಾನ್ಯ ಜನತೆಯಿಂದ ತೀರ ದೂರ ಉಳಿಯಬಾರದು' ಎಂದರೆ 'ಕೂಡಿದ ಮಟ್ಟಿಗೂ ಸಾಮಾನ್ಯ ಜನಕ್ಕೆ ಸಮೀಪವಾಗಿರಬೇಕು' ಎಂಬ ಅವರ 'ಅಪೇಕ್ಷೆ',– ಸದಾಶಯ, – 'ಚಿರಂತನದಾಹ' ಸಂಕಲನ ಕಾಲದಲ್ಲಿ ಅವರಿಗೆ ತಟ್ಟನೆ ಹುಟ್ಟಿದ್ದಲ್ಲ, ಅವರ ಪ್ರಥಮ ಸಂಕಲನ 'ಕಾವ್ಯಾಕ್ಷಿ'ಯ (1949) ಕಾಲದಿಂದಲೂ ಅವರನ್ನು ಕಾವ್ಯಮಾರ್ಗ ದಲ್ಲಿ ಸರಿಯಾಗಿ ನಡೆಸಿಕೊಂಡು ಬಂದಿದೆ ಎಂಬುದು ಗೊತ್ತಾಗುತ್ತದೆ. 'ತೀರ ದೂರ' ಎಂಬ ಕಣವಿಯವರ ಎಚ್ಚರಿಕೆಯ ಮಾತನ್ನು ಗಮನಿಸಬೇಕು. ಕೆಲವೊಮ್ಮೆ ಎಲ್ಲ ಕಾಲದ ಯಾವ ಕವಿಯ ಕಾವ್ಯವೂ 'ಸಾಮಾನ್ಯ ಜನತೆ'ಯಿಂದ ಸ್ವಲ್ಪವಾದರೂ ದೂರ ಉಳಿಯ ತಕ್ಕದ್ದೆ. ಅತ್ಯಂತ ಜನಪ್ರಿಯ ಕವಿಯಾದ, 'ಜಂಗಮ ಜನಾರ್ದನ' (=ಜನತಾ ಜನಾ ರ್ದನ) ರಿಗಾಗಿಯೆ ಬರೆದ ಕುಮಾರವ್ಯಾಸ ಭಾರತದ ಎಲ್ಲ ಕಾವ್ಯಾರ್ಥ ವಿಶೇಷಗಳೂ ಸಾಮಾನ್ಯ ಜನಕ್ಕೆ ಎಟಕಿಬಿಡುತ್ತದೆ ಎನ್ನುವವರಿಗೆ ಆ ಕಾವ್ಯದ ಕಥೆಗೂ ಕಾವ್ಯಮಯ ಸನ್ನಿವೇಶ–ಸಂದರ್ಭಗಳಿಗೂ ಇರುವ ವ್ಯತ್ಯಾಸ ಗೊತ್ತಿಲ್ಲ ಎನ್ನಬೇಕಾಗುತ್ತದೆ. ಈ ನಿಟ್ಟಿ ನಿಂದ ವಿವೇಚಿಸಿದಾಗ, ನವೋದಯ ಕಾವ್ಯ ಜನಸಾಮಾನ್ಯಕ್ಕೆ ಹತ್ತಿರವಾಗಿದ್ದಷ್ಟು ನವ್ಯ ಕಾವ್ಯ ಹತ್ತಿರವಾಗಲಿಲ್ಲ–ಕಾವ್ಯಭಾಷೆ ಆಡುನುಡಿಗೆ, ಅದರ ಲಯಕ್ಕೆ, ಸಮೀಪವಾಗಿದ್ದೂ ಕೂಡ. (ಜನಸಾಮಾನ್ಯ ಎನ್ನುವ ಮಾತಿನ, ಆಡುನುಡಿ ಎನ್ನುವುದರ, ವ್ಯಾಖ್ಯೆಯೂ ತೊಡಕಿನದೆ. ಅದರ ಗೊಡವೆ ಇಲ್ಲಿ ಬೇಡ.) ಹತ್ತಿರವಾಗಲಿಲ್ಲ ಏನು, ತಂತ್ರ ಸಂಕೀರ್ಣ ತೆಯ ಮುಳ್ಳು ಬೇಲಿ ಕಟ್ಟಿಕೊಂಡು ('ಅಸಡ್ಡಾಳ ಮುಳ್ಳು ಬೇಲಿಯ ಮೇಲೆ' ಬಿದ್ದ ನೆರಳು ಅನುಪಭೋಗ್ಯವಾಗುವಂತೆ) ಅಸ್ಪಷ್ಟತೆಯ ಕತ್ತಲು ಗವಿಯಲ್ಲಿ ಏಕಾಂತ ಸುಖಾ ವಾಸದಲ್ಲಿಯೇ ತೃಪ್ತವಾಗಿತ್ತು. ನವ್ಯಕಾವ್ಯದ ತಂತ್ರವನ್ನು ತಮ್ಮ ಕಾವ್ಯಾಭಿವ್ಯಕ್ತಿಗೆ

---

* 'ಚಿರಂತನದಾಹ', ಮುನ್ನುಡಿ

ಆಳವಡಿಸಿಕೊಂಡ ಕಣವಿಯವರು ತಮ್ಮ 'ಅಪೇಕ್ಷೆ'ಗೆ ಭಂಗಬಾರದ ರೀತಿಯಲ್ಲಿ, ತಂತ್ರ ದಾಸರಾಗದೆ, ನವೋದಯ ಕಾವ್ಯವಿಧಾನದ ಒಳ್ಳೆಯ ಅಂಶಗಳನ್ನು ಉಳಿಸಿಕೊಂಡು, ನವ್ಯ ತಂತ್ರವನ್ನು ಹಾಳತವಾಗಿ ಬಳಸಿಕೊಂಡರು. ಅಲ್ಲದೆ, ತಮಗೆ ಹಾಗೆನ್ನಿಸಿದಾಗ, ಪೂರ್ತಿ ಯಾಗಿ ನವೋದಯ ಕಾವ್ಯದ ರೀತಿಯಲ್ಲಿಯೂ ಕಾವ್ಯರಚನೆ ಮಾಡುತ್ತ ಬಂದರು, ಬಂದಿದ್ದಾರೆ. ('ನಗರದಲ್ಲಿ ನೆರಳು' ಸಂಕಲನದ 'ಗುಬ್ಬಿ', 'ಕೊಡೆ', 'ವಿನಾಯಕರಿಗೆ ವಂದನೆ' ಇವುಗಳಲ್ಲಿ ನವೋದಯದ ಸರಕು ಬಹ್ವಂಶದಲ್ಲಿದೆ). ಅವರ ಸಾನೆಟ್ಟುಗಳೆಲ್ಲವೂ ('ವಿನಾಯಕರಿಗೆ ವಂದನೆ' ಸಾನೆಟ್ಟು ಅತ್ಯಂತ ಈಚಿನದು) ನವೋದಯದ ರೀತಿಯಲ್ಲೇ ರಚಿತವಾದವು. ವಿಪುಲ ಸಂಖ್ಯೆಯಲ್ಲಿ ಸಾನೆಟ್ಟುಗಳನ್ನು ಬರೆದಿರುವ ಮಾಸ್ತಿ, ಕುವೆಂಪು, ಪೈ, ಬೇಂದ್ರೆ, ಪು.ತಿ.ನ., ಮುಂತಾದವರ ಪಂಕ್ತಿಯಲ್ಲಿ ಕಣವಿಯವರೂ ಹೆಗಲೆಣೆಯಾಗಿ ನಿಲ್ಲತಕ್ಕವರು. ನವ್ಯಕವಿ ಎನ್ನಿಸಿಕೊಂಡ ಬೇರಾವ ಪ್ರಮುಖ ಕವಿಯೂ ಇವರಂತೆ ಸಾನೆಟ್ ರಚನೆಯನ್ನು 'ಸತತಾಭ್ಯಾಸ ಪ್ರಯತ್ನ'ವಾಗಿ ಕೈಗೊಂಡು ಸಿದ್ಧಿಪಡೆದಿಲ್ಲ. ಪಾಶ್ಚಾತ್ಯ ನವ್ಯಪ್ರಕಾರದ ಆದ್ಯ ಪ್ರವರ್ತಕರಲ್ಲಿ ಒಬ್ಬನೆಂದು ಪರಿಗಣಿತನಾದ Gerald Manley Hopkinsನ ಮಾದರಿಯಿದ್ದೂ[2] ಕನ್ನಡದ ನವ್ಯಕವಿಗಳು ಸಾನೆಟ್ ರಚನೆಯ ಕಡೆಗೆ ದೃಷ್ಟಿ ಹಾಯಿಸದಿದ್ದುದು ಸೋಜಿಗವಾಗಿಯೇ ಕಾಣುತ್ತಿದೆ. ನವೋದಯದ ನೆರಳಿನಲ್ಲಿಯೇ ತಮ್ಮ ನವ್ಯ ಮಾರ್ಗವನ್ನು ರೂಪಿಸಿಕೊಂಡ ಕಣವಿಯವರು 'ಕಾವ್ಯಾಕ್ಷಿ'ಯ ಕಾಲದಿಂದ ತೊಡಗಿ ಇತ್ತೀಚಿನ 'ನಗರದ ನೆರಳು' ವರೆಗೆ ಸಾನೆಟ್‌ಗಳನ್ನು ಅತ್ಯಂತ ಯಶಸ್ವಿಯಾಗಿ ರಚಿಸುತ್ತ ಬಂದಿದ್ದಾರೆ. ಸಾನೆಟ್ ರಚನೆಗೆ ಅತ್ಯಗತ್ಯವಾದ ಶಬ್ದಶಿಲ್ಪಸಂಯಮ ಅವರ ನವ್ಯ ರಚನೆಗಳಲ್ಲಿ ಕಂಡೂ ಕಾಣದಂತೆ ಕ್ರಿಯಾಶೀಲವಾಗಿದೆ ಎನ್ನಿಸುತ್ತದೆ. ಸಾನೆಟ್ಟಿನ ಸಾವಯವ ಶಿಲ್ಪದಲ್ಲಿ ಕಂಡುಬರುವ ಸಮವಾಯಸಿದ್ಧಿ ಇವರ ಹಲವು ನವ್ಯರಚನೆಗಳಲ್ಲಿ ಗೋಚರವಾಗುತ್ತದೆ. ಈ ಕಾರಣದಿಂದ, Eliot ಅವರ ನವ್ಯಕಾವ್ಯತಂತ್ರ ಪ್ರಣಾಳಿಕೆಯಿಂದ ಕನ್ನಡದ ನವ್ಯಕಾವ್ಯ ಸ್ವೀಕರಿಸಿದ 'ಪ್ರತಿವಸ್ತು ರೂಪ'ಗಳ (Objective Correlatives) [3]ಸಂಕೀರ್ಣ ಯೋಜನೆ ಇತರ ಪ್ರಮುಖ

---

2 'ಮುಗಿಯದ ಮಾಯೆ' (–ರಾಘವ ಸಂಕಲನದಲ್ಲಿ ಹಾಪ್‌ಕಿನ್ಸ್‌ನ The baged Skylark ('ಪಂಜರದ ಬಾನಾಡಿ') ಮತ್ತು God's Grandeur ('ದೇವವೈಭವ') ಎಂಬ ಎರಡು ಸಾನೆಟ್ಟುಗಳ ಅನುವಾದವನ್ನು ಸಹೃದಯರು ಗಮನಿಸಿರಬಹುದು.

3 ಭಾರತೀಯ ಲಾಕ್ಷಣಿಕರು ಹೇಳಿರುವ ದೃಷ್ಟಾಂತಾಲಂಕಾರದ ಛಾಯೆಯನ್ನು ಇದರಲ್ಲಿ ಗುರುತಿಸಬಹುದು. ದೃಷ್ಟಾಂತಾಲಂಕಾರದಲ್ಲಿ ಬಿಂಬ-ಪ್ರತಿ ಬಿಂಬ ಭಾವವಿರುತ್ತದೆ. ಬಿಂಬ ಎಂದರೆ Image, ಪ್ರತಿಮೆ, ಎಂದೇ ತಾತ್ಪರ್ಯವಾಗುತ್ತದೆ. ನವ್ಯಕಾವ್ಯ ಪ್ರತಿ ವಸ್ತು ರೂಪಗಳೂ ಪ್ರತಿ ಬಿಂಬಗಳೇ. ಕವಿ ಭಾವದ ಬಿಂಬ ಪ್ರತಿ ಬಿಂಬಗಳ ಸರಣಿಯಿಂದ ಪ್ರತೀಯಮಾನವಾಗ ಬೇಕು; ಅದು ವಾಚ್ಯವಲ್ಲ, ಧ್ವನಿತ. ದೃಷ್ಟಾಂತಾಲಂಕಾರದಲ್ಲಿ ಬಿಂಬ–ಪ್ರತಿಬಿಂಬ ಭಾವ ಸ್ಪಷ್ಟಗೋಚರ; 'ಪ್ರತಿ ವಸ್ತು ರೂಪ'ದಲ್ಲಿ ಅಂತರ್ನಿಹಿತ. ಎರಡರಲ್ಲಿಯೂ ಬಿಂಬ—ಪ್ರತಿ ಬಿಂಬಗಳು ಸಂಬದ್ಧವಾಗಿರುತ್ತವೆ. correlative ಪದದ ಸಾರ್ಥಕ್ಯವೇ ಇದು. objective correlative ಎನ್ನುವುದಕ್ಕೆ 'ಸಂಬಂದ ಪ್ರತಿ ಬಿಂಬ' ಎಂದಿರಿಸಿ ಕೊಳ್ಳುವುದು ಮೇಲೇನೊ. ಸಂಬದ್ಧತೆ ದುರ್ಗ್ರಾಹ್ಯವಾದಾಗ, ಪ್ರತಿಬಿಂಬಗಳು (ಪ್ರತಿವಸ್ತುಗಳು) ಮೃತಜರಾಸಂಧನ ಅವಯವಗಳಂತೆ ಅಸ್ತವ್ಯಸ್ತವಾಗಿ ತೋರಿಬರುತ್ತವೆ.

ನವ್ಯಕವಿಗಳ ರಚನೆಗಳಲ್ಲಿ ಅಸಂಬದ್ಧವಾಗಿರುವಂತೆ ಕಂಡುಬರುವಲ್ಲಿ, ಕಣವಿಯವರ ರಚನೆಗಳಲ್ಲಿ ಪ್ರತಿವಸ್ತು ರೂಪಗಳ ಸುಬದ್ಧ ಪ್ರತಿಬಿಂಬಗಳ ವಿನ್ಯಾಸ ಬಲುಮಟ್ಟಿಗೆ ಸುಸ್ಪಷ್ಟ ಸಂಬದ್ಧತೆಯ ಚೌಕಟ್ಟಿನಲ್ಲಿ ಕಾವ್ಯಾರ್ಥದ (ಮೂಲಬಿಂಬದ) ಸುಲಭ ದರ್ಶನಕ್ಕೆ ತಟ್ಟನೆಯಲ್ಲದಿದ್ದರೂ ಸರಾಗವಾಗಿ ಕದ ತೆರೆದು ಕೊಡುತ್ತದೆ. ಕಣವಿಯವರ ಈ ವಿಶಿಷ್ಟ ಕಾವ್ಯ ಶೈಲಿಯನ್ನು ಕೆಲವು ವಿಮರ್ಶಕರು ನವೋದಯ–ನವ್ಯಗಳ ಸಮನ್ವಯ ಮಾರ್ಗ ಎಂದು ನಿರ್ದೇಶಿಸಿದ್ದಾರೆ. ಈ ಸಮನ್ವಯ ಕೇವಲ ತಂತ್ರಕ್ಕೆ ಮಾತ್ರ ಸೀಮಿತವಾಗಿರದೆ, ಅವರ ಮನೋಧರ್ಮಕ್ಕೂ ಚಾಚಿಕೊಂಡಿದೆ ಎಂದು ಹೇಳಬಹುದು.

ಚೆನ್ನವೀರ ಕಣವಿಯವರ ಹಲವು ಕವನಗಳನ್ನು ಓದಿ ಮೆಚ್ಚಿಕೊಂಡಮೇಲೆ, ಅವುಗಳಲ್ಲಿ ನಾನು ಕಂಡುಕೊಂಡ ಅವರ ಕಾವ್ಯ ಶೈಲಿಯ ಪ್ರಮುಖ ಲಕ್ಷಣದ ಕೆಲವು ವಿವರಗಳು ಅವರ 'ನಗರದಲ್ಲಿ ನೆರಳು' ಎಂಬ ಕವನದಲ್ಲಿ ಹೇಗೆ ಮೂಡಿ ಬಂದಿವೆ ಎಂಬುದನ್ನು ಬಿಡಿಸಿ ತೋರಿಸುವುದು ಈ 'ಉಡುಗೊರೆ ಬರಹ'ದ ಆಶಯ.

ಕವನವನ್ನು ಓದುತ್ತ ಓದುತ್ತ, ಸಮ–ವಿಷಮ ಲಯಗಳ ಹಿತವಾದ ಮಿಶ್ರಣದ ಬಳಕೆ; ಕಾದು–ಅದೂ, ಮೈಚಾಚಿ–ಕೈಚಾಚಿ, (ಬಳ್ಳಿ)ಗಳು–(ನೆ)ರಳು, (ಟಾರು)ರೋಡು–(ನೂರೆಂಟು)ಕೋಡು–(ದಾರಿ ಹಿಡಿದವರ) ಪಾಡು, ಇಂಥ ದುಂದುಗಾರಿಕೆ ಎನಿಸದ ಅಂತ್ಯಪ್ರಾಸ, ಹಾಗೂ ಸದ್ಯದ ಒಡಲಲ್ಲಿ ಅಪ್ರಯಾಸವಾಗಿ ಎಡೆಮಾಡಿಕೊಂಡಿರುವ 'ಹಾಯಿಸಿಕೊಂಡು–ದಬಾಯಿಸಿಕೊಂಡು–ನಿಭಾಯಿಸಿಕೊಳ್ಳುವ', 'ನಕ್ಕಿದ್ದು–ಉಕ್ಕಿದು', 'ಸುತ್ತು (ಬಳಸುವ)–ಕತ್ತು (ಹೊರಳಿಸುವ)–ಕುತ್ತು ಒಡ್ಡುವ'. ಈ ಮಧ್ಯ–ಯಮಕಗಳು; ಬಳಕೆಯ ಮಾತೇ ಪ್ರಯೋಗವಾಗಿದ್ದರೂ ನವೋದಯ ಕಾವ್ಯಭಾಷೆಯ ಲಾಲಿತ್ಯದ ಸಂಸ್ಕಾರದ ಗಂಧಲೇಪ; ಕಾವ್ಯ ಶರೀರಕ್ಕೆ ಸಂಬಂಧಪಟ್ಟ ಈ ಅಲಂಕರಣದ ಅಂಶಗಳಲ್ಲದೆ ಒಟ್ಟಿನ ಕಾವ್ಯಾರ್ಥ ಬೋಧೆಗೆ ಮುಸುಕೆಳೆಯದ ಅರ್ಥ ವ್ಯಕ್ತಿ : ಇವೆಲ್ಲವೂ ಓದುಗನ ಮನಸ್ಸನ್ನು ಮೊದಲಿಗೇ ಸೆರೆ ಹಿಡಿದು ನಿಲ್ಲಿಸಿ, ಕಾವ್ಯಾರ್ಥ ಗ್ರಹಣಕ್ಕೆ ಪ್ರೇರಿಸುತ್ತವೆ. ಶ್ರವ್ಯಕಾವ್ಯದ ಮೊದಲ ಇನ್ನಿಂಗ್ಸ್‌ನ ಗೆಲವು ಈ ಶಬ್ದವ್ಯಾಪಾರದ ಸಂಗತಿ.

ದೀರ್ಘವಲ್ಲದ ಈ ಕವನ ಉದ್ದಕ್ಕೂ ವರ್ಣನಾತ್ಮಕವಾಗಿಯೆ ಸಾಗಿದೆ. ನಗರವೊಂದರ (ಇದು ಧಾರವಾಡವಾಗಬಹುದು, ಹುಬ್ಬಳ್ಳಿಯಾಗಬಹುದು, ಬೆಂಗಳೂರಾಗಬಹುದು); ಟಾರು ರಸ್ತೆಯಲ್ಲಿ, ನಡುಬೇಸಗೆಯ 'ಮಟಮಟ ಮಧ್ಯಾಹ್ನದಲ್ಲಿ ನಡೆದು ಹೋಗುವವನ ಪಡುಪಾಟಲನ್ನು ಕವಿ ಪ್ರಥಮ ಪುರುಷದಲ್ಲಿಯೇ ವರ್ಣಿಸಿದ್ದರೂ, ಆ ಅನುಭವ ಯಾರದ್ದಾದರೂ ಆಗಬಹುದು. ಆದ್ದರಿಂದ, ಇಲ್ಲಿ ವ್ಯಕ್ತಿಗತ ಅನುಭವವೇ ಸಾರ್ವತ್ರಿಕವಾಗಿ ಮಾರ್ಪಡುವ ಶಕ್ಯತೆ ಇದ್ದು, ಅದು ವಸ್ತುನಿಷ್ಠವೇ ಆಗುತ್ತದೆ.

'ಮಟ ಮಟ ಮಧ್ಯಾಹ್ನದಲ್ಲಿ ನೆರಳು ಹುಡುಕುತ್ತ ಹೊರಟಿದ್ದೇನೆ' ಎಂಬ ಮೊದಲ ಸಾಲಿನಲ್ಲಿ, ಕವಿ ಬಹಳ ದೂರ ನಡೆದು ನೆರಳಿಗಾಗಿ ಹಾತೊರೆಯುತ್ತಿರುವ ಸೂಚನೆ ಇದೆ.

ಹಿಡಿದ ಕೊಡೆಯೂ ಕಾದು
ಭಾರವಾಗಿ ಬೇಸರಾಗಿದೆ ಅದೂ

ಎನ್ನುವಲ್ಲಿ ಸಾಲು ಮರಗಳ ನೆರಳು ಅಗತ್ಯವಾದ ಅರಿವಾಗುತ್ತದೆ, ಮುಂದಿನ ಕೆಲವು ಸಾಲುಗಳಲ್ಲಿ, ಒಂದು ಕಾಲದಲ್ಲಿ ಪಥಿಕರಿಗೆ ತಂಪಾಗಿ ನೆರಳುಕೊಡುತ್ತಿದ್ದ ಗಿಡ ಮರಗಳಿಗೆ ನಿರ್ಲಕ್ಷ್ಯ ಮನೋ ಭಾವದ ಕಟುಕರಂಥ ಅಧಿಕಾರಿಗಳಿಂದ ಒದಗಿರುವ ದುರ್ಗತಿಯ ಚಿತ್ರ ಕಣ್ಣಿಗೆ ಕಟ್ಟುತ್ತದೆ. ಆಧುನಿಕ ನಗರ ಜೀವನದ ಕೆಲವು ತಾತ್ಕಾಲಿಕ ಅಗತ್ಯಗಳ ಪೂರೈಕೆಗಾಗಿ ಬೀದಿಯ ಸಾಲು ಮರಗಳನ್ನು ಕಡಿಯುವುದಕ್ಕೆ ಎಡೆಗೊಟ್ಟ ಕಾರಣಗಳಾದರೂ ಎಂಥವು !

ದಾರಿಯಿಕ್ಕೆಲಕು ತಣ್ಣನೆ ಮೈಚಾಚಿ
ನಿಂತಿರುವ ಗಿಡದ ಟೊಂಗೆಗಳನ್ನು ಕೈ ಚಾಚಿ
ವಿದ್ಯುತ್ತಂತಿಗಡ್ಡ ಬರುತ್ತವೆಂದು
ಅಡ್ಡಾತಿಡ್ಡ ಕಡಿದು ಹಾಕಿದ್ದಾರೆ.

'ಮೈಚಾಚಿ' ಎಂದಿರುವುದರಿಂದ, ವೃಕ್ಷಗಳು ನಮ್ಮಂತೆಯೇ ಸಚೇತನ ಎಂದು ಸೂಚಿತವಾಗಿ, ಟೊಂಗೆಗಳು ಅವುಗಳ ಕೈಕಾಲುಗಳು ಎಂದು ಭಾಸವಾಗಿ, ಅಡ್ಡತಿಡ್ಡ ಕಡಿದಿರುವವರ ನಿರ್ದಯತೆ ಗಮ್ಯವಾಗುತ್ತದೆ.

ಸುತ್ತೆಲ್ಲ ಛತ್ತರಿ ಹಿಡಿದು
ಅಮರವಾಗಿ ನಿಂತಿದ್ದ ಮರಗಳನ್ನು
ಟ್ರಕ್ಕು ಬಂದು ಹಾಯುತ್ತವೆಂದು
ದನ ಬಂದು ನಿಲ್ಲುತ್ತವೆಂದು
ದಾರಿಯನ್ನೆಲ್ಲ ಇನ್ನಷ್ಟು ಅಗಲ ಮಾಡುತ್ತೇವೆಂದು
ಉದಾರಿಗಳು
ಕಡಿದು ಸೌದೆ ಒಟ್ಟಿದ್ದಾರೆ.

ಸಂಕುಚಿತ ಸ್ವಾರ್ಥದೃಷ್ಟಿಯವರನ್ನು 'ಉದಾರಿ'ಗಳು ಎಂದು ಕರೆದಿರುವಲ್ಲಿ ನಯವಾಗಿ ಕಾಣುವ ವಿಡಂಬನೆ ಮಾರ್ಮಿಕವ್ಯಂಗ್ಯದಿಂದ ಕೂಡಿದೆ. ಅಲ್ಲದೆ, ಈ ಪದ್ಯ ಖಂಡದಲ್ಲಿ 'ಅಮರ-ಮರ' ಹಾಗೂ 'ದಾರಿ–ಉದಾರಿ' ಎನ್ನುವ ಜೋಡಿ ಮಾತುಗಳ ಪ್ರಯೋಗದ ಔಚಿತ್ಯ, ಸ್ವಾರಸ್ಯ ಕನ್ನಡ ಭಾಷೆಯಲ್ಲಿ ಸಾಧ್ಯವಾಗಿರುವಂತೆ ಉಳಿದ ಭಾಷೆಗಳಲ್ಲಿಯೂ ಸಾಧ್ಯವಾದೀತೇ ಎಂಬ ಶಂಕೆಯುಂಟಾಗುತ್ತದೆ. ಶಬ್ದಗಳ ನಡುವಣ ವೈದೃಶ್ಯ ಅರ್ಥಪೂರ್ಣ. ಸಾಪೇಕ್ಷವಾಗಿ ಕೆಲವು ಜಾತಿಯ ವೃಕ್ಷಗಳು (ಉದಾ; ಆಲ, ಅರಳಿ) ಅಮರವೇ. ಕನ್ನಡದ ಮರ ಶಬ್ದಕ್ಕೆ ಸಂಸ್ಕೃತದ ಅರ್ಥವನ್ನೂ ಆರೋಪಿಸಿದರೆ,–ಅಮರವಾದ ಮರೆಗಳೂ ಒಂದಲ್ಲ ಒಂದು ದಿನ ಒಣಗಿ ಮೃತವಾಗತಕ್ಕವೇ ಎಂಬ ಅವುಗಳ ಸ್ವಾಭಾವಿಕ ಮರಣದ ಮಾತು ಒತ್ತಟ್ಟಿಗಿರಲಿ; ಈಗ ಅವು ಹೇಗೆ ಮನುಷ್ಯನ ನಿರ್ಘೃಣ ವಿನಾಶಕಾರಿ ವೃತ್ತಿ (vandalism)ಯಿಂದ 'ಮರ' (ಮರ್ತ್ಯ)ಗಳಾಗಿ ಬಿಟ್ಟಿವೆ ಎಂಬ ಕವನದ

ಉದ್ದಿಷ್ಟ ಅರ್ಥ ಚಿಲ್ಲನೆ ಚಿಮ್ಮುತ್ತದೆ ಎನ್ನುವುದು ಪರಿಭಾವನೆಗೆ ಮಾತ್ರ ದಕ್ಕತಕ್ಕದ್ದು. ಕನ್ನಡ–ಸಂಸ್ಕೃತ ಪದದ ರೂಪಸಾದೃಶ್ಯದಲ್ಲಿ ಅರ್ಥವೈದೃಶ್ಯ ಅಡಗಿರುವುದು ಒಂದು ಚಮತ್ಕಾರವೇ. ಸಂಗೀತದ ಪರಿಭಾಷೆಯನ್ನು ಇಲ್ಲಿಗೆ ಬಳಸಿಕೊಂಡು ಹೇಳಬಹುದಾದರೆ, ಈ ಬಗೆಯ ಪ್ರಯೋಗವನ್ನು 'ವಿವಾದಿನ್ಯಾಸ' (counter pointing) ಎನ್ನ ಬಹುದು, 'ದಾರಿ–ಉದಾರಿ'ಯಲ್ಲಿ ಈ ಬಗೆಯ ಅರ್ಥ ಸಂಘಟನೆ ಇಲ್ಲದಿದ್ದರೂ 'ದಾರಿ ಯನ್ನೆಲ್ಲ ಅಗಲ ಮಾಡುವ' 'ಔದಾರ್ಯ'ದೊಂದಿಗೆ 'ಕಡಿದು ಸೌದೆ ಒಟ್ಟಿದ್ದಾರೆ' ಕಾರ್ಯದಲ್ಲಿ ಧ್ವನಿತವಾಗುವ 'ಲೋಭ'ದ ಸಂಗಡಿಕೆಯಿಂದಾಗಿ 'ಅರ್ಥ–ವೈದೃಶ್ಯ' ಸಮನಿಸಿ, 'ಉದಾರಿ' (ಈ ಪದ ಮಧ್ಯದ ದೀರ್ಘ ಸ್ವರವನ್ನು ಎಳೆದು ಉಚ್ಚರಿಸಿದಾಗ ಇನ್ನೂ ಹೆಚ್ಚಾಗಿ) ಶಬ್ದದ ಸಾರ್ಥಕತೆ ವ್ಯಕ್ತಪಡುತ್ತದೆ. ಕವನದ ಕಡೆಯಲ್ಲಿ ಬರುವ ಆಲದಮರದ ನೆರಳಿ ನಲ್ಲಿ ಆಟವಾಡಿದ ಬಾಲ್ಯದ ತಂಪಾದ ನೆನಪಿನ ಚಿತ್ರ ಕವನದ 'ನಗರದಲ್ಲಿ ನೆರಳು' ಎಂಬ ಶೀರ್ಷಿಕೆಯಲ್ಲಿಯ ಅರ್ಥದೊಂದಿಗೆ ಕವನದ ಕಾವ್ಯಾರ್ಥಕ್ಕೆ ವಿದೃಶವಾಗಿ ಪರಿಣಮಿಸಿ, ಅದನ್ನು ಪೋಷಿಸುತ್ತದೆ. ಪದ ಪ್ರಯೋಗ ಮಾತ್ರವಲ್ಲದೆ, 'ಸಂಬದ್ಧ ಪ್ರತಿಬಿಂಬ' ನಿರ್ವ ಹಣದಲ್ಲೂ 'ವಿವಾದಿನ್ಯಾಸ' ಪರಿಣಾಮಕಾರಿ.

ಕವನದ ಮುಂದಿನ ಪದ್ಯ ಖಂಡದ ಶಬ್ದ ಚಿತ್ರಗಳು,–ನೆರಳಿದ್ದೂ ಇಲ್ಲದ ಹಾಗಿರುವ, ಆದ್ದರಿಂದ ದಾರಿಗರನ್ನು ಹತ್ತಿರಕ್ಕೆ ಬರಗೊಡದೆ ದೂರವಿರಿಸುವ; ನೆರಳಿನ ಅಭಾವದ ಜೊತೆಗೆ ಚುರುಗುಟ್ಟುವ ಟಾರುರೋಡು ಕೊಡುವ ಒಗೆಬಗೆಯ ಹಿಂಸೆಯ, ಸ್ವರೂಪವನ್ನು ಪರಿಚಯಮಾಡಿಕೊಡುತ್ತವೆ:

ಅಲ್ಲಲ್ಲಿ ತೋಟದ ತುಂಬ ಬಾಬ್ ಕಟ್‌ಮಾಡಿದ
ನಾನಾ ನಮೂನೆಯ ಕಮಾನಿನ ಗಿಡ ಬಳ್ಳಿಗಳು—
ನೆಲಕೆ ತೊನ್ನು ಹತ್ತಿದ ಹಾಗೆ ನೆರಳು,
ಉದ್ದಕ್ಕೂ ಚುರುಗುಡುತ್ತಿರುವ ಟಾರುರೋಡು;
ಹಾಯಿಸಿಕೊಂಡು, ದಬಾಯಿಸಿಕೊಂಡು
ನಿಭಾಯಿಸಿಕೊಳ್ಳುವದೆ ನೆಟ್ಟಗೆ ದಾರಿ ಹಿಡಿದವರ ಪಾಡು,

ಬಾಬ್‌ಕಟ್ ಮಾಡಿದ ಗಿಡಮರ ಬಳ್ಳಿಗಳ ಅಲಂಕಾರದ ಸೊಬಗು ಕಣ್ಣಿಗೆ ಸೊಗಸು ; ನೆರಳಿಗೆ ತೊನ್ನು ಹಿಡಿದಿದೆ; ಯಾರು ಹೋಗುತ್ತಾರೆ ಹತ್ತಿರಕ್ಕೆ ? ಅಲ್ಲದೆ, ಬಾಬ್‌ಕಟ್ ನಿಂದ ತೋಟಕ್ಕೆ ಅಲಂಕಾರವಿರಬಹುದು; ಗಿಡಗಳಿಗೆ ಮಾತ್ರ ಅತ್ಯಾಚಾರ.

ಮೇಲೆ ಉಲ್ಲೇಖಿಸಿದ ಬಾಲ್ಯದ ನೆರಳು-ತಂಪಿನ ನೆನಪಿನ ಚಿತ್ರ ತನ್ನ 'ವಿವಾದಿತನ' ದಿಂದ ಹೇಗೆ ಪರಿಣಾಮಕಾರಿಯಾಗಿದೆ ಎಂಬುದನ್ನು ಗಮನಿಸಬಹುದು:

ಸಣ್ಣವನಿದ್ದಾಗ—
ನಮ್ಮೂರ ಹೊರಗಿನ ಆಲದ ಮರದ ದಟ್ಟ ನೆರಳಿನಲ್ಲಿ
ಗೋಲಿಯಾಡಿ, ಬೆರಳಿಗೆ ನೆತ್ತರು ಬರುವಂತೆ ಡೀಕಿ, ಡೀಕಿಸಿ,
ಒಬ್ಬರಿಗೊಬ್ಬರು ತೆಕ್ಕೆಬಿದ್ದು, ಅಂಗಿ ಹರಿದು,

ಅತ್ತಿದ್ದು, ಮತ್ತೆ ನಕ್ಕಿದ್ದು, ಸಂತೋಷ ಉಕ್ಕಿದ್ದು.
ನೆನಪಾಗುತ್ತದೆ—
ಈ ನಗರದ ಸುಡುವ ದಾರಿಯಲ್ಲಿ
ಹೀಗೆ—
ಮಂದಿಯ ನಡುವೆ ನೆರಳು ಹುಡುಕುತ್ತ
ನಡೆಯುವಾಗ.

ಈ ಶಬ್ದ ಚಿತ್ರದಲ್ಲಿನ ನೆನಪಿನ ಸವಿಯು ಮೆಲುಂಕು (nostalgia) ನೆರಳಿನ ಅಭಾವದ ಭಾವವನ್ನು ಎತ್ತಿಹಿಡಿದು ತೀವ್ರಗೊಳಿಸಿದೆ.

ಕವನದ ಕೊನೆಯಲ್ಲಿ 'ಮಂದಿಯ ನಡುವೆ' ಎಂಬ ಮಾತು ಬಂದು, 'ನೆರಳು' ಎನ್ನುವುದಕ್ಕೆ 'ಮರದ ನೆರಳು' ಎಂಬ ವಾಚ್ಯಾರ್ಥವನ್ನು ಒತ್ತರಿಸಿ ಒಂದು ವ್ಯಂಗಾರ್ಥವನ್ನು ಸಂಗಡಿಸುತ್ತದೆ. ದಿಕ್ಕುದೆಸೆ ತಪ್ಪಿದ, ನಿರ್ದಯವಾದ, ಮಾನವೀಯತೆಯ ಸೆಲೆ ಬತ್ತಿದ ಇಂದಿನ ನಗರಗಳ ಸ್ವಾರ್ಥಪರ ಯಾಂತ್ರಿಕ ಜೀವನದಲ್ಲಿ ಮರದ ನೆರಳು ಇದ್ದದ್ದು ಹೇಗೆ ಇಲ್ಲವಾಗಿದೆಯೋ ಹಾಗೆಯೆ ಬಾಳ ಬಟ್ಟೆಯಲ್ಲಿ ಸಾಗುವಂದು, ಹಿಂದೆ ಜನ ಒಬ್ಬರಿಗೊಬ್ಬರು ನೀಡುತ್ತಿದ್ದ ನೆಮ್ಮದಿಯ ಆಸರೆ ಈಗ ಇಲ್ಲವಾಗಿದೆ ಎಂಬ ಅರ್ಥ ಮಿಂಚಿ, ಚೆನ್ನವೀರ ಕಣವಿ ಮುಗಿಲತ್ತಲೇ ದಿಟ್ಟಿನೆಟ್ಟ ಆದರ್ಶವಾದಿ ಕವಿಮಾತ್ರವಲ್ಲ, ನೆಲದ ಮೇಲೆ ಬಿಸಿಲ ಬೇಗೆಯಲ್ಲೂ ಕೊಡೆ ಹಿಡಿದು ದಾರಿಸವೆಸುವ, ಸುತ್ತ ಮುತ್ತಣ ವಿನಾಶಕೃತ್ಯವನ್ನು ಗಮನಿಸಿ 'ತೀರದುದಕ್ಕೆ ಅಲವರು'ವ, ನೆಲದ ವಿದ್ಯಮಾನಕ್ಕೆ ಎಚ್ಚತ್ತಿರುವ ಕವಿ ಎಂಬ ಅಂಶವನ್ನು ಬೆಳಗುತ್ತದೆ. ಕವನದಲ್ಲಿ ತೆಳ್ಳಗೆ ಹರಡಿಕೊಂಡಿರುವ ವಿಡಂಬನೆಯಲ್ಲಿ ನಿಟ್ಟುಸಿರು ಕೇಳಿ ಬರುತ್ತಿದೆಯೇ ಹೊರತು ರೊಚ್ಚಿನ ಸಿಡಿಗುಟ್ಟುವಿಕೆ ಕಿವಿಗೆ ಅಡಚಿಕೊಳ್ಳುವುದಿಲ್ಲ,

ನಗರದಲ್ಲಿ ನೆರಳುಕೊಡುವ ಮರಗಳನ್ನು ಕಡಿದು ಹಾಕಿ ಅವನ್ನು ಸಾಯಿಸಿ ನೀವು ಜೀಯಂ ಬೇಡಿ, ಅವುಗಳನ್ನು ಉಳಿಸಿ ಬೆಳಸಿ ನೀವೂ ಸುಖಿಸಿ ಎಂದು ಉಪದೇಶಮಾಡುವುದಿಲ್ಲ ಕವಿತೆ. ಆದರೆ, ನಮ್ಮ ಲಾಕ್ಷಣಿಕರು ಹೇಳುವಂತೆ, 'ಕಾಂತಾಸಂಮಿತತಯಾ ಉಪದೇಶ ಯಂಜೇ' ಎಂಬ ದಿಟದ ಮಾತು ಇಂಥ ಕವಿತೆಯನ್ನು ಓದಿದಾಗ ನೆನಪಾಗುತ್ತದೆ,

ಎಲ್. ಎಸ್, ಶೇಷಗಿರಿರಾವ್

# 'ನಗರದಲ್ಲಿ ನೆರಳು'

ಒಂದು ಕವನದ ಭಾಷೆ ಮತ್ತು ಧ್ವನಿ ತೀರ ಗಂಭೀರವಾಗದೆ ಗಂಭೀರ ವಸ್ತುವನ್ನು ಗಂಭೀರವಾಗಿ ವಿಶ್ಲೇಷಿಸಬಹುದು ಎನ್ನುವುದಕ್ಕೆ ಒಂದು ಉದಾಹರಣೆ ಕಣವಿಯವರ 'ನಗರದಲ್ಲಿ ನೆರಳು'.

ಕವನದ ಶೀರ್ಷಿಕೆಯೇ ಅರ್ಥಗರ್ಭಿತವಾಗಿದೆ. ಈ ಅರ್ಥ ಮೊದಲ ಎರಡು ಪಂಕ್ತಿಗಳಲ್ಲಿಯೂ ಸೂಚಿತವಾಗುತ್ತದೆ. ನಗರ ಮನುಷ್ಯ ನಿರ್ಮಿತ. 'ನಾಗರಿಕತೆ' ಶಬ್ದ ಬಂದಿರುವುದೇ 'ನಗರ'ದಿಂದ. ಮನುಷ್ಯ ವ್ಯವಸ್ಥೆಗಾಗಿ, ಸುಖಸೌಲಭ್ಯಗಳನ್ನು ಹೆಚ್ಚಿಸಿಕೊಳ್ಳಲು ನಗರವನ್ನು ನಿರ್ಮಿಸುತ್ತಾನೆ. ಒಂದು ರೀತಿಯಲ್ಲಿ ಇದು ನಿಸರ್ಗದ ಮೇಲೆ ಮಾನವನ ಪ್ರಭುತ್ವವನ್ನು ಸಾರುವ ಸಾಧನೆ. ನೆರಳು ನಿಸರ್ಗ ನಿರ್ಮಿತ ಕವನದ 'ನಾಯಕ' ಮಟಮಟ ಮಧ್ಯಾಹ್ನದಲ್ಲಿ ನೆರಳು ಹುಡುಕುತ್ತ ಹೊರಟಿದ್ದಾನೆ. ಮಧ್ಯಾಹ್ನದ ರಣರಣ ಬಿಸಿಲಿನಿಂದ ರಕ್ಷಣೆಯಾಗಿ ಮನುಷ್ಯನ ಸೃಷ್ಟಿಯೂ ಅವನ ಕೈಯಲ್ಲಿದೆ—ಕೊಡೆ. ಆದರೆ

ಹಿಡಿದ ಕೊಡೆಯೂ ಕಾದು
ಭಾರವಾಗಿ ಬೇಸರಾಗಿದೆ ಅದೂ.

ಕೊಡೆಯನ್ನು ಕಾಯಿಸಿ ನಿಷ್ಪ್ರಯೋಜಕಗೊಳಿಸಿರುವುದೂ ನಿಸರ್ಗದ ಕಾವೇ. ನಿಸರ್ಗದ ಬಿಸಿಲಿಗೆ ನಿಸರ್ಗವೇ ರಕ್ಷಣೆಯಾಗಿ ನಿರ್ಮಿಸಿದ ಮರಗಳನ್ನು ಮನುಷ್ಯ ಕಡಿದುಹಾಕಿ, ಕೊಡೆಯನ್ನು ಮಾಡಿಕೊಂಡಿದ್ದಾನೆ, ಅದು ನಿಷ್ಪ್ರಯೋಜಕವಾಗಿದೆ.

ದಾರಿಯಿಕ್ಕೆಲಕು ತಣ್ಣಗೆ ಮೈಚಾಚಿ
ನಿಂತಿರುವ ಗಿಡದ ಟೊಂಗೆಗಳನ್ನು, — ಕೈ ಚಾಚಿ
ವಿದ್ಯುತ್ತಂತಿಗಡ್ಡ ಬರುತ್ತವೆಂದು
ಅಡ್ಡಾತಿಡ್ಡ ಕಡಿದು ಹಾಕಿದ್ದಾರೆ.

ಮನುಷ್ಯನ ಕೊಡೆ ಏನಿದ್ದರೂ ನಿಸರ್ಗ ನಿರ್ಮಿಸಿದ ರಕ್ಷಣೆಯ ದುರ್ಬಲ ಅನುಕರಣೆ :

ಎಷ್ಟೋ ದಿನಗಳಿಂದ ಇಷ್ಟೆತ್ತರ ಬೆಳೆದು
ಸುತ್ತೆಲ್ಲ ಛತ್ತರಿ ಹಿಡಿದು
ಅಮರವಾಗಿದ್ದ ಮರಗಳನ್ನು

ಎಂಬ ಪಂಕ್ತಿಗಳನ್ನೂ ಮುಖ್ಯವಾಗಿ 'ಛತ್ತರಿ' ಎಂಬ ಶಬ್ದವನ್ನೂ ಗಮನಿಸಬೇಕು. ವಿದ್ಯುತ್ತಂತಿ, ಟ್ರಕ್ಕು ಎಲ್ಲ ಮನುಷ್ಯನ ನಾಗರಿಕತೆಯ ಸಂಕೇತಗಳು. ಮನುಷ್ಯ ನಿರ್ಮಿತ

ದಾರಿಯೂ ಅಷ್ಟೆ. ಮರಗಳು ಟ್ರಕ್ಕುಗಳಿಗೆ ಅಡ್ಡ ಎಂದು ಮನುಷ್ಯ ಅವನ್ನು ಕಡಿದು ಹಾಕಿಸಿದ್ದಾನೆ : ಇದನ್ನು ಹೇಳುವ ಶಬ್ದಗಳನ್ನೂ ಗಮನಿಸಬೇಕು,

ಅಮರವಾಗಿದ್ದ ಮರಗಳನ್ನು
ಟ್ರಕ್ಕು ಬಂದು ಹಾಯುತ್ತವೆಂದು

ಮರಗಳು ಟ್ರಕ್ಕುಗಳಿಗೆ ಅಡ್ಡಬರುತ್ತವೆ ಎಂದಷ್ಟೆ ಅಲ್ಲ. 'ಮರಗಳನ್ನು ಟ್ರಕ್ಕು ಬಂದು ಹಾಯುತ್ತದೆಂದು' ; ಇಲ್ಲಿ ಆಕ್ರಮಣ ನಡೆಯುವುದು ಟ್ರಕ್ಕುಗಳಿಂದ. ಈ ಮರಗಳನ್ನೆಲ್ಲ ಕಡಿದವರು 'ಉದಾರಿಗಳು'—ನಿಸರ್ಗದ ಮೇಲೆ ದಾಳಿ ಮಾಡಿ ಮನುಷ್ಯನಿಗೆ ಉಪಕಾರ ಮಾಡುತ್ತೇವೆ ಎಂದುಕೊಂಡವರು ; ಅವರು ಮಾಡಿದ್ದೆಂದರೆ 'ಅಮರವಾಗಿದ್ದ ಮರ ಗಳನ್ನು', ಎಲ್ಲರಿಗೆ ರಕ್ಷಣೆ ಕೊಡುತ್ತ ತಾವೂ ಒಹುಕಾಲ ಉಳಿಯುತ್ತಿದ್ದ ಮರಗಳನ್ನು ಬೇಗ ಉರಿದು ಬೂದಿಯಾಗುವ ಸೌದೆಯನ್ನಾಗಿ ಮಾಡಿದ್ದು.

ಮನುಷ್ಯ ನಿಸರ್ಗದ ಮೇಲೆ ಮಾಡಿದ ದಾಳಿಯ ಇನ್ನೊಂದು ರೂಪ ಮುಂದಿನ ಪಂಕ್ತಿಗಳಲ್ಲಿ ಪ್ರತ್ಯಕ್ಷವಾಗುತ್ತದೆ. "ಅಲ್ಲಲ್ಲಿ ತೋಟದ ತುಂಬ ಬಾಬ್ ಕಟ್ ಮಾಡಿದ— ಆದರೂ ಹೂ ಮುಡಿದ ನಾನಾ ನಮೂನೆಯ ಕಮಾನಿನ ಗಿಡಬಳ್ಳಿಗಳು". ನಿಸರ್ಗವನ್ನೂ ತನ್ನ ಸೌಂದರ್ಯ ಕಲ್ಪನೆಗೆ ಬಗ್ಗಿಸಲು ('ಕಮಾನು' ಪದದ ಅರ್ಥಭಾರ ಗಮನಿಸು ವಂಥದು) ಮನುಷ್ಯ ನಿಸರ್ಗವನ್ನು ಕುರೂಪಗೊಳಿಸಿದ್ದಾನೆ : ನಿಸರ್ಗ ತನ್ನ ಚೆಲುವನ್ನು ಕ್ರಿಯೆಯನ್ನೂ ಸಾರ್ಥಕ್ಯವನ್ನೂ ಬಿಟ್ಟುಕೊಟ್ಟಿಲ್ಲ, ಗಿಡಗಳು ಹೂ ಮುಡಿದೇ ಇವೆ. ಆದರೆ 'ನೆಲಕೆ ತೊನ್ನು ಹತ್ತಿದ ಹಾಗೆ ನೆರಳು. 'ಮರ ಕೊಡುತ್ತಿದ್ದ ನೆರಳನ್ನು ತಪ್ಪಿಸಿ, ಭೂಮಿಗೆ ಟಾರ್ ಬಳಿದು ಮನುಷ್ಯ ಸಾಧಿಸಿರುವುದೆಂದರೆ 'ಉದ್ದಕ್ಕೂ ಚುರುಗುಡುತ್ತಿರುವ ಟಾರು ರೋಡು'. ಅಲ್ಲಿ ನಡೆಯುವುದೇ ಕಷ್ಟ : ಹಾಯಿಸಿಕೊಂಡು, ದಬಾಯಿಸಿಕೊಂಡು, ನಿಬಾಯಿಸಿಕೊಳ್ಳುವುದೇ ನೆಟ್ಟಗೆ ದಾರಿ ಹಿಡಿದವರ ಪಾಡು.'

ಈಗ ಕವನ 'ನಾಯಕ'ನ ಬಾಲ್ಯಕ್ಕೆ ತಿರುಗುತ್ತದೆ. ನಿಸರ್ಗದೊಡನೆ ಮುಗ್ಧತೆ, ಹರ್ಷ ಗಳು ಇಲ್ಲಿ ಬೆರೆಯುತ್ತವೆ. 'ಆಲದ ಮರದ ದಟ್ಟ ನೆರಳಿನಲ್ಲಿ' ಬಾಲ್ಯದಲ್ಲಿ ನಾಯಕನೂ ಆತನ ಗೆಳೆಯರೂ ಗೋಲಿಯಾಡಿ, ಬೆರಳಿಗೆ ರಕ್ತ ಬರುವಂತೆ ಡೀಕಿ, ಡೀಕಿಸಿ ಒಬ್ಬರಿ ಗೊಬ್ಬರು ತೆಕ್ಕೆಬಿದ್ದು, ಅಂಗಿಹರಿದು, ಅತ್ತರು ಮತ್ತೆ ನಕ್ಕರು. ಸಂತೋಷ ಉಕ್ಕಿತು. ನಿಸರ್ಗದ ಆಶ್ರಯದಲ್ಲಿ ಮಾನವ ಬಾಂಧವ್ಯಗಳು ಸಹಜವಾದುವು. ಈ ಬಾಳಲ್ಲಿ ಕಲಹ, ನೋವು ಇಲ್ಲ ಎಂದಲ್ಲ. ('ಬೆರಳಿಗೆ ನೆತ್ತರು ಬರುವಂತೆ ಡೀಕಿ, ಡೀಕಿಸಿ') ಆದರೆ ಇದು ಮುಕ್ತಾಯವಾಗುವುದು ಗಾಢವಾದ ಸ್ನೇಹದಲ್ಲಿ, ಸಂತೋಷದಲ್ಲಿ. ನಾಗರಿಕತೆ ತಂದ ಜೀವನ ಸುಡುವ ಜೀವನ. ಇಲ್ಲಿ ಮನುಷ್ಯರು ಒಟ್ಟಿಗೆ ಆಡುವುದಿಲ್ಲ, ಒಟ್ಟಿಗೆ ನಡೆಯು ವುದಿಲ್ಲ. ಇಲ್ಲಿ 'ನೆಟ್ಟಗೆ ದಾರಿ ಹಿಡಿಯುವವರು', ಋಜು ಮಾರ್ಗದವರು, ಹಾಯಿಸಿ ಕೊಂಡು, ದಬಾಯಿಸಿಕೊಂಡು, ನಿಬಾಯಿಸಬೇಕು. ಇಲ್ಲಿಯದು ಕುತ್ತು ಒಡ್ಡುವ ದಾರಿ. ನಿಸರ್ಗದಲ್ಲಿ ನೆರಳುಂಟು, ಜೊತೆಗೆ ಒಬ್ಬರಿನ್ನೊಬ್ಬರಿಗೆ ನೆರಳಾಗಬಹುದು. ಇಲ್ಲಿ ನೆರಳಿಲ್ಲ,

ಮನುಷ್ಯ ನಿರ್ಮಿತ ನೆರಳು (ಕೊಡೆಯ ವರ) ಸಂಕುಚಿತ ಮಾತ್ರ ಅಲ್ಲ, ನಿಷ್ಪ್ರಯೋಜಕ. ('ಹಿಡಿದ ಕೊಡೆಯೂ ಕಾದು') ಇಲ್ಲಿ ಮುಂದಿಯ ನಡುವೆ ನೆರಳನ್ನು ಹುಡುಕಬೇಕು—ಸಿಕ್ಕದ ನೆರಳಿಗಾಗಿ ಹುಡುಕಬೇಕು.

ನಿಸರ್ಗ—ಮನುಷ್ಯ ಇವರ ಸಂಬಂಧದಲ್ಲಿ ಹೀಗೆ ನಿರಾಡಂಬರವಾಗಿ ವಿಶ್ಲೇಷಿಸುವ ಕವನದಲ್ಲಿ ಇನ್ನೂ ಒಂದು ಸ್ತರದಲ್ಲಿ ಅರ್ಥ ಧ್ವನಿತವಾಗುತ್ತದೆ. ಇಡೀ ಕವನವನ್ನು ಓದುವಾಗ ಬಲಗೊಳ್ಳುತ್ತ ಹೋಗುವುದು 'ನಾಯಕ'ನ ಪರದಾಟ ಮತ್ತು ನಿಸ್ಸಹಾಯ ಕತೆಗಳ ಭಾವನೆ. "ಮಟ ಮಟ ಮಧ್ಯಾಹ್ನದಲ್ಲಿ ನೆರಳು ಹುಡುಕುತ್ತ ಹೊರಟಿದ್ದೇನೆ" ಎಂಬ ಪ್ರಾರಂಭದ ಪಂಕ್ತಿಗಳು 'ನಾಯಕನಿಗೆ ಸಂಬಂಧಿಸಿದವು. ಕವನದಲ್ಲಿ ನಾಲ್ಕು ಭಾಗ ಗಳಿವೆ. ಪ್ರಾರಂಭದ ಎರಡು ಪಂಕ್ತಿಗಳನಂತರ ಕವನ ನಾಯಕನಿಂದ ಅವನ ಸುತ್ತ ಮುತ್ತಲಿನವರತ್ತ ಹೊರಳುತ್ತದೆ. ವಿದ್ಯುತ್ತಂತಿಗಡ್ಡ ಬರುತ್ತವೆಂದು ಗಿಡದ ಟೊಂಗೆ ಗಳನ್ನು ಕಡಿದವರು, ದಾರಿಯನ್ನು ಅಗಲ ಮಾಡುತ್ತೇವೆಂದು ಅಮರವಾಗಿದ್ದ ಮರಗಳನ್ನು ಕಡಿದವರು. ಗಿಡಬಳ್ಳಿಗಳಿಗೆ ಬಾಬ್ ಮಾಡಿದವರು, ನೆಲಕ್ಕೆ ಟಾರ್ ಬಳಿದವರು ಎಲ್ಲರೂ ನಾಗರಿಕತೆಯ ಪ್ರತಿನಿಧಿಗಳೇ. ಸಣ್ಣವನಾಗಿದ್ದಾಗ, ಊರ ಹೊರಗಿನ ಆಲದ ಮರದಡಿಯಲ್ಲಿಆಟವಾಡುತ್ತಿದ್ದಾಗ.ನಾಯಕ ನೆರಳನ್ನೂ ನೈಜ ಮಾನವ ಸಂಬಂಧಗಳನ್ನೂ ಸವಿದಿದ್ದಾನೆ. ದೊಡ್ಡವನಾಗಿ ಊರೊಳಗೆ ಬಾಳಿನಲ್ಲಿ 'ಇನ್‌ವಾಲ್ವ್', ಆದಾಗ. ಅವನು ನಿಸ್ಸಹಾಯಕ. ಇತರರ ಕಾರ್ಯಗಳ ಪರಿಣಾಮಗಳಲ್ಲಿ ಅವನು ಸೆರೆಯಾಳು. ನಿಸರ್ಗ ದೊಡನಿದ್ದ ಸಹಜವಾದ ಸಂಬಂಧವನ್ನು ಕಡಿದು (ಮೊದಲ ಎರಡು ಭಾಗಗಳಲ್ಲಿಯೂ ಕಡೆಯಲ್ಲಿ ಬರುವ ಶಕ್ತಿಯುತ ಕ್ರಿಯಾ ಪದ 'ಕಡಿದು') ಮನುಷ್ಯ ಹೊಸ ಸಂಬಂಧವನ್ನು ಸೃಷ್ಟಿಸಲು ಹೊರಟಿದ್ದಾನೆ. ನಿಸರ್ಗದ ಮೇಲೆ ಪ್ರಭುತ್ವ ಸಾಧಿಸಲು ಪ್ರಯತ್ನಿಸಿದ್ದಾನೆ. ನಿಸರ್ಗದಿಂದ ದೂರವಾದ ಬಾಳನ್ನು ಬಾಳಲು ತಾನೇ ವ್ಯವಸ್ಥೆಯನ್ನು ಸೃಷ್ಟಿಸಿದ್ದಾನೆ. ತನ್ನ ಸೃಷ್ಟಿಯೇ ಸೆರೆಮನೆಯಾಗಿದೆ. ಕುತ್ತು ಒಡ್ಡುವ ವ್ಯವಸ್ಥೆಯಾಗಿದೆ. ಕವನ ಪ್ರಾರಂಭ ವಾಗುವುದು ಮತ್ತು ಮುಕ್ತಾಯವಾಗುವುದು ನೆರಳು ಹುಡುಕುವ ಕ್ರಿಯೆಯೊಡನೆ (ಈ ಭಾವನೆ ಕಣವಿಯವರ 'ಮನುಷ್ಯ ಪ್ರಾಣಿ' ಕವನದಲ್ಲಿಯೂ ಧ್ವನಿತವಾಗಿದೆ :

> ಕೊಂಡಿಗೆ ಕೊಂಡಿ ಕೂಡಿಸಿ ಸರಪಳಿಯ ಕೊರಳಿಗೆ ಸುತ್ತಿ-
> ಕೊಂಡು ನಡೆದಿದ್ದಾನೆ.

ಈ ಕವಿತೆಯಲ್ಲಿ 'ದಾರಿ' ಎನ್ನುವ ಪದ ಹೇಗೆ ಅರ್ಥವನ್ನು ತುಂಬಿಕೊಳ್ಳುತ್ತ ಹೋಗುತ್ತದೆ ಎನ್ನುವುದೂ ಗಮನಾರ್ಹ. ಕವನದಲ್ಲಿ ನಾಲ್ಕು ಭಾಗಗಳಿವೆ. ಪ್ರತಿಯೊಂದು ಭಾಗದಲ್ಲಿಯೂ ಮರ ಅಥವಾ ಗಿಡ, ದಾರಿ ಇವೆರಡೂ ಪ್ರಸ್ತಾಪಿತವಾಗುತ್ತವೆ. ಮೊದಲ ಭಾಗದಲ್ಲಿ ದಾರಿಗೆ ಯಾವ ವಿಶೇಷಣವೂ ಇಲ್ಲ. ಅದರ ವರ್ಣನೆಯೂ ಇಲ್ಲ.

> ದಾರಿ ಇಕ್ಕೆಲಕು ತಣ್ಣಗೆ ಮೈಚಾಚಿ
> ನಿಂತಿರುವ ಗಿಡದ ಟೊಂಗೆಗಳನ್ನು.........

ಮುಂದಿನ ಭಾಗದಲ್ಲಿ ದಾರಿಯು ಅಗಲ ಸಾಲದು ಎಂಬ ಧ್ವನಿ ಇದೆ :

ದಾರಿಯನ್ನೆಲ್ಲ ಇನ್ನಿಷ್ಟು ಅಗಲ ಮಾಡುತ್ತೇವೆಂದು
ಉದಾರಿಗಳು
ಕಡಿದು ಸೌದೆ ಒಟ್ಟಿದ್ದಾರೆ.

ಮೂರನೆಯ ಭಾಗದಲ್ಲಿ ಕಣ್ಣಿಗೆ ಕಟ್ಟುವಂತೆ ಅದರ ಚಿತ್ರವಿದೆ :

ಉದ್ದಕ್ಕೂ ಚುರುಗುಡುತ್ತಿರುವ ಟಾರು ರೋಡು :
ಅದಕ್ಕೂ ಮೂಡುತ್ತವೆ ನೂರೆಂಟು ಕೋಡು.
ಹಾಯಿಸಿಕೊಂಡು, ದಬಾಯಿಸಿಕೊಂಡು
ನಿಬಾಯಿಸಿಕೊಳ್ಳುವುದೇ ನೆಟ್ಟಗೆ ದಾರಿ ಹಿಡಿದವರ ಪಾಡು.

ಇಷ್ಟಾದ ಮೇಲೆ ಅದರ ಗುಣಲಕ್ಷಣದ ವರ್ಣನೆ ಕಡೆಯ ಭಾಗದಲ್ಲಿ, ಇನ್ನೇನು ಕವನ ಮುಗಿಯಿತು ಎನ್ನುವಾಗ ;

ಈ ನಗರದ ಸುಡುವ, ಸುತ್ತು ಬಳಸುವ, ಕತ್ತು ಹೊರಳಿಸುವ
ಕುತ್ತು ಒಡ್ಡುವ ದಾರಿಯಲ್ಲಿ

ಇದು ಮೂವತ್ತಾರು ಪಂಕ್ತಿಗಳ ಕವನ. ಆದರೆ ಇಷ್ಟರಲ್ಲೇ ತೀರ ಸಾಮಾನ್ಯವೆನ್ನಿಸುವ ನಿತ್ಯಜೀವನದ ಭಾಗವೆನ್ನಿಸುವ ಅನುಭವದ ಮೂಲಕ, ಕಣವಿಯವರು ಮನುಷ್ಯ–ನಿಸರ್ಗ, ಮನುಷ್ಯ-ನಾಗರಿಕತೆಗಳ ಸಂಬಂಧಗಳ ವಿಶ್ಲೇಷಣೆಯನ್ನು ಮೂಡಿಸುತ್ತಾರೆ. ಕವನದುದ್ದಕ್ಕೂ ಅದರಲ್ಲಿ ಚಿತ್ರಿತವಾಗುವ ಭೌತಿಕ ಕ್ರಿಯೆ, ನಾಯಕನ ನೆರಳಿನ ಹುಡುಕಾಟ, ಸ್ಪಷ್ಟವಾಗಿ ನಡೆಯುತ್ತಲೇ ಹೋಗುತ್ತದೆ, ಅದರಲ್ಲಿ ನಮ್ಮ ಆಸಕ್ತಿ ಉಳಿದೇ ಬರುತ್ತದೆ ಎನ್ನುವುದೊಂದು ಗಮನಿಸಬೇಕಾದ ಸಂಗತಿ.

## ಅ. ರಾ. ಮಿತ್ರ

# 'ಅಪರಾವತಾರ'

ಕಣವಿಯವರ ' ಅಪರಾವತಾರ ' ಕವಿತೆ, ಸಂಕ್ಷೇಪವಾಗಿ ಹೇಳುವುದಾದರೆ ಒಬ್ಬ ಪುಢಾರಿಯ ಆತ್ಮವೃತ್ತ. ಸ್ವಾತಂತ್ರ್ಯ ಬಂದ ಹತ್ತೇ ವರ್ಷಗಳಲ್ಲಿ, ಸಾಹಸಶೀಲನಾದ ವ್ಯಕ್ತಿಯೊಬ್ಬ ಯಾವ ಯಾವ ದಿಕ್ಕಿನಿಂದ ಭ್ರಷ್ಟಗಾಳಿ-ಆಹಾರಗಳನ್ನು ಸೇವಿಸಿ ಬೆಳೆಯಬಹುದು ಎಂಬುದಕ್ಕೆ ಇಲ್ಲಿಯ ನಾಯಕ ಒಂದು ಉತ್ತಮ ಸಂಕೇತವಾಗಿ ನಿಲ್ಲುತ್ತಾನೆ. ಈ ಕವನದ ನಾಯಕನಂಥವರಿಂದ ಸಮಾಜ ಜೀವನದ ಎಲ್ಲ ಮುಖಗಳೂ ಹೇಗೆ ಕರಂಕುಗಟ್ಟಿಕೊಂಡಿವೆ ಎಂಬುದನ್ನು ವಿವರಿಸುವುದೇ ಈ ಕವಿತೆಯ ಉದ್ದೇಶ. ಇಂಥ ವಸ್ತುವನ್ನು ಕಣವಿಯವರು ಆರಿಸಿಕೊಂಡು ಅದಕ್ಕೆ ಅನುಗುಣವಾದ ವ್ಯಂಗ್ಯಬೆರೆತ ಉತ್ಪ್ರೇಕ್ಷೆಯ ವೈಭವದ ಶೈಲಿಯಲ್ಲಿ ಕವಿತೆಯನ್ನು ನಿಭಾಯಿಸಲು ಪ್ರಯತ್ನಿಸಿದ್ದಾರೆ. ಇಡೀ ಕವನದಲ್ಲಿ ಅಣಕದ ಧೋರಣೆಯಿದೆ.

ಕವಿತೆಯಲ್ಲಿ ಏಳು ಚರಣಗಳಿವೆ. ಮೊದಲನೆಯ ಚರಣ ನಾಯಕನ ಯೋಗ್ಯತೆಯನ್ನು ಅಳೆಯಲು ಕೆಲವು ಅಳತೆಗಳನ್ನು ಅವಲಂಬಿಸಿ ಸಾಗುತ್ತದೆ. ರಾಜಕಾರಣಿಗಳು ಇತರ ಕ್ಷೇತ್ರಗಳ ಜನಗಳ ಹಾಗೆ ಕ್ರಮಬದ್ಧವಾದ ಪ್ರಗತಿಯ ಹಾದಿಯಲ್ಲಿ ' ಉದಿತೋದಿತ 'ರಾಗಿ ಸಾಗುವ ಜಾತಿಯವರಲ್ಲ. ಅವರ ಏರಿಕೆ ಇಳಿಕೆ ಎರಡೂ ತಟಕ್ಕನೆ ಗೋಚರವಾಗುವ ಬಗೆಯವು, ನಮ್ಮ ಕಣ್ಣೆದುರಿಗೇ ಸಣ್ಣವನಾಗಿದ್ದ, ಮಾತಾಡಲೂ ಬರದ, ವ್ಯವಹಾರದ ಕಲ್ಪನೆ ಸಾಲದ, ಸಾಮಾನ್ಯ ಪ್ರತಿಭೆಯ ವ್ಯಕ್ತಿ ತಟಕ್ಕನೆ ಹೇಗೆ ಕೀರ್ತಿಯ ಶಿಖರ ಮುಟ್ಟಿಬಿಡುತ್ತಾನೆ ಎಂಬ ಪ್ರಚಾರ ತಂತ್ರದ ಪರಿ ಇಲ್ಲಿ ವರ್ಣಿತವಾಗಿದೆ. ಕಣವಿಯವರ ಈ ನಾಯಕನ ಪರಿಚಯ ಕವನದ ಶರೀರದಲ್ಲಿ ಹಂಚಿ ಹೋಗಿದೆ. ಕವಿಗೆ ಈತನ ಪರಿಚಯವಾದದ್ದು ಒಂದು ಆಕಸ್ಮಿಕ ಸಂದರ್ಭದಲ್ಲಿ. ಈ ನಾಯಕ ರಾಡಿಮೈಯಿನವ ; ಡಂಗುರದವ ; ಮೇಲಿನವರನ್ನು ದೇವರೆಂದೂ ಕೆಳಗಿನವರನ್ನು ಕೋಳಿಮರಿಗಳೆಂದೂ ಕಾಣುವ ದ್ರಾಬೆ ; ಲೌಕಿಕವಾಗಿ ಕೊಬ್ಬರಿಯ ಜತೆಗೆ ಕರಟವನ್ನೂ ನುಂಗಬಲ್ಲ ಬಕ ಪ್ರಚಂಡ ; ಹಣದ ಮುಂದೆ ವೇದದ ನಾದ ಸೊಗಸುವುದಿಲ್ಲವೆಂಬ ಭಾವದವ ; ಇತರರ ಬಿಳಿಯ ಬಟ್ಟೆಯ ಮೇಲೆ ಮಸಿ ಸಿಡಿಸಿ ಸುಖಿಸುವವ ; ಕೊಂಡೆಯದ ಮಂಚಣ್ಣ, ಶಕುನಿಗಳನ್ನೂ ಮೀರಿಸಿದವ ; ನಸುಗುನ್ನಿ, ಬಾವುಗ, ಗೊಬೆಲ್ಸನಂಥ ಪ್ರಚಾರ ತಂತ್ರಜ್ಞ ; ಕದನದ ಮೂಲ ಪುರುಷ. ಇಂಥವನ ಪರಿಚಯ ಬೆಳೆಸಿಕೊಂಡರೆ ವಿಶ್ವರೂಪದರ್ಶನ ಪಡೆದ ಅರ್ಜುನನಂತೆ ಕವಿ ತತ್ತರಿಸಬೇಕಾಯಿತು. ಇದು ಸ್ಥೂಲವಾಗಿ ಕವನದ ನಡಿಗೆ.

ಈ ಕವಿತೆಯ ಹಲವಾರು ಚರಣಗುಚ್ಛಗಳಲ್ಲಿ ಮುಖ್ಯವಾಗಿ ಸಾಲಿನ ಕೊನೆಯಲ್ಲಿ ಮತ್ತು ಉಳಿದಂತೆ ಕೆಲವೆಡೆಗಳಲ್ಲಿ ಬರುವ ಶಬ್ದಸಾಮ್ಯಗಳನ್ನು ಎಚ್ಚರಿಕೆಯಿಂದ ಗಮನಿಸ

ಬೇಕು. ಮೊದಲ ೨೪ ಸಾಲುಗಳವರೆಗೆ ಒಂದು ಚರಣದಲ್ಲೂ ತಪ್ಪದೆ, ಚರಣದ ಒಳ ಮೈಯಲ್ಲಿ ಕ್ವಚಿತ್ತಾಗಿ, ಕೊನೆಯ ಅಕ್ಷರದಲ್ಲಿ ನಿಯತವಾಗಿ ಕಾಣಿಸಿಕೊಳ್ಳುವ ದ, ದ್ದ, ದ್ಧ – ಈ ಶಬ್ದಗಳ ದಾಳಿಯನ್ನು ಲಕ್ಷಿಸಬೇಕು. ಉದ್ದ, ಎದ್ದ, ಬಿದ್ದ, ಇದ್ದ, ಹಾರಿದ, ಸಾರಿದ, ಎರಗಿದ, ಊರಿದ ಮುಂತಾದ ಕಡೆ ಬೆಳವಣಿಗೆಯ ಕ್ಷಿಪ್ರತೆಯನ್ನು ಸೂಚಿಸುತ್ತ ಭೂತಕಾಲದ ಪ್ರತ್ಯಯವಾಗಿ ಮಾತ್ರ ಬಳಕೆಯಾಗಿರುವ ಶಬ್ದರೂಪಗಳು ಒಂದು ಕಡೆ ಸಾಗಿದರೆ ನಿಷಿದ್ಧ, ಪ್ರಸಿದ್ಧ, ಅಪ್ರಬುದ್ಧ ಮೊದಲಾದ ಪ್ರತ್ಯಯವಲ್ಲದ ಶಬ್ದಗಳಲ್ಲೂ ಈ ನುಡಿಗಳ ಜೋಡಣೆಯಾಗಿರುವುದರಿಂದ ಇಲ್ಲಿಯ ಸಾಲುಗಳಿಗೆ ಏಕತಾನತೆಯ ಬೇಸರ ದಿಂದ ಜಿಗಿಯಲು ಸಾಧ್ಯವಾಗಿದೆ. ನಾದ ಪ್ರಮಾದ, ಚೆಲುವಿನಿಂದ್ರ ಈ ಎರಡು ಶಬ್ದ ಗಳು ಅಪ್ರಯತ್ನಪೂರ್ವಕವಾಗಿ ಮೇಲಿನ ನುಡಿನೆಯ್ಗೆಯೊಂದಿಗೇ ಸೇರಿಹೋಗಿರುವುದು ಗಮನಿಸಬೇಕಾದ ಸಂಗತಿ. ಅಲ್ಲದೆ ಒಂದನೆಯ ಚರಣದಿಂದ ಎರಡನೆಯ ಚರಣದ ಮುಕ್ಕಾಲು ಭಾಗದವರೆಗೆ ಸಾಗಿರುವ ಈ ನುಡಿನೆಯ್ಗೆ ಇದ್ದಕ್ಕಿದಂತೆ ಎರಡನೆಯ ಚರಣ ದಲ್ಲಿಯೇ ತನ್ನ ಗತಿಯನ್ನು ಟ ಕಾರ, ಸ ಷ ಕಾರಗಳ ನೆಯ್ಗೆಗೆ ಬದಲಿಸಿಕೊಂಡಿರುವುದು ಕುತೂಹಲಕಾರಿಯಾಗಿದೆ. ಹಾಗೆ ನೋಡಿದರೆ ಇಡೀ ಕವಿತೆ ಇಂಥ ನಾಲ್ಕಾರು ಅಂತ್ಯಾ ಕ್ಷರಗಳ ಸಮೃದ್ಧ ಬಳಕೆಯನ್ನು ಮೈಗೂಡಿಸಿಕೊಂಡು ಸಾಗಿದೆ. ಮೇಲೆ ಹೇಳಿದಂತೆ ೨೪ ಸಾಲುಗಳ ವರೆಗೆ ದ, ದ್ಧ, ದ್ದ, ದ್ರ—ಈ ವರ್ಣಮಿಶ್ರಣಗಳಿದ್ದರೆ ೨೫ನೆಯ ಸಾಲಿನಿಂದ ಮುಂದಕ್ಕೆ ಏಳು ಸಾಲುಗಳಲ್ಲಿ ಟ–ಸ ಕಾರಗಳು ಬಳಕೆಗೊಂಡಿವೆ. ಮುಂದೆ ೩೩ನೆಯ ಸಾಲಿನಿಂದ ಯ, ಸ, ಷ ಗಳನ್ನು ಅಂತ್ಯಾಕ್ಷರಗಳಲ್ಲಿ ಅನಿಯತವಾಗಿ ಬೆರೆಸಿರುವ ರೀತಿ, ಕೊನೆಯ ಚರಣದಲ್ಲಿ ಬಹುಕಾಲ ಕಾಡುವ 'ಗ' ಕಾರ ಕೊನೆಯ ಭಾಗದ 'ನ' ಕಾರಗಳ ಅಧ್ಯಯನವು ಕವಿತೆಯ ಹೊರಶಿಲ್ಪದ ಬಗೆಗೆ ಬೆಳಕು ಬೀರುತ್ತದೆ. ಮುಂದೆ ಚನ್ನವೀರ ಕಣವಿಯವರು 'ಜಗದೇಕ ಮಲ್ಲ' ಎಂಬ ಕವಿತೆಯಲ್ಲಿ ಶೀರ್ಷಿಕೆಯಿಂದ ಹಿಡಿದು ಕೊನೆಯವರೆಗೆ 'ಲ್ಲ' ಕಾರವನ್ನು ದುಡಿಸಿಕೊಳ್ಳುವುದಕ್ಕೆ ಸಹಾಯಕವಾದ ತಾಂತ್ರಿಕ ನೆರವು ಈ ಕವಿತೆಯಿಂದ ಸಿಕ್ಕಿದೆ ಎಂದೂ ಹೇಳಬಹುದು.

ಒಂದನೆಯ ಚರಣದ ಬಗೆಗೆ ಮೊದಲಲ್ಲೇ ಸೂಚನೆಗಳನ್ನು ಕೊಟ್ಟಿದ್ದೇನೆ. ಇಲ್ಲಿ ಕುತುಬಮಿನಾರ ಮತ್ತು ಗೌರೀಶಂಕರ ಈ ಎರಡು ಎತ್ತರಗಳು ಮಾನವನ ವ್ಯವಹಾರ ಲೋಕದ ಮತ್ತು ಸಾಧನಾ ಲೋಕದ ಎರಡು ತಲಪು ನೆಲೆಗಳನ್ನು ಸೂಚಿಸುತ್ತವೆ. ರಾಜಕಾರಣಿಯಾಗಿ ಮೇಲಕ್ಕೆ ಬರಬೇಕೆಂದು ಬಯಸುವ ವ್ಯಕ್ತಿ ಬೌದ್ಧಿಕವಾದ ಯಾವ ಸಾಧನೆಯನ್ನೂ ಮಾಡುವುದಿಲ್ಲ. ಬುದ್ಧನಿಗೂ ಗೌರೀಶಂಕರಕ್ಕೂ ದೂರದಿಂದಲೇ ಕೈ ಮುಗಿದು ವ್ಯಾವಹಾರಿಕ ನೆಲೆಯಾದ ರಾಜಧಾನಿ ದೆಹಲಿಯಲ್ಲಿನ ಕುತುಬಮಿನಾರವನ್ನು ತನ್ನ ನೆಲೆಯಾಗಿ ಆರಿಸಿಕೊಂಡಿದ್ದಾನೆ. ಚೋಟು, ಗೇಣು, ಆಕಾಶ ಈ ಮೂರು ಶಬ್ದ ಗಳು ವಾಮನನ ಮೂರು ಹೆಜ್ಜೆಗಳಂತೆ ಈತ ಕ್ಷಿಪ್ರವಾಗಿ ರಾಜಕೀಯ ರಂಗದಲ್ಲಿ ಪ್ರಸಿದ್ಧಿಗೆ ಬಂದ ಪರಿಯನ್ನು ಚಿತ್ರಿಸುತ್ತವೆ. ಕೆರೆ–ಸಾಗರಗಳ ಹೋಲಿಕೆಯೂ ಈ ದಿಕ್ಕಿನಲ್ಲೇ ಬೆಳೆದರೂ ಆ ನಾಯಕನ ಬೆಳವಣಿಗೆ ಸ್ವಚ್ಛವಾದುದಲ್ಲ ಎಂಬುದನ್ನು 'ರಾಡಿ

ವ್ಯೆ ' ಎಂಬ ಮಾತು ಸ್ಪಷ್ಟಗೊಳಿಸುತ್ತದೆ. ಬುದ್ಧನಾಗುವುದಾಗಲಿ ಪರ್ವತಸಾಹಸಿಯಾಗುವುದಾಗಲಿ ಅವನಿಗಿಷ್ಟವಿಲ್ಲದ, ಕೈಲಾಗದ ಸಂಗತಿ. ಆದರೆ ಇನ್ನೊಬ್ಬರನ್ನು ಅನುಕರಿಸುವ ಚಟ ತನಗಿಲ್ಲ, ತಾನು ಸ್ವೋಪಜ್ಞ ಎಂಬ ಹೆಮ್ಮೆಯಿಂದ ಬೀಗುತ್ತಾನೆ. ತಮ್ಮ ಅಳತೆಗೆ ಮೀರಿದ ವಿಷಯಗಳ ಬಗೆಗೂ ರಾಜಕಾರಣಿಗಳು ಎಂಥ ಧೋರಣೆ ತಳೆಯಬಲ್ಲರೆಂಬುದಕ್ಕೆ ಈ ಉಡಾಫೆಯ ಮಾತುಗಳು ಸಾಕ್ಷಿಯಾಗುತ್ತವೆ.

ಎರಡನೆಯ ಚರಣದಲ್ಲಿ ನಾಯಕನ ಸರ್ವಾಂತರ್ಯಾಮಿತ್ವದ ಚರ್ಚೆಯಿದೆ. ಬಾಲ ಗುಂಡಾಡಿಸುವ ಅನುನಯಪ್ರವೃತ್ತಿ, ಹೋದ ಹೋದಲ್ಲಿ ಪ್ರತಾಪವನ್ನು ಕೊಚ್ಚಿಕೊಳ್ಳುವ ಜಾಣತನ, ಮುದ್ದಾಗಿ ತೋರುತ್ತಲೇ ಹಟಾತ್ತಾಗಿ ಹದ್ದಾಗಿ ಹಾರುವ ಸಮಯ ಸಾಧಕ ಬುದ್ಧಿ, ಇಂಥ ತನ್ನ ' ಕಲ್ಯಾಣ ಗುಣ 'ಗಳನ್ನು ಒಗ್ಗಿಸಿಕೊಳ್ಳಲಾಗದ ಪ್ರಾಮಾಣಿಕ ಜನರ ಬಗೆಗೆ ತಿರಸ್ಕಾರ ಬೆರೆತ ಅನುಕಂಪೆ, ತನ್ನ ಬಗೆಗೆ ಡಂಗುರ ಸಾರಿಕೊಳ್ಳುವ ಬುದ್ಧಿ, ಕಾರ್ಯ ಸಾಧನೆಗಾಗಿ ಉನ್ನತ ವಲಯಗಳಲ್ಲಿ ಡೊಗ್ಗು ಸಲಾಮು ಹೊಡೆಯುತ್ತ ಕೆಳ ಸ್ತರದಲ್ಲಿ ಕೋಳಿಮರಿಗಳಂತಹ ಪುಕ್ಕಲು ಜನರ ಮೇಲೆ ಸಾಧಿಸುವ ರೊಚ್ಚು ಇಲ್ಲಿ ವರ್ಣಿತವಾಗಿವೆ. ಕವಿಗೆ ಇಂಥದೊಂದು ಸಂದರ್ಭದಲ್ಲಿ ನಾಯಕನ ಸಾಕ್ಷಾತ್ ಪರಿಚಯವಾಗುತ್ತದೆ. ಗುಂಪುಗೂಡಿಸುವುದರಲ್ಲಿ ಆತ ಪ್ರಸಿದ್ಧ ಎಂಬುದನ್ನು ' ಚಿಕ್ಕೆ ಬಳಗದ ಚಂದ್ರ ' ಎಂಬ ಮಾತು ಸಮರ್ಥವಾಗಿ ಧ್ವನಿಸುತ್ತದೆ. ಇಷ್ಟಾದರೂ ಕವಿಯ ದೃಷ್ಟಿಯಲ್ಲಿ ಆತ ಸವೆದ ಪಾವಲಿಗಳ ನಡುವೆ ಹೊಳೆಯುವ ಬೆಳ್ಳಿರೂಪಾಯಿ ಅಷ್ಟೆ. ಆತನಲ್ಲಿ (Sterling Qualities) ಅಪರಂಜಿತನ ಇಲ್ಲ. ಇವನ ಅಭಿರುಚಿ ಬರಿಯ ವ್ಯಾಪಾರಿಯ ಮಟ್ಟದ್ದು ಎಂಬುದನ್ನು ' ತಕ್ಕಡಿಯ ಪರಡಿ ' ಎಂಬ ಸಂಕೇತ ಖಚಿತಗೊಳಿಸುತ್ತದೆ. ಈತನ ಆಸೆ ಆಮಿಷಗಳು ಇತಿಮಿತಿಯಿಲ್ಲದಂಥವು, ಜೀರ್ಣಶಕ್ತಿಯೂ ಅದ್ಭುತವಾದದ್ದು. ಕಳ್ಳು ದ್ರಾಕ್ಷಾರಸಗಳ ಸೇವನೆಯಿಂದ ಬರುವ ಅಮಲು ಈ ದುರಾಶೆಯ ಅಮಲಿನ ಎದುರಿಗೆ ತೀರ ಸಪ್ಪೆಯಾಗಿ ಬಿಡುತ್ತದೆ.

ಮೂರನೆಯ ಚರಣಖಂಡ ನಾಯಕನ ನಡವಳಿಕೆಯ ಇನ್ನೊಂದು ಪುಟವನ್ನು ತೆರೆಯುತ್ತದೆ. ಹಣದ ಸಂಗೀತಕ್ಕೆ ಒಲಿದ ಮನಸ್ಸು ಈತನದು, ಈ ರಾಗವನ್ನು ಒಲಿಸಿಕೊಳ್ಳುವವನು ಉಳಿದವರ ಟೀಕೆಗಳಿಗೆ ಸೊಪ್ಪುಹಾಕುವುದಿಲ್ಲ. ಲೆಕ್ಕದ ಪುಸ್ತಕ ಅವನಿಗೆ ವೇದದಷ್ಟು ಪೂಜ್ಯ. ಮೈದಾಸನ ಕಥೆಯನ್ನು ಬರೇ ಕೇಳಿದ್ದೇವಷ್ಟೆ. ಆದರೆ ಆತನಂಥವನೂ ಈ ನಾಯಕನ ಸಮಕ್ಕೆ ನಿಲ್ಲಲಾರ. ದುಡ್ಡು ಸೇರಿಸುತ್ತ ಹೊರಟಾಗ ವ್ಯಕ್ತಿ ತನ್ನ ಸುತ್ತ ಎಂಥ ಭಂಡ ಬೇಲಿಯನ್ನು ಹಾಕಿಕೊಳ್ಳುತ್ತಾನೆಂಬುದು ಇಲ್ಲಿ ವಿಶದವಾಗುತ್ತದೆ.

ನಾಲ್ಕನೆಯ ಚರಣದಲ್ಲಿ ನಾಯಕನ ವ್ಯಾವಹಾರಿಕ ಮುಖದ ಹತ್ತಾರು ಮೊಡವೆಗಳನ್ನು ಚಿತ್ರಿಸುತ್ತ ಹೋಗುತ್ತದೆ. ಅಸೂಯೆ ಇಲ್ಲಿಯ ಸ್ಥಾಯಿ. ಸಭ್ಯರ ಜೀವನರೀತಿ ಈತನಿಗೆ ನುಂಗಲಾರದ ತುತ್ತಾಗುತ್ತದೆ, ಅವರ ಬಿಳಿಯ ಬಟ್ಟೆಯ ಮೇಲೆ ಮಸಿ ಸಿಡಿಸಲು

ಅವಕಾಶ ಹುಡುಕುತ್ತಾನೆ. ಎಲ್ಲರ ತಲೆಗಳೂ ಇರುವುದು ಟೋಪಿಹಾಕಿಸಿಕೊಳ್ಳುವುದಕ್ಕೆ ಮಾತ್ರ ಎಂದು ಈತ ನಂಬುತ್ತಾನೆ. ಊರಿನ ಉಸಾಬರಿ ಹಚ್ಚಿಕೊಂಡಂತೆ ನಟಿಸಿ ಎಲ್ಲರ ನಡುವೆ ಕಿತಾಪತಿ ಎಬ್ಬಿಸುವುದೇ ಈತನ ಉದ್ದೇಶ. ಈ ಮೂರು ದುರ್ಗುಣಗಳನ್ನು ಸಮರ್ಥವಾಗಿ ರೂಪಿಸಲು ಕವಿ ಬಸವಣ್ಣನ ಕಾಲದಲ್ಲಿ ಚಾಡಿಗೆ ಪ್ರಸಿದ್ಧನಾಗಿದ್ದ ಕೊಂಡೆ (ಚಾಡಿ)ಯ ಮಂಚಣ್ಣ, ಮಹಾಭಾರತದ ಶಕುನಿ, ಕರಟಕ ದಮನಕ ಇವರನ್ನೆಲ್ಲ ಉದ್ಧರಿಸಿದ್ದಾರೆ. ಈ ಚರಣದಲ್ಲಿ ಉದ್ದಕ್ಕೂ ಐತಿಹಾಸಿಕ, ಪೌರಾಣಿಕ ಪ್ರತಿಮೆಗಳು, ಪ್ರಾಣಿ, ಸಸ್ಯ ಲೋಕಗಳ ರೂಢಸಂಕೇತಗಳು ಬೆಳೆದುಕೊಂಡು ಬಂದು ನಾಯಕನ ಸಂಕೀರ್ಣ ವ್ಯಕ್ತಿತ್ವವನ್ನು ಪರಿಚಯ ಮಾಡಿಕೊಡುತ್ತವೆ. ಐದನೆಯ ಚರಣದಲ್ಲಿ ಭಗವಂತನ ವಿಶ್ವರೂಪದರ್ಶನವಾಗಿ ತತ್ತರಿಸಿದ ಅರ್ಜುನನ ಸ್ಥಾನದಲ್ಲಿ ನಿಂತ ಕವಿ ಈ ಜನತಾ ಜನಾರ್ದನನ ಕಾಮರೂಪಗಳನ್ನು ಮತ್ತೆ (ಬೇಸರವಿಲ್ಲದೆ) ವರ್ಣಿಸತೊಡಗುತ್ತಾನೆ. ಐವತ್ತೇಳನೆಯ ಸಾಲಿನಿಂದ ಒಂಬತ್ತು ಸಾಲುಗಳವರಗೆ ಲಾಸ್ಯವಾಡುವ 'ಗ'ಕಾರದ ಶಬ್ದಾಭಿನಯ (ಗುಮ್ಮನ ಗುಸುಗ, ಚುಚುಗ, ತಿಂದುಚುಗ, ಬಾವುಗ) ವಿವಿಧ ತರಂಗಗಳಲ್ಲಿ ಪ್ರಸಾರಗೊಳ್ಳುತ್ತದೆ. (ಕೊನೆಯ ಐದು ಸಾಲುಗಳಲ್ಲಿ ಬರುವ 'ನ'ಕಾರದ ಪುನರಾವೃತ್ತಿಗೆ ಈ ಬಾಹುಳ್ಯವಿಲ್ಲ) ಮೇಲು ನೋಟಕ್ಕೂ ಒಳಚರ್ಯೆಗೂ ಸಮುದ್ರದಷ್ಟು ಅಂತರವಿರುವುದನ್ನು ಈ ಸಾಲುಗಳು ತೋರಿಸುತ್ತವೆ. ಅವನ ಸರ್ವೇಂದ್ರಿಯಗಳೂ ಹೇಗೆ ವಿರೋಧಾಭಾಸದ ಒಳಸಂಚಿನಲ್ಲಿ ಸಹಕಾರಿಯಾಗಿವೆ ಎಂಬುದು ಇಲ್ಲಿನ ಸಾಲುಗಳಲ್ಲಿ ಸ್ಪಷ್ಟವಾಗಿ ಚಿತ್ರಿತವಾಗಿದೆ. ಕಣ್ಣು, ತುಟಿ, ನಾಲಗೆ, ಮೂಗು, ಚರ್ಮ ಇವೆಲ್ಲ ಆತನ ಸ್ವಾರ್ಥಕ್ಕೆ ಉಪಯೋಗವಾಗುವಂತೆಯೇ ನಟಿಸುತ್ತವೆ. ಒಳಮುಚುಗ, ಚುಚುಗ, ಉಚುಗ ಈ ಮೂರು ಶಬ್ದಗಳು ನಾಯಕನ ಬುದ್ಧಿ-ವೈಪರೀತ್ಯಗಳನ್ನು ಮಾರ್ಮಿಕವಾಗಿ ತಿಳಿಯಪಡಿಸುತ್ತವೆ, ಶ್ಲೇಷೆಯಿರುವ ಈ ಸಾಲುಗಳಿಗೆ ಸ್ವಲ್ಪ ಅರ್ಥವಿವರಣೆ ಅಗತ್ಯ, 'ಒಳಮುಚುಗ' ಎಂದರೆ ಮುಟ್ಟಿದರೆ ಮುನಿ ಎಂಬ ಸಣ್ಣ ಮುಳ್ಳಿನ ಕಂಟಿ. ನಾಯಕನೂ ಅಂಥವನೇ, ಆದರೆ ಆತನ ಈ ಸಂಕೋಚನ, ಅವರಿವರ ಆಘಾತದಿಂದಾಗಲಿ ತನ್ನ ಮಾರ್ದವತೆಯಿಂದಾಗಲಿ ಬಂದ ಗುಣವಲ್ಲ. ಒಳಮುಚುಗ ಎಂಬ ಶಬ್ದಕ್ಕೆ ಶ್ಲೇಷೆಯ ಎರಡನೆಯ ಅರ್ಥವೂ ಈತನಿಗೆ ಅನ್ವಯಿಸುತ್ತದೆ. ಈ ನಾಯಕ ಎಷ್ಟೋ ವಿಷಯಗಳನ್ನು ಹೊರಗಿನವರಿಗೆ ತಿಳಿಯದ ಹಾಗೆ, ಸ್ವಾರ್ಥದೃಷ್ಟಿಯಿಂದ ಒಳಗೇ ಮುಚ್ಚಿಟ್ಟುಕೊಳ್ಳಬಲ್ಲವನು. ಎರಡನೆಯದು 'ಚುಚುಗತನ' ಬೇಯಿಸಲು ಇಟ್ಟ ಪದಾರ್ಥ ಸರಿಯಾಗಿ ಬೆಂದಿದೆಯೋ ಇಲ್ಲವೋ ಎಂದು ಪರೀಕ್ಷಿಸಲು ಅಡುಗೆ ಮನೆಯಲ್ಲಿ 'ಚುಚುಗ' ಎಂಬ ಉಪಕರಣವನ್ನು ಬಳಸುತ್ತಾರೆ. ಈತ ಆ ಉಪಕರಣದ ಹಾಗೆ ಎಲ್ಲರನ್ನೂ ಪರೀಕ್ಷೆಗೆ ಒಳಪಡಿಸುವ ಸ್ವಭಾವದವ ಅಲ್ಲದೆ ಚುಚುಗದ ತುದಿ ಚೂಪಾಗಿರುವುದರಿಂದ ಚುಚ್ಚಿ ನೋಡುವುದೂ ಸಾಧ್ಯವಾಗುತ್ತದೆ. ಹಾಗೆಯೇ ಈತ ಎಲ್ಲರನ್ನೂ ಚುಚ್ಚಿ, ಶೋಷಿಸಿ ಖುಷಿಪಡುವಾತ. 'ತಿಂದುಚುಗತನ', ಅಂದರೆ ತಿಂದದ್ದನು ತಿಂದ ಜಾಗದಲ್ಲೇ ವಿಸರ್ಜನೆ ಮಾಡುವುದು. ಅಂದರೆ ಕೊಳಕು ಬುದ್ಧಿ, ಉಪಕಾರಗೇಡಿತನ ಈ ಎರಡೂ

ನಾಯಕನಿಗೆ ಸಿದ್ಧಿಸಿವೆ. ಈ ಮೂರು ಬಗೆಯ ದುರ್ಗುಣಗಳ ನಾಯಕನನ್ನು ಕವಿ ಕಳ್ಳ ಬೆಕ್ಕಿಗೆ ಹೋಲಿಸಿದ್ದಾರೆ. ಈ ಕಲಹಲಂಪಟನ ಗುಮ್ಮನ ಗುಸುಗತನ ಮತ್ತು ಪ್ರಚಾರ ತಂತ್ರಗಳನ್ನು ವಿಶ್ವಮಹಾಯುದ್ಧದಲ್ಲಿ 'ಗೊಬೆಲ್ಸ್ ಮಹಾಶಯ'ನ ಯುದ್ಧ ತಂತ್ರಗಳ ಹಿನ್ನೆಲೆಯಲ್ಲಿ ತೂಗಿ ನೋಡಿದ್ದಾರೆ.

ಕಡೆಯ ಚರಣದಲ್ಲಿ ಮತ್ತೆ ಕವಿ ಈ ನಾಯಕನ ಪರಿಚಯ ತನಗೊದಗಿದ ಒಂದು ಸಂದರ್ಭವನ್ನು ಪ್ರಸ್ತಾಪಿಸಿದ್ದಾರೆ. ಅವತಾರಿಯನ್ನು ಕಂಡ ಅರ್ಜುನನಿಗಾದಂತೆ ಈ ಅಪರಾವತಾರಿಯನ್ನು ಕಂಡಾಗ ತಮ್ಮ 'ಅತ್ಯಲ್ಪ ಚೇತನ' ಹೇಗೆ ನಡುಗಿಹೋಯಿತು ಎಂಬುದನ್ನು ವ್ಯಂಗ್ಯವಾಗಿ ಚಿತ್ರಿಸಿದ್ದಾರೆ. ಇಂಥ ವ್ಯಂಗ್ಯ ಧೋರಣೆಗೆ ಅನುಗುಣವಾಗಿ ಈ ನಾಯಕನನ್ನು 'ಪರಮ ಸ್ನೇಹಿತ' 'ಸ್ನೇಹಕೆಂದೇ ಈ ಇಳೆಗೆ ಅವತರಿಸಿದವ' ಎಂದು ಕರೆದು ಗೀತೆಯ ನೆನಪಿನಿಂದ ಮುಕ್ತಾಯ ಹಾಡಿದ್ದಾರೆ.

ಈ ಕವಿತೆ ಸ್ವಾತಂತ್ರ್ಯ ಬಂದ ಹತ್ತೇ ವರ್ಷಗಳಲ್ಲಿ ನಮ್ಮ ರಾಜಕಾರಣ ಕ್ಷೇತ್ರದಲ್ಲಿ ಪುಢಾರಿಯೊಬ್ಬ ಏನೆಲ್ಲ ದ್ರವ್ಯಗಳಿಂದ ಶೋಭಿಸಬಲ್ಲ ಎಂಬ ವಿವೇಚನೆಗೆ ಮೀಸಲಾಗಿದೆ. ಸ್ವಾಂತಂತ್ರ್ಯಪೂರ್ವದ ನಾಯಕರಿಗೂ ಇಂದಿನ ನಾಯಕರಿಗೂ ಇರುವ ವ್ಯತ್ಯಾಸವೂ ಇಲ್ಲಿ ತಟಕ್ಕನೆ ಎದ್ದು ಕಾಣುತ್ತದೆ. ಇಂದಿನ ನಾಯಕನಿಗೆ ಅಭಿಮಾನದ, ಆದರ್ಶದ, ಶೀಲ ನಿರ್ಮಾಣದ ಗೊಡವೆಗಳು ಅಂಟುವುದಿಲ್ಲ. ಈತ ರಾಷ್ಟ್ರ ಚೇತನವನ್ನು ಮಲಿನಗೊಳಿಸುವ ಅಪರಾವತಾರವನ್ನು ಎತ್ತಿ ಬಂದಿದ್ದಾನೆಂಬ ಧ್ವನಿ ಇಲ್ಲಿದೆ. ಉದ್ದಕ್ಕೂ ಅಣಕದ ಒಳ ದನಿಯಿದ್ದು ಹೇರಳವಾದ ಲಕ್ಷ್ಯಗಳ ಉಲ್ಲೇಖದಿಂದ ಆ ಧ್ವನಿಯ ಗಡಸುತನವನ್ನು ಬಿತ್ತರಿಸುವ ಪ್ರಯತ್ನ ನಡೆದಿದೆ.

ಕವಿತೆಯ ಹಿಂದೆ ಕವಿಯ ಸಾಮಾಜಿಕ ಕಾಳಜಿ ವ್ಯಕ್ತವಾಗಿದೆ ಎಂಬುದು ನಿಜವಾದರೂ ಕಣವಿಯವರು ಇಂಥದೊಂದು ವಸ್ತು ಬೇಡುವಷ್ಟು ಪ್ರಮಾಣದಲ್ಲಿ ತಮ್ಮ ವ್ಯಂಗ್ಯ-ಕಾಕುಗಳ ಹತಾರುಗಳನ್ನು ಹರಿತಗೊಳಿಸಿಕೊಂಡಿಲ್ಲ ಎನ್ನಿಸುತ್ತದೆ. ಗೌರೀಶ ಕಾಯ್ಕಿಣಿ ಯವರೆನ್ನುವಂತೆ "ಕಣವಿಯವರಿಗೆ ಒಂದು ಸಾಮಾಜಿಕ ಆದರ್ಶ ಇದೆ, ಅದರೆ ಅದು ಮೂರ್ತಿಭಂಜಕ ರೀತಿಯದಲ್ಲ, ರಾಜಕೀಯ ಪ್ರಜ್ಞೆ ಇವರಲ್ಲಿ ಸ್ಥಗಿತ, ಸ್ತಿಮಿತ." ಇನ್ನೊಂದು ಸಂಗತಿಯೆಂದರೆ ಪೂರ್ವಾಪರ ಸಂಬಂಧವಿಲ್ಲದ ನಿದರ್ಶನ-ಸಂಕೇತಗಳನ್ನು ಸುಮ್ಮನೆ ಒಂದಾದ ಮೇಲೊಂದರಂತೆ ಕೆಡವುತ್ತ ಹೋಗಿರುವುದರಿಂದ ಅವೆಲ್ಲ ಮೂಲ ರಾಗವೊಂದನ್ನು ಪ್ರಚುರಪಡಿಸಲು ಸಹಾಯಕವಾಗುವ ಸಹಕಾರೀ ಧ್ವನಿಯಾಗುವ ಬದಲಿಗೆ ತಮ್ಮ ತಮ್ಮ ವಿಶಿಷ್ಟ ಸ್ವರಗಳನ್ನು ರಂಜಕವಾಗಿ ಮೆರೆಸುವ ಕಾರ್ಯದಲ್ಲಿ ತೊಡಗಿವೆಯೇನೋ ಎನ್ನಿಸುತ್ತದೆ.

ಕೊನೆಯದಾಗಿ ಕವಿ ಇಂಥ ನಾಯಕನ ಆಕಸ್ಮಿಕ ಪರಿಚಯ ತನಗಾಯಿತೆಂದು ಎರಡು ಸಲ ಕೊಡುವ ಹೇಳಿಕೆಯನ್ನು ಬಿಟ್ಟರೆ ಕವಿತೆಯ ಯಾವ ಭಾಗದಲ್ಲೂ ಕವಿ ತನ್ನ-ನಾಯಕನ ಸಂಬಂಧವನ್ನು ಕುರಿತು ಚಿಂತಿಸಿದಂತೆ ಕಂಡುಬರುವುದಿಲ್ಲ. ಆದ್ದರಿಂದ ಇಂಥ

ಕವಿತೆಗಳಲ್ಲಿ ಅತ್ಯಗತ್ಯವಾದ 'ಆಪ್ತತೆ' ತಪ್ಪಿದಂತಾಗಿದೆ. ತನಗೆ ಕಂಡ ನಾಯಕನೊಬ್ಬನ ಮೂಲಕ 'ನಾಯಕ ಲಕ್ಷಣ'ಗಳನ್ನು ವಿವರಿಸುವುದಕ್ಕೂ, ಬರಿಯ ಲಕ್ಷಣ ಸೂತ್ರಗಳಿಂದ ಸರಳೀಕರಿಸಿ ಒಬ್ಬ ನಾಯಕನನ್ನು ಕಟ್ಟುವುದಕ್ಕೂ ತುಂಬ ವ್ಯತ್ಯಾಸವಿದೆ.

ಶಾಂತರಸ

# 'ನೀಲಾಂಬಿಕೆ'

ಮಹಾತ್ಮರನ್ನು ಕುರಿತು ಕಾವ್ಯ ಕಟ್ಟುವುದು ಸುಲಭವಾದ ಕೆಲಸವಲ್ಲ. ಐತಿಹಾಸಿಕ ವ್ಯಕ್ತಿಗಳನ್ನು ಕುರಿತು ಬರೆಯುವುದು ಇನ್ನೂ ಕಷ್ಟದ ಕೆಲಸ; ಅವರು ಏರಿದ ಎತ್ತರಕ್ಕೆ ಏರಿ, ಅವರು ಬದುಕಿದ ತತ್ವಗಳನ್ನು ಅನುಭವಿಸಿ ಅವರಲ್ಲಿ ಒಂದಾದವನಿಗೆ ಮಾತ್ರ ಅವರ ವ್ಯಕ್ತಿತ್ವವನ್ನು ಚಿತ್ರಿಸುವುದು ಸಾಧ್ಯ. ಇದು ಇಲ್ಲದೆ ಹೋಗಿ ಅನೇಕ ಕವಿಗಳು ಯಾರಾರು ಯಾರನ್ನೋ ಕುರಿತು ಬರೆದ ಕಾವ್ಯಗಳು, ಪದ್ಯಗಳು "ಕುರಿಗಳೋಪಾದಿಯಲಿ ಹೊರಗಣ ಕಬ್ಬಿನೆಲೆಯನು ಮೇದಕಟ ಮೆಲುಕಿರಿವುತಲ್ಪ ಸುಖಕ್ಕೆ ಸೋತ" ಸ್ಥಿತಿಯುಳ್ಳುವಾಗಿವೆ. ಇದಕ್ಕೆ ನಮ್ಮ ಹಳಗನ್ನಡ ಕವಿಗಳೂ ಹೊರತಾಗಿಲ್ಲ. ಪಂಪ, ಹರಿಹರ, ಚಾಮರಸ, ರತ್ನಾಕರ ಈ ಕೆಲವರು ಮಾತ್ರ ತಾವು ಆರಿಸಿಕೊಂಡ ವ್ಯಕ್ತಿಗಳ ಪರಿಪೂರ್ಣ ಚಿತ್ರಕೊಡಲು ಸಮರ್ಥರಾಗಿದ್ದಾರೆ. ಉಳಿದ ಕವಿಗಳಿಗೆ ಸಾಧ್ಯವಾಗದುದು ಇವರಿಗೆ ಸಾಧ್ಯವಾದುದಕ್ಕೆ ಒಂದು ಮಹತ್ವವಾದ ಕಾರಣವಿದೆ. ಇವರು ತಮ್ಮ "ಸ್ವಂತಿಕೆ"ಯನ್ನು ಅಲ್ಲಿ ತೂರಿಸುವುದಿಲ್ಲ; ತಮ್ಮ ಬಣ್ಣವನ್ನು ಅಲ್ಲಿ ಬಳಿಯುವುದಿಲ್ಲ, ತಮ್ಮ ವೈಯಕ್ತಿಕ ವಿಚಾರಗಳನ್ನು ಅಲ್ಲಿ ತುರುಕುವುದಿಲ್ಲ ; ತಮ್ಮ ಕಲ್ಪನೆಯ ಅಡ್ಡತಿಡ್ಡ ರೇಖೆಗಳ್ನು ಅಲ್ಲಿ ಎಳೆಯುವುದಿಲ್ಲ. ಈ ಕೆಲಸ ಪೌರಾಣಿಕ ವ್ಯಕ್ತಿಗಳ ಚಿತ್ರಣದಲ್ಲಿ ರಾಜಾರೋಷವಾಗಿ ನಡೆಯುತ್ತದೆ. ಅಂತೆಯೇ ಐತಿಹಾಸಿಕ ವ್ಯಕ್ತಿಗಳ ಚಿತ್ರಣ ಬಹು ಕಷ್ಟದ್ದೆಂದು ಈ ಮೊದಲು ಹೇಳಿದೆ.

ಮಹಾತ್ಮರನ್ನು ಕುರಿತು ಬಿಡಿ ಕವನಗಳನ್ನು ಬರೆಯುವುದು ಎಲ್ಲಕ್ಕೂ ಹೆಚ್ಚಿನ ಕಷ್ಟದ ಕೆಲಸ. ಬಿಂದುವಿನಲ್ಲಿ ಸಿಂಧುವಿನ ದರ್ಶನ ಮಾಡಿಸಿದಂತೆ ಈ ಕೆಲಸ. ಒಂದು ದೊಡ್ಡ ಕಾವ್ಯವನ್ನು ಬರೆದು ವ್ಯಕ್ತಿತ್ವವನ್ನು ಎಳೆ ಎಳೆಯಾಗಿ ಚಿತ್ರಿಸಬಹುದು. ಆದರೆ ಕಿರುಗವನದಲ್ಲಿ ಆ ವ್ಯಕ್ತಿತ್ವದ ಸಾರ ಸರ್ವಸ್ವ ಅಡಗುವಂತೆ ಚಿತ್ರಿಸುವುದು ಹಗುರಾದುದಲ್ಲ. ಹೊಸಗನ್ನಡ ಕಾವ್ಯದಲ್ಲಿ ಈ ಕೆಲಸಕ್ಕೆ ಕೈಹಾಕಿದವರು ಹಲವರಿದ್ದಾರೆ; ಆದರೆ ಅವರಲ್ಲಿ ಬಹು ಜನರು ಸೋತಿದ್ದಾರೆ ; ಸರ್ವದೃಷ್ಟಿಯಿಂದ ಗೆದ್ದವರು ಶ್ರೀ ಚೆನ್ನವೀರ ಕಣವಿಯವರು.

ಅನೇಕ ವ್ಯಕ್ತಿಗಳನ್ನು ಕುರಿತು ಶ್ರೀ ಕಣವಿಯವರು ಕವನಗಳನ್ನು ಬರೆದಿದ್ದಾರೆ. ಆ ವ್ಯಕ್ತಿಗಳಲ್ಲಿ ಒಂದಾಗಿ ಬರೆಯುವುದೇ ಕಣವಿಯವರ ವೈಶಿಷ್ಟ್ಯ. ವ್ಯಕ್ತಿಗಳ ಅಂತರಂಗವನ್ನು, ಅವರ ಆಳ ಎತ್ತರಗಳನ್ನು ಸೂಕ್ಷ್ಮವಾಗಿ, ಕುಸುರು ಕುಸುರಾಗಿ ಚಿತ್ರಿಸುವ ಅವರ ಸಂಸೀತಗಳು ಕನ್ನಡ ಕಾವ್ಯಲೋಕಕ್ಕೆ ವಿಶಿಷ್ಟ ಕೊಡುಗೆಯಾಗಿವೆ. ಅವುಗಳದೇ ಒಂದು ಪ್ರತ್ಯೇಕ ಅಧ್ಯಯನ ನಡೆಯಬೇಕು.

ನನ್ನ ದೃಷ್ಟಿಯಲ್ಲಿ: ಕಣವಿಯವರ 'ಜಾಯಮಾನ' ಮೃದು; ಇದರ ಒಡಲು ಸಾತ್ವಿಕ ಧೈರ್ಯದಿಂದ ತುಂಬಿದೆ; ಚಿಂತನಶೀಲತೆ, ಸಂಯಮ, ಪ್ರಾಮಾಣಿಕತೆ, ಲೇಸಿನ ಬಯಕೆ–ಇವುಗಳಿಂದಾದುದು ಅವರ ಶೀಲ-ಶೈಲಿ. ಈ ಶೈಲಿ ಲೀಲಾಜಾಲವಾಗಿ ಶರಣರ ಚಿತ್ರಗಳನ್ನು ಚಿತ್ರಿಸುತ್ತದೆ.

ಬಸವಣ್ಣನವರ ಹೆಂಡತಿ ನೀಲಾಂಬಿಕೆ 'ಪೃಥ್ವಿಗಗ್ಗಳೆ ಚೆಲುವೆ'; ಬಸವಣ್ಣನವರು ಹಮ್ಮಿಕೊಂಡ ಮಹಾಮಣಿಹದ ಜೀವ ಜೀವಾಳ. ಅನೇಕ ವೇಳೆ ಬಸವಣ್ಣನವರು ಕೇವಲ ವಿಚಾರವಾಗಿ ತೋರಿದರೆ ಆಕೆ ಆಚಾರವಾಗಿ ಮೆರೆಯುತ್ತಾಳೆ. ಕಲ್ಯಾಣಕ್ರಾಂತಿಯ ಯಶಸ್ಸಿನ ಗುಟ್ಟು ಆಕೆ. ಆಕೆಯ ವ್ಯಕ್ತಿತ್ವವನ್ನು ಕಣವಿಯವರು 'ನೀಲಾಂಬಿಕೆ' ಎಂಬ ಕವನದಲ್ಲಿ ಕಲಾತ್ಮಕವಾಗಿ ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ನಾವಿಲ್ಲಿ ಕಾಣುವುದು ಆಕೆಯ ಹೊರ ಸೌಂದರ್ಯವನ್ನಲ್ಲ; ಅಂತರಂಗದ ತನಿ ಬೆಳಗನ್ನು: ಜೊತೆಗೆ ಆಕೆಯ ಸಮಗ್ರ ಜೀವನ ದರ್ಶನವನ್ನು.

ಆರು ಪದ್ಯ (Stanza)ಗಳಿಂದ ಕೂಡಿದ ಈ ಕವನ ನೀಲಮ್ಮನ ಬದುಕಿನ ಷಟ್ಸ್ಥಲವಾಗಿದೆ; ಆಕೆಯ ಜೀವನದ ಮಹತ್ವದ ಹಂತಗಳನ್ನು ಚಿತ್ರಿಸುವುದರ ಜೊತೆಗೆ ಬಸವಣ್ಣನವರ ಮಹಾಮಣಿಹಕ್ಕೆ, ಕಲ್ಯಾಣಕ್ರಾಂತಿಗೆ ಆಕೆ ನೀಡಿದ ಸತ್ವ, ತತ್ವ, ಬೆಳಕುಗಳ ಪರಿಪೂರ್ಣ ಚಿತ್ರ ಮನದ ಮುಂದೆ ನಿಲ್ಲಿಸುತ್ತದೆ.

ಮೆಲ್ಲಮೆಲ್ಲನೆ ಭಕ್ತ, ಮೆಲ್ಲಮೆಲ್ಲನೆ ಮಹೇಶ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ—ಆದಾಕೆಯಲ್ಲ ನೀಲಮ್ಮ. ಪ್ರತಿ ನಿಮಿಷವೂ ಐಕ್ಯ ಸ್ಥಲದಲ್ಲಿ ನಿಂತಾಕೆ. ಆದರೆ ಈ 'ಅದ್ವೈತಕ್ಕೆ' ನೆಲೆಯಾಗಿ ಈ ನೆಲವನ್ನು, ಈ ಸಂಸಾರವನ್ನು ಆಕೆ ಮರೆಯಲಿಲ್ಲ. ಆಕೆಯ ಅದ್ವೈತ ಜೀವನಕ್ಕೆ ಹೊಂದಿಕೊಂಡಿತ್ತು. ಈ ಜೀವನ ಸುಂದರವಾಗಲು, ಈ ಜೀವಿಗಳು ಮುಕ್ತರಾಗಲು ಆಕೆ 'ಸಾಮರಸ್ಯ'ದಲ್ಲಿ ಇದ್ದರೂ ಭಕ್ತನ ಭಕ್ತ, ಭಕ್ತನ ಮಹೇಶ, ಭಕ್ತನ ಪ್ರಸಾದಿ ಮುಂತಾಗಿ ಸಮಸಮುಚ್ಚಯದ ಜೀವನ ನಡೆಸಿದಳು; ಇಂಥ ಜೀವನ ಪಡೆಯಲು ಜನರಿಗೆ ನೆರವಾದಳು. ಕಣವಿಯವರು ಆರು ಪದ್ಯಗಳಲ್ಲಿ ಇದನ್ನು ಧ್ವನಿ ಪೂರ್ಣವಾಗಿ ಚಿತ್ರಿಸಿದ್ದಾರೆ.

ಮಹಾಪುರುಷರು ತಮ್ಮ ನಡೆನುಡಿಯಿಂದ ಜನಾಂಗವನ್ನು ಶುದ್ಧೀಕರಿಸುತ್ತಾರೆ. ಅಂಥ ಒಂದು ಶುದ್ಧೀಕರಣ ನೀಲಾಂಬಿಕೆಯಿಂದ ನಡೆಯಿತೆಂಬುದನ್ನು ಕಣವಿಯವರು ಬಹು ಅರ್ಥಪೂರ್ಣ ರೂಪಕಗಳಿಂದ ಹೇಳಿದ್ದಾರೆ. ಕಲ್ಯಾಣ ಇಲ್ಲಿ ಒಂದು ಜನಾಂಗದ ಪ್ರತೀಕ; ಅದರ ಅಂಗಳದಲ್ಲಿ ನೀಲಾಂಬಿಕೆ ಸದುವಿನಯದ ತುಂಬಿದಕೊಡದ ನೀರಿನಿಂದ ತಳಿಯ ಹೊಡೆದು, ಸಮತೆಯ ರಂಗವಲ್ಲಿಯನ್ನು ಹಾಕಿದಳು; ಒಳಹೊರಗೂ ಧೂಪ ಕೊಟ್ಟಳು; ಹೊಸತಿಲಮೇಲೆ—ಅದೂ ಹಾದಾಡುವಲ್ಲಿ—ಹೊಯಲ್ದಾಡದ ದೀಪವಾಗಿ ಬೆಳಗಿದಳು.

ತುಂಬಿದಕೊಡ ಪಾವಿತ್ರ್ಯದ, ತುಂಬು ಜೀವನದ ಸಂಕೇತ. ಸದುವಿನಯ ಎಂಬುದು ಸದಾಶಿವನ ಒಲಿಸುವ ಸಾಧನ, ಅಲ್ಲದೆ ಮಾನವನ ಶೀಲಕ್ಕೆ ಅದು ತಳಹದಿ, ಇಂಥ ಸದುವಿನ

ಯದ ತುಂಬಿದ ಕೊಡ ನೀಲಮ್ಮ ತಂದು ಕಲ್ಯಾಣದ ಅಂಗಳದಲ್ಲಿ ತಳಿಹೊಡೆದಳು. ಕಲ್ಯಾಣ ಜನಾಂಗದ ಸಂಕೇತವಾದರೆ. ಅಂಗಳ ನಡೆಯು, ಜೀವಿಸುವ ಸಂಕೇತ. ಅಂಗಳಕ್ಕೂ ಮನೆಗೂ ಅವಿನಾಭಾವ ಸಂಬಂಧ. ಅಂಗಳ ಶುದ್ಧವಾದರೆ ಮನೆ ಶುದ್ಧವಾದಂತೆ. ತಳಿ ಹೊಡೆದಳು ಎಂಬ ಶಬ್ದ ಕನ್ನಡದ ನಡೆ–ನುಡಿಯ ರಸಘಟ್ಟಿಯಾಗಿದೆ; ಬಹು ಅರ್ಥ ವ್ಯಾಪ್ತಿಯುಳ್ಳ ಶಬ್ದವಿದು, ತಳಿ ಹೊಡೆಯುವುದು ಸ್ವಚ್ಛತೆಗೆ, ತಂಪಿಗೆ, ಪಾವಿತ್ರ್ಯಕ್ಕೆ ಮತ್ತು ಛಂದಕ್ಕೆ. ತಳಿ ಹೊಡೆಯುವುದಕ್ಕೆ ಮೊದಲು ಅಂಗಳವನ್ನು ಗುಡಿಸಲಾಗುವುದು, ಇದ್ದ ಕಸವನ್ನು ತೆಗೆಯಲಾಗುವುದು. ಹೀಗೆ ಸ್ವಚ್ಛವಾದ ಅಂಗಳಕ್ಕೆ ತಂಪಿಗಾಗಿ, ಇಂಪಿಗಾಗಿ, ಪಾವಿತ್ರ್ಯಕ್ಕಾಗಿ ತಳಿಹೊಡೆಯುವುದು. ನೀಲಮ್ಮ ಸದುವಿನಯದ ತುಂಬಿದ ಕೊಡದಿಂದ ಕಲ್ಯಾಣದ ಅಂಗಳಕ್ಕೆ ತಳಿಹೊಡೆದಳು ಎಂಬ ಮಾತು ಕಲ್ಯಾಣದ ಜನ ಜೀವನಕ್ಕೆ ಆಕೆ ಸ್ವಚ್ಛತೆಯನ್ನು, ಪಾವಿತ್ರ್ಯವನ್ನು. ಸೌಜನ್ಯವನ್ನು, ತಂಪನ್ನು, ಇಂಪನ್ನು, ಸೌಂದರ್ಯವನ್ನು ತಂದುಕೊಟ್ಟಳು ಎಂಬ ಅರ್ಥವೈಶಾಲ್ಯವುಳ್ಳದಾಗಿದೆ. ಜೀವನಕ್ಕೆ ಇದಿಷ್ಟೇ ಸಾಕಾಗದು. ಸಮತೆ, ಸುಜ್ಞಾನಗಳು ಬೇಕು; ಉತ್ತಮ ಅಭಿರುಚಿ ಬೇಕು, ಕಲೆ ಬೇಕು; ಉದಾತ್ತತೆ ಬೇಕು. ಸಮಚಿತ್ತದ ರಂಗೋಲಿ, ಧೂಪ, ದೀಪ ಇವುಗಳ ಸಂಕೇತಗಳಾಗಿವೆ. ತಳಿಹೊಡೆದ ಅಂಗಳಕ್ಕೆ ರಂಗವಲ್ಲಿ ಬೇಕೇ ಬೇಕು. ರಂಗೋಲಿ ಕನ್ನಡರ ಹೃದಯವಂತಿಕೆಯು, ಕಲೆಯು, ಜೀವನದರ್ಶನದ ಪ್ರತೀಕವಾಗಿದೆ. 'ಸಮ ಚಿತ್ತದ ರಂಗೋಲಿ' ಮತ್ತು 'ಹೊಯ್ದಾಡದ ದೀಪ' ಇವು ಹಿಂಜಿದಷ್ಟೂ ಅರ್ಥಕೊಡುತ್ತವೆ. ಕಲೆಗೆ ಸಮಚಿತ್ತ ಬೇಕೆ ಬೇಕು; ಕಲೆ ಇದ್ದಲ್ಲಿ ಸಮಚಿತ್ತತೆ ಇದ್ದೇ ಇರುತ್ತದೆ. ಜೀವನ ಕಲೆಗೆ ಸಮಚಿತ್ತತೆಯನ್ನು ನೀಲಮ್ಮ ಬರಿಸಿದಳು, ಜೀವನ ಕಲಾತ್ಮಕವಾಗುವಂತೆ ಮಾಡಿದಳು. ಅಲ್ಲದೆ ಹಾದಾಡುವ ಹೊಸತಿಲಲ್ಲಿ ಹೊಯ್ದಾಡದ ದೀಪ ಬೆಳಗಿದಳು. ಹೊಯ್ದಾಡದ ದೀಪ ನಿಶ್ಚಿತಜ್ಞಾನದ ನಿಶ್ಚಲ ಮಾನಸ್ಸಿನ ಕುರುಹು. ಈ ಜ್ಞಾನ ಕ್ರಿಯೆಗೆ ಹೊಂದಿಕೊಂಡಾಗ ಅದರ ಸಾರ್ಥಕತೆ. ಹಾದಾಡುವ ಹೊಸತಿಲು ಇಲ್ಲಿ ಕ್ರಿಯೆಯ ಸಂಕೇತ. 'ಕ್ರಿಯಾ–ಜ್ಞಾನ'ದ ಸಂಬಂಧ ಇಲ್ಲಿ ಬಹು ಅರ್ಥವತ್ತಾಗಿ ಮೂಡಿ ಬಂದಿದೆ. ಬೆಳಕು ಬೇಕು, ಅದೂ ನಡೆದಾಡುವಲ್ಲಿ ಬೇಕೇ ಬೇಕು. ಈ ಬೆಳಕು ನಿರಂತರ ಇರುವಂಥದಾಗಿರಬೇಕು. ಒಳ ಹೊಕ್ಕಷ್ಟೂ ಅರ್ಥ ವಿಶಾಲವಾಗುತ್ತ ಹೋಗುತ್ತದೆ—ಇಲ್ಲಿ.

ಮೊದಲನೆಯ ಪದ್ಯ ನೀಲಮ್ಮನ ವ್ಯಕ್ತಿತ್ವಕ್ಕೆ ಇಟ್ಟ ಕಳಸ. ಆಕೆಯ ಆಳವಿಸ್ತಾರ ಹೇಳುವುದಲ್ಲದೆ ಆಕೆಯ ಜೀವನದರ್ಶನವನ್ನೂ ಸಾರುತ್ತದೆ. ಇಲ್ಲಿ ಬಳಕೆಯಾಗಿರುವ ರೂಪಕಗಳು ಜೀವನದರ್ಶನದ ಬೇರೆ ಬೇರೆ ಮುಖಗಳನ್ನು ತೋರಿದರೆ ಇಡಿಯ ಪದ್ಯ (Stanza) ಒಂದೇ ರೂಪಕವಾಗಿ ನಿಂತು ಸಮಗ್ರ ಜೀವನದರ್ಶನ ಸಾರುತ್ತದೆ.

ಇನ್ನೊಂದು ಮಾತನ್ನು ಇಲ್ಲಿ ನೆನೆಯದಿರಲು ಸಾಧ್ಯವಿಲ್ಲ. ಈ ಕವನದಲ್ಲಿ ನಮಗೆ ನೀಲಮ್ಮನ ದರ್ಶನ ಆಕೆ ಸದುವಿನಯದ ತುಂಬಿದಕೊಡ ಹೊತ್ತುಕೊಂಡು ಬಂದಾಗ ಆಗುವುದು, ಅದೊಂದು ಭವ್ಯದರ್ಶನ; ನಮ್ಮ ಒಳಹೊರಗನ್ನು ಬೆಳಗುವ ದರ್ಶನ,

ಒಂದು ಜನಾಂಗವನ್ನೇ ತಿದ್ದಿದ ಆಕೆ ಅಷ್ಟೊತ್ತಿಗೆ ಎಂದರೆ ಜನರಿಗೆ ಪರಿಚಯವಾಗುವಷ್ಟರೊತ್ತಿಗೆ, ಬಸವಣ್ಣನ ಕೈಹಿಡಿಯುವಷ್ಟೊತ್ತಿಗೆ ಸದುವಿನಯ. ಸುಜ್ಞಾನ, ಸಮತೆಗಳನ್ನು ಗಳಿಸಿಕೊಂಡು ಅಪರಂಜಿಯಾಗಿದ್ದಳು; ಬಹು ಎತ್ತರಕ್ಕೆ ಏರಿದ್ದಳು; ಸಾಧಿಸುವುದನ್ನೆಲ್ಲಾ ಸಾಧಿಸಿದ್ದಳು; ಪರಿಪೂರ್ಣತೆಯ ಹಂತಕ್ಕೆ ಮುಟ್ಟಿದ್ದಳು. ಆದರೆ ಆಕೆ 'ಮಾನವಳು' ಎಂಬುದನ್ನು ನಾವು ಮರೆಯುವಂತಿಲ್ಲ ; ಕವಿ ಅದನ್ನು ಮರೆತಿಲ್ಲ. ಮುಂದಿನ ಪದ್ಯಗಳಲ್ಲಿ ಆಕೆಯ ಜೀವನ ತಿದ್ದಿಕೊಂಡುದನ್ನು ಏದ್ದಿಕೊಂಡುದನ್ನು, ಮರ್ತ್ಯವನ್ನು ಮಹವನ್ನಾಗಿ ಮಾಡುವಲ್ಲಿ ತನ್ನನ್ನು ತಾನು ಸುಟ್ಟುಕೊಂಡು ಬೆಳಕಾದುದನ್ನು, ಆಕೆಯ ಮಾನವೀಯತೆಯನ್ನು ಕವಿ ಮನೋಜ್ಞವಾಗಿ ವರ್ಣಿಸಿದ್ದಾರೆ. ಅಲ್ಲಿ ನಮಗೆ ಆಕೆ ಇನ್ನೂ ಆತ್ಮೀಯಳಾಗುತ್ತಾಳೆ; ಇನ್ನೂ ಹಿರಿಯಳೆನಿಸುತ್ತಾಳೆ.

ನೀಲಾಂಬೆಯಿಂದಲೇ ಮಹಮನೆಯ ದಾಸೋಹ. ಅಲ್ಲಿ ಆಕೆ ಮಾಸದ ಮಡಿ ಹಾಸಿದಳು; ತೃಪ್ತಿಯ ನಗೆ ಸೂಸಿದಳು ; ಗಣತಿಂತಿಣಿ ತಣಿದು ಹರಸಿತು. ಭಕ್ತಿಯ ಭಾಂಡಾರ ತುಂಬಿ ಬೆಳುದಿಂಗಳು ಹರಡಿತು. ಭಕ್ತಿ ಭಾಂಡಾರಿ ಎಂಬ ಬಿರುದು ಬಸವಣ್ಣನವರಿಗಿದೆ. ಆದರೆ ಆ ಭಾಂಡಾರವನ್ನು ತುಂಬಿದಾಕೆ ನೀಲಮ್ಮ.

ಶರಣ ತತ್ವದ ಜೀವಾಳ 'ದಾಸೋಹ'. ದುಡಿಮೆ, ಕ್ರಿಯೆ, ಜ್ಞಾನ ಇವುಗಳ ಸಾರ್ಥಕ್ಯ ದಾಸೋಹದಲ್ಲಿ. ಸಮತೆಯ, ಸಾಮರ್ಥ್ಯದ, ಸಂಪತ್ತಿನ, ಕ್ರಿಯಾ ಶೀಲತೆಯ ಸಮಾಜ ರಚನೆಯ ಎಲ್ಲ ತತ್ವಗಳು ದಾಸೋಹದಲ್ಲಿ ಅಡಗಿವೆ. ಈ ತತ್ವವನ್ನು ಬದುಕಿದಾಕೆ ನೀಲಮ್ಮ. ಬಸವಣ್ಣನ ಮಹಾಮನೆ ಶರಣರ ಸಮುದಾಯ ಜೀವನದ ಕುರುಹು. ಅಲ್ಲಿ ಕಾಯಕ, ಜ್ಞಾನ, ದಾಸೋಹಗಳ ಪ್ರಯೋಗ ನಡೆಯುತ್ತಿತ್ತು. ಅಂಥ ಮಹಮನೆಯ ದಾಸೋಹದ ಸರ್ವಹೊಣೆ ನೀಲಮ್ಮನದು. ಆ ದಾಸೋಹಕ್ಕೆ ಬರುವವರು ವ್ಯೈಗಳ್ಳರಲ್ಲ: ಕಾಯಕಶೂರರು; ಜ್ಞಾನವೀರರು, ಅನುಭಾವಿಗಳು. ಮಾಸದ ಮಡಿ ಹಾಸಿ, ಅವರವರು ಬೇಡಿದ್ದನ್ನು ಎಡೆಮಾಡಿದಾಗ, ಗಣತಿಂತಿಣಿ ದಾಸೋಹ ತತ್ವವನ್ನು ಸಮರ್ಪಕವಾಗಿ ಅರಿತು ಆಚರಿಸಿದಾಗ ಆಕೆಯ ಮೊಗದಲ್ಲಿ ಮಿಂಚಿದ್ದು ತೃಪ್ತಿಯ ನಗೆ. ತತ್ವದ ಸಮರ್ಥವಾದ, ಸಮಗ್ರವಾದ ಆಚರಣೆಯೇ ತೃಪ್ತಿ. ಕ್ರಿಯೆ, ಜ್ಞಾನ, ದಾಸೋಹಗಳಿಗೆ ಭಕ್ತಿಯೇ ಮೂಲ. "ವಂಚನೆ ಇಲ್ಲದಿಪ್ಪುದೇ ಭಕ್ತಿ", "ಭಕ್ತಿ ವಿಶೇಷವ ಮಾಡುವರೆ ಹತ್ತು ಬೆರಳುಗಳುಂಟು, ಹಾಸಿ ದುಡಿದರೆ ತನಗುಂಟು ತನ್ನ ಪ್ರಮಥರಿಗುಂಟು". "ಮಾತಿನ ಮಾತಿನಲ್ಲಿಪ್ಪುದೇ ಭಕ್ತಿ, ಮಾಡಿ ತನು ಸವೆಯದನ್ನಕ್ಕ ಮನಸವೆಯದನ್ನಕ್ಕ ....."ಇಂಥ ಭಕ್ತಿ ಬೆಳೆದಾಗ ದುಡಿಮೆಯೂ ಬೆಳೆಯುತ್ತದೆ. ದಾಸೋಹವೂ ಬೆಳೆಯುತ್ತದೆ, ಸುಜ್ಞಾನವೂ ಬೆಳೆಯುತ್ತದೆ, ಸಂಪತ್ತೂ ಬೆಳೆಯುತ್ತದೆ. ಆಗ ಜೀವನ ಬೆಳುದಿಂಗಳಿನಿಂದ ತುಂಬದೆ ಏನುಮಾಡೀತು. ಅದು ಸಹಜ.

ಸಾಮರಸ್ಯದ ನಿಲವಿಗೆ ಏರಿದ್ದರೂ ನೀಲಮ್ಮ ಹೆಣ್ಣು. ಒಂದೆರಡು ಆಭರಣ ಇಟ್ಟುಕೊಂಡಿದ್ದಳು, ಅದಕ್ಕೆ ದೊಡ್ಡ ಹಗರಣವೇ ನಡೆಯಿತು. ಸೀರೆಯೊಳಗೊಂದೆಳೆಯು

ಹೊನ್ನಿನೊಳಗೊಂದೊರೆಯ ಇಂದಿಗೆಂದು ನಾಳಿಂಗೆಂದು ತೆಗೆದಿಡದ ಬಸವಣ್ಣನವರ ಮಡದಿ ಅವರಿಗಿಂತ ಹಿಂದೆ ಬಿದ್ದಾಳೇ ? ಆಭರಣ 'ಬಲುಗಳ್ಳ'ನಿಗೆ ತೆಗೆದುಕೊಟ್ಟಳು. ಆ ಬಳಿಕ ಆಕೆ ತೊಟ್ಟ ಆಭರಣ ? "ಅನುಭಾವದ ಅಲಂಕಾರ ಆಚರಣೆಯ ತೊಟ್ಟಳು." ಹೂವನ್ನು ಮೀಡಿಯದೆ ಪರಿಮಳವನ್ನು ಮುಡಿದಂತೆ ಇದು. ಆಕೆಯು ಅನುಭಾವ ಅಲಂಕಾರವಾಯಿತು ; ಅಲಂಕಾರ ಅಷ್ಟಕ್ಕೇ ನಿಲ್ಲಲಿಲ್ಲ ; ಅದು ಆಚರಣೆಯಲ್ಲಿ ಬಂತು. ಅನುಭಾವ ಮತ್ತು ಆಚರಣೆಯಲ್ಲಿ ಭೇದ ಉಳಿಯಲಿಲ್ಲ ; ಅನುಭಾವವೇ ತಾನಾದಳು.

ಅನುಭಾವದ ಆಭರಣ ಮುಡಿದ ಆಕೆ ಬಸವಣ್ಣನವರ ನೆರಳಾಗಿ, ಆತನ ಬೆರಳಿಗೆ ಹರಳಾದಳಂತೆ. ಹಿಗ್ಗಿಸಿದಷ್ಟೂ ಅರ್ಥವಾಗುವ ಮಾತಿದು. ಅವರ ನೆರಳಾದಳು ಎಂದರೆ ಅವರನ್ನು ಚಾಚೂ ತಪ್ಪದೆ ಅನುಸರಿಸಿದಳು. ಆದರೂ ಆ ಅನುಸರಣೆ 'ಕುರುಡಲ್ಲ'. ಅಂತೆಯೇ ಆಕೆ—ನೆರಳಾದಾಕೆ—ಅವರ ಬೆರಳಿಗೆ ಹರಳಾದಳು ; ಅವರ ಕಾಯಕಕ್ಕೆ ನೆರವಾದಳು ; ಸಾಕ್ಷಿಯಾದಳು ; ಸಕಲ ಕಾರ್ಯಗಳಿಗೆ ಶಕ್ತಿಯಾದಳು. "ಭಕ್ತಿ ವಿಶೇಷವ ಮಾಡುವರೆ ಹತ್ತುಬೆರಳುಗಳುಂಟು ..." ಎಂಬ ಬಸವಣ್ಣನವರ ವಚನ ನೆನೆದಾಗ ಆಕೆ ಬೆರಳಿಗೆ ಹರಳಾದಳು ಎಂಬುದರ ಔಚಿತ್ಯ ಮನದಟ್ಟಾಗುತ್ತದೆ. ಬೆರಳಿನ ಹರಳು ಸೌಂದರ್ಯದ ಲಕ್ಷಣವೂ ಹೌದು. ಆಕೆ ಬಸವಣ್ಣನವರ ಜೀವನದ ಚೆಲುವು ; ಅವರು ಕೈಮುಟ್ಟಿ, ಮನಮುಟ್ಟಿ ಮಾಡುವ ಕೂಡಲ ಸಂಗನ ಪೂಜೆ ಆಕೆ.

'ಅರಳಾದಳು' ಎಂಬ ಮಾತು ಧ್ವನಿಪೂರ್ಣ. ಲಿಂಗಪೂಜೆಗೆ ಸಲ್ಲಿದಳು ; ಲಿಂಗಕ್ಕೆ ಅರಳಾಗಲಿಲ್ಲ ; ಲಿಂಗದಲ್ಲಿ ಅರಳಾದಳು ; ಲಿಂಗವಾಗಿ ಅರಳಿದಳು, ವ್ಯಕ್ತಿತ್ವದ ವಿಕಸನದ ಚಿತ್ರ ಬಲು ಸೊಗಸಾಗಿದೆ.

ಕಲ್ಯಾಣದಲ್ಲಿ ಕ್ರಾಂತಿಯಾಯಿತು. ರಾಜಕೀಯ ಒತ್ತಡದಿಂದ ಬಸವಣ್ಣನವರು ಯಾರಿಗೂ ಹೇಳದೆ ಕೇಳದೆ ಕಲ್ಯಾಣವನ್ನು ಬಿಟ್ಟರು ; ಮಡದಿಯರಿಗೂ ತಮ್ಮ ನೋವನ್ನು ಹೇಳಿಕೊಳ್ಳುವ ಅವಕಾಶ ಅವರಿಗಿರಲಿಲ್ಲ. ಕೂಡಲ ಸಂಗಮಕ್ಕೆ ಹೋದ ಬಳಿಕ ಮಡದಿ ನೀಲಾಂಬೆ ನೆನಪಾದಳು ; ಅಪ್ಪಣ್ಣನನ್ನು ಕಳಿಸಿದರು ಆಕೆಯನ್ನು ಕರೆ ತರಲು.

ನೀಲಮ್ಮ ಬಹುಶಃ ಬಸವಣ್ಣನವರ ರೀತಿಗೆ ಮರುಗಿರಬೇಕು. ಅಂಗೈಯಲ್ಲಿ ಲಿಂಗ ಹಿಡಿದು ಬಸವನಾಟ ಹೇಳಿದಳು : "ಅಲ್ಲಿ ಇಲ್ಲಿ ಉಭಯವಳಿದು ಅಂಗೈಯಲಿ ಸಂಗಮ; ಅಲ್ಲಿದ್ದರು ಇಲ್ಲಿಲ್ಲವೆ ಜಗದ ಜೀವ ಜಂಗಮ—" ಇದು ಆಕೆಯ ನಿಲುವು. ಬಸವಣ್ಣನವರಿಗೆ ಕೆಲವು ಸಲ ಕೇವಲ ವಿಚಾರಗಳಿದ್ದರೆ, ಅವುಗಳ ಆಚಾರ ನೀಲಮ್ಮನಲ್ಲಿತ್ತು ಎಂದು ಈ ಮೊದಲು ಹೇಳಿದ್ದು ಇದಕ್ಕಾಗಿಯೇ. ಐಕ್ಯದ ಸಮಯ ಸನ್ನಿಹಿತವಾದಾಗಲೂ ಬಸವಣ್ಣನವರಿಗೆ ಮಡದಿಯ ನೆನಪು. ಈ 'ದ್ವೈತ'ಕ್ಕೆ ನೀಲಮ್ಮ ಮರುಗಿದ್ದು 'ಬಸವ ಬೇರೆಯಲ್ಲ, ತಾ ಬೇರೆಯಲ್ಲ, ತಾವಿಬ್ಬರೂ ಒಂದೇ' ಎಂಬ ಭಾವ ಆಕೆಯಲ್ಲಿ ಬಲಿತಿತ್ತು, ಆಕೆಯ ವಚನಗಳೂ ಈ ಮಾತನ್ನು ಪುಷ್ಟೀಕರಿಸುತ್ತವೆ. ಅಂತೆಯೇ ಆಕೆಗೆ ಬಸವಣ್ಣ

ನವರು ಸಂಗಮದಲ್ಲಿ ಐಕ್ಯವಾದರೆ ತಾನೇ ಐಕ್ಯವಾದ ಅನುಭವವಾಯಿತು ; ಅದೇ ಕಾಲಕ್ಕೆ ಆಕೆ ಅಂಗೈಯು ಲಿಂಗದಲ್ಲಿ ಒಂದಾದಳು,

'ಅಂಗೈಯಲಿ ಸಂಗಮ' ಮತ್ತು 'ಪ್ರಾಣಲಿಂಗದಲ್ಲಿ ಕರಗಿ ನೀಲಾಂಬರ ಮಿಂಚಿತು' —ಈ ಎರಡು ಮಾತುಗಳು ತತ್ವ ಮತ್ತು ಕಾವ್ಯಗಳ ಸಂಗಮವಾಗಿವೆ. ಸಾಮರಸ್ಯವನ್ನು ಇಷ್ಟು ಕಾವ್ಯಮಯವಾಗಿ. ಮಧುರವಾಗಿ ಯಾರೂ ವರ್ಣಿಸಿರಲಾರರು.

ಅಂಗೈಯಲಿ ಲಿಂಗ ; ಲಿಂಗದಲಿ ದೃಷ್ಟಿ : "ಆಲಿ ನಿಂತರೆ ಸುಳಿದು ಸೂಸುವ ಗಾಳಿ ನಿಲುವುದು ; ಗಾಳಿ ನಿಂತರೆ ಮನವು ನಿಲುವುದು" : ಇದು 'ಮಹಾಂತ' ಸ್ಥಿತಿ, ಸಾಮರಸ್ಯ ಸ್ಥಿತಿ. ಇದು ಸಾವಲ್ಲ, ಬದುಕು ; ನಿಜವಾದ ಬದುಕು ; ಬದುಕಿನ ಬದುಕು ; ಮಹಾ ಬದುಕು.

'ನೀಲಾಂಬರ ಮಿಂಚಿತು' ; ಸಹಸ್ರದಳಕಮಲ ನಸುನೀಲವಿರುತ್ತದೆ ಎಂದು ನೆನೆದರೆ ಇಲ್ಲಿ ಬಳಸಿದ ನೀಲ, ಅಂಬರ, ಮಿಂಚು ಈ ಶಬ್ದಗಳ ಆತ್ಮಧ್ವನಿ ಹೊಳೆಯದೆ ಇರದು. ನೀಲಾಂಬರ ಎನ್ನುವಲ್ಲಿ ಆಕೆಯ ಹೆಸರೂ ಇಲ್ಲಿ ಸೇರಿದ್ದು ಇನ್ನೂ ಅರ್ಥಧ್ವನಿಯನ್ನು ಹೆಚ್ಚಿಸುತ್ತದೆ.

ಈ ಕವನದಲ್ಲಿರುವ ಆರು ಪದ್ಯಗಳು ಒಂದೊಂದೂ ಸ್ವಂತಕ್ಕೆ ಪರಿಪೂರ್ಣ; ಒಟ್ಟು ಕೂಡಿಸಿ ಓದಿದಾಗಲೂ ಪರಿಪೂರ್ಣ.

ಗೌರೀಶ ಕಾಯ್ಕಿಣಿ

# ಹುಲ್ಲು

"A proper study of mankind is Man" ಎಂದಿದ್ದಾನೆ, ಕವಿ ಪೋಪ. ಹಾಗೆಯೇ "The proper study of a poet is a Poem" ಎಂದು ನಾವು ಹೇಳಬಹುದು. ಒಬ್ಬ ಉತ್ತಮ ಕವಿಯು ತನ್ನ ಪ್ರತಿ ಕವನದಲ್ಲಿಯೂ ಪ್ರತಿಬಿಂಬಿತನಾಗುತ್ತಾನೆ— ಪ್ರತಿ ಬೀಜದಲ್ಲಿ ಮರವಿದ್ದಂತೆ. ಒಂದು ಕವಿತೆಯನ್ನು ಆಯ್ದು, ಆರೈಸಿ, ಅರಿತುಕೊಂಡರೆ ಅಲ್ಲಿ ನಮಗೆ ಕವಿಯ ಹೊನ್ನಿನ ಗೆರೆ—ಬಣ್ಣಗಳ ಹೊಳಪು ಬರೆದದ್ದು ಕಾಣಬಹುದು.

ಕವಿ ಕಣವಿಯವರ ಕಾವ್ಯದ ಗುಣಲಕ್ಷಣಗಳೇನು ? ಎದೆ ತುಂಬುವ ಮಾನವೀಯತೆ, ಎದೆ ತಟ್ಟುವ ಮಾರ್ಮಿಕತೆ. ನರ್ಮಸಚಿವನ ನಯಗಾರಿಕೆಯ ಹಿತೋಕ್ತಿ—ಚತುರೋಕ್ತಿ ; ಉತ್ಪ್ರೇಕ್ಷೆಯ ನವಿರಾದ ವಿಲಾಸ, ರಸಾರ್ದ್ರವಾದ ಪದಮೈತ್ರಿ ; 'ಬಂಧವಿರದ ಬಂಧುರ' ಪದ್ಯಬಂಧ. ಆವೇಶವಿಲ್ಲದ ಉತ್ಸಾಹ-ಉತ್ಸುಕತೆ, ಆಕ್ರೋಶವರಿಯದ ವಾಗ್ಮಿತೆ ; ವರ್ಣ್ಯ ವಿಷಯದ ಅದು ವಸ್ತುವಿರಲಿ, ವ್ಯಕ್ತಿ ಇರಲಿ, ಅವಿಸ್ಮರಣೀಯ ಭಾವ-ಭಂಗಿ–ನಿಲವು-ಒಲವುಗಳನ್ನು ಸೂಕ್ತವಾಗಿ ಸೆರೆಹಿಡಿದು ಮಾತಿನಲ್ಲಿ ಮುದ್ರಿಸುವ ಚೂಟಿಯ ಛಾಯಾಗ್ರಾಹಕತೆ ಮತ್ತು ಆಳವಾದ, ನೈಜವಾದ, ನಿರ್ಭರವಾದ ಪ್ರಕೃತಿ ಪಾರವಶ್ಯ, ನಿಸರ್ಗ ಸೌಂದರ್ಯದ ಆಸಕ್ತಿ.

ಕವಿ–ವಿಮರ್ಶಕ ಡಾ. ಶಂಕರ ಮೊಖಾಸಿಯವರು ಕಣವಿಯವರಲ್ಲಿ Natural mysticism ಹದಗೆಡದ ರೂಪದಲ್ಲಿ ಕಂಡಿದ್ದಾರೆ ಇಲ್ಲಿಯ Mysticism (ಅನುಭಾವ ?)ದ ವಿಚಾರ ನನಗೆ ಹೊಳೆಯದು. ಆದರೆ ಇವರಲ್ಲಿ ನಿಸರ್ಗದ ಬಗೆಗೆ ಅತ್ಯಂತ ಆತ್ಮೀಯವಾದ ಆಸಕ್ತಿಯಿದೆ. ಇದನ್ನು ನಾವು ಭಕ್ತಿಯೇ ಅನ್ನಬಹುದು. ಆದರೆ 'ಭಕ್ತಿ' ಎಂಬ ಮಾತಿನಿಂದ ಹೊಳೆಯುವ ದೈವಿಕತೆ, ಶರಣಾಗತಿ ಇತ್ಯಾದಿಗಳ "ಕಾಂಡ" ಇಲ್ಲಿ ಕಾಣುವುದಿಲ್ಲ. ನಿಸರ್ಗವನ್ನು ಈ ಕವಿ ಮನವಾರೆ 'ಭಜಿಸು' ತ್ತಾರೆ, ಪ್ರೀತಿಸುತ್ತಾರೆ. ಅದರಿಂದ ತನ್ನ ಕಾವ್ಯಕ್ಕೆ ಸ್ಫೂರ್ತಿ ಪಡೆಯುವುದಿರಲಿ, ಅದರಲ್ಲಿ ಕಾವ್ಯವನ್ನೂ ಮರೆಯುತ್ತಾರ. ಅವರ 'ಬರೆಯಲೊಲ್ಲದ ಕವಿತೆ' ('ನಗರದಲ್ಲಿ ನೆರಳು' ಸಂಗ್ರಹ)ಯಲ್ಲಿಯ ಈ ಸಾಲುಗಳನ್ನು ನೋಡಬಹುದು :

ಇಂಥ ತಂಪೊತ್ತಿನಲಿ ಮಾನ್ಯ ಸಂಪಾದಕರೆ
ಕವಿತೆ ಏತಕೆ ಬೇಕು ಹೇಳಿ...............
.....................ಬಾಡಿರುವ

ಹೂಗಳ ತೆಗೆದು, ಒಣಗಿದೆಲೆಗಳ ಗುಡಿಸಿ, ಅಲ್ಲಲ್ಲಿ
ಅಸ್ತಿತ್ವಕ್ಕೆ ಧಕ್ಕೆಬಾರದ ಹಾಗೆ ಬೆಳೆದ ಕಸ-ಕಳೆಯ
ಕಿತ್ತಿ, ಕುರುಪಿಯಾಡಿಸಿ, ಜರಜರಿಯಿಂದ ನೀರೆರೆಯುವಲ್ಲಿ
ನನಗೆ ಸುಖವುಂಟು;

ಈ ಸುಖದ ಇದಿರು ಕವಿಗೆ ಸಂಪಾದಕರ ಚೆಕ್ಕು, 'ಗೌರವದ ಚವರಿ' ಯಾವುದೂ ಮರುಳುಗೊಳಿಸದು. ಈ ಬಗೆಯ ತನ್ಮಯತೆಯಿಂದ ಈ ಕವಿಯ ಪ್ರಕೃತಿ ವರ್ಣನೆ ಯಾವಾಗಲೂ ಉತ್ಕಟ ಪ್ರಾಮಾಣಿಕತೆ (Sincerity) ಯಿಂದ ತುಂಬಿರುತ್ತದೆ.

ಈ ಹಿನ್ನೆಲೆಯನ್ನು ನಾನು ವಿಶ್ಲೇಷಣೆಗೆ ಆಯ್ದುಕೊಂಡದ್ದು ಕವಿಯ 'ಹುಲ್ಲು' ಕವನ. ದೀಪಾವಳಿ ವಿಶೇಷ ಸಂಚಿಕೆ 'ಪಾಂಚಾಲಿ'ಯಲ್ಲಿ ಪ್ರಕಟವಾದ ಕವನ. (1974)

ಬೆಳಗಿನ ಬಣ್ಣಗಳನ್ನು ಅಳೆದು ತಿಳಿಯಲು ಒಂದು ಕಿರಣವನ್ನು ಲೋಲಕದೊಳಗಿಂದ ಹಾಯಿಸಿ ಕಂಡರೆ ಸಾಕು. ಅದೇರೀತಿ ಈ ಕವನದ ವಿಮರ್ಶೆ. ಕವನವೇ ಒಂದು ಮನೋಲೋಲಕ—ಅದರ ಓದುಗರ ಪ್ರವಾಹವನ್ನು ಪೃಥಃಕರಿಸಿ ಅವರ ಮಾದರಿಗಳನ್ನು ಗುರುತಿಸಲು. ("A poem is a mental prism capable of seperating the stream of its readers into a number of distinguishable types" —I. A. Richards).

ಆಧುನಿಕ ಕವಿತೆಗೆ, ಅದೂ 'ನವ್ಯ'ವೆಂಬ ಕವನಕ್ಕೆ 'ರಸ'ವೆಂಬುದೊಂದು ಉಂಟೆ ? ರಸಕ್ಕೆ ಒಂದು ಮಾನವೀಯ ಸಂದರ್ಭ ಬೇಕು. ಸ್ಥಾಯೀಭಾವಗಳೆಲ್ಲ ಮಾನವ ಜೀವನದ ಅಂಗಗಳು. 'ತ್ರೈಗುಣ್ಯೋದ್ಭವ ಲೋಕಚರಿತ'ದಿಂದ ಕಥೆ, ನಾಟ್ಯ ಇತ್ಯಾದಿಗಳಲ್ಲಿ ರಸೋತ್ಪತ್ತಿ. ಬಿಡಿ ಕವನಗಳಲ್ಲಿ ಕವಿಯ ಆಶಯ ಅಂತರಂಗವೇ ಏಕಪಾತ್ರ. ಅಲ್ಲಿ ಯಾವ ಮಾನವೀಯ ಘಟನೆಯೂ ನಡೆಯುವುದಿಲ್ಲ. ಕವನ ಓದಿ ಮುಗಿದಾಗ ಏನೊ ಒಂದು ಉತ್ಸಾಹ, ಉತ್ತೇಜನ, ಉದ್ರೇಕ, ಆನಂದ ಉಂಟಾಗುವುದು ಖಂಡಿತ. ಆದರೆ ಅದು ಅಖಂಡರಸಾನುಭವವಲ್ಲ. ಅದನ್ನು ಹೆಚ್ಚೆಂದರೆ ಭವಭೂತಿ ಹೇಳುವ 'ಕೌತುಕರಸ' ವೆನ್ನಬಹುದು. ಆದ್ದರಿಂದ ಇಂಥ ಕವಿತೆಯ 'ರಸ' ಪರಿಚಯವೆಂದರೆ ಅದರ ಆನಂದ ವರ್ಧಕ ಸೌಂದರ್ಯದ ಪದಪ್ರತ್ಯಯದಿಂದ ಉಂಟಾಗುವ ವಿಶಿಷ್ಟಬೌದ್ಧಿಕಸುಖದ ಅರ್ಥ ಮಾಡಿಕೊಳ್ಳುವ ಪ್ರಯತ್ನ.

'ಹುಲ್ಲು' ಕವನದ ವಸ್ತು ಅಪೂರ್ವ. ಹುಲ್ಲು ತೀರ ಸಾಮಾನ್ಯ, ಸರ್ವಸಾಧಾರಣ, ಜನಸಾಮಾನ್ಯರಂತೆ. ಆದರೆ ನಾವೆಲ್ಲ ಪ್ರಾಣಿಕೋಟಿ ಬದುಕುವುದು ಹುಲ್ಲಿನಿಂದಲೇ ಎಂದರೆ ತಪ್ಪಲ್ಲ. ನಾವು ಉಣ್ಣುವ ಧಾನ್ಯ—ದವಸ ಹುಲ್ಲಿನಿಂದಲೇ. ನಾವು ಕುಡಿಯುವ ಹಾಲು —ಹೈನು ದನದ ಹೊಟ್ಟೆಯ ರಸಾಯನ ಶಾಲೆಯಲ್ಲಿ ಹುಲ್ಲಿನಿಂದ ತಯಾರಾದ ವಸ್ತುವೇ; ಬೇರೆ ಗಿಡಮರಗಳು ಇಲ್ಲದಿರುವಲ್ಲಿ ನೆಲದ ಮರ್ಯಾದೆ ಮುಚ್ಚುವುದು ಹುಲ್ಲೇ ಸರಿ. ಶೂರವೀರರೆಂಬ ಪುಂಡರು ಹೋರಾಡಿ ಒಬ್ಬರನ್ನೊಬ್ಬರು ಕೊಂದು ಭೂಮಿತಾಯಿಯ

ಮೈಯನ್ನೆಲ್ಲ ನೆತ್ತರದಿಂದ ತೋಯಿಸಿದಾಗ ಆ ಬಗ್ಗೆ ನೊಂದು ನಾಚಿ ಭೂಮಿ ಅದನ್ನೆಲ್ಲ ಹುಲ್ಲು ಹಾಸಿದ ಹಸಿರು ಸೆರಗಿನಿಂದ ಮುಚ್ಚಿಕೊಂಡು ಬಿಡುತ್ತಾಳೆ :

ಇಷ್ಟಾದ್ದರೂ ಹುಲ್ಲು ನಮಗೆ ಹೀನಾಯ. 'ಹುಲುಮನುಜ'ನೆಂದು ನಾವು ಹೀಯಾಳಿಸುತ್ತೇವೆ. ತೃಣೀಕರಿಸು ಎಂಬುದು ತಿರಸ್ಕರಿಸು ಎಂಬ ಅರ್ಥವನ್ನು ಕೊಡುತ್ತದೆ. ಅನಾಯಾಸವಾಗಿ ತಾನೇ ತಾನಾಗಿ ಬೆಳೆಯುವ ಹುಲ್ಲು ನಮ್ಮ ಮಟ್ಟಿಗೆ ದೀನ ದಲಿತ.

ಈ ದೀನದಲಿತ ಪಂಥಕ್ಕೆ ದನಿಕೊಟ್ಟಿದ್ದಾರೆ ಕವಿ ಈ ಕವನದಲ್ಲಿ: ಹುಲ್ಲು ಜೀವೇಷಣೆಯ ಪ್ರತೀಕವಾಗಿ ಕಂಡಿದ್ದಾರೆ. ಹುಲ್ಲಿಲ್ಲದ ತಾಣವೆಲ್ಲಿ ? ಹುಲ್ಲಿಗೆ ಯಾರ ಅಂಕೆ–ಅಂಕುಶ ? 'ನಿತ್ಯ ಸರ್ವಗತಃ ಸ್ಥಾಣು ಃ ಅಚಲೋಯಂ ಸನಾತನಃ' ಎಂಬ ಪರಮಾತ್ಮನ ಪ್ರತೀಕ ನಿಜವಾಗಿಯೂ 'ಅಶ್ವತ್ಥವ'ಲ್ಲ. ಈ ಹುಲ್ಲು !

ಈ ಕವನ, ಮಳೆಯಿಂದ ಮೊದಲಾಗಿ ಮಳೆಯೇ ಇಲ್ಲದ ಮರುಭೂಮಿಯಲ್ಲಿ ಕೊನೆಯಾಗುತ್ತದೆ.

ಹುಲ್ಲಿನ ಹುಟ್ಟು ಗುಟ್ಟು ಕವಿ ಸಜೀವವಾಗಿ ಚಿತ್ರಿಸಿದ್ದಾರೆ. ಅದು ಧುತ್ತೆಂದು ಬೆಳೆದು ನಿಂತಿದೆ. ಎಂಥ ಇಕ್ಕಟ್ಟಿನಲ್ಲೂ ತುರಾಯಿ ಹಚ್ಚಿಕೊಂಡು ಹೊರಬರುತ್ತದೆ. ಈ ಮಾತು ಹುಲ್ಲಿನ ಪುಟ್ಟ ದಿಮಾಕನ್ನು ತುಂಬ ಸೊಗಸಾಗಿ ಚಿತ್ರಿಸುತ್ತದೆ. ಗೊಂಡೆಯೋ, ಮೊಗ್ಗೆಯೋ, ಹೂವೋ ತಲೆಗಿಟ್ಟುಕೊಂಡು ಹುಲ್ಲು– ಕದರು ಕಾಣಿಸಿಕೊಳ್ಳುತ್ತದೆ. ಅದರ ಪುಟ್ಟ ಬಾಳಿನಲ್ಲಿಯೂ ಅಟ್ಟಹಾಸವೆಷ್ಟು ? ನಮಗೆ ಜಿಟಿಜಿಟಿ ಮಳೆ ಹೊಲ ಬೇಸರ. ಆದರೆ ಅಲ್ಪಪ್ರಾಣಕ್ಕೆ ಅದು ಧಾರಾಕಾರ ಹಾಲೆರೆದಂತೆ, ಅದನ್ನೆ ಗಟಗಟ ಕುಡಿದು ಧುತ್ತೆಂದು ಮತ್ತೆ ಹಾಜರು—ನಾಗರಿಕತೆಗೆ ನಿಸರ್ಗದ ಸವಾಲು ಎಸೆದು. ಮೂಲಪ್ರವೃತ್ತಿಯನ್ನು ಪೂರ್ತಿ ನಿರ್ಮೂಲವಮಾಡಲು ಸಾಧ್ಯವೆ ? ಮೂಲ ಸಾಬೀತು ಇರುವತನಕವೂ ಅದು ಮತ್ತೆಮತ್ತೆ ಮೈದೋರುತ್ತದೆ.

'ತುರಾಯಿ ಹಚ್ಚಿಕೊಂಡು' ಎಂಬ ಚಿತ್ರಮಯ ಚಿಕ್ಕಪದಪ್ರಯೋಗ ತುಂಬ ಧ್ವನಿ ನಿಬಿಡವಾಗಿದೆ.

'ಹಿತ್ತಲ ಮಾತು ಗೊತ್ತೆ ಇದೆ'
(ಮರುಭೂಮಿಯ ಮಾತು ಬೇರೆ)

ಇಂಥ ಸಾಲುಗಳು ಈ ವೃತ್ತಬಂಧವಿರದ ಸ್ವಚ್ಛಂದ ಛಂದದ ಕವನದ ಒಳ ತೋಲವನ್ನು ಕಾಯ್ದುಕೊಳ್ಳುತ್ತವೆ. ಇದಕ್ಕೆ ಅಲ್ಲಲ್ಲಿಯ ಅಂತಃಪ್ರಾಸಗಳು_ಗುಂತ್ತಿಗೆ–ಹೊತ್ತಿಗೆ, ಕರಿಕೆ–ತುರಿಕೆ, ಹುಲ್ಲು–ಬಿಲ್ಲು, ಬಾಣ-ತಾಣ ಇತ್ಯಾದಿ ಬೆಳ್ಳಿಯ ಕೀಲು ಜಡಿದಂತೆ ಅಚ್ಚುಕಟನ್ನು ಒದಗಿಸಿವೆ.

ಹುಲ್ಲು ಕಿತ್ತಷ್ಟು ಮತ್ತೆ ಮತ್ತೆ ಹುಟ್ಟಿಬರುತ್ತದೆಂಬ ಒಂದು ವಿಚಾರವನ್ನು ಕವಿ ಅನೇಕ ಪರ್ಯಾಯೋಕ್ತಿಗಳಿಂದ (elegant variations) ವರ್ಣಿಸುತ್ತಾರೆ. ಅಲ್ಲಿ

ಅವರಿತ್ತ 'ಕಷ್ಟದ ಮರುದಿನದ ಮುಖ'ದ ಉಪಮೆ ಒಮ್ಮೆಲೆ ಮನಸ್ಸು ಸೆರೆಹಿಡಿಯುವಂತಿದೆ. 'ಕಣ್ಮುಚ್ಚಿ-ಬಿಟ್ಟೇ-' ಎಂಬ ಮಾತಿನ ಹಿಂದಿನ ಮಕ್ಕಳ ಕಣ್ಣುಮುಚ್ಚಾಟದ ಧ್ವನಿ ಈ ಪುಟ್ಟ ಹುಲ್ಲ ಚೆಲ್ಲಾಟಕ್ಕೆ, ಥಕ್ಕನೆ ಕಣ್ಣಿಗೆ ಬೀಳುವ ತುಂಟ ತರಳತನಕ್ಕೆ ಅರ್ಥವತ್ತಾದ ಶ್ರುತಿ ಕೊಡುತ್ತದೆ. ಅದೇ ರೀತಿ 'ಕಾಮನಬಿಲ್ಲು.. ಬಿಡುವುದು ಬಾಣ', ಇಲ್ಲಿಯು ಹೋಲಿಕೆ ಹಳೆಯದೆನಿಸಿದರೂ ಆದರ ಕ್ರಿಯಾಶೀಲ ತಿರುವು ಹೊಸತು-ಹೃದ್ಯ.

ಬಂಡೆಗಲ್ಲಿನ ಬೋಳುತಲೆ ಅಲ್ಲಲ್ಲಿ ಇರಬಹುದು. ಆದರೆ ಪರೀಕ್ಷಿಸಿ ನೋಡಿ : ಅದರ ತಳದಲ್ಲಿ ಹುಲ್ಲು ಮೆತ್ತಗೆ ಮಲಗಿರುತ್ತದೆ.

ಬೇಲಿದಾಟಿ ಒಳಗೆ ನುಗ್ಗುತ್ತದೆ
ಕಾಲ ಕೆಳಗೆ ಬಂದು ಜಗ್ಗುತ್ತದೆ
ಲಾನಿನ ಕ್ರಾಪು ಕತ್ತರಿಸಿದಾಗ ಮಗ್ಗುಲಲ್ಲಿ
ಹಿಗ್ಗುತ್ತದೆ—

(ಮುಖ ಕ್ಷೌರದ ನಂತರ ಕ್ರಾಪಿನ ಹೋಲಿಕೆ) ಈ ಪಂಕ್ತಿಗಳಲ್ಲಿಯ ಕ್ರಿಯಾಪದಗಳು ಪ್ರಾಸಕ್ಕಾಗಿ ಬಂದವಲ್ಲ, ಯಥಾರ್ಥತೆಯಲ್ಲಿ ಪ್ರಾಸವು ಸಾರ್ಥಕವಾಗಿದೆ.

'ಮಳೆಗೆ ಮಣ್ಣ ಮೊಳೆಯುತಿದೆ'— ಅಂದಿದ್ದಾರೆ ಅಂಬಿಕಾತನಯದತ್ತರು ತಮ್ಮದೊಂದು ಕವನದಲ್ಲಿ. ಆದರೆ ಈ ಕವಿ ಬೀಜದ ಕಸುವನ್ನೂ ಮಣ್ಣಿನ ಹಸಿವನ್ನೂ ಬೇರೆಯಾಗಿ ಗುರುತಿಸುತ್ತಾರೆ. ಆದರೆ ಕವನದ ಕೊನೆಯಲ್ಲಿ ಹುಲ್ಲಿನ ಬೆಳೆಗೆ ಬೀಜ ಮಣ್ಣುಗಳೊಂದಿಗೆ ಮಳೆಯನ್ನು ಮುಖ್ಯ ಅಂಗವಾಗಿ ಕವಿ ನಮೂದಿಸಿದ್ದಾರೆ. 'ಮಳೆಗೆ ಹುಲ್ಲು ಮೊಳೆಯುವುದು'. ಇದು ಕವನದ ಆರಂಭಕ್ಕೆ ಚೆನ್ನಾಗಿ ಹೊಂದಿಕೊಳ್ಳುತ್ತದೆ. ಜಿಟಿಜಿಟಿ ಮಳೆ ಷೇಕ್ಸ್‌ಪೀಯರ ಹೇಳುವ gentle rain ಅಲ್ಲ. ಆದರೂ ಇದು ಕರುಣೆಯ ಪ್ರತೀಕ. (ಕರುಣೆ ತೋರದೆ ಕುರುಪಿಯಿಂದ ಕೆತ್ತಿಕೆತ್ತಿ ತೆಗೆದಾಗ). ಈ ಕರುಣೆ ಮಳೆಗರೆದಾಗಲೇ ಹುಲ್ಲು ಮತ್ತೆ ತಲೆಯೆತ್ತುವುದು. ಅಂದರೆ ದೀನದಲಿತ ಜನಾಂಗ ದೇಶದ ನಿಜವಾದ ಬುಡಕಟ್ಟಿನ ಎಲ್ಲೆಲ್ಲೂ ನೆಲಸಿದ ಜನಪದ. ಮೇಲಿನವರ ಕರುಣೆಯಿಂದಲೇ ಚೇತರಿಸಿಕೊಂಡು ಏಳಬಲ್ಲದು ಎಂಬ ಭಾವ ಇಲ್ಲಿ ಮಿಡಿದಂತಿದೆ.

ಈ ವರೆಗಿನ ವಿಶ್ಲೇಷಣೆ, 'ಹುಲ್ಲು' ದುರ್ದಮ್ಯ ಜೀವೇಷಣೆ ಅಥವಾ ಜಿವನೋತ್ಸಾಹದ ಪ್ರತೀಕವೆಂದು ಕಂಡುಕೊಂಡಾಗ ಮೂಡಿ ಬಂದ ಮೀಮಾಂಸೆ. ಆದರೆ ಈ ಕವನದಿಂದ ಕವಿ ಇನ್ನೊಂದು ಆಳದ ಪಾತಳಿಯಲ್ಲಿ ಆಶಯವನ್ನು ತುಂಬಿದ್ದಾನೆ. ಇಲ್ಲಿ 'ಹುಲ್ಲು' ಜಿವನೋತ್ಸಾಹದಂತೆ ಜೀವಜೀವದ ಜೀವಾಳದ ಪ್ರೇರಣೆಯೂ ಪ್ರಚೋದನೆಯೂ ಆದ ಕಾಮಕ್ಕೂ ಪ್ರತೀಕವಾಗಿದೆ. ಫ್ರಾಡನ ಮತದಂತೆ ಮಳೆಯು ಒಂದು ಕಾಮಪ್ರತೀಕ. ಆದರೆ ಇಲ್ಲಿ ಕವಿ, ಮಳೆಗೆ ಜುಮ್ಮೆಂದು ನಿಮಿರಿ ನಿಲ್ಲುವ ಹುಲ್ಲು ಕಾಮದ ಪ್ರತೀಕವಾಗಿ ಒಟ್ಟು ಕಂಡಿದ್ದಾರೆ.

ಈ ಕೋನದಿಂದ ಕಂಡರೆ ಕವನದಲ್ಲಿ ಕೊನೆಯುವರೆಗೂ ಅರ್ಥಪೂರ್ಣತೆ ಮಿಡಿಯುತ್ತದೆ. ಕಾಮಪ್ರವೃತ್ತಿಯ ಸಾರ್ವತ್ರಿಕತೆ, ಸಾರ್ವಭೌಮಿಕತೆಯನ್ನು ಈ ಕವನ ಕಂಡರಿಸುತ್ತದೆ. ಈ ದೃಷ್ಟಿಯಿಂದ ಇಲ್ಲಿಯ ಯಾವ ಪಂಕ್ತಿಯೂ ನಿರರ್ಥಕವಲ್ಲ, ವ್ಯರ್ಥವಲ್ಲ. ಜಿಟಿಜಿಟಿ ಮಳೆಗೆ (ಆಷಾಢಸ್ಯ ಪ್ರಥಮ ದಿವಸೇ...) ಬೆಳೆದು ನಿಂತಲ್ಲಿಂದ ಹಿಡಿದು ಮಳೆಯೇ ಇಲ್ಲದ ಮರುಭೂಮಿಯವರೆಗೂ, ಹಿತ್ತಲ ಬೇಲಿಯಿಂದ ಹಿಡಿದು ಬೋಳು ಬಂಡೆಯುವರೆಗೂ ಇದಕ್ಕೆ "ಅರ್ಥ" ಹೊರಡುತ್ತದೆ.

"ಎಂಥ ಇಕ್ಕಟ್ಟಿನಲ್ಲೂ ಹೊರ ಬರುತ್ತದೆ......" ಈ ಸಾಲಿನಿಂದಲೇ ಈ ಭಾವಕ್ಕೆ ವಿಚಿತ್ರ ಸ್ವಾರಸ್ಯ ಕಟ್ಟುತ್ತದೆ. ಈ ಸಾಲು ಇಲ್ಲಿಯ ಪ್ರತೀಕಾತ್ಮತೆಗೆ Key note ಆಗಬಲ್ಲುದು—'ಎಲ್ಲಾದರೂ ಸ್ವಲ್ಪ ಪಡುವು ಸಿಕ್ಕರೆ ಸಾಕು,' 'ಹಿತ್ತಲ ಮಾತು ಗೊತ್ತೇ ಇದೆ,' 'ಹೂದೋಟದಲ್ಲಿ ಹೇಳಿಕಳಿಸಿದ ಹಾಗೆ,' 'ನೀರೆರೆದು ಬೆಳೆಸಿದ ಗಿಡಕ್ಕೆ' ಅಂದರೆ ನಾಗರಿಕ ಸಂಸ್ಕೃತಿಗೂ ಈ ಕಾಮದ ಸವಾಲು. ಎಂಥ ಪರಿಷ್ಕೃತ ಪ್ರತಿಷ್ಠೆಯ ಜಂಭವನ್ನೂ ಅದು ನಡುಗಿಸಬಲ್ಲುದು. ಹಸಿವು—ಕಸುವುಗಳು ಕಾಮುಕ್ಕೂ ಸಲ್ಲುವವು. 'ಮುಸುಗುಡುವದು' ಆದರದೇ ಭಾಷೆ. 'ಕಜ್ಜಿಯ ತುರಿಕೆ' ಅದರದೇ 'ಕಂಡೂ ಶಮನ,' ಕಾಮನ ಬಿಲ್ಲಿನ ಬಾಣ ಕಣ್ಮುಚ್ಚಿ ಬಿಟ್ಟಬಾಣ. 'ಹೇಳಿ ಎಲ್ಲಿಲ್ಲ ಅದರ ತಾಣ? '.

ಮುಂದೆ ಇಲ್ಲವೆಂಬ ತಾಣಗಳ ಪರೀಕ್ಷೆ. 'ಬಂಡೆಗಲ್ಲಿನ ಬೋಳುತಲೆ' ನಿವೃತ್ತ, ಸಂನ್ಯಸ್ತ, ವಿರಕ್ತವೆಂಬ ಸ್ಥಾನ. ಆ ಬಂಡೆಯ ಕೆಳಗೂ ಈ ಹುಲ್ಲು. ನುಣ್ಣಗೆ ಚಾಚಿದೆ ಅಲ್ಲ—'ಮೆತ್ತಗೆ ಮಲಗಿರುತ್ತದೆ'; 'ಬೇಲಿದಾಟಿ ಒಳಗೆ ನುಗ್ಗುತ್ತದೆ'—ತಾರುಣ್ಯೋನ್ಮಾದಕ್ಕೆ ಯಾವ ಬೇಲಿಯ ಅಡೆ—ತಡೆ ? 'ಮಗ್ಗುಲಲ್ಲಿ ಹಿಗ್ಗುತ್ತದೆ'— ಇದು ವಿಧಿವತ್ತಾಗಿ ಲಾನಿನ ಕ್ರಾಪು ಕತ್ತರಿಸಿದ ಮೇಲೆ ಅಂದರೆ ಗಾರ್ಹಸ್ಥ್ಯ—ದಾಂಪತ್ಯದ ಅಧಿಕೃತ ರೀತಿಯಲ್ಲಿ. ಆದರೆ ಈ ಕಾಮಪ್ರವೃತ್ತಿ 'ಒಗ್ಗಿ ಹೋಗುತ್ತದೆ ಹೀಗೆ ಬರುಬರುತ್ತ' ಎಂದು ಮತ್ತೆ ಸಮಾರೋಪಗೊಳಿಸುವದೇಕೆ ? ಇದು ಮಾಮೂಲಿನ ತೀವರ್ಣಾನವಾಗದೇ ?

ಇನ್ನು ಜೀವನೋತ್ಸಾಹ ಮತ್ತೆಮತ್ತೆ ದಮಿತ ದಲಿತವಾದರೆ ಅದು ಅಂಥ ದೀನಾವಸ್ಥೆಗೆ ಬರುಬರುತ್ತ ಒಗ್ಗಿಹೋಗುವುದು ನಿಜ. ಆದರೆ ಈ ಸಾಲಿನ ಹಿಂದಿನ ಸಾಲುಗಳು ಅಂಥ ತೊತ್ತುಳಿದುಳಿತದ ಧ್ವನಿಯನ್ನು ಕೊಡುವುದಿಲ್ಲ. ಅಲ್ಲೆಲ್ಲ ನುಗ್ಗು ಹಿಗ್ಗುಗಳದೇ ಮಾತು:

'ಹುಲ್ಲು'ಕಾಮದ ಪ್ರತೀಕವಾಗಿ ತೆಗೆದುಕೊಂಡಾಗ ಮರುಭೂಮಿ ಓಯಾಸಿಸ್ ಎಲ್ಲವೂ ಅರ್ಥಪೂರ್ಣವಾಗುತ್ತವೆ. (ಆದರೆ ಅದು ಬರಿ ಜೀವನೋತ್ಸಾಹದ ಪ್ರತೀಕ—ಪ್ರತಿಮೆಯಾದಾಗ ಇದು ಅಷ್ಟೊಂದು ಪೂರಕ ಪೋಷಕವೆನಿಸುವುದಿಲ್ಲ. ಹಾಯಾಗಿ ಮಲುಕಾಡಿಸುತ್ತ ಮಲಗಿದ ಒಂಟಿ ದಲಿತ, ದಮಿತ ಪ್ರಾಣಶಕ್ತಿ (Vitality)ಯದಲ್ಲ.) ಮರುಭೂಮಿ ಬಂಜೆತನಕ್ಕೆ, ಓಯಾಸಿಸ್ ಅಲ್ಲಿಯೂ ವ್ಯಕ್ತವಾಗುವ ಲೈಂಗಿಕ ಹಸಿವೆಯು

ಹಸಿ—ಹಸಿರಿಗೆ ಪ್ರತಿಮೆಗಳಾಗುತ್ತವೆ. ಆದರೆ ಆಗ "ದೂರ ಅಲ್ಲೊಂದು ಓಯಾಸಿಸ್ಸು ಉಂಟಲ್ಲ ಮಾರಾಯರೆ" ಎಂಬ ಉದ್ಗಾರದಲ್ಲಿ ಅನಗತ್ಯ ಲೇವಡಿ (Mockery) ಧ್ವನಿಸುವಂತಿದೆ. ಆದರೂ ಆ ಬಂಜೆತನದಲ್ಲಿಯೂ, ಒಂಟಿ ಬಾಳಿನಲ್ಲಿಯೂ ಮಲಗಿ ಮೇಲು ಕಾಡಿಸುವ ಈಪ್ಸೆ 'ಒಂಟಿ'ಯ ಪ್ರತಿಮೆಯಲ್ಲಿ ಮಾರ್ಮಿಕವಾಗಿಯೇ ವ್ಯಕ್ತವಾಗಿದೆ. ಈ ದೃಷ್ಟಿಯಿಂದ ಧ್ವನ್ಯರ್ಥದ ಈ ಪಾತಳಿಯಲ್ಲಿ 'ಹುಲ್ಲು' ತುಂಬ ಸಾರ್ಥಕವಾಗಿದೆ.

ಉತ್ತಮ ಕವಿತೆಯ ಗಮಕವೇ ಇದು. ಅರ್ಥದ ಮರ್ಮವನ್ನು ಯಾವ ಪಾತಳಿಯಲ್ಲಿ, ಯಾವ ಕೋನದಿಂದ ನೋಡಿಕೊಂಡರೂ ಅದು ಸುಸಂಗತವಾಗಿ ಆತ್ಮ ವಿಸಂಗತಿಯಿಲ್ಲದೆ ಆಸ್ವಾದ್ಯವಾಗಬೇಕು. ಶ್ರೀ ಅರವಿಂದರು 'Future poetry'ಯಲ್ಲಿ ಒಂದೆಡೆಗೆ ಹೇಳುವಂತೆ "Modern poetry has achieved a far greater subtlity, fineness, and depth of suggestion in style and thought than the ancients..." ಈ ಮಾತು ಈ ಕವನದಲ್ಲಿಯೂ ಯಥಾರ್ಥವಾಗಿದೆ. ಕವಿ ಕಣವಿ ಈ ಆಳವನ್ನು ಅದರ ಸೂಕ್ಷ್ಮತೆ (Subtlity) ಮತ್ತು ನವಿರು (Fineness)ಗಳಲ್ಲಿ ಕೂಡಿಯೇ ಸಾಧಿಸಿದ್ದಾರೆ. ದುರ್ದಮ್ಯ ಜೀವನೋತ್ಸಾಹದ ಪ್ರತೀಕಾತ್ಮತೆಯಲ್ಲಿ ಕವನ ಕೊನೆತನಕವೂ ಉತ್ಕಟತೆಯನ್ನು ಸಾಧಿಸಿದಂತೆ ಕಾಣಲಿಕ್ಕಿಲ್ಲ. ಆದರೆ ಈ ಕಾಮದ ಪ್ರತೀಕತೆಯಲ್ಲಿ ಅದು ಸಾದ್ಯಂತ ಸಾಫಲ್ಯವನ್ನು ಪಡೆದಿದೆ. 'ದಲಿತ'ತೆಯ ಆಶಯವು ಜೀವನೋತ್ಸಾಹದ ಅಭಿವ್ಯಕ್ತಿಯದೇ ಒಂದು ಆಯಾಮವಾಗಿ ಬಂದಿದೆ.

ಹೀಗೆ 'ಹುಲ್ಲು' ಎರಡು ದೃಷ್ಟಿಗಳಿಂದಲೂ ಸಿದ್ಧಿಸಿದ ಕಾವ್ಯಸೃಷ್ಟಿ.

## ಹುಲ್ಲು

ಈ ಜುಲೈ ತಿಂಗಳ ಜಿಟಿ ಜಿಟಿ ಮಳೆ—
ಗಟಗಟ ಕುಡಿದು ಧುತ್ತೆಂದು ಬೆಳೆದು ನಿಂತಿದೆ ಹುಲ್ಲು.
ಎಲ್ಲಾದರೂ ಸ್ವಲ್ಪ ಪಡುವು ಸಿಕ್ಕರೆ ಸಾಕು :
ಸಿಮೆಂಟು ಗೋಡೆಯ ಬಿರುಕು, ಟಾರು ಬೀದಿಯ ಒಡಕು—
ಎಂಥ ಇಕ್ಕಟ್ಟಿನಲ್ಲು ಹೊರಬರುತ್ತದೆ ತುರಾಯಿ ಹಚ್ಚಿಕೊಂಡು.

ಗುಡ್ಡ—ಮರಡಿ—ಬಯಲು ಸ್ವಂತ ಸಾಮ್ರಾಜ್ಯ.
ಹಿತ್ತಿಲದ ಮಾತು ಗೊತ್ತೇ ಇದೆ ;
ಅಂಗಳದ ಅಂಗುಲಂಗುಲ ಕೂಡ ಅದರದೇ ಗುತ್ತಿಗೆ.
ಹೂದೋಟದಲ್ಲಿ ಹೇಳಿಕಳಿಸಿದ ಹಾಗೆ ಹೊತ್ತಿಗೆ
ಮೊದಲೇ ಬಂದು ಡೇರೆ ಹೊಡೆದು ತಳವೂರುತ್ತದೆ—
ನೀರೆರೆದು ಬೆಳೆಸಿದ ಹೂವಿನಗಿಡಕ್ಕೆಸೆದು ಸವಾಲು :

ಬೀಜದ ಕಸುವೋ, ಮಣ್ಣಿನ ಹಸಿವೋ—
ಮುಸುಗುಡುತ್ತದೆ ದನ ಮೇದು ಹೋದ ಮೇಲೂ.

ಕರುಣೆ ತೋರದೆ ಕುರುಪಿಯಿಂದ ಕೆತ್ತಿ ಕೆತ್ತಿ ತೆಗೆದು
ಹೊರಗೊಗೆದು ಹಸನಾಯಿತೆಂದು ಉಸಿರು ಬಿಡು—
ವಷ್ಟರಲ್ಲೇ ಕಷ್ಟದ ಮರುದಿನದ ಮುಖದಂತೆ
ಬ್ಲೇಡಿಗೆ ತಯಾರು. ನೀವಾರು, ನಿಮ್ಮ ಹೆಸರೇನು
ಕಸುಬಾವುದು—ಐದೆಸೆಯೆಲ್ಲ ಅದಕೆ ಗೊತ್ತು.
ಕರಿಕೆ : ಕಜ್ಜಿಯ ತುರಿಕೆ, ಹುಲ್ಲು : ಕಾಮನಬಿಲ್ಲು
ಕಣ್ಮುಚ್ಚಿ ಬಿಟ್ಟೇ—
ಬಿಡುತ್ತದೆ ಬಾಣ ; ಹೇಳಿ ಎಲ್ಲಿಲ್ಲ ಅದರ ತಾಣ ?

ಇರಬಹುದು ಬಂಡೆಗಲ್ಲಿನ ಬೋಳುತಲೆ ಅಲ್ಲಲ್ಲಿ. ಅದರ
ತಳದಲ್ಲಿ ಮೆತ್ತಗೆ ಮಲಗಿರುತ್ತದೆ. ಪರಿಕಿಸಿ ನೋಡಿ.
ಬೇಲಿದಾಟಿ ಒಳಗೆ ನುಗ್ಗುತ್ತದೆ ; ಕಾಲ ಕೆಳಗೆ ಬಂದು
ಜಗ್ಗುತ್ತದೆ. ಲಾನಿನ ಕ್ರಾಪು ಕತ್ತರಿಸಿದಾಗ ಮಗ್ಗುಲದಲ್ಲಿ
ಹಿಗ್ಗುತ್ತದೆ ; ಬರುಬರುತ್ತ ಒಗ್ಗಿಹೋಗುತ್ತದೆ.

ಮಳೆಗೆ ಹುಲ್ಲು ಮೊಳೆಯುವದು ಮೂಲಪ್ರವೃತ್ತಿ. ನಿಸರ್ಗ.
ಕಳೆ ತೆಗೆದು ಬಿತ್ತಿ ಬೆಳೆಯುವದು ನಾಗರಿಕ ಮಾರ್ಗ.
ಮರುಭೂಮಿಯ ಮಾತು ಬೇರೆ ; ಅಲ್ಲಿ ಮಳೆಯೂ ಇಲ್ಲ—
ಆದರೂ ದೂರ ಅಲ್ಲೊಂದು ಓಯಸಿಸ್ಸು ಉಂಟಲ್ಲ ಮಾರಾಯರೆ
ಅದಕ್ಕೆ ಅಲ್ಲಿ ಒಂಟಿ ಮಲಗಿ ಮೆಲುಕಾಡಿಸುವದು.

ಜಿ. ಎಸ್. ಕಾಪಸೆ

# 'ನಂಬಿಕೆ' * : ಒಂದು ವಿಶ್ಲೇಷಣೆ

ಚೆನ್ನವೀರ ಕಣವಿಯವರ ಕವಿತೆಗಳಲ್ಲಿ 'ನಂಬಿಕೆ' ವಿಶಿಷ್ಟ ಸಂವೇದನೆಯುಳ್ಳ ಸಾಂದ್ರವಾದ ಸಂಕೇತ—ಪ್ರತಿಮೆಗಳಿಂದ ಕೂಡಿದ, ಸಂಕೀರ್ಣತೆಯನ್ನು ಒಳಗೊಂಡ ಒಂದು ಗಮನಾರ್ಹ ಕವಿತೆ: ಇಲ್ಲಿಯ ವಸ್ತು ಮೂಲತಃ ಅಮೂರ್ತ (abstract) ವಾದದ್ದು ; ಆದರೂ ಜೀವನದ ತುಂಬ ವ್ಯಾಪಿಸಿಕೊಂಡಂಥದ್ದು. ಇಂಥ ವಸ್ತುವನ್ನು ಕಾವ್ಯಕ್ಕೆ ದುಡಿಸಿಕೊಳ್ಳುವಾಗ ಕವಿ ಎಷ್ಟು ಕಾಳಜಿ ತೋರಿದರೂ ಸಾಲದೆನಿಸುತ್ತದೆ. ಚಿಂತನ ಶೀಲ ವ್ಯಕ್ತಿತ್ವವುಳ್ಳ ಕಣವಿಯವರು ತಮ್ಮ ಅನುಭವಗಳಿಗೆಲ್ಲ ಅಕ್ಷರಕೊಡುತ್ತ, ತೀರ ಸಹಜವೆನ್ನುವಂತೆ ಈ ಕವಿತೆ ಸೃಷ್ಟಿಸಿರುವುದನ್ನು ಕಾಣಬಹುದು.

ಕವಿತೆಯ ವಿಶ್ಲೇಷಣೆಗೆ ತೊಡಗುವ ಮುನ್ನ ಕವಿತೆಯ ಅಭಿವ್ಯಕ್ತಿ—ಸ್ವರೂಪಕ್ಕೆ ಸಂಬಂಧಿಸಿದ ಒಂದು ಮಹತ್ವದ ಅಂಶವನ್ನು ಗುರುತಿಸಿಕೊಳ್ಳುವದು ವಿಹಿತವೆನಿಸುತ್ತದೆ. ಅದೆಂದರೆ ಈ ಕವಿತೆಯಲ್ಲಿ ಕವಿಯೇ ನಾಯಕತ್ವ ವಹಿಸಿ ಮಾತಾಡುತ್ತಿರುವದು. ನನಗೆ ಗೊತ್ತಿದ್ದ ಮಟ್ಟಿಗೆ ಸ್ವತಃ ಕಣವಿಯವರೇ ಕವನದ ನಾಯಕತ್ವ ವಹಿಸಿದ್ದು ಕಡಿಮೆ. ತೀರ ಕೆಲವು ಕವಿತೆಗಳಲ್ಲಿ ಮಾತ್ರ ಅವರ 'ನನ್ನತನ' ಕಾಣಿಸಿಕೊಳ್ಳುತ್ತದೆ. ಉಳಿದ ಎಲ್ಲ ಕವಿತೆಗಳಲ್ಲಿ 'ನಾವು' ಎಂಬ ಸಾರ್ವತ್ರಿಕ ಪ್ರಜ್ಞೆಯೇ ಇದೆ. ಪ್ರಸ್ತುತ ಕವಿತೆಯ ದೃಷ್ಟಿ ಯಿಂದ ಅವರ 'ನನ್ನತನ' ಸೇರಿದುದೇ ಸೂಕ್ತವಾದದ್ದು. ಯಾಕೆಂದರೆ 'ನಂಬಿಕೆ' ಯಾವಾಗಲೂ ವ್ಯಕ್ತಿಗತವಾದದ್ದು, ಅದು ಆಯಾ ವ್ಯಕ್ತಿಯ ವ್ಯಕ್ತಿತ್ವದೊಂದಿಗೇ ಬೆಳೆದು ಬರುವಂಥಾದ್ದು. ಹಾಗಿದ್ದೂ ಅದು ಸಾರ್ವತ್ರಿಕ ಮೌಲ್ಯ ಉಳ್ಳದ್ದು. ಪ್ರತಿಯೊಬ್ಬ ವ್ಯಕ್ತಿ ತನಗಿಷ್ಟವಿರುವ ವಿಷಯಗಳಲ್ಲಿ, ವ್ಯಕ್ತಿಗಳಲ್ಲಿ ತನ್ನ ದೃಷ್ಟಿಗನುಗುಣ ವಾದ ವಿಚಾರಗಳಲ್ಲಿ, ಧೋರಣೆಗಳಲ್ಲಿ ಹಾಗೂ ತನ್ನ ವ್ಯಕ್ತಿತ್ವದ ವಿಕಾಸಕ್ಕೆ ಸಹಕಾರಿ ಯಾಗಬಲ್ಲ ತತ್ತ್ವಗಳಲ್ಲಿ, ಸಿದ್ಧಾಂತಗಳಲ್ಲಿ 'ನಂಬಿಕೆ' ಇಟ್ಟಿರುತ್ತಾನೆ. 'ನಂಬಿಕೆ' ವ್ಯಾವ ಹಾರಿಕವಾಗಿ, ನೈತಿಕವಾಗಿ, ತಾತ್ತ್ವಿಕವಾಗಿ ಮತ್ತು ಆಧ್ಯಾತ್ಮಿಕವಾಗಿ ನಮ್ಮ ಜೀವನದ ವಿವಿಧ ಸ್ತರಗಳಲ್ಲಿ ಕಾರ್ಯ ಮಾಡುತ್ತಿರುತ್ತದೆ. ಅದು ಎಲ್ಲ ಸ್ತರಗಳಲ್ಲಿಯೂ ಜೀವನ ನಿರ್ವಹಣೆಗೆ ತೀರ ಅನಿವಾರ್ಯವಾದದ್ದಾಗಿರುತ್ತದೆ. ಹೀಗಿದ್ದರೂ ಅದು ಹೊಯ್ದಾಡು ವಂತೆ, ಜಾರಿಕೊಳ್ಳುವಂತೆ, ಸುಳ್ಳಾಗುವಂತೆ ಮಾಡುವ ಘಟನೆಗಳು ಆಗಾಗ ನಡೆಯುತ್ತಿರುತ್ತವೆ. ಹಾಗಾದಾಗ ಸಹಜಾಚರಣೆಯಾಗಿದ್ದ 'ನಂಬಿಕೆ' ಒಂದು ಸಮಸ್ಯೆ

---

* 'ಎರಡು ದಡ'– ಪುಟ : 39

ಯಾಗುತ್ತದೆ. ಸರಳವಾಗಿದ್ದ ಅದರ ಸಂವೇದನೆಗಳು ಸಂಕೀರ್ಣವಾಗುತ್ತವೆ. ಅಂಥ ಸಂದರ್ಭಗಳಲ್ಲಿ ವ್ಯಕ್ತಿಯು ತನ್ನೊಳಗೇ ಅವುಗಳನ್ನು ವಿಶ್ಲೇಷಿಸಿ ಅದರ ಎಲ್ಲ ಪದರಗಳನ್ನು ಗುರುತಿಸಲು ಯತ್ನಿಸುತ್ತಾನೆ. ವ್ಯಕ್ತಿಯ ಮನೋಧರ್ಮ ಹಾಗೂ ಅವನ ಜೀವನಾನುಭವಗಳ ಭೂಮಿಕೆಯ ಮೇಲೆ 'ನಂಬಿಕೆ' ಯಲ್ಲಿಯ ಗಟ್ಟಿತನ ಇಲ್ಲವೆ ಜೊಳ್ಳುತನ ಒಂದು ಸ್ಥಿತಿಗೆ ಬಂದು ನಿಲ್ಲುತ್ತದೆ.

ಹೀಗೆ ಜೀವನಕ್ಕೆ ನಿಕಟವಾಗಿರುವ 'ನಂಬಿಕೆ' ಯಂಥ ವಿಷಯವನ್ನು ಕಾವ್ಯಕ್ಕೆ ವಸ್ತುವಾಗಿರಿಸಿಕೊಂಡಾಗ ಕವಿಯಾದವನು ತನ್ನನ್ನು ಅದರಿಂದ ಪ್ರತ್ಯೇಕಿಸಿಕೊಳ್ಳು ವದು ಸಾಧ್ಯವೇ ಇಲ್ಲ. ಇಂಥಲ್ಲಿ ನವ್ಯದ ವಸ್ತು ಪ್ರತಿರೂಪ (Objective correlative) ಹಾಗು ವ್ಯಕ್ತಿತ್ವಕ್ಕೆ ಅತೀತವಾಗಿರುವ (escape from personality) ತಂತ್ರಗಳು ಪ್ರಯೋಜನಕಾರಿಯಾಗಲಾರವೆಂದು ಅನಿಸುತ್ತದೆ. ಕವಿ ತನ್ನ ವ್ಯಕ್ತಿತ್ವವನ್ನು ಅದರಲ್ಲಿ ಸಂಪೂರ್ಣ involve ಮಾಡಿಕೊಂಡಾಗಲೇ ಕಾವ್ಯಕ್ಕೊಂದು ಗಟ್ಟಿತನ ಬರುತ್ತದೆ, ಅದು ಜೀವಂತವೂ ಆಗುತ್ತದೆ. ಅಂದರೆ ಇಲ್ಲಿನ ಕವನಕ್ರಿಯೆ ಒಂದು ಸ್ವಗತ ಸಂಭಾಷಣೆಯಂತಿರಬೇಕೇ ಹೊರತು ಬೇರೆ ಯಾವದೆ ಬಗೆಯ ಶಬ್ದ ಚಿತ್ರದಂತೆ ಅಥವಾ ರೂಪಕದಂದೆ ಇರತಕ್ಕದ್ದಲ್ಲ.

ಕಣವಿಯವರ ಈ ಕವಿತೆ ಸಂಕೇತ ಪ್ರತಿಮೆಗಳನ್ನು ಸೃಷ್ಟಿಸಿಕೊಳ್ಳುತ್ತ 'ನಂಬಿಕೆಯ ಒಂದು ಶಿಲ್ಪವನ್ನು ರಚಿಸುತ್ತ, ಸ್ವಗತ ಸಂಭಾಷಣೆಯಾಗಿ, ಅನುಭವದ ವಿವಿಧ ಮಗ್ಗಲುಗಳನ್ನು ಹೊರಳಿಸಿ ಹೊರಳಿಸಿ ನೋಡುತ್ತ, ತನ್ನದೇ ಆದ ನಿಲುವನ್ನು ಸೂಚಿಸುತ್ತದೆ.

ಕವಿತೆ ಪ್ರಾರಂಭವಾಗುವದು 'ನಂಬಿಕೆ'ಯ ಸ್ವರೂಪ, ಜೀವನದಲ್ಲಿ ಅದರ ಪ್ರಭಾವ ಪರಿಣಾಮಗಳನ್ನು ಚಿತ್ರಿಸುವದರೊಂದಿಗೆ :

ಅನಂತವೆಂದರೂ ಆಕಾಶಕೊಂದು ಆಕೃತಿಯುಂಟು,
ನೀಲವೆಂದರೂ ನೂರು ಬಣ್ಣದ ಲೀಲೆಗವಕಾಶವುಂಟು.

ಇದು ನಂಬಿಕೆಯ ಒಂದು ರೂಪ. ಎರಡು ಚರಣಗಳ ಈ ಪ್ರತಿಮೆಯಲ್ಲಿ ಅದರ ಹರವನ್ನು, ವೈವಿಧ್ಯವನ್ನೂ ಗುರುತಿಸಬಹುದು. ಅನಂತ, ಆಕಾಶ, ಆಕೃತಿ ಇವು 'ನಂಬಿಕೆ'ಯ ಮೂಬಗೆಯ ( ಮೂಬಗೆಯಾಗಿದ್ದರೂ ಎಲ್ಲ ಕೂಡಿ ಒಂದೇ ಆಗಿರುವುದು) ಕಲ್ಪನೆಯನ್ನು ತಂದುಕೊಡುತ್ತವೆ. ಅನಂತವೆಂದರೆ ಅಂತವಿಲ್ಲದ್ದು ಅಥವಾ ಸೀಮಾತೀತವಾದದ್ದು. ಅಂದರೆ 'ನಂಬಿಕೆ'ಯು ಪರಿಮಿತಿಗೆ ಒಳಗಾಗ ದಂಥದ್ದು ಎಂದು ಅರ್ಥ, ಅದು ಆಕಾಶದಷ್ಟು ಅಪಾರ ವ್ಯಾಪ್ತಿಯುಳ್ಳದ್ದು ಎಂಬುದನ್ನು ಮುಂದಿನ'ಆಕಾಶ' ವೆಂಬ ಪದವೇ ಸೂಚಿಸುತ್ತದೆ. ಒಟ್ಟಂದದಲ್ಲಿ ಅದು ವಿಶ್ವವ್ಯಾಪಿಯಾದ ಒಂದು ವಿಶಿಷ್ಟ ವಸ್ತು. ಹಾಗಿದ್ದರೂ ಅದಕ್ಕೊಂದು

ಆಕೃತಿ ಅಥವಾ ಆಕಾರವಿದೆ. ಯಾಕೆಂದರೆ ಆಕಾಶದಂತೆ ಅದು ನಮ್ಮ ಸುತ್ತ ಮುತ್ತೂ, ಒಳಗು-ಹೊರಗೂ ವ್ಯಾಪಿಸಿಕೊಂಡಿದೆ. ಅಲ್ಲದೆ ಅನುಭವಗಮ್ಯವಾಗಿದೆ. ಇಲ್ಲಿಯ ಪ್ರತಿಯೊಂದು ಪದದ ಮೊದಲಕ್ಷರಗಳು ಅ. ಆ. ಆ ಸವರ್ಣಗಳು ಒಂದೇ ಮೂಲವಸ್ತುವನ್ನು ಅಭಿನಯಿಸಿ ತೋರಿಸುವಂತಿದೆ. ಅದರ ಮುಂದಿನ ಚರಣ ದಲ್ಲಿಯೇ 'ನೀಲ'ವೆಂಬ ವರ್ಣವು ನಂಬಿಕೆ ಏಕವರ್ಣವುಳ್ಳದ್ದೆಂಬುದನ್ನು ಸಮರ್ಥಿ ಸುತ್ತದೆ. ಅಂದರೆ 'ನಂಬಿಕೆ' ಒಂದೇ ಒಂದು ನಿಶ್ಚಿತ ಬಣ್ಣ (ಸ್ವಭಾವ) ವುಳ್ಳದ್ದಾಗಿ ರುತ್ತದೆಯೇ ಹೊರತು ಊಸರವಳ್ಳಿಯಂತೆ ಗಳಿಗೆಗಳಿಗೆಗೆ ಬಣ್ಣ ಬದಲಿಸುತ್ತ ಹೋಗುವಂಥದ್ದಲ್ಲ. ಹಾಗಾದಾಗ ಅದು ಅಪನಂಬಿಕೆಯಾಗುತ್ತದೆ. ವಿಚಾರ ವನ್ನು ಗೃಹೀತ ಮಾಡಿಕೊಂಡಾಗ ಮುಂದೆ ಬರುವ 'ನೂರು ಬಣ್ಣದ ಲೀಲೆಗವಕಾಶ ವುಂಟು' ಎಂಬುದಕ್ಕೆ ಅರ್ಥವೇನು ಎಂಬುದು ಒಂದು ಪ್ರಶ್ನೆಯಾಗುತ್ತದೆ. ಇಲ್ಲಿಯ 'ನೂರು ಬಣ್ಣ' ಎಂಬುದು ಬಣ್ಣ ಬದಲಾಯಿಸುವುದನ್ನು ಸೂಚಿಸದೆ ಅದರ ವೈವಿಧ್ಯವನ್ನು ತಿಳಿಸಿ ಕೊಡುವಂಥದ್ದೆಂದು ಭಾವಿಸಬೇಕು. ಲೀಲೆಗೆ 'ಅವಕಾಶ' ವಿದೆಯೆಂಬುದು ಜೀವನವು ವೈವಿಧ್ಯಪೂರ್ಣ ; ಅದರ ವ್ಯವಹಾರಗಳು, ಕಾರ್ಯ ಗಳು ಅನೇಕ ಎಂಬುದನ್ನು ಸೂಚಿಸುತ್ತದೆ. ಅನೇಕ ಮುಖವಾಗಿರುವ ಜೀವನ ವ್ಯವಹಾರದಲ್ಲಿ 'ನಂಬಿಕೆ'ಯೂ ಆ ಆ ಸಮಯ, ಸಂದರ್ಭಗಳಿಗನುಸಾರವಾಗಿ ಕಾಣಿಸಿಕೊಳ್ಳುತ್ತದೆ. (ಹಾಗೆ ಕಾಣುವುದರಲ್ಲಿಯೇ ಅದರ ನೂರು ಬಣ್ಣಗಳಿವೆ) ಲೀಲೆಯೆನ್ನುವದು ಅಗಾಧ ಕಾರ್ಯವನ್ನು ಸೂಚಿಸುವ ಪೌರಾಣಿಕ ಪದವಾದರೂ ಇಲ್ಲಿ ಅದು 'ನಂಬಿಕೆ'ಯ ವಿವಿಧ ಕಾರ್ಯ, ಪರಿಣಾಮಗಳನ್ನು ಸೂಚಿಸಲು ಮಾತ್ರ ನಿರ್ದಿಷ್ಟವಾಗಿದೆ,

ಭೂಮಿಯ ಮೇಲೆ ಕಾಲೂರಿ ನಡೆದಿದ್ದರೂ ಇದರ
ಸ್ವರಗಳ ನಡುವೆ ಸ್ಥಿರಗೊಂಡ ಒಡನಾಟ, ನಿರಂತರ ನಂಟು.

ಈ ಸಾಲುಗಳು ನಮ್ಮ ಬದುಕಿಗೂ ನಂಬಿಕೆಗೂ ಇರುವ ಸಂಬಂಧವನ್ನು ಸೂಚಿಸು ತ್ತವೆ. ಭೂಮಿಯ ಮೇಲೆ ಕಾಲೂರಿ ನಡೆದಿರುವ ಅಂದರೆ ವಾಸ್ತವ ಜಗತ್ತಿನ ಗಾಢ ಸಂಬಂಧವುಳ್ಳ ನಾವು, ನಂಬಿಕೆಯ ವಿವಿಧ ಸ್ವರಗಳ ನಡುವೆಯೇ ಬದುಕು ತ್ತಿರುತ್ತೇವೆ, ಅಂತೆಯೇ ನಮಗೂ ಅದಕ್ಕೂ 'ಸ್ಥಿರಗೊಂಡ ಒಡನಾಟ' ವಿದೆ. ಅದು 'ನಿರಂತರ ನಂಟೂ' ಅಹುದು. ಇಲ್ಲಿ 'ನಂಟು' ತನವು ರಕ್ತ ಸಂಬಂಧದ ಆಪ್ತತ್ವವನ್ನು ಸೂಚಿಸಿ ಇನ್ನೂ ಅದರ ನಿಕಟತೆಯನ್ನು ಹೆಚ್ಚಿಸುತ್ತದೆ. 'ನಂಟು' ಪದದಲ್ಲಿರುವ 'ಅಂಟು' ಎಂಬ ಧ್ವನಿಯು ಅದರ ಜಿಗುಟುತನವನ್ನು ಸೂಚಿಸದಿರದು. ಹೀಗೆ ಬದುಕು ನಂಬಿಕೆಗಳಿರುವ ನಂಟಿನಿಂದ ಜೀವನದಲ್ಲಿ ಪಡೆಯುವ ಅನುಭವ ಎಂಥದು, ಅಥವಾ ಬದುಕು ನಂಬಿಕೆಗಳ ಗಾಢ ಸಮ್ಮಿಲನದಿಂದ ಉಂಟಾಗುವ ಪರಿಣಾಮವೇನು ಎಂಬು ದನ್ನು ಮುಂದಿನ ಪ್ರತಿಮೆ ತಿಳಿಸಿಕೊಡುತ್ತದೆ.

ಹಗಲೆಲ್ಲ ಹಸುರಾಗಿ. ತುಂಬು ಕೆಂಪಾಗಿ, ರೆಂಬೆ–
ಕೊಂಬೆಗಳೆಲ್ಲ ಸಂಜೆ ಬಾನಿನ ನಿರಾಳ ಮನದೊಳಚ್ಚೊತ್ತಿ.
ಚಿತ್ತಾರವಾಗಿ ಕಪ್ಪು ಮುಸುಕಿನ ಒಳಗೆ ಹುದುಗುವವು
ಇದ್ದು ಇಲ್ಲದ ಹಾಗೆ. ಇರುಳಿನಲಿ ಒಮ್ಮೆಲೆ ಚಿಗುರೊಡೆದು
ಅಂತರಂಗವ ಬಿಟ್ಟು ಬಯಲಿಗಿಡುವದು ಬಾನು :

ಈ ಪ್ರತಿಮೆ ನೋಡಿದಾಕ್ಷಣಕ್ಕೆ ರೋಮ್ಯಾಂಟಿಕ್ ವರ್ಣನಾರೀತಿಯಾಗಿ ಕಾಣಿಸುತ್ತ ದಾದರೂ ಅದು ಈ ಸಂದರ್ಭದಲ್ಲಿ ಸಾರ್ಥಕವಾದ ಅಭಿವ್ಯಕ್ತಿಯ ಮಾಧ್ಯಮವಾಗಿದೆ. ಹಗಲೆಲ್ಲ ಹಸರಾಗು ಎಂಬುದು ಬದುಕು ಚೈತನ್ಯದಾಯಿಯಾಗುವದನ್ನು, ತುಂಬು ಕೆಂಪಾಗು ಎಂಬುದು ಚೈತನ್ಯದಾಯಿಯಾದ ನಂತರ ಅದು ಪಕ್ವವಾಗುವದನ್ನೂ ಅಥವಾ ಫಲಪ್ರದವಾಗುವದನ್ನು ಸೂಚಿಸುತ್ತವೆ. ರೆಂಬೆ-ಕೊಂಬೆಗಳೆಲ್ಲ ಎಂಬಲ್ಲಿ ಬದುಕಿನ ಶಾಖೋಪಶಾಖೆಗಳ ಸಂಬಂಧವನ್ನು ಅಂದರೆ ಒಬ್ಬ ವ್ಯಕ್ತಿಯ ಜೀವನಕ್ಕೆ ಸಂಬಂಧಿಸಿದ ಇತರ ಹಲವಾರು ತತ್ವ, ಸಿದ್ಧಾಂತಗಳ ಸಂಬಂಧವನ್ನು ಸೂಚಿಸುತ್ತದೆ. ನಿರಾಳ ಮನದೊಳಚ್ಚೊತ್ತಿ ಚಿತ್ತಾರವಾಗುವದು. ಪ್ರಶಾಂತ ಚಿತ್ರದ ವ್ಯಕ್ತಿತ್ವದ ಒಳಗೇ ಅದು ಸಾಕ್ಷಾತ್ಕರಿಸುವದನ್ನು ಸಂಕೇತಿಸುತ್ತದೆ. ಅದು ಮನೋವೈದ್ಯ ಅಥವಾ ಅನುಭವಗಮ್ಯ ಎಂಬುದೂ ಇದರ ಅರ್ಥವಾಗಿದೆ. ಹಾಗಿರುವದರಿಂದಲೇ ಅದು ಇದ್ದೂ ಇಲ್ಲದ ಹಾಗೆ (ಅವ್ಯಕ್ತವಾಗಿ) ಇರುವದು. ಇದಕ್ಕೆ ಪೂರ್ವಭಾವಿಯಾಗಿ ಬರುವ 'ಕಪ್ಪು ಮುಸುಕಿನ ಒಳಗೆ' ಎಂಬುದು ಒಂದಿಷ್ಟು ಸಂದಿಗ್ಧವಾಗಿದೆ. ಕಪ್ಪು ಮುಸುಕು ಸಾಮಾನ್ಯವಾಗಿ ಅಸತ್ಯ ಅನ್ಯಾಯದ ವ್ಯವಹಾರಗಳನ್ನು ಸೂಚಿಸುವಂಥದ್ದು. ಅಂಥ ವ್ಯವಹಾರದಲ್ಲಿಯೂ ನಂಬಿಕೆ ಚಿತ್ತಾರವಾಗಿ ಹುದುಗುವದು ಎಂದರೆ ವಿರೋಧಾಭಾಸವಾಗುತ್ತದೆ. ಆದರೆ ಇಲ್ಲಿಯ 'ಕಪ್ಪು ಮುಸುಕು' ಫೋಟೊ ನೆಗೆಟಿವ್ಹದಂಥಾದ್ದೆಂದಿಟ್ಟುಕೊಂಡರೆ ಅರ್ಥ ಸರಿಹೋಗುತ್ತದೆ. ಅಂದರೆ ಅಗೋಚರವಾದ ಆದರೂ ಚಿತ್ರವನ್ನು ಹುದುಗಿಸಿಟ್ಟುಕೊಂಡ ನೆಗೆಟಿವ್ಹದಂತೆ 'ನಂಬಿಕೆ' ನಮ್ಮ ನಮ್ಮ ಮನಸ್ಸಿನಲ್ಲಿ ಹುದುಗಿಕೊಂಡಿರುತ್ತದೆ. ಅದರ ಎಲ್ಲ ಬಗೆಯ ಆಕಾರಗಳೂ ಅಲ್ಲಿಯೇ ರೂಪುಗೊಳ್ಳುತ್ತವೆ.

ಹೀಗೆ ಅಂತರಂಗದಲ್ಲಿ ಅಚ್ಚೊತ್ತಿಕೊಂಡಿರುವ "ನಂಬಿಕೆ" ನಮ್ಮ ಅಜಾಗೃತ (unconscious) ಮನಸ್ಸಿನಲ್ಲಿಯೂ ಕಾರ್ಯ ಮಾಡುತ್ತಿರುತ್ತದೆ. ಅಂದರೆ ನಂಬಿಕೆ ಪ್ರಜ್ಞಾಪೂರ್ವಕವಾದ ಆಚರಣೆಯಾಗದೆ ಸಹಜವಾದ ಜೀವನ ವ್ಯಾಪಾರವಾಗಿ ತನ್ನ ಪರಿಣಾಮವನ್ನು ಬೀರುತ್ತಿರುತ್ತದೆ. ಇರುಳಿನಲ್ಲಿ (ಸುಪ್ತಾವಸ್ಥೆಯಲ್ಲಿ ಅಥವಾ ಅಜಾಗೃತ ಸ್ಥಿತಿಯಲ್ಲಿ)ಯೂ ಅದು ಕಾರ್ಯಮಾಡುತ್ತಿರುತ್ತದೆ. ಇದು ಅದರ ಸಂಕೀರ್ಣವಾದ ಕಾರ್ಯವೆಂದು ಹೇಳಬಹುದು. ಈ ಸಂಕೀರ್ಣತೆಯ ಸೂಕ್ಷ್ಮ ಕಾರ್ಯವನ್ನು ಗುರುತಿಸುವದು ಮಾನಸಶಾಸ್ತ್ರಕ್ಕೂ ಒಮ್ಮೆಲೆ ನಿಲುಕುವಂಥದ್ದಲ್ಲ. ಅದರ ಕ್ರಿಯೆ-ಪ್ರತಿಕ್ರಿಯೆಗಳನ್ನು ಗುರುತಿಸಿ, ವಿಶ್ಲೇಷಿಸಿ ಒಂದು ನಿರ್ಣಯಕ್ಕೆ ಬರಬೇಕಾಗುತ್ತದೆ. ಅಂಥದನ್ನು ಕಣವಿಯವರ ಕಾವ್ಯದ ಕಣ್ಣು ಗುರುತಿಸುತ್ತದೆ, ಸಂಕೇತದಲ್ಲಿ ಅಭಿವ್ಯಕ್ತಗೊಳಿಸುತ್ತದೆ. ಅಂದರೆ

'ನಂಬಿಕೆ' ಎಂಬ ಬಾನು (ಕಾವ್ಯದ ಆರಂಭದಲ್ಲಿ ಸೂಚಿಸಿದಂತೆ 'ಆಕಾಶ' ಎಂದೂ ಹೇಳಬಹುದು) ಆ ಅಜಾಗೃತ ಮನಸ್ಸಿನಲ್ಲಿ (ಇರುಳಿನಲಿ) ಒಮ್ಮೆಲೆ ಚಿಗುರೊಡೆದು ತನ್ನ ಹೃದಯವನ್ನು ತೆರೆದಿಡುತ್ತದೆ. ಹಾಗೆ ನಂಬಿಕೆ ತನ್ನತನವನ್ನು ತೆರೆದಿಟ್ಟಾಗ ನಮ್ಮ ವ್ಯಕ್ತಿತ್ವದೊಂದಿಗೆ ಗಾಢವಾಗಿ ಬೆರೆತುಕೊಂಡಿರುತ್ತದೆ. ಅದು :

ಎಚ್ಚರಾಗದ ಹಾಗೆ ನೆಲದ ಮೈದಡವಿ ಮುದ್ದಿಸುವುದು.
ಆಗೂ ಎಲ್ಲರಿಗೂ ನಿದ್ದೆ.

ಎಂಬಲ್ಲಿ ವ್ಯಕ್ತವಾಗಿದೆ. 'ಆಗ ಎಲ್ಲರಿಗೂ ನಿದ್ದೆ' ಎಂಬುದರಲ್ಲಿ ಒಬ್ಬ ವ್ಯಕ್ತಿಯ'ನಂಬಿಕೆ'ಗೆ ಒಳಗಾದ ಎಲ್ಲ ವಿಚಾರಗಳಲ್ಲಿ ಅದರದೆ ಆದ ಒಂದು ಮರೆವು ಇರುತ್ತದೆಂದು ಅರ್ಥ. ಅಥವಾ ಅಂಥ ವಿಚಾರಗಳೆಲ್ಲ ಸ್ಥಿರವಾದ ನಂಬಿಕೆಯ ಕಾರಣದಿಂದ ನಿಶ್ಚಿಂತವಾಗಿರುತ್ತ ವೆಂದೂ ಅರ್ಥ. ಈ ಸ್ಥಿರವಾದ 'ನಂಬಿಕೆ'ಯಲ್ಲಿ ಒಂದು ಸ್ವಪ್ನಸೃಷ್ಟಿಯೂ ಇದೆ. :

ಬೆಳಗಿನ ಜಾವ ಯಾವುದೊ
ಕನಸು ! ಬೆಳಗಾದ ಮೇಲೆ ಮರೆತು ನೆನೆಸುವುದು-
ತಿರುಗಾಡಿ ಬರುವಾಗ ಗೆಳೆಯರಿಗೂ ಹೇಳಿ ನಕ್ಕು
ನಗಿಸುವುದು : ಹೂ ಗಿಡಕೆ ನೀರು ಹಣಿಸುವುದು.

ಬೆಳಗಿನ ಜಾವದ ಇಲ್ಲಿಯ ಕನಸು 'ನಂಬಿಕೆ'ಯ ಶುಭ ಪರಿಣಾಮವನ್ನು ಸೂಚಿಸುತ್ತದೆ. ಅಂತೆಯೇ ಅದನ್ನು ಕವಿ ಮರೆತು ನೆನಸುತ್ತಿದ್ದಾನೆ. ಅಷ್ಟಲ್ಲದೆ ಅದರ ಸೊಗಸನ್ನು ಗೆಳೆಯರಿಗೆ ಹೇಳಿ ನಕ್ಕು ನಗಿಸುತ್ತಾನೆ. ಇಲ್ಲಿಯವರೆಗೆ 'ನಂಬಿಕೆ'ಯ ಒಂದು ಆದರ್ಶದ ನಿಲುವು ಸೂಚಿತವಾಗಿದೆ. ಈ ಆದರ್ಶ ಅಚಲವಾಗಿರುವವರೆಗೂ ಜೀವನದಲ್ಲಿ ಹೊಯ್ದಾಟಕ್ಕೆ ಅವಕಾಶವಿಲ್ಲ. ಯಥಾಪ್ರಕಾರ ಹೂಗಿಡಕ್ಕೆ ನೀರು ಹನಿಸುವ ದೈನಂದಿನ ವ್ಯವಹಾರದಲ್ಲಿ ಲೀನವಾಗಬೇಕಾಗುತ್ತದೆ. ಈ ಸಾಲುಗಳು ಗದ್ಯದ ಹೇಳಿಕೆಯಂತೆ (Statements) ತೋರಿದರೂ ಪ್ರತಿಮಾ ರೂಪದಲ್ಲಿಯೇ ಇರುವದನ್ನು ಗಮನಿಸ ಬಹುದು. ಹೀಗೆ ಹೇಳಿಕೆಗಳನ್ನು ಪ್ರತಿಮೆಗಳನ್ನಾಗಿ ದುಡಿಸಿಕೊಳ್ಳುವುದರಲ್ಲಿ ಎ. ಕೆ. ರಾಮಾನುಜನ್ ಎದ್ದು ಕಾಣುತ್ತಾರೆ. ಕಣವಿಯವರೂ ಅವುಗಳನ್ನು ಆರಂಭದಿಂದಲೂ ಪ್ರತಿಮಾರೂಪಗಳಲ್ಲಿಯೇ ದುಡಿಸಿಕೊಳ್ಳುತ್ತಿರುವದನ್ನು 'ಕೊನೆಯ ನಿಲ್ದಾಣ' 'ಕಾಲ ನಿಲ್ಲುವದಿಲ್ಲ' ಮುಂತಾದ ಕವಿತೆಗಳಲ್ಲಿ ಕಾಣಬಹುದು.

ಕವಿತೆಯ ಮೊದಲನೆಯ ಭಾಗದಲ್ಲಿ ಮೈಮರೆಸುವಷ್ಟು ಗಾಢವಾಗಿದ್ದ 'ನಂಬಿಕೆ' ಎರಡನೆಯ ಭಾಗಕ್ಕೆ ಬಂದಾಗ ಒಂದು ಸಮಸ್ಯೆಯಂತೆ, ಒಗಟಿನಂತೆ ಕಾಣಿಸಿಕೊಳ್ಳುತ್ತದೆ. ಅಂದರೆ 'ನಂಬಿಕೆ'ಯ ಮೊದಲಿನ 'ಸ್ಥಿರಗೊಂಡ ಒಡನಾಟ' 'ನಿರಂತರದ ನಂಟು' ಸಡಿಲವಾಗುವ ಸಮಯವೊದಗಿ ಬಂದು, ಅದು ವಿಶ್ಲೇಷಣೆಗೆ ಒಳಪಡುತ್ತದೆ. ಈ ವಿಶ್ಲೇಷಣೆಯಲ್ಲಿ ಅದರ ಶೈಥಿಲ್ಯಗಳನ್ನು ಕವಿ ತಾನೇ ಪ್ರಶ್ನಿಸಿಕೊಂಡು ಪ್ರಶ್ನೆಯಲ್ಲಿಯೇ ಉತ್ತರವನ್ನು ಹುಡುಕುತ್ತ-ಸಾಗುತ್ತಾನೆ.

ಚಳಿಗಾಲದಲ್ಲಿ ಒಂದೊಂದೆ ಎಲೆಯುದುರಿ ನೆನಪು ಕಳಚು–
ತ್ತಿರುವಾಗ ಯಾರಿಗೂ ಕಾಣದ ಹಾಗೆ ಬೇರಿಂದ ರಸ ಹೀರಿ
ಚಿಗುರಿ ನಿಂತವರಾರು?

ಎಂಬುದು ಮೊದಲ ಪ್ರಶ್ನೆ. ಚಳಿಗಾಲ ಒಂದು ನಡುಕು ಹುಟ್ಟಿಸುವ ಹಾಗೂ ಎಲೆಗಳನ್ನು ಉದುರಿಸುವ ಸಮಯ. ಇಲ್ಲಿ 'ನಂಬಿಕೆ' ಥಂಡಿಯ ತೀಕ್ಷ್ಣತೆಗೆ ಸಿಕ್ಕು, ತನ್ನ ಪೂರ್ವದ ಎಲೆಗಳನ್ನು ಕಳಚಿಕೊಂಡಿದೆ. 'ಕಳಚು-ತ್ತಿರುವ' ಪದವನ್ನು ಒಡೆದು ಅದರ ಅರ್ಥವಂತಿಕೆಯನ್ನು ಹೆಚ್ಚಿಸಿರುವುದನ್ನು ಇಲ್ಲಿ ಕಾಣಬಹುದು. ಹಾಗೆ 'ನಂಬಿಕೆ' ಕಳಚಿ ಹೋದಂತೆನಿಸಿದರೂ ಮತ್ತೆ ಬೇರಿಂದ ರಸ ಹೀರಿ ಚಿಗುರಿ ನಿಂತಿದೆ. ಅಂದರೆ ನಂಬಿಕೆಯ ಗಟ್ಟಿಮುಟ್ಟಾದ ಬೇರು ಸಡಿಲವಾಗಿದ್ದ ಸ್ಥಿತಿಯನ್ನು ಹೋಗಲಾಡಿಸಿ ಮತ್ತೆ ಹೊಸತನವನ್ನು ತಂದುಕೊಟ್ಟಿದೆ ಎಂದರ್ಥ. ಆದರೂ ಅದು ಪ್ರಶ್ನೆಯಾಗಿ, ಒಂದು ವಿಸ್ಮಯವಾಗಿ ಉಳಿದಿದೆ.

ಬಿರುಗಾಳಿ ಬೀಸಿ ಆಕಾಶದುದ್ದ
ಧೂಳಡರಿ ದಿಕ್ಕು ತಪ್ಪಿಸಿ, ಮನೆ ಮನೆಯ ಕಿಡಕಿ ಬಾಗಿಲು
ಬಡಿದು, ಪಟ ಪಟ ಹನಿಯುದುರಿದಾಗ ಯಾರು ನೆಲಕಿಳಿದು
ಬಂದವರು ?

ಇದು 'ನಂಬಿಕೆ'ಯ ಇನ್ನೊಂದು ಕ್ರೈಸಿಸ್‌ಅನ್ನು ಸಾರ್ಥಕವಾಗಿ ಚಿತ್ರಿಸುತ್ತದೆ. ಯಾವುದೋ ಒಂದು ವಿಲಕ್ಷಣವಾದ ಆಘಾತ ಬಿರುಗಾಳಿಯಾಗಿ ಧೂಳೆಬ್ಬಿಸಿ ದಿಕ್ಕು ತಪ್ಪಿಸುತ್ತದೆ. ಆಗ ಮನಸ್ಸಿನ ಎಲ್ಲ ಸ್ತರಗಳ ಮೇಲೂ ಹೊಡೆತ ಬೀಳುತ್ತದೆ. ಅದು 'ಮನೆ ಮನೆಯ ಕಿಡಕಿ-ಬಾಗಿಲು ಬಡಿದು' ಎಂಬ ಪ್ರತಿಮೆಯಲ್ಲಿ ಸೂಚಿತವಾಗಿದೆ. ಮುಂದಿನ ಪ್ರಶ್ನಾರ್ಥಕವು ಹಿಂದಿನ ಆಘಾತ ಸೂಚಕವಾದ ಪ್ರತಿಮೆಗೆ ಒಂದು ಬ್ರೇಕ್ಕು ಹಾಕಿ ಒಂದು ಹೊಸ ಆಸೆಯನ್ನು ಹುಟ್ಟಿಸುತ್ತದೆ. ಎಲ್ಲ ಅಬ್ಬರಣೆ ಮುಗಿದು ಮಳೆಹನಿಯುದುರಿದಂತೆ 'ನಂಬಿಕೆ' ನೆಲಕಿಳಿದು ಬರುತ್ತದೆ. ಇಂಥ ಅವಸ್ಥೆಯಲ್ಲಿ ಒಂದು ದಿನ (ಹಾಗೆಂದು ಕವಿ ಹೇಳಿರದಿದ್ದರೂ ಮುಂದೆ ಮರುದಿನ ಎಂದಿರುವುದರಿಂದ ಇಲ್ಲಿ ಒಂದು ದಿನ ಎಂಬುದು ಅಧ್ಯಾಹೃತವೆಂದು ತಿಳಿಯಬೇಕು) ಕಳೆದುಹೋಗುತ್ತದೆ. ಇಲ್ಲಿ ಒಂದು ದಿನ ಎಂಬುದು ಒಂದು ಸಮಯ–ಒಂದು ಕಾಲಾವಧಿ ಎಂದು ಭಾವಿಸಬೇಕೆಂದು ಬೇರೆ ಹೇಳಬೇಕಾಗಿಲ್ಲ. ಅಂಥ ಒಂದು ಆಘಾತಕರ ಸಮಯ ಕಳೆದ ಮೇಲೆ :

ಮರುದಿನ ಬೇಲಿಗುಂಟ ಹೂವರಳಿದಾಗ ಯಾರು
ಕಿಲಕಿಲ ನಕ್ಕು ಹೋದವರು ?

ಎಂದು ಪ್ರಶ್ನಿಸಿಕೊಳ್ಳಬೇಕಾಗುತ್ತದೆ, ಮನಸ್ಸಿನ ಬೇಲಿಯಗುಂಟ 'ನಂಬಿಕೆ' ಮತ್ತೆ ಅರಳಿಕೊಂಡು ಸಂತೋಷವಾಗಿ ನಗುತ್ತಿರುವುದು ಇಲ್ಲಿ ಚಿತ್ರಿತವಾಗಿದೆ. 'ಚಿಗುರಿ ನಿಂತವರಾರು? 'ಯಾರು ನೆಲಕಿಳಿದು ಬಂದವರು ?' 'ಯಾರು ಕಿಲಕಿಲ ನಕ್ಕು ಹೋದವರು ?' ಎಂಬವೆಲ್ಲ ಅವುಗಳ ಹಿಂದಿನ ನೈಸರ್ಗಿಕ ವಸ್ತುಗಳನ್ನೇ ಕುರಿತು ಹೇಳುತ್ತಿದ್ದರೂ ವ್ಯಕ್ತಿ ಸೂಚಕವಾದ

ತತ್ತ್ವ ನಿರ್ದಿಷ್ಟವಾಗಿದೆ. ಅಂದರೆ ಕೆಲವು ಆಘಾತಕರ ಅಪಾಯಕಾರಿಯಾದ ಸಂದರ್ಭ ದಲ್ಲಿ ಕೆಲವು ತತ್ತ್ವಗಳು 'ನಂಬಿಕೆ'ಗರ್ಹವಾಗಿಯೇ ಉಳಿಯುತ್ತವೆಂಬುದನ್ನೂ ಕವಿ ಕಂಡುಕೊಂಡಂತಿದೆ.

ನಿರ್ಮಲವಾಗಿ ನಿಂತ ಮೋಡ
ಹೊಯ್ದಾಡಿ ಎಲ್ಲೋ ಇಳಿಯುವುದು-ಭೂಮಿ ಗುಟುಕರಿಸುವುದು
ಆಗೀಗ ಮಿಂಚಿ ಅಂತರಿಕ್ಷದಲ್ಲೇನೋ ಹೊಳೆಯುವದು.

ಹೀಗೆ ಒಂದು ಕ್ರೈಸಿಸ್‌ಅನ್ನು ಮುಕ್ತಾಯಗೊಳಿಸುವ ಪ್ರತಿಮೆ ಅದರ ಎಲ್ಲ ಸ್ವರೂಪವನ್ನು ಸಮಾರೋಪವಾಗಿ ಚಿತ್ರಿಸುತ್ತದೆ. ಇಲ್ಲಿಯುವರೆಗೆ 'ಆಕಾಶ' 'ಬಾನು' ಈ ರೂಪದಲ್ಲಿದ್ದ ನಂಬಿಕೆ ಈಗ ಘನೀಭೂತವಾಗಿ–ಆದರೂ ಆಕಾಶದ ಒಡಲಲ್ಲಿರುವ–ನಿರ್ಮಲವಾಗಿ ನಿಂತ ಮೋಡವಾಗಿ ಕಾಣಿಸಿಕೊಳ್ಳುತ್ತದೆ. ಅದು ಆರಂಭದಲ್ಲಿ ನಿರ್ಮಲವಾಗಿಯೇ ನಿಂತಿತ್ತು. ಮಧ್ಯ ಹೊಯ್ದಾಡಿತು. ಈಗ ಮತ್ತೆ ಎಲ್ಲೋ ಇಳಿದು-ಮನಸ್ಸಿನ ಯಾವ ಭಾಗ ದಲ್ಲಿಯೋ ಇಳಿದು-ಹೃದಯ ಭೂಮಿಯು 'ನಂಬಿಕೆ'ಯ ನೀರನ್ನು ಗುಟುಕರಿಸುವಂತೆ ಆಯಿತು. ಅಲ್ಲದೆ ಆಗೀಗ ಅಂತರಿಕ್ಷದಲ್ಲಿ ಮಿಂಚು ಹೊಳೆದಿದೆ. ಇಲ್ಲಿ ಅಂತರಿಕ್ಷವೆಂದರೆ ಅಂತರಂಗ. ಅಂತರಿಕ್ಷ—.ಅಂತರಂಗ ಎಂಬ ಸಾಂಗತ್ಯದಲ್ಲಿಯೇ ಕವಿತೆಯ ಅರ್ಥವಂತಿಕೆ ಇದೆ, ಧ್ವನಿಯಿದೆ.

ಕವಿತೆಯ ಮೂರನೆಯ ಭಾಗದಲ್ಲಿ 'ನಂಬಿಕೆ'ಯ ಸಂಕೀರ್ಣಾನುಭವ ವ್ಯಕ್ತ ಗೊಂಡಿದೆ. ಈ ಹಿಂದಿನ ಅದರ ಹೊಯ್ದಾಟ ಮುಗಿದು ಈಗ ಅದು ಅತೀಂದ್ರಿಯ ಸ್ಪರ್ಶ ಪಡೆಯುತ್ತಿರುವದನ್ನು ಕವಿ ಗುರುತಿಸುತ್ತಾನೆ. ಇದೂ ಕೂಡ ಅಂತರಂಗದ ಕಾರ್ಯವೇ ಆಗಿದೆ :

ಯಾವುದೋ ಗಳಿಗೆಯಲಿ ಹಟಾತ್ತನೆ ಒಳಗೆ ಅನಿಸುವ
ದೊಂದು; ಬೆಟ್ಟದ ಮುಡಿಯ ಕಲ್ಲು ಬಂಡೆಯಲ್ಲಿ ಚಿಲ್ಲನೆ
ಬುಗ್ಗೆ ಚಿಮ್ಮಿ ಹರಿದದ್ದೆಲ್ಲೊ.

ಯಾವುದೋ ಒಂದು ಸಮಯದಲ್ಲಿ ತನ್ನ ಒಳಗೆ ಇದ್ದಕ್ಕಿದ್ದಂತೆ ಮೂಡಿದ ಅದರ ಅವ್ಯಕ್ತ ಅನಿಸಿಕೆಯ ಹೇಳಿಕೆ ಇದು. ಈ ಅನಿಸಿಕೆ ಅನಿರ್ವಚನೀಯವಾದ ಒಂದು ಅನು ಭವ. ಆ ಅನುಭವವನ್ನು ಕವಿ ಮುಂದಿನ ಸಾಲಿನಲ್ಲಿ ವಚನೀಕರಿಸಿದ್ದಾನೆ. ಇಲ್ಲಿ ಬರುವ ಬೆಟ್ಟದ ಮುಡಿಯ ಕಲ್ಲು ಬಂಡೆ 'ನಂಬಿಕೆ'ಯು ಹುಟ್ಟದೇ ಇರುವ ಒಂದು ಅಸಾಧ್ಯ ಹಾಗೂ ಕಠಿಣತಮ ಅವಸ್ಥೆಯನ್ನು ಪ್ರತಿಬಿಂಬಿಸಿ, ಅದರ ಮುಂದೆಯೇ ಬುಗ್ಗೆ ಚಿಮ್ಮಿ ಹರಿಯುವುದನ್ನು ಹೇಳಿಕೊಡುತ್ತದೆ. ಅಂದರೆ ಎಲ್ಲಿ ನಂಬಿಕೆಯ ನೀರಿಲ್ಲವೆಂಬ ಭಾವನೆ ಯುಂಟಾಗುತ್ತದೆಯೋ ಅಲ್ಲಿಯೇ ಅದು ಬುಗ್ಗೆಯಾಗಿ ಚಿಮ್ಮಿದ್ದನ್ನು ಕವಿ ಗುರುತಿಸು ತ್ತಾನೆ. ಹಾಗೆ ನೋಡಿದರೆ ಬುಗ್ಗೆ ಚಿಮ್ಮುವದು ಬೆಟ್ಟದ ಮುಡಿಯಲ್ಲಿಯೇ ಹೊರತು ಸಮತಟ್ಟಾದ ನೆಲದಲ್ಲಿ ಅಲ್ಲ. ಜೀವನವೆಲ್ಲ ಸಮವಿದ್ದಾಗ ಒಬ್ಬರು ಇನ್ನೊಬ್ಬರನ್ನು ನಂಬುವದು ಸಹಜ. ಬೆಟ್ಟದಂಥ ಕಷ್ಟ ಕಾಲದಲ್ಲಿ ಅದು ಒಂದು ಪರೀಕ್ಷೆಗೆ ಒಳಗಾಗುತ್ತದೆ.

ಆಗ ನಮಗೆ ಎದ್ದು ಕಾಣುವದು ಅಪನಂಬಿಕೆಯ ಕಲ್ಲುಬಂಡೆಯೇ ಹೊರತು ನಂಬಿಕೆಯ ನೀರಲ್ಲ. ಆದರೆ ಕಣವಿಯವರಿಗೆ ಅಂಥ ಸ್ಥಿತಿಯಲ್ಲಿಯೂ ನೀರಿನ ಬುಗ್ಗೆ ಕಂಡಿದೆ. ಅಂದರೆ ಅವರಿಗೆ 'ನಂಬಿಕೆ' ಎಂಥ ಪ್ರಸಂಗದಲ್ಲಿಯೂ ಕೈಕೊಡದೆ ಉಳಿದುಕೊಂಡಿದ್ದುದರ ನಿಸರ್ಗ ಸಹಜವಾದ ಒಂದು ವಿಶಿಷ್ಟ ಸ್ವರೂಪವಾಗಿ ಗೋಚರಿಸಿದೆ.

ಇಷ್ಟಾದಮೇಲೆ ಕವಿಯ ಜೀವಾನುಭವವೆಲ್ಲ ಗಟ್ಟಿಗೊಂಡು ಒಂದು ಸ್ಥಿತಿಗೆ ಬಂದು ನಿಲ್ಲುವುದರ ಸೂಚನೆಯನ್ನು ಮುಂದಿನ ಸಾಲುಗಳು ಪ್ರತಿಬಿಂಬಿಸುತ್ತವೆ. ಇಲ್ಲಿಯೂ ಕವಿಯ ಅನುಭವದ ಸ್ತರಗಳಲ್ಲಿ ಏರಿಳಿತಗಳಿದ್ದರೂ ಕೊನೆಗೆ ಅತ್ಯಂತ ನಿಶ್ಚಿತವಾದ ಒಂದು ನೆಲೆಗೆ ಬಂದು ನಿಂತಿದ್ದನ್ನು ಕಾಣಬಹುದು.

> ಹಗಲಿರುಳು ಜಾರುವುವು
> ದಿನದಿನವು ನನ್ನೊಳಗಿಂದ ಏನೊ ಹೀರುವವು: ಮತ್ತೆಲ್ಲೋ
> ತಿರುಗಿ, ಪತ್ತೆಯಿಲ್ಲದ ಹಾಗೆ ಜೇನಿಟ್ಟು 'ಬಿಡಿಸಿಕೊ' ಎಂದು
> ದುಡಿಸುವವು.

ಎಂಬಲ್ಲಿ ಇಡೀ ಬದುಕಿನ ಅನುಭವವಿದೆ. ದೈನಂದಿನ ಜೀವನದಲ್ಲಿ ತನ್ನೊಳಗೆ ಬೆರೆತಿರುವ ಹಾಗಿದ್ದೂ ಮತ್ತೆಲ್ಲೋ ಮುಖ ತಿರುಗಿಸುವ, ಪತ್ತೆಯಿಲ್ಲದಂತಾಗುವ ಆ 'ನಂಬಿಕೆ'ಯ ವಿವಿಧ ರೂಪಗಳು ಜೇನಿಟ್ಟು 'ಬಿಡಿಸಿಕೊ' ಎಂದು ಆಹ್ವಾನಿಸುತ್ತವೆ. 'ನಂಬಿಕೆ'ಯೊಂದು ಜೇನು. ಆದರೆ ಅದು ಸುಲಭವಾಗಿ ಸಿಗುವಂಥಾದ್ದಲ್ಲ. ಪ್ರಯತ್ನ ಪೂರ್ವಕವಾಗಿ, ಬಿಡಿಸಿ ಕೊಳ್ಳಬೇಕಾಗುವಂಥಾದ್ದು. ಅಂಥ ಜೇಂಗೊಡವ ಕಂಡು ಅಚ್ಚರಿಗೊಂಡರೂ ಅವಸರ ಪಡುವಹಾಗಿಲ್ಲ ಎಂಬುದು ಮೊದಲಿನ ವಿಚಾರಕ್ಕೆ ಇನ್ನೊಂದು ಆಯಾಮವನ್ನು ನಿರ್ಮಿಸಿಕೊಡುತ್ತದೆ. ಇಲ್ಲಿ ಕವಿಯಲ್ಲಿಯೇ ಒಂದು ಬಗೆಯ ಹೋರಾಟ ನಡೆದಂತೆ ಕಂಡರೂ ಅವನ ಅನುಭವ ನಿರ್ದಿಷ್ಟವಾಗಿದೆ. ''ದಾಹ ತೀರಿಸಲು ನೀರಲ್ಲ, ಮತ್ತು ಬರಿಸುವ ಮದ್ಯವಲ್ಲ'' ಎಂಬಲ್ಲಿ ನಂಬಿಕೆಯು ಎರಡು ತುತ್ತತುದಿಗಳ (extreme) ನಡುವೆ ಇದೆ ಎಂದು ಕವಿ ಹೇಳುವಂತಿದೆ. 'ನಂಬಿಕೆ'ಯ ಕಾರ್ಯ ನೀರಿನಂತೆ ಬರೀ ದಾಹ ತೀರಿಸುವದಾಗಲಿ ಇಲ್ಲವೆ ಮದ್ಯದಂತೆ ಮತ್ತುಗೊಳಿಸುವದಾಗಲಿ ಅಲ್ಲ. ತೃಪ್ತಿ ಮತ್ತು ಮತ್ತತೆ ಇವೆರಡೂ ಆಯಾ ಅರ್ಥದಲ್ಲಿ ತಾತ್ಕಾಲಿಕವಾದವು. ಮತ್ತೆ ದಾಹವುಂಟಾಗು ವದು, ಮತ್ತೆ ಮತ್ತೇರಬೇಕೆಂಬ ಅಪೇಕ್ಷೆ ಉಂಟಾಗುವದು ಇದ್ದೇ ಇರುತ್ತದೆ. ಜೇನಿನ ಸವಿಯಂತಿರುವ 'ನಂಬಿಕೆ'ಯನ್ನು ಅನುಭವಿಸಿದಾಗ ಆಗುವ ಆನಂದವೇ ಬೇರೆ. ಅದು 'ಅಂಗೈಯಲ್ಲಿ ಹನಿ ಹನಿ ಹಾಕಿ, ನೆಕ್ಕಿ ನಾಲಿಗೆ ತುಂಬ ಸವಿದು ಕಣ್ಮುಚ್ಚಿ ತೆರೆಯಬೇಕು'. ಹನಿ ಹನಿ ಹಾಕಿಕೊಳ್ಳುವ, ನಾಲಗೆಯ ತುಂಬ ಸವಿಯುವ, ಕಣ್ಮುಚ್ಚಿ ತೆರೆಯುವ ಈ ಕ್ರಿಯಾತ್ಮಕವಾದ ಧ್ವನಿಪೂರ್ಣವಾದ ಚರಣಗಳಲ್ಲಿರುವ ಅರ್ಥ ಅನನ್ಯವಾದದ್ದು. ಆ ಪದ ಗಳನ್ನು ಬಿಚ್ಚಿ ನೋಡುವದಕ್ಕಿಂತ ಇಡಿಯಾಗಿ ಸ್ವಾನುಭವದ ಹಿನ್ನೆಲೆಯಲ್ಲಿ ಆಸ್ವಾದಿಸು ವುದೇ ಸೂಕ್ತವೆನಿಸುತ್ತದೆ.

ಹೀಗೆ ಸ್ವಾನುಭವವನ್ನು ನಿವೇದಿಸಿ ಕೊನೆಗೆ ಕವಿ ತನ್ನ ಅದರ ವಿಲಕ್ಷಣ ಸಂಬಂಧ ವನ್ನು ಹೇಳಿಬಿಡುತ್ತಾನೆ.

ನನ್ನ ನಂಬಿಕೆಯೊಂದು ಆಕಾಶ :
ನಿಜ, ಅದಕೆ ತಳಬುಡವಿಲ್ಲ, ನಾನೆಷ್ಟು ಬೆಳೆದರೂ
ನನಗೆ ನಿಲುಕುವದಿಲ್ಲ, ದೂರದಿಂದಲ್ಲದೆ ನಾನದನು
ಮುಟ್ಟಿ ಅನುಭವಿಸಿಲ್ಲ. ಮೇಲೆ ನೋಡದೆ ಸೆಟೆದುಕೊಂಡೇ
ನಡೆದರೂ ಅದು ಸದಾ ನನ್ನ ತಲೆಯ ಮೇಲೆ.

ಕವಿತೆಯ ಆರಂಭದ ಉಕ್ತಿಗೆ ಪುಷ್ಟಿಕೊಡುವ, ಅದನ್ನು ಖಚಿತಪಡಿಸುವ ಹಾಗೂ ಅದರ ವ್ಯಾಪಕತೆಯನ್ನು ಪುನಃ ಸ್ಮರಿಸಿಕೊಳ್ಳುವ 'ನನ್ನ ನಂಬಿಕೆಯೊಂದು ಆಕಾಶ' ಎಂಬ ಹೇಳಿಕೆ ಕೊಟ್ಟು, ಅದರ ಇನ್ನೊಂದು ವಿಶಿಷ್ಟಾನುಭವನ್ನು ಕವಿ ನಮ್ಮ ಮುಂದಿಡುತ್ತಾನೆ. ಇಲ್ಲಿ ಅದರ ಆಕಾರ ತಡಬುಡವಿಲ್ಲದ್ದಾಗಿ ಕಂಡಿದೆ. ಇದು ಆಧಾರರಾಹಿತ್ಯ, ಅಸ್ಥಿರತೆಯನ್ನು ಸೂಚಿಸುವಂತಿದೆ, ಅಥವಾ ಅಭದ್ರತೆಯ ಒಂದು ಸಂಕೇತವಾಗಿದೆ. ಆದರೆ ಕವಿಗೆ ಅದೇ ಇಲ್ಲಿ ನಿರ್ದಿಷ್ಟವಾದ ಅರ್ಥವಾದರೆ ಹಿಂದಿನ ಅನುಭವವೆಲ್ಲ ಆಭಾಸವಾಗಿ ಕಾಣುತ್ತದೆ. ಆಕಾಶದ ಆಕಾರ ದುಂಡಗಾದದ್ದು; ಉದಾಹರಣೆ ಕೊಟ್ಟು ಹೇಳುವದಾದರೆ ಚಂಡಿ ನಂಥಾದ್ದು. ಇಂಥದಕ್ಕೆ ತಳ ಯಾವುದು ಬುಡ ಯಾವುದು ಎಂಬುದನ್ನು ನಿರ್ಧರಿಸುವದು ಕಷ್ಟ. ಅಂದರೆ ಅದರ ಯಾವ ಮಗ್ಗಲೂ ತಳವಾಗಬಹುದು. ಹಾಗೆಯೇ 'ನಂಬಿಕೆ' ಇಂಥದೇ ಒಂದು ತಳವೆಂದು ನಿರ್ಧರಿಸುವುದು ಕಷ್ಟ. ಆದರೆ ಯಾವುದೋ ಒಂದು ಬಿಂದು ತಳವಾಗುತ್ತದೆ, ಅಷ್ಟೆ. ಆಕಾಶದಂತೆ ಅಪರಂಪಾರವಾಗಿರುವ 'ನಂಬಿಕೆ'ಯು ಕೈಗೆ ನಿಲುಕುವ ದಾಗಲಿ, ಅಥವಾ ಅದರ ಆದಿ-ಅಂತ್ಯಗಳನ್ನು ಅಳೆದು ತೋರಿಸುವದಾಗಲಿ ಸಾಧ್ಯವಿಲ್ಲ. ಈ ಅರ್ಥದಲ್ಲಿಯೇ 'ನನಗೆ ನಿಲುಕುವದಿಲ್ಲ' ಎಂಬುದನ್ನು ತೆಗೆದುಕೊಳ್ಳಬೇಕೇ ಹೊರತು ಅನುಭವಕ್ಕೆ ಸಿಗುವದಿಲ್ಲ-ಎಂದು ಭಾವಿಸಲಾಗದು. ಯಾಕೆಂದರೆ ಮುಂದಿನ ಸಾಲಿನಲ್ಲಿ ದೂರದಿಂದ ಪಡೆದ ಅನುಭವವಿದೆ. ಇದೂ ಕೂಡ ಅನುಮಾನಕ್ಕೆ ಎಡೆಕೊಡುತ್ತದೆ. ಹಿಂದೆ ಹೇಳಿದ 'ಒಡನಾಟ' 'ನಿರಂತರ ನಂಟು' ದೂರದಿಂದ ನಡೆಯತಕ್ಕವುಗಳೇ ಎಂಬ ಪ್ರಶ್ನೆ ಇಲ್ಲಿ ಏಳುತ್ತದೆ. ಅಲ್ಲದೆ ಕವಿ 'ನಾನದನು ಮುಟ್ಟಿ ಅನುಭವಿಸಿಲ್ಲ' ಎಂಬ ಮಾತು 'ಅಂಗೈಯಲ್ಲಿ ಹನಿಹನಿ ಹಾಕಿ, ನೆಕ್ಕಿ ನಾಲಿಗೆ ತುಂಬ ಸವಿದು, ಕಣ್ಮುಚ್ಚಿ ತಣಿಯಬೇಕು', ಎಂಬುದಕ್ಕೆ ವಿರೋಧವಾಗಿಯೂ ಕಾಣುತ್ತದೆ. ಹೀಗೆ ಪರಸ್ಪರ ವಿರೋಧವಿರುವುದೂ ಒಂದು ಸಂಕೀರ್ಣತೆ ಎಂದು ಹೇಳಿ ಕೈ ತೊಳೆದುಕೊಳ್ಳುವಂತಿಲ್ಲ. ಅದರ ಒಳಹೊಕ್ಕು ನೋಡಿಯೇ ಒಂದು ತೀರ್ಮಾನಕ್ಕೆ ಬರಬೇಕೆನಿಸುತ್ತದೆ. ಇಲ್ಲಿ 'ಮುಟ್ಟಿ ಅನುಭವಿಸಿಲ್ಲ' ಎಂಬುದರ ಮುಂದೆ ಬರುವ ಮೇಲೆ ನೋಡದೆ ಸೆಟೆದುಕೊಂಡೇ ನಡೆದರೂ 'ಅದು ಸದಾ ನನ್ನ ತಲೆಯ ಮೇಲೆ' ಎಂಬ ಹೇಳಿಕೆಯಿರುವುದನ್ನು ಗಮನಿಸಬೇಕು. ಅಂಗೈಯಲ್ಲಿ ಹನಿ ಹನಿ ಹಾಕಿ, ನೆಕ್ಕುವುದು ಒಂದು ಅನುಭವವಾದರೆ, ನಮ್ಮ ವ್ಯವಹಾರವಲ್ಲಿಯೂ-ಅಂದರೆ ಅಹಮಹಮಿಕೆಯ ಭಾವನೆಯಲ್ಲಿಯೂ-ಅದು ಸ್ಪರ್ಶಾತೀತವಾಗಿ ತಲೆಯ ಮೇಲೆ

ಇರುತ್ತದೆಂದು ಕವಿ ಹೇಳುತ್ತಾನೆ. ಇದು ಮಾನವನ ಇನ್ನೊಂದು ಸ್ವಭಾವವನ್ನು, ಆ ಸ್ವಭಾವಕ್ಕು 'ನಂಬಿಕೆ' ಎನ್ನುವುದು ಅಗತ್ಯವೆಂಬುದನ್ನೂ ಸೂಚಿಸುತ್ತದೆ. ಇದನ್ನು ನೋಡಿದರೆ ಈ ಕವಿತೆಯಲ್ಲಿನ ಪ್ರತಿಮೆಗಳನ್ನು ಹಿಂದಿನ ಹಾಗೂ ಮುಂದಿನವುಗಳನ್ನು–ಜೊತೆ ಜೊತೆಗಿಟ್ಟು ಅರ್ಥೈಸದೆ ಆಯಾ ಪ್ರತಿಮೆಯು ಹಿನ್ನೆಲೆಯೊಂದಿಗೆ ಸ್ವತಂತ್ರವಾಗಿಯೇ ಅರ್ಥೈಸುವುದು ಒಳ್ಳೆಯದೆನಿಸುತ್ತದೆ.

ಕವಿತೆಯ ಕೊನೆಯ ಸಾಲುಗಳು ಸಾಮಯಿಕ ಪ್ರಜ್ಞೆಯಿಂದ ಒಂದು climax ಆಗಿ ಬರುತ್ತವೆ.

ಹಗಲು ಹೊತ್ತಿನಲಿ ಅದರೆಡೆಗೆ ಲಕ್ಷ್ಯವಿಲ್ಲ. ನಮ್ಮ ಬದುಕಿನಲಿ
ನಾವು ಮುಗ್ನರಾದರೆ ಸಾಕು, ಅದಕೆ ಚಿಂತೆಯಿಲ್ಲ.
ರಾತ್ರಿ ವಿದ್ಯುದ್ದೀಪ ಕೈಕೊಟ್ಟು, ಮಿಣಿ ಮಿಣಿ ಮೇಣ
ಬತ್ತಿಯ ಹಚ್ಚಿ, ಅಂಜಿ ಆಕಳಿಸುತ್ತ ಕುಳಿತಾಗಲೂ
ಆಕಾಶದಲ್ಲಿ ಹೊಳೆವ ನಕ್ಷತ್ರಕ್ಕೆ ಲೆಕ್ಕವಿಲ್ಲ.

ಹಗಲು ಹಾಗೂ ರಾತ್ರಿ ಇವು ಜೀವನದ ಎರಡು ಮಹತ್ವದ ಮುಖಗಳಾದ ಸುಖ ದುಃಖಗಳನ್ನು ಪ್ರತಿನಿಧಿಸುವಂಥವು. ಇಲ್ಲಿ ಸುಖದ ಕಾಲದಲ್ಲಿಯ 'ನಂಬಿಕೆ'ಯ ಸಂಬಂಧ-ನಿಶ್ಚಿಂತವಾದುದಾದರೆ ದುಃಖದ ಕಾಲದಲ್ಲಿ ಅದರ ಸಂಬಂಧ ಹಾಗಲ್ಲವೆಂಬುದು ಸ್ಪಷ್ಟವಾಗಿದೆ. ವಿದ್ಯುದ್ದೀಪದ ಪ್ರತಿಮೆ ಆಧುನಿಕ ನಾಗರಿಕತೆಯ ಪ್ರತೀಕವಾಗಿ ಬಂದು, ಅದು ಸಂಪೂರ್ಣವಾಗಿ 'ನಂಬಿಕೆ'ಗೆ ಪಾತ್ರವಾದುದಲ್ಲ ಎಂಬುದನ್ನು ಸೂಚಿಸುತ್ತದೆ. ಅಂಥ ಸ್ಥಿತಿಯಲ್ಲಿ ನಮ್ಮ ಸಂಸ್ಕೃತಿಯ ಪರಂಪರೆಯೇ ಬೆಳಕು ನೀಡುವಂಥದ್ದು. 'ಮಿಣ ಮಿಣ ಮೇಣ ಬತ್ತಿ' ಅದನ್ನು ಸಂಕೇತಿಸುತ್ತದೆ. ಕೊನೆಗೆ ನಕ್ಷತ್ರರೂಪದಲ್ಲಿರುವ ಹಲವಾರು ವಸ್ತು, ವಿಚಾರ. ವ್ಯಕ್ತಿ, ತತ್ತ್ವಗಳ ನೆನಪು ಕೊಟ್ಟು, 'ನಂಬಿಕೆ' ಅಗಣಿತವಾಗಿ ತನ್ನ ಸ್ಥಾನದಲ್ಲಿ ಹೊಳೆಯುತ್ತಿರುತ್ತದೆಂಬ ಭರವಸೆಯನ್ನು ಕವಿತೆ ಹುಟ್ಟಿಸುತ್ತದೆ.

ಈ ಕವಿತೆಯ ಇಡೀ ವಸ್ತು ವಾಸ್ತವ ಪ್ರಪಂಚಕ್ಕೆ ಸೇರಿದ್ದು. ಜೀವನದ ವಿವಿಧ ಮುಖ ಅನುಭವವನ್ನು ಅಭಿವ್ಯಕ್ತಗೊಳಿಸುವಂಥಾದ್ದು. ಹಾಗಿದ್ದು ಅದು ಸಂಪೂರ್ಣವಾಗಿ ಮಾನಸಿಕ ವ್ಯಾಪಾರಕ್ಕೆ ಸಂಬಂಧಿಸಿ Metaphysical ಆಗಿಯೇ ಬೆಳೆದದ್ದು. ಇಲ್ಲಿಯ ಕೆಲವು ಪ್ರತಿಮೆಗಳು ಬೆಡಗಿನ ವಚನದ ಮಾದರಿಯಲ್ಲಿಯೇ ಬೆಳೆಯುತ್ತಿರುವುದು ಈ ಕವಿತೆಯ ಇನ್ನೊಂದು ವಿಶೇಷ ಗುಣ. ಶೈಥಿಲ್ಯಕ್ಕೆಡೆಗೊಡದ ಕಾವ್ಯ ಬಂಧ ಹಾಗೂ ನುಡಿಗಟ್ಟುಗಳು ಕವಿತೆಯ ಅರ್ಥವಂತಿಕೆಯನ್ನು ತಿರು–ತಿರುಗಿ ನೋಡುವಂತೆ ಮಾಡುತ್ತವೆ. ಇದು ಕಣವಿಯವರ ಕಾವ್ಯಸಿದ್ಧಿಗೆ ಒಂದು ನಿದರ್ಶನವೆಂದು ಹೇಳಬಹುದು.

ಎಂ. ಎಂ. ಕಲ್ಬುರ್ಗಿ

# 'ಎಪ್ಪತ್ತರ ಬೇಂದ್ರೆ'

'ಕವಿಗೆ ಕವಿ ಮುನಿವಂ'—ಇದು ಒಂದು ಪ್ರಾಚೀನ ಹೇಳಿಕೆ. ಈ ಮಾತಿನಲ್ಲಿ ಸತ್ಯಾಂಶವಿದ್ದರೂ 'ಕವಿಗೆ ಕವಿ ಮಣಿವಂ'—ಎಂಬ ಗೌರವಪ್ರಜ್ಞೆ ಮಾತ್ರ ಕವಿಸಮಾಜದಲ್ಲಿ ಆರೋಗ್ಯಪೂರ್ಣ ವಾತಾವರಣವನ್ನು ನಿರ್ಮಿಸಬಲ್ಲುದು. ಈ ಮನೋಧರ್ಮದಿಂದಾಗಿ ಕವಿಯಿಂದ ಕವಿಪೂಜೆ ಜರುಗಿ ಇಬ್ಬರೂ–ಕೃತಾರ್ಥರಾಗುತ್ತಾರೆ. ಈ ಹಿನ್ನೆಲೆಯಲ್ಲಿ ಕಣವಿಯವರ 'ಎಪ್ಪತ್ತರ ಬೇಂದ್ರೆ' ಕವನ ಅರ್ಥಪೂರ್ಣವೆನಿಸುತ್ತದೆ.

ಬೇಂದ್ರೆಯವರನ್ನು ಕುರಿತು ಬಹಳ ಜನ ಬಹಳಷ್ಟು ಬರೆದಿದ್ದಾರೆ, ಆದರೆ ಅವರ ನೇರ 'ಉತ್ತರಾಧಿಕಾರಿ' ಕವಿಯೊಬ್ಬನ ಈ ಕವಿತೆ ಸಾಹಿತಿಕವಾಗಿ ಬೆಲೆಯುಳ್ಳ ಬರವಣಿಗೆ ಎನಿಸುವುದಲ್ಲದೆ ಐತಿಹಾಸಿಕವಾಗಿಯೂ ಬೆಲೆಯುಳ್ಳ ದಾಖಲೆಯೆನಿಸುತ್ತದೆ. ಬೇಂದ್ರೆ, ಕಣವಿ ಒಂದೇ ಸಮಯದ ಒಂದೇ ಪ್ರದೇಶದ ಕವಿಗಳು. ಮೂಲತಃ ರಮ್ಯ ಸಂಪ್ರದಾಯದವರಾಗಿದ್ದರೂ ಕಣವಿ ಅದನ್ನು ದಾಟಿ ನವ್ಯದಲ್ಲಿಯೂ ನೆಲೆಯೂರಿ ನಿಂತವರು, ಹೀಗಾಗಿ 'ಅಂಬಿಕಾತನಯದತ್ತ'ರನ್ನು ಆದ್ಯಂತವಾಗಿ ವ್ಯಾಖ್ಯಾನಿಸುವುದು ಕಣವಿಯವರಿಗೆ ಸಾಧ್ಯವಾಗಬಹುದಾಗಿದೆ.

'ಎಪ್ಪತ್ತರ ಬೇಂದ್ರೆ' ಒಂದು ಸಾನೆಟ್. ರಸಿಕ-ರಂಗ, ಲಾಲಬಹಾದ್ದೂರ ಶಾಸ್ತ್ರೀ, ತೀ. ನಂ. ಶ್ರೀ, ಮೊದಲಾದವರ ವ್ಯಕ್ತಿಚಿತ್ರಗಳನ್ನು ಸಾನೆಟ್‌ನಲ್ಲಿ ಕಣವಿಯವರು ಕೆತ್ತಿದ್ದರೂ ವ್ಯವಸಾಯ ದೃಷ್ಟಿಯಿಂದ ತಮಗೆ ತೀರ ಹತ್ತಿರದ ಬೇಂದ್ರೆಯವರನ್ನು ಕುರಿತು ಏನು ಹೇಳುತ್ತಾರೆ? ಎಂದು ನಾವು ಆತುರರಾಗುತ್ತೇವೆ. ಈ ಆತುರಕ್ಕೆ ಉತ್ತರವಾಗಿರುವ ಆ ಕವಿತೆ ಹೀಗಿದೆ:

ಕಣ್ಣು ಮಿಂಚಿಸಿ, ನೂರು ಹಂಚಿಕೆಯ ಸಂಚಿಕೆಯ
    ತುಂಬಿ— ತಲೆಯಾಡಿಸುತ, ಯಾವುದೋ ಒಳದನಿಗೆ
    ನಾದ ಕೂಡಿಸಿ, ನೆಲಕೆ ನೀರು ಬರಿಸುವ ಹಾಗೆ
ಬೀಸುಗಾಳಿಯ ಜೊತೆಗೆ ಬಂದರದೊ ಬೇಂದ್ರೆ! ಕೈಯ
ಮಾಟಕ್ಕೆ ಮಾತು ಮಾಂತ್ರಿಕನಾಟ: ಅರಗಳಿಗೆ—
    ಹೊರ–ಒಳಗೆ ತುಂಬಿ ತುಳುಕುವ ಬೆಡಗು, ಕಡಲ ಗುಟು
    ಕರಿಸಿ, ಚಿಕ್ಕೆಗಳ ಮುಕ್ಕಳಿಸುವರು; ತಟ್ಟನೆ ಒಗಟು
ಒಡೆಯುವ ಒಡಪು ನುಡಿ: ಕುಡಿಮಿಂಚು ಬಾನ ಗುಡಿಗೆ.
ಇಪ್ಪತ್ತೊ? ಎಪ್ಪತ್ತೊ? ಮುಪ್ಪತ್ತು ಮುಂದೆ ನಡೆ;

ಅಂಬಿಕಾತನಯನಿಗೆ ದತ್ತು ಕೊಟ್ಟಂದು ಇವ—
ರೊಪ್ಪತ್ತು. ಜಗದಂಬೆ–ಹಡಲಿಗೆ ಹೊತ್ತು ಕುಣಿವ–
ಗೆಲ್ಲಿ ಪುರಸತ್ತು ? ಹಣ್ಣಾದ ಕೇದಿಗೆಯ ಹೊಡೆ:
ಚೂಪಾದ ಗರಿ: ಹುಷಾರಿ; ಕಂಪಿಗೆಲ್ಲಿಯ ಕೊರತೆ:
ನಡೆದದ್ದೆ ಸಾಧನಕೇರಿ, ನುಡಿದದ್ದೆ ಕವಿತೆ.

ಸಾನೆಟ್ ೮+೬ ಸಾಲುಗಳಲ್ಲಿ ಮೈಮೂರಿದು ನಡೆವ ಬಂಧ. ಪಳಚ್ಚನೆ ಹೊಳೆದ ಒಂದು ವಿಚಾರ ಎಂಟು ಸಾಲಿನವರೆಗೆ ಮೈಬಿಚ್ಚಿಕೊಳ್ಳುತ್ತಾ ಬಂದು ಒಂಬತ್ತನೆಯ ಸಾಲಿನಿಂದ ಬೇರೊಂದು ದಿಕ್ಕು ಹಿಡಿದು ಪೂರ್ಣಗೊಳ್ಳುವುದು, ಇದರ ಲಕ್ಷಣ. ಇದಕ್ಕೆ ಅನುಗುಣವಾಗಿ ಈ ಪದ್ಯ '.........ಕುಡಿಮಿಂಚು ಬಾನ ಗುಡಿಗೆ' ಎಂಬಲ್ಲಿ ಒಂದು ಘಟ್ಟವನ್ನು ಮುಟ್ಟಿ ಮುಂದೆ ಇನ್ನೊಂದು ಘಟ್ಟವನ್ನೇರಿ ನಡೆಯುತ್ತದೆ.

ಈ ಕವನ ಪ್ರಾರಂಭವಾಗುವುದೇ 'ಮಿಂಚು', 'ನಾದ', 'ನೀರು'ಗಳಿಂದ ವಿಜೃಂಭಿಸುವ ಅಪೂರ್ವ ಮಳೆಗಾಲ ಪ್ರತಿಮೆಯಿಂದ. ಕಣ್ಣನ್ನು ಮಿಂಚಿಸಿ ನೂರು ಹಂಚಿಕೆಗಳಿಂದ ತುಂಬಿದ ತಲೆಯನ್ನು ತೂಗುತ್ತ, ಒಳದನಿಗೆ ನಾದ ಕೂಡಿಸಿ ನೆಲಕೆ ನೀರು ಬರಿಸುವ ಹಾಗೆ ಬೇಂದ್ರೆಯವರು ಈ ಕವನರಂಗದ ಮೇಲೆ ಒಮ್ಮೆಲೆ ಬಂದುಬಿಡುತ್ತಾರೆ.

ಧಾರವಾಡದಲ್ಲಿ ತಿರುಗಾಡುವ ಬೇಂದ್ರೆಯವರ ಈ ಚಿತ್ರ ಕನ್ನಡ ಸಾಹಿತ್ಯಕ್ಕೆ ಬಂದ ಕವಿ ಬೇಂದ್ರೆಯವರನ್ನೂ ಸಂಕೇತಿಸುತ್ತದೆ. ಷಟ್ಪದಿಯ ಬೀಜಗಳು ಸತ್ವ ಹೀನವಾಗಿ ನಮ್ಮ ಸಾಹಿತ್ಯಕ್ಷೇತ್ರದಲ್ಲಿ ಕ್ಷಾಮಸ್ಥಿತಿ ನೆಲೆಯೂರಿದಾಗ ಬಂದವರು, ಬೇಂದ್ರೆಯವರು. ಹೀಗಾಗಿ ಅವರು ಮಳೆಗಾಲವಾಗಿಯೇ ಬರಬೇಕಾಗುತ್ತದೆ, ಬಂದರು. ಇವರ ಬರುವಿಕೆ ದಾಹದಿಂದ ಬಳಲುತ್ತಲಿದ್ದ 'ನೆಲಕೆ ನೀರು ಬರಿಸು'ತ್ತದೆ. ಈ ನೀರು ಒಮ್ಮೆ ಬೇಂದ್ರೆ ಮಳೆಯಾಗಿ ಸುರಿದುದರ ಫಲವೆನಿಸಿದರೆ, ಇನ್ನೊಮ್ಮೆ ಅವರು ನೆಲವೊದ್ದು ಊಟೆಯಾಗಿಸಿದುದರ ಫಲವೆನಿಸುತ್ತದೆ. 'ನೆಲವೊದ್ದು ನೀರು ತರಿಸುವ' ಬೇಂದ್ರೆಯವರ ತಾಕತ್ತನ್ನು ಇಲ್ಲಿ ಸರಿಯಾಗಿಯೇ ಗುರುತಿಸಲಾಗಿದೆ.

ಬೇಂದ್ರೆಯವರು ಮಿಂಚು, ನಾದಗಳನ್ನು ಹೊತ್ತುಕೊಂಡೇ ಅಂದರೆ ದಾರ್ಶನಿಕ ಶಕ್ತಿ ಮತ್ತು ಕವಿತಾ ಶಕ್ತಿಗಳನ್ನು ಮೇಳವಿಸಿಕೊಂಡೇ ಇಲ್ಲಿ ಬಂದಿದ್ದಾರೆ. ಇಲ್ಲಿಯ 'ಬೀಸುಗಾಳಿಯ ಜೊತೆಗೆ ಬಂದರದೊ ಬೇಂದ್ರೆ' ಎಂಬ ಮಾತು ಅವರು ಪಶ್ಚಿಮದ ಹೊಸಗಾಳಿಯೊಂದಿಗೆ ಬಂದರೆಂದೂ ಒಮ್ಮೆಲೆ ಗಾಳಿಯಂತೆ ನುಗ್ಗಿ ಬಂದರೆಂದೂ ಸೂಚಿಸುತ್ತದೆ.

ಈ ಚಿತ್ರ ನಿಂತೂ ನಿಲ್ಲದೆ ಮುಂದುವರಿದು, ಬಂದ ಬೇಂದ್ರೆಯವರು ನಿಂತು ಸಾಹಿತ್ಯ ಕ್ರಿಯೆಯಲ್ಲಿ ತೊಡಗಿಕೊಂಡ ರೀತಿಯನ್ನು ಬಿಡಿಸಿ ಹೇಳುತ್ತದೆ. ಕಣವಿಯವರ ದೃಷ್ಟಿಯಲ್ಲಿ ಬೇಂದ್ರೆಯವರ ಮಾತು ಮಂತ್ರವೇನೋ ನಿಜ. ಆದರೆ ಆ ಮಾತಿನೊಂದಿಗೆ ಕೈಮೈಗಳೂ ಮಾತನಾಡುವಲ್ಲಿ ಮಾತು 'ಮಾಟ'ವಾಗಿ ಮಾಂತ್ರಿಕನ ಆಟಕ್ಕೆ ತಿರುಗು

ತ್ತದೆ. ಆಗ– ಅರೆಗಳಿಗೆಯಲ್ಲಿಯೇ ತುಂಬುವುದು, ತುಳುಕುವುದು, ಗುಟುಕರಿಸುವುದು, ಮುಕ್ಕಳಿಸುವುದು, ಒಗಟು ಒಡೆಯುವುದು–ಏನೆಲ್ಲ ಕ್ರಿಯೆಗಳು ಜರುಗಿಹೋಗುತ್ತವೆ. ಪಳಪಳನೆ ನಡೆದುಹೋಗುವ ಈ ಕ್ಷಣಾರ್ಧ ಘಟನೆ ಸಹೃದಯನ ಕಣ್ಣು ಕುಕ್ಕಿಸುವಲ್ಲಿ ಆತ ತಾನಾಗಿಯೇ ಒಂದು ಮಾತಿನಲ್ಲಿ "ನುಡಿ; ಕುಡಿಮಿಂಚು ಬಾನಗುಡಿಗೆ" ಎಂದು ಒಪ್ಪಿಕೊಳ್ಳುತ್ತಾನೆ. ಬೇಂದ್ರೆ ಅವರ ಮಾತುಗಾರಿಕೆಯೇ ಮಿಂಚಿನಂತಹುದು; 'ಮಿಂಚಿ ಮಾಯವಾಗು'ವಂತಹದು. ಇಲ್ಲಿ ನೀರಾಗಿ ಬಂದು ದಾಹ ತಣಿಸಿದ ಬೇಂದ್ರೆ, ಮಿಂಚಾಗಿ ನಿಂದು ಕನ್ನಡದ ಗುಡಿ ಅಲಂಕರಿಸಿದ ಒಂದು ಚಿತ್ರ ಸಿದ್ಧವಾಗುತ್ತದೆ.

ಈಗ ಇನ್ನೊಂದು ಚಿತ್ರ: ಇದು ಪ್ರಾರಂಭವಾಗುವುದೇ "ಇಪ್ಪತ್ತೊ? ಎಪ್ಪತ್ತೊ?" ಎಂಬ ಸಂದೇಹದಿಂದ. ಈ ಮಾತು ಎಪ್ಪತ್ತು ವರ್ಷ ತುಂಬಿದ್ದರೂ ಬೇಂದ್ರೆಯವರ ಇಪ್ಪತ್ತರ ತಾರುಣ್ಯವನ್ನು ಸೂಚಿಸುತ್ತದೆ. ತರುವಾಯದ "ಮುಪ್ಪತ್ತು ಮುಂದೆ ನಡೆ" ಎಂಬ ವಾಕ್ಯದಲ್ಲಿ ಕವಿಗೆ ಶತಾಯುಷ್ಯವನ್ನು ಕೋರಲಾಗಿದೆ. ಇಲ್ಲಿಯೇ

ಅಂಬಿಕಾತನಯನಿಗೆ ದತ್ತು ಕೊಟ್ಟಂದು ಇವ—
ರೊಪ್ಪತ್ತು ಜಗದಂಬೆ— ಹಡಲಿಗೆ ಹೊತ್ತು ಕುಣಿವ—
ಗೆಲ್ಲಿ ಪುರಸತ್ತು?

ಎಂಬ ಸಾಲುಗಳಿವೆ. ಇಲ್ಲಿ ಕಾವ್ಯನಾಮವಾದ 'ಅಂಬಿಕಾತನಯದತ್ತ'ನಿಗೆ ದತ್ತು ಕೊಡಲಾದ ಕವಿಯಿವರು ಎಂಬ ಅರ್ಥವನ್ನು ಎಳೆಯಲಾಗಿದೆ. ಲೌಕಿಕ ತಂದೆಯಿಂದ ಕವಿ ಧರಿಸಿದ ಮಾಂಸಪಿಂಡ ಪ್ರತಿಭಾಪಿಂಡವಾಗುವುದು. ಆತನು ದೈವೀಪುರುಷನಿಗೆ ದತ್ತು ಹೋದಾಗ ಮಾತ್ರ. ಬೇಂದ್ರೆಯವರು ದತ್ತುಹೋದುದು. ಅಂಬಿಕಾತನಯನಿಗೆ. ದತ್ತು ಸ್ವೀಕರಿಸಿದ ಆ ಅಂಬಿಕಾತಯ ಷಣ್ಮುಖನೋ ಗಜಮುಖನೋ ಸಂದೇಹ. ಒಬ್ಬ ದೇವಸೈನ್ಯದ ಹರಿಕಾರ, ಇನ್ನೊಬ್ಬ ವ್ಯಾಸಪ್ರತಿಭೆಯ ಲಿಪಿಕಾರ. ಸಾಹಿತ್ಯ ಸಂದರ್ಭಕಾರಣವಾಗಿ ಬೇಂದ್ರೆ ದತ್ತು ಹೋದುದು ಈ ಲಿಪಿಕಾರನಿಗೆ ಎಂದು ಹೇಳುವುದೇ ಯೋಗ್ಯ. "ವೀರನಾರಾಯಣನೆ ಕವಿ ಲಿಪಿಕಾರ ಕುಮರವ್ಯಾಸ" ತತ್ವವನ್ನು ಒಪ್ಪಿಕೊಂಡವರು ಬೇಂದ್ರೆಯವರು ಎಂಬ ಮಾತನ್ನು ಇಲ್ಲಿ ನೆನಪಿಸಿಕೊಳ್ಳಬೇಕು. ದತ್ತು ಹೋದ ಕ್ಷಣದಿಂದ ಬೇಂದ್ರೆ "ಒಪ್ಪತ್ತು". ಈ ಪದ ಒಂದು ವ್ರತದ, ಸಾಹಿತ್ಯ ವ್ರತದ ಸಂಕೇತವಾಗಿದೆ.

ಬೇಂದ್ರೆ "ಜಗದಂಬೆ–ಹಡಲಿಗೆ ಹೊತ್ತು ಕುಣಿವ" ಕವಿ. ತಲೆಯಲ್ಲಿ ಹಡಲಿಗೆ, ಕಾಲಲ್ಲಿ ಕುಣಿತ. ಹಡಲಿಗೆ ದೈವೀಶಕ್ತಿಯ ಪ್ರತೀಕವಾದರೆ. ಕುಣಿತ ಅದರ ಅಭಿವ್ಯಕ್ತಿಯ ಪ್ರತೀಕ. ಹೀಗೆ ಕಾವ್ಯಶಕ್ತಿ—ಕಾವ್ಯಾಭಿವ್ಯಕ್ತಿಗಳನ್ನು ಸಮನ್ವಯಿಸಿಕೊಂಡ ಈ ಕವಿಗೆ "ಎಲ್ಲಿ ಪುರಸತ್ತು?" ಎಂಬ ಮಾತು, ಅವರ ಸಾಹಿತ್ಯಕೃಷಿಯ ನಿರಂತರತೆಯನ್ನು ಸೂಚಿಸುತ್ತದೆ. ಮೇಲೆ ಹೇಳಿದ ಎಲ್ಲ ಕೋನಗಳನ್ನು ಕೇಂದ್ರವಾಗಿ ನಿಂತು ಬಂಧಿಸಿವೆ.

ಹಣ್ಣಾದ ಕೇದಿಗೆಯ ಹೊಡೆ :
ಚೂಪಾದ ಗರಿ : ಹುಷಾರಿ ; ಕಂಪಿಗೆಲ್ಲಿಯ ಕೊರತೆ :
ನಡೆದದ್ದೆ ಸಾಧನಕೇರಿ, ನುಡಿದದ್ದೆ ಕವಿತೆ

ಎಂಬ ಸಾಲುಗಳು. ಇದು ಇಡೀ ಪದ್ಯಕ್ಕೆ ಅರ್ಥಪೂರ್ಣ ಕೊನೆಯನ್ನು ಒದಗಿಸಿದೆ. ಎಪ್ಪತ್ತರ ಬೇಂದ್ರೆಯವರಲ್ಲಿ “ಹಣ್ಣಾದ ಕೇದಿಗೆಯ ಹೊಡೆ”ಯನ್ನು ಕಣವಿ ಕಂಡಿದ್ದಾರೆ; ಈಗ ಬೇಂದ್ರೆ ಮಾಗಿದ ಒಂದು ಜಾನಪದ ಹೂವು ಎಂದೂ ಸೂಚಿಸಿದ್ದಾರೆ. ಇಲ್ಲಿ ಜಾನಪದ ಹೂವಾದ ಕೇದಿಗೆ ಜಾನಪದ ಕವಿಯಾಗಿ ಬೇಂದ್ರೆಯವರ ಕವಿತ್ವವನ್ನು ಸಮರ್ಥವಾಗಿ ಪ್ರತಿನಿಧಿಸಿದೆ. ಬೇಂದ್ರೆಯವರ ಕವಿತ್ವವೇ “ಪರಿಮಳಕೆ ಗರಿ ಮೂಡಿತೋ” ಎಂಬ ಮಾದರಿಯದು.

ಇಲ್ಲಿಯ “ಚೂಪಾದ ಗರಿ: ಹುಷಾರಿ;” ಮತ್ತು “ಕಂಪಿಗೆಲ್ಲಿಯ ಕೊರತೆ:” ಎಂಬ ಮಾತುಗಳು ಬೇಂದ್ರೆಯವರ ಎರಡು ಗುಣವಿಶೇಷಗಳನ್ನು ಪ್ರತಿನಿಧಿಸುತ್ತವೆ. ಅವು: ಬೇಂದ್ರೆಯವರ ‘ವಾಕ್’ ಖಡ್ಗಧಾರಾ ತೀಕ್ಷ್ಣ. ‘ಅರ್ಥ’ ತವನಿಧಿಯ ಭಂಡಾರ. ಕೇದಿಗೆಯೊಂದಿಗಿನ ಸರಸದ ಹಸ್ತ ಕೇಡಿನಂತೆ ಬೇಂದ್ರೆಯೊಂದಿಗಿನ ಸರಸದ ಪರಿಣಾಮ. ಮೈಮರೆದು ಮಾತನಾಡಿದರೆ ಮುಳ್ಳಾಗಿ ತಿವಿಯುವ ಅವರು, ಮನದೆರೆದು ಮಾತನಾಡಿದರೆ ಗಂಧವಾಗಿ ಪರಿಮಳಿಸುತ್ತಾರೆ. ಹೀಗಾಗಿ ಅವರನ್ನು ತುಂಬ ಎಚ್ಚರಿಕೆಯಿಂದ ಬಳಸಿಕೊಳ್ಳಬೇಕೆಂಬುದು ಇಲ್ಲಿಯ ಸೂಚನೆ.

“ನಡೆದದ್ದೆ ಸಾಧನಕೇರಿ, ನುಡಿದದ್ದೆ ಕವಿತೆ” ಇದು ಅಂಬಿಕಾತನಯದತ್ತ ಸೂತ್ರ. ಇಲ್ಲಿ ಅವರ ಸಾಧನೆ, ಸಿದ್ಧಿಗಳ ವ್ಯಾಖ್ಯೆಯಿದೆ. ಸಾಧನಕೇರಿ ನಿವಾಸಿ ಬೇಂದ್ರೆ ಕವಿತೆ ಬರೆಯುವುದು ನಿಜ ಆದರೆ ಸಾಧನಕೇರಿ ನಡೆದ ಕಾರಣವಾಗಿ ಅವರ ನುಡಿಯೆಲ್ಲ ಕವಿತೆಯಾಗಲೇಬೇಕು, ಕವಿತೆಯಾಗಿದೆ ಎಂಬುದು ಕಣವಿಯವರ ಗಟ್ಟಿ ನಂಬಿಕೆ.

ಹೀಗೆ ತನ್ನ ಹತ್ತಿರದ, ತನ್ನ ಮೇಲೆ ಪ್ರಭಾವ ಬೀರಿದ ಕವಿಯನ್ನು ಹಲವು ದಿಕ್ಕುಗಳಲ್ಲಿ ನಿಂತು ನಿರೀಕ್ಷಿಸಿದುದರ ಫಲಗಳೆಲ್ಲ ಇಲ್ಲಿ ಸಫಲ ಕವನವನ್ನಾಗಿಸಿವೆ. “ಚೂಪಾದ ಗರಿ: ಹುಷಾರಿ;” ಎಂದು ನಮಗೆ ಹೇಳುವಂತೆ ತಾವೂ ಎಚ್ಚರವಹಿಸಿ ಒಂದೊಂದಾಗಿ ಗರಿ ಬಿಡಿಸುತ್ತ ಕೇದಿಗೆಯ ಗಂಧವನ್ನು ಗುರುತಿಸಿದ್ದಾರೆ. ಹೀಗಾಗಿ ಗಂಧವೇ ಗರಿಯೊಡೆಯುತ್ತ ಬಂದ ರೀತಿಯ ಈ ಕವನವೇ ಇಡಿಯಾಗಿ ಒಂದು “ಕೇದಿಗೆಯ ಹೊಡೆ”.

## ದ. ರಾ. ಬೇಂದ್ರೆ

# 'ಕಾವ್ಯಾಕ್ಷಿ'

ನನ್ನ ತರುಣ ಮಿತ್ರರಾದ ಪ್ರೊ. ಈಶ್ವರನ್ ಅವರಿಂದ ಒಂದು ಕಾವ್ಯ ಸಂಗ್ರಹಕ್ಕೆ ಮುನ್ನುಡಿ ಬರೆಯಬೇಕೆಂದು ಈಗ ಒಂದೆರಡು ತಿಂಗಳ ಪೂರ್ವದಲ್ಲಿ ಕಾಗದ ಬಂತು. ಆ ಕಾಗದಕ್ಕೆ ನಾನು ಉತ್ತರ ಬರೆಯುವದರೊಳಗಾಗಿಯೇ ಆ ಕಾವ್ಯಕೃತಿಗೆ ಕಾರಣರಾದ ಕವಿಗಳಿಂದಲೂ ಅದೇ ಅಪೇಕ್ಷೆಯ ಇನ್ನೊಂದು ಕಾಗದ ಬಂತು. ಕವಿಗಳಾದ ಚೆನ್ನವೀರ ಕಣವಿಯವರನ್ನು ಧಾರವಾಡದಲ್ಲಿ ನಾನು ನೋಡಿದ್ದರೂ ನೋಡಿರಬಹುದು. ಆದರೆ ಅವರ ನನ್ನ ಪರಿಚಯವಿಲ್ಲ. ಅವರ ಕವನಗಳನ್ನು ಮಾತ್ರ ಅಲ್ಲಲ್ಲಿ ಮಾಸಪತ್ರಿಕೆಗಳಲ್ಲಿ ಕಂಡಿದ್ದೆ. ಉದಿತವಾದ ಕನ್ನಡದ ಹೊಸ ಹುಮ್ಮಸ್ಸಿನ ದಂಡೆಗೆ ಸೇರಿದ ವೀರರು ಇವರೊಬ್ಬರು; ಎಂದು ಗುರುತಿಸಿದ್ದೆ. ಅಂಥವರ ಕೃತಿಗಳಿಗೆ ಮುನ್ನುಡಿ ಬರೆಯುವದು ನನಗೂ ಸಂತೋಷವೇ. ಆ ಸಂತೋಷಕ್ಕೆ ಮಹತ್ವದ ಕಾರಣವೆಂದರೆ—ಹೊಸಗನ್ನಡ ಕಾವ್ಯವಾಹಿನಿಯು ಹರಿಗಡಿದಿಲ್ಲ, ಹೊಸ ಪ್ರವಾಹಗಳನ್ನು ಸೇರಿಸಿಕೊಳ್ಳುತ್ತಲಿದೆ ಎಂಬುದಕ್ಕೆ ಇವರ ಕೃತಿಯೂ ಒಂದು ಪ್ರಮಾಣ. ಕಾವ್ಯದಲ್ಲಿ 'ಶ್ರೀ' ಅವರ ಕಾಲವಾದ ಮೇಲೆ ಕವಿಗಳ ಹೊಸ ಪೀಳಿಗೆ ಬರುತ್ತಿಲ್ಲ ಎಂದು ಅಗೀಗ ಒಂದು ಹಲುಬಿನ ದನಿಯು ಕೇಳಬರುತ್ತದೆ. ಅಲ್ಪಸಂತುಷ್ಟಿಯು ಅನರ್ಥಕಾರಿ ಎಂಬ ಭಾವದಿಂದ ಬಂದ ಮಾತುಗಳಿಗೆ ಒಂದು ಔಚಿತ್ಯವಿದೆ. ಆದರೆ ಅದನ್ನೇ ಮೇಲುಪಂಕ್ತಿಯೆಂದು ತಿಳಿದುಕೊಂಡು, ಬಂದ ಬಂದ ನವ ಕವನವನ್ನೆಲ್ಲ ಹುಬ್ಬು ಮುರಿದು ನೋಡುವ ಹಗರಣಗಲಿತ ಸಭ್ಯರೂ ಅಲ್ಲಲ್ಲಿ ಇಣಿಕುವದುಂಟು. ಅಳತೆಗೆಟ್ಟ ಅಶಾವಾದದಂತೆ ಅಸ್ತವ್ಯಸ್ತ ನಿರಾಶಾವಾದವೂ ಬೆಳೆಯಲಿರುವ ಜನತೆಗೂ ಭಾಷಾ ಸಂಸ್ಕೃತಿಗೂ ಅಹಿತಕಾರಿಯಾಗಿದೆ.

ಶ್ರೀ ಚೆನ್ನವೀರ ಕಣವಿಯವರು ಇನ್ನೂ ವಿದ್ಯಾರ್ಥಿಗಳು. ಅವರ ವಿದ್ಯಾರ್ಜನೆ ಇನ್ನೂ ಕೊನೆಗಂಡಿಲ್ಲ. ಅರ್ಜನೆಯೊಡನೆ, ಅವರು ಉಂಡದ್ದನ್ನು ಮೈಗೂಡಿಸಿಕೊಳ್ಳುವದಲ್ಲದೆ, ತನ್ನತನದ ಅರಿವಿನ ಅಂಕುರಗಳನ್ನೂ ಸಹಜ ವೈಖರಿಯಿಂದ ಹೊರಹೊಮ್ಮಿಸುತ್ತಿದ್ದಾರೆ. ಮಾತೃವಾತ್ಸಲ್ಯ, ಮಾತೃಭಾಷಾವಾತ್ಸಲ್ಯ, ಸೌಂದರ್ಯದೃಷ್ಟಿ, ಅಭೀಪ್ಸೆಯ ತೀವ್ರತೆ, ನವ ಸ್ವಾತಂತ್ರ್ಯದ ಎಚ್ಚರ, ಹೊಸ ಮೌಲ್ಯಗಳ ಸ್ವೀಕಾರ, ದೇಶಾಭಿಮಾನ, ರಾಷ್ಟ್ರಭಕ್ತಿ, ಆದರ್ಶ ಪ್ರೀತಿ—ಇವೇ ಮೊದಲಾಗಿ ಅವರ ಕಾವ್ಯಸ್ಫೂರ್ತಿಯ ವಿಷಯಗಳಾಗಿವೆ. ಅವರ ಕವನದಲ್ಲಿ ಜೀವಂತ ಗತಿಯಿದೆ, ಮಾತಿಗೆ ಅಚ್ಚುಕಟ್ಟು ಇದೆ. ಅಲ್ಪಸಂತುಷ್ಟಿ ಇಲ್ಲ, ಮಹತ್ತಿನ ಕಡೆಯ ಎಳೆತವಿದೆ. ಅವರ ಬೆಳೆವ ಮನಸ್ಸೂ, ಅಂತಃಕರಣವೂ ವಿಕೃತ ಕ್ಷೋಭದಿಂದ ಮುದುಡಿಕೊಂಡಿಲ್ಲ; ವಿಪರೀತ ವಿಕಾರಗಳಿಂದ ಹರಿತವಾಗಿಲ್ಲ. ತನ್ನ

ಕೈ ಮೈ ಹರಿದುಕೊಂಡು ಸುತ್ತಲಿನವರ ಮೋರೆ ಹರಿದುಕೊಳ್ಳುವ ಕೃತಕಾವೇಶದಿಂದ ಅವರ ವಾಣಿ ಕ್ವಚಿತ್ತಾಗಿಯೆ ಉದ್ದೀಪ್ತಳಾಗುತ್ತಾಳೆ. ಅವರ 'ಒಳ್ನುಡಿಗೆ', 'ಕಾವ್ಯಾಕ್ಷಿ', 'ಒಳದನಿ' ಗಳು ಒಳಿತಿನ ಶಕ್ತಿಯನ್ನು ರೂಪಿಸುವಲ್ಲಿ ಸಾರ್ಥಕತೆಯನ್ನು ಕಾಣಲು ತವಕಿಸುತ್ತವೆ. 'ಚೆನ್‌ಬೆಳಕಿ' ನಲ್ಲಿ ಅವರ ನಿರ್ಮಲ ಹೃದಯಾಕೂತಿಯು ಮೂಡಿದೆ. ಅವರ 'ಸ್ಫೂರ್ತಿ' ಗೀತವು ಸಾಕಾರವಾಗಿ ನೆಲಕಿಳಿದಾಗ, ನಾಡಿನ ಜನವೂ ಎತ್ತರಕ್ಕೇರುವಲ್ಲಿ ಸಂಶಯವಿಲ್ಲ.

ಈ ಸಂಗ್ರಹದಲ್ಲಿ, ಪ್ರಥಮ ಸಂಕಲನದಲ್ಲಿರಬೇಕಾದುದೆಲ್ಲವೂ ಇದೆ : ಭಾವಗೀತ, ಸೀಸಕ ಪದ್ಯ, ಚತುರ್ದಶಪದೀ, ವಿವಿಧ ಮಟ್ಟು, ನವೀನ ತಾಳ ಲಯ ಎಲ್ಲವೂ ತಲೆದೋರಿದೆ, ಸಮಕಾಲೀನ ಸಾಹಿತ್ಯದ ಪ್ರತಿಧ್ವನಿಯೂ, ಗತಿಧ್ವನಿಯೂ, ಸಹಜ ನಿರ್ಭಯತೆಯಿಂದ ಕಾಲಿಕ್ಕಿದೆ. ಅದು ಕೆಲಮಟ್ಟಿಗೆ ಅನಿವಾರ್ಯ. ಇದು ಹೊಸ ನೀರು. ಈ ಪ್ರವಾಹದಲ್ಲಿ ಮಾತ್ರ ಹಳ್ಳದ ರಭಸವಿರದೆ, ಹೊಳೆಯ ಗಾಂಭೀರ್ಯವಿದೆ. ಶ್ರೀ ಈಶ್ವರನ್ ಅವರು ಗುಣಗ್ರಾಹಿಗಳಾಗಿ ಶ್ರೀ ಕಣವಿಯವರ 'ಕಾವ್ಯಾಕ್ಷಿ' ಯನ್ನು ಎಲ್ಲರ ಪ್ರತ್ಯಕ್ಷಕ್ಕೆ ಒಡ್ಡಿದುದು ರಸಿಕರ ಸುಖ ಹೆಚ್ಚಿಸಿದಂತಾಗಿದೆ. ಕವಿಗಳ ಶಾರದೀಯ ಪ್ರವಾಹವೂ ಹರಿದು ಬಂದು ಕನ್ನಡ ಕಡಲನ್ನುಕ್ಕಿಸಲಿ!

೨೦—೪—೧೯೪೯

## ವಿ. ಕೃ. ಗೋಕಾಕ

# 'ಭಾವಜೀವಿ'

ಧಾರವಾಡದ ಕಾವ್ಯಾನುಭವ ಮಂಟಪದ ಶ್ರೀ ಚೆನ್ನವೀರ ಕಣವಿಯವರನ್ನು ನಾನು ಕಳೆದ ಮೇ ತಿಂಗಳಲ್ಲಿ ಕಂಡೆ. ಅವರ ಸಹೃದಯತೆ, ವಿನಯ ಹಾಗು ಸೌಜನ್ಯಗಳು ನನ್ನ ಮನಸ್ಸನ್ನು ಆಕರ್ಷಿಸಿದವು. ಸಮಾನ ಧರ್ಮಿಗಳಾದ ಸ್ನೇಹಿತರೊಡನೆ ಬೆರೆತು ಕೊಂಡು ಏಕೀಕೃತ ಕರ್ನಾಟಕದ ಎಳೆಯರ ಒಂದು ಮೇಳದಂತೆ ಆದರ್ಶದೆಡೆಗೆ ನಡೆದ ಈ ಉತ್ಸಾಹಿಗಳ ಗುಂಪು ಧಾರವಾಡದಲ್ಲಿಯ ನನ್ನ ಜೀವನವನ್ನು ನೆನಪಿಗೆ ತಂದು ನನ್ನನ್ನು ಪುಲಕಿತನನ್ನಾಗಿ ಮಾಡಿತು. ಅವರ ಕೋಣೆಯ ಅಟ್ಟದ ಮೇಲೆ ಜರುಗಿದ ಮಂಟಪದ ಸಭೆಯ ಸವಿ ನೆನಪು ಇನ್ನೂ ಅಚ್ಚಳಿಯದೆ ನನ್ನ ಚಿತ್ತ ಭಿತ್ತಿಯ ಮೇಲೆ ಮೂಡಿದೆ. 'ಮಲ್ಲಿಗೆಯ ಮಂಟಪವೆ ಅನುಭವದ ಮಂಟಪವು' ಎಂದು ಹಿಂದೊಮ್ಮೆ ನಾನು ಬರೆದಿದ್ದೆ. ಅಂದಿನ ಆ ಸಭೆಯಲ್ಲಿ ಅನುಭವವೂ ಮಲ್ಲಿಗೆಯೂ ಆತ್ಮ—ಶರೀರ ಗಳಂತೆ ಬೆರೆತುಕೊಂಡಿದ್ದವು.

'ಕಾವ್ಯಾಕ್ಷಿ' ಎಂಬ ಕವನ ಸಂಗ್ರಹವನ್ನು ಪ್ರಕಟಗೊಳಿಸಿ ಕಣವಿಯವರು ತಮ್ಮ ಕಾವ್ಯಜೀವನದ ಬಗ್ಗೆ ಭರವಸೆಯನ್ನೂ ಹೆಚ್ಚಿನ ಆಸೆಯನ್ನೂ ಹುಟ್ಟಿಸಿದ್ದಾರೆ. 'ಭಾವಜೀವಿ' ಎಂಬ ಈ ಕೃತಿಯಲ್ಲಿ ತಮ್ಮ ಸ್ಫೂರ್ತಿಯ ಉಗಮವನ್ನು ಗುರುತಿಸಲು ಹವಣಿಸಿ ಅದರ ಪ್ರವಾಹವನ್ನು ಚಿತ್ರಿಸಿದ್ದಾರೆ. ಈ ಮುದ್ದು ಕಾವ್ಯಕ್ಕೆ ಮುನ್ನುಡಿಯನ್ನು ನಾನು ಬಹಳ ಸಂತೋಷದಿಂದ ಬರೆಯುತ್ತಿದ್ದೇನೆ.

## 2

ಭಾವಜೀವನವೆಂದರೇನು? ಇದೂ ಒಂದು ಸ್ವತಂತ್ರ ಜೀವನ ದೃಷ್ಟಿಯೆಂದು ಒಪ್ಪಿಕೊಳ್ಳಬಹುದೆ? ಇದು ಬರಿ ಸ್ವಪ್ನರಂಜನೆಯಾಗಿರಬಹುದಲ್ಲ? ಬರಿ ಒಂದು ಮಧುರ ಭ್ರಮೆಗಿಂತ ಅದರಲ್ಲಿ ಹೆಚ್ಚಿನದೇನಿದೆ ? ಭ್ರಮೆಯೇನೋ ಮಧುರವಾದುದು. ಭ್ರಮಿಷ್ಟನಾಗಿ ತಿರುಗಾಡುವುದರಲ್ಲಿ ಏನು ಪುರುಷಾರ್ಥ? ಆದಷ್ಟು ಬೇಗ ಅದರೊಳ ಗಿಂದ ಪಾರಾಗಿ ಬುದ್ಧಿ ಸಂಪನ್ನತೆಯ ಇಲ್ಲವೆ ಕಾರ್ಯಕ್ಷಮತೆಯ ಹಾದಿಯನ್ನು ಹಿಡಿಯುವದು ಒಳಿತಲ್ಲವೆ? ಕೂಟ ಪ್ರಶ್ನೆಗಳಿವು. ಇವುಗಳಿಗೆ ಸಮರ್ಪಕವಾದ ಉತ್ತರ ವನ್ನು ಕೊಡದೆ ಇಲ್ಲವೆ ಕೊಟ್ಟುಕೊಳ್ಳದೆ ಭಾವಜೀವಿಯು ಮುಂದುವರಿಯುವದು ಸಾಧ್ಯವಿಲ್ಲ.

ಜೀವನವು ಪರಿಪೂರ್ಣತೆಯನ್ನು ಮುಟ್ಟುವ ತನಕ ವಿವಿಧ ದೃಷ್ಟಿಕೋನಗಳ ಪ್ರಯೋಗ ಶಾಲೆಯಾಗುತ್ತದೆ. ಸತ್ಯ, ಸೌಂದರ್ಯ, ಪ್ರೇಮ, ಕಲ್ಯಾಣ, ಭಕ್ತಿ—ಈ

ಎಲ್ಲ ಪಂಚದೈವತಗಳ ಆರಾಧನೆಯೊಂದರೇ ಜೀವನ. ಈ ಪಂಚ ದೈವತಗಳನ್ನು ಸಾಕ್ಷಾತ್ಕರಿಸಿಕೊಂಡು ಅವುಗಳ ಉಸಿರನ್ನು ತನ್ನ ಉಸಿರಾಗಿ ಮಾಡುವ ಜೀವವೇ ಪರಿಪೂರ್ಣ ಜೀವ. ಆ ಸಿದ್ಧಿಯೇ ಸಿದ್ಧಿ. ವಿವೇಕ, ಕಲ್ಪಕತೆ, ಸಹೃದಯತೆ, ಸಬಲ ಸಾತ್ವಿಕತೆ, ಸಮಷ್ಟಿಯಲ್ಲಿ ಇವು ನೆಲಸುವಂತೆ ಮಾಡುವ ಯೋಗ್ಯತೆಯನ್ನು ಪಡೆದ ನಿಷ್ಕಾಮ ಕಾರ್ಯಕ್ಷಮತೆ—ಇವೇ ಈ ದೈವತಗಳ ಅಧಿಷ್ಠಾನವನ್ನು ಶಕ್ಯವಾಗಿ ಸುವ ವೇದಿಕೆಗಳು. ಒಬ್ಬನು ಶಕ್ತಿಯ ಆರಾಧಕನಾದರೆ ಇನ್ನೊಬ್ಬನು ಸಾತ್ವಿಕತೆಗೆ ಶರಣು ಹೋಗುತ್ತಾನೆ. ಮಗುದೊಬ್ಬನು ನಲುಮೆಯ ಅಡಿಯಾಳಾಗುತ್ತಾನೆ. ಒಂದೊಂದು ಜೀವನದಲ್ಲಿ ಒಂದೊಂದು ಸ್ಫೂರ್ತಿಯು ಅಂಕುರಿಸುತ್ತದೆ. ಎರಡು ಮೂರು ದೈವತಗಳ ಕೃಪೆಯನ್ನೂ ಒಂದೊಂದು ಜೀವನವು ಪಡೆದಿರುತ್ತದೆ. ಐದೂ ಪಕಳೆಗಳು ಅರಳಿದಾಗ ಜೀವವು ಪ್ರಫುಲ್ಲವಾಗುತ್ತದೆ.

ಆದರೆ ಒಂದು ಸಿದ್ಧಿಯಲ್ಲಿ ಉಳಿದ ಸಿದ್ಧಿಗಳೂ ಸಮಾವೇಶವಾಗದೆ ಇಲ್ಲ. ಉದಾಹರಣಾರ್ಥವಾಗಿ, ಸತ್ಯಾನ್ವೇಷಿಯಾದ ವಿವೇಕ ತನ್ನಲ್ಲಿಯೇ ಸೌಂದರ್ಯದ ಪರಮಾವಧಿಯನ್ನು ಕಾಡುಕೊಳ್ಳುತ್ತದೆ. ವಿವೇಕವೇ ಕಲ್ಯಾಣಕರವಾಗುತ್ತದೆ. ವಿವೇಕದ ಗರ್ಭದಲ್ಲಿಯೇ ಪ್ರೇಮ-ಶಕ್ತಿಗಳು ಅಂಕುರಿಸುತ್ತವೆ.

ಭಾವಜೀವಿಯದು ಸೌಂದರ್ಯ-ಪ್ರೇಮಗಳ ಹಾದಿ. ಹೃದಯ ಕ್ಷೇತ್ರದ ನೇಗಿಲ ಯೋಗಿಯವನು. ಆತ್ಮಕೃಷೀವಲನಾಗಲು ಆವನು ಹವಣಿಸುತ್ತಾನೆ. ವಿವೇಕವೇ ಅವನ ಕೈದೀವಿಗೆಯಾಗುತ್ತದೆ. ಅದರ ಸಹಾಯದಿಂದ ಹೃದಯಸಂಸ್ಕಾರ ಹಾಗು ಭಾವ ಜೀವನ ವನ್ನು ಅವನು ಪವಿತ್ರವಾಗಿಯೂ ಸುಂದರತರವಾಗಿಯೂ ಮಾಡುತ್ತಾನೆ. ಕಲಾಕೃತಿಯೇ ಅವನ ಕೃತಿ. ಅದೇ ಕಲ್ಯಾಣಕರವಾಗುತ್ತದೆ. ಆ ಕೃತಿಯನ್ನೇ ಅವನು ಸಮಾಜಕ್ಕೆ ಕಾಣಿಕೆ ಯೆಂದು ಇತ್ತಾಗ ಅದೇ ಅವನ ಶಕ್ತಿ ಸಂಚಯವಾಗುತ್ತದೆ. ಸಿದ್ಧನ ಪಂಚವಿಶಾಲ ಕೃತಿ ಯೊಂದನ್ನು ಬಿಟ್ಟರೆ ಉಳಿದ ಯಾವ ಕೃತಿಗಿಂತಲೂ ಅವನ ಕೃತಿಯು ಕಡಿಮೆಯದಲ್ಲ. ಬುದ್ಧಿಯೂ ಗೆಯ್ಮೆಯೂ ಸಮಾಜ ಸೇವೆಯೂ ಹಸನಾಗುವುದು ಅವಶ್ಯವಿದ್ದಂತೆ ಮಾನವನ ಹೃದಯವಂತಿಕೆ ಹಾಗು ಕಲ್ಪಕತೆಯ ಕಾಡು ನಂದನದ ಬೀಡಾಗಬೇಕಾಗಿದೆ. ಈ ಗುರಿಯನ್ನು ಸಾಧಿಸಲು ಬದ್ಧನಾಗಿ ನಿಂತಿದ್ದಾನೆ ಭಾವಜೀವಿ.

ಗುರಿಯನ್ನು ಅವನು ಸಾಧಿಸುವ ಬಗೆ ಯಾವುದು ? ಅದು ತ್ರಿವಿಧವಾಗಿದೆ. ಒಂದು ದೃಷ್ಟಿಯಿಂದ ಅವನು ವ್ಯಕ್ತಿಯ ವ್ಯಕ್ತಿತ್ವಕ್ಕೆ ತೇಜವನ್ನೂ ಕಳೆಯನ್ನೂ ತಂದು ಕೊಡುತ್ತಾನೆ, ವ್ಯಕ್ತಿಯ ಭಾವಜೀವನವು ನಯವಾಗುವಂತೆ ಮಾಡುತ್ತಾನೆ. ಕಾಮವನ್ನು ಪ್ರೇಮವಾಗಿ ಮಾರ್ಪಡಿಸುತ್ತಾನೆ, ಸಂಸ್ಕೃತಿಯಿಲ್ಲದಲ್ಲಿ ಸಂಸ್ಕೃತಿಯನ್ನು ಕೊನರಿಸುತ್ತಾನೆ. ನೀರಸವಾದ ಮನಸ್ಸಿನಲ್ಲಿ ರಸಗಂಗೆಯನ್ನು ಹಾಯಿಸುತ್ತಾನೆ. ತನ್ನ ವ್ಯಕ್ತಿತ್ವದ ಸ್ವಯಂ ಶಿಲ್ಪಿಯಾಗುತ್ತಾನೆ. ಅದನ್ನು ಕುಸಿರು ಕುಸಿರಾಗಿ ಕಂಡರಿಸಿ ಉಳಿದ ವ್ಯಕ್ತಿಗಳೂ ತಮ್ಮನ್ನು ತಾವೇ ಹೇಗೆ ರೂಪಿಸಿಗೊಳ್ಳಬಲ್ಲರೆಂಬುದನ್ನು ತೋರಿಸುತ್ತಾನೆ. ಆತ್ಮಚಿಂತನವೂ ಆತ್ಮ ಪರೀಕ್ಷಣವೂ ಇಲ್ಲಿ ಅವನಿಗೆ ಸಾಧನಗಳಾಗುತ್ತವೆ.

ಭಾವಜೀವಿಯ ದರ್ಶನವು ಮೇಲೆ ಹೇಳಿದಂತೆ ಆಳವನ್ನಲ್ಲದೆ ವಿಸ್ತಾರವನ್ನೂ ಪಡೆಯುತ್ತದೆ. ವಿಶ್ವಹೃದಯದ ಸೂಕ್ಷ್ಮ ಚಲನವಲನಗಳ ಪ್ರತಿಬಿಂಬವಾಗುತ್ತದೆ.

"You go not till I set you up a glass
Where you may see the inmost part of you"

ಎಂದು ಹ್ಯಾಮ್‌ಲೆಟ್‌ನು ಅಪರಾಧಿನಿಯಾದ ತನ್ನ ತಾಯಿಗೆ ಹೇಳಿದಂತೆ ಭಾವಜೀವಿಯು ಎಡವುತ್ತ ಮುಗ್ಗುತ್ತ ನಡೆದ ಮಾನವ ಕುಲಕ್ಕೆ ಹೇಳುತ್ತಾನೆ. ಸ್ವಂತದ ಸಮಸ್ಯೆಗಳನ್ನೆಲ್ಲ ಬದಿಗೊತ್ತಿ 'ಅರ್ಪಣ' ಭಾವದ ಉತ್ಕಟತೆಯ ಮೂಲಕ ಭಾವಜೀವಿಯು ವಿಶ್ವ ಹೃದಯದ ದರ್ಪಣನಾಗುತ್ತಾನೆ. ಅದರ ಆಸೆ—ಆಕಾಂಕ್ಷೆಗಳನ್ನೂ ಕನಸು—ನನಸು ಗಳನ್ನೂ ಗುಣ–ದೋಷಗಳನ್ನೂ ಅದ್ಭುತವಾಗಿ ಬಿಂಬಿಸಿ ತೋರಿಸುತ್ತಾನೆ. ವ್ಯಕ್ತಿತ್ವವು ತನ್ನ ಸೀಮೆಗಳನ್ನು ಮೀರಿ ಇಲ್ಲಿ ವಿಶ್ವದ ಕನ್ನಡಿಯಾಗುತ್ತದೆ. ಮಾನವ ಕುಲದ ಭವಿಷ್ಯದ ಬಗ್ಗೆ ವಿಚಾರ, ವಿವಿಧ ಮಾನವೀಯ ಸ್ವಭಾವದ ಪ್ರಕಾರಗಳ ಅನುಭವ, ಕಾಲಗತಿ, ಸುತ್ತಣ ಪ್ರಕೃತಿಯ ರಮ್ಯತೆ ಭಯಾನಕತೆಗಳ ದರ್ಶನ ಇವುಗಳನ್ನೆಲ್ಲ ಅರಗಿಸಿ ಭಾವ ಜೀವಿಯ ಆಂತರಿಕ ಜೀವನವು ವಿಸ್ತೃತವಾಗುತ್ತದೆ.

ಭಾವಜೀವನದ ಎತ್ತರವೂ ಇದೆ. ವ್ಯಕ್ತಿತ್ವವನ್ನು ಬರಿ ಸಾಕ್ಷಿತ್ವವನ್ನಾಗಿ ಮಾಡಿದ ಭಾವಜೀವಿಯು ಹೃದಯಾಂತರದಲ್ಲಿರುವ ಚೈತ್ಯಪುರುಷನಿಂದ ಹಾಗೂ ಅಧಿಪ್ರಜ್ಞೆಯ (super conscience) ಲೋಕಗಳಾದ ಅಧಿಮನಸ್ಸು (Higher mind), ಪ್ರಕಾಶಿತ ಮನಸ್ಸು (Illuminated mind), ಪ್ರೇರಣೆ (Intuition) ಮೊದಲಾದ ನಿಟ್ಟಿನಿಂದ ಸ್ಫೂರ್ತಿಯನ್ನು ಪಡೆಯುತ್ತಿರುತ್ತಾನೆ. ಈ ಸ್ಫೂರ್ತಿಯ ಉಗಮವನ್ನು ನಿಚ್ಚಳವಾಗಿ ಅರಿಯತೊಡಗಿದಂತೆ, ಈ ಲೋಕಗಳಲ್ಲಿ ಅವನ ಪ್ರಜ್ಞೆಯು ಹೆಚ್ಚು ಹೆಚ್ಚಾಗಿ ಜಾಗೃತವಾದಂತೆ ಭಾವಜೀವಿಯು ನೂತನವಾದ ವ್ಯಕ್ತಿತ್ವವೊಂದನ್ನು ಧಾರಣ ಮಾಡುತ್ತಾನೆ. ಈ ವ್ಯಕ್ತಿತ್ವಕ್ಕೆ ಆಳ—ಬಿತ್ತರಗಳಲ್ಲದೆ ಎತ್ತರವೂ ಉಂಟು: ಸಾಮಾನ್ಯ ವ್ಯಕ್ತಿಯ ವ್ಯಕ್ತಿತ್ವಕ್ಕೆ ಅಂತಹ ಆಳವಾಗಲಿ, ವಿಸ್ತಾರವಾಗಲಿ, ಎತ್ತರವಾಗಲಿ ಇರುವದಿಲ್ಲ. ಈ ಮೂರನ್ನೂ ವ್ಯಕ್ತಿಯು ಪಡೆದಾಗ 'ವ್ಯಕ್ತಿ'ಯಾಗಿ ನಿಂತಿದ್ದ ಅಹಂಕಾರದ ಗಂಟು ಸಡಿಲಾಗಿ ಪುರುಷನು ಮತ್ತೆ 'ಆಧಾರ'ದ ಇಲ್ಲವೆ ವ್ಯಕ್ತಿತ್ವದ ರಾಜನಾಗುತ್ತಾನೆ. ಇಂತಹ ವ್ಯಕ್ತಿತ್ವವು ಒಂದು ಬಿಂದುವಾದರೂ ಆ ಬಿಂದುವು ವಿಶ್ವ ಶಕ್ತಿಗಳ ಕೇಂದ್ರವಾಗಿ ರುತ್ತದೆ. ವ್ಯಕ್ತಿತ್ವದ ಸೀಮೆಗಳನ್ನು ಅದು ಒಪ್ಪಿದ್ದರೂ ನಿಃಸೀಮವೇ ಅಲ್ಲಿ ಹರಿಯುವ ಪ್ರವಾಹವಾಗಿರುತ್ತದೆ. ವಿಶ್ವದ ಜೀವನವೇ ವ್ಯಕ್ತಿಯ ಜೀವನವಾಗಿ ವ್ಯಕ್ತಿ—ವಿಶ್ವಗಳ ದ್ವಂದ್ವವು ಹೊಸತೊಂದು ಪೌರುಷದಲ್ಲಿ ಇಲ್ಲವೆ ನವೀನ ವ್ಯಕ್ತಿತ್ವದ ನಿರ್ಮಿತಿಯಲ್ಲಿ ಒಂದಾಗಿ ಲೀನವಾಗುತ್ತದೆ.

ಹೀಗಿದೆ ಭಾವಜೀವಿಯು ಪಡೆಯಬೇಕಾದ ಸಿದ್ಧಿ. ಮಾನವನು ವಿಶ್ವಮಾನವನಾಗ ಬೇಕಾಗಿದೆ. ಆಗಿ ವಿಶ್ವದ ದೈವರೇಷೆಯನ್ನೇ ಪಲ್ಲಟಿಸಬೇಕಾಗಿದೆ. ಈ ಮಹಾ ಕಾರ್ಯದಲ್ಲಿ ಭಾವಜೀವಿಯೂ ಒಂದು ಮಹತ್ವದ ಘಟಕವಾಗಿದ್ದಾನೆ.

3

'ಭಾವಜೀವಿ' ಎಂಬ ಈ ಕೃತಿಯು ಈ ಮಾರ್ಗದಲ್ಲಿ ಕಣ್ದೆರೆದ ಜೀವದ ಕನಸು—ನೆನಸು. ಭಾವಸ್ಪಂದನದಿಂದ ಪುಲಕಿತನಾಗಿ ಕವಿಯು ಆ ಸ್ಪಂದನದ ಮೂಲವನ್ನು ತಿಳಿಯಲು ಹವಣಿಸುತ್ತಾನೆ.

ನನ್ನ ನಾನೇ ಅಳೆದು ಕಳೆದು ನೋಡಲು ಬೇಕು
ಎಂದು ಪೀಡಿಸದಿರುವ ದಿನವದಿಲ್ಲ

ಎಂದು ಆತ್ಮಪರೀಕ್ಷಣದ ಜೋಗುಳವನ್ನು ಹಾಡುತ್ತಾನೆ.

ಅಂತರಂಗದ ನಿಸ್ತರಂಗ ತಿಳಿಗೊಳದಲ್ಲಿ
ಲಲಿತಾರವಿಂದಗಳ ಮಕರಂದವು

ಎಂದು ನೆನಪಿನ ಕಾಸಾರದಲ್ಲಿ ಇಣುಕಿ ನೋಡುತ್ತಾನೆ.

ಈ ಸಹೃದಯತೆ ಮೊದಲು ಉದಿಸಿದ್ದು ಹೇಗೆ ? 'ನಾಗರಿಕ ನಾಗರವು ಹುತ್ತು ಕಟ್ಟದ' ಹಳ್ಳಿಯಲ್ಲಿ ಈ ಸೊಗಸು ಬಂದಿತು. ಅಕ್ಕ, ಅಣ್ಣ, ಗೆಳೆಯ ; ಆಟ, ಕುಣಿತ, ಜಾನಪದ ಗೀತ ; ಹಳ್ಳ, ಆಲದಮರ, ತೋಟ ; ಲಂಬಾಣಿ, ಕಮ್ಮಾರ ಮಾನಪ್ಪ, ಕೆಲಸಿಗರ ಕೆಂಚ ; ಹಳ್ಳದ ದಂಡೆಗಿರುವ ಮಾಸತಿ ಕಲ್ಲು, ತಂದೆ ಓದಿದ ಅನುಭವಾಮೃತ ; ಹೀಗೆ ವಿಧ ವಿಧವಾಗಿ ಜೀವನದ ಅದ್ಭುತವು ಕಾಣಿಸಿಕೊಂಡು ಭಾವ ಜೀವಿಯ ಕಣ್ಣನ್ನು ತೆರೆಯುತ್ತದೆ.

ಬಾಳ ಸಂಪುಟದಲ್ಲಿ ಬಾಲ್ಯವೆಂಬುವದೊಂದು
ಅಳಿಸಲಾರದ ಮಧುರ ಭಾವಗೀತ

ಈ ಮಧುರ ಸ್ಮೃತಿಯೇ ಕವಿಯ ಭಾವ ಸೋಪಾನದಲ್ಲಿಯ ಮೊದಲನೆಯ ಮೆಟ್ಟಿಲಾಗಿದೆ.

ಧಾರವಾಡಕ್ಕೆ ಬಂದಾಗ ಅಲ್ಲಿಯ ಜನಜಾತ್ರೆಯನ್ನು ನೋಡಿ ಕವಿಯು ವಿಹ್ವಲಗೊಳ್ಳುತ್ತಾನೆ. ಉಳ್ಳವರ ನಿರ್ದಯ, ವೇದಿಕೆಯ ಪೀಠದಲ್ಲಿಯ ಡಾಂಭಿಕತೆ, ಅನ್ಯದ-ನ್ಯಾಯ—ಇದಕ್ಕೆ ಕವಿಯು ಹೇಸುತ್ತಾನೆ.

ಇರಲಿ : ಲೋಕದ ಡೊಂಕ ತಿದ್ದುವಾಸೆಯು ಬೇಡ
ನನ್ನೊಡಲ ಬ್ರಹ್ಮಾಂಡ ನನ್ನ ಲೋಕ

ಎಂದು ಮತ್ತೆ ತನ್ನೊಳಗೇ ಮುಳುಗುತ್ತಾನೆ.

ಹೀಗಿರಲು ಪ್ರೇಮ—ವಿರಹಗಳು ಬಂದು ಭಾವಜೀವಿಯ ಪ್ರಜ್ಞೆಯನ್ನು ಇನ್ನಿಷ್ಟು ಕುದುರಿಸುತ್ತವೆ. ಒಬ್ಬ ಚಿರಸುಧಾಕರೆಯು

ನಾನು ಕವಿಯೆಂಬುದನು ನನಗೆ ತೋರಿಸಿ ಕೊಟ್ಟು
ಮೌನ ವೀಣೆಯನಿಂತು ಮಿಡಿಸುತಿಹಳು

ಎಂದು ಭಾವಜೀವಿಯು ಹೇಳುತ್ತಾನೆ. ಈ ವಿರಹಕ್ಕೆ ಮದ್ದಾಗಿ ಕಾವ್ಯೋಪಾಸನೆಯು ಬರುತ್ತದೆ. ಓರ್ವ ತಂಗಿಯಂತಹ ಕನ್ನೆಯ ಭ್ರಾತೃವಾತ್ಸಲ್ಯವೂ ಕಾಯುತ್ತದೆ. ಸ್ನೇಹವು ರಕ್ಷಾಕವಚವಾಗುತ್ತದೆ. ಜ್ಞಾನ ಸಿಂಧುವಿನ ಕರೆಯು ಚಿತ್ತವನ್ನು ಆಕರ್ಷಿಸುತ್ತದೆ. ಧಾರವಾಡದ ನಿಸರ್ಗ ರಮಣೀಯತೆಯು ಶಾಂತಿದಾಯಕವಾಗುತ್ತದೆ.

ಹುಲುಗಲದ ಟೊಂಗೆಯಲಿ ಹೂತಿರುವ ಹೊಂಗೆಯಲಿ
ಮುಳ್ಳುಕಂಟಿಗಳಲ್ಲಿ ಸ್ವರ್ಣ ಕಲಶ

ಧಾರವಾಡದ ಹವೆಯಲ್ಲಿ ಸುಳಿಯುವ ದತ್ತವಾಣಿಗೆ ಹೃದಯವು ಉಕ್ಕೇರುತ್ತದೆ. ಗೂಢ ತತ್ವದ ತಿರುಳನ್ನರಿಯಲು ಜೀವವು ಹಾತೊರೆಯುತ್ತದೆ.

ಆದರೆ ಸುಖದ ಮಿಂಚಿನ ಹಿಂದೆ ದುಃಖ ಗುಡುಗಾಡುತ್ತದೆ. ಸಮಾಜದಲ್ಲಿಯ ಮೋಸ, ಛಿದ್ರಾನ್ವೇಷ, ಹೊಗಳಿಕೆ ತೆಗಳಿಕೆಗಳನ್ನು ನೋಡಿ ಮತ್ತೆ ತಲೆ ಚಿಟ್ಟು ಹಿಡಿಯುತ್ತದೆ. ಇದಕ್ಕೆ ಇರುವ ಉಪಾಯ ಒಂದೇ :

ಆತ್ಮಾನುಸಂಧಾನಕೆನ್ನನೆಳಸೈ ತಂದೆ
ಸರ್ವಾತ್ಮಸಾಕ್ಷಿಯಲಿ ನೀ ಬೆಳಗುತ

ಎಂಬ ಪಲ್ಲವಿಯೇ ಮತ್ತೆ ಕಾಯುತ್ತದೆ.

ಅಸಂಖ್ಯಾಕ ಮಾನವ ಸಮುದಾಯದಲ್ಲಿ ನಾನೊಂದು ಘಟಕ, ಕಟ್ಟರಣ್ಯದ ತರುಗುಲ್ಮಗಳಲ್ಲಿ ನಾನೊಂದು ಎಲೆಯೆಂಬ ಅರಿವು ಭಾವಜೀವಿಯಲ್ಲಿ ಮೂಡುತ್ತದೆ. ವಿಮಲ ಭಾವಾನುಭಾವದಲ್ಲಿ ಒಳ ನಿಧಾನದ ಪರಿಯು ತೋರಬಹುದು.

ಆ ವರೆಗು ಅನಿಸಿಕೆಯ ನೆನಸಿಕೆಯ ತುಂಬಿರುವ
ಚಿತ್ಸೂರ್ಯ ಕಿರಣಗಳನಾಯುತಿಹೆನು ;
ಹಗಲುಗಳ್ಳರು ನನ್ನ ಮನವ ಹಾಡೇ ಹಗಲು
ಹೊಕ್ಕಿರಲು ಮೊದಲವರ ಓಡಿಸುವೆನು

ಎಂದು ಭಾವಜೀವಿಯು ತನ್ನ ವ್ಯಕ್ತಿತ್ವದ ಆಳದ ಕಡೆಗೆ ತಿರುಗುತ್ತಾನೆ. ಭಾವನೆಯನ್ನು ಜೀವನವನ್ನಾಗಿ ಮಾಡಬೇಕೆಂದು ಎಣಿಸುತ್ತಾನೆ ;

ಮನೆಯ ಕಟ್ಟುವ ಮೊದಲು ನಕ್ಷೆಯನು ತೆಗೆವಂತೆ
ಭಾವ ಕಾಣುವದದನು ಕನಸಾಗಿಸಿ
ಆಮೇಲೆ ಕಲ್ಲು ಇಟ್ಟಿಗೆ ಗಚ್ಚು ಗಾರೆಯಲಿ
ಭದ್ರಗೊಳಿಸುವರದನು ರೂಪಗೊಳಿಸಿ

ಹೀಗೆ 'ಬಗೆ'ಯನ್ನು ಬಗಿಯುವಾಗ ಬಂದ ಅನುಭವದ ತಿಳಿಯನ್ನು ನುಡಿಯೊಳಗಿಳಿಸುವದರಲ್ಲಿ ಜೀವಕ್ಕೆ ಹರುಷವಿದೆ. ಅದಕ್ಕಾಗಿ ಭಾವಜೀವಿಯು ಕವಿಯಾಗುತ್ತಾನೆ.

## 4

ಭಾವಜೀವದ ಆಳದ ಕಡೆಗೆ ಹೇಗೆ ಅಂತಃಕರಣವು ಒಲಿಯುವುದೆಂಬುದು ಈ ಕೃತಿಯಲ್ಲಿ ಸುಂದರವಾಗಿ ಚಿತ್ರಿತವಾಗಿದೆ. ಸರಳತೆಯೂ ರಾಮಣೀಯಕತೆಯೂ ಇಲ್ಲಿ ಬೆರೆತುಕೊಂಡಿವೆ. ಭಾವದ ನೇರತೆಯೂ ನುಡಿಯ ನಿರತೆಯೂ ಒಂದಕ್ಕೊಂದು ಔಕಣ ವಿತ್ತಿವೆ.

ಭಾವಜೀವನದ ವಿಕಾಸವನ್ನು ಚಿತ್ರಿಸುವದು ಭಾವಗೀತಗಳ ಈ ಯುಗದಲ್ಲಿ ಸಹಜವಾದ ಗುರಿಯಾಗಿದೆ. ಅದನ್ನೇ ಮುಖ್ಯ ವಸ್ತುವಾಗಿಟ್ಟುಕೊಂಡ 'ಸಖೀಗೀತ,' 'ನನ್ನ

ನಲ್ಲ,' 'ಮಧುರಗೀತ,' 'ಆಕಾಶಗಂಗೆ' ಮೊದಲಾದ ನೀಳ್ಗವಿತೆಗಳು ಪ್ರಕಟವಾಗಿವೆ. ತಾತ್ವಿಕ ವಿವೇಚನವು ಒಂದಂಶದಿಂದ ಹೆಚ್ಚಾಗಿದ್ದರೂ 'ಮಂಕುತಿಮ್ಮನ ಕಗ್ಗ'ವು ಇದೇ ಜಾತಿಯದು. 'ಭಾವಜೀವಿ'ಯ ಛಂದ ಹಾಗು ಶೈಲಿಯ ರೀತಿ ಮಧುರಚೆನ್ನರ ಕೃತಿಗಳ ವಠಾದರಿಗೆ ಸೇರಿದೆ. ಭಾವಜೀವಿಯೇ ಮಧುರಚೆನ್ನರನ್ನು ಕೃತಿಯಲ್ಲಿ ನೆನಸು ತ್ತಾನೆ. ಇಲ್ಲಿಯ ಕಮ್ಮಾರ ಮಾನಪ್ಪನ ಮೋರೆಯನ್ನು ನೋಡಿ ಲಾಂಗಫೆಲೋನ ಕಮ್ಮಾರನ ನೆನಪಾಗುತ್ತದೆ. ಇದೆಲ್ಲ ಸಹಜ. 'ಮಧುರ ಗೀತ'ದ ಪರಂಪರೆಯಲ್ಲಿ ಬಂದರೂ ಇದೊಂದು ಸ್ವತಂತ್ರ ಕೃತಿಯೆಂಬುದನ್ನು ಕಾವ್ಯದುದ್ದಕ್ಕೂ ಕಾಣಬಹುದು.

ಭಾವಜೀವಿಯು ಅರಸುತ್ತಿರುವ ಆಳ ಅವನದಾಗಿ ವ್ಯಕ್ತಿತ್ವದ ಎತ್ತರ ಬಿತ್ತರಗಳೂ ಅವನ ಬದುಕಾಗಲಿ. ಆ ವೈಭವವು ಕಣವಿಯವರ ನುಡಿಯಲ್ಲಿಯೂ ಬರಲಿ.

11—12—1949

ಕೆ. ಕೃಷ್ಣಮೂರ್ತಿ

# 'ಮಧುಚಂದ್ರ'

## ರಸಾನುಸಂಧಾನ

'ಉಸುರಿನ ಪರಿಮಳವಿರಲು ಕುಸುಮದ ಹಂಗೇಕಯ್ಯಾ?'

'ಮಾಣಿಕ್ಯದ ಬೆಳಗುಳ್ಳೊಡೆ ದೀಪದ ಹಂಗೇಕೋ ?
ಕಾಮಧೇನು ಕರೆವೊಡೆ ಕರುವಿನ ಹಂಗೇಕೋ?'

ಹೊಸಗನ್ನಡದ ರಸಕವಿಗಳಲ್ಲಿ ಚೆನ್ನವೀರ ಕಣವಿ ಆಗಲೇ ಹೆಸರಾಂತಿದ್ದಾರೆ. 'ನುಡಿದರೆ ಮುತ್ತಿನ ಹಾರದಂತಿರಬೇಕು; ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು; ನುಡಿದರೆ ಸ್ಫಟಿಕದ ಸಲಾಕೆಯಂತಿರಬೇಕು' ಎಂಬ ಆದರ್ಶ ಅವರ ಕವಿತೆಯ ಬಿಡುನುಡಿಗಳಲ್ಲಿಯೂ ಕುಡಿಗೊಂಡು ಕನ್ನಡ ರಸಿಕರನ್ನು ತಣಿಸುತ್ತಿದೆ. ಕನ್ನಡ ಕವಿತೆಯಲ್ಲಿ ಹೊಸ ಹಸಿರು, ಹೊಸ ಉಸಿರು, ಹುಲುಸಾಗಿ ಸೂಸುವಂತೆ ಅವರು ತಮ್ಮದೇ ಆದ ರೀತಿಯಿಂದ ಹವಣಿಸಿದ್ದಾರೆ. ಹಿರಿಯರ ಪ್ರೀತಿಯನ್ನೂ ಹರೆಯದವರ ವಿಶ್ವಾಸವನ್ನೂ ಸುಲಭವಾಗಿ ಗಳಿಸಿ, ಕಿರಿಯರಿಗೆ ಕಣ್ಮಣಿಯಾಗಿದ್ದಾರೆ ಕಣವಿಯವರು. ಅವರ 'ಮಧು—ಚಂದ್ರ' ಯಾವ ಮುನ್ನುಡಿಯ ಮುಂಭಾರವೂ ಇಲ್ಲದೆ ನಾಡಿನ ಮೂಲೆ ಮೂಲೆಯಲ್ಲಿಯೂ ತನ್ನ ತನಿವೆಳಗನ್ನು ಬೆಳಗಿಸಿ ಎರಡನೆಯ ಆವೃತ್ತಿಯನ್ನು ಈಗ ಕಾಣುತ್ತಿದೆ. ಇನ್ನಷ್ಟು ಸವಿಯಶಾದ ಕವಿತೆಗಳನ್ನು ಕೂಡಿಸಿಕೊಂಡು, ಮತ್ತಷ್ಟು ಮುದ್ರಣದ ವೈಸಿರಿಯಿಂದ ತುಂಬಿಕೊಂಡು, ಮನಮೋಹಕವಾಗಿರುವ ಈ ಎರಡನೆಯ ಆವೃತ್ತಿಗೆ ಯಾವ ನುಡಿಯ ಹಂಗೇಕೆ ? ಬರೆಯಬಲ್ಲ ಅರ್ಹತೆ ಅಧಿಕಾರಗಳು ಕೂಡ ಈ ಲೇಖಕನಲ್ಲಿ ಇಲ್ಲ. ನಿಜವಾಗಿ ಇದೊಂದು ಮೀಸಲುಗವಿತೆಯಾದ್ದರಿಂದ ಬಲ್ಲಿದರು ಬರೆಯುವುದಾದರೂ ಭಾವ ಬೇಸರವಾಗುವುದು; ಜನರಿಗೆ ಬೇಸರವಾಗುವುದು. ಎಂದಮೇಲೆ 'ಏಕೆ ಈ ಬರೆವಣಿಗೆ?' ಜನಕ್ಕೆ ಅಗತ್ಯವೆಂದಲ್ಲ, ನನಗೆ ಅಗತ್ಯವೆಂದಲ್ಲ, ಕವಿಗೆ ಅಗತ್ಯವೆಂದಲ್ಲ. ಚೆನ್ನವೀರ ಕಣವಿಯವರು ಗೆಳೆತನದ ಸೆಳವಿನಲ್ಲಿ ನಮ್ಮಿಬ್ಬರ ಪೂರ್ವಾಪರ ವಿವೇಚನೆಯೂ ದಿಕ್ಕು ತಪ್ಪುವಂತೆ ಮಾಡಿದ್ದಾರೆ; ಇಷ್ಟೇ ರಹಸ್ಯ. ನಿರಂಕುಶಾ: ಕವಯಃ ! ಅವರ ಮಾತನ್ನು ಮೀರಲಾರದೆ ತೋರಿದ ಎರಡು ಮಾತನ್ನು ಬರೆಯುತ್ತಿದ್ದೇನೆ. ಇದು ಮುನ್ನುಡಿಯೋ ಹಿನ್ನುಡಿಯೋ, ಮೆಚ್ಚುನುಡಿಯೋ ಬಿಚ್ಚುನುಡಿಯೋ, ವಿಮರ್ಶೆಯೋ ವಿವರಣೆಯೋ ಗೊತ್ತಿಲ್ಲ. ನನ್ನ ಮಟ್ಟಿಗೆ ಇದೊಂದು ರಸಾನುಸಂಧಾನ. ಕವಿಗಳನ್ನು ಕುರಿತು ಬರೆಯಲು ಕವಿಗಳಷ್ಟೇ ಅಧಿಕಾರಿಗಳೆಂಬ ಪ್ರಚಲಿತ ಕಟ್ಟಳೆಯನ್ನು ಪಾಲಿಸದೆ, ನನ್ನ ಎರಡು ಮಾತಿಗೆ ಇಲ್ಲಿ ಎಡೆಗೊಟ್ಟ ಕವಿಗಳ ಔದಾರ್ಯ ನಿಜಕ್ಕೂ ಹೆಚ್ಚಿನದಷ್ಟೇ ಅಲ್ಲ, ಇತರರಿಗೆ ಮಾದರಿಯೂ ಆಗಬಹುದೆಂದು ನನ್ನ ಎಣಿಕೆ.

1

ಹೊಸಗನ್ನಡ ಸಾಹಿತ್ಯದಲ್ಲಿ ಮಾಘಮಾಸ ಹೋಗಿ ಚೈತ್ರ ಮೂಡಿಬರುವ ಮುನ್ನ ನಾಡಿನಲ್ಲಿ ಇಂಗ್ಲಿಷ್ ಸಾಹಿತ್ಯದ ಮಹಾಪೂರವೇ ಇದ್ದಕ್ಕಿದ್ದಂತೆ ನುಗ್ಗಿ ಬಂದಿತೆನ್ನ ಬಹುದು. 'ಅರಲುಗೊಂಡ ಕೆರೆಗೆ ತೊರೆ ಬಂದು ಹಾಯ್ದಂತೆ, ಬರಲುಗೊಂಡ ಸಸಿಗೆ ಮಳೆ ಸುರಿದಂತೆ' ಕಲಿತವರೆಲ್ಲರೂ ಕವಿಗಳಾಗತೊಡಗಿದರು; ಸರವೆತ್ತಿ ಹಾಡಿದರು. ಹಾಡನ್ನು ಬಿಡದೆ ಬೆಳೆಸಿದವರು ಮಹಾಕವಿಗಳಾದರು. ಹಿಂದಿನ ಕಾವ್ಯ ಸಂಪ್ರದಾಯ ಗಳೆಲ್ಲ ಹಿಂದೆ ಬಿದ್ದು ಹೊಸ ರೀತಿಗಳು ಹುಟ್ಟಿದವು, ಹರಡಿದವು. ಹೊಸದಾದ ಸಾಹಿತ್ಯ ವಿಮರ್ಶೆಯೂ ಉದಯಿಸಿತು. ಆದರೆ ಹೊಸ ವಿಮರ್ಶೆಯು ಪ್ರಾಚೀನ ಸಾಹಿತ್ಯದ ಕಡೆಗೆ ಮುಖ ಮಾಡಿ ಹೆಬ್ಬೆಳಸನ್ನು ನೀಡಿದಂತೆ, ಹೊಸ ಕವಿಗಳ ಕಡೆಗೆ ತಿರುಗಿ ಅವರ ಕೃತಿಗಳ ಬಗೆಗೆ ನಿರ್ದಾಕ್ಷಿಣ್ಯವಾಗಿ ನಿರ್ಣಯಿಸಲು ಮುಂದಾದಂತೆ ತೋರುವುದಿಲ್ಲ. ಸಮಕಾಲೀನ ಕವಿ–ವಿಮರ್ಶೆಯೆನ್ನುವುದು ಅತಿಪ್ರಶಂಸೆ—ಕಟುನಿಂದೆಗಳೆಂಬ ಪುಲಿ ದರಿ ಗಳನ್ನು ತಪ್ಪಿಸಿಕೊಂಡು ಸಮತೂಕವಾಗಿ ಮಾರ್ಗದರ್ಶನ ಮಾಡುವುದೆಂದು ನಿರೀಕ್ಷಿ ಸುವುದೇ ದುಸ್ತರ. ಆದರೂ ಕಳೆದ ಎರಡು ದಶಕಗಳಲ್ಲಿ ಅಂಧಪ್ರಶಂಸೆಯ ಕಾವು ಇಳಿದು, ಅಂಧತಿರಸ್ಕಾರದ ಧಗೆ ಕುಂದಿ, ನವ ಕವಿಗಳೂ ವಿಮರ್ಶಕರೂ ಆತ್ಮಪರೀಕ್ಷೆ ಮಾಡಿ ಕೊಳ್ಳಲು ಸಿದ್ಧರಾಗುತ್ತಿರುವ ಲಕ್ಷಣ ಸಾಹಿತ್ಯದ ಮುನ್ನಡೆಗೆ ಶುಭ ಲಕ್ಷಣ. ಕಾವ್ಯ ಅಥವಾ ಕವಿತೆಯಲ್ಲಿ ಇದ್ದೇ ತೀರಬೇಕಾದ ಮೂಲ ಗುಣಾಂಶ ಯಾವುದು ? ಅದು ಯಾರ ರಚನೆಯಲ್ಲಿ ಎಷ್ಟರಮಟ್ಟಿಗೆ ಇದೆ ? ಅದು ಯಾರಲ್ಲಿ ಇಲ್ಲ ? ಎಂಬ ಪ್ರಶ್ನೆ ಗಳನ್ನು ರಸಿಕರೆಲ್ಲರೂ ತಾವೇ ಕೇಳಿಕೊಳ್ಳಬೇಕು. ತಮಗೆ ಒಪ್ಪಿಗೆಯಾಗುವ ಉತ್ತರ ಗಳನ್ನು ಕಂಡುಕೊಳ್ಳಬೇಕು. ಸಾಹಿತ್ಯ ತತ್ತ್ವ ಪ್ರಾಚೀನ ಭಾರತದ್ದಾಗಿರಲಿ, ಗ್ರೀಸಿನ ದಾಗಿರಲಿ, ಇಂದಿನ ಫ್ರಾನ್ಸಿನದಾಗಿರಲಿ, ಎಲ್ಲಕ್ಕೂ ಸಮಾನ ಪುರಸ್ಕಾರ ದೊರೆಯಬೇಕು. ಸಾಹಿತ್ಯ ತತ್ತ್ವದಲ್ಲಿ ನೂರೆಂಟು ವಾದಗಳಿವೆ, ನಿಜ; ಆದರೆ ಎಲ್ಲ ತಾತ್ತ್ವಿಕರೂ ಒಪ್ಪುವ ಸಮಾನಾಂಶವೂ ಇಲ್ಲದೆ ಇಲ್ಲ. ಅದರ ಪರಿಚಯದಿಂದ ಬರುವ ಸಂಸ್ಕಾರ, ನಮ್ಮ ಕಾವ್ಯಾಭಿರುಚಿಯನ್ನು ಶುಚಿಯಾಗಿಡಬಲ್ಲದು; ಕಾವ್ಯಜಗತ್ತಿನಲ್ಲಿ ಅನೇಕ ರೀತಿಯ ಅನೇಕ ನೀತಿಯ, ಕವಿನಿರ್ಮಿತಿಗೆ ಸ್ಥಾನವಿರುವುದನ್ನು ತೋರಿಸಿಕೊಡಬಲ್ಲುದು.

2

ಒಂದನಾಡ ಹೊರಟು ಒಂಬತ್ತನಾಡಿದಂತಾಗಿದೆ ಈವರೆಗೆ; ಆದರೆ ಉಪಾಯವಿಲ್ಲ. ಯಾವ ಒರೆಗಲ್ಲಿನ ಮೇಲೆ ಕವಿತೆಯನ್ನು ಇಲ್ಲಿ ತಿಕ್ಕಿ ನೋಡಬೇಕೆಂದಿರುವೆವೋ ಅದರ ಸೂಚನೆಯನ್ನು ಸ್ವಲ್ಪಮಟ್ಟಿಗಾದರೂ ಕೊಡದೆ ಹೋದರೆ ಕವಿಗೂ ಅಪಚಾರ, ವಿಮರ್ಶೆಗೂ ಅಪಚಾರ. ಲಕ್ಷಣಶಾಸ್ತ್ರದ ಹೆಸರೆತ್ತಿದ ಕ್ಷಣ ಯಾರೂ ದಿಗಿಲುಬೀಳ ಬೇಕಾಗಿಲ್ಲ.

ಸವಿಯು ಸಕ್ಕರೆಯೊಳಗೊ, ಸಕ್ಕರೆಯು ಸವಿಯೊಳಗೊ ?
ಸವಿಯು ಸಕ್ಕರೆಯೆರಡು ಜಿಹ್ವೆಯೊಳಗೊ ?

ಎಂಬ ಸಮಸ್ಯೆಯೇ ಸೌಂದರ್ಯಶಾಸ್ತ್ರದ ಬುನಾದಿ. ಜೀವನವೆಂಬ ಬಯಲಿನಲ್ಲಿ ಕಾವ್ಯವೆಂಬ ಆಲಯವನ್ನು ಕವಿ ಕಟ್ಟುತ್ತಾನೆ. ಬಯಲೊಳಗೆ ಆಲಯವಿರುವಂತೆ ಆಲಯದಲ್ಲಿಯೂ ಬಯಲು ( = 'ಆಕಾಶ' = space) ಇರುತ್ತದೆ. ಜೀವನ ಅಪರಿಮಿತ, ಕಾವ್ಯ ಪರಿಮಿತ, ಎಂದು ಮೇಲ್ನೋಟಕ್ಕೆ ಕಂಡರೂ, ವಸ್ತುತಃ ಜೀವನದ ಜೀವನಾಡಿಗಳಾದ ಮುಖ್ಯಾಂಶಗಳಿಗೆ ಜೀವನಕ್ಕಿಂತಲೂ ಹೆಚ್ಚಿನ ಅನಂತತೆ, ಸಾರ್ಥಕ್ಯ, ಸರ್ವಗ್ರಾಹಕತ್ವ, ಇವು ಕಾಣುವುದು ಕಾವ್ಯದಲ್ಲಿಯೇ. ಜೀವನದ ಮೂಲ ಬೆಲೆಗಳಿಗೆ ಅಪರಿಮಿತ ವಿಸ್ತಾರವನ್ನೂ ಸೌಂದರ್ಯವನ್ನೂ ಕಲೆ ತರಬಲ್ಲದು. ಚಿತ್ರ, ಶಿಲ್ಪ ಮುಂತಾದ ಕಲೆಗಳು ಚೆಲುವಿನ ಶರೀರವನ್ನು ರೂಪಿಸಬಲ್ಲವೇ ಹೊರತು ಕ್ರಿಯೆಯನ್ನು ರೂಪಿಸಲಾರವು; ಚಿತ್ತವೃತ್ತಿಗಳ ವಿಚಿತ್ರ ಪ್ರವೃತ್ತಿಯನ್ನು ಸಮರ್ಥವಾಗಿ, ಸಮಗ್ರವಾಗಿ, ಬಿಂಬಿಸಬಲ್ಲ ಕಲೆಯೇ ಕವಿತೆ. ಕವಿಪ್ರತಿಭೆಯು ಸೂಕ್ಷ್ಮಸಂವೇದನೆ ಜಾಗೃತವಾಗಿರುವಾಗ, ಚಿತ್ತವೃತ್ತಿಗಳ ಅಭಿವ್ಯಕ್ತಿಯಲ್ಲಿ ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗುವ ಅಂಶಗಳಿಗಿಂತಲೂ ಹೆಚ್ಚಾಗಿ, ಸರ್ವಸಾಮಾನ್ಯವಾದ ಮೂಲಭೂತ ಹಾಗೂ ಸಾರಭೂತ ಅಂಶಗಳೇ ಎದ್ದು ಕಾಣುತ್ತವೆ. ಹೀಗೆ ಕವಿಯ ರಸಾವೇಶ ಕವಿತೆಯಾಗಿ ಮಾರ್ಪಡುವಾಗ ಆತನ ಬುದ್ಧಿ, ಭಾವನೆ, ಕಲ್ಪನೆ—ಎಲ್ಲ ಶಕ್ತಿಗಳೂ ಸಮಕಾಲದಲ್ಲಿ ಕೆಲಸಮಾಡಿ, ವಿವಕ್ಷಿತ ಅರ್ಥ ( = significance) ಅಪೇಕ್ಷಿತ ಶಬ್ದ (expression) ಎರಡೂ ಅನ್ಯೂನ, ಅನತಿರಿಕ್ತ, ಸೊಬಗಿನಿಂದ ತುಂಬಿಕೊಳ್ಳುವಂತೆ ಆಗುತ್ತದೆ. ಉಕ್ತಿ ಚಮತ್ಕಾರ, ಉಕ್ತ ಚಮತ್ಕಾರ, ಎರಡೂ ಅರ್ಧನಾರೀಶ್ವರನಂತೆ ಒಂದುಗೂಡಿದಾಗ "ಸಾಹಿತ್ಯ"ವೆನ್ನುತ್ತೇವೆ. ಇವುಗಳಲ್ಲಿ ಸ್ವಲ್ಪ ತೂಕ ತಪ್ಪಿದರೂ ಕವಿ ಇನ್ನೂ ಪ್ರಬುದ್ಧನಲ್ಲವೆಂದು ವಿಮರ್ಶಕನು ತೀರ್ಮಾನಿಸಬಹುದು. ತೂಕ ತಪ್ಪಿದಂತೆ ರಸಿಕನಿಗೆ ಕಾಣದಿದ್ದರೆ ಮಾತ್ರ ಹೆಚ್ಚಿನ ಅನುಸಂಧಾನದ ಅಗತ್ಯ. ವಿವಕ್ಷೆ ಚಮತ್ಕಾರ ಹೀನವಾದರೆ ಶುಷ್ಕ ಶಾಸ್ತ್ರಪಂಕ್ತಿಯಾಗುತ್ತದೆ; ಅಭಿವ್ಯಂಜಕ ಪದಾವಲಿ ಶುಷ್ಕವಾದರೆ ಕಾವ್ಯಾರ್ಥ ಬರಡಾಗುತ್ತದೆ. ಯಾವುದಕ್ಕೆ ಕೊರತೆಯಾದರೂ ಕಾವ್ಯಗುಣ ಕುಂದುತ್ತದೆ. ಕೊರತೆ ಕಾಣದಿದ್ದರೆ ಅಲಂಕಾರವುಂಟೆಂದು ವಿಮರ್ಶಕರು ಮನಗಂಡು, ಅದಕ್ಕೆ ಪ್ರೇರಕವಾದ ರಸಾವೇಶವನ್ನು ಗುರುತಿಸಲು ಹೊರಡುತ್ತಾರೆ. ಹಾಗೆ ಗುರುತಿಸುವಾಗ ಕವಿಯ ಮನೋಧರ್ಮದ ಸಹಜ ಗುಣಗಳ ಪರಿಚಯವಾಗುತ್ತದೆ. ಪ್ರಸನ್ನ, ಕೋಮಲ, ಅಥವಾ ಸುಕುಮಾರ ಮನೋಧರ್ಮದ ಕವಿಗಳಿಗೂ ಉದ್ಭಟ, ಉದ್ಧತ, ಮಹೋಜ್ಜ್ವಲ ಮನೋಧರ್ಮದವರಿಗೂ ಇರುವ ಅಂತರ ಸ್ಪಷ್ಟವಾಗಿ ಎದ್ದು ಕಾಣುವಂಥದು. ರಸಿಕರಿಗೆ ರಸಾಸ್ವಾದದ ಕಾಲದಲ್ಲಿ ತಮ್ಮ ಅನುಭವದ ಪ್ರತಿರೂಪವೇ ಕವಿಯದೆಂಬ ಅಪರೋಕ್ಷ ಜ್ಞಾನವಾಗುತ್ತದೆ. ರಸಿಕರ ಅಭಿರುಚಿಗನುಸಾರವಾಗಿ ಕೆಲವರಿಗೆ ಮೊದಲನೆಯ ಮನೋಧರ್ಮದ ಕವಿಗಳು ಮೆಚ್ಚಾದರೆ, ಇತರರಿಗೆ ಎರಡನೆಯ ಮನೋಧರ್ಮದವರು ಹೆಚ್ಚು ಮೆಚ್ಚಾಗಬಹುದು. ಆದರೆ ಎಲ್ಲರಿಗೂ ಏಕರೀತಿಯಾಗಿ ಮೆಚ್ಚಾಗುವ ಗುಣವೆಂದರೆ

ಮೂರನೆಯದಾದ ಮಾಧುರ್ಯ. ಈ ಮನೋಧರ್ಮದ ಮೂಲವಸ್ತುವೇ ಪ್ರೇಮ. ಪ್ರೇಮಗೀತೆಗೆ ಜಗತ್ತಿನ ಸಾಹಿತ್ಯಗಳಲ್ಲೆಲ್ಲ ಹಿರಿದಾದ ಸ್ಥಾನವುಂಟು. ಪ್ರೇಮದ ಪ್ರಪಂಚ ದೊಡ್ಡದು. ಕ್ಷಣಿಕವಾದ ಕಾಮಕ್ಕೂ ಇಡಿಯ ಜೀವನವನ್ನೇ ರೂಪಿಸುವ ಪ್ರೇಮಕ್ಕೂ ಅಜಗಜಾಂತರ. ಪ್ರೇಮದ ಅನಂತ ವಿಸ್ತಾರವನ್ನು ಕುರಿತು ಎಷ್ಟೆಷ್ಟು ಕವಿಗಳು ಹಿಂದೆ ಹಾಡಿದ್ದರೂ, ಇಂದಿನ ಕವಿಗಳು ಅದನ್ನು ಬಿಡಬೇಕಾದ ಪ್ರಸಂಗವೊದಗಿಲ್ಲ. 'ಮುಗಿಲಗಲ', 'ಜಗದಗಲ'ವಾಗಿದೆ ಪ್ರಣಯಪಯೋಧಿ. ಶೃಂಗಾರರಸ ಎಲ್ಲರಿಗೂ, ಇಂದಿಗೂ, ಎಂದಿಗೂ ಬೇಕಾಗಿದೆ. "ಶೃಂಗಾರ ಏವ ಮಧುರಃ ಪರಃ ಪ್ರಹ್ಲಾದನೋ ರಸಃ".

ಇಂದಿನ ಕಥೆ, ಕಾದಂಬರಿ, ನಾಟಕಗಳಲ್ಲಿ ಬರುವ ಗಂಡು–ಹೆಣ್ಣುಗಳ ವರ್ತನೆಯೆಲ್ಲ 'ಶೃಂಗಾರರಸ'ಕ್ಕೆ ನಿದರ್ಶನವೆಂದು ಭ್ರಮಿಸಲಾಗದು. ವ್ಯಕ್ತಿಗಳ ವೈಪರೀತ್ಯಗಳ ವರ್ಣನೆಯೆಲ್ಲ 'ರಸ'ವಲ್ಲ. ಜೀವನದ ಮೇಲ್ಪದರದ ವಿಕ್ಷಿಪ್ತ ವಿದ್ಯಮಾನಗಳು ರಸಸಾಮಗ್ರಿಯಲ್ಲ; 'ರಸಾಭಾಸ'ಕ್ಕೂ ಸಾಮಗ್ರಿಯಾದಾವೋ ಇಲ್ಲವೋ ಹೇಳುವುದು ಕಠಿಣ. ಪ್ರೇಮವು ಒಂದು ಜನತೆಯ ಜೀವನದ ಸಂಸ್ಕೃತಿಯ ಮಟ್ಟವನ್ನು ಅಳೆಯುವ ಮೂಲಬೆಲೆ (value). ಅದರ ಉತ್ತಮವಾದ ಸ್ವರೂಪದ ಪರಿಚಯ, ಅನುಭವ, ಅಭಿವ್ಯಕ್ತಿ–ಇವು ಮಹಾಕವಿಯಿಂದ ಮಾತ್ರ ಸಾಧ್ಯ. ಆದ್ದರಿಂದಲೇ ನಮ್ಮ ನಾಡಿನಲ್ಲಿ ಕಾಳಿದಾಸನಿಗೆ ಎಲ್ಲರಿಗಿಂತ ಹೆಚ್ಚಿನ ಗೌರವ. ಶೃಂಗಾರ ನಿರೂಪಣೆಗೆ ಹೊರಟ ಕವಿ ತನ್ನ ಅಚಾತುರ್ಯದಿಂದ ತಪ್ಪು ಹೆಜ್ಜೆಯಿಡುವ ಸಂಭವವೇ ಹೆಚ್ಚು. ಗ್ರಾಮ್ಯ, ಅಶ್ಲೀಲ ಮುಂತಾದ ದೋಷಗಳನ್ನು ಸುಸಂಸ್ಕೃತ ಸಮಾಜ ಸುಲಭವಾಗಿ ಮನ್ನಿಸದು. ಆದುದರಿಂದ ನಮ್ಮ ಹಿಂದಿನವರಲ್ಲಿಯೂ ಶೃಂಗಾರರಸವನ್ನೇ ಕುರಿತು ಬರೆದವರ ಸಂಖ್ಯೆಯನ್ನು ಕೈಬೆರಳುಗಳಿಂದಲೇ ಎಣಿಕೆ ಮಾಡಬಹುದು.

## 3

ಈ ಹಿನ್ನೆಲೆಯಲ್ಲಿ ಹೊಸಗನ್ನಡದ ಪ್ರೇಮಗೀತೆಯ ಸಾಹಿತ್ಯದ ಶಿಖರಗಳನ್ನು ಅವಲೋಕಿಸುವುದಾದರೆ ನಾವು ಕಾಣುವುದೇನು ? ಮೊದಲು ಮೊದಲು ಇಂಗ್ಲಿಷ್ ಪ್ರೇಮ ಗೀತೆಗಳ ಅನುವಾದ, ಅನುಸರಣ; ಆಮೇಲೆ ಇತ್ತ ಬೇಂದ್ರೆ, ಅತ್ತ ಕುವೆಂಪು, ಈ ಅತಿರಥ ಮಹಾರಥರಿಂದ ಒಂದು ಹೊಸ ಚಾಲನೆ–ನಮ್ಮ ಪೂರ್ವದ 'ಕವಿಸಮಯ' ಗಳನ್ನೂ ಪಾಶ್ಚಾತ್ಯ ಭಾವಲಹರಿಯನ್ನೂ ಅರಗಿಸಿಕೊಂಡು ಹೊಸ ಸಮನ್ವಯವನ್ನು ಕುವೆಂಪು ಅವರು ಸಾಧಿಸಿದಂತೆ, ಬೇಂದ್ರೆಯವರು ಮತ್ತೊಂದು ದಿಕ್ಕಿನಿಂದ ಜಾನಪದ ಸಾಹಿತ್ಯಕ್ಕೂ ನೂತನ ಭಾವಾವೇಶಕ್ಕೂ ಸೇತುವೆಯನ್ನು ನಿರ್ಮಿಸಿದರು. ಮುಂದೆ ಬಂದರೆ, ಮನೆ ಮನೆಯಲ್ಲಿಯೂ ನವದಂಪತಿಗಳಿಗೆ ಹೃದಯವೇದ್ಯವಾದ ಅನುಭವದಿಂದ ಅರಳಿಬಂದ 'ಮೈಸೂರು ಮಲ್ಲಿಗೆ'. ಅನಂತರ ? ಕನ್ನಡಿಗರ ಹೃದಯಮಂದಿರದಲ್ಲಿ ನೆಲೆಯೂರಿದಂತಿರುವ ಪ್ರೇಮಗೀತೆಯೆಂದರೆ ಕಣವಿಯವರ "ಮಧು—ಚಂದ್ರ".

## 4

ನನಗೆ ಈ ಗೀತೆಗಳು ಪ್ರಿಯವಾಗಿರುವುದನ್ನು ವಿವರಿಸುವ ಮೊದಲು, 'ಮಧು–

ಚಂದ್ರ' ಎಂಬ ಹೆಸರಿನ ಬಗೆಗೆ ನನ್ನ ಒಂದು ಆಕ್ಷೇಪಣೆಯಿದೆ. ಮೊದಲ ಮುದ್ರಣದ ಮುಖಚಿತ್ರದಲ್ಲಿ ಮಧುಪಾತ್ರೆಯನ್ನು (ಹಾಲಿನ ಬಟ್ಟಲನ್ನು?) ಮಗ್ಗುಲಲ್ಲಿರಿಸಿಕೊಂಡು ಕುರ್ಚಿಯಲ್ಲಿ ಕುಳಿತ ಪ್ರಮದೆಯೊಬ್ಬಳು ಕಿಟಕಿಯ ಹೊರಗೆ ಪೂರ್ಣಿಮಾಚಂದ್ರನನ್ನು ನೋಡುತ್ತಿರುವುದು ಚಿತ್ರಿತವಾಗಿತ್ತು. ಇದು ಕವಿಯ ಆಶಯವಿದ್ದಿರಲಿಕ್ಕಿಲ್ಲ. ಪ್ರಕಾಶಕರ ಆಶೆ, ಚಿತ್ರಕಾರನ ಭಾಷೆ, ಎರಡೂ ಇದರಲ್ಲಿ ಕೂಡಿತ್ತೇನೋ ನಾನು ಕಾಣೆ. ಅಂತೂ ಈ ಆವೃತ್ತಿಯಲ್ಲಿ ಅದು ಇಲ್ಲದಿರುವುದರಿಂದ ಕವಿತೆಯ ಆಕರ್ಷಣೆ ಹೆಚ್ಚಿದೆಯೆಂದೇ ನನ್ನ ಭಾವನೆ. ಕವಿಗಳ ನೂತನ ಸೃಷ್ಟಿಯಾದ ಈ ಶಬ್ದಕ್ಕೆ ಸೂಚ್ಯಾರ್ಥವೇನಿರಬಹುದೆಂದರೂ ನನ್ನ ಮಟ್ಟಿಗೆ ಇದು ಇಂಗ್ಲಿಷಿನ 'Honeymoon' ಎಂಬುದರ ಅಪಾರ್ಥಕ ಪ್ರತಿ ರೂಪವೆನಿಸುತ್ತದೆ. ಇಂಗ್ಲಿಷಿನಲ್ಲಿ 'Honey' ಎಂಬ ಶಬ್ದ ಪ್ರಣಯಿಗಳ ರೂಢಿಯಲ್ಲಿ ಪ್ರೇಯಸೀವಾಚಕ; ಆದರೆ ಕನ್ನಡದಲ್ಲಿ 'ಮಧು' ಶಬ್ದಕ್ಕೆ ಇನಿಯಳೆಂಬರ್ಥ ಬಹುದೂರ; 'ಜೇನು', 'ಮದ್ಯ' ಇವೇ ಪ್ರಸಿದ್ಧಾರ್ಥಗಳು. 'moon' ಎನ್ನುವಾಗ ಇಂಗ್ಲಿಷಿನಲ್ಲಿ ಒಂದು 'ಪಕ್ಷ' (ಶುಕ್ಲ ಇಲ್ಲವೆ ಕೃಷ್ಣ), ನಿಯಮಿತ ಕಾಲಾವಧಿ ಎಂಬ ಅರ್ಥಗಳುಂಟು. ಇವೆರಡೂ ಕೂಡಿದ 'Honeymoon' ಶಬ್ದದಿಂದ ನವ ವಧೂವರರು ಏಕಾಂತ ವಿಹಾರಕ್ಕಾಗಿ ಹೋಗುವ ಕೆಲವೊಂದು ಕಾಲವೆಂಬ ಅರ್ಥ ಇಂಗ್ಲಿಷಿನಲ್ಲಿ ಸಹಜ. ಕನ್ನಡ ದಲ್ಲಿ 'ಮಧು–ಚಂದ್ರ' ಎಂಬ ಶಬ್ದದಿಂದ ಈ ಅರ್ಥವಂತೂ ಹೊರಡದು. ಮದ್ಯದ ಸೂಚನೆ ವ್ಯರ್ಥ. ಕಥಂಚಿತ್ 'ಮಧು ಮಾಸ' ಎಂಬ ಮೂರನೆಯ ಅರ್ಥವನ್ನು ಹಿಡಿದ, 'ಶೃಂಗಾರಮಾಸ' ಎಂಬ ಪ್ರಸ್ತುತಾರ್ಥಕ್ಕೆ ಬಂದರೂ 'ಚಂದ್ರ' ಪದದ ಸ್ವಾರಸ್ಯದಿಂದ ಪ್ರೇಮವಿಲಾಸ ಎಂದು ಅರ್ಥಯಿಸುವ ಪ್ರಸಂಗವನ್ನು ಲಾಕ್ಷಣಿಕರು 'ನೇಯಶಾರ್ಥ'ವೆಂಬ ದೋಷವೆನ್ನಬಹುದು. ಇಂಗ್ಲಿಷಿನ ಪದಾನುವಾದಕ್ಕೆ ಕನ್ನಡ ಕವಿಗಳು ಮಾರುಹೋದಾಗ ಇಂತಹ ಅನೌಚಿತ್ಯಗಳಿಗೆ ಎಡೆಯಾಗುತ್ತದೆ.

## 5

ಸಹಾನುಭೂತಿಯಿಲ್ಲದೆ ಟೀಕೆ ಮಾಡಬೇಕೆಂಬ ಕಾರಣದಿಂದ ದೋಷದ ಕಡೆಗೆ ನಾವು ಕೈಮಾಡುತ್ತಿಲ್ಲ ; ಈ ಪ್ರಯೋಗ ನಿರ್ದುಷ್ಟವೆಂದು ಬೇರೆ ಸಹೃದಯರು ಸಮರ್ಥಿಸಿದರೆ ನಮಗೆ ಸಂತೋಷವೇ. 'ಮಧು'ವಿಂದ ವಧುವಿನ 'ಅಧರಮಧು', 'ಚಂದ್ರ'ನಿಂದ 'ಚಂದ್ರ ಮಂಚ', 'ಪ್ರೇಮಚಂದ್ರ' ಇತ್ಯಾದಿ ಸೂಚಿತಾರ್ಥಗಳು ಕವಿಗೆ ಇರಲೂಬಹುದು. ಒಂದರಿಂದ ಒಂಬತ್ತನ್ನು ಧ್ವನಿಸುವುದೇ ಕವಿಪ್ರಯೋಗದ ಯೋಗಸಿದ್ಧಿ. ಕಿರಿದರಲ್ಲಿ ಪಿರಿದರ್ಥವನ್ನು ಅಡಗಿಸಿಡುವ ಕಾವ್ಯ ಗುಣವನ್ನು ಆಲಂಕಾರಿಕರು 'ಶ್ಲೇಷ'ವೆನ್ನುತ್ತಿದ್ದರು. ಶ್ಲೇಷವೆಲ್ಲ ಕ್ಲೇಶವೆನಿಸುವಂತೆ ಇದನ್ನು ಅತಿಯಾಗಿ ಹಿಂಜಿದವರೂ ಉಂಟು. ಮಿತ ವಾಗಿ, ಹಿತವಾಗಿ, ಸಮಯೋಚಿತವಾಗಿ ಬಂದಾಗ ಶ್ಲೇಷೆಗಿಂತ ಹೆಚ್ಚಿನ ಕಾವ್ಯಕಲೆಯೇ ಇಲ್ಲ. ಬಾಣನು ಹೇಳಿದಂತೆ "ಶ್ಲೇಷೋ ಕ್ಲಿಷ್ಟಃ—ಸ್ಫುಟೋರಸಃ" ಎರಡೂ ಕೂಡು ವುದು ಕವಿಶಕ್ತಿ ಅಧಿಕವಾದವನಲ್ಲಿ ಮಾತ್ರ. ಇತ್ತ ಶಬ್ದಕ್ಕೂ ಅತ್ತ ಅರ್ಥಕ್ಕೂ ಏಕ

ಕಾಲದಲ್ಲಿ ಬಹುಮುಖ ದೀಪ್ತಿ ಬರುವುದು ಶ್ಲೇಷೆಯಿಂದಲೇ. ಒಂದೇ ಶಬ್ದದಿಂದ ಎರಡು ಶಬ್ದಗಳ ಕೆಲಸ ಮಾಡಿಸುವ ಕಲೆ- ಉದಾ: ಆ ರತಿ; ಆರತಿ—ಶಬ್ದ ಶ್ಲೇಷೆ ಯಾದರೆ ಒಂದೇ ಪದಾವಲಿಯಿಂದ ಎರಡು ಮೂರರ್ಥಗಳ ದ್ಯೋತನಕಲೆ ಅರ್ಥಶ್ಲೇಷೆ. ಉದಾ:

ತಾವರೆಯೆಲೆ ಹೊಚ್ಚಿದಂತೆ ಅಮ್ಮ ಹೊಲಿದ ಕುಂಚಿಗೆ
ನಮ್ಮ ಬಾಲ್ಯ—ಚಿತ್ರ—ಲೀಲೆಗಳ ವಿಶೇಷ ಸಂಚಿಕೆ! (' ಮಗುವಿಗೆ ')

ಕಣವಿಯವರ ಕಾವ್ಯಭಂಡಾರದಲ್ಲಿ ಸಹಜ ಶ್ಲೇಷೆಯ ರತ್ನಕಾಂತಿ ನನ್ನ ಮನಸ್ಸನ್ನು ಬಹುವಾಗಿ ಸೆಳೆದಿದೆ. ಪ್ರಸನ್ನಸುಭಗವಾದ ಅವರ ಕಾವ್ಯಧಾರೆ ವರ್ಣಪೂರ್ಣವಾಗು ವುದು ಇದರಿಂದಲೇ. ಈ ಗುಣವೇ ಅತಿಯಾದಾಗ ದೋಷದ ಬಾಗಿಲು ತೆರೆಯುವು ದೆಂದು ತೋರಿಸಲು ಕವನಶೀರ್ಷಿಕೆಯು ಹೊಲಿಗೆ ಬಿಚ್ಚುವ ಪ್ರಸಂಗವೊದಗಿತು. ಈ ಗುಣ ಯಾವ ರೀತಿಯಿಂದ ಕವಿತೆಯುದ್ದಕ್ಕೂ ಒಳಬೆಳಗಳನ್ನು ಒದಗಿಸುತ್ತಾ ಕಣವಿಯ ವರ ಕಾವ್ಯಕ್ಕೆ ವೈಶಿಷ್ಟ್ಯವನ್ನು ತರುತ್ತಿದೆಯೆಂದು ಸೂಚಿಸಿದರೆ ನನ್ನ ಕೆಲಸವಾಯಿತು.

## 6

ಅನಾದಿ ಕಾಲದಿಂದಲೂ ಕವಿಗಳಿಗೆ ವಿಷಯವಾಗಿರುವ ಪ್ರೇಮವನ್ನು ಕುರಿತು ಹಾಡುವ ಇಂದಿನ ಈ ಕವಿ ತನ್ನದಾದ ಯಾವ ಹೊಸತನವನ್ನು ತೋರಿಸಿದ್ದಾನೆ ಎಂದು ವಿಮರ್ಶಕನು ಪರೀಕ್ಷಿಸಲು ಹೊರಡುವುದು ತಪ್ಪಲ್ಲ. ಛಂದೋಬಂಧದಲ್ಲಿ, ಕಾವ್ಯ ತಂತ್ರದಲ್ಲಿ, ಉಕ್ತಿವಿನ್ಯಾಸದಲ್ಲಿ, ಅರ್ಥವ್ಯಕ್ತಿಯಲ್ಲಿ, ಹೊಸದನ್ನು ನಾವು ನಿರೀಕ್ಷಿಸುತ್ತೇವೆ. ಎಲ್ಲದರಲ್ಲಿಯೂ ಎಲ್ಲ ಕವಿಗಳೂ ವಿಶಿಷ್ಟ ಹೊಸತನವನ್ನು ಕಾಣಿಸಲಾರರು. ಪೂರ್ವ ಸಿದ್ಧವಾದ ಕಾವ್ಯಕಲ್ಪನೆಗಳನ್ನು, ಪೂರ್ವಕವಿಗಳ ಅನುಭವಸಾರವನ್ನು, ತಮ್ಮ ರೀತಿ ಯಿಂದ ಉಪಜೀವಿಸಿಕೊಳ್ಳುತ್ತಾ ಹೊಸದೆನಿಸುವಂತೆ ಮಾಡುವವರೇ ಹೆಚ್ಚು. ಚಂದ್ರ —ಚಕೋರಗಳ, ಮಾವು—ಮಲ್ಲಿಗೆಗಳ, ಪ್ರೇಮರಹಸ್ಯ ಒಂದು ಕಾಲದ ಶೃಂಗಾರ ಕವಿಗಳಿಗೆ ಮಾದರಿಯಾಗಿತ್ತು; ಮನ್ಮಥನ ಬಿಲ್ಲುಬಾಣಗಳನ್ನೂ, ಮಂತ್ರಿಪುರೋಹಿತರನ್ನೂ ಅವರು ನೋಡಿ ಬಂದವರಂತೆ ಬಣ್ಣಿಸುತ್ತಿದ್ದರು. ಇನ್ನೊಂದು ಕಾಲದಲ್ಲಿ ರಾಧಾ— ಮಾಧವರ ಶೃಂಗಾರ ವರ್ಣನೆ ಮಧುರ ಭಕ್ತಿಯ ಆವಿಷ್ಕಾರವೆನಿಸುವ ಪರಿಯಲ್ಲಿ ತೊರೆಯಾಗಿ ಹರಿಯಿತು; ಪೌರಾಣಿಕ ಪ್ರಪಂಚದ ಸ್ವರ್ಗೀಯ ವಾತಾವರಣ ಬೃಂದಾವನದ ರಸಕ್ರೀಡೆಯಲ್ಲಿ, ಶೌರಿಯ ಯಮುನಾತೀರ ವಿಹಾರದಲ್ಲಿ ಸೇರಿಕೊಂಡಿತು. ಇಂದಿನ ಶೃಂಗಾರ ಕವಿಗಳ ಸಂಸ್ಕಾರದಲ್ಲಿ ಕೀಟ್ಸ್, ಶೆಲ್ಲಿ, ಉಮರ್‌ಖಯಾಂ, ಹಾಫೀಜ್ ಮೊದಲಾದ ದೇಶಾಂತರದ ಕವಿಗಳ ಕಲ್ಪನಾವಿನ್ಯಾಸವೂ ಪ್ರವೇಶಗೊಂಡಿದೆ. ಪೂರ್ವ ಕವಿಗಳ ಮಾರ್ಗವು ಇಂದಿನ ಜನರಿಗೆ ಅದೇ ರೂಪದಲ್ಲಿ ರಂಜಕವಾಗುವುದು ಕಠಿನ. ಮಾರ್ಗ ಹೊಸದಾಗಲು ಕವಿಯು ನೇರವಾಗಿ ಇಂದಿನ ಜೀವನದ ಅನುಭವದಿಂದ ಬಂದ ಅಂಶಗಳನ್ನು ತನ್ನ ಪಾಠಕರಿಗೆ ಚಮತ್ಕಾರವಾಗಿ ಉಪಯೋಗಿಸುವುದು ಅಗತ್ಯವಾಗು

ತ್ತದೆ. ಭಾವೋತ್ಕಟತೆ, ಭಾವಸಾಂದ್ರತೆ, ಅಥವಾ ಭಾವತೀವ್ರತೆ ಆಧುನಿಕ ಜೀವನದ ವೈಶಿಷ್ಟ್ಯಗ್ರಾಸಿಯಾದ ಅಲಂಕಾರಗಳನ್ನು ಸೃಷ್ಟಿ ಮಾಡಲು ಸಮರ್ಥವಾದಾಗ ಮಾತ್ರ ಸಾರ್ಥಕ್ಯವನ್ನು ಪಡೆಯಬಲ್ಲದು. ಈ ತತ್ತ್ವವನ್ನು ಕಣವಿಯವರು ಚೆನ್ನಾಗಿ ಮನಗಂಡಿರುವುದು ಕನ್ನಡ ಕಾವ್ಯಕ್ಕೆ ಒಂದು ವಿಶ್ವಾಸವನ್ನೂ ಪ್ರತ್ಯಾಸೆಯನ್ನೂ ನೀಡುವಂಥದು. ಇಂದಿನ ಬಾಳಿನಲ್ಲಿ ಎಲ್ಲರ ಅನುಭವದಲ್ಲಿರುವ ಅಂಶಗಳ ಅಜ್ಞಾತ ಅಂತಸ್ಸೂಕ್ಷ್ಮವನ್ನು ಸಂವೇದನಶಕ್ತಿಯಿಂದ ಗ್ರಹಿಸಿ, ಎಲ್ಲರಿಗೂ ಆಸ್ವಾದ್ಯವಾಗುವಂತೆ, ಮನಸ್ಸನ್ನು ಕ್ಷುಬ್ಧಗೊಳಿಸದಂತೆ, ಹೊಚ್ಚಹೊಸದಾದ ಪ್ರತಿಮೆಗಳ ಮೂಲಕ ರೂಪಿಸುವ ಕಲೆ ಕಣವಿಯವರಿಗೆ ಹಸ್ತಗತವಾಗಿರುವುದಕ್ಕೆ ಅವರ ಈಚಿನ ಕವನ ಸಂಗ್ರಹಗಳೆಲ್ಲವೂ ಸಾಕ್ಷಿ. ಆ ಕಲೆಯ ಮೊಳಕೆಗಳು 'ಮಧು-ಚಂದ್ರ'ದಲ್ಲೂ ಗಮನಸೆಳೆಯುವ ಪ್ರಮಾಣದಲ್ಲಿರುವುದನ್ನು ನೋಡಬಹುದು. 'ಮಧುಚಂದ್ರ'ದಲ್ಲಿ ಬೇಂದ್ರೆಯವರ ರಸರಭಸವಿಲ್ಲ, ಕುವೆಂಪು ಅವರ ಪ್ರಬೋಧಕ ಜೀವನ ವಿಮರ್ಶೆಯಿಲ್ಲ, 'ಮೈಸೂರು ಮಲ್ಲಿಗೆ'ಯ ಸಮತಲ ಹೂನಡಿಗೆಯಿಲ್ಲ. ಆದರೆ ಈ ಮೂವರ ಇತರ ಗುಣಾಂಶಗಳು ಮಪ್ಪುರಿಯಾಗಿ ಕಣವಿಯವರಲ್ಲಿ ಕೂಡಿ, ಹೊಸದೊಂದು ಪಾಕವಾಗಿ ವೈಶಿಷ್ಟ್ಯಪೂರ್ಣವಾಗಿ ಇಲ್ಲಿ ಅಭಿವ್ಯಕ್ತಿಯನ್ನು ಪಡೆದಿವೆಯೋ ಎನಿಸುತ್ತದೆ. ಕುವೆಂಪು ಅವರ ವ್ಯುತ್ಪತ್ತಿ ವೈಶಾಲ್ಯ, ಬೇಂದ್ರೆಯವರ 'ಜನತಾಂತರ್ದೃಷ್ಟಿ', 'ಮೈಸೂರು ಮಲ್ಲಿಗೆ'ಯ ನರುಗಂಪು ಈ ಮೂರೂ ಗುಣಗಳಿಲ್ಲಿ ಬೇರೆ ಬೇರೆ ಪ್ರಮಾಣದಲ್ಲಿ ಬೆರೆತಂತಿವೆ; ಈ ಮೊದಲೇ ಹೇಳಿದಂತೆ ಹೊಚ್ಚ ಹೊಸ ಪ್ರತಿಮೆಗಳ ನಿರ್ಮಾಣವೇ ಕಣವಿಯವರ ವೈಶಿಷ್ಟ್ಯ. ಇವುಗಳ ಸುಂದರ ಸಮ್ಮಿಳನದಿಂದ ಕಣವಿಯವರ ವಾಣಿ ಎದೆಯನ್ನು ತಾಗಿದೊಡನೆ ಸಹೃದಯರನ್ನು ತಲೆದೂಗಿಸುತ್ತದೆ, ಬಿಲ್ಲುಗಾರನ ಬಾಣದಂತೆ :—

> "ಕಿಂ ಕವೇಸ್ತಸ್ಯ ಕಾವ್ಯೇನ ಕಿಂ ಕಾಂಡೇನ ಧನುಷ್ಮತಃ
> ಪರಸ್ಯ ಹೃದಯೇ ಲಗ್ನಂ ನಘೂರ್ಣಯತಿ ಯತ್ ಶಿರಃ ?"

## 7

ಇನ್ನು ಕವನಗಳಿಂದ ಆಯ್ದ ಕೆಲವು ಮಾತುಗಳನ್ನು ನೋಡೋಣ. ಒಲವಿನಿಂದ ಮನದನ್ನೆ ಮನೆಯಲ್ಲಿ ನಿಂದೊಡನೆ ಎಲ್ಲೆಲ್ಲಿಯೂ ಚೆಲುವು, ಎಲ್ಲವೂ ಗೆಲವು. ಮನೆಯಂಗಳ ಮಂಗಳಮಯ. ಮೆಲ್ಲೆಲರು ಮಲ್ಲಿಗೆಯೊಡನೆ ಸರಸವಾಡುತ್ತಿದೆ—

ಜತೆಗೂಡುತ ಮಾತಾಡಿವೆ ಅರೆನಿದ್ದೆಯೊಳೇನ ?

ಎಂಬ ಸರಸಪ್ರಶ್ನೆ ನಿಸರ್ಗವನ್ನೆಲ್ಲ ವ್ಯಾಪಿಸಿರುವ ಅನುರಾಗ ನಾಗಬಂಧವನ್ನು ಹೃದಯಂಗಮವಾಗಿ ಧ್ವನಿಸುತ್ತದೆ. ಇದರ ಗುಂಗಿನಲ್ಲಿ ಮೂಕನಾಗಿರುವ ರಸಿಕನಿಗೆ ಕವಿ ತಟ್ಟನೆ ತೆರೆದಿಡುತ್ತಾನೆ ತನ್ನ ಪ್ರೇಮಮೀಮಾಂಸೆಯನ್ನು ; ಸಿದ್ಧಾಂತದ ಗದ್ಯದಲ್ಲಲ್ಲ ; ಭಾವಗಮ್ಯವಾದ ರೂಪಕದ್ವಯದಿಂದ :—

ಲೋಕದ ಮೈನೋವಿಗೆ ಶ್ರೀಗಂಧದ ತನಿಲೇಪ :
ಆಕಾಶದ ಗುಡಿಯಿಂದಲೆ ಹೊರಸೂಸಿದೆ ಧೂಪ !

ಇಷ್ಟು ಸರಳವಾದ ಬರವಣಿಗೆ ವಾಚಾಲನಾದ ವ್ಯಾಖ್ಯಾನಕಾರನಿಗೆ ಆಸ್ಪದವೀಯುವುದಿಲ್ಲ. ರಮಣೀಯತೆಯ ಅನುಸಂಧಾನದಲ್ಲಿ ಅವನು ಲೀನನಾಗುತ್ತಾನೆ. ಇದು ಬಾಳಿನಲ್ಲಿ ಕಾಣುವ ನಲವಿನ ಒಂದು ಮುಖ ; ನೋವಿನ ಇನ್ನೊಂದು ಮುಖಕ್ಕೆ ಈ ಸವಿಯ ಸಮಯದಲ್ಲಿ ಪ್ರವೇಶವಿಲ್ಲ. ಈಗ ಕವಿಗೆ ಬಾನ್ ಕರೆಯುವುದು ಜೇನು ಮಾತ್ರ–

ಆನಂದದ ಕಡಲಾಳದಿ ನಾವಾದೆವೆ ಮೀನು !

ಎಂದು ಕವಿಯೇ ಸೋಜಿಗಪಡುವಂತಾಗಿದೆ. ಒಳಿತೆಲ್ಲವು ಬೆಳಕಾಗಿರುವಾಗ, ಸವಿ ನೆನಪಿಗೆ ಮಾತ್ರ ಅಲ್ಲಿ ಸ್ಥಾನವಿದೆ. ಹೊಸ ಕಣ್ಣಿನಿಂದ ಕವಿ ಜಗತ್ತನ್ನು ಈಗ ನೋಡ ತೊಡಗಿದ್ದಾನೆ. ಎಂದಿನ ಚರ್ಮಚಕ್ಷುವನ್ನು ಮುಚ್ಚಿ ಹೊಸ ದಿವ್ಯ ಚಕ್ಷುವನ್ನು ತೆರೆದಿದೆ ಅನುರಾಗದ ಪ್ರಥಮಾನುಭವ. ಇದನ್ನೇ ಸಂಸ್ಕೃತದ ಕವಿಯೊಬ್ಬನು—

ದಿವ್ಯಚಕ್ಷುರಹಂ ಜಾತಃ ಸರಾಗೇಣಾಪಿ ಚಕ್ಷುಷಾ...

ಎಂದು ಹಾಡಿದ್ದಾನೆ. ಹೀಗೆ ಕವಿ ಆಕ್ಷೇಪಣೆ ಮಾಡುವವರ ಅಸ್ತ್ರವನ್ನೇ ಕಸಿದುಕೊಳ್ಳುವಂತೆ ತನ್ನ ಕವಿತಾ ವಿಶ್ವದ ವ್ಯಾಪ್ತಿ ಇಷ್ಟೇ ಎಂದು ಜಾಣ್ಮೆಯಿಂದ ಮೊದಲೇ ನಿವೇದಿಸಿದ್ದಾನೆ.

ಮುಂದಿನ ಕವಿತೆಯಲ್ಲಿ ಅರುಣ—ಚೆಂಗುಲಾಬಿಗಳ ಪ್ರೇಮದ ನೇಮ ಹೇಮ ಕಾಂತಿಯಿಂದ ಕಂಗೊಳಿಸುತ್ತದೆ. ಆ ಗುಲಾಬಿಯನ್ನು ಕೆಣಕಿ ರಮಿಸಲೆಳಸುವ ಗಾಳಿ ಭೃಂಗಗಳು, ಗಾಳಿಯ ಪರಾಜಯ, ಭೃಂಗದ ವಿಜಯ, ಇವು ಕವಿಯ ಮನೋಭಾವಕ್ಕೆ ಬಹು ಸಹಜವಾಗಿ ಹೊಂದಿಕೆಯಾಗುತ್ತವೆ. "ಕಾಮೀಸ್ವತಾಂ ಪಶ್ಯತಿ" ಎಂಬ ಕಾಳಿದಾಸನ ಸೂಕ್ತಿಯನ್ನು ಸ್ಮರಣೆಗೆ ತರುತ್ತವೆ. ತನ್ನ ಮನದನ್ನೆಗೆ 'ಕಾಮುಕರ ಕಣ್ಣೆಂಜಲಾದ' ಈ ಹೂ ಎಷ್ಟಕ್ಕೂ ಯೋಗ್ಯವಲ್ಲವೆಂಬ ಕಲ್ಪನೆ ಕವಿಯ ವಿಶಿಷ್ಟ ಕಲೆಯ ಕೈಗಂಬವಾಗುತ್ತದೆ. ಒಂದೇ ಸಾಲಿನಿಂದ ಇಡಿಯ ಪದ್ಯಕ್ಕೆ ರಸಪುಷ್ಟಿಯೊದಗುವ ಈ ಸೂಕ್ಷ್ಮ ಈ ಪ್ರಮಾಣದಲ್ಲಿ ಅನ್ಯತ್ರ ಸಿಕ್ಕುವುದು ವಿರಲ. ಮಳೆನೀರಿಲ್ಲದೆ ಪೊಯ್ನೀರಿಂದ ಬಂದ ಬೆಳೆಯೇ ನಮ್ಮಲ್ಲಿ ಹೆಚ್ಚು. ಕವಿಕಲ್ಪನೆಯಲ್ಲಿ ಮೆಚ್ಚಬಹುದಾದ ನಾವೀನ್ಯಕ್ಕೆ ಇದು ಒಂದು ಸಣ್ಣ ಉದಾಹರಣೆ. ಇದಿಲ್ಲದವರ ರಚನೆಯಲ್ಲಿ "ತನ್ನವಸರಕ್ಕಾಗಿ ಹಗಲುಗನ್ನವ ನಿಕ್ಕಿದರೆ ಕನ್ನ ಸವೆಯಲಿಲ್ಲ, ಕಳವು ದೊರೆಯಲಿಲ್ಲ" ಎಂಬ ನಾಣ್ನುಡಿ ದೃಷ್ಟಾಂತಕ್ಕೆ ಬರುತ್ತದೆ.

ಕವಿಯ ಪ್ರೇಮಮಯ ದೃಷ್ಟಿಗೆ ಕಾಣುವ ಹೂಗಳು ಎಲ್ಲರೂ ಕಾಣುವ ಹೂಜಾತಿಯಲ್ಲ. ವಿಶಿಷ್ಟವಾಗಿ 'ಈ ಮಲ್ಲಿಗೆ....ಈ ಗುಲಾಬಿ'; ಅವು ಹೇಗಿವೆ ?–

ಚೆಲುವಿನೆರಡು ಕಣ್ಣ ಗೊಂಬೆ.

ಮಂಜುಹನಿಗಳು ಇಳೆಗಿಳಿದ ಅಪ್ಸರೆಯರು. ಮುಂಜಾವಿನ ಚೆಂಬೆಳಕು ಒಲವಿನಗ್ನಿ ಕುಂಡದಲ್ಲಿ ಕರಗಿಮಿರುಗುವ ಆರತಿಯೇ ಸರಿ. ಆದ್ದರಿಂದಲೇ

ಇಲ್ಲಿ ಎಲ್ಲ ಪ್ರೀತವು
ಮಾತು ಕೂಡ ಗೀತವು !

ಇದನ್ನೇ ಈ ಕವನಸಂಗ್ರಹದ ಸಮಗ್ರವರ್ಣನೆಯೆಂದರೂ ಸಲ್ಲುತ್ತದೆ. ನಿಸರ್ಗದ ಚಿಕ್ಕೆ ಚಂದ್ರರಂತೆ, ಅಲರು ಎಲರುಗಳಂತೆ, ಚಿಟ್ಟೆ ತುಂಬಿಗಳೂ ಈ ಪ್ರೇಮ ಪ್ರಪಂಚದ ಪ್ರಾತಿನಿಧಿಕ ಪ್ರಜೆಗಳಾಗಿದ್ದಾರೆ.

ಹೀಗೆಯೇ ಒಂದೊಂದೂ ಕವಿತೆಯನ್ನು ವಿವರವಾಗಿ ನಿರವಿಸುತ್ತ ಹೋಗುವ ಶಿಕ್ಷಕನ ಸಹಜೋತ್ಸಾಹಕ್ಕೆ ಸ್ವಲ್ಪ ತಡೆ ಹಾಕದಿದ್ದರೆ ವಾಚಕರಿಗೆ ಗೌರವ ಮಾಡಿದಂತಾಗದು. ಇನ್ನು ಈ ಸಂಗ್ರಹದಲ್ಲಿ ಅಲ್ಲೊಂದು ಇಲ್ಲೊಂದು ಸಾಲನ್ನು ಮಾತ್ರ ಕೈಮಾಡಿ ತೋರಿಸಿ ಅಳತೆಯಿಲ್ಲದೆ ಬೆಳೆಯುತ್ತಿರುವ ಈ ಬರೆಹಕ್ಕೆ ಪೂರ್ಣ ವಿರಾಮವನ್ನು ಕಾಣಿಸಬೇಕಾಗಿದೆ.

## 8

ಮಕ್ಕಳಾಟದ ಅರ್ಥಹೀನ ಪಲ್ಲವಿ–'ಗಿರಿಗಿರಿ ಗಿಂಡಿ, ಇಬತ್ತಿ ಉಂಡಿ'. ಈ ಪಲ್ಲವಿಯನ್ನು ಮಹಾರ್ಥಮಂಜರಿಯಾಗಿ ಪಲ್ಲವಿಸುವಂತೆ ಕಲ್ಪನೆಯು ನೀರೆರೆದಿರುವ ಕವಿಕೌಶಲ ವಿಸ್ಮಯಾವಹವಾಗಿದೆ. ನವವಧೂವರರ ಮಧುರಾಲಾಪ ಎಷ್ಟೋ ವೇಳೆ ಒಂದು ದೊಡ್ಡ ಮಕ್ಕಳಾಟಿಕೆಯೇ ಎಂಬ ಸತ್ಯವನ್ನು ಈ ಕವಿತೆ ಬಹಳ ಧ್ವನಿಪೂರ್ಣವಾಗಿ ಬಿಂಬಿಸುತ್ತದೆ. ಇಷ್ಟು ನೆಲಮಟ್ಟದಲ್ಲಿ ಹಾರುವುದು ಮುಗಿಲು ಮುಟ್ಟುವ ಹಕ್ಕಿಗಳಿಗೂ ಆಗದ ದುಷ್ಕರ ಸಾಧನೆ.

## 9

'ಸಾನೆಟ್' ಕಾವ್ಯರೂಪದಲ್ಲಿ ಸಿದ್ಧಿ ಸಿಕ್ಕುವುದು ಸುಲಭವಲ್ಲ. ಸಂಯಮ—ಆವೇಶಗಳೆರಡನ್ನೂ ಕೂಡಿ ನಡೆಯಿಸುವ ಅಸಿಧಾರಾವ್ರತ ಅದು. ಗಾಂಭೀರ್ಯ—ಪ್ರಸನ್ನತೆ. ತಾಳ—ಲಯ, ಪ್ರಾಸ—ಗತಿ, ಶಬ್ದನೈರ್ಮಲ್ಯ—ಪ್ರಾಗಲ್ಭ್ಯ, ಎಲ್ಲ ಒಂದು ಪಾಕಕ್ಕೆ ಬಂದಾಗ ಈ ರೂಪ ಕವಿಯ ವಶವರ್ತಿಯಾಗುತ್ತದೆ. ಕಣವಿಯವರ ಈ ಸಂಗ್ರಹದ ಸಾನೆಟ್‌ಗಳಾದರೂ ಅವರ ಅಭಿಜ್ಞತೆಯ ದೀಪ ಸ್ತೂಪಗಳಂತಿವೆ. 'ಅಶ್ರುತ—ಗಾನ'ದ ಹೃದಯೈಕವೇದ್ಯ ಅನುಭವ.

ಬಾನ ತುಂಬೆಲ್ಲ ನಿಶ್ಶಬ್ದ ಶಬ್ದಾಂಬೋಧಿ

ಎಂದು ಅನುರಣಿಸಿ, ಅಂಬರ ನುಡಿಸುವ ಗುಡುಗಿನ ಮೃದಂಗ, ಸೂರ್ಯ ಚಂದ್ರರ ತಾಳಕ್ಕೆ ನರ್ತಿಸುವ ವಿಶ್ವನರ್ತಕಿಯ ಚಿತ್ರ, ಅವಳ ಗೆಜ್ಜೆ ಮಿಂಚು ಹರಿದು ಸೂರೆಯಾದಂತಿರುವ ತಾರಗೆಗಳು, ಕಂಕಣದ ಕಿಂಕಿಣೀಸ್ವರ, 'ಸಣ್ಣನೆಯ ಸೇವಿಗೆಯ ಎಳೆಯ ಹೊಸೆ ಹೊಸೆದಂತೆ...' ಬರುವ ಗಾನ, ಇವುಗಳೆಲ್ಲವನ್ನೂ ಒಂದು ಪ್ರತಿಭೋನ್ಮೇಷದಲ್ಲಿ ಕಾಣಬಲ್ಲ ಕವಿಯನ್ನು ಎಷ್ಟು ಹೊಗಳಿದರೂ ಕಡಿಮೆಯೇ. ಇದಕ್ಕೆ ತಕ್ಕ ಹಳೆಗನ್ನಡ, ಸಂಸ್ಕೃತ ಶಬ್ದಪುಂಜಗಳೂ ಅವನ ಕೈವಶವಾಗಿರುವುದು ಚಿನ್ನಕ್ಕೆ ಪರಿಮಳವಿಟ್ಟಂತಾಗಿದ್ದೆ

## 10

ಪ್ರಿಯಾವಿರಹದಲ್ಲಿ ಸಂಗಮಕ್ಕಿರುವ ಹೆಚ್ಚಿನ ಸ್ವಾರಸ್ಯವನ್ನು ಸಂಸ್ಕೃತ ಕವಿಗಳೇ ಎಷ್ಟೋ ರೀತಿಯಲ್ಲಿ ಹೇಳಿದ್ದಾರೆ. ಆದರೂ—

ಜೇನು ಹನಿಹನಿಯಾಗಿ ಹರಿವುದೊಲವು
ನೆನಹಿನಲಿ ಜೀವನವು ಮಧುರತರವು.
ಮನವನಿಮ್ಮೈಗೊಂಡು ರಂಜಿಪಂತೆ
ನೆನಹು ನಲ್ಗನಸಲ್ತೆ ? ಅಂತೆ, ಉಂತೆ.

ಎನ್ನುವ ಭಾವ ಹೊಸದಾಗಿ ಹೊಳೆಯುತ್ತದೆ. ಅಂತೆ, ಉಂತೆ, ಎನ್ನುವುದು ಕುಶಲ ಚಿತ್ರಕಾರನು ತನ್ನ ಚಿತ್ರಕ್ಕೆ ಕಡೆಯ ಕೈಯಾಡಿಸಿದಂತಿಲ್ಲವೆ ? ನೆನಹಿಗೂ ಕನಸಿಗೂ ಸಾಮ್ಯವನ್ನು ತಿಳಿಸಿ, ವೈಷಮ್ಯವನ್ನು ಸಂಮ್ಯನೆ ಒಂದು ಶಬ್ದಾಭಿನಯದಿಂದ ಸೂಚಿಸುತ್ತಿದ್ದಾನೆ ಕವಿ; ಕನಸಿಗಿಂತ ನೆನಹು ಎಷ್ಟೋ ಮೇಲಿನದೆಂದೂ ಪ್ರಯಾಸವಿಲ್ಲದೆ ಸಾಧಿಸುತ್ತಿದ್ದಾನೆ. ಈ ಶಬ್ದತಂತ್ರ ನವೀನವಾಗಿದೆ.

ಮಧುರಮಿಲನಕ್ಕೆ ಅಡ್ಡವಾಗಿ ಬರುವ ತಡೆಗಳ ಅರಿವಾದಾಗ ಕವಿ ಮೊದಲು

ಹೆಣ್ಣಿನ ಕಣ್ಣಂಚಿನಲಿದೆ ಕಡೆಗಾಣದ ಆಶೆ
ಆ ಕಾಂತಿಯೆ ತಾರಾಪಥದೆಡೆಗೊಯ್ಯುವುದೈಸೆ.

ಎಂದು ಉತ್ಸಾಹವನ್ನು ಮೆರೆದರೂ ನಿರಾಶೆಯ ನಿಟ್ಟುಸಿರೇ ಕಡೆಗೆ ನಿಲ್ಲುತ್ತದೆ:

ಓ ಎಂದಿಗೆ ಇನ್ನೆಂದಿಗೆ ನೋಂತರ ಸಮ್ಮಿಲನ ?
ಹೊಸಬಾಳಿನ ಹೊಸಹಾಡಿಗೆ ರಸಮಯ ಸಂಸ್ಕರಣ ?

ಇದು ನಮ್ಮ ಸಮಾಜಕ್ಕೆ ಕಣವಿಯವರು 'ಕಾಂತಾಸಮ್ಮಿತ'ವಾಗಿ ಮಾಡುವ ಉಪದೇಶದ ರೀತಿ.

ಪ್ರಣಯದ ನೈರಾಶ್ಯವನ್ನೇ 'ನಲ್ಮೆ' ಎದೆಗರಗುವಂತೆ ಚಿತ್ರಿಸಿದೆ—ಒಂದು ಹೂವಿನ ಜೀವನದಲ್ಲಿ ಒಡನೆಯೇ ಮತ್ತೆ ಪ್ರೇಮದ 'ನವೋದಯ' ಕವಿತೆಗೂ ನವಚೈತನ್ಯವನ್ನು ತರುತ್ತದೆ. ಅಲ್ಲಿ ಬರುವ ಮೂರು ಶಬ್ದ ಚಿತ್ರಗಳು :—

'ಮೂಡಣದ ಕೋಡಿಯೊಡೆಯಿತು...'
'ಕಾರಿರುಳ ಕುರುಡಿಂಗೆ ಕಣ್ಣು ಬಂತು...!
'ಜೀವದೇವರ ಮಿಲನ ಝೇಂಕರಿಸಿತು !'

ಮೂರೂ ಮೂರು ಮುತ್ತುಗಳು. ಕವಿಯ ಪ್ರಾಣಪಕ್ಷಿ ಮತ್ತೆ ನೀಲದಲ್ಲಿ ತೇಲತೊಡಗುತ್ತದೆ. ಯಾವುದೋ ಮೂಲೆಯಲ್ಲಿ ಕುಳಿತು ತನ್ನಷ್ಟಕ್ಕೆ ಹಾಡುತ್ತದೆ. ಆದರೆ ಕೇಳುವವರು ಇಲ್ಲವಲ್ಲಾ ಎಂದು ಅದರ ಕೊರಗು; ಮತ್ತೆ ಆಶಾವಾದದ ಸಮಾಧಾನ. ಕವಿ ಇಲ್ಲಿ ತನ್ನ ಎದೆಯಳಲನ್ನು ಪಕ್ಷಿಯ ಮೂಲಕ ಮನೋಹರವಾಗಿ ಮೂಡಿಸಿದ್ದಾನೆ. 'ಮತ್ತೊಂದು ಪುಟ್ಟ ಹಕ್ಕಿಗೆ' ಕವಿತೆಯಲ್ಲಿ ಕವಿ—ಇನಿಯಳ ಗಾನವನ್ನು ಕುರಿತಿದ್ದರೂ ಇರಬಹುದು— 'ಹಾಡು ನಿಲ್ಲಿಸಬೇಡ' ಎಂದು ಬೇಡುತ್ತಾನೆ. ಏಕೆ ?—

ದೀಪ ಪಟ್ಟನೆ ಆರಿ ಹೋಗಬಹುದು !
ನನ್ನೆದೆಯ ಕತ್ತಲೆಯ ಕಣ್ಣುಕಪ್ಪಡಿ ಮತ್ತೆ
ಮೂಲೆ ಮೂಲೆಗೆ ಹೋಗಿ ಹಾಯಬಹುದು !

ಈ ಪ್ರತಿಮೆಗಳು ಕಣವಿಯವರ ಮುದ್ರೆಯನ್ನು ಒತ್ತಿಕೊಂಡೇ ಮೂಡಿವೆ. ಮತ್ತೆ ಸೂರ್ಯನ ಉದಯಾಸ್ತಗಳ ಕ್ರಿಯೆಯ ಪ್ರತಿರೂಪವಾಗಿ ಕವಿಕ್ರಿಯೆಯ ಮೋಹಕ ಚಿತ್ರ 'ಸ್ವರ್ಣಪಕ್ಷಿ'ಯಾಗಿದೆ.

ಮತ್ತೆ ಸಾನೆಟ್‌ಗಳು ; ಚಿತ್ರತರ ಚಿತ್ರಗಳು. ಮುಪ್ಪಾದ ಉಮರ ಖಯ್ಯಾಮ ನನ್ನು ಕುರಿತು ಹೇಳುವಾಗ

ಮುಪ್ಪಾದ—ಅಲ್ಲಲ್ಲ—ಹರೆಯ
ಒಪ್ಪುಂಬೂಸಿ ಕಪ್ಪುಕಾಣಿಕೆಯಿತ್ತ

ಉಮರನೆನ್ನುವುದನ್ನು ಓದಿ ಕವಿಯಂತೆ ನಾವೂ 'ಎನಿದೇನಗ್ಗಳವೊ !' ಎನ್ನಬೇಕಾಗಿದೆ. ಇದರ ಸಂದೇಶ—'ಪ್ರೇಮಜೀವಿಯು ಚಿರಂಜೀವಿ'. ಇದೇ ಉಮರನ ಒಸಗೆ. ಅಚ್ಚುಕಟ್ಟಾಗಿ ಬೆಚ್ಚಬೆಸುಗೆ ತಪ್ಪದ ಎಚ್ಚರ ಕವಿಯ ಸಾನೆಟ್ಟುಗಳಲ್ಲಿ ಎಲ್ಲೂ ಕಂದುವುದಿಲ್ಲ.

ಮಧುರಮಿಲನವನ್ನು ವರ್ಣಿಸುತ್ತಾ—

ನನ್ನ ಕನಸಿನ ಹೊನ್ನ ತಾವರೆಯ ಹೂವರಳಿ
ಎನ್ನಬೊಗಸೆಯೊಳಿಂದು ಕಂಗೊಳಿಸಿದೆ ;

ಎಂಬ ಆನಂದೋದ್ಗಾರವಾಗಲಿ, 'ಬಾಳ ಬೀದಿಗೆ ಬೆಳಕು ನುಗ್ಗಿ ಬಂತು' ಎಂಬ ಸಾಲಾಗಲಿ ಕವಿಯ ಸಹಜಸ್ಫೂರ್ತಿಗೆ ದೀವಟಿಗೆಗಳಂತಿವೆ. ಇದರಂತೆ ಕಣ್ಣೇ ಪ್ರೇಮ ದೂತನೆಂದು ರೂಪಿಸಿ—

ಯಕ್ಷ ಸಾಕ್ಷಿಗೆ ಮೇಘದೂತನಾಗೆ
ಇಂದು ಕಳಿಸಿಹೆನಕ್ಷಿ ಪಕ್ಷಿ ಹಾಗೆ.

ಎಂಬ ಉಪಮೆ, ವಿಶ್ವದಲ್ಲಿ ಮೆರೆದಿರುವ ಪ್ರೇಮವನ್ನು ಬಣ್ಣಿಸುವಾಗ

ಅಲ್ಲಿಂದಿಲ್ಲಿಗೆ ಸಾವಿರ ಮಲ್ಲಿಗೆ
ಚಿಕ್ಕೆಯ ಸೇತುವೆ ತೂಗಿಹುದು ;

ಎಂಬ ಕಲ್ಪನೆ. ಕಾಂತೆಯನ್ನು 'ನಗೆಯ ಹೊಂಗೇದಗೆಯ ಮುಗುದೆ'ಯೆನ್ನುವ ಪರಿ, 'ಮಂಜಿನರಳೆಯ ಹಿಂಜಿ ತೂರುತಿಹ ನೇಸರ', 'ನಿರೀಕ್ಷೆ'ಯಲ್ಲಿ—

ತುಂಬುಗೈ ಬಾಗಿಲಿಗೆ ಇಂಬುಗೊಟ್ಟಿದೆ, ಕಾಲ
ತುದಿಬೆರಳು ಹೊಸತಿಲಿಕೆ ಹೂವಾಗಿದೆ...
ಜಡೆಯುದ್ದಕೂ ಚಿಂತೆ ಹೊಯ್ದಾಡಿದೆ.

ಎಂಬ ರಮಣೀಯ ಕಲ್ಪನಾವಿಲಾಸಗಳು, ನವ್ಯತಂತ್ರವನ್ನು ನಿದರ್ಶಿಸುವ 'ಪಯಣ'ದ

ಕಿಟಕಿಯಲಿ ಕರವಸ್ತ್ರ ಒಲುಮೆ ಬಾವುಟದಂತೆ
ಎದೆಯ ತಡಬಡದೊಡನೆ ಮಿಡುಕುತಿತ್ತು.

ಮುಂತಾದ ಸಾಲುಗಳನ್ನು ಸಾಲುಸಾಲಾಗಿ ಇನ್ನು ಬರೆಯುವುದೇಕೆ? ಕವಿಯ ಸಹಜ ಪ್ರತಿಭೆಯ ವಿಕಾಸವನ್ನೂ ವಿಲಾಸವನ್ನೂ ಸಹೃದಯರು ಸುಲಭವಾಗಿ ಗುರುತಿಸಬಹುದಾಗಿದೆ.

## 11

ಪ್ರೇಮದ ವಿವಿಧ ಚಿತ್ತವೃತ್ತಿಗಳ ಈ ಚಿತ್ರಶಾಲೆಯಲ್ಲಿ ವಾತ್ಸಲ್ಯಕ್ಕೂ ಎಡೆ ಸಿಕ್ಕಿದೆ. ಮಗುವಿನ–

ಗಾಳಿಗಡಲಿನಲ್ಲಿ ಹುಟ್ಟು ಕಡೆಯುತಿರುವ ಕೈಗಳು
ಮಾಲಗಿದಲ್ಲೆ ಬೈಸಿಕಲ್ಲು ತುಳಿವ ಪುಟ್ಟ ಕಾಲ್ಗಳು

ಯಾರನ್ನು ತಾನೇ ಪರವಶಗೊಳಿಸವು? ಈ 'ಮುಟ್ಟಿಗೆಯ ಬಿಗಿಹಿಡಿದು ಕುಟ್ಟಿ ಗಾಳಿಯ ಒಂಟಿಕುಸ್ತಿಯಾಡುವ ಜಟ್ಟಿ'ಯನ್ನು ಯಾರು ಮರೆತಾರು ?

## 12

ಈ ಸಂಗ್ರಹದಲ್ಲಿ ಹೊಸದಾಗಿ ಸೇರಿರುವ ರವೀಂದ್ರರ ಕವಿತಾನುವಾದಗಳನ್ನು ಕುರಿತು ಒಂದು ಮಾತು. ಸಾಮಾನ್ಯವಾಗಿ ಅನುವಾದ ಕಾರ್ಯ ಸ್ವಯಂಪ್ರಭರಿಗೆ ಸಲ್ಲದ, ಪಂಡಿತವರ್ಗದವರ ದುಡಿಮೆಯೆಂಬ ತಪ್ಪು ಅಭಿಪ್ರಾಯದಿಂದಾಗಿ ಕನ್ನಡದಲ್ಲಿ ಇಂದು ಓದಿ ಆನಂದಿಸುವಂತಹ ಅನುವಾದಿತ ಕೃತಿರತ್ನಗಳ ಸಂಖ್ಯೆ ಸಣ್ಣದಾಗಿಯೇ ಇದೆ. ಅನುವಾದಕರು ಅಪವಾದಕರೆಂಬ ಅಪಪ್ರಥೆ ಹಿಂದಿನಿಂದಲೂ ಉಂಟು. ಇದು ತಪ್ಪಬೇಕಾದರೆ ಸಹಜಕವಿಗಳು ಈ ಕಾವ್ಯಕ್ಕೆ ತಾವಾಗಿಯೇ ಮುಂದಾಗಬೇಕು. ಕಣವಿಯವರ ಕಾವ್ಯಾಕ್ಷಿಯಲ್ಲಿ ಹಾಯ್ದು ಬಂದ ರವೀಂದ್ರರ ಸುಭಾಷಿತಗಳು ಕನ್ನಡದಲ್ಲಿಯೇ ಹುಟ್ಟಿಬಂದಂತೆ ಭಾಸವಾಗುತ್ತವೆ. ಇವು ಭಾಷಾಂತರವಲ್ಲವೆನಿಸುವಷ್ಟು ಸಹಜವಾಗಿ ಬಂದಿವೆ ; ಅಕ್ಷರಶಃ ಪರಿವರ್ತನಕ್ಕೆ ಹೊರಡದೆ, ಭಾವದೀಪ್ತಿಯನ್ನೂ ಶಬ್ದಗೀತಿಯನ್ನೂ ಹೊಸದಾಗಿ ಮೂಡಿಸುವ ಇವರ ಅನುವಾದದ ಕಲೆಯನ್ನು ಪುನಸ್ಸೃಷ್ಟಿಯೆಂದರೆ ಅತಿಶಯೋಕ್ತಿಯಾಗಲಾರದು. ಉದಾಹರಣೆಗೆ :–

1. ನುಗ್ಗಿ ಬಂದಿತು ಎಲ್ಲ ಲೋಕದಾನಂದವದು
   ನನ್ನ ದೇಹದ ಗೇಹರಚನೆಗೆಂದು;
   ಮುದ್ದನಿಟ್ಟವು ಬಾನ ಬೆಳಕು ಬಿಟ್ಟೂಬಿಡದೆ
   ಅವಳು ಎಚ್ಚರಗೊಂಡು ಏಳುವರೆಗು.

   ('ನುಗ್ಗಿ ಬಂದಿತು ಎಲ್ಲ ಲೋಕದಾನಂದವದು')

2. ನಮ್ಮ ತೋಟದ ನೆಳಲ ಹಸುರು ಮೇಯಲು ಬಹವು
   ಅವಳ ಮುದ್ದಿನವೆರಡು ಕುರಿಮರಿಗಳು:
   ಹಾದಿ ತಪ್ಪುತ ನಮ್ಮ ಗೋಧಿ ಹೊಲಕೈತರಲು
   ಅಕ್ಕರತೆ ತೋಳಿನಲಿ ತೆಗೆದಪ್ಪಲು !

   ('ನಾವಿಬ್ಬರು')

ನೀರಸ ಅನುವಾದಗಳಿಂದ ಬೇಸತ್ತ ಜನ ಇಂತಹ ಸುರುಚಿರ ಅನುವಾದಗಳನ್ನು ಕಂಡಾಗ ಹಿಗ್ಗುವುದೂ, ಇಂತಹವನ್ನು ಮತ್ತೆ ಮತ್ತೆ ಬಯಸುವುದೂ ಹೆಚ್ಚಲ್ಲ.

13

ಕಣವಿಯವರ ಈ ಕವಿತಾಸಂಗ್ರಹ ಹತ್ತು ವರ್ಷಕ್ಕೆ ಹಿಂದೆ ಬರೆದುದು. ಅವರ ಅಂದಿನ ಮನೋಗತಿಯ ಒಂದು ಸುಂದರ ಪ್ರತಿಬಿಂಬವಾದ ಇದರಲ್ಲಿ ಜೀವನದ ದುಷ್ಕರ ಸಮಸ್ಯೆಗಳ ಜಂಜಾಟವಿಲ್ಲ, ನವ್ಯಧ್ವನಿಯ ಘಂಟಾಘೋಷವಿಲ್ಲ. ಆದರೂ ಸಹಜ ಕವಿತಾ ಗುಣಗಳ ಆವಿಷ್ಕಾರವಿದೆ; ಜಾಗೃತ ಕವಿಚೈತನ್ಯದ ಪರಿಷ್ಕಾರವೂ ಇದೆ;

ಆವುದೋ ಮೂಲೆಯಲಿ ಕುಳಿತು ಭೂರಂಗದಲಿ
ನಡೆವ ಅಕಟೋವಿಕಟ ನಾಟಕದ ಹಿನ್ನೆಲೆಯ
ಬಗಿದು ನೋಡುವ ಬಯಕೆ ಬಗೆಯೊಳಿದೆ.

ಎಂಬ ಧ್ಯೇಯದ ಪ್ರಕಟನೆಯೂ ಇದೆ. ಮನ್ನಣೆಯು ಅವರನ್ನು ಸುತ್ತಿನಿಂದಲೂ ಮುತ್ತುತ್ತಿರುವಾಗಲೂ ಆ ಧ್ಯೇಯ ಬೇಗ ಫಲಿಸಲಿ, ನಾಡಿನ ಕಾವ್ಯಕುಂಜ ಹುಲುಸಾಗಲಿ. ಎಂದಿಷ್ಟೇ ಈ ಗೆಳೆಯನ ಹಾರೈಕೆ.

15-9-1962

ದ. ರಾ. ಬೇಂದ್ರೆ

# 'ನೆಲ–ಮುಗಿಲು'

'ನೆಲ—ಮುಗಿಲು' ಕವನ ಸಂಗ್ರಹವು ಶ್ರೀ ಚೆನ್ನವೀರ ಕಣವಿಯವರ ಏಳನೆಯ ಕೃತಿ. ಅವರ ಮೊದಲ ಕವನ ಸಂಗ್ರಹ 'ಕಾವ್ಯಾಕ್ಷಿ' ಹುಬ್ಬಳ್ಳಿಯಲ್ಲಿ ಪ್ರಕಟವಾಯಿತು ; ನಾನು ಸೊಲ್ಲಾಪುರದಿಂದ ಅದಕ್ಕೆ 'ಮುನ್ನುಡಿ' ಬರೆದು ಕಳುಹಿದೆ. ಅದು 20-4-49ರ ಮಾತು. ಈಗ 1965ರ ಅಗಸ್ಟ ತಿಂಗಳಲ್ಲಿ ಧಾರವಾಡದಿಂದ 'ನಾಲ್ಕುಮಾತು' ಬರೆಯುತ್ತಿದ್ದೇನೆ ; ಕವನ ಸಂಗ್ರಹವು ಮೈಸೂರಿನಲ್ಲಿ ಪ್ರಕಟವಾಗಲಿದೆ. ಈ ಕವಿ ತನ್ನ 'ಸಪ್ತ—ಪದಿ' ಯಿಂದ ಏಳಿಗೆ ಪಡೆದಿದ್ದಾನೆ ಹದಿನಾರು ವರ್ಷಗಳಲ್ಲಿ. ಈ ಪ್ರೌಢತೆಗೆ ಮುನ್ನುಡಿಯಿರುವುದು ಅನವಶ್ಯಕ. ಆದರೆ ವಿನಯ, ಸಂಪ್ರದಾಯದ ಪ್ರಾರಬ್ಧ ಇದು ಎಂಬಂತೆ 'ನಾಲ್ಕುಮಾತು' ಸಹೃದಯತೆಯಿಂದ ಸೇರಿಸುತ್ತಿದ್ದೇನೆ—ಕವಿಯ ಪ್ರೀತಿಯ ನಿಮಿತ್ತವೂ ಹೌದು.

ಕಣವಿ ಅವರ ಕಾವ್ಯ-ಶ್ರದ್ಧೆ ಇಲ್ಲಿ ನಿಷ್ಠೆಯ ಕಣ್ಣು ತೆರೆದು ತೋರಿದೆ. ಕಾವ್ಯಾಭ್ಯಾಸಿಗಳು 'ವಿನಾಯಕ—ಅಡಿಗ'ರ ತರುವಾಯ 'ಕಣವಿ—ಶಿವರುದ್ರಪ್ಪ' ಎಂತಲೂ ಹೆಸರಿಸುತ್ತಿದ್ದಾರೆ. ಸ್ವತಃ ಶ್ರೀ ಶಿವರುದ್ರಪ್ಪನವರು 'ನಿಸ್ಸಾರ ಅಹಮ್ಮದ—ಚಂದ್ರಶೇಖರ' ಎಂದು ಮುಂದಿನ ಜೋಡಿ ಸೂಚಿಸಿದ್ದಾರೆ. ಯಾರೋ ಮುಂದೆ ಹೆಜ್ಜೆಯಿಟ್ಟು, 'ಚಿತ್ತಾಳ—ಕಂಬಾರ' ಎಂದೂ ಮಾತು ಪುಟಿಸಿದರು. 'ಶ್ರೀ – ಶ್ರೀನಿವಾಸ' 'ಪೈ-ಪಂಜೆ' ಗಳ ಈ ಕಾವ್ಯರಥಕ್ಕೆ ಎಷ್ಟು ಜೋಡುಗಾಲಿಗಳೋ ಎಣಿಸಿದವರಾರು? 'ನಕ್ಕಳಾತಾಯಿ!'

ಶ್ರೀ ಕಣವಿಯವರು ತಮ್ಮ ಗದುಗಿನ ಕವಿ ಸಮ್ಮೇಳನ ಪೀಠದಿಂದ ಮಾಡಿದ ಕಾವ್ಯ ಸಿಂಹಾವಲೋಕನದಲ್ಲಿ ತಮ್ಮನ್ನೂ ವಿಮರ್ಶೆಗೆ ಗುರಿಪಡಿಸಿಕೊಂಡು ತಮ್ಮ ಹಂತ ಹೇಳಿದ್ದಾರೆ. ಶ್ರೀ ವಿನಾಯಕ ಗೋಕಾಕರು ಹಿಂದೆ ಚೆನ್ನಮಲ್ಲ ಹಿಡಿದ ಹಾದಿಯಲ್ಲಿ ಇಂದು ಚೆನ್ನವೀರ ಮುಂದಾಗುತ್ತಾರೆ—ಎಂದು 'ಭಾವಜೀವಿ'ಯ ಸಂದರ್ಭದಲ್ಲಿ ಸೂಚಿಸಿದ್ದರು. ಶ್ರೀ ಕೈಕಿಣಿಯವರು 'ಮಣ್ಣಿನ ಮೆರವಣಿಗೆ' ಎಂಬ ಕವನ ಸಂಗ್ರಹಕ್ಕೆ ಹಿಂದೆ ಮುಂದೆ ಮಶಾಲು ಎತ್ತಿ ಕವಿ ಕಣವಿಯವರು ಸಂಕ ದಾಟುತ್ತಿರುವ ಚಮತ್ಕಾರವನ್ನು ವಿವರಿಸಿದ್ದಾರೆ. ಶ್ರೀ ಕೀರ್ತಿನಾಥ ಕುರ್ತಕೋಟಿಯವರು ನವ್ಯ ಕವಿ ಪರಂಪರೆಯ ಮಣಿಮಾಲೆಯಲ್ಲಿ ಈ ಕವಿಯ ಸ್ಥಾನವನ್ನು ಗುರುತಿಸಿದ್ದಾರೆ. ನಾಳಿನ ಕವಿಗಳು ಕಣವಿಯವರ ಆಶೀರ್ವಾದ ಬಯಸುವ ಹದಕ್ಕೆ ಕಾಲ ಬಂದಿರುವಾಗ ನನ್ನ 'ನಾಲ್ಕು—ಮಾತು' ಯಾವ ಮೀಸಲು ಮುರಿಯಬೇಕು ? 'ಕಾವ್ಯಾಕ್ಷಿ'ಯ ಮುನ್ನುಡಿಯಲ್ಲಿ ನಾನು ಹೇಳಿದ ಮಾತು ಇಂದೂ ಹೇಳಬಹುದು ; ಜಾತಿ ಅದೇ. ಆದರೆ ಒಗರು—ಪೊಗರು ಕಣ—ಕಣದಲ್ಲಿ ಹಿಂಡ

ಗೊಂಡಿದೆ. ವಿನಯವೂ ಅಷ್ಟೇ ದಿಟವಾಗಿದೆ. ವಿನಯ ಹಳಸುವ ಬದಂಕಲ್ಲ, ವಿಶಿಷ್ಟಕ್ಕೆ ತೊಡಕಲ್ಲ, ಇದು ಧಾರವಾಡ ತತ್ವ !

ಧಾರವಾಡ ! ಭೂಮಿ ಅಂದರೂ, ಭಾರತ ಅಂದರೂ, ಕರ್ನಾಟಕ ಎಂದರೂ ಅಷ್ಟೆ, ಒಂದು ನೆಲದ ಒಂದು ಮಂದಿ ; ಒಂದೇ ತನು— ಮನ—ಧನ ಎಂಬಂತೆ ಒಂದು 'ಜನ' ಆಗುವದು ಅವಸರದ ಅಡಿಗೆ ಅಲ್ಲ, ಕಾಲದ ಪಾಕ. ಹೂಲಿ, ಕಟ್ಟಿ, ರೊದ್ದ, ಅರಟಾಳ, ಕುಮಾರಸ್ವಾಮಿ, ಆರೂಢರು, ಫಾಟಕ, ಸಕ್ಕರಿ, ಶರೀಫ ಸಾಹೇಬ, ಗಳಗನಾಥ, ಕೆರೂರ, ಆಲೂರು ಹೀಗೆ ಹೆಜ್ಜೆ ಇಕ್ಕುತ್ತ. ಪರಾಕ್ರಮಣ ತಟ್ಟು ಮಾಡಿ, ಸಕಲ ಸಂಕ್ರಮಣ ಗಳಿಗೂ ವಿದ್ಯಾಕ್ಷೇತ್ರವನ್ನು ಹದಮಾಡುವದು ಜಿಗುಟು ಶ್ರದ್ಧೆಯ ಕಾರ್ಯ. ಇದು ಬೆವರಿನಿಂದ ಬೆಳೆಸಿದ ಪಯಿರು. ಇರುಳು ಕುಯ್ದುಕೊಂಡು ಬಂಡಿ ಹೇರಿ, ಹಗುರುಗಾಲಿ ನಿಂದ ಹೊರಟು ಹೋಗುವ ಧೂರ್ತರ ಚಮತ್ಕಾರವಲ್ಲ. ಸುಮ್ಮನೆ ರೂಪಗೊಂಡಿಲ್ಲ ವಿಶ್ವವಿದ್ಯಾಲಯದ ಪಾವಟೆ—ಗಿರಿ ; ಮೈಲಾರಲಿಂಗದ ವಿದ್ಯಾಗಿರಿ ; ಕೃಷಿಕಾಯಕದ ಎತ್ತಿನ ಗುಡ್ಡ-ವೃಷಭಗಿರಿ. ಅಥಣಿಯ ಪಾದಗಳು ಸದಾಶಿವ ಪೇಟೆ (ಹಾವೇರಿ ಪೇಟೆ)ಯ ಬಯಲಿನಲ್ಲಿ ನಿಲಯ ನೆಲಸಬೇಕಾದರೆ ಅನ್ನದಾನ ಎಷ್ಟು ; ಶ್ರದ್ಧಾದಾನ ಎಷ್ಟು ; ಬೇಂದ್ರೇನ 'ಅಂಬಿಕಾತನಯ' ನಂತೆ ಕಣವಿಯ ಚೆನ್ನವೀರನಿಗೂ ಇವೇ, ಇಂಥವೇ ಮಹಾ ಪ್ರೇರಣೆಗಳು. ಒಬ್ಬ ಸರ್ವಜ್ಞನಿಗಾಗಿ ಒಂದು ಕೊರಡು ತೇಯ್ದು ಸುಗಂಧವಾಗಿ ಹೋಯಿತು. ಒಂದು ವಚನಶಾಸ್ತ್ರ ಕಟ್ಟುವ, ಬಿಚ್ಚುವ ಕಾಯಕದಲ್ಲಿ ಒಂದು ದೇಹ ಮಣ್ಣು—ಭಸ್ಮವಾಗಿ ಹೋಯಿತು. ಮಿಂಚಿನ ಬಳ್ಳಿಯ 'ಸಂಚಿಕೆ', 'ನಡೆದು ಬಂದ ದಾರಿ'ಯ ಮನ್ವಂತರ, ಬುನಾದಿ ಇಲ್ಲದೆ ಕಟ್ಟಿದ ಕಟ್ಟಡಗಳೆ ? ಹಿಂದೆ 'ಪ್ರಭಾತ' ಕಾವ್ಯ ಆಗಿ ಹೋಯಿತು, ಇಂದು 'ಸಂಕ್ರಮಣ' ಕಾವ್ಯ ಬಂದಿದೆ. ಕಾವ್ಯಾನುಭವ ಮಂಟಪ, ಸಾಹಿತ್ಯ ಮಂಟಪಗಳು 'ನಾಡಹಬ್ಬ'ದ ಹಂದರಗಳ ಮರಿ. 'ವಾಗ್ಭೂಷಣ' ನುಂಗಿ ನಿಂತಿ ರುವ 'ವಿದ್ಯಾವರ್ಧಕ ಸಂಘ'ವು ಬರುವವರಿಗೆ ಹರವು ; ಹೋಗುವವರಿಗೆ ತೆರವು. ಇದು ಧಾರವಾಡ.

ಶ್ರೀ ಕಣವಿಯವರನ್ನು ಸುತ್ತಿಕೊಂಡ ಕಾರ್ಯ—ಪ್ರಕಾಶನ, ಪ್ರಚಾರ ಉಪನ್ಯಾಸ, ಗೆಳೆತನದ ಸಹಕಾರ್ಯದ ಚಟುವಟಿಕೆಗೆ ಮೊದಲು ಒಂದೊಂದಕ್ಕೂ ಸಾವಿರ ಬಿಸಿ ಉಸಿರು ಆರಿ, ಹಾರಿ ಹೋಗಿವೆ. ಧಾರವಾಡಕ್ಕಿಂತ ಹೆಚ್ಚು ಮಳೆ, ಹುಚ್ಚು ಹಸಿರು, ದಾಂಡೇಲಿಯ ದಂಡಕಾರಣ್ಯದಲ್ಲಿ ರಾಮಾಯಣ ಕಾಲದಿಂದ ಇದ್ದೇ ಇದೆ. ಶಕ್ತಿಮೀರಿ ದುಡಿಯುವ ವ್ಯಕ್ತಿ ; ಭಕ್ತಿ ಸೋಸಿ ನುಡಿಯುವ ಯುಕ್ತಿ ; ಎಲ್ಲಿಂದ ತರಬೇಕು ? ಬೆಳುದಿಂಗಳ, ಮಲಯಾನಿಲ, ಬೆಲೆಕೊಟ್ಟು ಇಂದಿನ ಯಂತ್ರವಿಜ್ಞಾನ ಯುಗದಲ್ಲಿ ತರಬಹುದೋ ಏನೋ ! "ಎಚ್ಚರಿಕೆ, ಭಾಗ್ಯ ಯಾರಿಗು ಸ್ಥಿರವಲ್ಲ, ಎಚ್ಚರಿಕೆಚ್ಚರಿಕೆ" ಪಡಿನುಡಿ ಗುಡು ಗಿದರು ಮಾದಾವೀಡು ಕೃಷ್ಣರಾಯರು ; ಧಾರವಾಡದ ಹಳೆಕೋಟೆಯ ಮಣ್ಣು ಸೆಟೆದು ಹೋಯಿತು ನಡುಗಿ : 'ವಿನಾಯಕ' ಹಾಡಲಿ, 'ಕಣವಿ' ಹಾಡಲಿ, ಧಾರವಾಡ ತತ್ವ ಇದು,

ಇಂದು ಹುಬ್ಬಳ್ಳಿಯ ಹೂ, ಧಾರವಾಡದ ದಾರ ಸರಗೊಳಿಸುವ ಕಾಲ ಬಂದಿದೆ. ಸೂಜಿ ಕಾಯಕದ ಕುಶಲ ಕರ್ಮವು ಚುಚ್ಚುಮದ್ದಿನಂತೆ ಚುಟುಕಿಯ ಕೆಲಸವಲ್ಲ. ಪ್ರಕೃತಿಯನ್ನು ವಿಕೃತಿಗೊಳಿಸುವ ಚೆಂದಗೇಡಿತನವನ್ನು ಚಾತುರ್ಯದಿಂದ ಬದಿಗೊತ್ತಿ, ಸಂಸ್ಕೃತಿಯ ಅಧಿಕಾರಕ್ಕೆ ಆಮಂತ್ರಣವೀಯುವದು ಮೈತುಂಬ ಎಚ್ಚರದ ಕೆಲಸ. ಅದು ಶೀಲದ ಚಾರಿತ್ರಿಕ ಸಾಹಿತ್ಯ. ಶೀಲದ ಮೂಲ ಸತ್ವ ; ಒಣಹಟ, ಕೆಟ್ಟ ಛಲ ಅಲ್ಲ. ಇಂಥ ಸತ್ವದಲ್ಲಿ ಉನ್ಮುಖ ಶ್ರದ್ಧೆ ಹುಟ್ಟುತ್ತದೆ. ಅಷ್ಟೇ ಬೇರು ನೆಲದೊಡಲಿಗೂ ಬಿಟ್ಟಿರುತ್ತದೆ. ಇದು ಕವಿಜೀವದ ವೀರ್ಯ. ವೀರ್ಯವೇ ನಿಷ್ಠೆಯಿಂದ ಸಾಕಾರವಾಗುತ್ತದೆ ; ಹಠದ ತಿಪ್ಪರಲಾಗವಲ್ಲ ; ಛಲದ ತಲೆತಿರುಕತನವಲ್ಲ. ಇಂಥ ವೀರ್ಯಕ್ಕೆ ಅಖಂಡ ಸ್ಮರಣೆಯ ಸೆಲೆ ಹತ್ತುತ್ತದೆ. ಅಲ್ಲಿಯ ಅವಧಾನ ಮಹಾನಿಧಾನ, ಮಹಾಪ್ರಸಾದ. ಈ ಒಲವು ಕಣವಿಯವರ ಕವನಗಳಿಗಿದೆ. ಸಾಹಿತ್ಯ ನೆಲ—ಬಾನುಗಳಿಗೆ ಹೊಂದಿಕೆ ಮಾಡುವ ಮುಗಿಲಿನ ಮಿಂಚಿನಾಟ. ಈ ದ್ಯಾವಾಪೃಥಿವಿಯ ಪೂಜಕ ಇಲ್ಲಿಯ ಕವಿ.

ಇನ್ನು ಸದ್ಯದ ಸಂಗ್ರಹ :

'ನೆಲ—ಮುಗಿಲಿ'ನ ಕವನಗಳು ಪ್ರೇರಣೆ, ಪ್ರತಿಮೆ, ಪ್ರತಿಬಿಂಬ ಎಂದು ಮೂರು ಮುಖವಾಗಿವೆ. ಮೂರು ಭಾಗಕ್ಕೂ ನಾಕು ಸಾಲಿನ ಬಿರುದು—ಬಾವುಲಿ ಇದೆ. ಪ್ರೇರಣೆಯಲ್ಲಿ ಹಲವು ಅದ್ಭುತ ಪ್ರತಿಮೆಗಳಿವೆ; ಪ್ರತಿಮೆಗಳಲ್ಲಿ ಯಾವ ಪ್ರೇರಣೆ ಅಡಕವಾಗಿಲ್ಲ? ಪ್ರತಿಬಿಂಬದಲ್ಲಿ ಕವಿಯ ಕಲ್ಪನೆಯಾಡುವ ಗರಡಿಮನೆಯ ಅಂಕಣಗಳಿವೆ, ಎಲ್ಲಿ ನೋಡಿದರೂ ಧಾರವಾಡದ ಹೂರಣ. ಊರೂರಿಗೆ ಹತ್ತಿ ಹರಿಯುವ ಹೊಳೆ ಒಂದೆಯಾದರೂ ಕ್ಷಣ ಕ್ಷಣಕ್ಕೂ ಅದರ ನೀರು ಬೇರೆ. 'ಕಾವ್ಯಾಕ್ಷಿ'ಯಲ್ಲಿ ಇದೇ ನೆಲ ಮುಗಿಲು, 'ನೆಲ—ಮುಗಿಲಿ'ನಲ್ಲಿ ಅದೇ 'ಕಾವ್ಯಾಕ್ಷಿ', ಆದರೆ ಕೆಚ್ಚು ಹೆಚ್ಚು. 'ವರ್ಣನಾ ನಿಪುಣ : ಕವಿ : !'

ಕಣವಿಯವರ ಕವನ ಹತ್ತುಗಡೆ ಹರಿದುಕೊಳ್ಳದೆ, ಸರ್ವಸಮಯಗಳ ಸಮನ್ವಯ ಒಳಗೊಳ್ಳಲು ತವಕಪಡುತ್ತದೆ : ಅದು ಅದರ ಛಂದ.

'ಮೃತ್ಯುಂಜಯ' ರಿಗೆ ಪುಷ್ಪಾಂಜಲಿ ಅರ್ಪಿಸಿದ ಕೈಗಳು ಪಾಂಡಿಚೇರಿಯ ಸಮಾಧಿಗೂ ಮುಗಿದುಕೊಳ್ಳುತ್ತವೆ. 'ಕಾಲ ನಿಲ್ಲುವದಿಲ್ಲ' ಓಡುವದಿಲ್ಲ. ಅದು ನೋಡುತ್ತದೆ; ಸಾಕ್ಷಿ. ಅಕ್ಷಿ ಅಕ್ಷಿಗಳ ಪ್ರತ್ಯಕ್ಷೀಕರಣದಲ್ಲಿ ಮೂಡುವ ಕಿರಣಗಳ ಬೆಳಕೇ ಬೇರೆ. ಈ ತಾಳ್ಮೆಗೂ ವಿಡಂಬನ ಕಲೆ ಗೊತ್ತಿದೆ. 'ಜಗದೇಕಮಲ್ಲ' ಕವನದಂತೆ 'ಕಣ್ಣಿರುವಷ್ಟು ನೋಟ' ಎಂಬ ಸಾನೆಟ್ಟಿನಲ್ಲಿಯೂ ಅದು ಹಣಕಿಹಾಕಿದೆ. 'ಶೀಲವಂತರ ಓಣಿಯಲ್ಲಿ ಕಣ್ಮರೆ ಕೋಳಿ' ಒಂದೇ ಸಾಲು ಸಾಕು. ಪಂಚಶೀಲವೇ ಬಿಕ್ಕೆ ಬೇಡುತ್ತಿರುವಾಗ ಕೋಳಿಯ ಕೂಗು ಕೇಳುವವರಾರು ? ಹುಚ್ಚು ಕುರಿಮರಿ ಇನ್ನು ಜೋಪಾನ ಉಳಿದರೆ, ಅದೇ ಶೀಲ. ಕವಿಯ 'ಮೇಘೋಪಾಸನೆ' ಇಲ್ಲಿಯೂ ಮುಂದೆ ಸಾಗಿದೆ. 'ದೀಪಧಾರಿ'ಯ ಸುಳಿಯು 'ರಂಜನೆ'ಯಾಗಿ ಬಂದಿದೆ, 'ಆಕಾಶವಾಣಿ'ಯ ಪಂಚಾಂಗದ ಕರೆಗೆ ಓಗೊಟ್ಟ

ಕಾಲೋಚಿತ ಕವನಗಳೂ ಇಲ್ಲಿ ಬಂದಿರುವವು. 'ನೆಹರು' ಅವರ ಸ್ಮೃತಿಯ ಕವನಗಳು ಬಾಳಿಕೆ ಬರುವಂಥವಾಗಿವೆ. 'ಭೂಮಿತೂಕ' ಶ್ರದ್ಧಾಪುಂಜ.— 'ಧಾರವಾಡದಲ್ಲಿ ಮಳೆ ಗಾಲ' ಸುಂದರವಾದ ವರ್ಣಕ ಕವಿತ್ವ. 'ಪ್ರೇರಣೆ'ಯ 23 ಕವನಗಳಿಗಿಂತ 'ಪ್ರತಿಮೆ'ಯ 24 ಕವನಗಳು ಬಹಳೇ ಅಡಕವಾಗಿರುವವರಿಂದ ಬಲವಾಗಿವೆ. ಈ ಸಂಗ್ರಹಕ್ಕೆ ಹೆಸರುಗೊಟ್ಟ 'ನೆಲೆ—ಮುಗಿಲು' ಈ ವಿಭಾಗದ ಮೊದಲ ಕವನ. 'ಆದರೀಗಲೇ ಅದರ ಇತಿವೃತ್ತವನು ಬರೆಯದಿರು' ಎನ್ನುತ್ತಾನೆ ಕವಿ. ಆಗಲಿ, ಆದರೆ ನೆಲ—ಮುಗಿಲುಗಳಾ ಚೆಗೆ ಇರುವ 'ಬಾಸಿನ ಅತೀಂದ್ರಿಯ ಸ್ಪರ್ಶ'ವನ್ನು ಕವಿ ಮರೆತಿಲ್ಲ. ವಾಚಕರೂ ಮರೆಯ ಬಾರದು. 'ವರ್ತುಳ'ದಲ್ಲಿ ಅತೀಂದ್ರಿಯ ಸ್ಪರ್ಶವಿದೆ. ಅಂತೆಯೇ 'ನಾದದೊಳಗೂ ಪ್ರತಿಮೆ' 'ಪ್ರಣಯ—ಪ್ರೀತಿ'ಯು 'ಪ್ರೀತಿಯ ಪಣತಿ' ಆಗಬಹುದಿತ್ತೇನೋ?

ಕತ್ತಲೆಯ ಗರ್ಭದಲಿ ಬಿದ್ದ ಬೆಳಕಿನ ಬೀಜ
ಬೆಳೆದು ಬ್ರಹ್ಮಾಂಡವನೆ ತಬ್ಬಿಕೊಂಡಿತು ಸಹಜ

'ದಾಹ'ದ ಕೊನೆಯಲ್ಲಿ ಸಂಕಲ್ಪ—ವಿಕಲ್ಪ ತಾಕಲಾಡಿವೆ. 'ಉಪ್ಪು—ನೀರಿ'ನಲ್ಲಿ ಧುಡಿಂಗನೆ 'ಹಿಮಗಿರಿ ತಿಮಿಂಗಲ' ಬಂದು 'ತಪ್ಪು ಯಾರದು? ' ಎಂದು ಕೇಳುವಂತಾ ಗಿದೆ. 'ಕತ್ತಲೆ—ಬೆಳಕು', 'ರಾತ್ರಿ'ಗಳಲ್ಲಿ ಕರ್ಟು ಆಗೀಗ ಫಕ ಫಕ ಮಾಡುವದು. 'ಕತ್ತಲೆಗೂ ಕಣ್ಣುಂಟು' ಆದರೆ 'ತೆರಬೇಕು ತಕ್ಕ ಬೆಲೆ'. ಕ್ರಮ—ಶ್ರಮಗಳ 'ಹಂಸಕ್ಷೀರ' ನ್ಯಾಯವು ಹನ್ನೊಂದು ಪ್ರತಿಮೆಯಲ್ಲಿ ಮೂಡಿದೆ. ಮೂರು ಸಾನೆಟ್ಟುಗಳು ವಿಶ್ವವಿದ್ಯಾಲ ಯಕ್ಕೆ ಮುಡಿಪಾಗಿವೆ. 'ಬಿಸಮಿಲ್ಲಾರ ಶಹನಾಯಿವಾದನ ಕೇಳಿ' ಎಂಬ ಸಾನೆಟ್ಟು ಔಚಿತ್ಯ —ಸುಂದರವಾಗಿದೆ ಅಭಿವ್ಯಕ್ತಿಯಲ್ಲಿ. ವಿಶ್ವೇಶ್ವರಯ್ಯನವರಿಗೆ ವಂದಿಸಲು ಬಾಗಿದ ತಲೆ ಯಲ್ಲಿ—ನಮ್ಮ ಮಂದಿಯ ನೆನಪಾಗಿ 'ಜಂಗುತಿಂದವರಿವರು' ಎಂಬ ಮುಕ್ತಾಯವು ಘಡಾರೆಂದು ಕಪಾಳಕ್ಕಪ್ಪಳಿಸುತ್ತದೆ. 'ಉತ್ತಂಗಿ' 'ಗೋವಿಂದ ಪೈ'ಗಳಿಗೆ ತಕ್ಕ ಕಾಣಿಕೆ ಒಪ್ಪಿಸಿ, 'ದ. ಬಾ. ಕು. ಸ್ಮೃತಿ'ಯಲ್ಲಿ ದಿವಂಗತ ಶಿವೇಶ್ವರ ದೊಡ್ಡಮನಿ, ಹಲಸಂಗಿ ಚೆನ್ನ ಮಲ್ಲಪ್ಪ, ಬಸವನಾಳ ಇವರನ್ನು ಕುರಿತು ಈ ಕವಿ ಈ ಮೊದಲು ಬರೆದ ಕವನಗಳ ನೆನಪು ಮರುಕಳಿಸುತ್ತದೆ. 'ಹಳಕಟ್ಟಿ'ಯವರಿಗರ್ಪಿತವಾದ ಸಾನೆಟ್ಟಿನಲ್ಲಿ ವಿಶ್ವೇಶ್ವರಯ್ಯ ನವರ ಸಾನೆಟ್ಟಿನಂತೆ ಕೊನೆಯ ಸಾಲಿನಲ್ಲಿ ಚೇಳಿನ ಕೊಂಡಿ ಇದೆ.

'ಏಳು ಸಲ ಕರೆದರೂ ಎಚ್ಚರಾಗದು ನಮಗೆ'.

'ಪ್ರತಿಮಾ' ಕವನಗಳಲ್ಲಿ ಅರ್ಥಯತಿಗೆ ತಕ್ಕ ಪ್ರಸ್ತಾರ ರಚನೆ, ಶಿಥಿಲೋಚ್ಚಾರದ ಸ್ವಾಚ್ಛಂದ್ಯ, ಪಾದಾಂಶಯತಿಯ ರಾಹಿತ್ಯವು ಶಬ್ದಗಳನ್ನು ಕತ್ತರಿಸುವಂತಾದುದು ನವೀನವಲ್ಲದಿದ್ದರೂ ಗಮನಾರ್ಹವಾಗಿದೆ.

'ಪ್ರೇರಣೆ'. 'ಪ್ರತಿಮೆ'ಗಳು ಕವಿಯ ಭಾವಾರ್ಥ ವಿಸ್ತಾರವನ್ನು ಬಣ್ಣಿಸಿದರೆ, 'ಪ್ರತಿಬಿಂಬ'ವು ಯಥಾರ್ಥವಾಗಿ ಅವರು ತೀಡಿರುವ 'ಬಿಂಬ'ಗಳನ್ನು ಪ್ರಕಟಿಸುವದು. ಶೇಕ್ಸಪಿಯರ್, ಬರ್ನ್ಸ್, ಎಲಿಝಬೆಥ್ ಜೆನಿಂಗ್ಸ್, ರವೀಂದ್ರ ಇವರ ಮೂಲಗಳ ಅನು

ವಾದಗಳಿವೆ ಈ ಭಾಗದಲ್ಲಿ. ರವೀಂದ್ರರವು ಹೆಚ್ಚು, ಮೂಲ ಮಾತ್ರ ಇಂಗ್ಲೀಷು. ಕನ್ನಡದಲ್ಲಿ ರೂಢವಾಗಿರುವ ಭಾಷಾನುವಾದಗಳ ಉಚಿತವಾವ ಮಾದರಿಗಳಿವೆ ಇಲ್ಲಿ. 'ಆರಿದ ಕುಲುಮೆ'ಯು ಗಾಂಭೀರ್ಯಕ್ಕೂ, 'ನನಗೆ ನನ್ನವಳೆ' ಎಂಬುದು ಲಘು ವಿಲಾಸಕ್ಕೂ ಮಾದರಿಯಾಗಿವೆ.

'ನೆಲ—ಮುಗಿಲು' ಸಂಗ್ರಹವು ಕವಿಯ ಹಳೆಯ ಗುಣಗಳ ಜತೆಗೆ ಹೊಸ ಬೆಡಗನ್ನೂ ಮೈಗೂಡಿಸಿಕೊಂಡಿದೆ. ಸದ್ಭಾವದ ಶ್ರದ್ಧೆಯು ಇಲ್ಲಿ ಗಟ್ಟಿ ಕಾಳಾಗಿದೆ. ಧಾರವಾಡಕ್ಕೆ ಅವರು ಉಪಕೃತರಿರುವಂತೆ ಧಾರವಾಡವೂ ಅವರಿಗೆ, ಕವನಗಳಿಗೆ ಉಪಕೃತ ಎನ್ನಬಹುದು.

'ಕಾವ್ಯಾಕ್ಷಿ'ಗೆ ನಾನು ಮುನ್ನುಡಿ ಬರೆದಾಗ ಕಣವಿಯವರ ಪರಿಚಯ ನನಗಿರಲಿಲ್ಲ. ಕವಿಯನ್ನು ಅವರ ಗೆಳೆಯರೊಂದಿಗೆ ವಿನಾಯಕ ಗೋಕಾಕರೊಂದಿಗೆ ಆ ಮೇಲೆ ಕಂಡೆ. ಮುಂದೆ ಅವರು ಗುಂಪಿನ ಗೆಳೆಯರಾಗಿದ್ದ ಒಂದು ಮನೆತನಕ್ಕೆ ಅಳಿಯಂದಿರಾದರು. ಕೇಳುವದೇನು ? ಈ ಮದಲಿಂಗನ ಮನೆಯ ಕತೆ, ಮಕ್ಕಳ ಕತೆ—'ಮಧುಚಂದ್ರ' ಕೂಡ ಬಂತು.–ಕನ್ನಡ ನಾಡೂ ಬಲ್ಲದು. ಕವಿ 'ನೆಲ–ಮುಗಿಲು' ಸಂಗ್ರಹದಲ್ಲಿ 'ಅಂಬಿಕಾತನಯದತ್ತ'ರನ್ನು ಹಲವು ಕಡೆಗೆ ನೆನೆಸಿದ್ದಾರೆ. ಅವರನ್ನು ರವೀಂದ್ರರ ಬದಿಗೆ ಕುಳ್ಳಿರಿಸಿದ್ದಾರೆ. 'ದ.ರಾ.ಬೇಂದ್ರೆ'ಯವರಿಗೆ ತಮ್ಮ 'ದೀಪಧಾರಿ' ಕವನ ಸಂಗ್ರಹ ಅರ್ಪಿಸಿದ್ದಾರೆ. 'ಅಹೋ ರೂಪಂ ಅಹೋ ಧ್ವನಿಃ' ಎಂದು ವಿಮರ್ಶಕ ಬಂಧುಗಳು ಈ 'ನಾಲ್ಕುಮಾತಿ'ಗೆ ಸದ್ದು ಮಾಡಿದರೆ ಆ ಪ್ರಾಜ್ಞರಲ್ಲಿ ನಾನು ಕ್ಷಮೆ ಬೇಡುತ್ತೇನೆ.

ಜಾ. ಗೋ.

# 'ವಿನಾಯಕರಿಗೆ ವಂದನೆ'

ಸಾಮಾನ್ಯವಾಗಿ ಯಾರಿಗಾದರೂ ವಂದನೆಯನ್ನು ಸಲ್ಲಿಸುವಂಥ, ಅಥವಾ ಗೌರವವನ್ನು ಸೂಚಿಸುವಂಥ, ಅಥವಾ ಶುಭಾಶಯಗಳನ್ನು ವ್ಯಕ್ತಪಡಿಸುವಂಥ ಕವನಗಳು ತಮ್ಮ ಕಾವ್ಯಗುಣದಲ್ಲಿ ಅಥವಾ ಕಲಾತ್ಮಕತೆಯಲ್ಲಿ ಅಷ್ಟೇನೂ ಹೇಳಿಕೊಳ್ಳುವಂಥವಾಗಿರುವುದಿಲ್ಲ. ಯಾಕೆಂದರೆ ಅವುಗಳನ್ನು ರಚಿಸುವಾಗ ಅವುಗಳ ಕರ್ತರು ಮುಖ್ಯವಾಗಿ ಆಯಾ ಸಾಂದರ್ಭಿಕ ಉದ್ದೇಶ ಮತ್ತು ಮಹತ್ವ ಇವುಗಳಷ್ಟನ್ನೆ ತಮ್ಮ ಗಮನದಲ್ಲಿಟ್ಟುಕೊಂಡಿರುತ್ತಾರೆಯೇ ವಿನಾ ಕಲಾತ್ಮಕವಾಗಿ ಒಂದು ಮಾಹತ್ವದ್ದಾದ ಕೃತಿಯನ್ನು ರಚಿಸುವುದನ್ನಲ್ಲ. ಮತ್ತು ಸಾಮಾನ್ಯವಾಗಿ ನಾವು ಕೂಡ ಇಂಥ ಕವನಗಳನ್ನು ಮುಖ್ಯತಃ ಅವುಗಳ ಸಾಂದರ್ಭಿಕ (contextual) ಉದ್ದೇಶ ಮತ್ತು ಮಹತ್ವ ಇವುಗಳ ದೃಷ್ಟಿಯಿಂದ ಗಮನಿಸುತ್ತೇವೆಯೇ ಹೊರತು ಆಯಾ ಕವಿತೆಗಳ ಕಲಾತ್ಮಕ ಸ್ವರೂಪ ಮತ್ತು ಕಲಾತ್ಮಕ ಮಹತ್ವ ಇವುಗಳ ದೃಷ್ಟಿಯಿಂದಲ್ಲ. ಈ ಮಾತು ಅನೇಕ ಅತಿರಥ—ಮಹಾರಥ ಕವಿಗಳು ಸಾಂದರ್ಭಿಕವಾಗಿ ರಚಿಸಿದ ಅನೇಕ ಕವಿತೆಗಳಿಗೂ ಅನ್ವಯಿಸುತ್ತದೆ. ಆದರೂ ಈ ಸಾಮಾನ್ಯ ನಿಯಮಕ್ಕೆ ಅಪವಾದವಾಗಿರುವಂಥ—ಎಂದರೆ ಕಲಾತ್ಮಕವಾಗಿ ಕೂಡ ಗಮನಾರ್ಹವಾಗಿರುವ ಮತ್ತು ಮಹತ್ವದವಾಗಿರುವಂಥ—ಸಾಂದರ್ಭಿಕ ಕಾವ್ಯಕೃತಿಗಳು ನಮಗೆ ಎಂದಾದರೊಮ್ಮೆಯಾದರೂ ಸಿಗುವುದುಂಟು. ಶ್ರೀ ಚೆನ್ನವೀರ ಕಣವಿ ಅವರ "ವಿನಾಯಕರಿಗೆ ವಂದನೆ"[1] ಎಂಬ ಕೃತಿಯು ಅಂಥ ಅಪವಾದಾತ್ಮಕವಾದ ಅಪರೂಪದ ಸಾಂದರ್ಭಿಕ ಕಾವ್ಯಕೃತಿಗಳಲ್ಲೊಂದಾಗಿದೆಯಷ್ಟೇ ಅಲ್ಲದೆ ಅವುಗಳಲ್ಲಿ ಅತ್ಯಂತ ಯಶಸ್ವಿಯಾದಂಥ ಕೃತಿಯೂ ಆಗಿದೆ. ಶ್ರೀ ಕಣವಿ ಅವರ ಈ ಸಾನೆಟ್ಟಿನ (Sonnet) ಯಶಸ್ಸಿನ ಗುಟ್ಟು, ನನಗನಿಸುವಂತೆ, ಅವರಿಗೆ ಇಲ್ಲಿನ ವಸ್ತು (ಶ್ರೀ ವಿನಾಯಕರ ವ್ಯಕ್ತಿತ್ವ ಮತ್ತು ಕರ್ತೃತ್ವ)—ವಿನ ಮೇಲಿರುವ ಸ್ವಾನುಭವ ಜನ್ಯವಾದ ಅಧಿಕಾರಯುತವಾದ ಹಿಡಿತ (grip), ತಮ್ಮ ಅಭಿವ್ಯಕ್ತಿಯಲ್ಲಿ ಶ್ರೀ ಕಣವಿ ಅವರು ಇಲ್ಲಿ ಸಾಧಿಸಿರುವ ಆತ್ಮೀಯತೆ (Intimacy) ಮತ್ತು ಮಿತವ್ಯಯ (Economy), ಕವಿತೆಯ ವಿಷಯ ವ್ಯಾಪ್ತಿಯ ವಿಷಯದಲ್ಲಿ ಅವರು ತೋರಿಸಿರುವ ಮಹತ್ವಾಕಾಂಕ್ಷೆರಹಿತವಾದ ನಮ್ರತೆ ಮತ್ತು ಸೀಮಿತತೆ ಹಾಗೂ ಕವಿತೆಯ ಭಾಷೆಯ ವಿಷಯದಲ್ಲಿ ಅವರು ತೋರಿಸಿ

---

1 ವಿನಾಯಕ ವಾಙ್ಮಯ ; ಸಂ : ಹಾ.ಮಾ. ನಾಯಕ ಮತ್ತು ಸಿಂಧುವಳ್ಳಿ ಅನಂತಮೂರ್ತಿ; ಸುರುಚಿ ಪ್ರಕಾಶನ, ಮೈಸೂರು, ೧೯೬೯, ಪುಟ : ೧೪

ರುವ ಕಾವ್ಯಮಯ ಭಾಷಾ ಮೋಹವಿದೂರವಾದ ಎಚ್ಚರ ಮತ್ತು ತತ್ಪರತೆ ಇವುಗಳಲ್ಲಿ ಅಡಗಿದೆ.

ಕವಿತೆಯು ಶ್ರೀ ವಿನಾಯಕರ (ಡಾ. ವಿ. ಕೃ. ಗೋಕಾಕರ) ವ್ಯಕ್ತಿತ್ವವನ್ನು ಕುರಿತು ಅಥವಾ ಅವರ ಸಾಧನೆ—ಸಿದ್ಧಿಗಳನ್ನು ಕುರಿತು ಯಾವುದೇ ಉಪೋದ್ಘಾತರೂಪಿಯಾದ ವರ್ಣನೆಯೊಂದಿಗೆ ಪ್ರಾರಂಭವಾಗದೇ (ಸಾಮಾನ್ಯವಾಗಿ ಇಂಥ ಸಾಂದರ್ಭಿಕವಾದ ಗೌರವ ಸೂಚಕ ಕಾವ್ಯಕೃತಿಗಳು ಪ್ರಾರಂಭವಾಗುವಂತೆ) ನಮಗೆ ನೇರವಾಗಿ, ಮಾನಸಿಕವಾಗಿ (ದೈಹಿಕವಾಗಿ ಅಂದರೂ ತಪ್ಪಾಗಲಾರದು), ಶ್ರೀ ವಿನಾಯಕರ ಪ್ರತ್ಯಕ್ಷ ಸಂದರ್ಶನವನ್ನು ಮಾಡಿಸುವುದರೊಂದಿಗೆ ಪ್ರಾರಂಭವಾಗುತ್ತದೆ—

ತುಂಬಿದ ತಲೆಯು ಬೆಳ್ಳಿಗೂದಲಿಗೆ ಬೆರಳಾಡಿ
ಚಿಂತನೆಯ ಅಷ್ಟಪೈಲಿನ ಹರಳ ಹೊರಳಿಸುತ......

—ಎಂದು. ಈ ಪಂಕ್ತಿಗಳಲ್ಲಿನ 'ತುಂಬಿದ ತಲೆ' ಅನ್ನುವುದರಲ್ಲಿನ ಶ್ಲೇಷೆಯನ್ನೂ, 'ಬೆಳ್ಳಿಗೂದಲು' ಎಂಬುದರಲ್ಲಿನ ಧ್ವನಿಯನ್ನೂ, 'ಚಿಂತನೆಯ ಅಷ್ಟ ಪೈಲಿನ ಹರಳು' ಅನ್ನುವುದರಲ್ಲಿನ ಅತ್ಯಂತ ಅರ್ಥಪೂರ್ಣವಾದ ಚಿತ್ರಕತೆಯನ್ನೂ ನಾವು ಗಮನಿಸಬೇಕು. ವಿನಾಯಕರು ತಮ್ಮ ಬೆರಳಿನಲ್ಲಿ ಯಾವಾಗಲೂ ಧರಿಸಿರುವ ಅಷ್ಟಪೈಲಿನ ('ಪೈಲು' ಮತ್ತು 'ಅಷ್ಟಪೈಲು' ಇವು ವಿನಾಯಕರಿಗೆ ಅತಿ ಇಷ್ಟವಾದ ಹಾಗೂ ಅವರಿಗೇ ವಿಶಿಷ್ಟ ವಾದ ಅವರ ವೈಯಕ್ತಿಕ ಪದಗಳೂ ಪ್ರತಿಮೆಗಳೂ ಆಗಿದ್ದು ಅವುಗಳನ್ನು ಕಣವಿ ಅವರು ಇಲ್ಲಿ ಅತ್ಯಂತ ಸಂದರ್ಭೋಚಿತವಾಗಿ ಮತ್ತು ಅರ್ಥೋಚಿತವಾಗಿ ಬಳಸಿದ್ದಾರೆ) ಉಂಗುರದ ಹರಳಿನಂತೆ ವೈವಿಧ್ಯಪೂರ್ಣವಾಗಿ ಹೊಳೆಯುವ ತಮ್ಮ ಚಿಂತನೆಯ— ಚಿಂತಾಮಣಿಯನ್ನು ಆ ಉಂಗುರದ ಹರಳಿನಂತೆಯೇ ಪ್ರಭಾಪೂರ್ಣವಾಗಿ ಅತ್ತಿತ್ತ ಹೊರಳಿಸುತ್ತಿರುತ್ತಾರೆ ಎಂದು ಚಿತ್ರಮಯವಾಗಿ, ಸಾಭಿನಯವಾಗಿ ಹೇಳುತ್ತ ವಿನಾಯಕರು ತಮ್ಮ ನಿಜವಾದ, ಪ್ರಾಮಾಣಿಕವಾದ ಅಂತಃಕರಣದ ಅಂಗೈಯಲ್ಲಿ —ಅಂಗೈನೆಲ್ಲಿ ಕಾಯಿಯಂತೆ—ಈ ಜೀವನವನ್ನು ತೂಗಿ ಅದರ ಸರಿಯಾದ ಬೆಲೆಯನ್ನು ಕಟ್ಟುತ್ತಾರೆ, ನಿರ್ಧರಿಸುತ್ತಾರೆ, 'ಅದೇನದಲ್ಲ' 'ಅದೆಲ್ಲವ ಕೂಡಿ' ಅನ್ನುತ್ತಾರೆ ಕವಿ. ಇಲ್ಲಿ ಕವಿ ಹೇಳುವ "ಅದೇನದಲ್ಲ' ಅದೆಲ್ಲವ ಕೂಡಿ" ಅನ್ನುವುದು ಶ್ರೀ ವಿನಾಯಕರ 'Mannerism'ಗೆ ಸಂಬಂಧಪಟ್ಟ ಒಂದು ಅತ್ಯಂತ ವೈಯಕ್ತಿಕ, ಆತ್ಮೀಯ ಮಾಹಿತಿ ಆಗಿದ್ದು ಆ ಮಾಹಿತಿ ಯನ್ನು ಇಲ್ಲಿ ಕವಿ ಅತ್ಯಂತ ಅರ್ಥಪೂರ್ಣವಾಗಿ, ಒಂದು ಸಾರ್ವತ್ರಿಕ ಅರ್ಥವಂತಿಕೆಯ ನಿಲುವಿನಲ್ಲಿ, ಅತ್ಯಂತ ಸೂಕ್ಷ್ಮವಾಗಿ ಮತ್ತು ಯಶಸ್ವಿಯಾಗಿ ಬಳಸಿದ್ದಾರೆ. ಶ್ರೀ ವಿನಾಯಕ ರನ್ನು ಹತ್ತಿರದಿಂದ ಬಲ್ಲ ಎಲ್ಲ ಕನ್ನಡಿಗರಿಗೂ ತಮ್ಮ ಸಂಭಾಷಣೆಯಲ್ಲಿ ಮತ್ತು ಭಾಷಣ ದಲ್ಲಿ 'ಅದೇನದಲ್ಲ' ಎಂದು ಅನ್ನುವುದು ಅವರ ಒಂದು 'Mannerism' ಆಗಿದೆ ಯೆನ್ನುವುದು ಗೊತ್ತು. ಇಲ್ಲಿ ಕವಿ ಕಣವಿ ಅವರು ವಿನಾಯಕರ ವ್ಯಕ್ತಿತ್ವದಲ್ಲಿಯ—ಅವರ ಮಾತುಗಾರಿಕೆಯಲ್ಲಿನ—ಈ ವಿಶಿಷ್ಟ ಅಂಶವನ್ನು ಬಹಳ ವಿಶಿಷ್ಟವಾದ ಮತ್ತು ಉಪ ಯುಕ್ತವಾದ ರೀತಿಯಲ್ಲಿ ಬಳಸಿಕೊಂಡಿದ್ದಾರೆ. ಮುಖ್ಯವಾಗಿ ಈ ಕೆಳಗಿನ ಎರಡು ಅರ್ಥದ

ಸ್ವರಗಳಲ್ಲಿ : ಮೊದಲನೆಯದಾಗಿ, ಸಾಮಾನ್ಯವಾಗಿ ತಮ್ಮ ಸಂಭಾಷಣೆಗಳಲ್ಲಿ ಮತ್ತು ಭಾಷಣಗಳಲ್ಲಿ ಯಾವುದಾದರೂ ಮಹತ್ವದ ಇಲ್ಲವೇ ಗಹನವಾದ ವಿಷಯವನ್ನು ಸರಿಯಾಗಿ ತಿಳಿಯುವಂತೆ, ವಿವರಿಸಿ ಹೇಳಬೇಕಾದ ಸಂದರ್ಭಗಳಲ್ಲಿ ವಿನಾಯಕರು 'ಅದೇನದಲ್ಲ' ಎಂಬ ಮಾತನ್ನು ಬಳಸುವರು. ಹೀಗಾಗಿ 'ಅದೇನದಲ್ಲ' ಅನ್ನುವುದು ವಿನಾಯಕರ ಮಾತುಗಾರಿಕೆಯಲ್ಲಿ ಅಂಥ ಎಲ್ಲ ಮಹತ್ವದ ಇಲ್ಲವೇ ಗಹನವಾದ ವಿಷಯಗಳ ವಿವರಣೆಯ ಕ್ರಿಯೆಗೆ ಒಂದು ಒಟ್ಟಾರೆ ಸಂಕೇತವಾಗಿ ಪರಿಣಮಿಸುವುದು. ಈ ಸಾಂಕೇತಿಕ ಅರ್ಥದಲ್ಲಿ 'ಅದೇನದಲ್ಲ' ಅನ್ನುವುದನ್ನು ಇಲ್ಲಿ ಕವಿ ಅತ್ಯಂತ ಉಚಿತವಾದ ರೀತಿಯಲ್ಲಿ ಬಳಸಿದ್ದಾರೆ ಅನ್ನುವುದನ್ನು ನಾವು ಗಮನಿಸಬೇಕು. ಯಾಕೆಂದರೆ ಈ ಕವಿತೆಯ ಸಂಬಂಧಪಟ್ಟ ಪಂಕ್ತಿಗಳಲ್ಲಿ ಬರುವ 'ಬದುಕನ್ನು ಬೆಲೆಗೈಯುವ' ಕ್ರಿಯೆಗೆ ಅಂತರ್ಗತವಾಗಿ, ಅದಕ್ಕೆ ಪೋಷಕವಾಗಿ, ಈ 'ಅದೇನದಲ್ಲ' ಎಂಬ ಅರ್ಥವಿವರಣೆಯ ಕ್ರಿಯೆಯ ಉಲ್ಲೇಖ ಇಲ್ಲಿ ಬರುತ್ತದೆ. ಇನ್ನು, ಎರಡನೆಯದಾಗಿ, 'ಅದೇನದಲ್ಲ' ಅನ್ನುವುದನ್ನು ಇಲ್ಲಿ ಕವಿಯು ವಿನಾಯಕರು ತಮ್ಮ ಅಂತಃಕರಣದ ಅಂಗೈಯಲ್ಲಿ ಬದುಕನ್ನು ತೂಗಿ ಅದರ ಬೆಲೆಯನ್ನು ಅತ್ಯಂತ ಕಳಕಳಿಯಿಂದ, ಅತ್ಯಂತ ಪ್ರಾಮಾಣಿಕವಾಗಿ, ಅತ್ಯಂತ ಖಚಿತವಾಗಿ ನಿರ್ಧರಿಸುವ ತಮ್ಮ ಜೀವನದ ಮೌಲ್ಯಮಾಪನದ ಕೆಲಸದಲ್ಲಿ ಈ 'ಅದೇನದಲ್ಲ' ಮೊದಲಾದ ತಮ್ಮ ಖಾಸಾ ವೈಯಕ್ತಿಕ ಗುಣಲಕ್ಷಣಗಳನ್ನು ಕೂಡ ನಿಷ್ಪಕ್ಷಪಾತವಾಗಿ ತೂಗಿ ನೋಡುತ್ತಾರೆ, ವಿಮರ್ಶಿಸಿ ನೋಡುತ್ತಾರೆ ಎಂಬುದನ್ನು ನಮಗೆ ತಿಳಿಸಿ ಹೇಳುವುದಕ್ಕಾಗಿ ಬಳಸಿದ್ದಾರೆ ಎಂದು ಕೂಡ ನಾವು ಹೇಳಬಹುದು.

ಕವನದ ಮೊದಲನೆಯ ನುಡಿಯಂತೆ ಅದರ ಎರಡನೆಯ ನುಡಿ ಕೂಡ ಕವಿ ವಿನಾಯಕರ ಪ್ರತ್ಯಕ್ಷ ವ್ಯಕ್ತಿತ್ವದ ವರ್ಣನೆಗೆ ಮತ್ತು ವಿವರಣೆಗೆ ಮೀಸಲಾಗಿದೆ. ಈ ನುಡಿಯಲ್ಲಿನ–

ಕನ್ನಡಕ ದಾಟಿ, ನುಣ್ಣಗೆ ಎದೆಯ ಮೀಟಿ, ಹದ
ಬರುವವರೆಗು ಮಿದಿಯುವ ದೃಷ್ಟಿ............

—ಎಂಬ ಮಾತು ವಿನಾಯಕರ ದೃಷ್ಟಿಯ ನೇರತನ, ಋಜುತನ ಮತ್ತು ಮೃದುತನಗಳನ್ನು ಸಾಭಿನಯವಾಗಿ ನಮ್ಮ ಕಣ್ಣಿಗೆ ಕಟ್ಟುವಂತೆ ಚಿತ್ರಿಸುತ್ತದೆ.–

........................ಸೂಟು ಬೂಟನು
ಕಳಚಿ, ಲಂಡಂಗಿ ಧೋತರದಿ ಮುಗುಳ್ನಗೆ ಹದನು

—ಎಂಬ ಮಾತು ವಿನಾಯಕ ಸಾಹೇಬರ ವೇಷ—ಭೂಷಣದಲ್ಲಿಯ ಮತ್ತು ವರ್ತನೆಯಲ್ಲಿಯ ನಿರಾಡಂಬರತೆ ಮತ್ತು ಸಾದಾತನ ಇವುಗಳನ್ನು ಎತ್ತಿತೋರಿಸುತ್ತಿದ್ದರೆ.

'ಹಲೋ ಬರ್ರಿ': ತೆರೆಯುವುದು ನಡು ಮನೆಯ ಕಿಡಕಿ ಕದ

ಎಂಬ ಪಂಕ್ತಿಯು ಅವರ ಸರಳತನ ಮತ್ತು ಆತ್ಮೀಯತೆಗಳನ್ನು ಎತ್ತಿತೋರಿಸುತ್ತದೆ.

ಕವನದ ಮೂರನೆಯ ನುಡಿಯು ನಮ್ಮನ್ನು ವಿನಾಯಕರ ವ್ಯಕ್ತಿತ್ವದ ಪರಿಧಿಯಿಂದ, ಅಲ್ಲಲ್ಲ ಕೇಂದ್ರಬಿಂದುವಿನಿಂದ ಅವರ ಸಾಹಿತ್ಯಕೃತಿಗಳ—ಅದರಲ್ಲೂ ಅವರ ಕಾವ್ಯಕೃತಿಗಳ—ಬಿತ್ತರದ ಎತ್ತರದ ಮತ್ತು ಆಳದ ಪ್ರಪಂಚಕ್ಕೆ ಕರೆದೊಯ್ಯುತ್ತದೆ.

'ಎಂಟು ದಿಕ್ಕಿನ ಗಾಳಿಗಲ್ಲಿ ಕಡಲಿನ ಹಾಡು'

ಎಂದು ವಿಶ್ವಪರ್ಯಟಣಿಗರಾದ ಕವಿ ವಿನಾಯಕರ ಸಮುದ್ರದಂತೆಯೇ ತಮ್ಮ ಆಶಯದಲ್ಲಿ ಗಭೀರವೂ, ಹರಹಿನಲ್ಲಿ ವಿಶ್ವವ್ಯಾಪಿಯೂ ಆಗಿರುವ ಸುಪ್ರಸಿದ್ಧ "ಸಮುದ್ರಗೀತ"ಗಳ ಉಲ್ಲೇಖವನ್ನು ಮಾಡುತ್ತಾರೆ ಕವಿ ಇಲ್ಲಿ.

'ಮೂಡ—ಪಡುವಣ ನೆಳಲು—ಬೆಳಕಿನಲಿ ತೇಲುವರ—
ಸಂಜೆ,....... ..........................................'

ಎಂಬ ಮುಂದಿನ ಪಂಕ್ತಿಗಳಲ್ಲಿ ವ್ಯಕ್ತವಾದ ಸುಂದರ ರೂಪಕ-ಚಿತ್ರಗಳಲ್ಲಿ ಮತ್ತು ಪ್ರತಿಮೆಗಳಲ್ಲಿ ಕವಿಯು ವಿನಾಯಕರ ವ್ಯಕ್ತಿತ್ವವನ್ನು ಮತ್ತು ಅವರ ಸಾಹಿತ್ಯ—ಸೃಷ್ಟಿಯ ನಿಲವನ್ನು ಪೌರ್ವಾತ್ಯ ಮತ್ತು ಪಾಶ್ಚಾತ್ಯ ನೆಳಲು—ಬೆಳಕುಗಳ (ಅಥವಾ ಬೆಳಕು—ನೆಳಲುಗಳ) ನಡುವೆ ತೇಲಾಡುವ 'ಅರ ಸಂಜೆ' (Twilight)ಗೆ—ಅಥವಾ ಅರ ಸಂಜೆಗೆ ?—ಹೋಲಿಸುತ್ತಾರೆ. ಈ ಹೋಲಿಕೆಯು ವಿನಾಯಕರ ವ್ಯಕ್ತಿತ್ವದ ಮತ್ತು ಅವರ ಸ್ಯಾಹಿತ ಸೃಷ್ಟಿಯ ಒಲವು-ನಿಲವುಗಳ ಮತ್ತು ದಿಕ್ಕು-ದೆಸೆಗಳ ಸಂದರ್ಭದಲ್ಲಿ ಅತ್ಯಂತ ಯಥಾರ್ಥವಾದದ್ದೇ ಸರಿ. ಆಮೇಲೆ ಈ ನುಡಿಯ ಇದರ ಮುಂದಿನ (ಅಂದರೆ ಕೊನೆಯ) ಎರಡು ಪಂಕ್ತಿಗಳಲ್ಲಿ—

'...,ಬಾಳದೇಗುಲದಿ ಸಮನ್ವಯ—ತೇರ
ಸಿಂಗಾರ.........................................'

ಎಂದು ಕವಿ ವಿನಾಯಕರ ಬಾಳಿನ ಮೂಲ ಸೂತ್ರವಾದ ಸಮನ್ವಯ-ಸೂತ್ರವನ್ನು ಅವರ ಮೇರು-ಕೃತಿಗಳಲ್ಲೊಂದಾದ "ಬಾಳದೇಗುಲದಲ್ಲಿ"ಯ ತೇರಿಗೆ ಸಮೀಕರಿಸಿ ಸುಂದರವಾಗಿ, ಚಿತ್ರಮಯವಾಗಿ ವಿವರಿಸುತ್ತಾರೆ. ಮುಂದೆ—

'........ಅರವತ್ತರಲು ಭಾರಿ ಕಸರತ್ತು'

ಎಂಬ ಆಶ್ಚರ್ಯಸೂಚಕವಾದ ಸಂದರ್ಭೋಚಿತ (ಶ್ರೀ ವಿನಾಯಕರಿಗೆ ಅರವತ್ತು ವರುಷಗಳು ತುಂಬಿದ ಸಂದರ್ಭದಲ್ಲಿ ಅವರ ಗೌರವಾರ್ಥವಾಗಿ ಶ್ರೀ ಕಣವಿ ಅವರಿಂದ ರಚಿತವಾದ ಕವಿತೆ ಇದು) ಉದ್ಗಾರದೊಂದಿಗೆ (ಪಾರಂಪರಿಕವಾದ ಉದ್ಗಾರ ವಾಚಕ ಚಿಹ್ನದ ನವಕಳಿ ಕಾವ್ಯನಾಣ್ಯವನ್ನು ಇಲ್ಲಿ ಕಣವಿ ಅವರು ಚಲಾಯಿಸದೇ ನಿಜವಾದ—ಅಥೆಂಟಿಕ್ ಆದ—ಉದ್ಗಾರವನ್ನು ಪರಿಣಾಮಕಾರಿಯಾಗಿ ಅಭಿವ್ಯಕ್ತ ಪಡಿಸಿದ್ದಾರೆ) ಈ ಮೂರನೆಯ ನುಡಿ ಮುಕ್ತಾಯವಾಗುತ್ತದೆ.

ಇದಾದ ಬಳಿಕ ಈ ಸುನೀತ (Sonnet)ದ ಕೊನೆಯ ಎರಡು 'ಭರತ-ಪಂಕ್ತಿ' ('ಭರತ-ವಾಕ್ಯ' ಎಂಬಂತೆ)—ಗಳು ಬರುತ್ತವೆ. ಕವನದಲ್ಲಿ ಈ ಎರಡು ಕೊನೆಯ

ಪಂಕ್ತಿಗಳು ನಿಜವಾದ ನಿರ್ಣಾಯಕವಾದ ಅರ್ಥದಲ್ಲಿ 'ಭರತ-ಪಂಕ್ತಿ'ಗಳಾಗಿಯೇ ಬಂದಿರುವವಲ್ಲದೆ ಕೇವಲ ಭರತೀ ಅಥವಾ ಭರ್ತೀ ಪಂಕ್ತಿಗಳಾಗಿ ಬಂದಿಲ್ಲವೆನ್ನುವುದು ನಮ್ಮಲ್ಲಿನ ಸಾನೆಟ್ಟುಗಳ ರಚನಾತಂತ್ರದ ದೃಷ್ಟಿಯಿಂದ ಅತ್ಯಂತ ಗಮನಾರ್ಹವಾದದು ಮತ್ತು ಮಹತ್ವದ್ದಾದದ್ದು.

'ಎತ್ತರದಲ್ಲು ಬಾಗಿ ಹತ್ತಿರ ಬರುವ ಮಹತಿ;
ಸಂಕ್ರಾಂತಿ; ಕೈಕುಲುಕಿದಂತೆ ದ್ಯಾವಾ—ಪೃಥಿವಿ'

ಎಂಬ ಈ ಪಂಕ್ತಿಗಳಲ್ಲಿ ಕವಿ ಕಣವಿ ಅವರು ಕವಿ ಮತ್ತು ವ್ಯಕ್ತಿ ವಿನಾಯಕರ ಅತಿಶಯುವಾದ ಎತ್ತರದ (ದೈಹಿಕ, ಬೌದ್ಧಿಕ ಮತ್ತು ಹಾರ್ದಿಕ), ಆ ಉನ್ನತವಾದ ಎತ್ತರದಲ್ಲೂ ವಿನಯದಿಂದ, ವಿನಮ್ರತೆಯಿಂದ ಬಾಗಿ ನಮ್ಮ ಹತ್ತಿರ ಬರುವಂಥ ಅವರ ಮಹತಿಯು ಅರ್ಥಾತ್ ಮಹದೆತ್ತರದ ಮತ್ತು ಸಾಕ್ಷಾತ್ 'ದ್ಯಾವಾ-ಪೃಥಿವಿ' (ಇದು ಶ್ರೀ ವಿನಾಯಕರಿಗೆ ಕೇಂದ್ರ ಸಾಹಿತ್ಯ ಅಕೆಡೆಮಿಯು ಬಹುಮಾನವನ್ನು ತಂದುಕೊಟ್ಟಂಥ ಅವರ ಇನ್ನೊಂದು ಮೇರು ಕೃತಿಯು ಹೆಸರೂ ಹೌದು) ಗಳೇ-ಭೂಮ್ಯಾಕಾಶಗಳೇ-ಸಂಕ್ರಾಂತಿಯು ಸಂಧ್ಯಾಕಾಲದಲ್ಲಿ ಪರಸ್ಪರ ಕೈಕುಲುಕಿದಂತೆ ತೋರುವ ವಿನಾಯಕರ ಮೇರು ವ್ಯಕ್ತಿತ್ವದ ಮತ್ತು ಕವಿತ್ವದ ಸಂಕ್ರಾಂತಿಯು ತೇರಿನ (ರಥೋತ್ಸವದ) ಮತ್ತು ಶುಭಾಶಯದ ಕಲಾ ಕುಸುರಿನ ಕುಸುರೆಳ್ಳುಗಳನ್ನು ಕಲಾರಸಿಕ ಹಾಗೂ ಕಲಾಭಿಜ್ಞ ಓದುಗರ ಅತ್ಯಂತ ಲಕ್ಷ್ಯಪೂರ್ವಕವಾದ ಹಾಗೂ ಗಂಭೀರ ಅಧ್ಯಯನಕ್ಕೆ ಉತ್ಸುಕವಾದ ಮತ್ತು ಸಿದ್ಧವಾದ ಚಿತ್ತದ ಕೈಯಲ್ಲಿ ಇಡುತ್ತ ಶ್ರೀವಿನಾಯಕರ ಸಂಕ್ರಾಂತಿಯು ತೇರಿನಂಥ ಭವ್ಯ, ಭೌಮ ವ್ಯಕ್ತಿತ್ವಕ್ಕೆ ಮತ್ತು ಕವಿತ್ವಕ್ಕೆ ತಮ್ಮ ಆದರ ಪೂರ್ವಕವಾದ ಕಲಾಖಚಿತ ವಂದನೆಗಳನ್ನು ಸಲ್ಲಿಸುತ್ತಾರೆ.

ಶ್ರೀ ಚೆನ್ನವೀರ ಕಣವಿ ಅವರ ಈ ಕವಿತೆಯು ಎಷ್ಟೊಂದು ಸಂಕೀರ್ಣವಾದ ಮತ್ತು ಎಷ್ಟೊಂದು ಯಶಸ್ವಿಯಾದ ಸಾಂದರ್ಭಿಕ ಅಷ್ಟಷಟ್ಪದಿ (a Topical sonnet) ಆಗಿದೆಯೆನ್ನುವುದು ಈ ಮೇಲಣ ನನ್ನ ವಿಶ್ಲೇಷಣೆಯಿಂದ ಮತ್ತು ವಿವರಣೆಯಿಂದ ಓದುಗರಿಗೆ ಸಾಕಷ್ಟು ಮನದಟ್ಟಾಗಬಹುದು ಎಂದು ನಾನು ಭಾವಿಸುತ್ತೇನೆ. ನಿಜವಾಗಿ ನೋಡಿದರೆ ಕಣವಿ ಅವರ ಈ ಚಿಕ್ಕ ಕವಿತೆಯು ಆಧುನಿಕ ಕನ್ನಡದ ಅತ್ಯುತ್ತಮ ವಂದನಾತ್ಮಕ ಕವಿತೆ—(a Salutation poem)—ಗಳಲ್ಲಿ ಒಂದಾಗಿದೆಯಷ್ಟೇ ಅಲ್ಲದೆ ನಮ್ಮ ಕನ್ನಡದ ಒಟ್ಟಾರೆ ಅಷ್ಟಷಟ್ಪದಿಗಳಲ್ಲೆಲ್ಲ ಒಂದು ಅತ್ಯುತ್ತಮವಾದ ಮಾದರಿ-ಕೃತಿ (a model-piece) ಕೂಡ ಆಗಿದೆ ಎಂದು ಹೇಳಬಹುದು. ಶ್ರೀ ಕಣವಿ ಅವರ ಈ ಕೃತಿಯು ಶ್ರೀ ಬೇಂದ್ರೆಯವರ 'ಬೆಳಗು ಜಾವ' ಮತ್ತು 'ತಂಗಿ ಗೌರಮ್ಮ', ಶ್ರೀ ಕುವೆಂಪು ಅವರ 'ನವಿಲುಕಲ್ಲಿನಲ್ಲಿ ಉಷಃಕಾಲ' ಮತ್ತು '[1]ಪಂಜೆಯವರಿಗೆ', ಶ್ರೀ ಪು.ತಿ.ನ. ಅವರ 'ಕವಿ', ಶ್ರೀ ವಿನಾಯಕರ 'ಮಾಸತಿ' ಮತ್ತು ಶ್ರೀ ಕೆ. ಎಸ್. ನರಸಿಂಹಸ್ವಾಮಿ ಅದರ 'ರೂಪಕ ರಾತ್ರಿ' ಮುಂತಾದ ಕನ್ನಡದ ಕೆಲವು ಅತ್ಯುತ್ತಮವಾದ ಅಷ್ಟ ಷಟ್ಪದಿ-(Sonnet)ಗಳ ಮಾಲಿಕೆಗೆ ಸೇರುತ್ತದೆ.

1 ಶ್ರೀ ಕುವೆಂಪು ಅವರ ಈ ಸುಂದರ ಸುನೀತ (Sonnet)ವನ್ನು ನನಗೆ ನೆನಪು ಮಾಡಿ ಕೊಟ್ಟುದುದಕ್ಕಾಗಿ ನಾನು ಮಾನ್ಯ ಕವಿ ಶ್ರೀ ಕೆ. ಎಸ್. ನರಸಿಂಹಸ್ವಾಮಿ ಅವರಿಗೆ ಕೃತಜ್ಞನಾಗಿದ್ದೇನೆ.

ಶಂಕರ ಮೊಕಾಶಿ-ಪುಣೇಕರ

# 'ಎರಡು ದಡ'

ಇದು ಚೆನ್ನವೀರ ಕಣವಿಯವರ ಎಂಟನೆಯ ಸಂಕಲನ. ಕನ್ನಡ ಕಾವ್ಯಧಾರೆಯಲ್ಲಿ ಕಣವಿಯವರ ಕವಿತಾವಾಹಿನಿ ಕಳೆದ ಇಪ್ಪತ್ತೈದು ವರ್ಷಕ್ಕೂ ಮೇಲ್ಪಟ್ಟು ಸಂತತವಾಗಿ ನಿರರ್ಗಳವಾಗಿ ಹರಿಯುತ್ತಿದೆ. ಕಣವಿಯವರು ತಮ್ಮ ನೈಸರ್ಗಿಕ ಅನುಭಾವ (Natural mysticism) ಮಾರ್ಗವನ್ನು ಈ ವಿಸ್ತಾರ ಸಮಯದಲ್ಲೂ ಹದಗೆಡದಂತೆ ಉಳಿಸಿಕೊಂಡು ಬಂದದ್ದೇ ಅವರ ಮೊದಲಿನ ಕಾವ್ಯಯಶಸ್ಸಿನ (authenticity) ದ್ಯೋತಕ. ಪ್ರಗತಿಶೀಲ ಕಾವ್ಯದ ದಿನಗಳಲ್ಲಿ, ನವ್ಯಯುಗದ ನವೋತ್ಸಾಹದ ದಿನಗಳಲ್ಲಿ ಕಣವಿಯವರು ಕನ್ನಡ ಕಾವ್ಯ ಹಾಗು ಭಾಷೆಗಳ ಬೆಳೆಯುತ್ತಿರುವ ಅರ್ಥವಿನ್ಯಾಸ (semantic)ಕ್ಕೆ ತಮ್ಮ ಕಾವ್ಯಜೀವಾಳದ ಪ್ರತಿಸ್ಪಂದವೇನೋ ಎಂಬಂತೆ ಆಯಾ ಕೃಷಿಯ ಹದಗಾರಿಕೆಯನ್ನು ತಮ್ಮ ಕಾವ್ಯದಲ್ಲಿಯೂ ಸ್ಫುಟಗೊಳಿಸಿದರು. ಒಲಿದು ಬಂದ ಭಾಷೆಗೆ ಆಯಾ ಸಮಯಕ್ಕೆ ತಕ್ಕ ಉಡುಗರೆಯನ್ನು ಕೊಡುವದು ಕವಿಯ ಪುರುಷಾರ್ಥದ ಲಕ್ಷಣ. ಈ ಜೀವಂತ ಪ್ರತಿಸ್ಪಂದವಿಲ್ಲದೆ, ಒಂದೇ ಕಾವ್ಯರೀತಿಯನ್ನು ಜೋಬಾಳನಂತೆ ಬಾಳಸುತ್ತ ಕೂಡುವದು ಕವಿಗೂ ಸಲ್ಲದು, ಆಯಾ ಕಾವ್ಯರೀತಿಯ ಜೀವಂತ ಬೆಳವಣಿಗೆಗೂ ಸಲ್ಲದು. ಹೀಗೆ ನವ್ಯರಲ್ಲಿ ಗಣನೀಯ ನವ್ಯರು, ಪ್ರಗತಿಶೀಲರಲ್ಲಿ ಗಣ್ಯ ಪ್ರಗತಿಶೀಲರು, ರೋಮ್ಯಾಂಟಿಕರಲ್ಲಿ ಗಣ್ಯ ರೋಮ್ಯಾಂಟಿಕರು, ಎಂಬ ಕೀರ್ತಿಯನ್ನು ಕಣವಿಯವರು ಅವ್ಯಾಹತವಾಗಿ ನಿರ್ಬಾಧಿತವಾಗಿ ಉಳಿಸಿಕೊಂಡದ್ದು ಅವರಲ್ಲಿಯ ಯಾವ ಗುಣದ ಮೂಲಕ ? ಎಂಟನೆಯ ಕವನ ಸಂಕಲನ ಬಂದ ಮೇಲೆ ವಿಮರ್ಶಕರು ಇನ್ನಾದರೂ ಈ ಪ್ರಶ್ನೆಯನ್ನು ಕೇಳಲೆ ಬೇಕು. ಕಣವಿಯವರ ಬಹುಮುಖ ಪ್ರತಿಭೆಯ ಮೂಲವಿಗ್ರಹವಾವುದು ?—ಇದಕ್ಕೆ ಉತ್ತರ ದೊರಕದೆ ಹೋದರೆ ಅವರ ಕಾವ್ಯದ ಬಗ್ಗೆ ಅವಿಮರ್ಶ ಆದರವೇ ಹುಟ್ಟಾಗಬಹುದೇ ಹೊರತು ವಿಮರ್ಶಾತ್ಮಕ ಮೌಲ್ಯಮಾಪನ ದೊರಕಲಾಗದು. ಅಂತೆಯೇ ಈ ಸಮೀಕ್ಷೆಯ ಮೊದಲಿಗೆಯೇ ನನ್ನ ಉತ್ತರವನ್ನು ಹೇಳಿಬಿಟ್ಟಿದ್ದೇನೆ,—ನೈಸರ್ಗಿಕ ಅನುಭಾವ. 'ಭಾವಜೀವಿ'ಯನ್ನು ಬರೆದ ಕಣವಿಯವರೇ 'ಎರಡು ದಡ' ಬರೆದ ಕಣವಿಯವರು, ಎಂಬ ಅಭಿಜ್ಞಾನದ ಒಳದನಿಯೇ ಅವರ ಗುಣವಿಶಿಷ್ಟದ ಬಗ್ಗೆ ಮನವರಿಕೆ ಮಾಡಿಕೊಡುತ್ತದೆ. ಕಣವಿ, ಆಯಾ ಕವನದ ಆಂತರಿಕ ಧ್ವನಿತವನ್ನು ಸ್ಫುಟಗೊಳಿಸಲಿಕ್ಕೆಂದು ಕೊಂಕು, ಸೂಚ್ಯತೆ, ಮಾಲಿಕೆ, ಇಂಥ ಗುಣಗಳನ್ನು ಒಮ್ಮೊಮ್ಮೆ ತಂದು, ತಮ್ಮ ಕಾವ್ಯವನ್ನು ನವ್ಯತೆಯ ಪ್ರತಿಸ್ಪಂದಿಯನ್ನಾಗಿ ಮಾಡಿದ್ದಾರೆ. ಪ್ರಗತಿಶೀಲ ದಿನಗಳಲ್ಲಿ ದಯೆ, ಕರುಣೆ, ಅನುತಾಪ, ಈ ಗುಣಗಳನ್ನು ಪ್ರಗಲ್ಭವಾಗಿ ತಮ್ಮ ಕಾವ್ಯಗಳಲ್ಲಿ ತೋರಿದ್ದರು. ಆದರೆ ಯಾವ ಸಮಯದಲ್ಲಿಯೂ,

ರೋಷ, ಕ್ರಾಂತಿ, ತ್ವೇಷ ಗೋಣುಚೆಲ್ಲಿದ ನಿರಾಶೆ, ವಾಸನಾಮಯ ಪ್ರತೀಕಗಳ ನಿಗೂಢ ಕಳವಳ, ಶೂನ್ಯತೆ, ಈ ಗುಣಗಳನ್ನು ಅವರ ಕಾವ್ಯದಲ್ಲಿ ಕಾಣೆವು. ಏಕೆಂದರೆ ಇವು ಅವರ ಪ್ರತಿಭೆಗೆ ಭಾಹ್ಯವಾದ ಗುಣಗಳು. ಇವರ ಪ್ರತಿಭೆ ತನ್ನ ಸುಸಂಸ್ಕೃತ ಮರ್ಯಾದೆಯಲ್ಲಿ ಪ್ರವಹಿಸುತ್ತದೆ. ಕಣವಿಯವರ ಸಂಸ್ಕೃತಿ ಅವರ ಮೂಲಗುಣ, ಶಿಕ್ಷಣದಿಂದ ಪಡೆದ ಮುಖವಾಡವಲ್ಲ. ಕಹಿ–ಸಿಹಿಗಳೆರಡನ್ನೂ ತಮ್ಮ ನೈಸರ್ಗಿಕ ಅನುಭಾವದ ಮೆರವಣಿಗೆ ಯನ್ನಾಗಿ ಅವರು ಮಾಡಬಲ್ಲರು. ಅಂತೆಯೆ ಅವರು ನವ್ಯರ ಬೇಸರವಾರ್ಗದಲ್ಲಿ ಕಾಲಿ ಟ್ಟಾಗಲೂ ನಡಿಗೆಯ ಕುದುರೆಯಂತೆ ಅಲ್ಲಿಯೂ ತಮ್ಮ ನೈಸರ್ಗಿಕ ಗಮನವನ್ನು ಪೂರ್ತಿ ಬಿಟ್ಟುಕೊಡುವದಿಲ್ಲ. ಹಸಿವೆ–ಬಡತನ–ರೋಗರುಜಿನಗಳನ್ನು ಕಂಡಾಗ ನವ್ಯರಂತೆ ಮುಖ ಸಿಂಡರಿಸಿಕೊಳ್ಳುವದರ ಬದಲು ಕಣವಿ ಕರುಣೆದೋರುತ್ತಾರೆ. 'ಮಂದಿ' ಯಂಥ ಕವನವೂ 'ನನಗೆಲ್ಲಿ ಬೇರೆ ಹಾದಿ' ಎಂದು ಕೊನೆಗಾಣುತ್ತದೆ. ಅನುಕಂಪನೀಯ ಪಾಪ ಪ್ರಜ್ಞೆ, ಅಸಹನೀಯ ರೋಷ, ಪ್ರಮಾಣ ಮೀರಿದ ಪ್ರತೀಕಾರ, ಇಂಥ ವೈಯಕ್ತಿಕ ದೋಷಗಳಿಗೆ ಕಣವಿ ಕಾವ್ಯದಲ್ಲಿ ಸ್ಥಾನವಿಲ್ಲ. ಇದೇ ಅವರ ಕಾವ್ಯ ಪ್ರಜ್ಞೆಯ ತಳಹದಿಯಾಗಿ ಅವರ ಅನುಭವವಿಸ್ತಾರದಲ್ಲಿ ಕೂಡ ಅವರ ನಿಷ್ಪಾಪತೆಯನ್ನು ಕಾಯ್ದಿರುತ್ತದೆ. ಅವರ ಕಾವ್ಯದಲ್ಲಿ ಋಣ–ಧನಗಳಿಲ್ಲ ; ಆತ್ಮಘಾತಕ ಆತ್ಮಪೂರಕಗಳೆಂಬ ವಿಂಗಡಣೆಯಿಲ್ಲ. ಇದ್ದದ್ದೆಲ್ಲ ವಿದ್ಯುತ್ತೆ ; ಕೂಸಿನ ಬೆಚ್ಚಗಿನ ಮೈಯ ವಿದ್ಯುತ್ತು.

ಗಣಪತಿ ಕಳುಹಿಸಿ ಬಣಬಣ ಎನಿಸಿದೆ
ಈ ಮನೆ–ಮಕ್ಕಳ ಪಾಡು.

* * *

ಕುಸುಬೆ ಹೂವ ಕುಸುರಿನಂಥ
ಕುಬಸ ಕೊಡಿಸುತಾನೆ

* * *

ಕಣಕಾಲ ರಾಶಿಯಿದು ಮೊಣಕಾಲ್ಗೆ ಬಂದಿಹುದು

* * *

ಸದುವಿನಯದ ತುಂಬಿದ ಕೊಡ
ತಂದಳು ನೀಲಾಂಬಿಕೆ

ಇದನ್ನು ಬರೆದ ಕವಿ ನವ್ಯನೋ ಅಲ್ಲವೊ ? —ನವ್ಯತೆಯನ್ನು ಮುಖವಾಡ ವೆಂದು ತಿಳಿದವರು ಇಲ್ಲವೆ ಸಂಸ್ಕೃತಿಯನ್ನು ಸಾಮಯಿಕ ವಿಕಾರದ ಶಕ್ತಿಯುತ ಅಭಿವ್ಯಕ್ತಿ ಯೆಂದು ತಿಳಿದವರು ಈ ಸಮಂಜಸತೆಯನ್ನು (consistency) ಅರಿಯರು. ಜೀವನ ದಲ್ಲಿಯೂ ಕವಿಯಾಗಲು ಹೋರುತ್ತಿರುವ ಕವಿಯೇ ತನ್ನ ಪಂಚೇಂದ್ರಿಯಗಳಿಗೆ ತುಕ್ಕು ಹತ್ತದಂತೆ ಇಟ್ಟುಕೊಂಡು ಸೊಗಸುಗಾರಿಕೆಯನ್ನು ಬದುಕಿಸಿಕೊಳ್ಳಬಲ್ಲನು. ಜೀವನದಲ್ಲಿ ಸೌಂದರ್ಯ ಸೊಗಸು, ಆಶಾವಾದಗಳನ್ನು ಕಾಣಬಲ್ಲವರು ಬೂರ್ಜ್ವಾ, ಇಲ್ಲವೆ ರೋಮ್ಯಾಂಟಿಕ್ ಪಲಾಯನವಾದಿ ಎಂದೂ, ಇವರು ಕಸವಿಸಿ—ಕನಲಿಕೆಗಳನ್ನೇ ಅರಿಯ ರೆಂದೂ, ಕೆಲವು ನವ್ಯರು ನಂಬಿಬಿಟ್ಟಿರುತ್ತಾರೆ. ಇದು ಸತ್ಯವಲ್ಲ. ಜೀವನದ ಕಹಿ—ಸಿಹಿ ಗಳೆಲ್ಲವನ್ನು ಅರಿತೂ ತನ್ನ ನೈಸರ್ಗಿಕ ಸಂಸ್ಕೃತಿಯ ಮೂಲಕ ಅಳದಕ್ಕಿ (sentimenta-

lity) ಇಲ್ಲವೆ ಕಠೋರತೆಗಳಿಗೆ ಮಾರುವೋಗಲು ಒಪ್ಪದ ಕವಿಯ ಬೆನ್ನೆಲುಬು ಗಟ್ಟಿಯಲ್ಲದೆ ಇನ್ನೇನು ?

ಹಾಗಾದರೆ ಕಣವಿಯವರ ಎರಡನೆಯ ದಡವಾವುದು ?

ಹೊಸ ನೀರು
ಹಳೆ ನೀರ ಕೊಚ್ಚಿ ಹುಚ್ಚೆದ್ದು ಎರಡೂ ದಡವ ಬಾಚಿ
ಬಗ್ಗಡವಾಗ್ಯಿ ತಟಸ್ಥ ತರುಮರದ ಬೇರಿಗೂ
ಕೈಚಾಚಿ, ಉರುಳಿ ಹೊರಳಾಡಿ ಮೈತುಂಬ ರಾಡಿಯ
ಬಡಿದು......

ಹೊಸನೀರು ತನ್ನ ನೂತನ ಉತ್ಸಾಹದ ಉತ್ಸವದಲ್ಲಿ ತನ್ನ ಎದೆಗಾರಿಕೆಯನ್ನು ತಾನೇ ಮನವರಿಯಲೆಂದೇ ಗೈದ ಲೀಲೆ. ಇದರ ಪರಿಪಾಕವಾಗುವದು ಕೊನೆಗೆ.

...ಈಗೀಗ ಶರತ್ಕಾಲದ ನಿದಿಧ್ಯಾಸದಲಿ ಮೆಲ್ಲ
ತಿಳಿಗೊಂಡಿಹುದು.

ನವ್ಯತೆಯು ಅವರಿಗೊಂದು ಪುರುಷಾರ್ಥ, ಒಂದು ಲೀಲೆ, ಬೇಕಾದಾಗ ಕಣವಿ ಈ ಪರಿಣಾಮಗಳನ್ನು ವಿವರಿಸಬಲ್ಲರು ;

ಪೇಟೆಯಲಿ ಸಾಮಾನು ವಿಪರೀತ ತುಟ್ಟಿ—
ರೊಟ್ಟಿಯ ಕೂಡ ಬದನೆಕಾಯಿ ಪಲ್ಲೆ, ಎಳೆ ಸವತೆಕಾಯಿ—
ಸವುಳು ಗಜ್ಜರಿ ಬೇಡ,...
ಓಡುವದೆ ರೂಢಿ.

ಜೀವನ ಕಣವಿಯರ ಕೈಯಲ್ಲಿ ಒಂದು ದೃಶ್ಯ (spectacle) ಆಗುತ್ತದೆ. 'ಮಣ್ಣಿನ ವಾಸನೆ' ಯೆಂದು ನವ್ಯರೂ ಬೊಬ್ಬೆ ಇಟ್ಟಿದ್ದಾರೆ. ಕಣವಿಯವರು ಮೂಸಿದ್ದು ಕಾಲಿದಾಸ ಹೇಳಿದ ಮೃದ್ಗಂಧ, ಪಿಂಡ ಬ್ರಹ್ಮಾಂಡಕ್ಕೆ ಕೊಡುವ ಪ್ರತಿಸ್ಪಂದ :

ಬೆಳಗಿನಲಿ ಮಂಜು
ಕಣ್ಗೆ ರೆಪ್ಪೆಯ ಭಾರ.

ಅಂತೆಯೆ ನವ್ಯರಾಗಿಯೂ ನವ್ಯತೆಯನ್ನು ಮೂದಲಿಸಬಲ್ಲರು. ಚಂದ್ರನಿಗೆ ಹೇಳಿದಮಾತು:

ಹೀಗೆ ಸಿಕ್ಕಾಬಟ್ಟೆ ಹಾಳು ಮಾಡಿ, ಹತ್ತೀ ಬಿತ್ತುವದು ಸರಿಯಲ್ಲ.
ಅದನೆಲ್ಲ ಸಂಗ್ರಹಿಸಿ, ಭಟ್ಟಿ ಇಳಿಸಿ, ಗೊಟ್ಟಾ ಹಾಕು ;

ಏಕೆಂದರೆ ಈ ಮೂದಲಿಕೆಯಲ್ಲೂ ಬೆಳುದಿಂಗಳಿನ ಬಿಳಿಯನ್ನು ಸೊಗಸಾಗಿ ಕಾಣುವ ಕವಿದೃಷ್ಟಿ ಮೂಲ ವಿಷಯವೇ ಹೊರತು ಮೂದಲಿಕೆಯಲ್ಲ. ಇದೇ ಸೊಗಸುಗಾರಿಕೆಯನ್ನೇ ಸೇಂದ್ರಿಯ ಹಾಗೂ ಜ್ಯಾಮಿತೀಯ (organic and geometrical) ರೂಪಗಳನ್ನು ಅಷ್ಟೇ ರಸಿಕತೆಯಿಂದ ನೋಡುವಾಗ ಸ್ಫುಟಗೊಳಿಸಿರುವರು ;

ದುಂಡು ಮಂಡಿಸಿದ ಪಕಳೆಯ ಹೃದಯ ಮೃತ್ಪಿಂಡ—
ವಕ್ರರೇಖೆಯ ಸೊಬಗಿನಾಕೃತಿಯ ಮಧ್ಯದಲಿ
ಹೊಕ್ಕುಳ ಬಿಂದು.

ಮನೆಗೆ ಬಂದ ದಾಸಯ್ಯನನ್ನು ಕಂಡು ತಮ್ಮ ದಾಸಯ್ಯತನವೇ ನೆನಪಾಗುತ್ತದೆ :

ಓಣಿ ಓಣಿಗಳಲ್ಲ, ದೇಶ ದೇಶವ ತಿರುಗಿ ಬಂದರೂ
ತುಂಬಿಲ್ಲ ನಮ್ಮ ಗೋಪಾಳಬುಟ್ಟಿ.

ಅಂತೆಯೆ ಯಾವ ಅಪ್ರಸ್ತುತತೆಯ ಭಯವಿಲ್ಲದೆ ಭಾರತದ ಮೇಲೆ ದಾಳಿ ಮಾಡಿದ ಪಾಕಿಸ್ತಾನದ ಬಗ್ಗೆ ಕವಿ ಹೇಳಬಲ್ಲರು :

ಎಲಾ ; ಏನಿದೀ ಅವಿವೇಕ ?

ಆದರೆ, ಇಂತು ತನ್ನ ಜೀವನದ ಅನುಷಂಗಿಕತೆಯನ್ನು ಜೋಪಾನವಾಗಿಟ್ಟ ಕವಿ 'ಎರಡು ದಡ'ದಲ್ಲಿ ಒಂದು ಹೆಜ್ಜೆ ಮುಂದಿಟ್ಟಿದ್ದಾನೆ.

'ಅನಂತವೆಂದರೂ ಆಕಾಶಕೊಂದು ಆಕೃತಿಯುಂಟು.'

''ಜೋಳಿಗೆ ತುಂಬ ಶಿವಯೋಗಿ ಧ್ಯಾನ ಹೋಳಿಗೆ :
ಕಂಡವರಿಗೆ ನಿಚ್ಚಪ್ರಸಾದ.''

ಇದೀಗ ಇಟ್ಟ ಧೀರ ಹೆಜ್ಜೆ. 'ಭಾವಜೀವಿ'ಯಾಗಿ ಕಣವಿ ಸರಳಪಥ ಹಿಡಿದಿದ್ದರೂ, ಇಲ್ಲಿಯೇ ಬರುತ್ತಿದ್ದರು. ಪ್ರಗತಿಶೀಲ—ನವ್ಯ ಮಾರ್ಗಗಳ ಅನುಭವದಿಂದ ಭಾಷೆಯ ಮಿದ್ದುಗೆಯನ್ನು ಪಡೆದ ಮೂಲಕ ಸುತ್ತುಹಾಕಿ ಅಲ್ಲಿಯೇ ಬಂದಿರುವರು, —ಅನುಭವ ವಿಸ್ತಾರದ ಸಿರಿವಂತಿಕೆಯಿಂದ ಅನುಭಾವದ ಕಡೆಗೆಯೇ. ಹಡಗು ಬಂದರಿನ ಸಮೀಪಕ್ಕೆ ಬಂದಂತೆ ಕಣವಿಯವರಿಗೆ ರಾಗದ್ವೇಷಗಳನ್ನು ತೋರಿಸಲು ಹೆಚ್ಚು ಕಠಿಣವಾಗುವದು ; ಹಾಗೂ ಈ ಕವನ ಸಂಗ್ರಹದಲ್ಲಿದ್ದ 'ಸುಗ್ಗಿ', 'ದಾಸೋಹ ದೀಪ', 'ರಸಿಕರಂಗ' 'ಕಲಾಕೃತಿ'ಗಳಂಥ ಕಲೆಗಾರ (accomplished) ಕವನಗಳು ಬರುವವು. ಅದರ ಜೊತೆಗೆ ಸುಖದ ಸರಳ ಅಭಿವ್ಯಕ್ತಿಪರ ಕವನಗಳು ಹೆಚ್ಚಾಗುವವು. ಇದೇ ಸಂಗ್ರಹದಲ್ಲಿ ಒಂದು ಉತ್ತಮ ಚುಟುಕದ ಉದಾಹರಣೆ ಇದನ್ನು ಚೆನ್ನಾಗಿ ವಿವರಿಸಬಲ್ಲದು :

ತೇಗಬೇಕು ಸಂತೃಪ್ತಿಗೊಂಡು
ಆತಿಥ್ಯ ಪಡೆದ ಮೇಲೆ.

ಸಂತೃಪ್ತಿಯೇ ಇನ್ನೊಂದು ಬಗೆಯ ಭಾವವಾಗಬಲ್ಲದು.

ಕಣವಿಯವರ ಕಾವ್ಯದೋಷಗಳ ಬಗ್ಗೆ ಒಂದು ಮಾತು : ಔಚಿತ್ಯಕ್ಕೆ ಸಂಬಂಧಿಸಿದ ವಿಷಯದಲ್ಲಿ ಕಣವಿ ದುಡುಕಿದಾಗ ಅವರ ನೈಸರ್ಗಿಕ ಧೈರ್ಯದ ಬಗ್ಗೆ ಆದರವೆನಿಸಿದರೂ, ಒಮ್ಮೊಮ್ಮೆ ಮುದ್ದೆ ಕೈಮೀರುವದುಂಟು.

ಕತ್ತಲಾದರೆ ಬಂದು ಮುತ್ತುವವು ಗುಂಗಾಡು.

ಚಂದವಾದ ಸಾಲು. ಇದು ಹುಟ್ಟಿಸಿದ ವಾತಾವರಣವನ್ನು ಮುಂದಿನ ಸಾಲು ಘಾತಿಸುತ್ತದೆ.

ದಟ್ಟ ಕಾಡಿನ ನಟ್ಟ ನಡುವಣ ಗವಿಗೆ ಬ್ಯಾಟರಿ ಬಿಟ್ಟು...
ಬೆಳಗಿಸಲಿ ಎದ್ದು ಬ್ಲೇಡಿಗೆ ಮುಖವನೊಡ್ಡಿ ಕನ್ನಡಿ ಹಿಡಿದು—

ಇಲಿಯಟ್ ವರ್ಣಿಸಿದ ಟೈಪಿಸ್ಟಳ ಲೈಂಗಿಕ ವೈರಾಗ್ಯಕ್ಕಿಂತ ಈ ಸಾಲುಗಳಲ್ಲಿರುವ ವೈರಾಗ್ಯ ಕಠೋರವಾದದ್ದು. ಏಕಂದರೆ ಇದರಲ್ಲಿದ್ದ ಮಧ್ಯಮ ವರ್ಗೀಯ ತಿರುಕುತನ (seediness) ಭಯಾನಕ. ಆದರೆ ಯಾವ ಕಠೋರತೆಯನ್ನು ತಮಗರಿಯದೆ ತಂದಿದ್ದಾರೆಂಬ ವಿಚಾರವಿಲ್ಲದೆ ಕಣವಿ ತಮ್ಮ ಸಮನ್ವಯ ಸಂಸ್ಕೃತಿಗೆ ಒಮ್ಮೆಲೆ ಮರಳಲು ಯತ್ನಿಸುತ್ತಾರೆ ಇದು ಶಕ್ತಿ ಹೆಚ್ಚಾಗಿ ಕೈಮೀರಿದ ಉದಾಹರಣೆ. ಇನ್ನು ಶಕ್ತಿ ಕಡಿಮೆಯಾಗಿ ತಾಕದ ಸಾಲುಗಳೂ ಈ ಸಂಗ್ರಹದಲ್ಲಿ ಉಂಟು. ಇವು ಅವರ ಸಂಸ್ಕೃತಿಯ ಮುಗದಾಣಕ್ಕೆ ಒಳಪಟ್ಟು ಸಮಗಮನದ ಅಶ್ವವಾಗುವವೆಂದು ಹಾರೈಸುವಾ.

ಸಿ. ಪಿ. ಕೆ.

# 'ಸಾಹಿತ್ಯ ಚಿಂತನ'

ಕನ್ನಡ ಸಾಹಿತ್ಯದಲ್ಲಿ ಪ್ರಾಯಶಃ ಅತ್ಯಂತ ದುರ್ಬಲವಾದ ಪ್ರಕಾರವೆಂದರೆ ವಿಮರ್ಶೆ. ಪ್ರಾಚೀನ ಕವಿ ಕಾವ್ಯಗಳನ್ನು ಕುರಿತ ವಿಮರ್ಶಾಗ್ರಂಥಗಳು ಹಾಗೂ ಲೇಖನಗಳು ಕೆಲವಾದರೂ ಬಂದಿವೆ, ಆದರೆ ಆಧುನಿಕ ಕವಿಗಳ ಸಾಧನೆ ಸಿದ್ಧಿಗಳನ್ನು ಕುರಿತ ವ್ಯವಸ್ಥಿತ ವಿಮರ್ಶೆ ದುರ್ಲಭವೆನಿಸುವಷ್ಟು ವಿರಳವಾಗಿದೆ. ಈ ಅಭಾವಕ್ಕೆ ಕಾರಣಗಳಿಲ್ಲದಿಲ್ಲ. ನಮ್ಮ ಸಮಕಾಲೀನ ಕಾವ್ಯದ ಹಾಗೂ ವಿಮರ್ಶೆಯ ಕ್ಷೇತ್ರದಲ್ಲಿ ಕೆಲವು ಪಂಥಗಳು ನಿರ್ಮಾಣಗೊಂಡಿದ್ದು, ಆಯಾ ಪಂಥದ ಕವಿ ಅಥವಾ ವಿಮರ್ಶಕ ತನ್ನ ಪರಿಧಿಯಿಂದಾಚೆಗೆ ದೃಷ್ಟಿ ಹರಿಸುವುದೇ ಇಲ್ಲ; ಒಂದು ವೇಳೆ ಹರಿಸಿದರೂ ಅವನ ಪಾಲಿಗೆ ಅನ್ಯಸಂಪ್ರದಾಯದ ಕವಿತೆ ಕವಿತೆಯಾಗಿಯೆ ತೋರುವುದಿಲ್ಲ. ಅಂಥವರು ಬರಯುವ ವಿಮರ್ಶೆ ಪೂರ್ವಗ್ರಹ ದೂಷಿತವಾಗಿ ಸಂಕುಚಿತವಾಗಿ ಪರಿಣಮಿಸುವುದು ಅನಿವಾರ್ಯ. ಯಾವ ನಿರ್ದಿಷ್ಟ ಪಂಥ ಪ್ರಸ್ಥಾನಗಳಿಗೂ ಜೋತಂಬೀಳದೆ, ಸಾಹಿತ್ಯ ಮೀಮಾಂಸೆಯ ಮೂಲಭೂತ ಸೂತ್ರಗಳನ್ನು ಆಶ್ರಯಿಸಿ, ಸಹೃದಯನ ನಿಲುವಿನಿಂದ ಕೃತಿಯ ಗುಣದೋಷ ವಿವೇಚನೆಯನ್ನೂ ಮೌಲ್ಯಮಾಪನವನ್ನೂ ಕೈಗೊಳ್ಳುವ ವಿಮರ್ಶೆ ನಮಗಿಂದು ಅತ್ಯವಶ್ಯವಾಗಿದೆ. ಪ್ರಾಮಾಣಿಕವಾದ ಪಕ್ಷಪಾತರಹಿತವಾದ ವಿಮರ್ಶೆ ಬರದಿರುವುದು ಒಂದು ಮುಖವಾದರೆ, ಅಂಥ ವಿಮರ್ಶೆಯನ್ನು ಸಂತೋಷದಿಂದ ಸದ್ಭಾವದಿಂದ ಸ್ವೀಕರಿಸಲು ನಮ್ಮ ಸಾಹಿತಿಗಳು ಸಿದ್ಧರಿಲ್ಲದಿರುವುದು ಮತ್ತೊಂದು ಮುಖ. ಈ ದ್ವಿಮುಖ ವಿಷಮ ಪರಿಸ್ಥಿತಿಯಲ್ಲಿ ಕನ್ನಡ ವಿಮರ್ಶೆ ಬಾಲಾರಿಷ್ಟ ಪೀಡಿತವಾಗಿಯೆ ಉಳಿದಿರುವಾಗ, ಒಳ್ಳೆಯ ವಿಮರ್ಶೆಯ ಪುಸ್ತಕಗಳು ಅಲ್ಲೊಂದು ಇಲ್ಲೊಂದರಂತೆ ಅಪರೂಪವಾಗಿಯಾದರೂ ಕಣ್ಣಿಗೆ ಬೀಳುತ್ತಿರುವುದು ಸಮಾಧಾನಕರ ಸಂಗತಿ. ಇಂತಹ ಅಪರೂಪದ ಕೃತಿಗಳಲ್ಲೊಂದಾಗಿ ಪ್ರಕೃತ ನಮ್ಮ ಮುಂದಿರುವ 'ಸಾಹಿತ್ಯ ಚಿಂತನ' ಗಮನಾರ್ಹವಾಗಿದೆ.

ಶ್ರೀ ಚೆನ್ನವೀರ ಕಣವಿಯವರು ಮೂಲತಃ ಕವಿಗಳು; ಅವರದು ಪ್ರಾಚೀನ ಅರ್ವಾಚೀನ ಕಾವ್ಯಮೀಮಾಂಸೆಗಳಿಂದ ಸಂಸ್ಕಾರಗೊಂಡ ಮನೋಧರ್ಮ; ವಿಭಿನ್ನ ಸಂಪ್ರದಾಯಗಳನ್ನು ಅರಗಿಸಿಕೊಂಡ, ಕರಗಿಸಿಕೊಂಡ ಸಮನ್ವಯದೃಷ್ಟಿ. ಅವರ ಕಾವ್ಯದಲ್ಲಿ ವ್ಯಕ್ತವಾಗುವ ಈ ಸಮನ್ವಯ ಸಮತೋಲನಗಳೇ ಅವರ ವಿಮರ್ಶೆಯಲ್ಲೂ ಮೂಡಿರುವುದರಿಂದ ಅದಕ್ಕೊಂದು ಮಹತ್ವವುಂಟಾಗಿದೆ. ಆಧುನಿಕ ಕಾವ್ಯವನ್ನೆಂತೊ ಅಂತೆಯೆ ಪ್ರಾಚೀನ ಕಾವ್ಯವನ್ನವರು ಆಸ್ಥೆಯಿಂದ ಪರಿಶೀಲಿಸುತ್ತಾರೆ; 'ನವ್ಯ' ಸಂಪ್ರದಾಯದ ಕವಿಯನ್ನೆಂತೊ ಅಂತೆಯೆ 'ರಮ್ಯ' ಸಂಪ್ರದಾಯದ ಕವಿಯನ್ನು ಶ್ರದ್ಧೆಯಿಂದ ನೋಡುತ್ತಾರೆ. ಈ ತೆರೆದ ಮನಸ್ಸಿನ ಪರಿಭಾವನೆಯಲ್ಲಿ, ಉದಾರ ದೃಷ್ಟಿಯಲ್ಲಿ ಕಣವಿಯವರ ವಿಮರ್ಶೆಯು ಮೊದಲ

ವೈಶಿಷ್ಟ್ಯವಿದೆ; ಆಯಾ ಕಾವ್ಯದ ಸಹಾನುಭೂತಿಪೂರ್ವಕ ಆಸ್ವಾದನೆ, ವಿವೇಚನೆಗಳಲ್ಲಿ ಅದರ ಮುಂದಿನ ಸಫಲತೆಯನ್ನು ಕಾಣಬಹುದು.

ಈ ಸಂಕಲನದಲ್ಲಿರುವ ಹತ್ತೊಂಬತ್ತು ವಿಮರ್ಶ ಪ್ರಬಂಧಗಳನ್ನು ನಾಲ್ಕು ಪ್ರಮುಖ ವರ್ಗಗಳನ್ನಾಗಿ ಮಾಡಬಹುದು-ಪ್ರಾಚೀನರಾದ ಬಸವಣ್ಣ, ಆದಯ್ಯ, ಸರ್ವಜ್ಞ ಮುಪ್ಪಿನ ಷಡಕ್ಷರಿ, ಪುರಂದರದಾಸರು ಮತ್ತು ಜಾನಪದ ಕವಿಗಳನ್ನು ಕುರಿತವು ಒಂದು ಗುಂಪು; ಬೇಂದ್ರೆ, ಕುವೆಂಪು, ಮಧುರಚೆನ್ನ, ಆನಂದಕಂದರ ಕಾವ್ಯಗಳನ್ನು ಕುರಿತವು ಇನ್ನೊಂದು ಗುಂಪು; ಹೊಸಗನ್ನಡ ಕಾವ್ಯದ ಸ್ಥೂಲ ಸಮಗ್ರ ಸಮೀಕ್ಷೆಯನ್ನೊಳಗೊಂಡಿರುವ "ಹೊಸಗನ್ನಡ ಕಾವ್ಯದ ಭಾಷೆ ಮತ್ತು ಶೈಲಿ" ಹಾಗೂ "ಕನ್ನಡ ಕಾವ್ಯದ ಹೊಸ ಒದುಕು" ಎಂಬ ಲೇಖನಗಳು ಮತ್ತೊಂದು ಗುಂಪು; ಸ್ವಾತಂತ್ರ್ಯೋತ್ತರ ಕನ್ನಡ ಕಾದಂಬರಿಗಳನ್ನೂ ಕನ್ನಡದಲ್ಲಿ ವಿಮರ್ಶೆಯ ಒಲವು ನಿಲುವುಗಳನ್ನೂ ಕುರಿತ ಲೇಖನಗಳು ಮಗದೊಂದು ಗುಂಪು, ಇವಲ್ಲದೆ, ರಾಬರ್ಟ್ ಬರ್ನ್ಸ್ ಕವಿಯ ಬಗೆಗೆ ಒಂದು ಲೇಖನ ಮತ್ತು ಕಡೆಯಲ್ಲಿ 'ನನ್ನ ನಾ ಕಂಡಂತೆ' ಎಂಬುದೊಂದು ಆತ್ಮಕಥನ ಇಲ್ಲಿ ಸೇರಿವೆ.

ಪ್ರಾಚೀನರನ್ನು ಕುರಿತ ಕಣವಿಯವರ ವಿಮರ್ಶೆ ಅಷ್ಟೇನೂ ಪ್ರಭಾವಶಾಲಿಯಾಗಿಲ್ಲವೆಂದೆ ಹೇಳಬೇಕು, ಅಲ್ಲಿ ಆಳವಾದ ವಿಶ್ಲೇಷಣೆ, ಒಳನೋಟ ಹೆಚ್ಚಾಗಿ ಕಾಣುವುದಿಲ್ಲವಾದ್ದರಿಂದ ಆ ಲೇಖನಗಳು ಪರಿಚಯದ ಮಟ್ಟಕ್ಕಿಂತ ಮೇಲೆ ಹೋಗುವುದಿಲ್ಲ. ಈ ವರ್ಗದ ಲೇಖನಗಳು ಬಹುಪಾಲು 1960 ಕ್ಕಿಂತ ಹಿಂದಿನವೆಂಬುದನ್ನು ಲಕ್ಷಿಸಬೇಕು. ಇತ್ತೀಚಿನ ಬರಹಗಳಲ್ಲಿ ಕಣವಿಯವರ ವಿಮರ್ಶನ ಶಕ್ತಿಗೆ ಪಕ್ವತೆಯುಂಟಾಗಿದೆ. ನಿದರ್ಶನಕ್ಕೆ: 'ಪುರಂದರದಾಸರ ಪದಗಳಲ್ಲಿಯ ಕಾವ್ಯಗುಣ' ಎಂಬ ಲೇಖನವನ್ನು ನೋಡಬಹುದು. ಅದೊಂದು ಸುಂದರವಾದ ವಿಮರ್ಶೆ. ಪರಿಚಯಾತ್ಮಕ, ವರ್ಣನಾತ್ಮಕ ವಿಮರ್ಶೆಯಿಂದಲೂ ಪ್ರಯೋಜನವುಂಟೆಂಬುದನ್ನು ಮರೆಯುವಂತಿಲ್ಲ; ಅದು ವಾಚಕನ ಕುತೂಹಲಾಸಕ್ತಿಗಳನ್ನು ಕೆರಳಿಸಿ ಮೂಲಕೃತಿಯ ಕಡೆಗೆ ತಿರುಗಿಸುವುದು ಸಾಧ್ಯ. ಈ ದೃಷ್ಟಿಯಿಂದ ಕಣವಿಯವರ ಮೊದಮೊದಲಿನ ಬರಹಗಳು ಕೂಡ ಉಪಯುಕ್ತ.

ಕಣವಿಯವರಿಗೆ ನಿಜವಾದ ಯಶಸ್ಸು ಸಿಕ್ಕಿರುವುದು ಹೊಸಗನ್ನಡ ಕವಿ-ಕಾವ್ಯಗಳನ್ನು ಕುರಿತ ವಿಮರ್ಶೆಯಲ್ಲಿ. 'ಬೇಂದ್ರೆಯವರ ಕಾವ್ಯದಲ್ಲಿ ಭಾವಸಂಪತ್ತು' 'ಅರುಳುಮರುಳು' 'ಮಧುರಚೆನ್ನರ ಮಧುರಗೀತೆ', ಕುವೆಂಪು 'ಕಾವ್ಯದಲ್ಲಿ ಪಕ್ಷಿಲೋಕ', 'ಆನಂದಕಂದರ ಕಾವ್ಯ ಒಂದು ಸಮೀಕ್ಷೆ'–ಈ ಲೇಖನಗಳಲ್ಲಿ ಅವರು ಆಯಾ ಕವಿ ಕಾವ್ಯದ ಜೀವಾಳ, ಸೌಂದರ್ಯ ಸ್ವಾರಸ್ಯಗಳನ್ನು ತೃಪ್ತಿಕರವಾಗಿ ಗ್ರಹಿಸಿದ್ದಾರೆ; ವಸ್ತು, ಭಾವ, ಭಾಷೆ, ಛಂದಸ್ಸು ಮುಂತಾದ ಎಲ್ಲ ದಿಕ್ಕುಗಳಲ್ಲೂ ಆ ಕವಿಗಳ ಕಾವ್ಯವನ್ನು ಅವಲೋಕಿಸಿ ಕನ್ನಡಕ್ಕೆ ಅವರ ಕಾಣಿಕೆಯೇನೆಂಬುದನ್ನು ತಿಳಿಸಿದ್ದಾರೆ.

'ಹೊಸಗನ್ನಡ ಕಾವ್ಯದ ಭಾಷೆ ಮತ್ತು ಶೈಲಿ' ಎಂಬ ಲೇಖನದಲ್ಲಿ ಹೊಸಗನ್ನಡದ ಹಿರಿಯ ತಲೆಮಾರಿನ ಕವಿಗಳ ಕಾವ್ಯದ ಪ್ರಮುಖ ಲಕ್ಷಣಗಳನ್ನು ಸಂಗ್ರಹವಾಗಿಯಾದರೂ

ಸೋದಾಹರಣವಾಗಿ ಪೃಥಕ್ಕರಿಸಲಾಗಿದೆ. ಅಂತೆಯೆ ಹೊಸ ಪೀಳಿಗೆಯ ಕವಿಗಳ ಪ್ರಯೋಗ ಸಾಧನೆ ಸಿದ್ಧಿಗಳನ್ನು 'ಹೊಸಗನ್ನಡ ಕಾವ್ಯದ ಬದುಕು' ಎಂಬ ಪ್ರಬಂಧದಲ್ಲಿ ಸ್ಥೂಲ ವಾಗಿ, ಆದರೂ ಸಾಕಷ್ಟು ಸಮರ್ಪಕವಾಗಿ ವಿವೇಚಿಸಲಾಗಿದೆ. 'ನವ್ಯಕಾವ್ಯದ' ಗೆಲುವು ಸೋಲುಗಳನ್ನು ಅದರಲ್ಲಿ ಕಣವಿಯವರು ಸೂಕ್ಷ್ಮವಾಗಿ ಗುರುತಿಸಿದ್ದಾರೆ.

ರಾಬರ್ಟ್ ಬರ್ನ್ಸ್‌ನನ್ನು ಕುರಿತ ಲೇಖನ ಕವಿಜೀವನದ ವಿವರಗಳನ್ನೊಳಗೊಂಡು ಸೊಗಸಾಗಿದೆ. 'ನನ್ನ ನಾ ಕಂಡಂತೆ' ಎಂಬ ಬರಹದಲ್ಲಿ ವ್ಯಕ್ತಿಯಾಗಿ, ಕವಿಯಾಗಿ ಚೆನ್ನವೀರ ಕಣವಿಯವರ ಅಂತರಂಗವನ್ನು ದರ್ಶಿಸಬಹುದು. ಅವರ ಕಾವ್ಯದ ಅಭ್ಯಾಸಕ್ಕೆ ಇದೊಂದು ಹಿನ್ನೆಲೆಯಾಗಬಲ್ಲುದು. ಕವಿಯಾಗಿ ಅವರಾಡುವ 'ಸ್ಫೂರ್ತಿಯೆನ್ನುವುದೂ ಬರಬರುತ್ತ ಒಂದು ಸಂಸ್ಕಾರ ವಿಶೇಷವಾಗಿ ಪರಿಣಮಿಸಬಹುದೆಂದು ನನಗೆನಿಸುತ್ತದೆ'' ಮುಂತಾದ ಮಾತುಗಳು ಬೋಧಪ್ರದವಾಗಿ ತೋರುತ್ತವೆ,

ಕಣವಿಯವರದು ಮುಖ್ಯವಾಗಿ ರಸಾನುಭವದ, ಗುಣಗ್ರಹಣದ ಮನೋಭಾವ. ಆದರೆ ಕವಿಕೃತಿಯ ಪರಿಮಿತಿಗಳಿಗೆ, ದೋಷಗಳಿಗೆ, ನ್ಯೂನತೆಗಳಿಗೆ ಅವರು ಕಣ್ಣು ಮುಚ್ಚು ವುದಿಲ್ಲ; ಅವುಗಳನ್ನು ಅಲ್ಲಲ್ಲೆ ತಪ್ಪದೆ ಸೂಚಿಸುತ್ತಾರೆ. ಆದರೆ ಅಂಥ ಕಡೆಗಳಲ್ಲಿ ನೈಷ್ಠು ರ್ಯವಿಲ್ಲ; ನಯವಿದೆ, ನಿರ್ವಿಕಾರ ಬುದ್ಧಿಯಿದೆ. ಗುಣ ಪ್ರಶಂಸೆಯಲ್ಲಾಗಲಿ ದೋಷ ನಿರೂಪಣೆಯಲ್ಲಾಗಲಿ ಯಾವುದೇ ಅತಿರೇಕಕ್ಕೆ ಅವರ ವಿಮರ್ಶೆ ಹೋಗುವುದಿಲ್ಲ. ಸರ್ವ ಜ್ಞನ ಬಗ್ಗೆ "ಅವನ ಭಾಷೆ ಜಾನಪದ ಭಾಷೆಯಂತೆ ತೋರಿದರೂ ಅದು ಭಾವಪ್ರಧಾನ ವಾಗಿರದೆ ಬೌದ್ಧಿಕ ಸಂಸ್ಕಾರವನ್ನು ಹೊಂದಿ ಚುರುಕಾಗಿದೆ'' (ಪು, 33) ಎಂದು ಹೇಳಿಯೂ "ಕಾವ್ಯಾಂಶಕ್ಕೆ ಸ್ವಲ್ಪ ಹುಡುಕಾಡಬೇಕಾದೀತು" (ಪು. 28) ಎನ್ನುವಲ್ಲಿ, ಡಿ.ವಿ.ಜಿ. ಅವರ ಕಾವ್ಯವನ್ನು ಕುರಿತು "ಅನೇಕ ಕಡೆಗಳಲ್ಲಿ ಅದರಿಂದ ಕಾವ್ಯಾನುಭವ ಉಂಟಾಗುವುದಿಲ್ಲ'' (ಪು. 196) ಎಂದು ನಿರ್ಣಯಿಸುವಲ್ಲಿ, ಜಿ.ಪಿ. ರಾಜರತ್ನಂ ಅವರ ಕವಿತೆಯನ್ನು ಕುರಿತು "ಗ್ರಾಮ್ಯಭಾಷೆಯ ಸೊಗಡು 'ನಾಗನ ಪದ'ಗಳಲ್ಲಿದ್ದರೂ ಕಾವ್ಯಾಂಶ ಕಡಮೆ ಎನಿಸುತ್ತದೆ" (ಪು. 206) ಎಂದು ವ್ಯಾಖ್ಯಾನಿಸುವಲ್ಲಿ; ಭಾವನಿಷ್ಠ ಕಾವ್ಯ ಸಂಪ್ರದಾಯ ಅತಿರೇಕಕ್ಕೆ ಹೋಗಿದೆಯೆಂಬ ವಾದವನ್ನು ಅಲ್ಲಗಳೆಯುವಲ್ಲಿ (ಪು. 220) ಮತ್ತು ಇನ್ನೆಷ್ಟೊ ಸಂದರ್ಭಗಳಲ್ಲಿ ವಿಮರ್ಶೆಯ ದಿಟ್ಟತನ, ಪ್ರಾಮಾಣಿಕತೆ ಹಾಗು ನಯ ಅಭಿವ್ಯಕ್ತವಾಗಿವೆ.

ವಿಮರ್ಶೆಯ ಯಾವೊಂದು ಸ್ವವಿಶಿಷ್ಟವಾದ ಹೊಸ ಸೂತ್ರವನ್ನೂ ಕಣವಿ ಯವರು ಕೊಟ್ಟಿಲ್ಲವಾದರೂ, ಅಲ್ಲಲ್ಲಿ ಸೂತ್ರಪ್ರಾಯವಾಗಿ ಅವರಿತ್ತಿರುವ ಹೇಳಿಕೆಗಳು ಮನನಯೋಗ್ಯವಾಗಿವೆ. ಉದಾಹರಣೆಗೆ: "ಕವಿಯ ಹೊಟ್ಟೆಯಲ್ಲಿ ಒಬ್ಬ ವಿಮರ್ಶಕ ಅಡಗಿರುವಂತೆ ವಿಮರ್ಶಕನ ಹೊಟ್ಟೆಯಲ್ಲಿ ಒಬ್ಬ ಕವಿ ಅಡಗಿದ್ದಾನೆ'' (ಪು. 183); "ಕವಿ. ವಿಮರ್ಶಕರಲ್ಲಿ 'ಸರಸದಾಂಪತ್ಯ' ಬೆಳೆದಷ್ಟೂ ಸಾಹಿತ್ಯದಲ್ಲಿ ನೂತನ ಸೃಷ್ಟಿ ಕಂಗೊಳಿಸು ತ್ತದೆ'' (ಪು. 184); "ವಾಗರ್ಥಗಳ ಸಾಮರಸ್ಯವೇ, ಭಾವ–ಭಾಷೆಗಳ ರಾಸಾಯನಿಕ

ಕ್ರಿಯೆಯೇ ಕಾವ್ಯದ ಪ್ರಮುಖ ಲಕ್ಷಣವಾಗಿದೆ'' (ಪು. 194). ''ಗದ್ಯದಲ್ಲಿಯೂ ಮಾತಿನ ಲಯ, ಸಂಭಾಷಣೆಯ ಸೊಗಸನ್ನು ಪದ್ಯ ಸ್ವೀಕರಿಸಿದರೆ ಅದರ ಗುಣ ಗೌರವ ಇನ್ನೂ ಹೆಚ್ಚುತ್ತದೆ'' (ಪು. 197).

ಕಣವಿಯವರ ವಿಮರ್ಶೆಯೆಲ್ಲ ಒಂದೇ ಎತ್ತರದ್ದಲ್ಲ; ಅದಕ್ಕೆ ಕೆಲವು ಮಿತಿಗಳುಂಟು. ಅವರ ಕೆಲವು ಲೇಖನಗಳು—'ಸ್ವಾತಂತ್ರ್ಯ ಪೂರ್ವದ ಜಾನಪದ ಸಾಹಿತ್ಯ,' 'ಸ್ವಾತಂತ್ರ್ಯೋತ್ತರ ಕನ್ನಡ ಕಾದಂಬರಿಗಳು' 'ಕನ್ನಡದಲ್ಲಿ ವಿಮರ್ಶೆಯ ಒಲವು ನಿಲುವು'- ವಿಶಿಷ್ಟ ಸನ್ನಿವೇಶಗಳಲ್ಲಿ ಅನಿವಾರ್ಯವಾಗಿ ಬರೆದವಾದ್ದರಿಂದ ಸಾಕಷ್ಟು ಪರಿಪುಷ್ಟಿಯಿಲ್ಲದೆ ತೆಳ್ಳಗೆ ಕಾಣುತ್ತವೆ. ಅವರು ಎಷ್ಟೋ ಕಡೆ ತಾವು ಹೇಳಬೇಕಾದ್ದು ಏನೂ ಇಲ್ಲವೆಂಬಂತೆ ಅನ್ಯವಿಮರ್ಶಕರ ಮಾತುಗಳನ್ನು ದೀರ್ಘವಾಗಿ ಉದ್ಧರಿಸುತ್ತಾರೆ; 'ಕನ್ನಡ ಕಾವ್ಯದ ಹೊಸ ಬದುಕು' ಎಂಬ ಲೇಖನದಲ್ಲಿ ಪುಟಗಟ್ಟಲೆ ಉದ್ಧೃತಿಗಳಿವೆ. ಹೇಳಬೇಕಾದ್ದನ್ನು ಖಚಿತವಾಗಿ ನೇರವಾಗಿ ಹೇಳದೆ ಸಂಕೋಚದಿಂದ ತೇಲಿಸಿ ಹೇಳುವುದು ಕಣವಿಯವರದೊಂದು ದೌರ್ಬಲ್ಯವಾಗಿದೆ. ಅವರು 'ಅನಿಸುತ್ತದೆ' ಎಂಬ ಜಾರಿಕೆಯ ಮಾತನ್ನು ಬಿಟ್ಟು, ಅಭಿಪ್ರಾಯಗಳನ್ನು ಮತ್ತಷ್ಟು ಸ್ಪಷ್ಟವಾಗಿ ನಿಶ್ಚಿತವಾಗಿ ವಾಚ್ಯವಾಗಿ ಮಂಡಿಸುವುದು ಒಳ್ಳೆಯದೇನೊ. ಕೆಲವೆಡೆ ಮಾತುಗಾರಿಕೆ ಅತಿಯಾಗಿ ಕಾಣಿಸುತ್ತದೆ: ಪ್ರಾಸಪ್ರಿಯತೆ ಅನಗತ್ಯವಾಗಿ ತಲೆದೋರುತ್ತದೆ. ಇದನ್ನೆಲ್ಲ ಅವರು ನಿವಾರಿಸಿಕೊಳ್ಳಬಲ್ಲರು.

ಗಮನಕ್ಕೆ ಬಂದ ಒಂದೆರಡು ತಪ್ಪು ಗ್ರಹಿಕೆಗಳನ್ನಿಲ್ಲಿ ಸೂಚಿಸಬಹುದು. ಬಸವಣ್ಣನವರು ''ಆನು ಎನ್ನಂತೆ ಮನ ಮನದಂತೆ ಕೂಡಲಸಂಗಮದೇವ ತಾನು ತನ್ನಂತೆ'' ಎಂದಿರುವುದನ್ನು ಉದಹರಿಸಿ, ''ಕೂಡಲಸಂಗಮದೇವ ಉಪಮಾತೀತನಲ್ಲವೆ ?'' ಎಂದಿದ್ದಾರೆ ಕಣವಿಯವರು (ಪು. 15). ಸಮಗ್ರವಚನವನ್ನು ಲಕ್ಷಿಸಿಲ್ಲ; ಆ ನುಡಿ ಭಗವಂತನ ನಿಲುವನ್ನು ಬಣ್ಣಿಸತಕ್ಕದಲ್ಲ, ಬೇರೆ ಸಂದರ್ಭದ್ದು. ಕುವೆಂಪುರವರದು ವರ್ಣನಾತ್ಮಕ ವಿಮರ್ಶೆಯೆಂಬ ಹೇಳಿಕೆ ಒಂದೆಡೆ ಬಂದಿದೆ (ಪು. 185). ವಾಸ್ತವವಾಗಿ ಅದು ವರ್ಣನಾತ್ಮಕ ವಿಮರ್ಶೆಯಲ್ಲ: ಕುವೆಂಪುರವರ ಮಾತಿನಲ್ಲೆ ಹೇಳುವುದಾದರೆ ಅದು ದರ್ಶನಾತ್ಮಕ ವಿಮರ್ಶೆ.

ಕಣವಿಯವರ ಶೈಲಿಯಲ್ಲಿ ಪ್ರಖರತೆಗಿಂತ ಪ್ರಶಾಂತಿಯ ಕಡೆಗೇ ಒಲವು ಹೆಚ್ಚು; ಅದರಲ್ಲಿ ಆರ್ದ್ರತೆಯಿದೆ, ಕವಿತೆಯ ನವುರಾದ ವಿಲಾಸವಿದೆ. ಈ ಕಾರಣದಿಂದಲೂ ಶ್ರೀಯುತರ ವಿಮರ್ಶೆಗೆ ಹೃದ್ಯತೆ ಬಂದಿದೆ.

ಒಟ್ಟಿನ ಮೇಲೆ, ಕೆಲವು ಉತ್ತಮ ವಿಮರ್ಶನ ಲೇಖನಗಳನ್ನೊಳಗೊಂಡ ಹೊತ್ತಗೆ 'ಸಾಹಿತ್ಯಚಿಂತನ'. ಇಲ್ಲಿನ ವಿಮರ್ಶೆಯ ರೀತಿನೀತಿಗಳು ಅನುಸರಣ ಯೋಗ್ಯವೆಂದೂ ಹೇಳಬಹುದು. ಕಣವಿಯವರು ಮತ್ತೂ ಶ್ರೇಷ್ಠವಾದ ವಿಸ್ತಾರವಾದ ವಿಮರ್ಶೆಗಳನ್ನು ಬರೆಯಲಿ; ಕವಿಯಾದವನು ಕೊಡುವ ವಿಮರ್ಶೆಗೆ ಯಾವಾಗಲೂ ಮಹತ್ವವುಂಟು.

———

ಪ್ರಬುದ್ಧ ಕರ್ಣಾಟಕ—ಸಂ: ೪೮-೪

ಹಾ. ಮಾ. ನಾಯಕ

# ‘ ಸಮಾಹಿತ ’

ಚೆನ್ನವೀರ ಕಣವಿಯವರು ಕನ್ನಡದ ಪ್ರಸಿದ್ಧ ಕವಿಗಳಲ್ಲಿ ಒಬ್ಬರು. 1949ರಲ್ಲಿ ಪ್ರಕಟಿಸಿದ ತಮ್ಮ ಮೊದಲನೆಯ ಕವನಸಂಗ್ರಹ ‘ಕಾವ್ಯಾಕ್ಷಿ’ಯೊಡನೆ ಅವರು ಕನ್ನಡ ಕಾವ್ಯ ಪ್ರಪಂಚವನ್ನು ಪ್ರವೇಶಿಸಿದರು, ಈ ಮೂವತ್ತು ವರ್ಷಗಳಲ್ಲಿ ತಮ್ಮದೇ ಅದ ದನಿಯನ್ನು ಕೇಳಿಸಿಕೊಂಡು ಬಂದಿದ್ದಾರೆ. ಸಮನ್ವಯ ಸೂತ್ರವನ್ನು ಪ್ರತಿಪಾದಿಸಿದವರಲ್ಲಿ ಮುಖ್ಯರಾಗಿ ಹೆಸರು ಮಾಡಿದ್ದಾರೆ.

ತಮ್ಮ ತಲೆಮಾರಿನವರಲ್ಲಿ ಅಷ್ಟಾಗಿ ಕಾಣಿಸದ ಸಂಯಮವನ್ನು ಪಡೆದ ಕಣವಿ ಅದರಿಂದ ತಮ್ಮ ಕಾವ್ಯಕ್ಕೆ ಒಂದು ಕಸುವನ್ನು ತಂದುಕೊಡಿದ್ದಾರೆ. ಈವರೆಗೆ ಅವರ ಒಂಬತ್ತು ಕವನಸಂಕಲನಗಳು ಮಾತ್ರ ಪ್ರಕಟವಾಗಿವೆ. ಈ ಸಂಕಲನಗಳಲ್ಲಿ ಸೇರಿರುವ ಪದ್ಯಗಳ ಸಂಖ್ಯೆಯಾದರೂ ಕೇವಲ 268. ಸಂಖ್ಯೆಯನ್ನು ಬೆಳೆಸುವವರಿಗೆ, ವಾಚಕರ ವಾಣಿಯ ಕಾಗದಗಳೂ ಕಾವ್ಯ ಎನ್ನುವವರಿಗೆ, ಇದು ಆಶ್ಚರ್ಯವಾಗಿ ತೋರಬಹುದು ಆದರೆ ಇದು ನಿಜವಾದ ಕವಿಯ ಒಂದು ಲಕ್ಷಣ ಎಂಬುದನ್ನು ನಾವು ಮರೆಯಬಾರದು.

“ಕವಿಯ ಹೊಟ್ಟೆಯಲ್ಲಿ ಒಬ್ಬ ವಿಮರ್ಶಕ ಅಡಗಿರುವಂತೆ ವಿಮರ್ಶಕನ ಹೊಟ್ಟೆಯಲ್ಲಿ ಒಬ್ಬ ಕವಿ ಅಡಗಿದ್ದಾನೆ” ಎಂಬ ಮಾತೊಂದನ್ನು ಕಣವಿಯವರು ಎತ್ತಿ ಆಡಿದ್ದುಂಟು. (‘ಸಾಹಿತ್ಯ ಚಿಂತನ’). ಈ ಮಾತನ್ನು ದೃಢಪಡಿಸುವ ಸಲುವಾಗಿಯೋ ಏನೋ ಮೂಲತಃ ಕವಿಯಾದ ಅವರು ಆಗಾಗ ವಿಮರ್ಶೆಯನ್ನೂ ಬರೆದು ಪ್ರಕಟಿಸಿದ್ದಾರೆ.

ಅವರ ವಿಮರ್ಶಾತ್ಮಕವಾದ ಲೇಖನಗಳ ಸಂಗ್ರಹ ಎರಡು ಈ ಮೊದಲೇ ಪ್ರಕಟವಾಗಿವೆ. ಮೊದಲನೆಯದು, ಹತ್ತೊಂಬತ್ತು ಲೇಖನಗಳ ಸಂಗ್ರಹ ‘ಸಾಹಿತ್ಯ ಚಿಂತನ’ (1 966) ಎರಡನೆಯದು, ಎಂಟು ಲೇಖನಗಳ ಸಂಗ್ರಹ ‘ಕಾವ್ಯಾನುಸಂಧಾನ’ (1971). ಈಗ ಕಣವಿಯವರ ಮೂರನೆಯ ಸಂಗ್ರಹ ‘ಸಮಾಹಿತ’ ಪ್ರಕಟವಾಗಿದೆ. ಇದರಲ್ಲಿ ಹನ್ನೆರಡು ಲೇಖನಗಳು ಸಂಗ್ರಹಗೊಂಡಿವೆ.

ಗದ್ಯದಲ್ಲಿಯೂ ಕಣವಿಯವರದು ಸಂಯಮ ಸೃಷ್ಟಿ. “ಗದ್ಯದಲ್ಲಿ ನನ್ನದು ಆಮೆಯ ಗತಿ, ಬರೆದದ್ದು ತೀರ ಕಡಿಮೆ” ಎಂದು ಅವರು ‘ಸಾಹಿತ್ಯ ಚಿಂತನ’ದ ಅರಿಕೆಯಲ್ಲಿ ಹೇಳಿಕೊಂಡು ಹನ್ನೆರಡು ವರ್ಷಗಳೇ ಕಳೆದಿವೆ. ಗತಿಯಲ್ಲಿ ಬದಲಾವಣೆಯೇನೂ ಆಗಿಲ್ಲ. ಹಿಂದಿನ ಎರಡು ಸಂಕಲನಗಳಲ್ಲಿ “ತೆರೆದ ಮನಸ್ಸಿನ ಪರಿಭಾವನೆ” ಒಡಮೂಡಿದೆಯೆಂದೂ, ಪ್ರಕೃತ ಸಂಗ್ರಹ ಒಂದು ವೈಚಾರಿಕ ನೆಲೆಯಲ್ಲಿ ಸಾಹಿತ್ಯದ ಬಗೆಗಿನ ತಮ್ಮ ನಿಲವನ್ನು ಒದಗಿಸಬಹುದೆಂದೂ ಕಣವಿಯವರು ಆಶಿಸಿದ್ದಾರೆ.

ಚೆನ್ನವೀರ ಕಣವಿಯವರು ಪ್ರಥಮವಾಗಿ ಕವಿ, ಆಮೇಲೆ ಸಹೃದಯ ವಿಮರ್ಶಕ ವಿಚಾರಶೀಲ. ಆದ್ದರಿಂದ ಅವರ ವಿಮರ್ಶಾತ್ಮಕ ಬರವಣಿಗೆಯೆಲ್ಲ ಒಂದು ರೀತಿಯಲ್ಲಿ ಎರಡನೆಯ ಪ್ರೀತಿಯ ಫಲ. ಹಳೆಯದನ್ನೂ ಹೊಸದನ್ನೂ ಕಾವ್ಯದಲ್ಲಿ, ಕಾವ್ಯ ಮೀಮಾಂಸೆಯಲ್ಲಿ ಸಮನ್ವಯಗೊಳಿಸಿಕೊಂಡಿರುವ ಕಣವಿಯವರು ಅತ್ಯುತ್ತಮವಾದ ಎಲ್ಲದರಿಂದಲೂ ಸಂಸ್ಕಾರಗೊಂಡಿದ್ದಾರೆ. ಯಾವುದರ ಬಗೆಗೂ ಅವರಲ್ಲಿ ಅವಜ್ಞೆಯಿಲ್ಲ; ತಿರಸ್ಕಾರವಿಲ್ಲ. ಎಲ್ಲವನ್ನೂ ಅವರು ಶ್ರದ್ಧೆ, ಆಸಕ್ತಿಗಳಿಂದ ನೋಡುತ್ತಾರೆ. ಬಸವಣ್ಣ, ಬೇಂದ್ರೆ, ಬುದ್ಧಣ್ಣ—ಇವರೆಲ್ಲರನ್ನೂ ಅವರು ಒಂದೇ ರೀತಿಯಲ್ಲಿ ತೆರೆದ ಮನಸ್ಸಿನಿಂದ ನೋಡಬಲ್ಲರು. ಪಂಥಗಳ ಕಟ್ಟು ಅವರನ್ನು ಕಾಡುವುದಿಲ್ಲ. ಅವರು ಪ್ರಾಧ್ಯಾಪಕರಾಗಿಲ್ಲ ದಿರುವುದರಿಂದ ಅವರ ಹಿಂದೆ ವಿದ್ಯಾರ್ಥಿಗಳ 'ಗುಂಪು' ಇಲ್ಲ; ಕೇವಲ ಕವಿಯಾಗಿರುವು ರಿಂದ ಕಾವ್ಯ ಪ್ರೇಮಿಗಳಿಂದ ಸುತ್ತುವರಿದಿದ್ದಾರೆ. ಇದು ಅವರ ಅದೃಷ್ಟ.

ಪ್ರಸ್ತುತ ಸಂಕಲನ 'ಸಮಾಹಿತ'ದ ಲೇಖನಗಳು ಕಣವಿಯವರ ಹಿಂದಿನ ಸಂಕಲನ ಗಳ ಲೇಖನಗಳಂತೆ ಸಂಕೀರ್ಣ ಸ್ವರೂಪದವಾಗಿವೆ, ಆದರೆ ಹೆಚ್ಚಿನ ಬರಹಗಳು ಆಧುನಿಕ ಸಾಹಿತ್ಯಕ್ಕೆ ಸಂಬಂಧಿಸಿವೆ. ಒಂದು ಲೇಖನ ಹಳೆಯ ಸಾಹಿತ್ಯವನ್ನು ಕುರಿತದ್ದಾಗಿದೆ. ಮೂರು ಲೇಖನಗಳು ಜನಪದ ಸಾಹಿತ್ಯದ ವಿವಿಧ ಮುಖಗಳನ್ನು ಪರಿಶೀಲಿಸುತ್ತವೆ. ಒಂದು ಲೇಖನ ಕಾವ್ಯದಲ್ಲಿ ವಸ್ತು ಮತ್ತು ರೂಪಗಳನ್ನು ಕುರಿತ ಟಿಪ್ಪಣಿಯಾಗಿದೆ.

ಜನಪದ ಸಾಹಿತ್ಯದ ಬಗೆಗೆ ವಿಶೇಷ ಆಸಕ್ತಿ ತಾಳಿರುವ ಜಾನಪದ ಕ್ಷೇತ್ರದ ಹೊರಗಿನವರಲ್ಲಿ ಕಣವಿಯವರು ಗಣ್ಯರು. 'ಜನಪದ ಸಾಹಿತ್ಯದ ಕಾವ್ಯ ಭಾಷೆ', 'ಹೋಳಿ ಸಂಪ್ರದಾಯ'. 'ಜನಪದ ಕಾವ್ಯದ ಮೂಲಕ ಜನಾಂಗದ ಸಂಸ್ಕೃತಿಯ ಅಧ್ಯಯನ' ಎಂಬ ಇಲ್ಲಿನ ಮೂರು ಲೇಖನಗಳು ಇದನ್ನು ದೃಢಪಡಿಸುತ್ತವೆ. 'ಜನಪದ ಕಾವ್ಯದಲ್ಲಿ ಪ್ರತಿಮಾ ವಿಧಾನ' ಎಂಬ ಮಹತ್ವ ಪೂರ್ಣ ಲೇಖನವೊಂದನ್ನು ಕಣವಿಯವರು ಈ ಮೊದಲೆ ಪ್ರಕಟಿಸಿದ್ದಾರೆ ('ಕಾವ್ಯಾನುಸಂಧಾನ' 67—99). ಅದಕ್ಕೆ ಸರಿದೊರೆಯಾದ, ಕೆಲವು ವಿಷಯಗಳಲ್ಲಿ ಪೂರಕವಾಗಬಹುದಾದ ಲೇಖನ ಇಲ್ಲಿನ 'ಜನಪದ ಸಾಹಿತ್ಯದ ಕಾವ್ಯಭಾಷೆ', ಬಹುಕಾಲದ ಹಿಂದೆ (1952) ಪ್ರಕಟವಾದ ಗೋಕಾಕರ The Poetic Approach to Language ಎಂಬ ಗ್ರಂಥದ ಪ್ರಭಾವಕ್ಕೊಳಗಾಗಿರುವ ಈ ಲೇಖನ, ಜನಪದ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳ ಭಾಷಿಕ ಸೌಂದರ್ಯವನ್ನು ಬೆರಳಿಟ್ಟು ತೋರಿಸುತ್ತದೆ.

ಜನಪದ ಕಾವ್ಯದ ಮೌಲ್ಯ ಮಾಪನಕ್ಕೆ ಪ್ರತ್ಯೇಕವಾದ ಮಾನದಂಡಗಳಿರಬೇಕೆಂದು ಕಣವಿ ಹೇಳುವುದಿಲ್ಲ. ಆದರೆ ಅಲ್ಲಿನ "ಮಾತು, ರೀತಿ, ರೂಪ, ಗುಣ, ದ್ರವ್ಯ, ಮನೋಧರ್ಮ" ಇವುಗಳಿಗೆ ವಿಶಿಷ್ಟ ಸಂವೇದನೆಯುಂಟು ಎಂಬುದನ್ನು ಮರೆಯುವುದಿಲ್ಲ. ಆ ಸಂವೇದನೆಯ ಭಾಷಿಕ ಸ್ವರೂಪವನ್ನು ತೋರಿಸಲು ಅವರು ಪ್ರಯತ್ನಿಸಿದ್ದಾರೆ.

ಕನ್ನಡ ನಾಡಿನಲ್ಲಿ ಆಚರಿಸುತ್ತಾ ಬಂದಿರುವ ಹೋಳಿ ಹಾಗೂ ಮಧ್ಯ ಭಾರತದ

ಆದಿವಾಸಿಗಳ ಕೆಲಗುಂಪುಗಳಲ್ಲಿ ಆಚರಿಸುವ ಅಂಥದೇ ಸಂಪ್ರದಾಯಗಳ ವಿವೇಚನೆ 'ಹೋಳಿ ಸಂಪ್ರದಾಯ'ದಲ್ಲಿದೆ. ಜನಪದ ಕಾವ್ಯದಲ್ಲಿ ಮೈದೋರುವ ಸಂಸ್ಕೃತಿಯ ಅಂಶ ಗಳನ್ನು ಅಧ್ಯಯನ ಮಾಡುವ ಅಗತ್ಯ, ಅನಿವಾರ್ಯಗಳನ್ನು ಮುಂದಿನ ಲೇಖನ ಸೂಚಿಸುತ್ತದೆ, ಆ ಮಾರ್ಗದಲ್ಲಿ ನಡೆಯುವ ವಿಧಾನವನ್ನೂ ಹೆಜ್ಜೆಹಾಕಿ ತೋರಿಸುತ್ತದೆ. ಜನಪದ ಕಾವ್ಯ, ಸಂಸ್ಕೃತಿ ಚರಿತ್ರೆಯ ಒಂದು ಆಕರ ಹೇಗಾಗಬಲ್ಲದು ಎಂಬುದನ್ನು ಇಲ್ಲಿ ನೋಡಬಹುದು.

ವಚನಕಾರರಲ್ಲಿ (ಅಥವಾ ಹಳೆಯ ಲೇಖಕರಲ್ಲಿಯೇ) ಬಸವಣ್ಣ ಬಹುಶಃ ಕಣವಿ ಯವರಿಗೆ ತುಂಬ ಪ್ರಿಯರಾದವರು. 'ಸಾಹಿತ್ಯ ಚಿಂತನ'ದಲ್ಲಿ ಅವರು ಬಸವಣ್ಣನವರ ತಾತ್ವಿಕ ಭಾವ ಚಿತ್ರವೊಂದನ್ನು ರಚಿಸಿದ್ದಾರೆ. 'ಕಾವ್ಯಾನುಸಂಧಾನ'ದಲ್ಲಿ ಅವರ ವಚನಗಳ ಸಾಹಿತ್ಯಿಕ ಮೌಲ್ಯದ ವಿವೇಚನೆ ಮಾಡಿದ್ದಾರೆ, ಇಲ್ಲಿನ ಒಂದು ಲೇಖನದಲ್ಲಿ ಬಸವಣ್ಣನವರ ಅಚ್ಚ ಬದುಕಿನ ರತ್ನ ಮೌಕ್ತಿಕದಚ್ಚನ್ನು ಎರಕ ಹೊಯ್ಯಲಾಗಿದೆ. ಒಟ್ಟಿನಲ್ಲಿ ಈ ಲೇಖನ ಮಾಲೆ ವಚನಕಾರ ಬಸವಣ್ಣನವರ ಸಮಗ್ರ ವ್ಯಕ್ತಿತ್ವವನ್ನು ರೂಪಿಸುವುದರಲ್ಲಿ ಸಾಕಷ್ಟು ಯಶಸ್ವಿಯಾಗಿದೆ ಎನ್ನಬಹುದು.

ಹೊಸಗನ್ನಡ ಸಾಹಿತ್ಯಕ್ಕೆ ಬಂದಾಗ, ಅಲ್ಲಿನ ಕವಿ ಕಾವ್ಯಗಳ ವಿವೇಚನೆಗೆ ತೊಡ ಗಿದಾಗ ಕಣವಿಯವರಿಗೆ ಬಲ ಬಂದಂತಾಗುತ್ತದೆ. ಹೊಸ ಕಾಲದ ಸಂವೇದನೆಗಳನ್ನು ಅವರು ಸುಲಭವಾಗಿ ಗ್ರಹಿಸುತ್ತಾರೆ. 'ಸಮಾಹಿತ'ದ ಲೇಖನಗಳಲ್ಲಿ ಅನಕೃ. ಮತ್ತು ಕಟ್ಟೀಮನಿ ಅವರನ್ನು ಪರಿಚಯಿಸುವ ಎರಡು ಲೇಖನಗಳಿವೆ. ಅನಕೃ ಅವರಿಗೆ ಅವರ ಹಳೆಯ ಬಿರುದನ್ನೇ ('ಹಲವು ಹೋರಾಟಗಳ ಕಲಿ') ನ್ಯಾಯವಾಗಿ ಉಳಿಸಿದ್ದಾರೆ. ಕಟ್ಟೀಮನಿಯವರವನ್ನು 'ಕ್ರಾಂತಿಕಾರಿ ಕಾದಂಬರಿ ಕಾರ' ಎಂದು ಕರೆದಿದ್ದಾರೆ. ಅನಕೃ ಅವರನ್ನು ಕುರಿತದ್ದು ಸ್ಮಾರಕ ಲೇಖನ. ಕಟ್ಟೀಮನಿಯವರನ್ನು ಕುರಿತದ್ದು ಅವರಿಗೆ ಐವತ್ತು ಆಗುವ ಹೊತ್ತಿನಲ್ಲಿ ನಡೆಸಿದ ಒಂದು ಸಂದರ್ಶನ (1968). ಇಂಥ ಲೇಖನ ಗಳಿಗೆ ಏನಿಲ್ಲವೆಂದರೂ ಚಾರಿತ್ರಿಕ ಮಹತ್ವ ಇರುತ್ತದೆ.

"ನಮ್ಮ ಸರ್ಕಾರ ಲೇಖಕರಿಗೆ ಯಾವ ಅನುಕೂಲತೆಗಳನ್ನು ಒದಗಿಸಿ ಕೊಡ ಬೇಕೆನ್ನುತ್ತೀರಿ ?" ಎಂಬ ಪ್ರಶ್ನೆಗೆ ಕಟ್ಟೀಮನಿಯವರು ಕೊಟ್ಟ ಉತ್ತರ ಹೀಗಿದೆ : "ವರ್ಷಕ್ಕೆ ನಾಲ್ಕು ಲೇಖಕರಿಗೆ ಐದೈದುನೂರು ರೂಪಾಯಿ ಹಾಗೂ ಶಾಲುಕೊಟ್ಟು ಗೌರವಿಸುವ ಹುಚ್ಚುಚ್ಚಾರವನ್ನು ಸರಕಾರ ಬಿಡಬೇಕು. ಕುವೆಂಪು, ಬೇಂದ್ರೆ, ಗೊರೂರ ರಿಗೆ ಕೊಟ್ಟಂತೆ ಇನ್ನೂ ಹತ್ತು ಮಂದಿ ಪ್ರತಿಭಾವಂತ ಲೇಖಕರಿಗೆ ತಿಂಗಳಿಗೆ ನಾಲ್ಕೈದು ನೂರರಂತೆ ಮಾಸಾಶನ ಕೊಟ್ಟರೆ ಅವರು ನೆಮ್ಮದಿಯಿಂದ ಕುಳಿತು ಕೃತಿ ರಚನೆ ಮಾಡ ಬಹುದು."

ಸರ್ಕಾರ ಕಟ್ಟೀಮನಿಯವರ ಸಲಹೆಯನ್ನು ತುಂಬಾ ಔದಾರ್ಯದಿಂದ ಒಪ್ಪಿತೋ ಏನೋ. ಈ ಹತ್ತು ವರ್ಷಗಳಲ್ಲಿ ಹತ್ತು ಮಂದಿಗಲ್ಲ, ಕಟ್ಟೀಮನಿಯವರೂ ಸೇರಿದಂತೆ

ನೂರಾರು ಮಂದಿಗೆ ನಾಲ್ಕು ನೂರಲ್ಲ ಐದು ನೂರರಂತೆ ಮಾಸಾಶನ ನೀಡಿದೆ. ಈ ಪ್ರತಿಭಾವಂತ (?) ಲೇಖಕರು (?) ಈಗ ನೆಮ್ಮದಿಯಿಂದ ಕುಳಿತಿರಬಹುದು. ಅನೇಕರು ಕೃತಿರಚನೆ ಮಾಡುವುದು ನಮ್ಮ ಗಮನಕ್ಕೆ ಬಂದಿಲ್ಲ;

ಕಣವಿಯವರು ಒಂದು ಲೇಖನದಲ್ಲಿ ಭೂಸನೂರಮಠರ 'ಶೂನ್ಯ ಸಂಪಾದನೆಯ ಪರಾಮರ್ಶೆ'ಯನ್ನು ಇನ್ನೊಂದು ಲೇಖನದಲ್ಲಿ ಸದಾಶಿವ ಒಡೆಯರ ಪ್ರಬಂಧಗಳನ್ನೂ ಮತ್ತೊಂದರಲ್ಲಿ ಶಿವರುದ್ರಪ್ಪನವರ ಕಾವ್ಯದ ಒಂದು ಮುಖ್ಯ ಲಕ್ಷಣವಾದ ಆಶ್ಚರ್ಯ ಭಾವವನ್ನೂ ಪರಿಚಯ ಮಾಡಿಕೊಟ್ಟಿದ್ದಾರೆ. 'ಎದೆಯ ಒಕ್ಕಲಿಗನ ಹಾಡು' ಎಂಬ ಬೇಂದ್ರೆಯವರ ಕವಿತೆಯೊಂದರ ವಿಮರ್ಶೆ ಮತ್ತೊಂದು ಲೇಖನದ ವಸ್ತು.

'ಇತ್ತೀಚಿನ ಕಾವ್ಯಪರಿಚಯ— ಹೊಸ ಪೀಳಿಗೆಯ ಕೆಲವು ಕವಿಗಳು' ಎಂಬ ಐವರು ತರುಣ ಕವಿಗಳ (ಸಿದ್ಧಲಿಂಗ ಪಟ್ಟಣಶೆಟ್ಟಿ, ಬುದ್ದಣ್ಣ ಹಿಂಗಮಿರೆ, ದೇಶಪಾಂಡೆ ಸುಬ್ಬರಾಯ, ಶ್ರೀಮತಿ ಶೈಲಜಾ ಉಡುಚಣ ಮತ್ತು ಸಿದ್ದಲಿಂಗದೇಸಾಯಿ) ಕವನ ಸಂಗ್ರಹ ಗಳ (ಔರಂಗಜೇಬ ಮತ್ತು ಇತರ ಕವನಗಳು', 'ಶಬ್ದ ರಕ್ತ ಮತ್ತು ಮಾಂಸ'; 'ನಾಲ್ಕು ಹಿಡಿ ಬೆಂಕಿ' 'ಒಂದುಗಳಿಗೆ' ಮತ್ತು 'ಚಿಗಳಿ') ವಿಮರ್ಶಾತ್ಮಕ ಪರಿಚಯವಿದೆ. ಇವುಗಳಲ್ಲಿ ಮೊದಲನೆಯದು ಒಂದು ಸಮೀಕ್ಷೆ ; ಉಳಿದ ನಾಲ್ಕುಮುನ್ನುಡಿಗಳು.

ಒಂದು ಟಿಪ್ಪಣಿ ಎಂದು ಹೇಳಲಾಗಿದ್ದರೂ, 'ಕಾವ್ಯದಲ್ಲಿ ವಸ್ತು ಮತ್ತು ರೂಪ' ಎಂಬ ಶೀರ್ಷಿಕೆಗೆ ಆ ಲೇಖನದಲ್ಲಿ ನ್ಯಾಯದೊರೆತಿಲ್ಲ ಎಂದೇ ಹೇಳಬೇಕು. ಇದು ದೊಡ್ಡ ಲೇಖನವೊಂದರ ಸಾರಾಂಶದಂತಿದೆ.

ಒಟ್ಟಿನಲ್ಲಿ ಕಣವಿಯವರ ಪ್ರಸ್ತುತ ಸಂಗ್ರಹ ಇದೇ ಬಗೆಯ ಅವರ ಹಿಂದಿನ ಸಂಗ್ರಹಗಳಂತೆಯೇ ಇದೆ. ಆದರೆ ಆ ಸಂಗ್ರಹಗಳಿಗಿಂತ ಹೆಚ್ಚಿನ ಮಹತ್ವ ಪಡೆಯುವು ದರಲ್ಲಿ ಇದು ವಿಫಲವಾಗಿದೆ. 'ಜನಪದ ಸಾಹಿತ್ಯದ ಕಾವ್ಯಭಾಷೆ', 'ಜನಪದ ಕಾವ್ಯದ ಮೂಲಕ ಜನಾಂಗದ ಸಂಸ್ಕೃತಿಯ ಅಧ್ಯಯನ', ಇವು ತೀವ್ರ ಲಕ್ಷಿಸಬೇಕಾದ ಬರಹ ಗಳು. 'ಕಾವ್ಯಾನುಸಂಧಾನ'ದ ಲೇಖನಗಳಲ್ಲಿ ಕಾಣುವ ತೀವ್ರತೆ ಸಮಗ್ರತೆಗಳು ಇಲ್ಲಿ ಕಾಣಿಸುವುದಿಲ್ಲ. ಆಧುನಿಕ ಲೇಖಕರಲ್ಲಿ ಬೇಂದ್ರೆ, ಕುವೆಂಪು, ಮಧುರಚೆನ್ನರನ್ನು ಕುರಿತು ಬರೆದ 'ಸಾಹಿತ್ಯ ಚಿಂತನ'ದ ಲೇಖನಗಳಿಗೆ ಹೋಲಿಸಬಹುದಾದ ಲೇಖನಗಳೂ ಇಲ್ಲಿಲ್ಲ.

ಕಣವಿಯವರ ವಿಮರ್ಶೆ ಯಾವುದೇ ತಾತ್ವಿಕ ಚೌಕಟ್ಟಿನಲ್ಲಿ ಬಾಧಿತವಾದುದಲ್ಲ ; ಯಾವುದೇ ಸೂತ್ರಗಳನ್ನು ಅವರು ಹೇಳುವುದಿಲ್ಲ, ಕವಿಯ ಮನಸ್ಸನ್ನು ತೆರೆದು ತೋರುವ, ಕಾವ್ಯದ ಸೌಂದರ್ಯವನ್ನು ಎತ್ತಿಕಾಣಿಸುವ ಕುಶಲತೆ ಅವರಿಗಿವೆ. ಈ ಕೆಲಸ ವನ್ನು ಯಾವುದೇ ಪೂರ್ವಾಗ್ರಹಕ್ಕೂ ಒಳಗಾಗದೆ ಅವರು ಮಾಡಬಲ್ಲರು.

ಅವರ ಬರವಣಿಗೆಯನ್ನು ಓದುವುದೇ ಒಂದು ಸಂತೋಷ. "ಕಾವ್ಯ ಒಂದು ರಚನೆಯಲ್ಲ. ಅದೊಂದು ಅಭಿವ್ಯಕ್ತಿ" (ಪು.3) "ದೇವರು ಎಷ್ಟೇ ದೊಡ್ಡವನಾದರೂ

ಇವರಿಗೆ ಅವನು ಸಮೀಪದ ವ್ಯಕ್ತಿಯೇ " (ಪು.13) "ದೇವರು ಕೊಟ್ಟರೆ ಎಲ್ಲಾ ಉಂಟು ಎನ್ನುತ್ತೇವೆ. ದೇವರು ಸುಮ್ಮನೆ ಕೊಡುವುದಿಲ್ಲ" (ಪು 54), "ಸತ್ಯದ ಪೂರ್ಣ ಸ್ವರೂಪವನ್ನು ಬುದ್ಧಿಯೊಂದರಿಂದಲೇ ಅರಿಯುವುದು ಸಾಧ್ಯವಾಗದು" (ಪು.141) ಮುಂತಾದ ಮಾತುಗಳು ಅಲ್ಲಲ್ಲಿ ಬಂದು ಮತ್ತೆ ಮತ್ತೆ ಅವನ್ನು ಮೆಲಕು ಹಾಕಿ ಯೋಚಿಸುವಂತೆ ಮಾಡುತ್ತವೆ. ಕವಿ ಕಣವಿಯವರ ಗದ್ಯದಲ್ಲಿ ಆರ್ದ್ರತೆಯಿದೆ,. ನಿರೂಪಣೆಯಲ್ಲಿ ಆಕರ್ಷಣೆಯಿದೆ.

ಕೆಲವು ಸಲ ಮೂಲಕೃತಿಯಿಂದ ಅವರು ಅನಾವಶ್ಯಕವಾಗಿಯೇ ಹೆಚ್ಚಾಗಿ ಉದ್ಧರಿಸುತ್ತಾರೆಂದು ಅನ್ನಿಸುತ್ತದೆ. ಉದಾಹರಣೆಗೆ 'ಪರಾಮರ್ಶೆ' ಯನ್ನು ಕುರಿತ ಲೇಖನವನ್ನೇ ನೋಡಬಹುದು. ಬಹುಸಂದರ್ಭಗಳಲ್ಲಿ ವಿಮರ್ಶೆ ವರ್ಣನಾತ್ಮಕ ವಾಗಿಯೇ ನಿಲ್ಲುತ್ತದೆ ; ಪರಿಚಯದ ಹಂತದಲ್ಲಿಯೇ ಉಳಿಯುತ್ತದೆ. ಇದರಿಂದ ಮುಂದೆ ಎಷ್ಟುದೂರ ಹೋಗುತ್ತಾನೆ ಎಂಬುದರ ಮೇಲೆ ವಿಮರ್ಶಕನ ಯಶಸ್ಸು ನಿರ್ಧಾರವಾಗುತ್ತದೆ.

---

'ಗ್ರಂಥಲೋಕ' ಏಪ್ರಿಲ್, ೧೯೭೪

ಸಾ. ಶಿ. ಮರುಳಯ್ಯ

# ಕವಿ ವಿಮರ್ಶಕನಾಗಿ, ವಿಮರ್ಶಕನು ಕವಿಯಾಗಿ.

ಕಣವಿಯವರು ಕವಿ. ಅವರು ವಿಮರ್ಶಕರೆನಿಸಿಕೊಳ್ಳಲು ಹೇಗೆ ಸಾಧ್ಯ ? ಅವರಿಗೆ ವಿಮರ್ಶೆ ಬರೆಯಲು ಹೇಳಿದವರು ಯಾರು ? ಬರೆಯಲು ಅವರಿಗೇನಿದೆ ಅಧಿಕಾರ ? ಸಮ್ಮತಿಸಿದವರು ಯಾರು ? ಅವರು ಸ್ವಯಂ ಕವಿಗಳಾದ್ದರಿಂದ ವಿಮರ್ಶಿಸುವ ಹಕ್ಕನ್ನು ಪಡೆದಿಲ್ಲ ! ಅರ್ಹತೆ ಇರಬಹುದು; ಆದರೆ ಅಧಿಕಾರ ಇಲ್ಲ ! ಕಾರಣ ಅವರು ಕವಿ. ಕವಿ ಯಾವಾಗಲೂ ಓರ್ವ ಅಪರಾಧಿ ; ಕಾವ್ಯ ಬರೆದದ್ದೇ ಅವನು ಮಾಡಿದ ಮಹಾಪರಾಧ ; ಈ ಅಪರಾಧದ ಮೊಕದ್ದಮೆ ನಡೆಯಬೇಕಾದದ್ದು 'ವಿಮರ್ಶೆ' ಎಂಬ ನ್ಯಾಯಾಲಯ ದಲ್ಲಿ; ಅಲ್ಲಿ 'ವಿಮರ್ಶಕ' ಎಂಬ ನ್ಯಾಯಮೂರ್ತಿ ತನಗೆ ತೋಚಿದ ರೀತಿಯಲ್ಲೊ ಅಥವಾ ಕಾನೂನಿಗೆ ಅನುಗುಣವಾಗಿಯೊ ತೀರ್ಪು ಕೊಡುತ್ತಾನೆ. ತೀರ್ಪುಕೊಡುವ ಅಧಿಕಾರ ನ್ಯಾಯ ಮೂರ್ತಿಗೇ ಹೊರತು ವಾದಿಗೂ ಇಲ್ಲ, ಪ್ರತಿ ವಾದಿಗೂ ಇಲ್ಲ. ಆ ಪ್ರಕಾರ ಅಪರಾಧಿ ಎನಿಸಿದ ಕವಿಗೆ ತೀರ್ಪುಕೊಡುವ ಅಧಿಕಾರ ಕವಿಯಾದವನಿಗೆ ಇಲ್ಲ. ಅಂದರೆ ಕವಿ ಕಣವಿಯವರಿಗೆ ವಿಮರ್ಶಿಸುವ ಅಧಿಕಾರ ಇಲ್ಲ !

ಒಂದು ಪಕ್ಷ ಕವಿ ಬಯಸಿದರೆ 'ನನ್ನ ನಾ ಕಂಡಂತೆ' ಎಂಬ ಸ್ವ-ವಿಮರ್ಶೆ ಕೊಡ ಬಲ್ಲನೇ ಹೊರತು, ಸ್ವ-ಕೃತಿಯ ಬಗೆಗೆ ವಿಮರ್ಶೆ ನೀಡಲಾರ. ನೀಡಿದರೆ ಅದು ಸಾಧುವೂ ಅಲ್ಲ. ಅಥವಾ ಒಂದು ಕವಿತೆಯ ಬಗ್ಗೆ ಅದನ್ನು ರಚಿಸಿದ ಕವಿಯನ್ನೇ ಕೇಳಿದರೆ ಅವನು ಅದಕ್ಕೆ ಸಮಂಜಸವಾದ ಉತ್ತರ ಕೊಡಲಾರ. ಕಾರಣ, ತನ್ನ ಬೆನ್ನು ತನಗೆ ಕಾಣುವುದಿಲ್ಲ; ತನ್ನ ದೋಷ ತನಗೆ ತಿಳಿದಿರುವುದಿಲ್ಲ. ತಾನು ಬರೆದದ್ದೆಲ್ಲಾ ಭಾಗೀರಥಿ ಎಂಬ ಭಾವನೆ ಅವನಲ್ಲಿರುತ್ತದೆ. ಆದ್ದರಿಂದ ಬೇರೆ ರಸಜ್ಞನೇ ಕೃತಿಯ ಗುಣ ದೋಷಗಳನ್ನು ಗುರುತಿಸ ಬೇಕಾಗುತ್ತದೆ. ಅಲ್ಲದೆ, "ಕಲಾವಿಮರ್ಶೆಗೆ--ಆದರಲ್ಲೂ ಸಾಹಿತ್ಯ ವಿಮರ್ಶೆಗೆ—ನಮ್ಮ ಸಂಪ್ರದಾಯ ಒಂದು ಸ್ವತಂತ್ರ ಸ್ಥಾನವನ್ನೇ ಮೀಸಲಿರಿಸಿದೆ. ಈ ದೃಷ್ಟಿಯಲ್ಲಿ ನೋಡಿ ದಾಗ ಮಿಕ್ಕೆಲ್ಲ ವಿಮರ್ಶೆಗಳಿಗಿಂತ ಈ ಕಲಾವಿಮರ್ಶೆ ಬೇರೆಯಾಗುತ್ತದೆ. ವಾಟರ್‌ಲೂ ಸೇತುವೆಯ ಭದ್ರತೆಯ ಬಗೆಗೆ ಇಂಜಿನಿಯರನ್ನೊ, ನಿರ್ಮಾಪಕನನ್ನೊ ಅಥವಾ ಸೇತು ನಿರ್ಮಾಣವನ್ನರಿತ ಯಾವನಾದರೂ ಒಬ್ಬ ವ್ಯಕ್ತಿಯನ್ನೊ ಕೇಳುತ್ತೇವೆ. ಆದರೆ ಒಂದು

ಕವನದ ಚಿರಂತನತೆಯ ಬಗೆಗೆ ನಿರ್ಣಯಿಸಬೇಕೆನಿಸಿದಾಗ ನಾವು ಅದನ್ನು ರಚಿಸಿದ ಕವಿಯನ್ನಲ್ಲ ಕೇಳುವುದು, ಒಬ್ಬ ವಿಮರ್ಶಕನನ್ನು.[1]

ಎರಡನೆಯದಾಗಿ, 'ವಿಮರ್ಶೆ ಒಂದು ಅನುಭವಕ್ಕೂ ಮತ್ತೊಂದು ಅನುಭವಕ್ಕೂ ಇರುವ ವ್ಯತ್ಯಾಸಗಳನ್ನು ಗುರುತಿಸಿ ಬೆಲೆ ಕಟ್ಟುವ ಪ್ರಯತ್ನ'.[2] ಇಂತಹ ಪ್ರಯತ್ನದಲ್ಲಿ ವಿಮರ್ಶಕನೆನಿಸಿಕೊಂಡವನು, ಮಹಾಯೋಗಿ ಪರಕಾಯ ಪ್ರವೇಶಮಾಡಿದಂತೆ, ಪರ ಮನವನ್ನು ಪ್ರವೇಶಿಸಬೇಕಾಗುತ್ತದೆ. 'ನಮ್ಮಿಂದ ಭಿನ್ನವಾದ ಅನ್ಯ ಮನೋಧರ್ಮಗಳನ್ನು ಪ್ರವೇಶಿಸುವ ಸಾಮರ್ಥ್ಯವೇ ವಿಮರ್ಶೆಯ ಸಾರ.'[3] ಹೀಗಿರುವ ಭಿನ್ನ ಮನೋಧರ್ಮಗಳನ್ನುಅರಿಯ ಬೇಕಾದರೆ ಭಿನ್ನ ಹೃದಯಗಳು ಇರಲೇಬೇಕು. ಕವಿ ಹೃದಯವನ್ನರಿಯಲು ವಿಮರ್ಶನ ಹೃದಯವೇ ಆಗಬೇಕು.

ಮೂರನೆಯದಾಗಿ, 'ಅಪಾರೇ ಕಾವ್ಯ ಸಂಸಾರೇ ಕವಿರೇವ ಪ್ರಜಾಪತಿಃ',[4] ಅವನೇ ಅಲ್ಲಿ ಸೃಷ್ಟಿಕರ್ತ; ಕಾವ್ಯ ಕನ್ನಿಕೆಯ ತಂದೆ, ಗಂಡ ಅಲ್ಲ. ರಸಿಕ ಅವಳ ಗಂಡ. ಆ ಕಾರಣ 'ಕವಿತಾ ರಸ ಮಾಧುರ್ಯಂ ರಸಿಕೋವೇತ್ತಿನೋ ಕವಿಃ 'ಅಲ್ಲವೇ !

ಒಟ್ಟಿನಲ್ಲಿ ಕಾವ್ಯವನ್ನು ವಿಮರ್ಶಿಸುವ ಅಧಿಕಾರ ಕವಿಗಿಲ್ಲ, ಅಧಿಕೃತ ರಹದಾರಿ ಪಡೆದ ಅಧಿಕಾರೀ ವಿಮರ್ಶಕನಿಗೆ.

ಇದು ಒಂದು ವಾದ,
ಆದರೆ ಮತ್ತೊಂದು ವಾದ ಇದೆ.

'...to judge of the poets is only the faculty of poets and not all poets, but the best.'[5] ಹಾಗೂ,

———

1 To the criticism of the arts and especially literature custom has given an independent place. In this respect it differs from all other kinds of criticism. When we want a judgement upon the soundness of Waterloo Bridge we call in an engineer or a practical architect—a man whose business is the making of bridges. But when we want a jndgement upon the soundness of a poem, often it is not a maker of poems whom we consult, but a critic.—R.A. Scott James, The Making of Literature, p.11.

2 I. A. Richards, The principles of Literary Criticism, p.2.

3 ಡಾ॥ ಜಿ.ಎಸ್. ಶಿವರುದ್ರಪ್ಪ, ವಿಮರ್ಶೆಯ ಪೂರ್ವಪಶ್ಚಿಮ, ಪು.4.

4 ಧ್ವನ್ಯಾಲೋಕ.

5 ಬೆನ್ ಜಾನ್‌ಸನ್‌ನ ಹೇಳಿಕೆಯನ್ನು ಸ್ಕಾಟ್ ಜೇಮ್ಸ್ ತನ್ನ, 'The Making of Literature' ಗ್ರಂಥದಲ್ಲಿ (ಪು. 14) ತಿಳಿಸುತ್ತಾನೆ.

ಸೊಗಯಿಸುವ ಕಬ್ಬವುಂ ಕಬ್ಬಿಗರಲ್ಲದೆ ಮೆಚ್ಚರ್'[6] ಎಂದು ಹೇಳುತ್ತದೆ.

ಇದರಂತೆ ಕವಿಗಳನ್ನು ನಿರ್ಣಯಿಸುವ ಹಕ್ಕು ಇರುವುದು ಕವಿಗಳಿಗೆ ಮಾತ್ರ— ಅದರಲ್ಲೂ ಉತ್ತಮ ವರ್ಗದ ಕವಿಗಳಿಗೆ – ಮಿಕ್ಕವರಿಗಿಲ್ಲ. ಕವಿಹೃದಯವಾದರೆ ಅದು ಕವಿ ನಡಿಗೆಯ ಸಪ್ಪುಳವನ್ನು ಚೆನ್ನಾಗಿ ಪ್ರತಿಧ್ವನಿಸಬಲ್ಲುದು. ಉಳಿದವರಿಗೆ ಅದನ್ನು ಗುರುತಿಸುವುದಕ್ಕೂ ಸಾಧ್ಯವಿಲ್ಲ. ಏಕೆಂದರೆ ಕವಿಯಲ್ಲದ ಬರಿಯ ವಿಮರ್ಶಕ ಎನಿಸಿ ಕೊಂಡವನು ಅಕ್ಷರಶಃ ಕಟುಕ; ವೈದ್ಯನಲ್ಲ. ಪ್ರಾಣಿಯೊಂದರ ಜೀವ ತೆಗೆದು, ಅದನ್ನು ಖಂಡ ತುಂಡಾಗಿ ಕತ್ತರಿಸಿ ಬೀಸಾಡುವುದು ಅವನ ಕರ್ಮ. ಡಾಕ್ಟರಂತೆ ಕಾವ್ಯ ಶರೀರಕ್ಕೆ ಅನಗತ್ಯವಾದ ಅಥವಾ ಅನಾವಶ್ಯಕವಾಗಿ ಬೆಳೆದು ಆತ್ಮನ ಆರೋಗ್ಯಕ್ಕೆ ಹಾನಿತರುವಂತಹ ಭಾಗಗಳಿದ್ದರೆ ಅವುಗಳನ್ನು ತೆಗೆದು ಹಾಕಿ, ಅದರ ಆರೋಗ್ಯವನ್ನು ಕಾಪಾಡುವುದಲ್ಲ ! ಪರನಿಂದೆಯೆ ಅವನ ನಿತ್ಯದ ಗಾಯತ್ರಿ! ಅವನು ನಿಜಕ್ಕೂ ಓರ್ವ ಕಲಾಯಿ ಸಾಬಿ ! ಕೆಲವು ವೇಳೆ ಪಾತ್ರೆಯ ತೂತು ಮುಚ್ಚುವುದಕ್ಕಿಂತ ಹೆಚ್ಚಾಗಿ ಇನ್ನಷ್ಟು ತೂತುಗಳನ್ನು ಮಾಡುತ್ತಾನೆ.[7]

ಮತ್ತೆ ಹೇಳಬೇಕೆಂದರೆ ಪ್ರಭಾವಶಾಲೀ ವಿಮರ್ಶಕ ತನ್ನ ಮಾತಿನ ಮೋಡಿ ಯಿಂದ ಮೂಲವನ್ನೇ ಮರೆಸಿ, ಅದರ ಮೇಲಿನ ತನ್ನ ವಿಮರ್ಶೆಯನ್ನೇ ಮೆರೆಸಿಬಿಡು ತ್ತಾನೆ. ಅಲ್ಲಿ ಊಟಕ್ಕಿಂತ ಉಪ್ಪಿನಕಾಯಿ ಪ್ರಮಾಣವೇ ಹೆಚ್ಚಾಗ ಬಹುದು. ಅಲ್ಲದೆ ಸ್ವಪ್ರತಿಷ್ಠೆಯ ಪ್ರದರ್ಶನಕ್ಕಾಗಿ ಓದುಗನನ್ನು ಹಾದಿ ತಪ್ಪಿಸಬಹುದು.

ಇಷ್ಟಕ್ಕೂ ವಿಮರ್ಶಕ ಎಂದರೆ ಯಾರು ? ಕವಿಯಾಗಿ ಕಾವ್ಯ ರಚನೆಯಲ್ಲಿ ಕೈ ಸಾಗದೆ ಸೋತವನು. 'a bad poet becomes a good critic' ಅಂದರೆ, ಅಲ್ಲಿ ಕವಿಯಾಗಿ ಸೋತವನು ಇಲ್ಲಿ ವಿಮರ್ಶಕನಾಗಿ ಗೆದ್ದಿದ್ದಾನೆ ! ಅವನ ಗೆಲವು ಅವನ ದಾಷ್ಟ್ರ್ಯದಿಂದಲೇ ಮೂಡಿದ್ದಾದರೆ ಕವಿ, ಕೃತಿ ಎಲ್ಲವೂ ಮಣ್ಣು ಮುಕ್ಕಿದಂತೆಯೇ. ಏಕೆಂದರೆ ಒಬ್ಬ ಕೆಟ್ಟ ಕವಿಗಿಂತ, ಒಬ್ಬ ದುಷ್ಟ ವಿಮರ್ಶಕ ಹೆಚ್ಚು ಅಪಾಯಕಾರಿ. ಕೆಟ್ಟ ಕವಿ ಮೂರು ಜನರನ್ನು ಕೆಡಿಸಿದರೆ, ದುಷ್ಟ ವಿಮರ್ಶಕ ನೂರು ಜನರನ್ನು ಹಾಳು ಮಾಡುತ್ತಾನೆ.

ಪರಿಸ್ಥಿತಿ ಯಾವಾಗಲೂ ಹೀಗಿರುವುದರಿಂದ ನಮಗೆ ವಿಮರ್ಶನ ಕಾರ್ಯಕ್ಕೆ ವಿಮರ್ಶಕ ಬೇಕಿಲ್ಲ, ಕವಿಯೇ ಬೇಕು !

---

6. ಆಂಡಯ್ಯ, ಕಬ್ಬಿಗರ ಕಾವಂ.
7 'Some will say critics are a kind of tinkers', said Ben Johnson, 'that make more faults than they mend ordinarily' —Scott James, The Making of Literatrue, p. 13.

ಆದರೆ ಮೊದಲನೆಯ ವಾದದವರು ಇವರನ್ನು ಪ್ರಬಲವಾಗಿ ವಿರೋಧಿಸುತ್ತಾರೆ.

ಊಟದ ರುಚಿಯನ್ನು ಹೇಳಲು ಅಡುಗೆ ಬಲ್ಲವನೇ ಆಗ ಬೇಕಿಲ್ಲ, ರುಚಿ ಬಲ್ಲವನಿಂದಲೂ ಸಾಧ್ಯ. ಊಟದ ವಿಮರ್ಶೆ ಅಡುಗೆಯವನದಲ್ಲ, ಅದನ್ನು ಸವಿದು ನೋಡುವ ರಸಿಕನ ಹಕ್ಕು. ಆದ್ದರಿಂದ ಕವಿಗಿಂತ, ಕಾದಂಬರಿಕಾರನಿಗಿಂತ, ನಾಟಕಕಾರನಿಗಿಂತ, ಚಿತ್ರಕಾರನಿಗಿಂತ ರಸಿಕವಿಮರ್ಶಕನ ನುಡಿ ನಮಗೆ ಹೆಚ್ಚು ಪ್ರಿಯ ಮತ್ತು ಮಾನ್ಯ.[8]

ಓದುಗನ ಹಾದಿ ತಪ್ಪಿಸುವುದು ವಿಮರ್ಶಕನ ಕೆಲಸವಲ್ಲ. ಅವನ ಆಸಕ್ತಿಯನ್ನು ಕೆರಳಿಸಿ ಅವನ ಅನುಭವ ದೀಪ್ತವಾಗುವಂತೆ ಮಾಡುವುದು.[9] ಎಷ್ಟಾದರೂ ವಿಮರ್ಶಕ ದೀಪ ಧಾರಿ, ದಂಡ ಧಾರಿಯಲ್ಲ. ಓದುಗನ ಕೈ ಹಿಡಿದು ಕವಿಯ ಬಳಿಗೆ ಕರೆದೊಯ್ಯುವ ಓರ್ವ ಸಹಾಯಕ. ಕಾವ್ಯ ಸೂಚ್ಯವಾಗಿರುತ್ತದೆ, ಅದನ್ನು ಕುರಿತ ವಿಮರ್ಶೆ ವಾಚ್ಯವಾಗಿರುತ್ತದೆ. ಆದರೆ ಅದನ್ನು ವ್ಯರ್ಥ ಎಂದು ಹೇಳುವಂತಿಲ್ಲ. ಏಕೆಂದರೆ ಅದು ಕವಿಯ ಕವಿತನದ ಅಸ್ತಿತ್ವವನ್ನು ಕಾಯುತ್ತದೆ, ಓದುಗರ ಮಾನಸಿಕ ಆರೋಗ್ಯವನ್ನು ರಕ್ಷಿಸುತ್ತದೆ, ಕವಿಗೂ ಓದುಗನಿಗೂ ಮಧ್ಯೆ ನಿಲ್ಲುವ ಒಂದು ರಸಸೇತು. ಅವನು ಕಟುಕನಲ್ಲ, ವೈದ್ಯ. ಕಳೆಯನ್ನು ಕಿತ್ತು, ಬೆಳೆಯನ್ನು ಬದುಕಿಸುವ ಓರ್ವ ಒಕ್ಕಲಿಗ, ಸಸ್ಯವನ್ನು ಹಾಳು ಮಾಡುವ ಪಶುವಲ್ಲ. ಅವನು ಪೂರ್ವ ಗ್ರಹಪೀಡೆಯಿಲ್ಲದ ನಿರ್ಲಿಪ್ತಮನಸ್ಕ, ನಿಷ್ಪಕ್ಷಪಾತಿ, ನಿರ್ದಾಕ್ಷಿಣ್ಯಪರ ವ್ಯಕ್ತಿ. ಅವನ ನಿರ್ದಾಕ್ಷಿಣ್ಯ ಪರತೆಯನ್ನು ಕಂಡು ನೀವು ಬರಿಯ ಟೀಕಾಚಾರ್ಯ ಎಂದು ನಿಂದಿಸಿದರೆ ಅದಕ್ಕೆ, 'Everybody wants criticism but appreciation' ಎಂಬ ವ್ಯಂಗ್ಯವನ್ನು ಹರಿಸಬೇಕಾಗುತ್ತದೆ. ವಿಮರ್ಶಕ ಕಾವ್ಯ ವಿಮರ್ಶೆ ಮಾಡುವಾಗ ಕವಿಯನ್ನು ಮರೆಯುತ್ತಾನೆ; ಮರೆಯಬೇಕು. ಪ್ರಾಮಾಣಿಕ ವಿಮರ್ಶೆ ಕವಿಯನ್ನು ಕುರಿತದ್ದಲ್ಲ, ಕೃತಿಯನ್ನು ಕುರಿತದ್ದು. ಅವನ ವೈಯಕ್ತಿಕ ವಿಚಾರದಿಂದ, ಸಂಕುಚಿತ ವ್ಯಕ್ತಿತ್ವದಿಂದ ದೂರನಾಗಿರುತಾನೆ. ಈ ರೀತಿಯ ವ್ಯಕ್ತಿಗಳ ವೈಚಿತ್ರ್ಯಗಳಿಂದ ಕವಿ ದೂರನಾಗಿರಲು ಸಾಧ್ಯವೇ ಇಲ್ಲ. ತನ್ನ ಕೃತಿಯನ್ನು

---

8. ibid, p 11
9. The chief function of criticism is to enlighten and stimulate —W. H. Hudsom, An Introducation to the study Literature, p 266.

ತಾನು ವಿಮರ್ಶಿಸುವಾಗ. ಆ ಕಾರಣ ಅವನು ನೀಡುವ ವಿಮರ್ಶೆ ಸಾಧುವೆನಿಸು ವುದಿಲ್ಲ.[10]

'ನಾನೇರುವೆತ್ತರಕೆ ನೀನೇರಬಲ್ಲೆಯಾ ? ನಾನಿಳಿಯುವಾಳಕ್ಕೆ ನೀನಿಳಿಯು ಬಲ್ಲೆಯಾ ?' ಎಂದರೆ. 'ಹೌದು, ನೀನು ತೋರ್ ಬೆರಳುಮಾಡಿ ತೋರಿದ ದಿಗಂತ ದಾಚೆಗೂ ಹೋಗಿ ಬರಬಲ್ಲೆ' ಎನ್ನುತ್ತಾನೆ ವಿಮರ್ಶಕ. ಅಷ್ಟೇ ಅಲ್ಲ, ರವಿಕಾಣದ್ದನ್ನು ಕವಿ ಕಂಡರೆ, ಕವಿಯೂ ಕಾಣದ್ದನ್ನು ಅನೇಕ ವೇಳೆ ವಿಮರ್ಶಕ ಕಾಣುತ್ತಾನೆ. ಆದ್ದರಿಂದ ಶ್ರೇಷ್ಠ ವಿಮರ್ಶಕ ಶ್ರೇಷ್ಠ ಕವಿಗೆ ಸಮಾನ. ಕಾವ್ಯ ಕವಿಯ ಜೀವನಾನುಭವದ ಫಲವಾದರೆ, ವಿಮರ್ಶೆ ವಿಮರ್ಶಕನ ಕಾವ್ಯಾನುಭವದ ಸಾರ. ಅಂತೆಯೇ ಅದು ಅವನ ಜೀವನಾನುಭವದ ಸಾರ ಸರ್ವಸ್ವವೂ ಅಹುದು.

ಉತ್ತಮ ವಿಮರ್ಶೆ ಉತ್ತಮ ಕಾವ್ಯದಂತೆಯೇ ಒಂದು ಸೃಜನಶೀಲ ಕಲೆ.[11] ಆದರೆ ಸಾಹಿತ್ಯಕ್ಕೆ ಬೆಲೆಕಟ್ಟುವ ಕಲೆ. ಕವಿಸೃಷ್ಟಿಗಿಂತಲೂ ಕಡಿಮೆ ಅಲ್ಲದ, ಕೀಳಲ್ಲದ ಸೃಷ್ಟಿ ಪೋಪ್ ಹೇಳುತ್ತಾನೆ—

> Both must alike from Heaven derive their light
> These both to judge, as well as those to write.[12]

ವಿಮರ್ಶೆಯೂ ಸಹ ಪ್ರತಿಭಾಜನ್ಯದ ಕವಿಯಲ್ಲಿ ಕಾರಯಿತ್ರೀ ಪ್ರತಿಭೆ ಕೆಲಸ ಮಾಡಿದರೆ ಸಹೃದಯನಲ್ಲಿ ಭಾವಯಿತ್ರೀ ಪ್ರತಿಭೆ ಜಾಗೃತವಾಗಿರುತ್ತದೆ. ನಿಜ ಆದರೆ ಸಹೃದಯ ವಿಮರ್ಶಕನದು ಇವೆರಡೂ ಪ್ರತಿಭೆಗಳಿಂದಾದ ಸೃಷ್ಟಿ. 'Poets are born, not made' ಕವಿ ಹೇಗೆ ಆದವನೊ ವಿಮರ್ಶಕನೂ ಕೂಡ ಹಾಗೆಯೇ ಆದವನು. ಮಾಡಿದವನಲ್ಲ.

---

10 ವರ್ಡ್ಸ್‌ವರ್ತ್ ತನ್ನ 'Lyrical Ballads' ದ್ವಿತಿಯ ಮುದ್ರಣಕ್ಕೆ ತಾನೆ ಬರೆದ ವಿಮರ್ಶಾತ್ಮಕವಾದ ಮುನ್ನುಡಿಯನ್ನು ನೋಡಿದರೆ ಈ ಮಾತಿನ ಸತ್ಯಾಂಶ ವೇದ್ಯವಾಗುತ್ತದೆ. ಅವನ ಸ್ವ-ಕೃತಿ ವಿಮರ್ಶೆಯ ದೋಷಗಳನ್ನು ತೋರಿಸಿಕೊಟ್ಟ ಅವನ ಸಮಕಾಲೀನ, ಅವನ ಅನುಯಾಯಿ ಎಸ್. ಟಿ. ಕೋಲ್‌ರೀಜನ 'Wordsworth's Theory of Diction ಲೇಖನವನ್ನು ಓದಿದರೆ ಮತ್ತೂ ಸ್ಪಷ್ಟವಾಗುತ್ತದೆ. ನೋಡಿ. English Critical Essays (Ninteenth Century 1) Edt. by Edmund D. Jones.

ಆ ಕಾರಣ ಕವಿ ತನ್ನ ಕಾವ್ಯವನ್ನು ತಾನೇ ವಿಮರ್ಶಿಸಲು ಹೋಗಬಾರದು, ನಾಟಕಕಾರ ತನ್ನ ನಾಟಕವನ್ನು ತಾನೇ ನಿರ್ದೇಶಿಸಲು ಹೋಗಬಾರದು.

11 '......criticism itself can be creative literature, if it makes imaginative use in the form of impulsive ideas, of the material which it observes.'—J. Donald Adams, The writer's Responsibility (1946), P. 16

12 Quotation taken from, 'The making of Literature, P. 12

ವಿಮರ್ಶೆ ಎಂಬುದು ಕವಿಯ ಕಾವ್ಯದಂತೆ ಒಂದು ವ್ಯಕ್ತಿನಿಷ್ಠ ಸೃಷ್ಟಿ. The criticism of literature is often as entirely individual as the creation of literature and as much the work of indefinable genius.[13] ಅಷ್ಟೇ ಅಲ್ಲ, ಪ್ರತಿ ಯುಗಾದಿಗೂ ಒಬ್ಬ ಕವಿ ಹುಟ್ಟಬಹುದು. ಆದರೆ ಶತಮಾನಕ್ಕೊಬ್ಬ ಹುಟ್ಟುತ್ತಾನೆ ಅಧಿಕಾರೀ ವಿಮರ್ಶಕ. ತಾನು ಬದುಕಿ ಹಲವು ಕವಿಗಳನ್ನು ಬದುಕಿಸುತ್ತಾನೆ ; ಸಹೃದಯವೃಂದವನ್ನು ಬೆಳೆಸಿ, ಅದರ ರುಚಿಗ್ರಹಣ ಶಕ್ತಿಯನ್ನು ಹೆಚ್ಚಿಸುತ್ತಾನೆ. ಪ್ರಾಚೀನ ಕವಿ ಕೃತಿಗಳ ಬಗೆಗೆ ಹೆಚ್ಚು ಬೆಳಕು ಚೆಲ್ಲುತ್ತಾನೆ. ಅದ್ಯತನದ ಕವಿತೆಯನ್ನು ತಿದ್ದುತ್ತಾನೆ, ಆಗಾಮಿ ಕವಿಗೆ ಮಾರ್ಗದರ್ಶನ ನೀಡುತ್ತಾನೆ. ಕವಿಗೂ ಓದುಗನಿಗೂ ಮಧ್ಯೆ ನಿಲ್ಲುವ ಈ ತದ್ವಿಧನ ನೆರವು ಇಲ್ಲದಿದ್ದರೆ ಸಾಹಿತ್ಯ ಪ್ರಪಂಚ ಇನ್ನೂ ಅಂಧಕಾರಮಯವಾಗಿಯೇ ಇರಬೇಕಾಗುತ್ತಿತ್ತು. ಒಂದು ಮಾತಿನಲ್ಲಿ ಹೇಳಬೇಕೆಂದರೆ ಶೇಕ್ಸ್‌ಪಿಯರ್ ಬದುಕಿರುವುದು ಎ. ಸಿ. ಬ್ರಾಡ್ಲೆಯಿಂದ!

ಆ ಕಾರಣ, ಕವಿಗಿಂತ-ಬೇಡ–ಕವಿಯಷ್ಟೇ ಪ್ರಮುಖ ಪಾತ್ರ ವಿಮರ್ಶಕನದು. ಕಾವ್ಯವಿಮರ್ಶೆಯ ಕೆಲಸ ವಿಶೇಷವಾಗಿ ವಿಮರ್ಶಕನನ್ನೇ ಅವಲಂಬಿಸಿದೆ.

ಸಾಹಿತ್ಯ ಸೃಷ್ಟಿ ಮತ್ತು ಸಾಹಿತ್ಯ ವಿಮರ್ಶೆ–ಇವುಗಳನ್ನು ಕುರಿತ ಇಂತಹ ವಾದಗಳು ಅನೇಕವಿವೆ. ಅಂತೆಯೇ ಅವುಗಳನ್ನು ಸಮನ್ವಯಗೊಳಿಸುವ ವಿಧಾನವೂ ಒಂದಿದೆ.

ಕವಿ ಮತ್ತು ವಿಮರ್ಶಕ ಬೇರೆ ಬೇರೆ ವ್ಯಕ್ತಿಗಳಲ್ಲ. ಅವರಿಬ್ಬರೂ ಒಟ್ಟಿನಲ್ಲೇ ಅಂತರ್ಗತವಾಗಿರುವ ಶಕ್ತಿಗಳು.

॥ಶ್ರೀ ಪ್ರಕಾಶ–ವಿಮರ್ಶ–ಸಾಮರಸ್ಯಾತ್ಮಕ ಬ್ರಹ್ಮವಿದ್ಯಾ॥[14]

ಅಂದರೆ ಪರವಸ್ತು ಅಥವಾ ಪರಬ್ರಹ್ಮನಲ್ಲಿ ಶ್ರೀ ಪ್ರಕಾಶ ಅಂದರೆ ಪರಂಜ್ಯೋತಿ ಪ್ರಕಾಶವೂ, ಆ ಪ್ರಕಾಶದಲ್ಲಿ ತರಂಗದೋಪಾದಿಯಲ್ಲಿರುವ ವಿಮರ್ಶಾಶಕ್ತಿ ಅಥವಾ ಪರಾಶಕ್ತಿ ಮುಂತಾದ ನಾಮಗಳಿಂದ ಕರೆಯುವ ಪಾರಮೇಶ್ವರೀ ಶಕ್ತಿ ಇವು ಅವಿಭಾಜ್ಯ ಅಂಶಗಳಾಗಿ ಸೇರಿಕೊಂಡಿರುವಂತೆ ಕವಿ ಮತ್ತು ವಿಮರ್ಶಕರಿಬ್ಬರೂ ಒಬ್ಬನಲ್ಲೇ ಅಡಗಿರುತ್ತಾರೆ. ಪರವಸ್ತು ಒಂದೇ ಆಗಿದ್ದರೂ ಅದರ ಸ್ವರೂಪಗಳನ್ನು ಹೇಳುವುದಕ್ಕಾಗಿ ಶ್ರೀಪ್ರಕಾಶ ಮತ್ತು ವಿಮರ್ಶ ಎಂಬ ಭಿನ್ನ ಶಬ್ದಗಳನ್ನು ಬಳಸಿದಂತೆ ಕವಿ ಮತ್ತು ವಿಮರ್ಶಕ ಶಬ್ದಗಳನ್ನು ಬಳಸಲಾಗಿದೆ. ಇವರಿಬ್ಬರೂ ಜಲ+ತರಂಗ, ವಾಯು+ತರಂಗ, ಪ್ರಕಾಶ+ತರಂಗ ಇದ್ದಂತಿರುತ್ತಾರೆ. 'ಸಮುದ್ರ ನೋಡಿ ಹೇಗಿದೆ' ಅಂದಾಗ ನಮಗೆ ಕಾಣುವುದು ಬರಿಯ ನೀರೇ ಅಲ್ಲ, ಅದರ ಅಲೆಗಳೂ ಹೌದು. ಅಲ್ಲಿ ಜಲ ಮತ್ತು ತರಂಗ ಬೇರೆ ಬೇರೆ ಆಲ್ಲವೇ ಅಲ್ಲ, ಅದೇ ರೀತಿ ಕಾವ್ಯ ಅಂದರೆ

---

13 Lascelles Aber Crombie, The Principles of Literary criticism, P. 121

14. ಸ್ವಪ್ರಭಾನಂದ, ಶಿವಾದ್ವೈತ ಮಂಜರಿ (ಅಂತ್ಯ ಭಾಗದಲ್ಲಿ)

ಕವಿ ಮತ್ತು ವಿಮರ್ಶಕ ಪ್ರತ್ಯೇಕ ಅಲ್ಲ; ಇಬ್ಬರೂ ಕೂಡಿದಾಗ ಪೂರ್ಣಗೊಂಡ ಕೃತಿ ಎಂಬುದೇ ಪರಿಭಾವನೆ.

ಕಣವಿಯವರಲ್ಲಿ ಕವಿಯೂ ಇದ್ದಾನೆ, ವಿಮರ್ಶಕನೂ ಇದ್ದಾನೆ. 'ಕೃತಿ ನಿರ್ಮಾಣ ಶಕ್ತಿಯೂ, ಕೃತಿವಿಮರ್ಶನ ಶಕ್ತಿಯೂ ಮೂಲತಃ ಬೇರೆಬೇರೆ ಅಲ್ಲ. ಅವು ಒಂದೇ ಅಖಂಡ ಕ್ರಿಯೆಯ ಎರಡು ಮುಖಗಳು'[15] ಆ ಕಾರಣದಿಂದಲೇ ಇರಬೇಕು ನಮ್ಮವರು ಕವಿ ಹೃದಯವೂ, ಸಹೃದಯ ವಿಮರ್ಶಕನ ಹೃದಯವೂ ಸಮಶ್ರುತಿಯ ಎರಡು ವೀಣೆಗಳು ಎಂದು ಕರೆದಿರುವುದು,

ಕವಿ ಮತ್ತು ಸಹೃದಯ ಒಂದೇ ನಾಣ್ಯದ ಎರಡು ಮುಖಗಳು. ಸರಸ್ವತಿಯನ್ನು 'ಕವಿ ಸಹೃದಯಾಖ್ಯ ಸ್ವರೂಪಿಣಿ' ಎಂದು ಸಂಬೋಧಿಸಿ, ಉಭಯತ್ರರನ್ನೂ ಸಮಾನ ಸ್ಥಾನದಲ್ಲಿರಿಸಿ ಗೌರವಿಸಿದ್ದಾರೆ. ಇಬ್ಬರೂ ಸರಸ್ವತಿಯ ಅಮೃತ ಪುತ್ರರು, ಸರಸ್ವತಿಯ ಒಂದೇ ತತ್ತ್ವಕ್ಕೆ ಕೊಟ್ಟ ಎರಡು ಹೆಸರುಗಳು.

ಇಲ್ಲಿ ಗಮನಿಸಬೇಕಾದ ಮತ್ತೊಂದು ಅಂಶವಿದೆ. ಅದು ಸಹೃದಯನಿಗೂ, ವಿಮರ್ಶಕನಿಗೂ ಸಂಬಂಧಿಸಿದ್ದು, ಅದನ್ನು ಲ್ಯಾಸಲೆಸ್ ಅಬರ್‌ಕ್ರಾಂಬಿ ಒಂದೆಡೆ ಪ್ರಸ್ತಾಪಿಸಿದ್ದಾನೆ. ಅವನ ಪ್ರಕಾರ ಕಾವ್ಯಗಳಲ್ಲಿ ಮೂರು ಶಕ್ತಿಗಳ ಕಲಾ ಕೈವಾಡವಿದೆ—

(i) the power to create–ಸೃಷ್ಟಿ ಶಕ್ತಿ (ಕವಿ)
(ii) the power to enjoy–ಸಹೃದಯ ಶಕ್ತಿ (ಸಹೃದಯ)
(iii) the power to criticzie-ವಿಮರ್ಶನ ಶಕ್ತಿ(ವಿಮರ್ಶಕ)

–ಈ ಮೂರೂ ಶಕ್ತಿಗಳ ಕಾರ್ಯ ಚಟುವಟಿಕೆಗಳಿಂದ ಪೂರ್ಣವಾಗಿದೆ ಕಾವ್ಯ.[16] ಆದರೆ ಇಲ್ಲಿ ಸಹೃದಯ ಸಂಪಾದಕ್ಕೂ, ವಿಮರ್ಶನ ಕ್ರಿಯೆಗೂ ಸೂಕ್ಷ್ಮ ವ್ಯತ್ಯಾಸವಿದೆ. ಕವಿಯಲ್ಲಿ ವಿಮರ್ಶಕನಿದ್ದಂತೆ, ವಿಮರ್ಶಕನಲ್ಲಿ ಸಹೃದಯನು ಅಂತರ್ಗತನಾಗಿದ್ದಾನೆ. ಸಹೃದಯರೆಲ್ಲರೂ ವಿಮರ್ಶಕರೇ ಆಗಿರಬೇಕೆಂಬ ನಿಯಮವಿಲ್ಲ ; ಆದರೆ ವಿಮರ್ಶಕರು ಮಾತ್ರ ಸಹೃದಯರಾಗಿರಲೇಬೇಕು, ಸಹೃದಯತೆ ಅಧಿಕಾರೀ ವಿಮರ್ಶಕನ ಆದ್ಯ ಅರ್ಹತೆ.

ನಮ್ಮ ಪ್ರಾಚೀನರು 'ಅರಸಿಕೇಷು ಕಾವ್ಯ ನಿವೇದನಂ ಶಿರಸಿ ಮಾಲಿಖ ಮಾಲಿಖ ಮಾಲಿಖ' ಎಂದು ಪ್ರಾರ್ಥಿಸಿ ಸಹೃದಯನನ್ನು ಕೊಡು ಎಂದು ಬೇಡಿದರು ಬ್ರಹ್ಮನನ್ನು. ಕಾರಣ ಅವರು ಕೊರೆವ ಕೃತಿಗಳನ್ನು ಕೇಳಲು ಸಹೃದಯನೊಬ್ಬ ಬೇಕಾಗಿದ್ದ. ಪಾಶ್ಚಾತ್ಯರು ವಿಶೇಷವಾಗಿ ವಿಮರ್ಶಕನನ್ನು ಆಹ್ವಾನಿಸಿದರು. ಕಾರಣ ಅವರ ಕೃತಿಗಳನ್ನು ಒರೆ ಹಚ್ಚಿ ನೋಡುವ ಓರ್ವ ವಿಮರ್ಶಕ ಬೇಕಾಗಿದ್ದ. ನಮ್ಮಲ್ಲಿ ಮೀಮಾಂಸೆ ಬೆಳೆಯಿತು ;

---

15 Nalinikantha Gupta poets and Mystics, P. 49.

16 'We may say then' the realm of literature is occupied by the, activities of three distinct powers ; the power to create, the power to enjoy, and the power to criticize ;

-L. Aber crombie, The Principles o
Literary criticism(1965), p.9

ಅವರಲ್ಲಿ ವಿಮರ್ಶೆ ಬೆಳೆಯಿತು. ಪಾಶ್ಚಾತ್ಯರು ಕಾವ್ಯವನ್ನು ಕವಿ ದೃಷ್ಟಿಯಿಂದ ಅಳೆದರು; ಭಾರತೀಯರು ಸಹೃದಯನ ದೃಷ್ಟಿಯಿಂದ ಅಳೆದರು.

ಅನೇಕ ವಿಧದಲ್ಲಿ ಭಾರತೀಯ ದೃಷ್ಟಿಯನ್ನು ಮೆಚ್ಚಿಕೊಂಡು, ಅದನ್ನು ತನ್ನ ಕಾವ್ಯಗಳಲ್ಲೂ, ವಿಮರ್ಶೆಗಳಲ್ಲೂ ಅರ್ಥಪೂರ್ಣವಾಗಿ ಅಳವಡಿಸಿಕೊಂಡವನು ಕವಿ–ವಿಮರ್ಶಕ ಟಿ. ಎಸ್. ಎಲಿಯಟ್. ಭಾರತೀಯ ಆಲೋಚನೆಗೆ ಬಹಳವಾಗಿ ಮಾರು ಹೋದ ಆತ, ಅದನ್ನು ಆಧರಿಸಿದಂತೆ ಹಲವು ಸಿದ್ಧಾಂತಗಳನ್ನು ರೂಪಿಸಿದ್ದಾನೆ ಸಾಹಿತ್ಯ ವಿಮರ್ಶಾ ಕ್ಷೇತ್ರದಲ್ಲಿ. ಕವಿಸೃಷ್ಟಿಗೂ, ಕಾವ್ಯವಿಮರ್ಶೆಗೂ ಇರುವ ಬಾಂಧವ್ಯದ ಬಗೆಗಿನ ಅವನ ಸೈದ್ಧಾಂತಿಕ ಸ್ವರೂಪವನ್ನು ಅವನ 'The function of Literary criticism' ಲೇಖನದಲ್ಲಿ ದರ್ಶಿಸಬಹುದು.[17]

ಕಲಾಸೃಷ್ಟಿಯಂತೆಯೆ ಕಲಾವಿಮರ್ಶೆಯೂ ತನ್ನನ್ನು ತಾನು ಮರೆಯಬೇಕು. ಈ ಅರ್ಥದಲ್ಲಿ ವಿಮರ್ಶಕನು ಕಲಾವಿದನೇ ಆಗುತ್ತಾನೆ. ತನ್ನನ್ನು ತಾನು ಮರೆಯು ವುದರಲ್ಲಿಯೇ ಕಲಾವಿದನ ಹಿರಿಮೆ ಇರುವಾಗ ಅದೇ ತನ್ಮಯತೆಯನ್ನು ಪುನರ್ ಅನುಭವಿಸುವಲ್ಲಿ ವಿಮರ್ಶಕನ ಹಿರಿಮೆ ಇದೆ. ಕೃತಿಯಲ್ಲಿರುವ ಅನುಭವವನ್ನು ತನ್ಮಯತೆ ಯಿಂದ ಸವಿದು, ಅದೇ ತನ್ಮಯತೆಯನ್ನು ಓದುಗನಿಗೂ ಹಂಚಿಕೊಡುವ ಕಾರ್ಯ ವಿಮರ್ಶಕನದು. ಹೀಗೆ ಮಾಡುವಾಗ ಸಹೃದಯನ ಅಭಿರುಚಿಯನ್ನೂ ಉತ್ತಮ ಗೊಳಿಸಬೇಕಾಗುತ್ತದೆ ವಿಮರ್ಶಕ. ಕಲಾತ್ಮಕವಾದ ಅನುಭವವನ್ನು ಪಡೆಯುವುದರ ಜೊತೆಗೆ ಓದುಗರ ಅಭಿರುಚಿಯನ್ನು ಎಚ್ಚರಗೊಳಿಸಬೇಕಾಗುತ್ತದೆ.

ಆ ಕಾರಣ ವಿಮರ್ಶಕನ ಹೊಣೆ ಇಬ್ಬಗೆಯದು : ಒಂದು, ಕಲಾವಿದನ ಅನುಭವ ವನ್ನು ತಾನು ಮೊದಲು ಸವಿದು, ಅನುಭವಿಸಿ, ಅದನ್ನು ಹೊರಹೊಮ್ಮಿಸುವುದು ; ಎರಡು, ಆ ಅನುಭವವನ್ನು ಸಹೃದಯನೂ ಪಡೆಯಲು ಸಮರ್ಥನಾಗುವಂತೆ ಅವನನ್ನು ಮೇಲಕ್ಕೆತ್ತಿಕೊಳ್ಳುವುದು. ಈ ದೃಷ್ಟಿಯಿಂದ ಆತ ಕಲಾಕೃತಿಗಳನ್ನು ವಿಂಗಡಿಸಿಕೊಳ್ಳು ತ್ತಾನೆ, ವಿಭಜಿಸುತ್ತಾನೆ, ಒರೆಗಲ್ಲಿಗೆ ಹಚ್ಚಿ ಉಜ್ಜಿ ನೋಡುತ್ತಾನೆ. ಅವುಗಳ ನಿಜವಾದ ಬಣ್ಣವನ್ನು ಬಯಲಿಗೆಳೆಯುತ್ತಾನೆ. ವಾಸ್ತವವಾಗಿ ಈ ಎರಡೂ ಕ್ರಿಯೆಗಳು ವಿಮರ್ಶಕನ ಪ್ರತಿಭಾಶಕ್ತಿಮೂಲವಾದ ಅನುಭವದಿಂದ ಮೂಡಿಬರುವಂಥವು. ಅನೇಕ ಕಡೆಗಳಲ್ಲಿ ಇವು ಗುರುತಿಸಲಾಗದಂತೆ ಒಂದರೊಡನೊಂದು ಸಮರಸಗೊಂಡಿರುತ್ತವೆ. ಅಂತೆಯೇ ಈ ಶಕ್ತಿಗಳ ಸಮನ್ವಯ ಆಯಾ ವಿಮರ್ಶಕನ ವ್ಯುತ್ಪತ್ತಿ ಮತ್ತು ಸಾಮರ್ಥ್ಯಗಳನ್ನು ಅವಲಂಬಿಸಿರುತ್ತದೆ. ಉದಾಹರಣೆಗೆ ಮಿಡ್ಲ್‌ಟನ್ ಮರ್ರಿ. ಅವನ ವಿಮರ್ಶಾಪದ್ಧತಿ ಯನ್ನು ಅವನ ಅಂತರ್ವಾಣಿಯೇ ನಿರ್ಧರಿಸುತ್ತಿದ್ದಂತೆ ತೋರುತ್ತದೆ. ಅಂದರೆ ಆತ ತನ್ನ

17 T. S, Eliot, The Function of Criticism, Thıee Essays (1974)

ವಿಮರ್ಶಾ ಪದ್ಧತಿಯಲ್ಲಿ ಹೊರಗಿನ ಯಾವ ತತ್ವಗಳಿಗೂ ಕಟ್ಟು ಬೀಳದೆ ತನ್ನ ಅಂತರ್ವಾಣಿಯನ್ನೇ ಅವಲಂಬಿಸುತ್ತಿದ್ದನೆನ್ನಬಹುದು. ಅನೇಕ ಸಂದರ್ಭಗಳಲ್ಲಿ ಅವನ ಅಂತರ್ವಾಣಿಯ ಉಕ್ತಿ ಸರಿಯಾಗಿಯೂ ಇರುತ್ತಿತ್ತು. ಆದರೆ ವಿಮರ್ಶಾಸೂತ್ರಗಳಲ್ಲಿ ಅಂತರ್ವಾಣಿಯೊಂದನ್ನೇ ನೆಚ್ಚಿದರೆ ಸಾಲದು. ಹೊರಗಿನ ಎಲ್ಲಾ ತತ್ವಗಳನ್ನೂ ಅವಲಂಬಿಸಿ, ಕೊನೆಯಲ್ಲಿ ಅಂತರ್ವಾಣಿಯತ್ತ ಹೋಗಬಹುದು,

ವಿಮರ್ಶಾಶಕ್ತಿ ಎಂಬುದನ್ನು ಎರಡು ಹಂತಗಳಲ್ಲಿ ನಾವು ಗಮನಿಸಬಹುದು. ಒಂದರ್ಥದಲ್ಲಿ ಕಲಾವಿದನ ಸೃಷ್ಟಿಯೆಲ್ಲವೂ ವಿಮರ್ಶೆಯ ಪರಿಣಾಮವಾಗಿಯೇ ಮೂಡಿ ಬಂದುದು. ಕವಿಯ ಕಾವ್ಯರಚನೆಯಲ್ಲಿ ವಿಮರ್ಶೆಯ ಪಾತ್ರವೇ ಬಹು ಪ್ರಧಾನವಾದುದು. ಅಂದರೆ ಇದು ಇನ್ನೊಂದು ಕೃತಿಯನ್ನು ಬೆಲೆಗೊಡುವ ವಿಮರ್ಶೆಯಲ್ಲಿ, ತನ್ನ ಕೃತಿಯನ್ನೇ ಸತ್ವಯುತವನ್ನಾಗಿ ಮಾಡಲು ಕವಿ ಪಡುವ ವಿವೇಚನೆ. ವಸ್ತುವನ್ನು ಆಯುವಿಕೆಯಿಂದ ಹಿಡಿದು ಕೃತಿಯಲ್ಲಿ ಕೃತಕೃತ್ಯವಾಗುವತನಕ ಕವಿಯಲ್ಲಿ ಈ ಶಕ್ತಿ ನಿರಂತರವಾಗಿ ಕಾರ್ಯ ನಿರ್ವಹಿಸುತ್ತದೆ. ಆದರೆ ಸೃಷ್ಟಿ ಶಕ್ತಿಗೆ (Creative power) ವಿಮರ್ಶನ ಶಕ್ತಿಯೂ (Critical power) ಕೂಡ ಅನಿವಾರ್ಯವಾಗಿ ಬೇಕು. ಮತ್ತು ಅದು ಪೂರಕವಾಗಿರಬೇಕು.

ಅತ್ಯಂತ ಮಹೋನ್ನತವಾದ ಸೃಷ್ಟ್ಯಾತ್ಮಕವಾದ ಸನ್ನಿವೇಶದಲ್ಲಿಯೂ ಈ ವಿಮರ್ಶಾಪ್ರಯತ್ನ ಇದ್ದೇ ತೀರುತ್ತದೆ. ಆದರೆ ಅದು ಅಗೋಚರವಾದದ್ದು ; ಸೃಷ್ಟ್ಯಾತ್ಮಕ ವಿಹಾರಕ್ಕೆ ಅದು ರೆಕ್ಕೆಯಾಗುವಂಥದು.

ಅನೇಕರಲ್ಲಿ ಈ ವಿಮರ್ಶಾಶಕ್ತಿ ಸೃಷ್ಟ್ಯಾತ್ಮಕವಾಗಿರುವುದಿಲ್ಲ. ಅದು ಕೇವಲ ಬುದ್ಧಿ ಪ್ರಧಾನವಾದ ವಿವೇಚನೆಯಾಗಿ ಉಳಿಯುತ್ತದೆ. ಅದು ಕೇವಲ ಬುದ್ಧಿಯ ಹೊರೆಯಾಗಿ ಪರಿಣಮಿಸಿದಾಗ ಶುಷ್ಕ ಪಾಂಡಿತ್ಯವಾಗುತ್ತದೆ. ಅದರಿಂದ ಒಳ್ಳೆಯ ವಿಮರ್ಶೆಯೂ ಸಿದ್ಧಿಸಲಾರದು. ಇನ್ನೂ ಕೆಲವು ವೇಳೆ ಈ ವಿಮರ್ಶನ ಶಕ್ತಿ ಸ್ವತಂತ್ರ ಸೃಷ್ಟಿಯ ಕಡೆಗೆ ವಿಮುಖವಾಗದೆ ಸೃಷ್ಟಿಯಾದ ಕಲಾತ್ಮಕ ಅನುಭವಗಳನ್ನು ಕಾಣುವತ್ತ ಹರಿಯಬಹುದು. ಆಗ ಅದು ಪ್ರಸ್ತುತ ಅರ್ಥದಲ್ಲಿ ಸಾಹಿತ್ಯ ವಿಮರ್ಶೆಯಾಗಿ ಪರಿಣಮಿಸುತ್ತದೆ.

ವಿಮರ್ಶಕರೆಲ್ಲರೂ ಕವಿಗಳಾಗಬೇಕೆಂಬ ನಿಯಮವಿಲ್ಲ. ಆದರೆ ಕವಿಮನೋಧರ್ಮವನ್ನರಿಯುವ ಶಕ್ತಿಯನ್ನಂತೂ ಅವರು ಪಡೆದಿರಲೇಬೇಕು. ಅವರ ವಿಮರ್ಶನ ಶಕ್ತಿ ಶುಷ್ಕ ಪಾಂಡಿತ್ಯವಾಗದೆ, ಶಾಸ್ತ್ರಜ್ಞಾನಗಳ ಜೊತೆಗೆ ಕವಿ ಮನೋಧರ್ಮದ ಕಡೆಗೂ ಹರಿಯಬೇಕಾಗುತ್ತದೆ.

ವಿಮರ್ಶಕನಿಗೆ ವಿಷಯ ಪರಿಜ್ಞಾನ ಮತ್ತು ಅದನ್ನು ಬಳಸಿಕೊಳ್ಳುವ ಔಚಿತ್ಯ ಜ್ಞಾನ ಅತ್ಯಂತ ಅವಶ್ಯಕ. ಕಾವ್ಯದಲ್ಲಿ ಅಭಿವ್ಯಕ್ತಗೊಂಡ ಅನುಭವವನ್ನು ವಿಶ್ಲೇಷಿಸುವ ವಿವೇಚಿಸುವ ಅವುಗಳ ಪರಸ್ಪರ ಸಂಬಂಧವನ್ನು ತುಲನೆಮಾಡುವ ತೌಲನಿಕದೃಷ್ಟಿ

ಅತ್ಯಗತ್ಯ. ವಿಮರ್ಶಕನ ಕೈಯಲ್ಲಿರುವ ಮುಖ್ಯವಾದ ಎರಡು ಆಯುಧಗಳೆಂದರೆ ತುಲನೆ ಮತ್ತು ವಿಭಜನೆ (Comparision and analysis). ಆದರೆ ಇವುಗಳನ್ನು ಬಹು ಎಚ್ಚರಿಕೆಯಿಂದ ವಿಮರ್ಶಕ ಬಳಸಬೇಕಾಗುತ್ತದೆ. ಅನೇಕ ವೇಳೆ ವಿಮರ್ಶಕರು ತಾವು ಸಂಗ್ರಹಿಸಿದ ವಿಷಯಗಳಿಗೆ ದಾಸರಾಗುತ್ತಾರೆ. ವಿಮರ್ಶಕರಲ್ಲಿ ಪಾಂಡಿತ್ಯದೃಷ್ಟಿ ಪ್ರಖರವಾದಾಗ ಈ ದೋಷ ಸಂಭವಿಸುತ್ತದೆ. ಪಾಂಡಿತ್ಯ ಸಂಶೋಧನೆಗಳಿಗೆಲ್ಲಾ ಸ್ಥಾನವಿದೆ ನಿಜ, ಆದರೆ ಅವೇ ಸರ್ವಸ್ವ ಅಲ್ಲ. ನಿಜವಾಗಿಯೂ ಪುಷ್ಟೀಕರಿಸುವುದು ಸಂಗ್ರಹಿಸಿದ ವಿಷಯಗಳಿಂದ ಅಡುಗೆ ತಯಾರಾದಾಗಲೇ. ಹಾಗೆ ಪುಷ್ಟಿದಾಯಕವಾದ ಅನುಭವಪಾಕವನ್ನು ಕೊಡುವವನೇ ವಿಮರ್ಶಕ. ಪಾಂಡಿತ್ಯ ಸಂಶೋಧನೆಗಳಿಂದ ಆಚಿನ ಹೆಜ್ಜೆ ಆ ವಿಮರ್ಶಾಶಕ್ತಿ.

ಕೃತಿಗಳನ್ನು ಕುರಿತು ವಿಮರ್ಶಕ ತನ್ನ ಪಾಂಡಿತ್ಯ ಸಂಶೋಧನೆಗಳ ಹಿನ್ನೆಲೆಯಲ್ಲಿ ಆದಕ್ಕೆ ಅತೀತವಾದ ಸಹೃದಯತೆಯ ತನ್ಮಯತೆಯಲ್ಲಿ ಕೃತಿಗಳನ್ನು ಓದಿ, ಅವುಗಳ ಅನುಭವವನ್ನು ಪಡೆಯಬೇಕು. ಸಂಶೋಧನೆ ಅಭಿರುಚಿಯನ್ನು ಕೆಡಿಸುವಂತಿರಬಾರದು; ಅಭಿಪ್ರಾಯಗಳನ್ನೂ ತೀರ್ಮಾನಗಳನ್ನೂ ಹೇರುವಂತಿರಬಾರದು. ಅಭಿಪ್ರಾಯಗಳಾಗಲಿ, ತೀರ್ಮಾನಗಳಾಗಲಿ ಇಲ್ಲಿ ಮುಖ್ಯವಲ್ಲ. ಕೃತಿಯಿಂದ ಪಡೆದ ಅನುಭವ, ಅದನ್ನು ಅಭಿವ್ಯಕ್ತಪಡಿಸಿರುವ ರೀತಿ ಇವು ಮುಖ್ಯವೆನಿಸುತ್ತವೆ ವಿಮರ್ಶೆಯಲ್ಲಿ. ಒಂದು ಬಗೆಯ ಸಹಕಾರ ಮನೋಧರ್ಮದಿಂದ ಅಂದರೆ ಪಾಂಡಿತ್ಯ ಮತ್ತು ಸಹೃದಯತೆಗಳ ಸಹಕಾರದಿಂದ ಒಳ್ಳೆಯ ವಿಮರ್ಶೆ ರೂಪುಗೊಳ್ಳಬಹುದು. ಈ ಎರಡೂ ಹಿತವಾದ ರೀತಿಯಲ್ಲಿ ಬಳಕೆಯಾದಾಗ ಅತೀತವಾದ ಸತ್ಯವನ್ನು ಕಾಣಬಹುದಾಗಿದೆ.

ಈ ಹೊಸ ಬೆಳಕಿನಲ್ಲಿ ವೀಕ್ಷಿಸಿದಾಗ ಕಣವಿಯವರು ವಿಮರ್ಶಕನನ್ನೊಳಗೊಂಡ ಕವಿಯಾಗಿ, ಕವಿ ಹೃದಯದ ವಿಮರ್ಶಕನಾಗಿ ಗೋಚರಿಸುತ್ತಾರೆ. ಅವರಲ್ಲಿ ವಿಷಯ ಗ್ರಹಣದ ಶಕ್ತಿ ಇದೆ, ಕೈಗೆತ್ತಿಕೊಂಡ ವಿಷಯ ವಿಶ್ಲೇಷಣೆಯಲ್ಲಿ ಅದರ ಬಗೆಗಿನ ಸೂಕ್ತ ನಿರೂಪಣಾಕಲೆಯಲ್ಲಿ ಅವರ ಪರಿಣತಿ ಇದೆ. ತಾನು ಗ್ರಹಿಸಿದ್ದನ್ನು ತಾದಾತ್ಮ್ಯ ಮನೋಭಾವದಿಂದ ಅನುಭವಿಸುವ ಸಹೃದಯತೆ ಇದೆ, ಅಂತೆಯೇ ತನ್ನ ಅನುಭವದ ಆನಂದವನ್ನು ಉಳಿದವರಿಗೆ ಹಂಚಿಕೊಡುವ ವಿಧಾನವೂ ತಿಳಿದಿದೆ. ಇದರಲ್ಲೇ ಅವರಲ್ಲಿರುವ ಕವಿ ಮತ್ತು ವಿಮರ್ಶಕರ ಯಶಸ್ಸು ಅಡಗಿದೆ.

೨

ಕಣವಿಯವರು ಕನ್ನಡದ ಸತ್ವಶಾಲಿ ಕವಿಗಳಲ್ಲಿ ಒಬ್ಬರು. ಶ್ರೀಯುತರು ಸುಮಾರು ಮೂರು ದಶಕಗಳಿಂದಲೂ ಕವಿಗಳಾಗಿ ಬೆಳೆದವರು, ಕೇವಲ ಒಂದು ದಶಕದಿಂದ ವಿಮರ್ಶಕರಾಗಿ ಉಳಿದಿದ್ದಾರೆ. ಇದು ಕನ್ನಡಿಗರ ಭಾಗ್ಯ. ಶ್ರೀಯುತರು ಬಸವಣ್ಣನವರಿಂದ ಹಿಡಿದು ಬೇಂದ್ರೆಯವರವರೆಗೂ ಸ್ಕಾಟ್ಲೆಂಡಿನಿಂದ ಹಿಡಿದು ಸಾನೆಟ್‌ಕೇಟಿಯವರೆಗೂ ತಮ್ಮ ವಿಮರ್ಶಾದೃಷ್ಟಿಯನ್ನು ಹರಿಸಿದ್ದಾರೆ. ಹಲವು ಕವಿಗಳ ಕೃತಿಗಳನ್ನು ವಿವೇಚಿಸಿದ್ದಾರೆ,

ವಿಶ್ಲೇಷಿಸಿದ್ದಾರೆ, ವಿಮರ್ಶಿಸಿದ್ದಾರೆ. ಜಾನಪದ ಕಾವ್ಯ, ನವೋದಯ ಕಾವ್ಯ, ನವ್ಯಕಾವ್ಯ, ಗದ್ಯಕಾವ್ಯ—ಇವುಗಳ ಬಗೆಗಿನ ವೈಶಿಷ್ಟ್ಯ, ವೈಲಕ್ಷಣ್ಯಗಳನ್ನು ವ್ಯಾಖ್ಯಾನಿಸಿದ್ದಾರೆ. ಈ ವರೆಗೆ, 'ಸಾಹಿತ್ಯಚಿಂತನ,' ಮತ್ತು 'ಕಾವ್ಯಾನು ಸಂಧಾನ' ಎಂಬ ಸಾಹಿತ್ಯ ವಿಮರ್ಶೆಗೆ ಮೀಸಲಾದ ಎರಡು ಗದ್ಯ ಗ್ರಂಥಗಳನ್ನು ಹಮ್ಮಿಕೊಂಡಿದೆ ಅವರ ವಿಮರ್ಶಾಶಕ್ತಿ. ಕನ್ನಡದ ಪುರಾತನರನ್ನೂ ಆಧುನಿಕರನ್ನೂ, ಅವರ ಕೃತಿಗಳನ್ನೂ ಅರ್ಥಮಾಡಿಕೊಳ್ಳಲು ಒಂದು ಉತ್ತಮ ಹಾದಿಯನ್ನು ಸಿದ್ಧಪಡಿಸಿಕೊಟ್ಟಿದ್ದಾರೆ. ವೈಚಾರಿಕತೆಗೆ ಒಂದು ಸುಂದರ ವೇದಿಕೆಯನ್ನೇ ನಿರ್ಮಿಸಿದ್ದಾರೆ ಎನ್ನಬಹುದು.

ಆದರೆ ಪ್ರಸ್ತುತ ಲೇಖನ ಅವರ ವಿಮರ್ಶಾಕೃಷಿ ಪ್ರಾಚೀನ ಸಾಹಿತ್ಯ ಸಂದರ್ಭದಲ್ಲಿ ಎಂಬಷ್ಟರಲ್ಲೇ ಸೀಮಿತವಾಗಿದೆ. ಆದರೆ ಟಿ. ಎಸ್. ಎಲಿಯಟ್ ಹೇಳುವಂತೆ, '.........the past should be altered by the present as much as the present is directed by the past.'[18] ಅಂದರೆ ಇಂದಿನ ವಿಮರ್ಶೆ ಇಂದಿನ ಕೃತಿಗಳಿಂದ ಪ್ರಭಾವಿತವಾಗಿ, ಹಿಂದಿನ ಕೃತಿಗಳ ಪುನರ್‌ಮೌಲ್ಯ ಮಾಪನಕ್ಕೆ ಕಾರಣವಾಗುತ್ತದೆ. ಈ ಸೂತ್ರದ ಅರ್ಥವನ್ನು ಶ್ರೀಯುತರ ಪ್ರಾಚೀನ ಕಾವ್ಯಗಳನ್ನು ಕುರಿತ ವಿಮರ್ಶಾಲೇಖನಗಳಲ್ಲಿ ಗುರುತಿಸಬಹುದು. ಏಕೆಂದರೆ ಎಲಿಯಟ್ ಮುಂದುವರಿದು ಹೇಳುವಂತೆ—'ವಿಮರ್ಶೆಯು ಕಾರ್ಯ ಜಡವಾದುದಲ್ಲ. ಅದು ನಿರಂತರ ಪರಿವರ್ತನಶೀಲವಾದ, ಚೈತನ್ಯಾತ್ಮಕವಾದ ಕ್ರಿಯೆ. ಒಂದೊಂದು ಮಹಾ ಕೃತಿಯೂ ಕಲಾಲೋಕದಲ್ಲಿ ಬಂದು ಬಿದ್ದಂತೆಲ್ಲಾ ಅದರ ಮಹತ್ವದ ಹಿನ್ನೆಲೆಯಲ್ಲಿ ಹಿಂದಿನ ಕತ್ರಿಗಳ ಪುನರ್ ವಿಮರ್ಶೆ ಅನಿವಾರ್ಯವಾಗುತ್ತದೆ. ಹಿಂದೊಮ್ಮೆ ಅತಿ ಎತ್ತರ ಕ್ಕೇರಿದ ಕೃತಿ ಇಂದಿನ ಕೃತಿಯ ಎತ್ತರವನ್ನು ಕಂಡು ಸ್ವಲ್ಪ ಕೆಳಗಿಳಿಯಬಹುದು, ಅಥವಾ ಇಂದಿನ ಕೃತಿ ಸತ್ವಹೀನವಾದಾಗ ಹಿಂದಿನ ಕೃತಿಯ ಸತ್ವ ಇನ್ನೂ ಅಧಿಕವಾಗಬಹುದು. ಈ ಅರ್ಥದಲ್ಲಿ ಇಂದಿನ ಕೃತಿಗಳು ಹಿಂದಿನ ಕೃತಿಗಳಮೇಲೆ ಪ್ರಭಾವಬೀರುತ್ತವೆ ಎಂದು ಹೇಳಿದ್ದು. ಈ ಮೌಲ್ಯಗಳ ಪುನರ್ ವಿವೇಚನೆಯೇ ವಿಮರ್ಶೆಯ ಮುಂದಿರುವ ಪ್ರಮುಖ ಕಾರ್ಯ ಎಂದೆನ್ನಬಹುದು.[19] ಈ ಕಾರ್ಯವನ್ನು ಕಣವಿಯವರು ಯಶಸ್ವಿಯಾಗಿ ನೆರವೇರಿಸಿದ್ದಾರೆ. ಅವರು ಬರೆದಿರುವ ಪ್ರಾಚೀನಕೃತಿಗಳನ್ನು ಕುರಿತ ವಿಮರ್ಶೆ ತುಂಬಾ ಕಡಿಮೆ ಪ್ರಮಾಣದ್ದು. ಶಿವಶರಣರ ವಚನ, ಹರಿದಾಸರ ಕೀರ್ತನ ಹಾಗೂ ಸ್ಕಾಟಿಶ್ ಕವಿ ರಾಬರ್ಟ್ ಬರ್ನ್ಸ್‌ನ ಮತ್ತು ಮುಪ್ಪಿನಾರ್ಯ, ಸರ್ವಜ್ಞರ ಕೆಲವು ಕವಿತೆಗಳ ಅವ ಲೋಕನ, ಕನ್ನಡದ ಜಾನಪದ ಸಾಹಿತ್ಯವನ್ನು ಕುರಿತ ಒಂದೆರಡು ಲೇಖನಗಳು ಇಷ್ಟೇ. ಪ್ರಮಾಣದಲ್ಲಿ ಕಿರಿದಾಗಿದ್ದರೂ ಗುಣದಲ್ಲಿ ಹಿರಿದಾಗಿದೆ ಕಣವಿಯವರ ವಿಮರ್ಶಾ ಕೃಷಿ.

---

18 ಅದೇ

19 ಅದೇ

ಶ್ರೀಯುತರ ವಿಮರ್ಶೆಯ ಮೇಲೆ ನಮ್ಮದೊಂದು ವಿಮರ್ಶೆಯನ್ನು ಹರಿಸಬೇಕಾಗಿದೆ. ಅದಕ್ಕಾಗಿ ಆಯ್ದ ಭಾಗಗಳು ಇವು—

ಸರ್ವಜ್ಞನ ನೀತಿ ಕಾವ್ಯ
ಆದಯ್ಯಾನ ಭಕ್ತಿ ಕಾವ್ಯ
ಮುಪ್ಪಿನ ಷಡಕ್ಷರಿ ನಾರ್ಯನ ಗೇಯ ಗೀತೆ
ಬಸವಣ್ಣನ ಭಾವ ಗೀತೆ
ಪುರಂದರ ದಾಸರ ಹಾಡುಗಬ್ಬ
ಬರ್ನ್ಸ್‌ನ ರಸಾವೇಶ ಕವನಗಳು

—ಇಷ್ಟನ್ನು ಕುರಿತು ಇಲ್ಲಿ ಅವಲೋಕಿಸಲಾಗಿದೆ.

೩

ಕಣವಿಯವರ ವಿಮರ್ಶಾ ಕೃಷಿ ತಾತ್ವಿಕವಾಗಿ ಮತ್ತು ಪ್ರಾಯೋಗಿಕವಾಗಿ ಎರಡೂ ವಿಧದಲ್ಲಿ ನಡೆದಿದೆ. ವ್ಯಕ್ತಿಯ ವ್ಯಕ್ತಿತ್ವ ವಿಕಸನವನ್ನು ಅವನವನ ಕಾವ್ಯ ದಲ್ಲೇ ಗುರುತಿಸಿದ್ದರೆ, ಅವನ ಕಾವ್ಯದ ಮಹತಿಯನ್ನು ಕಾವ್ಯ ತತ್ವದ ಒರೆಗಲ್ಲ ಮೇಲೆ ಒರೆ ಹಚ್ಚಿ ನೋಡಿದ್ದಾರೆ. ಹೀಗೆ ವ್ಯಕ್ತಿತ್ವ ವಿಕಾಸ, ಕಾವ್ಯ ತತ್ವ ವಿಲಾಸ—ಇವೆರಡೂ ಪ್ರಧಾನಾಂಶಗಳಾಗಿವೆ ಕಣವಿಯವರ ಪ್ರಾಚೀನ ವಿಮರ್ಶೆಯಲ್ಲಿ.

ಪ್ರಾಚೀನರನ್ನು ಕುರಿತ ಪ್ರಾಯೋಗಿಕ ವಿಮರ್ಶೆಗೆ ಒಳಗಾದವರಲ್ಲಿ ಬಸವಣ್ಣ ಮೊದಲನೆಯವನು, 'ಸಾಹಿತ್ಯ ಚಿಂತನ' ಗ್ರಂಥವನ್ನು ತೆರೆದಕೂಡಲೇ ಮೊದಲು ಕಾಣಸಿಗುವ ಲೇಖನ 'ಬಸವಣ್ಣನವರ ಭಾವ ಚಿತ್ರ'. ಇದರಲ್ಲಿ ವ್ಯಕ್ತಿಯ ವ್ಯಕ್ತಿತ್ವವನ್ನು ಅವನ ಕೃತಿಗಳಿಂದಲೇ ಹೆಕ್ಕಿ ನೋಡಲಾಗಿದೆ. ಏಕೆಂದರೆ, 'ವಚನ ಕಾರರ ವ್ಯಕ್ತಿತ್ವದ ವಿಕಾಸವನ್ನು ಅರಿಯ ಬೇಕಾದರೆ ಅವರ ಅಂತರಂಗದ ರತ್ನಗಳಂತಿರುವ ವಚನಗಳನ್ನೇ ಅಭ್ಯಸಿಸಬೇಕು. ಅವರ ಆಧ್ಯಾತ್ಮಿಕ ಸಾಧನೆಯ ಸರ್ವಸ್ವವೂ ಅಲ್ಲಿ ನಮಗೆ ದೊರೆಯುತ್ತದೆ.'[20]

ಬಸವಣ್ಣ ಅಂತರಂಗ ಶುದ್ಧ. ಬಹಿರಂಗ ಶುದ್ಧ; ವಿನಯಸಂಪನ್ನ. ನಡೆ ನುಡಿಗಳಲ್ಲಿ ಮಡಿಯಾದವನು. ಸಕಲ ಜೀವಾತ್ಮರಿಗೆ ಲೇಸನೇ ಬಯಸಿದ, ಬಯಸಿದಂತೆ ಬಾಳಿದ ಮಹಾಮಾನವ. ಅವನಲ್ಲಿ ಮುಖ್ಯವಾಗಿ ಕಾಣಸಿಗುವ ಒಂದಂಶವೆಂದರೆ ಸ್ವಾತ್ಮ ಶಿಕ್ಷಣ.

ಆದಯ್ಯ ಸೌರಾಷ್ಟ್ರ ಸೋಮೇಶ್ವರನ ಅವಿಚ್ಛಿನ್ನ ಭಕ್ತ, ವೀರ ಮಾಹೇಶ್ವರ. ಬಸವ ಯುಗದ ವಿಖ್ಯಾತ ವಚನಕಾರರಲ್ಲಿ ಒಬ್ಬ. 'ಹೆಸರಿಡಬಾರದ ಹಿರಿಯ' ಎಂದು ಕರೆಸಿಕೊಂಡಿದ್ದಾನೆ. ಅವನ ವ್ಯಕ್ತಿತ್ವದ ವಿಕಾಸ ವೈಭವಗಳು ಗುರುತಿಸುವಷ್ಟು ಸ್ಪಷ್ಟವಾಗಿ ಮೂಡಿವೆ ಅವನ ವಚನಗಳಲ್ಲಿ. 'ಆದಯ್ಯನ ನಿಷ್ಠೆಯ ಹೋರಾಟ ಅವನ ಆಧ್ಯಾತ್ಮಿಕ ಜೀವನದ ಅಡಿಗಲ್ಲಾಗಿದೆ......ಮಾಯೆ, ಕಾಮ, ಕಾಲ—ಇವರಿಗೆ ಕೈವಶವಾಗದೆ ಮಾಡುವ ಭಕ್ತಿಯೇ ಭವ ಬಂಧನವನ್ನು ಮೀರಿದ ಭಕ್ತಿ 'ಮರ್ಮವರಿತು

20 ಚೆನ್ನವೀರ ಕಣವಿ, ಸಾಹಿತ್ಯ ಚಿಂತನ, ಪು. 20.

ಮಾಡದ ಭಕ್ತಿ ಸೊಣಗನ ಹಿಂದೆ ಸೊಣಗ ಹರಿದಂತೆ' ಎಂಬ ದಿಟ್ಟತನದ ಉಪಮೆಯಿಂದ ಆದಯ್ಯ ಆ ಮಾತನ್ನು ಅಚ್ಚೊತ್ತಿದಂತೆ ಹೇಳಿದ್ದಾನೆ, ಎನ್ನುತ್ತಾರೆ ವಿಮರ್ಶಕರು,

ಕಾಮ ಧೇನು, ಕಲ್ಪ ವೃಕ್ಷ, ಚಿಂತಾಮಣಿ, ನವನಿಧಿ ತವನಿಧಿಗಳು ಕಾಮಿಸದೆ, ಕಲ್ಪಿಸದೆ, ಚಿಂತಿಸದೆ, ಬಯಸದೆ ಕೊಡಲರಿಯವು. ಆದರೆ ಸೌರಾಷ್ಟ್ರ ಸೋಮೇಶ್ವರ 'ಎನ್ನ ನೀವುದಕ್ಕೆ ಮುನ್ನವೆ ತನ್ನ ನಿತ್ತ' ಭಕ್ತ ವತ್ಸಲ, ಭಕ್ತ ಪರಾಧೀನ !

ಇಂತಹ ಗಹನವಾದ ತತ್ತ್ವಗಳನ್ನು ತಿಳಿಯಾಗಿ ತಿಳಿಸಬಲ್ಲ ಆದಯ್ಯ, ಅಂತೆಯೇ ಆವನ ಅನುಭಾವದ ಆಳವನ್ನು ತೋರಲು ಅವನ ಬೆಡಗಿನ ವಚನಗಳು ಸಿದ್ಧವಿವೆ. 'ನಿಷ್ಠೆ ಹೋರಾಟಗಳಲ್ಲಿ ತನ್ನ ಶಕ್ತಿಯನ್ನು ಪ್ರಕಾಶಗೊಳಿಸಿ, ಅಲ್ಲಿಯೇ ನಿಲ್ಲದೆ ಭಕ್ತಿ—ಜ್ಞಾನ ಕ್ರಿಯೆಗಳನ್ನು ಸಮನ್ವಯಗೊಳಿಸುವಲ್ಲಿ ಆದಯ್ಯನ ವ್ಯಕ್ತಿತ್ವ ವಿಕಾಸಗೊಂಡಿರುವುದನ್ನು ಅವನ ವಚನಗಳಲ್ಲಿ ಕಾಣುತ್ತೇವೆ.' ಇದು ಹೆಸರಿಡಬಾರದ ಹಿರಿಯ ಆದಯ್ಯ ಸಾರ,

ಸರ್ವಜ್ಞ ಮಾತು ಬಲ್ಲಾತ. 'ಜನದ ಭಾಷೆಗೂ, ಜನತೆಯ ಪದ್ಯವಾದ ತ್ರಿಪದಿಗೂ ಕಾವ್ಯಗೌರವವನ್ನು ತಂದುಕೊಟ್ಟ ಶ್ರೇಯಸ್ಸು ಅವನಿಗಿದೆ.' ಸರ್ವಜ್ಞನ ವಚನಗಳು ಬರಿಯ ಕವನಗಳಲ್ಲ, ಜೀವನಾನುಭವದ ಅಮೃತ ಬಿಂದುಗಳು. 'ಸಾಹಿತ್ಯ ಎಲ್ಲರಿಗೆ ಇಲ್ಲ' ಎಂದು ಹೇಳಿದರೂ, ಅದರ ಸವಿಯನ್ನು ಎಲ್ಲರಿಗೂ ಹಂಚಲು ಯತ್ನಿಸಿದ್ದಾನೆ. ತನ್ನದೇ ಆದ ಧೋರಣೆಯಲ್ಲಿ ಕಾವ್ಯಗೌರವವನ್ನು ಮೆರೆದಿದ್ದಾನೆ.

ಅವನು ಬದುಕನ್ನು ಚೆನ್ನಾಗಿ ಕಂಡು ಉಂಡವನು. ಆಡು ಮುಟ್ಟದ ಸೊಪ್ಪಿಲ್ಲ, ಸರ್ವಜ್ಞ ಕುರಿತು ಬರೆಯದ ವಸ್ತುವಿಲ್ಲ. ಅವನು ನುಡಿಸದ ನಾಲಿಗೆಯಿಲ್ಲ, ನಡೆಯದ ಹಾದಿಯಿಲ್ಲ: ಅವನಿಂದ ಬೈಸಿಕೊಳ್ಳದ ಜನಾಂಗವಿಲ್ಲ, ತಿದ್ದಿಸಿಕೊಳ್ಳದ ಮಾನವನಿಲ್ಲ. ಧರ್ಮ, ಅರ್ಥ, ಕಾಮ, ಮೋಕ್ಷ, ನೀತಿ' ಜ್ಞಾನ, ಸದಾಚಾರ, ಲೌಕಿಕ, ಪಾರಮಾರ್ಥ, ಮೊದಲಾದ ಅಂತರಂಗದ ವಿಷಯಗಳಲ್ಲಿಯೂ ಅವನ ನುಡಿ ಕಡೆದಿಟ್ಟಬೆಣ್ಣೆ.' ಒಟ್ಟಿನಲ್ಲಿ 'ಸಮಕಾಲೀನ ಪ್ರಜ್ಞೆ, ಬಳಕೆಯ ಮಾತಿನ ಪ್ರಯೋಗ, ವಾಸ್ತವಿಕ ಉಪಮೆಗಳು, ತೇಜಸ್ವಿಯಾದ ಅನುಭವ ಮತ್ತು ವಿಡಂಬನೆ ಇವುಗಳಿಂದ ಸರ್ವಜ್ಞ ಇಂದಿನ ಕವಿಗಳಿಗೆ ಸಮೀಪದ ಬಂಧುವಾಗಿದ್ದಾನೆ.'

ವೇಮನ, ತಿರುವಳ್ಳುವರಂತೆ ಕನ್ನಡದ ಮಹಾಯೋಗಿ, ಯೋಗಿಕವಿ ಸರ್ವಜ್ಞ. ಮೂರು ಸಾಲಿನಲ್ಲಿ ಮುಕ್ಕಣ್ಣನಾಗಿ ಮೂಡಿದ್ದಾನೆ. ಈ ಕಲಾಯೋಗಿಯ ವ್ಯಕ್ತಿತ್ವದ ಗ್ರಹಣದಲ್ಲಿ ಯಶಸ್ವಿ ಪ್ರಯೋಗವೆನಿಸಿದೆ–'ಸರ್ವಜ್ಞ: ಹೊಂಬರಿತು ಹೊತ್ತಿಗೊದಗುವ ಮಾತು' ಎಂಬಪ್ರಬಂಧ. ಗೇಯಗೀತೆಗಳನ್ನು ರಚಿಸಿ, ಕನ್ನಡ ಸಾಹಿತ್ಯದ ಕಂಪನ್ನು ಹೆಚ್ಚಿಸಿದವರಲ್ಲಿ ಮುಪ್ಪಿನ ಷಡಕ್ಷರಿಯೂ ಒಬ್ಬ. ಈತ ಕವಿಋಷಿ, ವೀರವೈರಾಗ್ಯಮೂರ್ತಿ, ಉಜ್ವಲ ಸ್ವಾಭಿಮಾನಿ, ಭಕ್ತಿಭಾವದ ರತ್ನ ಮೌಕ್ತಿಕದಚ್ಚು, ಭಾವ ಯೋಗ ಬಲದಿಂದ ಅಪರೋಕ್ಷ ಜ್ಞಾನವನ್ನು, ಶೋಕ ನಿವೃತ್ತಿಯನ್ನು, ನಿರಂಕುಶ ವೃತ್ತಿಯನ್ನು ಪಡೆದ

ಪ್ರಾಸಾದಿಕ ಕವಿ. ಅಪೂರ್ವ ಪ್ರತಿಭೆಯ, ಅಸಾಧಾರಣ ವ್ಯಕ್ತಿತ್ವದ, ಅಪರೋಕ್ಷ ಜ್ಞಾನಿ ಶ್ರೀನಿಜಗುಣ ಶಿವಯೋಗಿಗಳಿಂದ ಶಿವದೀಕ್ಷೆಯನ್ನೂ, ಕಾವ್ಯದೀಕ್ಷೆಯನ್ನೂ ಪಡೆದು, ವೀರ ವೈರಾಗ್ಯದಿಂದಲೂ. ಸದ್ವಿನಯದಿಂದಲೂ ಸೇವಾಭಕ್ತಿಯನ್ನು ಸಾಹಿತ್ಯದ ಮೂಲಕ ಹರಿಸಿ, ಅನವರತವೂ ಅಪೂರ್ವವಾದ ಆತ್ಮಶಿಕ್ಷಣವನ್ನು ನಡೆಸಿ, ಮುಕ್ತನಾದ ದಾರ್ಶನಿಕ, ಪುರಂದರಾದಿ ಪುಣ್ಯಪುರುಷರಂತೆ, ಅಲ್ಲಮ ಅಕ್ಕಮಹಾದೇವಿ, ಬಸವೇಶ್ವರಾದಿ ಮಹಾ ಮಹಿಮರಂತೆ ಮುಪ್ಪಿನಾರ್ಯ ತನ್ನ ಭಕ್ತಿಯ ಭಾವತೀರ್ಥದಿಂದ ಜನತೆಯ ಹೃದಯ ಮಾಲಿನ್ಯವನ್ನು ತೊಳೆದು, ಶಕ್ತಿಯುತವಾದ ನುಡಿಗಳಿಂದ ಸಮಾಜದ ದೋಷ–ದುರ್ಗುಣಗಳನ್ನು ಖಂಡಿಸಿ, ಮುಕ್ತಿಯ ಮಹಾಮಂದಿರವನ್ನು ಸೇರಿದ ಶ್ರೇಷ್ಠಮಹಂತ. ಅವನ ಆಧ್ಯಾತ್ಮಗೀತೆಗಳಲ್ಲಿ ಸಾಹಿತ್ಯದ ಸೊಬಗನ್ನು ವೀಕ್ಷಿಸಬಹುದು. 'ಮುಪ್ಪಿನಾರ್ಯರ ಹಾಡುಗಳಲ್ಲಿ ಹೃದಯಂಗಮ ವರ್ಣನೆ ವಿಶಾಲದರ್ಶನವಿರುವಂತೆಯೇ ನವ ನವೀನ ಭಾವಗಳ ಆವಿಷ್ಕಾರವಿದೆ, ಕನ್ನಡದ ನುಡಿಹಾಲಿಗೆ ಸಂಗೀತದ ಸಕ್ಕರೆ ಬೆರೆಸಿದ ಭಾವಜೀವಿ, ವಾಗ್ಗೇಯಕಾರ. ಇವನನ್ನು ಕುರಿತ ವಿಸ್ತೃತ ವಿಶ್ಲೇಷಣೆಯನ್ನು 'ಮುಪ್ಪಿನ ಷಡಕ್ಷರಿಯ ಮುಪ್ಪರಿಯದ ಹಾಡುಗಳು' ಲೇಖನದಲ್ಲಿ ನೋಡಬಹುದು.

ಕಣವಿಯವರ ವಿಮರ್ಶೆಯ ಒರೆಗಲ್ಲಿಗೆ ಸಿಕ್ಕಿದ ಪ್ರಾಚೀನರಲ್ಲಿ ರಾಬರ್ಟ್ ಬರ್ನ್ಸ್ ಒಬ್ಬ. ಬರ್ನ್ಸ್ ಭಾರತೀಯನಲ್ಲವಾದರೂ ಪ್ರಾಚೀನ ಕಾವ್ಯ ಸಂದರ್ಭಕ್ಕೆ ಸೇರುವ ವ್ಯಕ್ತಿ. ಅವನು ಕ್ರಿ.ಶ. ೧೮ ನೆಯ ಶತಮಾನದಲ್ಲಿ ಸ್ಕಾಟ್ಲೆಂಡಿನಲ್ಲಿ ಬಾಳಿ ಬದುಕಿ, ಸ್ಕಾಟಿಶ್ ಮತ್ತು ಇಂಗ್ಲಿಷ್ ಕಾವ್ಯ ಕ್ಷೇತ್ರಗಳನ್ನು ಹಸನುಗೊಳಿಸಿದ ರೊಮ್ಯಾಂಟಿಕ್ ಕವಿ. ತುಂಬು. ಭಾವುಕ, ಆವೇಶಭರಿತನಾದ ಕವಿ. ನವೋದಯ ಕಾವ್ಯದ ಕೆಲವು ಲಕ್ಷಣಗಳು ಅವನ ಕವನಗಳಲ್ಲಿ ಕಾಣಸಿಗುತ್ತವೆ. 'Read the exquisite songs of Burns. In shape each of them has the perfection of the berry ; in light the radiance of the dewdrop.' ಎಂದಿದ್ದಾನೆ ಲಾರ್ಡ್ ಟೆನ್ನಿಸನ್.

ತನ್ನ ಭಾವ ಗಂಗೋತ್ರಿಯಿಂದ ಇಂಗ್ಲಿಷ್ ನವೋದಯ ಕಾವ್ಯ ಕ್ಷೇತ್ರವನ್ನು ಹಚ್ಚ ಹಸುರಾಗಿಸಿದ ಬರ್ನ್ಸ್‌ನಲ್ಲಿ ಗ್ರಾಮೀಣ ಸೊಗಡು ತುಂಬಿರುವುದು ಸಹಜ. ಪರಿಶುದ್ಧವಾದ ಪ್ರೇಮ ಅವನ ಕಾವ್ಯ ಗಾಯಿತ್ರಿ! "Burns was undoubtedly the greatest song writer this country has ever produced and love was his favourite theme."[21]

ಈ ಭಾವುಕ ಕವಿ ಕನ್ನಡ ಕವಿ ಕೆ.ಎಸ್. ನರಸಿಂಹಸ್ವಾಮಿಯವರ ಮೇಲೆ ಪ್ರಭಾವವನ್ನು ಬೀರಿದ್ದಾನೆ. ತನ್ನ ಭಾವುಕತೆಯ ಬಗೆಗೆ ತಾನೇ ಹೇಳಿಕೊಂಡಿದ್ದಾನೆ—

---

21 Rev John C. Hill, M.A., The Love, Songs and Heroines of ROBERT BURNS ; preface, p. XIII

I never had the least thought or inclination of turning poet ; he says, till I got once heartily in love and then rhyme and song were in a manner, the spontaneous language of my heart.'[22]

ಕಣವಿಯವರು, 'ಬರ್ನ್ಸ್ ತನ್ನ ಜೀವಮಾನದಲ್ಲಿ ಯಾವ ಕಾಲಕ್ಕೂ ಕನಸುಗಾರನಾಗಿರಲಿಲ್ಲ. ಏಕಾಂತ ಪ್ರಿಯತೆಗೆ ಮನಸೋತಿರಲಿಲ್ಲ. ಗಾಳಿಗೋಪುರ ರಚಿಸುತ್ತಾ ಮೈ-ಮರೆತಿರಲಿಲ್ಲ. ಅವನು ಸ್ವತಃ ಜನರನ್ನು ಹಚ್ಚಿಕೊಳ್ಳುವ ಸ್ನೇಹಪರ ಸ್ವಭಾವದವನಾಗಿದ್ದುದರಿಂದ ಅವನ ಕಾವ್ಯವೂ 'ಸಾಮಾಜಿಕವಾಗಿದೆ' ಎಂದು ವಿಶದೀಕರಿಸಿದ್ದಾರೆ.

ಬರ್ನ್ಸ್ ತನ್ನ ಕವಿಮನೋಧರ್ಮವನ್ನು ಪತ್ರವೊಂದರಲ್ಲಿ ಪ್ರಕಟಪಡಿಸಿದ್ದಾನೆ. 'And writing to his friend Cunningham, he says, It is the Alpha and omera of human enjoyment. All the pleasures and all the happiness of my humble Campeers flow immediately and directly from this delicious source. It is the spark of Celestial fire which lights up the wintry hut of poverty and makes the cheerless mansion warm confortable and gay'[23]

ಇಂತಿಷ್ಟೂ ಕಣವಿಯವರು ನಡೆಸಿದ ಪ್ರಾಯೋಗಿಕ ವಿಮರ್ಶೆ ಪ್ರಾಚೀನ ಕವಿ, ಕಾವ್ಯಗಳ ಮೇಲೆ. ಮತ್ತೆ ಅದೇ ಪ್ರಾಚೀನ ಸಂದರ್ಭದಲ್ಲಿ ಕಾವ್ಯ ತತ್ವಗಳ ತಳಹದಿಯ ಮೇಲೆ ವಿವೇಚಿಸಬೇಕಾದ ಮುಖ್ಯ ಲೇಖನಗಳು ಎರಡಿವೆ : 'ಸಾಹಿತ್ಯ ಚಿಂತನ' ಗ್ರಂಥದ 'ಪುರಂದರದಾಸರ ಪದ್ಯಗಳಲ್ಲಿಯ ಕಾವ್ಯಗುಣ' ಮತ್ತು 'ಕಾವ್ಯಾನು ಸಂಧಾನ'ದ 'ಬಸವಣ್ಣನವರ ವಚನಗಳ ಸಾಹಿತ್ಯಿಕ ಮೌಲ್ಯ' ; ಇವೆರಡನ್ನೂ ಇಲ್ಲಿ ಸಮಾವೇಶಗೊಳಿಸಿ ವೀಕ್ಷಿಸೋಣ.[24]

ಮನೋಧರ್ಮದಲ್ಲಿ ಬಸವಣ್ಣನವರಿಗೂ, ಪುರಂದರ ದಾಸರಿಗೂ ಸಾಮ್ಯತೆ ಇದ್ದಂತೆ, ವಚನ ವಾಙ್ಮಯಕ್ಕೂ ದಾಸಸಾಹಿತ್ಯಕ್ಕೂ ಸಾದೃಶ್ಯವಿದೆ. ಇಬ್ಬರೂ ಹಿಡಿದ ಹಾಡಿನ ಜಾಡಿನಲ್ಲಿ ಅಂಕಿತದ ಆವರಣದ ನಿರ್ಮಿತಿಯಲ್ಲಿ, ಸಮಾಜದ ಸುಧಾರಣಾ ಕಾರ್ಯದಲ್ಲಿ, ಅದನ್ನು ವಿಡಂಬಿಸುವಲ್ಲಿ, ಅದರ ಅಧರ್ಮ, ಅನೀತಿ, ಅನ್ಯಾಯಗಳನ್ನು ಖಂಡಿಸು

---

22 ಅದೇ

23 ಅದೇ

24 ಸಾಹಿತ್ಯ ಚಿಂತನದ 'ವಚನ ಸಾಹಿತ್ಯದಲ್ಲಿ ಉಪಮೆ' ಎಂಬ ಲೇಖನವು ಬಸವಣ್ಣನವರ ವಚನಗಳ ಸಾಹಿತ್ಯಿಕ ಮೌಲ್ಯ'ದಲ್ಲಿ ವಿಲೀನವಾಗಿರುವುದರಿಂದ ಅದನ್ನು ಪ್ರತ್ಯೇಕವಾಗಿ ಗಣಿಸುವ ಅಗತ್ಯ ಇಲ್ಲ ಎಂದು ಬಿಟ್ಟುಬಿಡಲಾಗಿದೆ.

ವಲ್ಲಿ ಮಾನವ ಜನ್ಮ ದೊಡ್ಡದು ಎಂದು ಸಾರುವಲ್ಲಿ, ಅಂತರಂಗ ಶೋಧನದಲ್ಲಿ, ಆತ್ಮ ನಿರೀಕ್ಷಣದಲ್ಲಿ-ಇಂಥವೆನಿತೋ ಗುಣಗಳಲ್ಲಿ ಇಬ್ಬರಲ್ಲೂ ಸಮಾನ ಧರ್ಮ ಅಡಗಿದೆ. ಆದರೆ ವಚನಕಾರರು ಕಲ್ಯಾಣದಲ್ಲಿ ಅನುಭವ ಮಂಟಪವನ್ನು ಸ್ಥಾಪಿಸಿ, ವಿಚಾರ ಮಂಥನ ನಡೆಸಿದರೆ, ಹರಿದಾಸರು ಊರು ಕೇರಿಗಳನ್ನು, ಮನೆ ಮನಗಳನ್ನು ಅನುಭವ ಮಂಟಪವನ್ನಾಗಿಸಿದರು ತಾವು ಹಿಡಿದ ತಾಳ–ತಂಬೂರಿಗಳ ಜೊತೆಯಲ್ಲಿ. ಅವರ ಕಾವ್ಯಮಯವಾದ ವಚನಗಳನ್ನೂ, ಇವರ ಸಂಗೀತ ಪೂರ್ಣವಾದ ಕೀರ್ತನೆಗಳನ್ನೂ ಪ್ರತ್ಯೇಕವಾದ ಲೇಖನಗಳೆರಡರಲ್ಲಿ ವಿಮರ್ಶಕರು ವಿಶ್ಲೇಷಿಸಿದ್ದಾರೆ. ಅವೆರಡನ್ನೂ ಒಂದೆಡೆಯಲ್ಲಿ ಸಮಾವೇಶಗೊಳಿಸಿ ನಾವಿಲ್ಲಿ ವಿವೇಚಿಸಿದ್ದೇವೆ.

ಕಣವಿಯವರು ಕನ್ನಡದ ನೈಜವಾದ, ವಿಶಿಷ್ಟವಾದ ಈ ಸಾಹಿತ್ಯರೂಪಗಳೆರಡನ್ನೂ ಕಾವ್ಯ ತತ್ವದ ಆಧಾರದ ಮೇಲೆ ತೂಗುವಾಗ ಒಂದೇ ಪರಡಿಗೆ ಹಾಕಿದ ತೂಕದ ಕಲ್ಲುಗಳೆಂದರೆ ಉಪಮೆ, ದೃಷ್ಟಾಂತ, ರೂಪಕ, ಪ್ರತಿಮೆ, ಶ್ಲೇಷೆ ಇತ್ಯಾದಿಗಳು. ಅಂತೆಯೇ ಲೋಕೋಕ್ತಿಗಳು, ಸೂಳ್ನುಡಿಗಳು, ಗಾದೆಗಳು, ಇವುಗಳನ್ನ ಅವಲೋಕಿಸಬಹುದು.

ಉಪಮೆ ಎಂದರೆ ಹೋಲಿಕೆ ಎಂದರ್ಥ. ಒಂದು ವಸ್ತುವಿನ ರೂಪ ಸ್ಪಷ್ಟತೆಗಾಗಿ, ಅದನ್ನು ಮತ್ತೊಂದು ವಸ್ತುವಿನೊಡನೆ ಹೋಲಿಸಿ ನೋಡುವ ವಿಧಾನ. ಇದೇ ಉಪಮೆ. 'ಈ ಉಪಮೆ ಬಸವಣ್ಣನವರ ವಚನಗಳಲ್ಲಿ ಬರೀ ಹೋಲಿಕೆಯಾಗಿಲ್ಲ, ತಟ್ಟನೆ ಕಣ್ಣೆದುರು ಒಂದು ಚಿತ್ರವನ್ನು ನಿಲ್ಲಿಸುವ, ಆಡಿದ ಮಾತನ್ನು ಮನಕ್ಕೆ ಮುಟ್ಟಿಸುವ, ಅರ್ಥವನ್ನು ಔಚಿತ್ಯ ಪೂರ್ಣವಾಗಿ ಬಿಂಬಿಸುವ ಸಾರ್ಥಕ ಕಾರ್ಯವನ್ನೂ ಅದು ಮಾಡಿದೆ. ಅವೆಲ್ಲವೂ ಸಾಮಾನ್ಯವಾಗಿ ಜೀವನದ ಅನುಭವದಿಂದಲೇ ಒಡಮೂಡಿರುವುದರಿಂದ ಜೀವಂತವಾಗಿ ಕಳಕಳಿಸುತ್ತಿವೆ.' ಅವರ ವಚನಗಳಲ್ಲಿಯ ಉಪಮಾ ಪ್ರಪಂಚದ ವೈವಿಧ್ಯವನ್ನೂ, ಹೊಸತನದ ಸ್ವಾರಸ್ಯವನ್ನೂ, 'ಉದಕದೊಳಗೆ ಬಯ್ಚಿಟ್ಟ ಬಯಕೆಯ ಕಿಚ್ಚಿನಂತಿದ್ದಿತು' 'ನುಡಿದರೆ ಮುತ್ತಿನ ಹಾರದಂತಿರಬೇಕು' 'ಹಾವಿನ ಬಾಯ ಕಪ್ಪೆ ಹಸಿದು ಹಾರುವ ನೊಣಕ್ಕೆ ಆಸೆ ಮಾಡುವಂತೆ' 'ಕಂಬಳಿಯಲ್ಲಿ ಕಣಕವ ನಾದಿದಂತೆ' 'ಹಾವಿನ ಹೆಡೆಯ ಕೊಂಡು ಕನ್ನೆಯ ತುರಿಸಿದಂತೆ'–ಮೊದಲಾದ ವಚನಗಳಲ್ಲಿ ವಿಮರ್ಶಕರು ವ್ಯಾಖ್ಯಾನಿಸಿದ್ದಾರೆ. '.......ಬಸವಣ್ಣನವರ ವಚನಗಳಲ್ಲಿ ಉಪಮಾಲೋಕ ಒಂದು ಅದ್ಭುತ ಚಿತ್ರಸೃಷ್ಟಿಯಾಗಿದೆ. ಕನ್ನಡದ ಬೇರಾವ ಕವಿಯಲ್ಲಿಯೂ ಉಪಮೆ ಇಷ್ಟೊಂದು ಜೀವನ ವೈವಿಧ್ಯದ ವ್ಯಾಪ್ತಿಯನ್ನು ಪಡೆದಿರುವುದು ವಿರಳ'. ಸಂಸ್ಕೃತ ಸಾಹಿತ್ಯದಲ್ಲಿ ಉಪಮೆಗೆ ಒಬ್ಬನೇ ಕಾಳಿದಾಸ ಅಂದಂತೆ ಕನ್ನಡದಲ್ಲಿ ಉಪಮೆಗೆ ಒಬ್ಬನೇ ಬಸವಣ್ಣ ಎನ್ನಲು ಯಾವ ಅಡ್ಡಿಯೂ ಇಲ್ಲ.

ಬಸವಣ್ಣನವರು ತಮ್ಮ ವಚನಗಳಲ್ಲಿ ದೃಷ್ಟಾಂತಾಲಂಕಾರಗಳನ್ನು ಹೇರಳವಾಗಿ ಬಳಸಿಕೊಂಡಿದ್ದಾರೆ. ದೃಷ್ಟಾಂತ ಎಂದರೆ ಒಂದು ನಿದರ್ಶನ ಎಂದರ್ಥ. ಒಂದರ ಅರ್ಥ ಪುಷ್ಟಿಗಾಗಿ ಬೇರೊಂದನ್ನು ರೂಪದರ್ಶಿಯಾಗಿ ತಂದು ನಿಲ್ಲಿಸುವುದು ಅಥವಾ ಉದಾಹರಿಸುವುದು ಎಂದು ಹೇಳಬಹುದು. 'ಕೆಟ್ಟವಂಗೆ ಕೆಳೆಯಿಲ್ಲ' ಎಂಬ ಭಾವನೆಯನ್ನು ಸ್ಪಷ್ಟ

ಗೊಳಿಸಲು ಪೌರಾಣಿಕ ಸಂಗತಿ ಮತ್ತು ಕವಿ ಸಮಯಗಳ ದೃಷ್ಟಾಂತಗಳು ಸಾಕಷ್ಟು ದೊರೆಯುತ್ತವೆ.

ವಿಮರ್ಶಕರು ಉಪಮೆ ಮತ್ತು ದೃಷ್ಟಾಂತ ಅಲಂಕಾರಗಳನ್ನು ಕೇವಲ ಬಸವಣ್ಣನವರ ವಚನಗಳಲ್ಲಿ ವಿವೇಚಿಸಿದ್ದಾರೆ, ಪುರಂದರದಾಸರ ಕೀರ್ತನೆಗಳಲ್ಲಿ ಗಣಿಸಿಲ್ಲ. ಆದರೆ ರೂಪಕಗಳನ್ನು ಎರಡೂ ಸಾಹಿತ್ಯ ರೂಪಗಳಲ್ಲೂ ಗುರುತಿಸಿದ್ದಾರೆ. ಬಸವಣ್ಣನವರಲ್ಲಿ ತಿರುಳಿಲ್ಲದ ಚಿತ್ತಕ್ಕೆ ಅತ್ತಿಯ ಹಣ್ಣು ಒಂದು ಉತ್ತಮ ರೂಪಕವಾಗಿದೆ. 'ತಾರಕ್ಕ ಬಿಂದಿಗೆ ನಾ ನೀರಿಗೆ ಹೋಗುವೆ ತಾರೇ ಬಿಂದಿಗೆಯ' ಎಂಬ ನೀರಿನ ನೀರೆಯ ಭೌತಿಕ ಶರೀರದ ನಶ್ವರತೆಯ ಚಿತ್ತರದಲ್ಲಿ ಪುರಂದರರು ಬಳಸಿಕೊಂಡಿರುವ ರೂಪಕ ಸಾರ್ಥಕ್ಯವನ್ನು ಪಡೆದಿದೆ.[25]

ಸಾಧಾರಣವಾಗಿ ರೂಪಕಗಳು ಸುಂದರ ಪ್ರತಿಮೆಗಳಾಗಿಯೇ ಪರಿಣಾಮ ಹೊಂದುತ್ತವೆ. ಪ್ರತಿಮೆ ಎಂದರೆ ಒಂದು ಮಾತಿನ ಮೂರ್ತಿ. ರೂಪಕ ಪ್ರತಿಮೆಯಲ್ಲಿ ನಿಲ್ಲುತ್ತದೆ : ಇಲ್ಲವೇ ಪ್ರತಿಮೆ ರೂಪಕದ ಕೆಲಸ ಮಾಡುತ್ತದೆ. ಉದಾಹರಣೆಗೆ ಏಕ ನಿಷ್ಠೆ ಇಲ್ಲದವರನ್ನು ಪರಮಾತ್ಮನು ಒಲಿಯುವುದಿಲ್ಲ ಎಂಬುದನ್ನು ಒಂದು ಅಂಗಡಿ ಮತ್ತು ಅಂಗಡಿಯ ವ್ಯಾಪಾರಿಯ ರೂಪಕದಲ್ಲಿ ಪ್ರತಿಮೆಯೊಂದನ್ನು ಮೂಡಿಸುವುದು ಕಂಡು ಬರುತ್ತದೆ—'ಧರಣಿಯ ಮೇಲೊಂದು ಹಿರಿದಪ್ಪ ಅಂಗಡಿಯನಿಕ್ಕಿ' ಎಂಬ ವಚನದಲ್ಲಿ. 'ಅಂಬಿಗಾ ನಾ ನಿನ್ನ ನಂಬಿದೆ—ಜಗದಂಬಾ ರಮಣ ನಿನ್ನ ಹೊಂದಿದೆ'—ಎಂಬ ಕೀರ್ತನೆಯಲ್ಲಿ ಈ ದೇಹ ತುಂಬಿದ ಹರಿಗೋಲು ಎಂಬ ಪ್ರತಿಮೆಯಾಗಿ ಪರಿಣಾಮಗೊಂಡಿದೆ.

ಕಾವ್ಯ ಪ್ರಪಂಚದಲ್ಲಿ ರೂಪಕ. ಪ್ರತಿಮೆ, ಉಪಮೆಗಳಷ್ಟು ಪ್ರಮುಖವಲ್ಲದಿದ್ದರೂ ಶ್ಲೇಷೆ ತನ್ನದೇ ಆದ ಒಂದು ಸ್ಥಾನವನ್ನು ಗಳಿಸಿಕೊಂಡಿದೆ. ಬಸವಣ್ಣನವರು 'ಐದು ಮಾನವ ಕುಟ್ಟಿ ಒಂದು ಮಾನವ ಮಾಡು ಕಂಡಾ, ಮದವಳಿಗೆ'—ಎಂಬಲ್ಲಿ 'ಐದು ಮಾನ' ಅಂದರೆ (i) ಒಂದು ಅಳತೆ (ii) ಪಂಚೇಂದ್ರಿಯಗಳು; ಒಂದು ಮಾನ ಅಂದರೆ (i) ಒಂದು ಅಳತೆ (ii) ಏಕಾಗ್ರ ಚಿತ್ತ; 'ಮದವಳಿಗೆ' ಅಂದರೆ (i) ಮದುವಣಗಿತ್ತಿ, (ii) ಅಹಂಕಾರವಳಿಯಲಿ—ಎಂಬ ದ್ವಂದ್ವಾರ್ಥದ ಹಿತವಾದ ಬಳಕೆಯಿಂದ ವಚನದ ಅರ್ಥ ಸ್ವಾರಸ್ಯವನ್ನು ಹೆಚ್ಚಿಸಿದ್ದರೆ, ಪುರಂದರ ದಾಸರು, 'ಪಾಪೋಸು ಹೋದುವಲ್ಲ' ಎಂಬ ಕೀರ್ತನೆಯಲ್ಲಿ, 'ಪಾಪೋಸು' ಅಂದರೆ (i) ಪಾದರಕ್ಷೆಗಳು (ii) ಪಾಪಗಳಷ್ಟೂ —ಹೋದುವೆಂಬ ಹರ್ಷದ ಹಾಡಿನಲ್ಲಿ ಸ್ವಾರಸ್ಯವನ್ನು ಇಮ್ಮಡಿಸಿದ್ದಾರೆ.

ಪುರಂದರ ದಾಸರ ಕೀರ್ತನೆಗಳಲ್ಲಿ 'ಗಿಳಿಯು ಪಂಜರದೊಳಿಲ್ಲ' ಎಂಬ ಶೋಕ ಗೀತೆ (Elegy) ಇದೆ. 'ಮಂಥನ ಮಾಡಲೀಯೆ ಮಾಧವ ಮೊಸರು ಮೀಸಲು' ಎಂಬ ಪುರಂದರ ಸುಳಾದಿಯಲ್ಲೂ, 'ಏನಿ ಬಂದಿರಿ ಹದುಳ ವಿದ್ದಿರೆ ?' ಎಂಬ ಬಸವಣ್ಣನವರ ವಚದಲ್ಲೂ ನಾಟಕೀಯ ಗುಣವನ್ನು ಕಾಣಬಹುದು.

---

25 ಬಸವಣ್ಣನವರ ವಚನಗಳಲ್ಲಿ ಪ್ರಾಣಿ ರೂಪಕಗಳು ಹೇರಳವಾಗಿ ದೊರೆಯುತ್ತವೆ.

ಬಸವಣ್ಣನವರಲ್ಲೂ, ಪುರಂದರ ದಾಸರಲ್ಲೂ ಹಲವು ಸುಂದರ ಸೂಕ್ತಿಗಳು ಆಡು ನುಡಿಯ ಜಾಡು ಹಿಡಿದು ಸಾಗುತ್ತವೆ.

ಆಯುಷ್ಯ ತೀರಿದಲ್ಲದೆ ಮರಣವಿಲ್ಲ,
ಭಾಷೆ ತೀರಿದಲ್ಲದೆ ದಾರಿದ್ರ್ಯವಿಲ್ಲ.
ನಂಬಿ ಕೆಟ್ಟವರಿಲ್ಲವೊ ರಂಗಯ್ಯನ,
ನಂಬಿ ಕೆಟ್ಟರೆ ಕೆಡಲಿ,

ಎಂಬ ಮಾತುಗಳಲ್ಲಿ—

'ಹಗಹದಲ್ಲಿ ಬಿದ್ದವರ ಮೇಲೆ ಒರಳ ನೂಂಕುವರೆ'
'ಇಕ್ಕಲಾರದ ಕೈ ಎಂಜಲು'

ಎಂಬ ಗಾದೆಗಳಲ್ಲಿ ಸುಂದರ ಅಭಿವ್ಯಕ್ತಿ ಪಡೆದಿವೆ.

ಹೀಗೆ ಆಡು ನುಡಿಯ ಕಸುವಿನಿಂದ, ಆಧ್ಯಾತ್ಮದ ತೂಕದಿಂದ, ಕಾವ್ಯಾಂಶಗಳ ಕಾಂತಿಯಿಂದ ಅಣ್ಣನ ವಚನ, ದಾಸವರೇಣ್ಯರ ಕೀರ್ತನ—ಇವು ಸುಂದರ ಶಿಲ್ಪವಾಗಿ ರೂಪುಗೊಂಡಿದೆ.

o o o

ಕಣವಿಯವರನ್ನು ಮಹತ್ವಪೂರ್ಣ ಕವಿಗಳೆಂದು ಕರೆಯಲು ಇರುವಷ್ಟೇ ಆಧಾರಗಳು ಅವರನ್ನು ಒಳ್ಳೆಯ ವಿಮರ್ಶಕರೆಂದು ಸಾರಲೂ ಇವೆ.

॥ ಓಂತತ್ ಸತ್ ॥

ಎಚ್. ಜಿ. ಲೋಕೂರ

# ಕಣವಿಯವರ ವಿಮರ್ಶಾಕೃಷಿ: ಆಧುನಿಕ ಕಾವ್ಯ ಸಂದರ್ಭದಲ್ಲಿ

## ೧–ವಿಮರ್ಶಾ ಲೇಖನ

ಕನ್ನಡದಲ್ಲಿ ಅನ್ವಯಿಕ ವಿಮರ್ಶೆಯ ಕೊರತೆ ಇರುವುದನ್ನು ಕಣವಿಯವರಂಥ ಕವಿಯೇ ತುಂಬಿಕೊಡಹೊರಟುದು ಅತ್ಯಂತ ಕುತೂಹಲಕರವೆನಿಸಿದೆ. ‘ಕವಿಯ ಹೊಟ್ಟೆಯಲ್ಲಿ ವಿಮರ್ಶಕ ಅಡಗಿರುವಂತೆ ವಿಮರ್ಶಕನ ಹೊಟ್ಟೆಯಲ್ಲಿ ಕವಿ ಅಡಗಿದ್ದಾನೆ’ ಎಂಬುಕ್ತಿ ಕಣವಿಯವರಿಗೆ ಸರಿಯಾಗಿ ಅನ್ವಯಿಸುವುದೆಂದು ಮಾಳವಾಡರು ‘ಸಾಹಿತ್ಯ ಚಿಂತನ’ಕ್ಕೆ ಮುನ್ನುಡಿದಿದ್ದಾರೆ. ಕವಿತೆಯ ಪವಾಡ ಕಣವಿಯವರನ್ನು ಕೈವಶ ಮಾಡಿಕೊಂಡರೂ ‘ಕವಿ ಹೃದಯದ ವ್ಯಾಪಾರ ತಿಳಿದು, ಕೃತಿಯ ಸೌಂದರ್ಯವನ್ನು ದಳದಳ ಬಿಡಿಸಿ ನೋಡುವ ಸೊಗಸಿನಿಂದಲೋ ಏನೋ ವಿಮರ್ಶೆಯ ಒಲವು’ ಮೂಡಿರುವುದು ದಿಟ. ಅಂತೆಯೇ ‘ಉತ್ತಮ ಪ್ರಬಂಧ ಬರೆದಾಗ, ಓದಿದಾಗ ಒಳ್ಳೆಯ ಕವಿತೆಯಿಂದ ಒದಗುವ ಸಂತೋಷವನ್ನೇ’ ಅವರು ಪಡೆದಿದ್ದಾರೆ. ಸ್ವಯಂ ಕವಿಯಾಗಿ ಕವಿಕರ್ಮ ಪರಾಮರ್ಶೆಯಲ್ಲಿ ಅವರಿಗೆ ವಿಶೇಷ ಅನುಕೂಲವಿದೆ. ಅಂಥವರ ವಿಮರ್ಶೆಯಿಂದ ನಮಗೆ ವಿಶೇಷ ಲಾಭವಿದೆ.

ಕಾವ್ಯ ಅವರಿಗೆ ಹೆಚ್ಚು ಸುಖವಿತ್ತರೂ ಕವಿ ಹೃದಯದ ಅವರ ವಿಮರ್ಶಾಗದ್ಯ ನಮಗೆ ಹೃದ್ಯವಾಗಿದೆ. ಏಕೆಂದರೆ ಅದು ‘ಸಾಹಿತ್ಯದ ಸೊಗಸಾದ ಹರಳುಳ್ಳ ಪದಗಳನ್ನು, ಅವತರಣಿಕೆಗಳನ್ನು ಬಳಸಿಕೊಂಡು ಪುಷ್ಟಿ ಪಡೆದಿದೆ’ (ಮಾಳವಾಡ). ಈ ಕ್ಷೇತ್ರದಲ್ಲಿ ಅಂಜುತ್ತ ಅಳುಕುತ್ತ ಅಡಿಯಿಟ್ಟ ಅವರ ವಿಮರ್ಶಾಕೃಷಿ ಸಾಹಿತ್ಯ ಚಿಂತನ–‘೬೬, ಕಾವ್ಯಾನುಸಂಧಾನ–೭೧, ಸಮಾಹಿತ-೭೭ ಗಳಲ್ಲಿ ೩೯ ಲೇಖನ ನೀಡಿದೆ. ಕಣವಿಯವರ ವಿಮರ್ಶೆ ಪ್ರಾಚೀನ ಕಾವ್ಯ ಹಾಗೂ ಜನಪದ ಸಾಹಿತ್ಯಗಳಂತೆ ಆಧುನಿಕ ಕಾವ್ಯ ಸಂದರ್ಭದಲ್ಲೂ ನಡೆದು ಸರ್ವಂಕಷವೆನಿಸಿದೆ. ಹೊಸಗನ್ನಡದ ಪ್ರಾತಿನಿಧಿಕ ಕವಿಗಳ ಬಗ್ಗೆ ಪ್ರತ್ಯೇಕ ಪರಿಶೀಲನಗಳಲ್ಲದೆ, ಹೊಸ ಕಾವ್ಯದ ಬಗೆಗಿನ ಬರಹಗಳಲ್ಲಿ ನವೋದಯದಿಂದ ನವ್ಯ ಕವಿಗಳ ವರೆಗಿನ ಸಮೀಕ್ಷೆ ಇಲ್ಲಿದೆ. ಈ ಮುಂದಿನ ಲೇಖನದಲ್ಲಿ ಕಣವಿಯವರ ವಿಮರ್ಶೆಯ ಮಾತುಗಳ ಸಾರವನ್ನೇ ಓಡಿಯಲು ಪ್ರಯತ್ನಿಸಲಾಗಿದೆ.

## ೨–ಬೇಂದ್ರೆ

ಸಾಹಿತ್ಯ ಚಿಂತನದ ‘ಬೇಂದ್ರೆಯವರ ಕಾವ್ಯದಲ್ಲಿ ಭಾವಸಂಪತ್ತು’ ೫೬-‘೬೭ರ ಬರಹಗಳನ್ನು ಬೆಸೆದುಕೊಂಡಿದೆ, ಬೇಂದ್ರೆಯವರಿಂದ ಕೀರ್ತಿ ಶಿಖರವೇರಿದ ಕನ್ನಡ

ಕವಿತೆ 'ಭಾವಸಂಪತ್ತನ್ನು ಗಳಿಸಿಕೊಂಡೇ ಬರುತ್ತ, ಸಾಲು ಸಾಲಿಗೂ ಸಮೃದ್ಧಗೊಳ್ಳುತ್ತ ವಸ್ತುವನ್ನರಳಿಸುತ್ತದೆ. ಸೌಂದರ್ಯವರ್ಣನೆಯಲ್ಲಿ ಮುಗಿಯದೆ ಪ್ರಕೃತಿ–ಪುರುಷರ ಲೀಲೆಗಳಲ್ಲಿ ಪರ್ಯವಸಾನಗೊಳ್ಳುತ್ತದೆ. ವಿಶ್ವರೂಪಕಗಳನ್ನು ಬಳಸಿಕೊಳ್ಳುತ್ತದೆ. ಸಾಮಾಜಿಕ ಸಮಸ್ಯೆಗಳ ಮೂಲವನ್ನಲ್ಲಾಡಿಸುತ್ತದೆ; ಸಹಜ ಪ್ರಾಸವನ್ನೂ ಪಡೆಯುತ್ತದೆ. ವಿಶ್ವ ಮಾನವ ಭಾರತದ ತಕ್ಕಡಿಯಲ್ಲಿ ತೂಗಿ ತಿರುಳ್ಗನ್ನಡದ ಬೇಂದ್ರೆಪಾಕದ ಬೆಲೆ ಕಟ್ಟಬೇಕಿದೆ.'

ಅವರ 'ಅರಳು-ಮರಳು' ಪಂಚಕಾವ್ಯಗುಚ್ಛವಾಗಿ ಅರಳಿ ರಾಷ್ಟ್ರೀಯ ಪಾರಿತೋಷಕ ಪಡೆಯಿತು (೫೬) ಅದರ ಮೊದಲ ಓದಿಗೆ ಕಣವಿಯವರಲ್ಲಿ ಹೊಳೆದ ಮಾತುಗಳಿವು : ಜಾನಪದ ಧಾಟಿ–ಶೈಲಿಗಳನ್ನು ಬಳಸಿದ ಇವರ ಕಾವ್ಯ ಜನತೆಯ ವರೆಗೂ ಮುಟ್ಟಿದೆ. ಪ್ರತಿಭೆ ಪುಟ ಪುಟದಲ್ಲೂ ಸ್ಫುಟಗೊಂಡಿದೆ. 'ಅವರ ಶಬ್ದಗಳಿಗೆ ಪ್ರತಿಮಾಮಯತೆ ಯಲ್ಲದೆ ಬೌದ್ಧಿಕ ಉತ್ಕರ್ಷವಿದೆ'. ನಾದಲಂಪಟತೆಯೂ ಇದೆ. ಹಿಂದಿನ ಸಂಗ್ರಹಗಳು ಒಂದು ತೂಕ, ಅರಳು–ಮರಳು ಒಂದು ತೂಕ. 'ಕಂಡವರಿಗಲ್ಲೊ ಕಂಡವರಿಗಷ್ಟೆ ತಿಳಿದ್ಯದ ಇದರ ಬೆಲೆಯು 'ಎನ್ನುತ್ತಾರೆ ಕಣವಿಯವರು,

ಅನಂತರ ಜ್ಞಾನಪೀಠ ಪ್ರಶಸ್ತಿ ಪಡೆದ 'ನಾಕು ತಂತಿ'ಯ ಕವನವೊಂದರ ಗೂಢ ಗುಂಜನದ ದರ್ಶನಾತ್ಮಕ ವಿಮರ್ಶೆಯಿದೆ 'ಸಮಾಹಿತ'ದಲ್ಲಿ; ನಾದಲೀಲೆಯ ಹಾಡೊಂದು ಹೃದಯ ಹಾಸಿ ಒಕ್ಕಲಿಗನನ್ನುದ್ದೇಶಿಸಿದ್ದರೆ, ಸಾಧಕನೇ ಕ್ಷೇತ್ರಜ್ಞನಾಗಿ ಆತ್ಮಾನುಭವ ನಿರೂಪಿಸುವಂತೆ ಎದೆಯ ಒಕ್ಕಲಿಗನ ಹಾಡು, ಅಲ್ಲಿ ಮೂಡಿದ ಒಕ್ಕಲತನದ ಪ್ರತಿ ಮೆಯೇ ಇಲ್ಲಿ ಸಕಲ ಸಲಕರಣೆಗಳೊಂದಿಗೆ ಸಂಪುಷ್ಟಿಗೊಂಡು ಭಾವವಿಕಾಸದ ಮಾರ್ಗ ದಲ್ಲಿ ಕವಿಯ ಸಮಗ್ರಾನುಭವ ನಿರೂಪಣೆಗೆ ಸಿದ್ಧವಾಗಿದೆ. ಭಾಷೆಯ ಶಕ್ತಿಯನ್ನು ಬಳಸಿ, ಅನುಭವದ ಹಲ ಮಗ್ಗಲುಗಳಿಗೆ ಇಂಬುಗೊಟ್ಟು ಹೊಮ್ಮಿದ ರೀತಿ ಕವಿಯ ಭಾವದ ಬೆಳವಣಿಗೆಯನ್ನು ತೋರಿಸುತ್ತದೆ. ತತಿ-ತತ್, ಸ್ವಾತಿ–ಸತ್ ಚಿತ್ತಿ–ಚಿತ್, ನೀರ–ನೀರೆ, ಬಿತ್ತು-ಬೀಳು, ಎತ್ತು-ಏಳು, ದೀಪ-ಕಣ್, ಗಂಟಿ–ಕಿವಿ ಎಂಬಂಥ ಶಬ್ದಾರ್ಥ ಬಳಸಿ ಸಮರಸವೇ ಜೀವನ ಎಂಬ ತತ್ವಕ್ಕೆ ಬಂದು ಮುಟ್ಟುವ ಕವಿ ಇಲ್ಲಿ ಮತವಿದುಷ್ಟ ವಾಗದ ಉನ್ಮುಖ ಮಾನವತೆಯ ಶಿಖರೋದ್ದೀಪನಕ್ಕೆ ಆಹ್ವಾನ ಮಾಡಲು ಕ್ಷೇತ್ರ ಸಿದ್ಧಿ ಯಾಗಬೇಕು, ಆ ಕರ್ಮಯೋಗದ ಕಾಯಕದಲ್ಲಿ ತೊಡಗೋಣ' ಎಂದು ಸಂದರ್ಭ ಸೂಚಿಸಿ ದ್ದಾರೆ. ಜೀವನವೇ ಯೋಗ ಎಂದನುಭವಿಸಿದ ಕವಿಯ ಜೀವನ ಶ್ರದ್ಧೆಯನ್ನು ಆಧ್ಯಾತ್ಮಿಕ ಅನುಭೂತಿಯೊಂದಿಗೆ ಮಾತು ಮಾತಿನಲ್ಲಿ ಮಿನುಗುವ ಈ ಕವಿತೆಯ ಭಾವಾರ್ಥಜ್ಯೋತಿಯಲ್ಲಿ ಕಾಣಬಹುದು.

ಬೇಂದ್ರೆಯವರ ತೀವ್ರಾನುಭವ ಭಾವಸೂಕ್ಷ್ಮತೆ ಬಂಧುರ ಅಭಿವ್ಯಕ್ತಿಗಳನ್ನು ಕಣವಿಯವರೆ ಕವಿಹೃದಯ ಸಮರ್ಪಕವಾಗಿ ಗುರುತಿಸಿದೆ, ಅರಳು ಮರಳುವಿನ ವ್ಯಾಪಕ ವಿಮರ್ಶೆಯ ನಕ್ಷೆ ಇಲ್ಲಿ ಮೂಡಿ ಬಂದಿದೆ. ಇಲ್ಲಿ ಬಂದಿರುವ ಸಾಧಾರ

ಸಹೃದಯ ವಿಮರ್ಶೆ ಬೇಂದ್ರೆ ಕಾವ್ಯ ಮೆಚ್ಚಿಕೊಳ್ಳುವವರಿಗೆ ಮೆಚ್ಚಿಕೊಳ್ಳಲಾರದ ಕೆಲವರಿಗೆ ಪ್ರಯೋಜನ ಕಾರಿಯಾಗುವಂತಿದೆ'. (ಮಾಳವಾಡ)

### ೩—ಮಧುರಚೆನ್ನ

'ಮಧುರಚೆನ್ನರ ಮಧುರಗೀತೆ' ಉತ್ತರಾರ್ಧದಲ್ಲಿ 'ನನ್ನ ನಲ್ಲ'ವನ್ನೂ ಸಮೀಕ್ಷಿಸಿದೆ: ಮಧುರಗೀತ ಮೈತ್ರಿಯೋಗದ ಖಂಡ ಕಾವ್ಯ. ಪ್ರೀತಿಯಂಥ ವಸ್ತು ಇಲ್ಲ ಎಂದು ಮನಗಂಡ ಕವಿ ಅದನ್ನು ಮನಂಬುಗುವಂತೆ ಬಣ್ಣಿಸಿದ್ದಾನೆ. ಪ್ರೀತಿಯ ಮೇಲ್ಮೆ ಮೊದಲ ಮುದ್ದಿನಲ್ಲಿದೆ. ೨ನೆಯದರಲ್ಲಿ ಕವಿಯ ಆತ್ಮದ ಮೊರೆತವಿದೆ, ದೇವರಾಯ ಕಾಣದೆ, ಗೆಳೆಯನ ಬರವಿನ ಸುಳಿಗಾಳಿಗೆ ಚೇತರಿಸಿತು ಕವಿ ಜೀವ; ಮಳೆ ಬೇಡಿದರೆ ಗಾಳಿಯಾದರೂ ಬಂತೆಂಬ ಧನ್ಯತೆ ಪಡೆಯಿತು. ಆಗ ಕೇಳಿದ ಪ್ರೇಮನಿನಾದ ೨ನೆಯ ಮುದ್ದಿನಲ್ಲಿದೆ. ಪ್ರೇಮಯಜ್ಞಕ್ಕಾಯ್ದುಕೊಂಡ ಮಧುರನೊಡನೆ ಕವಿಯ ಅಂತರಂಗ ದಾಸೆ ಈಡೇರಿದ ಆತ್ಮಲೀಲೆ ೪ನೆಯ ಮುದ್ದಿನಲ್ಲೂ, ಅದರ ಉತ್ಕಟತೆ ೫ನೆಯ ಮುದ್ದಿನಲ್ಲೂ ಬಂದಿವೆ. ಕವಿ, ನಲ್ಲೆ ವಾಸಂತಿ, ಮಿತ್ರ ಮಧುರ ಆಗಲದ ಪಥಿಕರಾದರು ಆತ್ಮಯಾತ್ರಿಕರಾದರು. 'ನನಗೆ ನೀನತಿ ಮಧುರ, ನಿನಗೆ ನಾ ಬಲು ಚೆನ್ನ, ಹೀಗೆಂತಲೇ ನಾವು ಮಧುರಚೆನ್ನ'. ಆಧ್ಯಾತ್ಮಿಕ ಅನುಭವದಲ್ಲಿ ಮಿಂದೆದ್ದ ಈ ಸ್ನೇಹಸೂಕ್ತವನ್ನು ಕಾವ್ಯಮಯವಾಗಿ ಹೇಳಿದವರು ಮಧುರಚೆನ್ನ.

ಇದೇ ಛಂದದ ೨೦ ನುಡಿಗಳ ೫ ಭಾಗವುಳ್ಳದ್ದು 'ನನ್ನ ನಲ್ಲ', ಇವೆರಡೂ ಅವಳಿ-ಜವಳಿ ಕಾವ್ಯ. ದೇವರಾಯನ ಕಾಣುವ ಹಂಬಲದ ಹಾಡು ಪಾಡು ನನ್ನ ನಲ್ಲ; ಅವನ ಸುಳಿವಿಲ್ಲದಾಗ ಒಳಧುಮುಕಿ ಬೆರೆತ ಗೆಳೆಯನನ್ನು ಕುರಿತ ಆತ್ಮಕಥನ ಮಧುರಗೀತ. ಪ್ರೀತಿಯ ಸೂತ್ರ ಮಧುರಗೀತದ್ದು, 'ಬರುವದೇನುಂಟೊಮ್ಮೆ ಬರುವ ಕಾಲಕೆ ಬಹುದು-ಬಯಕೆ ಬರುವುದರ ಕಣ್ಸನ್ನೆ' ಎಂಬ ಸೂತ್ರ ನನ್ನ ನಲ್ಲದ್ದು, ಅನುಭಾವ ಕಾವ್ಯಪರಂಪರೆಗೆ ಅನುಪಮ ಕಾಣಿಕೆ. ವಸ್ತುಪರಿಪಾಕ-ಕಾವ್ಯದ ಕಮನೀಯತೆಯಿಂದ ನನ್ನನಲ್ಲ ಮಿಗಿಲು. ತಾತ್ವಿಕ ಚರ್ಚೆ ಇದ್ದೆಡೆ ಮಧುರಗೀತ ನೀರಸವಾಗಿದ್ದು ಅರ್ಥ ಹೊಂದಿಸಿಕೊಳ್ಳಬೇಕಾಗುತ್ತದೆ. ಮಧುರಚೆನ್ನರ ಜಾನಪದ ಸತ್ವ ತುಂಬಿ ಕೆಲವೇ ಕೃತಿ ನೀಡಿದ್ದರೂ ಅವುಗಳ ಚೆಲುವು ಮಾಸದಂತಹದು.

ಇಂತು 'ಮಧುರಚೆನ್ನರ ಗೀತೆಗಳ ಸಾರವನ್ನು ಗದ್ಯದಲ್ಲಿ ಹೇಳಿದುದು ಅಪಚಾರವಾಯಿತೇನೋ ಎಂದು ಕಣವಿ ಅಳುಕಿದಂತಿದೆ. ಆದರೆ ಇದರಿಂದ ಅಪಚಾರವಾಗಿಲ್ಲ, ಉಪಯೋಗವೇ ಆಗಿದೆ. ಇಂತಹ ಸಾರವನ್ನು ಓದಿದ ನಂತರವಾದರೂ ಕೆಲ ಓದುಗರು ಮೂಲ ವಿಗ್ರಹದತ್ತ ಹೊರಳಬಹುದು, ಮೂಲ ಕೃತಿಗಳ ವಾಚನವನ್ನು ಪ್ರಚೋದಿಸುವಂತಹ ವಿಮರ್ಶೆಯನ್ನು ಕಣವಿ ಕೊಡಬಲ್ಲರು'. (ಮಾಳವಾಡ)

### ೪—ಕುವೆಂಪು

ನಿಸರ್ಗದ ರಮ್ಯ ಚಿತ್ರ ಕಾಣಲು ಕುವೆಂಪು ಕಾವ್ಯ ಕೈಗೆತ್ತಿಕೊಳ್ಳಬೇಕು. ಮಲೆನಾಡು ಅವರಿಂದ ತನ್ನ ಸೌಭಾಗ್ಯ ಹೆಚ್ಚಿಸಿಕೊಂಡಿದೆ. ಈ ನಂದನದಲ್ಲಿ ಪಕ್ಷಿಲೋಕದ

ಸಂಭ್ರಮವನ್ನಷ್ಟೇ ಲಕ್ಷಿಸಲು ಕಣವಿಯವರಿಗೆ 'ವಿಶಿಷ್ಟ ಸಂದರ್ಭ–ಇಲ್ಲ ಅದರ ಅಭಾವ ಕಾರಣವಾಗಿರಬೇಕು'. ಮಲೆನಾಡು, ಕವಿಗೆ ಪಕ್ಷಿಕಾಶಿ; ಅದರ ಪವಿತ್ರ ಸೌಂದರ್ಯಾನುಭವ ಕಲೋಪಾಸಕನಿಗಲ್ಲದೆ ಬಿಯದನಿಗಲ್ಲ ; ನೀಲಾಕಾಶದ ಬೆಳ್ಳಕ್ಕಿಯು ಜೊತೆ ಮೈತ್ರಿಯು ಪಡೆವವಮಲಾತ್ಮ ಹಕ್ಕಿಗಳ ಇಂಚರ ಸಾಸಿರವನ್ನು ಕುವೆಂಪು ಕಾವ್ಯ ಧ್ವನಿಮುದ್ರಿಸಿಕೊಂಡಿದೆ, ರೇಖಾ ಚಿತ್ರವನ್ನು ಗರಿಕೊಂಕದಂತೆ ಚಿತ್ರಿಸಿಕೊಂಡಿದೆ. ಕೊಳರ್ವಕ್ಕಿಗಳ ರೆಕ್ಕೆಸದ್ದು, ಕೋಗಿಲೆಯುಲಿ, ಕ್ರೌಂಚ ರೇಖೆಗಳನ್ನು ಕುಶಲತೆಯಿಂದ ಬರೆಯುತ್ತದೆ ಕವಿಯ ಕುಂಚ. 'ಕಾಜಾಣದ ಗಾನದಾನಂದಕ್ಕೆ ಝುಮ್ಮೆಂದು ಸ್ಪಂದಿಸುತ್ತಿದೆ ಶೈಲಕಾನನ ವಿರಾಟ್ ಪ್ರಾಣ, ಬೆಳ್ಳಕ್ಕಿಯ ಹಂತಿಯ ಆ ನೆವದಿ ದೇವರು ಋಜು ಮಾಡಿದನು, ಜೀವನ ವನದಲಿ ಕವನ ಮಯೂರಂ, ಕುಹೂ ಕುಹೂ ಕೋಕಿಲವಾಣಿ' ಎಂಬಂಥ ಸಾಲುಗಳಿಂದಲೇ ವರ್ಡ್ಸ್‌ವರ್ತ್‌ನಂತೆ ಕುವೆಂಪು ಅವರಿಗೂ ಪ್ರಕೃತಿ ಉಪಾಸ್ಯ ದೇವತೆ ಎನಿಸುತ್ತದೆ. ಪ್ರಕೃತಿ ಗೀತಗಳಲ್ಲಿ ಸಮರ್ಥವಾಗಿ ಹೊಮ್ಮಿದ ಅವರ ಪ್ರತಿಭೆಯನ್ನು ಮರೆಯುವಂತಿಲ್ಲ.

## ೫–ಆನಂದಕಂದ

'ಆನಂದಕಂದರ ಕಾವ್ಯದ ಸಮಗ್ರ ಪರಿಶೀಲನೆಯ ಅವಶ್ಯಕತೆಯನ್ನು ಕಣವಿ ತುಂಬಿ ಕೊಟ್ಟಿದ್ದಾರೆ' (ಮಾಳವಾಡ) : ಆನಂದಕಂದರು ೧೯೧೮ರಿಂದಲೇ ಬರೆಯ ತೊಡಗಿದರೂ ಕಥೆಯ ಕೈಬಿಡದ ಕಾರಣ ೬ ಸಂಕಲನ ನೀಡಿದ್ದು, ಜಾನಪದ ಪ್ರಭಾವ ದಿಂದಾಗಿ ಇವರ ಭಾಷೆ ಅಚ್ಚಗನ್ನಡದ ಚಿನ್ನದ ಸರಕಾಗಿದೆ.

'ಮುಂದ್ದನ ಮಾತು' ಹಸನಾದ ಹೆರೆತುಪ್ಪ–ವಾತ್ಸಲ್ಯದ ಕೆನೆಹಾಲು–ಕನ್ನಡದ ಬಿದಿಗೆಯ ಚಂದ್ರ. 'ಅರುಣೋದಯ' ಕಾಲದ ಕನ್ನಡಭಕ್ತಿ ಎನಿತು ಇನಿದಾಗಿ ಮೋಹಕ ಮಂಜುಳರವ ಬೀರಿದೆ! 'ವಿರಹಿಣಿ' ಪ್ರಣಯಗೀತ ಮಾಲೆಯಾಗಿದೆ. (ಸರಳ ರಗಳೆಯ ಶಬರಿಯ ಬಾಳು ಚಿನ್ನದೆಳೆಯ ಮುತ್ತಿನ ಸರದಂತಿದೆ ಇಲ್ಲಿ.) ರತಿ ಭಾವವೇ ವೈವಿಧ್ಯಪೂರ್ಣವಾಗಿದೆ 'ಒಡನಾಡಿ'ಯಲ್ಲಿ (ಆದರೂ ಭಾವ ಬಂಧುರತೆ–ವ್ಯಂಜಕತೆ ಕವಿಮೆ); ಮಾನವನ ಬದುಕಿಗೆ ಪ್ರಕೃತಿ ಕೊಡುವ ಜೀವಶಕ್ತಿಯರಿತ ಕವಿ ಒಡನಾಡಿಗೆ ಸುಗ್ಗಿಯಾಟದೋರುತ್ತ "ಬಾಳಿದು ಕನಸಲ್ಲ, ಗೋಳಿನ ತಿನಿಸಲ್ಲ । ನನ್ನಿ ಹಿಗ್ಗಿನ ಹೊಸ ತೋಟ'' ಎಂಬ ಆಶಾವಾದ ಅದ್ಭುತವಾಗಿದೆ. 'ಕಾರ ಹುಣ್ಣಿಮೆ'ಯ ಕವಿತೆಗಳಲ್ಲಿ ಭಕ್ತಿ–ಅಣಕ–ವಿಡಂಬನೆ–ಸಮಾಜ ಪ್ರಜ್ಞೆ– ಜೀವನ ತತ್ವಗಳನ್ನು ಕಾಣು ತ್ತೇವೆ. 'ನಲ್ವಾಡುಗಳು' ಅಪರೂಪದ ಕಾಣಿಕೆ; ನಗ ನಗತ ನಡಿದೆಯಲ್ಲೆ ನಾರೀ ವೈಯಾರಿ–ಎಂಬಂಥ ಆಡು ನುಡಿಯ ಜಾನಪದ ಪ್ರೀತಿಗೀತ ಇಲ್ಲಿವೆ.

ಇವರ ಕವನಗಳಿಗೆ 'ಕಣ್ಣೋದಿಗಿಂತ ಕೊರಳೋದು ಪರಿಣಾಮಕಾರಿ.' ಅಚ್ಚ ಗನ್ನಡದ ಶಬ್ದಗಳ ಇವರ ಪ್ರೀತಿ ಒಮ್ಮೊಮ್ಮೆ ವ್ಯಾಮೋಹವಾಗಬಹುದು. ಇವರ ಸಂಕಲನ ಅಚ್ಚುಕಟ್ಟಾಗಿ ಜೋಡಣೆಗೊಂಡಿವೆ. ಕನ್ನಡ ಕಾವ್ಯದ ಬೆಳವಣಿಗೆಗೆ ಅಮೂಲ್ಯ

ಕಾಣಿಕೆ ಸಲ್ಲಿಸಿ ಅವರ ಸಿರಿಯನ್ನು ಹೆಚ್ಚಿಸಿದ ಮಹತ್ವದ ಕವಿಗಳಲ್ಲಿ ಆನಂದಕಂದರು ಮರೆಯದ ಹೆಸರು.

ಇಲ್ಲಿ ' ಆನಂದಕಂದರ ಕಾವ್ಯದ ಸಮಗ್ರ ಪರಿಶೀಲನೆಯ ಅವಶ್ಯಕತೆಯನ್ನು ಕಣವಿ ತುಂಬಿ ಕೊಟ್ಟಿದ್ದಾರೆ ' (ವಳಾಳವಾಡ).

## ೬–ವಿ.ಸೀ.

' ಕಾವ್ಯಾನುಸಂಧಾನ 'ದ ' ವಿ.ಸೀ. ಕಾವ್ಯದ ಹೆಜ್ಜೆಪಾಡು ' ಕೂಡ ೫ ಸಂಕಲನ ಗಳನ್ನು ಸಮೀಕ್ಷಿಸಿದೆ.

ನವೋದಿತ ಚೇತನದ ' ಗೀತೆಗಳು ' ಅವರ ಕಾವ್ಯದ ಮುಖ್ಯ ಗುಣಗಳನ್ನೊಳ ಗೊಂಡಿದೆ. ಬಗೆಯನುದ್ದೀಪಿಸುವ ' ದೀಪಗಳಲ್ಲಿ ' ವೀಣೆ ತುಂಬಿಸುವ ಹಾಡು ಪಡೆದ ರಸಸಿದ್ಧಿ ಅಪೂರ್ವವಾದ್ದು. ಮಗಳು ಪತಿಗೃಹಕ್ಕೆ ತೆರಳುವಾಗ ಹೆತ್ತವರ ಹೃದಯದ ವಾತ್ಸಲ್ಯದಲ್ಲಿ ಅದ್ದಿ ತೆಗೆದ ಪದಗಳಿಂದ ಹರಿದ ಹಾಡು ಕರುಣರಸದ ಪಾಡಾಗಿದೆ. ' ನೆಳಲು ಬೆಳಕಿ 'ನಲ್ಲಿ ರಾಮನಿಗೆ ಕಾದು ನಿಂತ ಶಬರಿಯ ಗೀತವಿದೆ. ಜೀವನಾನುಭವ ವಾಗಿ ಬಾಗಿದ 'ದ್ರಾಕ್ಷಿ ದಾಳಿಂಬೆ' ರಸದುಂಬಿಕೊಂಡಿದೆ. ಕವಿಯ ಸಂತುಷ್ಟಿ ಸಮಾಧಾನ ಗಳ 'ಹೆಜ್ಜೆಪಾಡಿ'ನಲ್ಲಿ ಮನದ ಕಾಮನೆಗಳ ಮೊನೆಯ ಸಾಣೆಗೈದಂತೆ ಮೂಡಿಹ ಕಾಮನ ಬಿಲ್ಲು ಇಳೆಯ ಸೊಬಗನ್ನು ಸ್ವರ್ಗಕ್ಕೆ ಕೊಂಡೊಯ್ಯುವ ತೆರದಲ್ಲಿ ಬಾಗಿದೆ ಎಂಬ ಕಲ್ಪನೆ ಹೊಸತನದಿಂದ ಕೂಡಿದೆ.

ಬುದ್ಧಿ ಭಾವಗಳ ಒಳತೋಟಿಯ ಮೂಲಕ ಇವರ ಸಂವೇದನೆಗಳ ಕ್ಷೇತ್ರ ಸಂಕೋಚಗೊಂಡಿದೆ. ಆದರೆ ಕನ್ನಡ ಪುಸ್ತಕವನ್ನು ಚೆಲುವಾಗಿ ಪ್ರಕಟಿಸುವ ಸಂಪ್ರದಾಯ ಇವರಿಂದ ಮೊದಲಾಯಿತು.

## ೭–ದಿನಕರ ದೇಸಾಯಿ

ದಿನಕರ ದೇಸಾಯಿ ತಮ್ಮ ಪ್ರಥಮ ' ಕವನ ಸಂಗ್ರಹ 'ದಲ್ಲಿತ್ತ ಭಾವಗೀತೆಗಳನ್ನು ಪರಿಶೀಲಿಸಿದೆ ಮುಂದಿನ ಬರಹ.

ಒಂದು ಹಿತವಾದ ನಂಬಿಕೆ–ದೈವಭಕ್ತಿ ಜೀವನಾನುಭವದಿಂದ ಒದಗಿ ಇಲ್ಲಿ ಹಿನ್ನೆಲೆ ಯಾಗಿದೆ. ಭೂಮಿಯಲ್ಲೇ ಸ್ವರ್ಗಕ್ಕಿಂತ ಹೆಚ್ಚಿನ ಸೌಭಾಗ್ಯ ಕಂಡುದು ಈ ಕವಿಯ ಮಹತ್ವದಂಶ. ಗೋಕಾಕರು ಮುನ್ನುಡಿದಂತೆ ' ಅವರ ಕಾವ್ಯದ ಅನನ್ಯತಮ ಲಹರಿ ಯೆಂದರೆ ಶಿಶು ಗೀತಗಳಂತೆ ಕಾಣುವ ಪ್ರಕಾರ.' ಕಬ್ಬಿಗರೆಲ್ಲ ಚಂದ್ರನಿಗೇ ಗಂಟು ಬಿದ್ದುದ ರಿಂದ ಕೌದಿಯ ಚರಿತ ಮೂಲೆಗೆ ಬಿತ್ತು ಎಂದು ಕವಿ ಅದರ ಗುಣಗಾನಕ್ಕೆ ತೊಡಗುತ್ತಾನೆ. ಬೆಳುದಿಂಗಳ ಹುಚ್ಚಿನಲ್ಲಿ ಸಾಬೂನಿನ ನೊರೆ ಮೆಚ್ಚಲಿಲ್ಲೆನ್ನುತ್ತ, ಇದರ ಹೊರಗಿನ ಬಣ್ಣ ಹೇಗಿದ್ದರು ' ಹೃದಯದ ನೊರೆ ಸತತವು ಬಿಳಿ ಶುದ್ಧವು' :ಎಂಬಲ್ಲಿ ' ಸಣ್ಣ ಸಣ್ಣ ಮಾತಿನೊಳಗಿಂದ ಬಣ್ಣ ಬಣ್ಣದ ಇಂದ್ರಧನುಸ್ಸು ಮೇಲಕ್ಕೇಳುತ್ತದೆ.' ಸಾಮಾನ್ಯಾಂಶ

ಗಳಿಂದ ಜೀವನ ಪಾಠವನ್ನು ಕಾವ್ಯಾಂಶದೊಡನೆ ಕಾಣುವ ಕಣ್ಣು ಈ ಕವಿಗಿದೆ. ' ಕೆಲವು ವ್ಯಕ್ತಿಗಳ ಸ್ವಭಾವ ಚಿತ್ರವನ್ನು ಒಳಗೊಂಡ ಕವಿತೆಗಳ ವಿನೋದದ ಸಂಸ್ಕಾರ ಉದಾತ್ತವಾದದ್ದು.'

ಸಾಮಾಜಿಕ ಪ್ರಜ್ಞೆ ಇಲ್ಲಿಯ ಇನ್ನೊಂದು ಮುಖ್ಯ ಲಕ್ಷಣ. ಅಲ್ಲದೆ ಭಾಷೆಯ ಬಗ್ಗೆ ಈ ಕವಿ ಮೊದಲಿನಿಂದ ಮಡಿ ಮೈಲಿಗೆ ಇಟ್ಟುಕೊಳ್ಳದೆ ನಿಸ್ಸಂಕೋಚವಾಗಿ, ವಸ್ತುನಿಷ್ಠವಾಗಿ ಅದನ್ನು ಕಾವ್ಯಕ್ಕೆ ದುಡಿಸಿಕೊಂಡಿದ್ದಾರೆ. ' ಮಂಜು ' ದೇಸಾಯರ ಚುರುಕಾದ ಚುಟುಕುಗಳ ಮೊದಲ ಕೈ ತೋರಿಸುತ್ತದೆ. ಇವರ ವ್ಯಕ್ತಿತ್ವದ ಹದ ಶೈಲಿಯಲ್ಲಿ ಹದುಳವಾಗಿ ಸಹಜತೆ–ಪ್ರಸಾದ ಗುಣಗಳೊಡನೆ ಕೆಚ್ಚನ್ನೂ ಅಳವಡಿಸಿಕೊಂಡಿದೆ; ' ಹರಿಗೆ ಎಂದು ಗುಡಿಯನೊಂದು ಕಟ್ಟುತಿರುವೆಯಾ ' ಎಂಬಲ್ಲಿ ತನ್ನತನ ಮೆರೆದಿದೆ. ಇದರಿಂದ ' ಕನ್ನಡಕ್ಕೆ ಒಬ್ಬನೇ ದಿನಕರ–ಆಧುನಿಕ ಕಾವ್ಯದಲ್ಲಿ ಅನನ್ಯ ಸ್ಥಾನ ' ಅವರದು. ಇಂದಿನ ಚುಟುಕುಗಳೂ ಇದಕ್ಕೆ ಸಾಕ್ಷಿ.

ಆ–ಕೆ.ಎಸ್.ನ.

ತರುವಾಯದ ಬರಹ ಕೆ. ಎಸ್. ನ. ರ ವಾತ್ಸಲ್ಯಗೀತೆಗಳಷ್ಟೇ ಕುರಿತಿದೆ : ಕವಿಯ ಭಾವಗಳ ಸೂಕ್ಷ್ಮ ಕಲೆಗಾರಿಕೆ ಪ್ರೇಮಗೀತೆಗಳಷ್ಟೇ ಇಲ್ಲೂ ಮೆರೆದಿದೆ.' ' ಮೈಸೂರು ಮಲ್ಲಿಗೆ 'ಯ ರಾಮು ಬಂಟನ ತುಂಟತನ ಬಣ್ಣಿಸಿದ ಪದ್ಯ ' ದೇವರವನು ನಾನು ಗಂಡಿ ' ಎಂಬ ನುಡಿಯಲ್ಲಿ ಸೊಡರ ಕುಡಿಯಾಗಿದೆ. ಈ ತುಂಟನ ಎರೆದು ತೂಗಿ ಜೋಗುಳ ಹೇಳುವ ತಾಯ ಪ್ರೀತಿ ತೊಟ್ಟಿಲ ಹಾಡಾಗಿ ಹರಿದಿದೆ.' ಮಕ್ಕಳಿಲ್ಲದ ಅಕ್ಕ–ತಂಗಿಯರ ನಗುವಾಗಿ—ಚಕ್ಕಂದವಾಡಿ ಬಾ ಚಿಕ್ಕ ಮಗುವೆ ' ಎಂಬ ಲಯಕ್ಕೆ ತಕ್ಕ ಮಧುರ ಪದಗಳ ಹಗುರ ವಿಲಾಸದಿಂದ ಭಾವದ ತೊಟ್ಟಿಲನ್ನು ಕನಸಿನ ಲೋಕದಲ್ಲಿ ತೂಗಿದ ಈ ಛಂದ.

' ದೀಪದ ಮಲ್ಲಿ 'ಯ ತುಂಗಭದ್ರೆ ತೊಟ್ಟಿಲಿಂದ ಹೆಡೆಯೆತ್ತಿ ತಂದೆಯನ್ನೇ ಹೊಸಬನಿವನಾರು ಎಂದು ನಕ್ಕು ನಗಿಸುವುದಲ್ಲದೆ, ಸಂಸಾರ ಸಾಗರದಿ ತಾಯ್ತಂದೆ ದಡವಾಗಿ ನಡುವೆ ತುಂಗಭದ್ರೆಯ ಹಡಗು ಚಂದಿರನ ಹೊತ್ತು ಓಡಾಡುವುದು ಎಂಬಲ್ಲಿ ಎಂಥ ಸುಂದರ ವಾತ್ಸಲ್ಯಗೀತ ಎನಿಸದಿರದು. 'ಉಂಗುರದ' ಆನಂದನಂತೂ ಬಾಳಿನ ಬ್ರಹ್ಮಾನಂದ ಭೂಮಿಗಿಳಿದಂತಿದೆ. ಇದರ ಕಾಮನ ಬಿಲ್ಲು ಮಗುವಿನ ಹಟದ ಸುಂದರ ಮಾದರಿ; ಹಿತ್ತಲ ಅಂಜೂರ ಮರದ ಮೇಲೆ ಮೂಡಿದ್ದ ಕಾಮನ ಬಿಲ್ಲು ಕಂಡ ಮಗು ಚಿನ್ನ ರನ್ನದ ಗರಿಯ ಪಾರಿವಾಳ ಬೇಡುತ್ತಿದೆ; ಅವನನ್ನು ಹಾಡಿ ಮಲಗಿಸಿ ಕನಸ ಬರಿಸಿ ಇದನ್ನು ತೋರಿಸಬೇಕಷ್ಟೇ ? ' ಇರುವಂತಿಗೆ 'ಯ ನಿದ್ದೆ ಎಚ್ಚರಗಳಲಿ ಪೊರೆವ ಕೈ ದುಡಿವಂತಿದೆ–ಅದನ್ನು ಲೆಕ್ಕಿಸದೆ ಮಗು ಹೊದಿಕೆಯನು ಒದೆಯುತ್ತಿದೆ ಎಂಬ ಸಣ್ಣ ಸಂಗತಿಯ ದರ್ಶನ ದೊಡ್ಡದು, ಕ್ಷಣವೊಂದರ ಸ್ಮಾರಕ. ' ಐರಾವತ 'ದಲ್ಲಿ ತಾಯ ತೋಳಿಂದ ಜಾರಿ ತೇರು ಹಿಂದಿರುಗುವಂತೆ ತಾಯ ಬಳಿಗೆ ಬರುವ ಕಂದನ ಚಿತ್ರವಿದೆ (ಭೂಮಿ ಗುಂಡಾಗಿರುವುದು). ಈ ವಾತ್ಸಲ್ಯದ ವ್ಯಾಪ್ತಿಯನ್ನು ' ಶಾನುಭೋಗರ

ಮಗಳು–ಬಳೆಗಾರನ ಹಾಡು 'ಗಳಲ್ಲೂ ಉದಾರವಾಗಿ ಕಾಣುತ್ತೇವೆ. ಪ್ರೇಮಗೀತೆಗಳಲ್ಲಿ ಕವಿ ಪಡೆದ ಸಿದ್ಧಿ ಹೀಗೆ ವಾತ್ಸಲ್ಯ ಗೀತೆಗಳಲ್ಲೂ ಕೌಶಲ್ಯ ಪೂರ್ಣವಾಗಿ ಕಂಗೊಳಿಸಿದೆ.

## ೯–ಶಿವರುದ್ರಪ್ಪ

' ಸಮಾಹಿತ 'ದ ' ಬೆರಗಿನಿಂದ ನಿಬ್ಬೆರಗಿಗೆ ' ಶಿವರುದ್ರಪ್ಪನವರಲ್ಲಿ ಒಂದು ಪ್ರಮುಖ ಲಕ್ಷಣವಾದ ಆಶ್ಚರ್ಯ ಭಾವ ಅವರ ಕಾವ್ಯದುದ್ದಕ್ಕೂ ಬೆಳೆದು ವೈಭವ ಗೊಂಡುದನ್ನು ಕುರಿತಿದೆ, ವಾಸ್ತವತೆಯು ಅರಿವಾದಂತೆ ಕಡಿಮೆಯಾಗದೆ ಅದು ಕವಿಯು ಅನುಭವದೊಡನೆ ಮಾರ್ಪಟ್ಟು ಅವನ ಕಾವ್ಯಕ್ಕೆ ಮೆರಗು ಕೊಡುತ್ತದೆ. ಚೆಲುವು ಒಲವಿನ ಮಲ್ಲಿಗೆ 'ಇಷ್ಟು ಹಚ್ಚನೆ ಹಸುರು ಗಿಡದಿಂದೆಂತು ಮೂಡಿತೊ ಬೆಳ್ಳಗೆ ' ಎಂಬ ರಹಸ್ಯ ಚಿಂತನೆಯಿಂದ ಅವ್ಯಕ್ತದ ಆಲೋಚನೆ ಕೆದುರಿಸಿದೆ. ' ಬೆಳಕು ತುಳುಕುವ ಬಾನಿನಡಿಯಲಿ ಜಗವೆನಿತು ಕಿರಿದಾಗಿದೆ ' ಎಂಬ ಒಂದಿರುಳ ರಸಾಂಶ ಮನಸ್ಸನ್ನು ಆರ್ದ್ರಗೊಳಿಸಿದೆ. ಒಂದು ಸಂಜೆ ನಕ್ಷತ್ರ ನೋಡಿ ' ಇಂಥ ರತ್ನಾಭರಣ ಲೋಕವನ್ನು ಆ ಹಗಲು ತನ್ನೊಳಗೆ ಮುಚ್ಚಿದಚ್ಚರಿಗೀಗ ಮನವು ಬೆರಗು.' ದೀಪದ ಹೆಜ್ಜೆಯ ಮಗು ಚಂದಿರನ ಕಂಡು ' ಯಾರು ಕೊಟ್ಟರೋ ಬಾನಿಗೊಂದು ಬಂಗಾರದ ಮೆಡಲು ' ಎಂದು ಉದ್ಗರಿಸಿದೆ.

ಈ ಮುಗ್ಧ ಬೆರಗು ದಟ್ಟವಾಗಿ ಪ್ರಬುದ್ಧ ಭಾವಕ್ಕೆಡೆ ಕೊಟ್ಟು, ಸಂತೋಷಾಶ್ಚರ್ಯ ಸಖೇದಾಶ್ಚರ್ಯವೆನಿಸುತ್ತದೆ. ವಿಶ್ವ ಮಾಯೆಯ ಮುಖದ ಸೌಂದರ್ಯದರ್ಶನವಾಗ ದಿರಲು ' ಜಡೆಯಾಚೆ ತಿರುಗಿಸಿದ ತಾಯ ಮುಖ ಮಾತ್ರ ಇಂದಿಗೂ ಕಾಣದಲ್ಲ ' ಎನಿಸುತ್ತದೆ (ಜಡೆ–'ಚೆಲುವು–ಒಲವು'). ಅಕ್ಕನ ಅಮೃತಮುಹೂರ್ತದ ಸಿದ್ಧಿಯನ್ನು ' ಬೆಳಕು ಮೈ ನಡೆದಿತ್ತು ಕತ್ತಲೆಯ ಮುಡಿಗೆದರಿ ಚಿಕ್ಕ ಹೆಜ್ಜೆಯ ನಿಟ್ಟು ಬಾನ ತುಂಬ' ಎಂಬುದೆಂಥ ನಿಬ್ಬೆರಗು (ದೀಪದ ಹೆಜ್ಜೆ) !

ಶಿವರುದ್ರಪ್ಪನವರ ಕಾವ್ಯೋದಯಕ್ಕೆ ಕಾರಣವಾದ ವಿಸ್ಮಯ ಭಾವ ಪ್ರಕೃತಿ–ಜೀವನ–ಅನುಭವ–ಆಲೋಚನೆಗಳ ಮಟ್ಟದಲ್ಲಿ ದಟ್ಟೈಸಿ ನಿಂತು ಅವರ ಕಾವ್ಯಕ್ಕೆ ಹೊಸ ರುಚಿ–ದೃಷ್ಟಿಗಳನ್ನು ತಂದಿದೆ. ಕಾವ್ಯ ಸಜೀವವಾಗಿರುವದೇ ಆನಂದದ ಬೆರಗಿನಲ್ಲಿ. ಈ ಸೋಜಿಗವರಿತು ಆಸಂದಿಸಿ ಅಭಿವ್ಯಕ್ತಗೊಳಿಸುವ ಕವಿ ಕೃತಾರ್ಥ.

## ೧೦ ಹೊಸಕಾವ್ಯ

ಕಣವಿಯವರಿಗೆ ವಿಮರ್ಶೆಯ ಒಲವು ಹೆಚ್ಚಿದ್ದು ಮೂರು ವಿಮರ್ಶಾ ಗ್ರಂಥ ಗಳಲ್ಲಿ ಸುವ್ಯಕ್ತವಾಗಿದೆ, ಅವುಗಳ ಕೊನೆಯ ಬರಹ (೫) ಆಧುನಿಕ ಕಾವ್ಯ ಸಂದರ್ಭ ದಲ್ಲೇ ಕ್ರಮವಾಗಿ ಬೆಳೆದಿವೆ. ಇಂದಿನ ಕವಿಗಳ ದೃಷ್ಟಿ–ಶೈಲಿಯ ವೈಶಿಷ್ಟ್ಯ ಕುಂದು ಕೊರತೆಗಳನ್ನು ಇವು ಸಮರ್ಥವಾಗಿ ನಿರೂಪಿಸಿವೆ.

ಸಾಹಿತ್ಯ ಚಿಂತನದ 'ಹೊಸಗನ್ನಡ ಕಾವ್ಯದ ಭಾಷೆ ಶೈಲಿ' 'ಕವಿಯ ಸರ್ವಸ್ವವನ್ನು ಕನ್ನಡಿಸುವುದು ಅವನ ಶೈಲಿ' ಎಂದು ಲಕ್ಷಣಿಸಿ, ಕೆಲಕವಿಗಳ ಶೈಲಿಯ ವೈಲಕ್ಷಣ್ಯಗಳನ್ನು

ಸೋದಾಹರಣ ಸೂಕ್ಷ್ಮಿಸಿದೆ. ನವೋದಯದ ಶ್ರೀಕಾರ, ಪೈಗಳ ಹಳಗನ್ನಡದ ಬಿಗಿ ಬರಹ, ಕವಿ ಸೆಳೆವ ಅಂತಃಪುರ ಗೀತ, ಶ್ರೀನಿವಾಸರ ಕಥನ, ಆಡುನುಡಿಯ ಬೇಂದ್ರೆಸಾರ, ಕುವೆಂಪುವಿನ ಮಹಾಛಂದ, ಪು.ತಿ.ನ.ರ ಗೀತಗುಣ, ಮಧುರಚೆನ್ನರ ಜಾನಪದ ಅನುಭಾವ ಸತ್ವ, ವಿ.ಸೀ. ಅಚ್ಚುಕಟ್ಟು, ವಿನಾಯಕರ ಪ್ರಯೋಗಪ್ರಿಯತೆ, ಮುಗಳಿಯವರ ಕೋಮಲತೆ, ಆನಂದಕಂದರ ತಿರುಳ್ಗನ್ನಡ, ರತ್ನನಪದ–ನಾಗನಪದಗಳ ವಸ್ತು–ಭಾಷಾ–ಶೈಲಿ, ಕರ್ಕಿಯವರ ತಿಳಿನೀರಗುಣ, ದಿನಕರರ ವಿಡಂಬನ ಇವೆಲ್ಲ ಇಲ್ಲಿವೆ. ಈ ಕಾವ್ಯ ಸಮುದಾಯದಲ್ಲಿ ಭಾವಗೀತ ಶಿಖರ ಪ್ರಾಯವಾಗಿದ್ದು, ಕನ್ನಡದ ಜೀವಾಳ ಕನ್ನಡಿಗರಿಗಾಗಿ ಕನ್ನಡಿಸಲ್ಪಟ್ಟಿದೆ.

‘ಕನ್ನಡ ಕಾವ್ಯದ ಹೊಸ ಬದುಕಿ’ನಲ್ಲಿ ಹಳಬರ ಶಾಸ್ತ್ರಪರಿಣತಿ, ಹೊಸಬರ ನೂತನ ದೃಷ್ಟಿಗಳ ಸಮನ್ವಯ ಸಾಧಿಸಿ ವಿಮರ್ಶೆ ಇಂದು ಮುಂಬರಿಯಬೇಕಿದೆ ಎಂದ ಲೇಖಕರು ಸ್ವತಃ ಹಾಗೆ ಮಾಡಿ ತೋರಿದ್ದಾರೆ. ಭಾವಗೀತೆ ೩ ದಶಕ ವೈವಿಧ್ಯಪೂರ್ಣವಾಗಿ ಬೆಳೆದು ಉತ್ತಮ ಕವಿಗಳಲ್ಲಿ ಮೇಲ್ಮೆ–ಸಿದ್ಧಿಗಳನ್ನು ಪಡೆದು ಇಳಿಮುಖವಾಯಿತು. ೫೦ ರಲ್ಲಿ ವಾಸ್ತವತೆ–ವೈಚಾರಿಕತೆಗಳ ನವ್ಯಕಾವ್ಯದ ಮಾರ್ಗದೋರಿದವರು ಗೋಕಾಕ್. ‘ಪರಂಪರೆಯ ಸಾರವನ್ನೊಳಗೊಂಡೇ ನವ್ಯಕಾವ್ಯ ಭವಿಷ್ಯದತ್ತ ಕೈಚಾಚಬಯಸುತ್ತದೆ’ ಎಂದು ಅಡಿಗರು ‘ನಡೆದುಬಂದ ದಾರಿ’ ಬಿಟ್ಟು ‘ಹಿಮಗಿರಿಯ ಕಂದರ’ಕ್ಕೆ ಸರಿದರು. ಇವೆರಡು ಕಾವ್ಯಮಾರ್ಗ ಸಮನ್ವಯಿಸುತ್ತ ‘ಓದುಗರ ತಿಳಿವಳಿಕೆ ಕವಿಗಳ ಕಲಾವಂತಿಕೆ ಒಂದು ಹದಕ್ಕೆ ಬಂದಾಗ ಎಲ್ಲ ಸರಿ ಹೋಗಬಹುದು. ಕೆಲವರು ಸಮನ್ವಯಗೊಳಿಸಲು ಹೊಸ ಪಾಕ ಸೃಷ್ಟಿಸುತ್ತಿದ್ದಾರೆ. ನವ್ಯರ ಶೈಲಿಯಲ್ಲಿ ಸಹಜ ಹದ ಕಂಡು ಬರುತ್ತಿದೆ. ಕಾಲಕ್ರಮೇಣ ಒಳ್ಳೆಯ ಕೃತಿ ಕೊಡಬಲ್ಲುದು ನವ್ಯಕಾವ್ಯ’ ಎಂದು ಕಣವಿ ಒಕ್ಕಣಿಸಿದ್ದು ೬೧ ರಲ್ಲಿ, ಬಳಿಕ ಈ ಹಿನ್ನೆಲೆಗೆ ೫೭–೬೧ರ ಮಧ್ಯೆ ಬಂದ ೩೦ಕ್ಕೂ ಮಿಕ್ಕ ಕೃತಿ ಪರಿಶೀಲನೆ ಇಲ್ಲಿದೆ. ಹಳೆ–ಹೊಸ ಕವಿ ಕೃತಿಗಳಲ್ಲಿ ಹೊಸ ಬದುಕು ಆವಿಷ್ಕಾರಗೊಳ್ಳುತ್ತಿರುವ ರೀತಿ, ಆಯಾ ಕವಿಯ ಗತಿ–ಪ್ರಗತಿಗಳನ್ನು ಸಮಾಲೋಕಿಸುವ ಈ ಭಾಗ ಒಂದು ಪೂರಕ ಪರಿಶೀಲನೆಯಾಗಿದೆ ಮೊದಲ ಲೇಖನಗಳಿಗೆ.

‘ಕಾವ್ಯಾನುಸಂಧಾನ’ದ ಕಡೆಯ ಲೇಖನ ಮಾತ್ರ ನವ್ಯದ ಸಮಾಲೋಚನೆಗೇ ಮೀಸಲಾಗಿದೆ, ‘ಹೊಸ ಕಾವ್ಯದ ಒಗರು-ಹೊಗರು’ ಇದರ ಒಗರು ಹೆಚ್ಚೆನಿಸಿದರೂ ತನ್ನತನದ ಹೊಗರು ಹೊಮ್ಮಿಸಿದ ಬಗೆದೋರಿದೆ. ಇಂದಿನ ಕವಿಗಳು ಸೌಂದರ್ಯಾದಿಗಳನ್ನು ವಿಭಜಿಸಿ ನೋಡುತ್ತಿದ್ದಾರೆ. ರತಿಯ ಶಕ್ತಿಯಿಂದ ಒದಗುವ ಉತ್ಸಾಹಕ್ಕೆ ಮಾರುಹೋದವರಲ್ಲಿ ಲೈಂಗಿಕ ಪ್ರಜ್ಞೆ ಗಾಢವಾಗಿದೆ. ಅನ್ಯಾಯ ವಿಡಂಬನೆಯ ಆಕ್ರೋಶ ಆಡಿದ್ದನ್ನೇ ಕಾವ್ಯವಾಗಿಸುವ ಛಲ ಇವರದು.’ ಹಿಂದಿನವರು ಒಡೆದು ಹೇಳಬಾರದೆಂದು ಬಚ್ಚಿಟ್ಟ ಗುಟ್ಟುಗಳನ್ನಿವರು ಸೇಡಿನಿಂದೆಂಬಂತೆ ದರೋಡೆ ಮಾಡಿದ್ದು ಮಾತ್ರ ಕಾವ್ಯಗಣಕ್ಕೆ ಧಕ್ಕೆಯನ್ನುಂಟುಮಾಡಿದೆ. ಈ ನೆಲದ ಮಣ್ಣಲ್ಲಿ ಸತ್ವವಿರುವುದರಿಂದ ಶ್ರದ್ಧಾಭ್ಯಾಸಿಗಳಿಗೆ ಹೊಸ ಕಾವ್ಯದ ಬೆಳವಣಿಗೆ ಮೆಚ್ಚುಗೆಯುಂಟು ಮಾಡದಿರದು. ಅರ್ಥೈಸಿ

ಕೊಳ್ಳುವ ಪ್ರವೃತ್ತಿಯಿಲ್ಲದೆ ತಿಳಿಯುವುದಿಲ್ಲೆಂದು ಕೈ ಜಾಡಿಸಿ ಕುಳಿತುಕೊಳ್ಳಬಾರದು. ಪರಿಶ್ರಮಕ್ಕೆ ತಕ್ಕಫಲ ಉಂಟು.

'ಕನ್ನಡ ಕಾವ್ಯದಲ್ಲಿ ನೂತನ ಪ್ರತಿಮೆ–ಸಂಕೇತಗಳು' ಕವಿ ಸಮಯ–ಪ್ರತಿಮಾ ತತ್ವಪ್ರಸ್ತಾಪಿಸಿ ಹಳತರಲ್ಲೂ ಹೊಸತಿನ ಆಕಾಂಕ್ಷೆ ಇರುವುದನ್ನೆತ್ತಿ ತೋರಿದೆ; ಬೇಂದ್ರೆಯ ಹಕ್ಕಿಯ ಪ್ರತಿಮೆ–ರಾಮಾಯಣ ದರ್ಶನದ ವೈಜ್ಞಾನಿಕ ಹೋಲಿಕೆ–ಕನಡಿ ಕೈಯಿನ ಇಗ್ರಾ ಅಲ್ಲಿ ಚೆರ್ಗೆ ಇಡ್ಕಂಡ ಮಲ್ಲಿ (ಇಲ್ಲಿ ಎಂಬ ನಾಗನ ಪದದ) ಇತ್ಯಾದ್ಯಂಶಗಳನ್ನುದಾಹರಿಸಿದೆ. ಇತ್ತೀಚಿನ ಕಾವ್ಯದಲ್ಲಿ ಬದಲಾದ ಜೀವನದ ನೂತನ ಪ್ರತಿಮೆ ಸಂಕೇತ ರೂಪುಗೊಳ್ಳುತ್ತಿವೆ. ಕವಿತೆ ಓದಿದಾಗ ನಮ್ಮ ಮನದಲ್ಲಿ ಮೂಡಿ ನಿಲ್ಲುವ ಚಿತ್ರವೇ ಪ್ರತಿಮೆ. ಎಲೆ ಇಲ್ಲದ ಮರದಲ್ಲಿ ಇಂದಿನ ನೀರಸ ನಾಗರಿಕತೆಯನ್ನು ಸಂಕೇತಿಸಿದ್ದಾರೆ ಗೋಕಾಕ್. ಇಂದಿನ ಲೋಕಾದ ಸ್ಥಿತಿ–ಕಾರಣ ಮೀಮಾಂಸೆಗಳನ್ನು ಬಿಚ್ಚಿದ ಗಡಿಯಾರದಿಂದ ಸಂಕೇತಿಸಿದ್ದಾರೆ ಅಡಿಗ, 'ಬರಿಗೊಡಗಳಿಗೆ ಸಮಾಧಾನ ಹೇಳುತ್ತಿದೆ ನೀರಿಲ್ಲದ ನಲ್ಲಿ' ಎಂಬಲ್ಲಿ ಪರೋಪದೇಶ ಪಾಂಡಿತ್ಯದ ಅಣಕವಾಡಿದ್ದಾರೆ ನರಸಿಂಹಸ್ವಾಮಿ. ಚಂದ್ರನನ್ನು ಬಂಗಾರದ ಮೆಡಲೆಂಬುದೂ ಹೊಸತು. ಹರಯದ ಉನ್ಮಾದವನ್ನು ಹಂಡಹೋರಿಯ ಪ್ರತಿಮೆಯಲ್ಲಿ ಹಿಡಿದು ನಿಲ್ಲಿಸಿದ್ದಾರೆ ಕಂಬಾರ. ಹೀಗೆ ಬದುಕಿನ ವಿವಿಧ ಮುಖಗಳನ್ನು ಅನುಭವ ಮೂಸೆಯಲ್ಲಿ ಕರಗಿಸಿ ಕವಿಗಳು ನೂತನ ಪ್ರತಿಮೆ–ಸಂಕೇತಗಳಿಂದ ತಮ್ಮ ಅಭಿವ್ಯಕ್ತಿಯ ವೈಶಿಷ್ಟ್ಯ ಕಂಡುಕೊಳ್ಳುತ್ತಿದ್ದಾರೆ. ಕಾವ್ಯಮಾರ್ಗ ಬದಲಾದಾಗಲೂ ಕನ್ನಡ ಕಾವ್ಯದಲ್ಲಿ ಕಂಡುಬರುವ ವೈಶಿಷ್ಟ್ಯ–ವ್ಯತ್ಯಾಸ ಅದರ ಜೀವಂತಿಕೆಗೆ ಸಾಕ್ಷಿ.

ಸಮಾಹಿತದ ಕಡೆಗೆ ಜೋಡಿಸಿದ 'ಇತ್ತೀಚಿನ ಕಾವ್ಯಪರಿಚಯ' ೪–೫ ಸಂಗ್ರಹಗಳಿಗೆ ಬರೆದ ಮುನ್ನುಡಿಗಳಿಂದ ಕೂಡಿದೆ. 'ಔರಂಗಜೇಬ ಇತರ ಕವನಗಳ' ಸಿದ್ಧಲಿಂಗ ಪಟ್ಟಣಶೆಟ್ಟಿ, 'ಶಬ್ದ–ರಕ್ತ–ಮಾಂಸ'ಗಳ ಹಿಂಗಮೀರೆ, 'ನಾಲ್ಕುಹಿಡಿ ಬೆಂಕಿ'ಯ ದೇಶಪಾಡೆ ಸಂಬ್ಬರಾಯ, 'ಒಂದು ಗಳಿಗೆ'ಯ ಶೈಲಜಾ ಉಡಚಣ, 'ಚಿಗಳಿ'ಯ ಸಿದ್ಧಲಿಂಗ ದೇಸಾಯಿ— ಈ ಹೊಸ ಪೀಳಿಗೆಯ ಕವಿಗಳಿಲ್ಲಿ ಸಮಾಹಿತ–ಪ್ರೋತ್ಸಾಹಿತರಾಗಿದ್ದಾರೆ, ಮಾರ್ಗದರ್ಶಿತರೂ ಆಗಿದ್ದಾರೆ.

ಇಲ್ಲೆಲ್ಲ 'ಸಾಹಿತ್ಯದ ಸವಿಯನ್ನು ಆಸ್ವಾದಿಸಿ, ಪರಿಶೀಲನೆಗೆಯ್ದು ಮೌಲ್ಯಮಾಪನಕ್ಕೆ ತೊಡಗುವ ಸಮಂಜಸ ಹಾದಿಯಲ್ಲಿ ಕಣವಿ ಸಾಗಿದ್ದಾರೆ. ಕವಿಯ ವ್ಯಕ್ತಿತ್ವದ ತಿರುಳನ್ನು ಕಾವ್ಯದ ಜೀವಾಳವನ್ನು ತಾವು ಸರಿಯಾಗಿ ಗುರುತಿಸಿಕೊಂಡು ಅವನ್ನು ಇತರರಿಗೆ ತಿಳಿಸಿಕೊಡುವಲ್ಲಿ ಅವರು ಸಫಲತೆಯನ್ನು ಪಡೆದಿದ್ದಾರೆ. ವಿಮರ್ಶಾ ಶಾಸ್ತ್ರದ ಪರಿಚಯ, ರಸಾನುಭವದೃಷ್ಟಿ ಇವೆರಡೂ ಮೇಳವಿಸಿರುವ ಕಣವಿಯಂಥವರ ವಿಮರ್ಶೆಗೆ ಮೊನೆಯುಂಟಾಗಿದೆ. ನಯದೊಂದಿಗೆ ಸ್ಪಷ್ಟೋಕ್ತಿಯನ್ನು ರೂಢಿಸಿಕೊಂಡುದರ ಫಲವಾಗಿ ಹೊರಹೊಮ್ಮಿದ ಇಲ್ಲಿಯ ವಿಮರ್ಶೆ ಸತ್ವಯುತವಾಗಿದೆ. ಹಿರಿಯ ತಲೆಮಾರಿನ ಕವಿಗಳ ಕಾವ್ಯಸೃಷ್ಟಿಯ ಕೆಲವು ಲೋಪದೋಷಗಳನ್ನು ನಿಷ್ಠುರ

ವಲ್ಲದ ಆದರೆ ನಿರ್ಧಾರದ ರೀತಿಯಲ್ಲಿ ನಿರೂಪಿಸಿದ್ದಾರೆ ಕಣವಿ. ಇಲ್ಲಿ ಕಲಿ ಕಪ್ಪು ಎಲ್ಲಿನೂ ಇಲ್ಲವೆಂದಲ್ಲ. ಆದರೆ ನುಣುಪು ಬಹ್ವಂಶದಲ್ಲಿ ಒಡಮೂಡಿದೆ. ವಿವೇಚನೆಯಲ್ಲಿ ಒಮ್ಮೊಮ್ಮೆ ಇನ್ನಿಷ್ಟು ವಿವರ, ವ್ಯವಸ್ಥಿತ–ಪರಿಸ್ಫುಟ ಬಗೆ ಬೇಕೆನಿಸುತ್ತದೆ. ಬೇರೆ ಬೇರೆ ಕಾಲಕ್ಕೆ ಬರೆದ ಲೇಖನಗಳಲ್ಲಿ ಅಭಿಪ್ರಾಯದ ಪುನರುಕ್ತಿ ತಲೆದೋರುತ್ತಿದೆ. ಕೆಲವು ಸಲ ಪ್ರಾಸಪ್ರಿಯತೆ ಅನವಶ್ಯಕವಾಗಿಯೋ ವಿನೋದಕ್ಕಾಗಿಯೋ ಬರುತ್ತಿದೆ. ರೋಮ್ಯಾಂಟಿಕ್–ನವ್ಯ ಸಂಪ್ರದಾಯಗಳ ಸೇತುವೆಯಾದ ಇವರು ಎರಡೂ ಸಂಪ್ರದಾಯಗಳ ಹಿನ್ನೆಲೆ–ಸಾರ್ಥಕತೆ ಲೋಪಗಳನ್ನು ಸ್ಫುಟವಾಗಿ ನಿರೂಪಿಸಿದ್ದಾರೆ. ಒಂದರ ಜೀವನಾನುಭವ ವ್ಯಾಸಂಗಬಲ, ಇನ್ನೊಂದರ ಪ್ರಯೋಗ ಪ್ರಿಯತೆಯ ಉತ್ಸಾಹಗಳ ಸಮನ್ವಯದಿಂದ ನಮ್ಮ ಕಾವ್ಯ ಮುಂದೆ ಸಾಗಬೇಕೆಂಬುದನ್ನು ಕಣವಿ ಅರಿತುಕೊಂಡಿದ್ದಾರೆ. ಹೊಸಗನ್ನಡ ಕಾವ್ಯದ ಭಾವ, ಭಾಷೆ, ಛಂದಸ್ಸಿನ ಸಂಗತಿಗಳನ್ನು ಸಮರ್ಪಕವಾಗಿ ಅರಿತುಕೊಳ್ಳಲು ಸಹಕಾರಿಯಾಗಿದೆ ಇವರ ವಿಮರ್ಶೆ' (ಮಾಳವಾಡ).

ಕಣವಿಯವರೇ 'ಕಾವ್ಯಾನುಸಂಧಾನ'ದಲ್ಲಿ ಅರಿಕೆ ಮಾಡಿಕೊಂಡಂತೆ ಅವರ 'ಅಭ್ಯಾಸ-ಅನ್ವೇಷಣೆ, ಪರೀಕ್ಷೆ-ಪರಿಭಾವನೆ, ಪರಸ್ಪರ ಸೇರುವೆ-ಸಂಬಂಧಗಳನ್ನೊಳಗೊಂಡ ಈ ಬಿಡಿಲೇಖನಗಳಲ್ಲಿ ಒಂದು ಇಡಿಯಾದ ಕಾವ್ಯಶ್ರದ್ಧೆಯನ್ನು ಕಾಣಬಹುದು,' ಸಮಾಹಿತ ಅರುಹಿದಂತೆ ಒಂದು ವೈಚಾರಿಕ ನೆಲೆಯಲ್ಲಿ ಸಾಹಿತ್ಯದ ಬಗೆಗಿನ ಅವರ ನಿಲುವನ್ನು ಒದಗಿಸಿದೆ.

"ಅವರದು ಪ್ರಾಚೀನ, ಅರ್ವಾಚೀನ ಕಾವ್ಯಮೀಮಾಂಸೆಗಳಿಂದ ಸಂಸ್ಕಾರಗೊಂಡ ಮನೋಧರ್ಮ, ವಿಭಿನ್ನ ಸಂಪ್ರದಾಯಗಳನ್ನು ಅರಗಿಸಿಕೊಂಡ ಕರಗಿಸಿಕೊಂಡ ಸಮನ್ವಯ ದೃಷ್ಟಿ. ಅವರ ಕಾವ್ಯದಲ್ಲಿ ವ್ಯಕ್ತವಾಗುವ ಈ ಸಮನ್ವಯ ಸಮತೋಲಗಳೇ ಅವರ ವಿಮರ್ಶೆಯಲ್ಲಿಯೂ ಮೂಡಿರುವುದರಿಂದ ಅದಕ್ಕೊಂದು ಮಹತ್ವವುಂಟಾಗಿದೆ."

ಕಣವಿಯವರ ವಿಮರ್ಶಾಕೃಷಿ ಅವರ ವ್ಯಾಸಂಗ– ಚಿಂತನ– ಸಮದೃಷ್ಟಿಗಳಿಗೆ ಕನ್ನಡಿ ಹಿಡಿದಿದೆ. ಈಗವರು ಕವಿ ಮಾತ್ರವಲ್ಲ, ಸಹೃದಯ ವಿಮರ್ಶಕಪದವಿಗೂ ಏರಿದ್ದಾರೆ. ಇದವರ ವಿಶೇಷ, ನಮ್ಮ ಸಂತೋಷ.

ಬಸವರಾಜ ಮಲಶೆಟ್ಟಿ

# ಜನಪದ ಸಾಹಿತ್ಯವನ್ನು ಕುರಿತು

## ಕಣವಿಯವರ ವಿಚಾರ—ವಿಮರ್ಶೆ

ಕವಿ ಕಣವಿಯವರು "ಗದ್ಯದಲ್ಲಿ ನನ್ನದು ಆಮೆಯಗತಿ.........ಸಾಹಿತ್ಯ ವಿಮರ್ಶೆಯಲ್ಲಿ ನನಗಿರುವ ಸಹಜವಾದ ಒಲವು ಆಗೀಗ ಒಂದೆರಡು ಲೇಖನಗಳನ್ನು ಬರೆಯುವಂತೆ ಪ್ರಚೋದಿಸಿದೆ"[1] ಎಂದು ಹೇಳಿಕೊಂಡಿದ್ದಾರೆ. ಈ ಮಾತು ಕಣವಿಯವರು ಗದ್ಯದ ಬರವಣಿಗೆಯಲ್ಲಿ ವಹಿಸಿದ ಸಂಯಮವನ್ನು ಸ್ಪಷ್ಟಗೊಳಿಸುತ್ತದೆ. ಮೂಲತಃ ಕವಿ ಸ್ವಭಾವದ ಕಣವಿಯವರ ದೃಷ್ಟಿಯಲ್ಲಿ ಗದ್ಯ ಬರಹಕೂಡ ಕಾವ್ಯ ರಚನೆಯಂತೆಯೇ ಸ್ಫೂರ್ತಿ, ಚಿಂತನೆ, ಸಂಯಮಗಳನ್ನು ಅಪೇಕ್ಷಿಸುವುದರಿಂದ ಅವರಿಗೆ ಗದ್ಯ ಅಷ್ಟೊಂದು 'ಸರಳ'ವೆನಿಸಿಲ್ಲ. ಆದ್ದರಿಂದಲೇ "ಗದ್ಯಬರೆಯುವಾಗ ನನ್ನ ಮನಸ್ಸು ಪದ್ಯ ಬರೆಯುವಾಗಿನಕಿಂತ ಹೆಚ್ಚು ಜಾಗ್ರತಗೊಂಡಿರುತ್ತದೆ"[2] ಎಂದಿದ್ದಾರೆ. ಅವರ ಈ ಮಾತು ಬಹಳಷ್ಟು ಜನರಿಗೆ ಅಚ್ಚರಿಯನ್ನುಂಟುಮಾಡಬಹುದು. ಇದು ಅಳುಕಿನ ಮಾತಲ್ಲ. ಜವಾಬ್ದಾರಿಯ ಮಾತು, ಬಹುಶಃ ಕಣವಿಯವರಂಥವರನ್ನು ಕಂಡೇ "ಗದ್ಯಂ ಕವೀನಾಂ ನಿಕಷಂ ವದಂತಿ" ಎಂಬ ಮಾತು ಪ್ರಚಾರಕ್ಕೆ ಬಂದಿರಬಹುದು, ಆದರೆ ನಿಕಷಕ್ಕೊಡ್ಡಿದ ಕಣವಿಯವರ ಗದ್ಯಸಾಹಿತ್ಯ ಪರೀಕ್ಷೆಯಲ್ಲಿ ಯಶಸ್ಸು ಪಡೆದಿದೆ. ಅದು ಮಿತವಾಗಿರುವಂತೆಯೇ ಹಿತವೂ ಆಗಿದೆ.

ಕಣವಿಯವರ ಜನಪದ ಸಾಹಿತ್ಯ ಸಂಬಂಧದ (ಲೇಖನಗಳ) ಸಮೀಕ್ಷೆ ಈ ಉದ್ದೇಶ. ಮೊದಲಿನಿಂದಲೂ ಅವರು ಜನಪದ ಸಾಹಿತ್ಯದೊಂದಿಗೆ ಆತ್ಮೀಯವಾದ ನಿಕಟವಾದ ಸಂಬಂಧ ಹೊಂದಿದವರು, ತಮ್ಮ ಕವಿಜೀವ ರೂಹು ಪಡೆದ ಬಗೆಯನ್ನು ಹೇಳುತ್ತ "ಕವಿತೆಗಳನ್ನು ಓದಿದಾಗ, ಜಾನಪದ ಹಾಡುಗಳನ್ನು ಕೇಳಿದಾಗ, ಸುತ್ತಣ ಪ್ರಕೃತಿಯನ್ನು ಕಂಡಾಗ ಯಾವುದೋ ಒಂದು ಭಾವ ಮನಸ್ಸಿನಲ್ಲಿ ಜಾಗೃತಗೊಳ್ಳುತ್ತಿತ್ತು"[3] ಎಂದಿದ್ದಾರೆ. ಕವಿಚೇತನವನ್ನು ಜಾಗೃತಿಗೊಳಿಸುವಲ್ಲಿ ಮಹತ್ವದ ಪಾತ್ರವಹಿಸಿದ ಜನಪದ ಹಾಡುಗಳ ಬಗ್ಗೆ ಅವರಿಗಿರುವದು ಒರೀ ಪರಿಚಯವಲ್ಲ. ಆಳವಾದ ಪ್ರೀತಿ. ಆದ್ದರಿಂದಲೇ ಆ ಸಾಹಿತ್ಯದ ಬಗ್ಗೆ—ವಿಶೇಷವಾಗಿ ಗೀತ ಸಾಹಿತ್ಯವನ್ನು ಕುರಿತು ಆಸಕ್ತಿ

೧ ಸಾಹಿತ್ಯ ಚಿಂತನ-ಅರಿಕೆ

೨ ಸಾಹಿತ್ಯ ಚಿಂತನ-ನನ್ನ ನಾ ಕಂಡಂತೆ-ಪು. ೧೫೧.

೩ ಸಾಹಿತ್ಯ ಚಿಂತನ-ನನ್ನ ನಾ ಕಂಡಂತೆ-ಪು. ೧೫೨

ತಾಳಿದ್ದಾರೆ. ಜಾನಪದದ ಬಗ್ಗೆ ಬರೆಯುವದು, ಭಾಷಣಮಾಡುವದು ಕೆಲವರ ಖಾಸಾ ದಂಧೆಯಾಗಿರುವ ಇಂದಿನ ಸಂದರ್ಭದಲ್ಲಿ "ಜಾನಪದ ಸಾಹಿತ್ಯದ ಬಗ್ಗೆ ವಿಶೇಷ ಆಸಕ್ತಿ ತಾಳಿರುವ ಜಾನಪದದ ಹೊರಗಿನವರಲ್ಲಿ ಕಣವಿಯವರು ಗಣ್ಯರು" [4] ಹಾ.ಮಾ. ನಾಯಕರ ಈ ಮಾತು ಗಮನಾರ್ಹವಾಗಿದೆ.

ಕಣವಿಯವರು ಜನಪದ ಸಾಹಿತ್ಯವನ್ನು ಕುರಿತು ಒಟ್ಟು ಐದು ಲೇಖನಗಳನ್ನು ಬರೆದಿದ್ದಾರೆ. 'ಸಾಹಿತ್ಯ ಚಿಂತನ'ದಲ್ಲಿ ಪ್ರಕಟವಾದ "ಸ್ವಾತಂತ್ರ್ಯ ಪೂರ್ವದ ಕನ್ನಡ ಜನಪದ ಸಾಹಿತ್ಯ" (೧೯೬೩) ಎಂಬ ಪ್ರಥಮ ಲೇಖನ ನಮ್ಮ ಜನಪದ ಸಾಹಿತ್ಯದ ಸಂಗ್ರಹ, ಪ್ರಕಟಣೆಗಳ ಪ್ರಾರಂಭದ ಹೆಜ್ಜೆಗಳನ್ನು ಗುರುತಿಸಲು ಮಾಡಿದ ಒಂದು ಪ್ರಾಮಾಣಿಕ ಪ್ರಯತ್ನವೆನ್ನಬಹುದು. ಜನಪದ ಸಾಹಿತ್ಯದ ಮಹತ್ವ, ರೂಪ ಲಕ್ಷಣಗಳನ್ನು ಸಂಕ್ಷಿಪ್ತವಾಗಿ ಹೇಳಿ ಅದಕ್ಕಾಗಿ ದುಡಿದವರ ಬಗ್ಗೆ ವಿವರವಾಗಿ ಬರೆದಿದ್ದಾರೆ. ಮೊದಮೊದಲಿಗೆ ಜನಪದ ಸಾಹಿತ್ಯದ ವ್ಯಾಪ್ತಿ ಬರಿ ಜನಪದ ಗೀತೆಗಳಿಗೆ ಸೀಮಿತವಾಗಿತ್ತು. ಆಗಿನ ಸಂಗ್ರಾಹಕರು ಪದ್ಯ ಸಾಹಿತ್ಯದತ್ತ ಗಮನ ಹರಿಸಿದಷ್ಟು ಇನ್ನುಳಿದ ಪ್ರಕಾರಗಳಿಗೆ ಲಕ್ಷ್ಯಕೊಡಲಿಲ್ಲವೆಂಬುದು ಈ ಲೇಖನದಿಂದ ಸ್ಪಷ್ಟವಾಗುತ್ತದೆ.

ಕನ್ನಡ ಜನಪದ ಸಾಹಿತ್ಯದ ಸಂಗ್ರಹಣೆಗೆ ಗಟ್ಟಿ ತಳಪಾಯ ಹಾಕಿದವರು ಹಲಸಂಗಿ ಸೋದರರರೆಂಬುದು ಕಣವಿಯವರ ಖಚಿತ ಅಭಿಪ್ರಾಯವಾಗಿದೆ. 'ಗರತಿಯ ಹಾಡು 'ಮಲ್ಲಿಗೆ ದಂಡೆ' 'ಜೀವನ ಸಂಗೀತ' ಈ ಮೂರು ಸಂಕಲನಗಳ ಬಗ್ಗೆ ಅವುಗಳಲ್ಲಿ ಹೆಪ್ಪು' ಗಟ್ಟಿರುವ ಕಾವ್ಯಾಂಶದ ಬಗ್ಗೆ ಉದಾಹರಣೆಗಳೊಂದಿಗೆ ಉತ್ಸಾಹದಿಂದ ಬರೆದಿದ್ದಾರೆ. "ಸ್ವಾಂತಂತ್ರ್ಯ ಪೂರ್ವದಲ್ಲಿ ಪ್ರಕಟವಾದ ಜನಪದ ಸಾಹಿತ್ಯ ಸಂಗ್ರಹಗಳಲ್ಲಿ 'ಗರತಿಯ ಹಾಡು' 'ಜೀವನ ಸಂಗೀತ' 'ಮಲ್ಲಿಗೆ ದಂಡೆ' ಮತ್ತು 'ನಾಡಪದಗಳು' (ಇದು ಎಲ್. ಗುಂಡಪ್ಪ, ಮತಿಘಟ್ಟ ಕೃಷ್ಣಮೂರ್ತಿ ಅವರ ಸಂಗ್ರಹ) ಇವು ಅತ್ಯಂತ ಗಮನಾರ್ಹವಾದವುಗಳು. ರಸವಂತಿಕೆಯಲ್ಲಿ ಅವಿನ್ನೂ ಹೊಚ್ಚ ಹೊಸತಾಗಿಯೇ ಇವೆ." [5] ಕಣವಿಯವರ ಈ ಮಾತಿಗೆ ಪ್ರತ್ಯುತ್ತರವಿಲ್ಲ. 'ನಾಡಪದಗಳು' ಸಂಗ್ರಹವನ್ನು ಸವಿವರವಾಗಿ ಪರಿಚಯಿಸಿದ್ದಾರೆ. ಮೈಸೂರು ಪ್ರಾಂತದ ಪ್ರಾತಿನಿಧಿಕ ಸಂಗ್ರಹವಾದ ಇದನ್ನು ಉತ್ತರ ಕರ್ನಾಟಕದ ಪ್ರಾತಿನಿಧಿಕ ಸಂಗ್ರಹಗಳಾದ ಹಲಸಂಗಿ ಸೋದರರ ಮೇಲೆ ಹೇಳಿದ ಸಂಗ್ರಹಗಳೊಡನೆ ತುಲನಾತ್ಮಕವಾಗಿ ಅಭ್ಯಸಿಸಿದ ಕಣವಿಯವರು "ನಿರ್ವಿಕಾರ ಭಾವನೆಯಿಂದ ಪರೀಕ್ಷಿಸಿದಾಗ ತಿರುಳ್ಗನ್ನಡದ ದೇಸಿಯ ವೈಭವ ವಿಲಾಸಗಳು ಉತ್ತರ ಕರ್ನಾಟಕದ ಜಾನಪದ ಗೀತೆಗಳಲ್ಲಿ ಹೆಚ್ಚಾಗಿ ಒಡಮೂಡಿವೆ ಎಂದರೆ ತಪ್ಪಾಗದು" [6] ಎಂದು ಹೇಳಿದು ನಿರ್ಣಯಕವಾಗಿದೆ.

---

೪ ಗ್ರಂಥಲೋಕ-ಏಪ್ರಿಲ್ ೧೯೭೮-ಪು. ೮

೫ ಸಾಹಿತ್ಯ ಚಿಂತನ-ಪು. ೫೩

೬ ಸಾಹಿತ್ಯ ಚಿಂತನ-ಪು. ೫೮

ಲೇಖನ ಅವಸರದಲ್ಲಿ ಮುಗಿದಂತಾಗಿದೆ. ಕೆಲವು ಸಂಗ್ರಹಗಳ ಬಗ್ಗೆ ಆಸಕ್ತಿಯಿಂದ ಬರೆದ ಲೇಖಕರು ಕೊನೆಗೆ ಒಂದೇ ಪ್ಯಾರಾದಲ್ಲಿ ಗದ್ಗೀಮಠ, ಕರಾಕೃ, ಜೀಶಂಪ, ಮಾಗಿ ಭಾವೆಪ್ಪ ಇವರನ್ನೆಲ್ಲ ಹೆಸರಿಸಿ ಮುಗಿಸಿ ಬಿಡುವದಕ್ಕಿಂತ ಇನ್ನಷ್ಟು ವಿವರವಾಗಿ ಬರೆದಿದ್ದರೆ ಚೆನ್ನಾಗಿರುತ್ತಿತ್ತು. ಒಟ್ಟಾರೆ ಈ ಲೇಖನ ಒಬ್ಬ ಸಹೃದಯನ ರಸವಿಮರ್ಶೆಯಾಗಿದೆಯೇ ಹೊರತು ಸಂಶೋಧಕನ ಬರಹವಾಗಿಲ್ಲ. ಈ ಲೇಖನದ ವಸ್ತುವನ್ನು ಸಂಶೋಧಕ ದೃಷ್ಟಿಯಿಂದ ಪರಿಭಾವಿಸಿದ್ದರೆ ಐತಿಹಾಸಿಕ ಮಹತ್ವಪಡೆದ ಇನ್ನೂ ಅನೇಕ ಸಂಗತಿಗಳು ಸೇರ್ಪಡೆಯಾಗುತ್ತಿದ್ದವು. ಕನ್ನಡ ಜನಪದ ಗೀತೆಗಳ ಪ್ರಥಮ ಸಂಗ್ರಾಹಕ ಫ್ಲೀಟರ ಉಲ್ಲೇಖ ಇಲ್ಲಿಲ್ಲದ್ದು ಬಂದು ಕೊರತೆಯಲ್ಲವೆ. ಮಠಾಸ್ತಿಯವರ 'ಕನ್ನಡ ಲಾವಣಿ ಸಾಹಿತ್ಯ' (೧೯೧೯), ಗೊರೂರು ರಾಮಸ್ವಾಮಿ ಅಯ್ಯಂಗಾರರ 'ಹಳ್ಳಿಯ ಹಾಡುಗಳು' (೧೯೩೮), ಅರ್ಚಕ ವೆಂಕಟಸ್ವಾಮಿಯವರ 'ಹುಟ್ಟಿದಹಳ್ಳಿ' (೧೯೩೩) ಮುಂತಾದ ಮಹತ್ವದ ಲೇಖನ, ಸಂಗ್ರಹಗಳ ಪ್ರಸ್ತಾಪಕ್ಕೆ ತಪ್ಪಿ ಹೋಗಿದೆ.

'ಕಾವ್ಯಾನುಸಂಧಾನ''ದಲ್ಲಿ (೧೯೭೧) ಬಂದಿರುವ 'ಜನಪದ ಕಾವ್ಯದಲ್ಲಿ ಪ್ರತಿಮಾ ವಿಧಾನ' ಎಂಬ ಲೇಖನ ಕಣವಿಯವರು ಜನಪದ ಗೀತೆಗಳನ್ನು ಕಾಣುವ ರಸೈಕ ದೃಷ್ಟಿಗೆ ಸಾಕ್ಷಿಯಾಗಿದೆ. ಸುಮಾರು ಮೂವತ್ತು ಪುಟಗಳ ಈ ದೀರ್ಘ ಲೇಖನವನ್ನು ಓದುವುದೇ ಒಂದು ರಸಾನುಭವ. ಆರಂಭದಲ್ಲಿ ಜನಪದ ಸಾಹಿತ್ಯದ ಸ್ವರೂಪ ಲಕ್ಷಣಗಳನ್ನು ಸರಳವಾಗಿ ವಿವರಿಸಿದ ಮೇಲೆ ''ಇಂದಿನ ವೈಜ್ಞಾನಿಕ ಯುಗದಲ್ಲಿ ರೇಡಿಯೋ ಮುಂತಾದ ಸಲಕರಣೆಗಳು ಹಳ್ಳಿಗಳಲ್ಲಿಯೂ ಹರಡಿರುವಾಗ, ಹಿಟ್ಟಿನ ಗಿರಣಿಗಳು, ಟ್ರ್ಯಾಕ್ಟರುಗಳು, ನೀರೆತ್ತುವ ಪಂಪುಗಳು ಅಲ್ಲಿಯ ಹೊಲ ಮನೆಗಳಲ್ಲಿ ಆಳಿಕೆ ನಡೆಸಿರುವಾಗ ಜನಪದ ಸಾಹಿತ್ಯ ಬೆಳೆಯುವ ಲಕ್ಷಣ ವಿರಲಿ ಉಳಿಯುವ ಲಕ್ಷಣಗಳೂ ಕಂಡು ಬರುತ್ತಿಲ್ಲ.[7] ಎಂದಿದ್ದಾರೆ ಕಣವಿಯವರ ಈ ಆತಂಕ ಎಲ್ಲ ಜಾನಪದ ಪ್ರೇಮಿಗಳಿಗೂ ಚುರುಕು ಮುಟ್ಟಿಸುವಂಥದು.

'ಪ್ರತಿಮೆ' ಶಬ್ದದ ಬಗ್ಗೆ ಚರ್ಚಿಸುತ್ತ ''ಕವಿಯ ಭಾವಾಭಿವ್ಯಕ್ತಿ ನಿರ್ದಿಷ್ಟವಾದ ಶಬ್ದ ಚಿತ್ರಗಳನ್ನು ಪಡೆದಾಗ ಇಲ್ಲವೆ ಕಡೆದಾಗ ನಾವು ಅದಕ್ಕೆ ಕಾವ್ಯ ಪ್ರತಿಮೆ. Poetic Image ಎಂದು ಸಾಮಾನ್ಯವಾಗಿ ಕರೆಯಬಹುದು.''[8] ಎಂದು ಸರಳವಾದ ವ್ಯಾಖ್ಯೆ ನೀಡಿದ್ದಾರೆ. ನಮ್ಮ ಸಾಹಿತ್ಯದಲ್ಲಿ ಇತ್ತೀಚೆಗೆ ಬಳಕೆಯಾಗುತ್ತಿರುವ ಈ 'ಪ್ರತಿಮೆ' ಇಂಗ್ಲೀಷಿನ Image ದಿಂದ ಬಂದುದು ನಿಜ. ಈ ಮಾತನ್ನು ಕಣವಿಯವರು ಒಪ್ಪಿದರೂ ಅಷ್ಟಕ್ಕೆ ನಿಲ್ಲದೆ ಭಾರತೀಯ ಪರಂಪರೆಯಲ್ಲಿ ಇದರ ಸುಳಿಹನ್ನು ಕಾಣಲು ಪ್ರಯತ್ನಿಸಿದ್ದಾರೆ. ''ಪ್ರಾಚೀನ ಭಾರತೀಯ ಕಾವ್ಯಮೀಮಾಂಸೆಯಲ್ಲಿ ನಿರೂಪಿಸಿದ

---

೭ ಕಾವ್ಯಾನುಸಂಧಾನ-ಪು ೬೭

೮ ,, - ಪುಟ ೬೯

ಕೆಲವು ಅಲಂಕಾರಗಳಲ್ಲಿ ಪ್ರತಿಮಾ ವಿಧಾನದ ಛಾಯೆಯನ್ನು ಕಾಣಬಹುದು"[9] ಎಂದು ಹೇಳುತ್ತಾರೆ. ಬೇರೆ ಬೇರೆ ಕಾವ್ಯಾಲಂಕಾರಗಳಲ್ಲಿ ಪ್ರತಿಮೆಯ ಬೀಜರೂಪ ಅಡಗಿರುವುದನ್ನು ಗುರುತಿಸಿ "ಪ್ರತಿಮಾಸೃಷ್ಟಿಗೆ ರೂಪಕ ಪ್ರಥಮಸೋಪಾನ. ಆದುದರಿಂದ ಒಂದು ದೃಷ್ಟಿಯಲ್ಲಿ ಪ್ರತಿಮೆ ರೂಪಕ ಪ್ರಾಕಾರದ ಗೋಪುರವೆಂದೇ ಹೇಳಬಹುದು"[10] ಎಂದಿದ್ದಾರೆ ತಮ್ಮ ಅಭಿಪ್ರಾಯದ ಸಮರ್ಥನೆಗೆ ಕುವೆಂಪು, ತೀನಂಶ್ರೀ. ಮುಂತಾದವರ ಹೇಳಿಕೆಗಳನ್ನು ಉದಾರವಾಗಿ ಬಳಸಿಕೊಂಡಿದ್ದಾರೆ.

ಲೇಖನದ ಮುಂದಿನ ಭಾಗವೆಲ್ಲ ತಲೆಗೆ ಭಾರವಾಗದೆ ಹೃದಯ ತುಂಬಿಸುವ ರಸ ಘಟ್ಟ. ಜನಪದ ಗೀತಸಾಹಿತ್ಯದಲ್ಲಿ ಚಿತ್ರಿತವಾಗಿರುವ ಅಸಂಖ್ಯಾತ ಪ್ರತಿಮೆಗಳ ಸ್ವರೂಪ ದರ್ಶನ ಮಾಡಿಸಿದ್ದಾರೆ. ಬೆಳಗು, ಬೆಳದಿಂಗಳು, ರವಿ, ಚಂದ್ರ, ಮಳೆದೇವರು, ಪ್ರಣಯ ಕುಟುಂಬ—ಈ ವಿಸ್ತಾರ ಜಗತ್ತಿನ ಪ್ರತಿಮೆಗಳನ್ನು ಒಂದೊಂದಾಗಿ ನಿಲ್ಲಿಸಿ ಉತ್ಸಾಹ ಸಹನೆಗಳಿಂದ ಅವುಗಳ ಸೌಂದರ್ಯವನ್ನು ವಿವರಿಸುತ್ತ ಹೋಗಿದ್ದಾರೆ. ಈ ವಿವರಣೆಗಳ ಒಟ್ಟು ಪರಿಣಾಮ ಓದುಗರನ್ನು ಜನಪದ ಕಾವ್ಯದ ರಸಪ್ರಪಂಚದಲ್ಲಿ ತಂದು ನಿಲ್ಲಿಸುತ್ತದೆ "ಅನುಭವದ ಆಳ, ರಸಾನುಭೂತಿಯ ಗಾಢತೆ, ಭಾವದ ತಲ್ಲೀನತೆ, ಸಮುಚಿತವಾದ ಭಾಷೆ. ವ್ಯಂಜಕ ಶಕ್ತಿ, ಸ್ವತಂತ್ರವಾದ ವ್ಯಕ್ತಿತ್ವ ಇವುಗಳ ಸಾಮರಸ್ಯದಿಂದ ಉತ್ತಮ ಕಾವ್ಯ ರೂಪುಗೊಳ್ಳುತ್ತದೆ. ಜನಪದ ಗೀತಗಳಲ್ಲಿ ಇದಕ್ಕೆ ಹಲವಾರು ನಿದರ್ಶನಗಳು ನಮಗೆ ದೊರೆಯುತ್ತವೆ......[11] ಎಂಬುದನ್ನು ಈ ಲೇಖನದ ಮೂಲಕ ಕಣವಿಯವರು ಸಿದ್ಧಮಾಡಿದ್ದಾರೆ.

ಇತ್ತೀಚಿನ ಲೇಖನ ಸಂಗ್ರಹ 'ಸಮಾಹಿತ'ದಲ್ಲಿ (ನವಂಬರ್ ೧೯೭೭) ಜನಪದ ಸಾಹಿತ್ಯಾಭ್ಯಾಸಕ್ಕೆ ಸಂಬಂಧಿಸಿದಂತೆ ಮೂರು ಉಪಯುಕ್ತ ಲೇಖನಗಳಿಗೆ. "ಜನಪದ ಸಾಹಿತ್ಯದ ಕಾವ್ಯ ಭಾಷೆ" ಎಂಬ ಮೊದಲನೆಯ ಲೇಖನದಲ್ಲಿ ಕಣವಿಯವರು ಭಾಷೆಗೂ ಕಾವ್ಯಕ್ಕೂ ಇರುವ ನಿಕಟಸಂಬಂಧವನ್ನು ಶಾಸ್ತ್ರೀಯವಾಗಿ ವಿವೇಚಿಸಿದ್ದಾರೆ, "ಭಾಷೆಯಲ್ಲಿಯೇ ಹಲವಾರು ಕಾವ್ಯಾಂಶಗಳು ಹುದುಗಿಕೊಂಡಿದ್ದು ಈ ಅಂಶಗಳು ಕವಿಯ ಮಾತಿನ ಪ್ರಯೋಗದಲ್ಲಿ ಸ್ಫುಟಗೊಳ್ಳುವುದು ಸಹಜವಾಗಿದೆ"[12] ಎಂಬ ತಮ್ಮ ಅಭಿಪ್ರಾಯವನ್ನು ಹಲವಾರು ಭಾಷಾವಿಜ್ಞಾನಿಗಳ ಹೇಳಿಕೆಗಳಿಂದ ಸಮರ್ಥಿಸಿಕೊಂಡಿದ್ದಾರೆ. ಒಂದು ಭಾಷೆಯ ಸಹಜಸ್ವರೂಪವಾದ ಜನಪದ ಭಾಷೆಯಲ್ಲಿ ಅಂದರೆ ಹಳ್ಳಿಗರ ಆಡು ಮಾತಿನಲ್ಲಿ ಅಡಗಿರುವ ಕಾವ್ಯಾಂಶದ ಗಂಧವನ್ನು ಉದಾಹರಣೆಗಳೊಂದಿಗೆ ಗುರುತಿಸಿದ್ದಾರೆ. "ಭಾಷೆಯ ವೈಶಿಷ್ಟ್ಯ ಅದರ ವ್ಯಾಕರಣವಾಗಿರುವಂತೆ ಮಾತಿನ ವೈಶಿಷ್ಟ್ಯ,

---

೯ ಕಾವ್ಯಾನುಸಂಧಾನ, ಪು. ೬೯

೧೦ ಕಾವ್ಯಾನುಸಂಧಾನ, ಪು. ೭೦

೧೧ ಕಾವ್ಯಾನುಸಂಧಾನ, ಪು. ೯೭

೧೨ ಸಮಾಹಿತ, ಪು. ೧

ತನ್ನನ್ನೇ ಸೃಷ್ಟಿಸಿಕೊಳ್ಳುವದು. ಅದನ್ನೇ ಕಾವ್ಯವೆಂದು ಕರೆಯುತ್ತೇವೆ.''[13] ಎಂದು ಹೇಳಿದ ಮಾತು ಒಪ್ಪುವಂಥದು, ಗಾದೆ ಒಗಟುಗಳಲ್ಲಿರುವ ಕಾವ್ಯಾಂಶವನ್ನು ಗುರುತಿಸಿ ತೋರಿಸಿಕೊಟ್ಟ ಮೇಲೆ ಹತ್ತು–ಹನ್ನೆರಡು ತ್ರಿಪದಿಗಳನ್ನು ಆಯ್ದುಕೊಂಡು ಅವುಗಳಲ್ಲಿರುವ ಭಾವ ಭಾಷೆಗಳ ಸಂಬಂಧವನ್ನು ಎಳೆ ಎಳೆಯಾಗಿ ಬಿಡಿಸಿ ತೋರಿಸಿದ್ದಾರೆ. ಉದಾಹರಣೆಗೆ——

ನೊರಿಹಾಲು ಕುಡಿಸಿದ್ದಿ, ಸಕ್ರೀಯತಿನಿಸಿದ್ದಿ
ಬೆಳದಿಂಗಳೀಗು ಸೆರಗ, ಮರಿ ಮಾಡಿದ್ದಿ
ಈಗೆಂಥ ದುಃಖ ಹಡೆದವ್ವ,

ಈ ತ್ರಿಪದಿಯು ಭಾಷಾ ಪ್ರಯೋಗದ ಬಗ್ಗೆ ಕಣವಿಯವರು ಹೀಗೆ ಬರೆದಿದ್ದಾರೆ— '' 'ನೊರಿ ಹಾಲು' 'ಸಕ್ಕರಿ' ಬೆಳದಿಂಗಳು' ಈ ಪದಗಳು ಸವಿಯಾದ ಸೌಖ್ಯ ಭಾವಕ್ಕೆ ಪ್ರತೀಕವಾಗಿರುವುವಲ್ಲವೆ 'ಕುಡಿಸಿದ್ದಿ' 'ತಿನಿಸಿದ್ದಿ' 'ಮರಿಮಾಡಿದ್ದಿ' ಎನ್ನುವ ಆಡು ಮಾತು ಆತ್ಮೀಯವಾತಾವರಣವನ್ನು ಸೃಷ್ಟಿಸಿ ಅಂತಃಕರಣವನ್ನು ಬೆಳಗುತ್ತವೆ. 'ಬೆಳದಿಂಗಳೀಗು ಸೆರಗ ಮರಿಮಾಡಿದಿ' ಎನ್ನುವ ಮಾತನ್ನು ಇಲ್ಲಿ ಲಕ್ಷಿಸಬೇಕು. ಮಕ್ಕಳನ್ನೆತ್ತಿಕೊಂಡಾಗ ಬಿಸಿಲಿಗೆ ಸೆರಗು ಮರೆಮಾಡುವದು ವಾಡಿಕೆ. ಆದರೆ ಈ ತಾಯಿ ಬೆಳದಿಂಗಳಲ್ಲಿಯೂ ಸೆರಗು ಮರೆ ಮಾಡಿದ್ದಳಂತೆ. ಈ ಚೆಲುವಾದ ಮಗುವನ್ನು ಕಂಡು ಚಂದ್ರ ದೃಷ್ಟಿಬಿಟ್ಟಾನು ಎನ್ನುವ ಭಾವನೆಯಿಂದಲೋ—ಹೀಗೆ ವಿಷಯವನ್ನು ನಮ್ಮ ಊಹೆಗೆ ಬಿಡುವದು ಉತ್ತಮ ಕಾವ್ಯದ ಲಕ್ಷಣವಾಗಿದೆ. ಬಾಲ್ಯದಲ್ಲಿ ತೌರಿನಲ್ಲಿ ಪಟ್ಟ ಆಸುಖ ಈಗ ಒದಗಿರುವ ದುಃಖ ಇವುಗಳ ಅಂತರದ ಭಾವ ತೀವ್ರತೆ ಸಹಜವಾಗಿದೆ. ಸಮರ್ಥವಾಗಿ ಅಭಿವ್ಯಕ್ತಿಗೊಂಡಿದೆ.'[14] ಔಚಿತ್ಯ ಪೂರ್ಣವಾದ ಈ ವಿವರಣೆಯನ್ನು ಕುರಿತು ''ಕಣವಿಯವರು ತೀರಾ ಸರಳ ನೆಲೆಯಲ್ಲಿ ನಿಂತು ಈ ಮಾತಿನ ಅರ್ಥವನ್ನು ವ್ಯಾಖ್ಯಾನಿಸ ಹೊರಟು ಪದ್ಯ ಪ್ರಕಟಿಸುವ ಒಟ್ಟು ತೀವ್ರತೆಯನ್ನೇ ತೆಳ್ಳಗಾಗಿಸಿದ್ದಾರೆ.''[15] ಎಂದು ಬರೆದ ಅಪಸ್ವರದ ಮಾತು ಅರ್ಥವಿಲ್ಲದ್ದು.

'ಹೋಳಿ ಸಂಪ್ರದಾಯ' ಎಂಬ ಎರಡನೆಯ ಲೇಖನ ಒಂದು ತುಲನಾತ್ಮಕ ಅಭ್ಯಾಸ, ಮಧ್ಯ ಪ್ರವೇಶದ ಮೈಕಾಲ ಬೆಟ್ಟದಲ್ಲಿರುವ ಮೂಲನಿವಾಸಿಗಳ ಜೀವನ, ಸಂಸ್ಕೃತಿ, ಆಚರಣೆ, ಸಾಹಿತ್ಯಗಳ ಪರಿಚಯ ಹೊರ ಜಗತ್ತಿಗಾಗಿರುವದು ಡಾ॥ ವೆರಿಯರ್ ಎಲ್ವಿನ್ ಮಹಾಶಯರ ನಿರಂತರ ಪ್ರಯತ್ನದಿಂದ. ಆ ಜನಾಂಗದಲ್ಲಿ ಪ್ರಚಾರದಲ್ಲಿರುವ 'ಹೋಳಿ' ಸಂಪ್ರದಾಯಕ್ಕೂ ನಮ್ಮ ಕರ್ನಾಟಕದ 'ಹೋಳಿ' ಸಂಪ್ರದಾಯಕ್ಕೂ ಇರುವ ಸಾಮ್ಯತೆಗಳನ್ನು ಹಲವಾರು ಆಧಾರಗಳೊಂದಿಗೆ ಕಣವಿಯವರು ಇಲ್ಲಿ ಎತ್ತಿ ತೋರಿಸಿದ್ದಾರೆ.

———

೧೩ ಸಮಾಹಿತ ಪುಟ ೩

೧೪ ಸಮಾಹಿತ ಪು ೮, ೯

೧೫ ನರಹಳ್ಳಿ ಬಾಲಸುಬ್ರಹ್ಮಣ್ಯ—ಪ್ರಜಾವಾಣಿ, ಸಾಪ್ತಾಹಿಕ ಪುರವಣಿ, ೨೫-೬-೭೮ ಪುಟ ೪

ಒಂದೆರಡು ಕನ್ನಡ ಹಾಡುಗಳನ್ನು ಉದಾಹರಣೆಗೆ ಕೊಟ್ಟಿರುವಂತೆ ಮೈಕಾಲ ಬೆಟ್ಟದ ಮೂಲನಿವಾಸಿಗಳ ಎರಡು ಸುಂದರವಾದ ಹಾಡುಗಳನ್ನೂ ಕೊಟ್ಟಿದ್ದಾರೆ (ಅನುವಾದಿಸಿ). ಒಟ್ಟಾರೆ ಎಲ್ಲಿದ್ದರೂ ಜಾನಪದ ಮನೋಧರ್ಮ ಒಂದೇ, ಜಾನಪದ ಬದುಕಿನ ಮೂಲ ಲಕ್ಷಣಗಳು ಸಾಮಾನ್ಯವಾದವುಗಳು ಎಂಬುದನ್ನು ಒತ್ತಿ ಹೇಳುವ ಸೀಮಿತ ಉದ್ದೇಶ ದಿಂದೊಡಗೂಡಿರುವ ಈ ಲೇಖನದಿಂದ ಹೋಳಿ ಸಂಪ್ರದಾಯದ ಬಗ್ಗೆ ದೀರ್ಘವಾದ ಸವಿವರವಾದ ಪರಿಚಯವನ್ನು ಅಪೇಕ್ಷಿಸಲಾಗದು. ಮೂರನೆಯ ಲೇಖನ "ಜನಪದ ಕಾವ್ಯದ ಮೂಲಕ ಜನಾಂಗದ ಸಂಸ್ಕೃತಿಯ ಅಧ್ಯಯನ" ಎಂಬುದೂ ಕೂಡ ತುಲ ನಾತ್ಮಕ ಅಭ್ಯಾಸವೇ. ಆದರೆ ಇದರಲ್ಲಿರುವ ಪರಿಶೀಲನೆ ಬೇರೆ ರೀತಿಯದು. ಮೇಲಿನ ಲೇಖನದಲ್ಲಿ ಬಂದಿರುವ ಮೈಕಾಲ ಮುಂತಾದ ಬೆಟ್ಟಗಳ ಮೂಲ ನಿವಾಸಿಗಳ ಬಗ್ಗೆ, ಅವರ ಅಧ್ಯಯನಕ್ಕಾಗಿ ಜೀವನವನ್ನೇ ಮೀಸಲಾಗಿಟ್ಟಿದ್ದ ಡಾ॥ ವೆರಿಯರ್ ಎಲ್ವಿನ್ನರ ಬಗ್ಗೆ ಆರಂಭದಲ್ಲಿ ಕಣವಿಯವರು ತುಂಬಾ ಮೆಚ್ಚಿಕೆಯ ಮಾತು ಆಡಿದ್ದಾರೆ. ಎಲ್ವಿನ್ನರು ಮಾನವಶಾಸ್ತ್ರದ ಮಾಮೂಲಿ ಮಾರ್ಗಬಿಟ್ಟು ಕಾವ್ಯದ ಮೂಲಕ ಒಂದು ಜನಾಂಗದ ಸಂಸ್ಕೃತಿಯ ಅಭ್ಯಾಸ ನಡೆಸಿದುದನ್ನು ಸ್ಪಷ್ಟಗೊಳಿಸಿದ್ದಾರೆ. ಜನಪದ ಹಾಡುಗಳಲ್ಲಿ ಆಯಾ ಪ್ರದೇಶದ ಸಂಸ್ಕೃತಿಯ ವೈಲಕ್ಷಣ್ಯಗಳು ಪ್ರತಿಬಿಂಬಿತವಾಗಿರುವದನ್ನು ಕಣವಿಯವರು ಓದುಗರ ಗಮನಕ್ಕೆ ತಂದಿದ್ದಾರೆ. ಉದಾಹರಣೆಗೆ—ಬಸಿರಿ ಹೆಣ್ಣು ಮಗಳನ್ನು ವರ್ಣಿಸುವ ಬೇರೆ ಬೇರೆ ಪ್ರದೇಶದ ಮೂರು ಕನ್ನಡ ತ್ರಿಪದಿಗಳಲ್ಲಿ "'ಗೋದಿಯ ಸಸಿಯಹಾಗ ನವಿಲು ನಡಿದಾಂಗ" "ಕೆಸ್ರ ಗದ್ದಿಲ್ ಬಸವನಡೆದ್ಹಾಂಗೆ" 'ನಮ್ಮೂರ ಹೊಳಿಯಹಾಗ ಹಂಸನಡಧಂಗ" ಹೀಗೆ ಮೂರೆ ವಿಭಿನ್ನ ಹೋಲಿಕೆಗಳಿವೆ. ಇವನ್ನು ಕಣ್ಣಲಿ ಕಣ್ಣಿಟ್ಟು ನೋಡಿದರೆ ಮೊದಲನೆಯದು ಬಯಲು ಸೀಮೆಯದು, ಎರಡನೆಯದು ಮಲೆನಾಡಿನದು, ಮೂರನೆಯದು ಹೊಳೆಯ ದಂಡೆಯಲ್ಲಿರುವ ಒಂದು ಊರಿನದು ಹೀಗೆ ಗುರುತಿಸಬಹುದೆಂಬುದನ್ನು ಕಣವಿಯವರು ಹೇಳುತ್ತಾರೆ. ಬಸಿರು ಬಯಕೆ ಬೇನೆಗಳಿಗೆ ಸಂಬಂಧಿಸಿದ ಮಹತ್ವದ ಕನ್ನಡ ಹಾಡುಗಳನ್ನು ರಸವತ್ತಾಗಿ ವಿವರಿಸಿ ಅದಕ್ಕೆ ಸಂವಾದಿಯಾಗಿರುವ ಮಧ್ಯ ಪ್ರದೇಶದ ಗುಡ್ಡಗಾಡು ಜನರ ಹಾಡುಗಳನ್ನು ಸುಂದರವಾದ ಭಾವಾನುವಾದದ ಮೂಲಕ ಪರಿಚಯಿಸಿ, ಎರಡೂ ಸಂಸ್ಕೃತಿಗಳಲ್ಲಿರುವ ಸಮಾನ ಗುಣಧರ್ಮಗಳನ್ನು ಗುರುತಿಸಿದ್ದಾರೆ. ಈ ದೃಷ್ಟಿಯಿಂದ ಈ ಲೇಖನವು ಎರಡು ವಿಭಿನ್ನ ಜನಾಂಗಗಳ ಆಚರಣೆಯೊಂದರ ತುಲನಾತ್ಮಕ ಅಧ್ಯಯನವಾಗಿರುವಂತೆ ಕಾವ್ಯದ ಕಣ್ಣಿನಿಂದ ಆ ಜನಾಂಗಗಳ ಸಂಸ್ಕೃತಿಯನ್ನು ಕಾಣುವ ಪ್ರಯತ್ನದ ಪ್ರವೇಶಿಕೆಯೂ ಆಗಿದೆ. ಲೇಖನದ ಕೊನೆಯ ಪ್ಯಾರಾದಲ್ಲಿ "........ಈ ಗೀತಗಳು ಆಯಾ ಮಾನವ ಕುಲಗಳ ಜನಾಂಗಗಳ ಇಡಿಯ ಜೀವನ ಕ್ರಮದ ಬಗ್ಗೆ ಭಾಷ್ಯ ಬರೆದಂತಿವೆ. ಇವುಗಳಲ್ಲಿ ಜನಾಂಗ ವೈಲಕ್ಷಣ್ಯಗಳ ವಿವರಣೆ ಎಲ್ಲಿ ಮುಗಿದು, ಕಾವ್ಯ ಎಲ್ಲಿಂದ ಪ್ರಾರಂಭ ವಾಗುತ್ತದೆ ಎಂಬುದನ್ನು ಹೇಳುವದು ಕಠಿಣ. ಯಾಕೆಂದರೆ ಇಲ್ಲಿ ಕಾವ್ಯ ಮಾನವ

ಕುಲದ ವಿವರಣೆಯಾಗಿರುತ್ತದೆ ಹಾಗೂ ಮಾನವಕುಲದ ವಿವರಣೆ ಕಾವ್ಯವಾಗಿರುತ್ತದೆ[16]" ಎಂದು ಹೇಳಿರುವದು ಜನಪದ ಗೀತೆಗಳ ಬಗೆಗಿನ ತುಂಬ ಮಹತ್ವದ ವ್ಯಾಖ್ಯಾನ.

ಕಣವಿಯವರು ಜನಪದ ಸಾಹಿತ್ಯದ ಬಗ್ಗೆ ಬರೆದ ಲೇಖನಗಳನ್ನೆಲ್ಲ ಓದಿದ ಮೇಲೆ ಓದುಗರ ಮುಂದೆ ನಿಲ್ಲುವುದು ಸಹೃದಯ ಕಣವಿಯವರ ಭಾವ ಚಿತ್ರ. ಅದು ಸಂಶೋಧಕನದಾಗಲೀ, ಕಟ್ಟಾ ವಿಮರ್ಶಕನದಾಗಲೀ ಇರಲು ಸಾಧ್ಯವಿಲ್ಲ. ಕಾಲಾನುಕ್ರಮದಲ್ಲಿ ಪ್ರಕಟವಾದ ಅವರ ಮೂರೂ ಸಂಗ್ರಹಗಳಲ್ಲಿ ಈ ಲೇಖನಗಳಿರುವದು ಜನಪದ ಸಾಹಿತ್ಯದ ಬಗ್ಗೆ ಅವರಿಗಿರುವ ಆತ್ಮೀಯತೆ. ಕಳಕಳಿ ಆಸಕ್ತಿಗಳನ್ನು ಸ್ಪಷ್ಟಗೊಳಿಸುವ ಅಂಶ.

---

೧೬ ಸಮಾಹಿತ-ಪು. ೪೩

ಜಯಸುದರ್ಶನ

# ಸಮಕಾಲೀನ ಪ್ರಜ್ಞೆಯ ಕವಿ: ಕಣವಿ

ಕಣ ಕಣದ ಗತಿ-ಮತಿಯ ಗುರುತಿಸು, ಆದರೀಗಲೆ
ಅದರ ಇತಿವೃತ್ತವನು ಬರೆಯದಿರು, ನೀನಾಗಿ
ಕೊರೆಯದಿರು ದಾರಿಯನು. ಬಯಲ ಬಿಡುಗಡೆ ನುಂಗಿ
ನೀರು ಹಿಡಿಯಲಿ, ವಿಶ್ವವೆಲ್ಲವು ತೆರೆದ ಬಾಗಿಲೆ.

—೦— —೦— —೦—

ಕೋಟಿ ಮೈಲಂತರದ ನೀಹಾರಿಕೆಯನಾಡಿ
ಮಿಡಿತ ತಟ್ಟಿತು ಕಿವಿಗೆ; ನಾದದ ಕೊದಲೆಳೆಯಲಿ
ಪೃಥ್ವಿ ತೂಗಿರೆ, ಸೂರ್ಯ ಚಂದ್ರರಿಗು ಜೋಕಾಲಿ
ಪಾತಾಳಗವಿಗೆ ತೆರೆದವು ನೂರು ಬೆಳಕಿಂಡಿ.

—ಚೆನ್ನವೀರ ಕಣವಿ

ಧಾರವಾಡದಲ್ಲಿರುವ ಮಹಾನ್ ವಿದ್ಯಾಸಂಸ್ಥೆಗಳು ಮೂರು. ಮೊದಲನೆಯದು ಡಾ॥ ದ. ರಾ. ಬೇಂದ್ರೆ; ಎರಡನೆಯದು ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಮೂರನೆಯದು ಶ್ರೇಷ್ಠ ಕವಿ ಶ್ರೀ ಚೆನ್ನವೀರ ಕಣವಿ. ಮೊದಲಿನೆರಡು ವಿದ್ಯಾಸಂಸ್ಥೆಗಳಿಗೆ ತಮ್ಮ ಮಹನತ್ತಿನ ಅರಿವು ಇದ್ದೀತು; ಆದರೆ ಕಣವಿಯವರಿಗೆ ತಮ್ಮ ಪ್ರಾಮುಖ್ಯತೆಯ ಬಗ್ಗೆ ಲಕ್ಷ್ಯವಿದ್ದಂತಿಲ್ಲ-ಹಿಮಾಲಯಕ್ಕೆ ತನ್ನ ಮಹತಿಯ ಅರಿವು ಹೇಗೆ ಇದ್ದಿರಲಾರದೋ ಹಾಗೆ.

'ಮಾತು ಕಾವ್ಯವಾಗುವುದೇ ಒಂದು ಸೋಜಿಗ' ಎಂದು ಬೆರಗುಪಡುವ ಕಣವಿಯವರನ್ನು ಕವಿಯೆಂದಲ್ಲದೆ ಬೇರಿನ್ನಾವ ರೀತಿಯಲ್ಲೂ ಗುರುತಿಸುವುದು ದುಸ್ಸಾಧ್ಯವಾಗುತ್ತದೆ. ಅವರು ಎಲ್ಲಕ್ಕಿಂತ ಮೊದಲು ನೂರಕ್ಕೆ ನೂರು ಕವಿ; ಅನಂತರ ಇತರ. ಕೆಲವರು ಕವಿಗಳ ಬದುಕೇ ಕಾವ್ಯವಾಗುತ್ತದೆ ಎಂಬ ಅಗ್ಗಳಿಕೆಯ ಮಾತುಂಟು. ಆದರೆ ತಾವು ಕವಿಯಾಗಿರುವುದು ಕಣವಿಯವರಿಗೆ ವಿಶೇಷವೆಂದು ಕಾಣುವುದಿಲ್ಲ ಎನಿಸುತ್ತದೆ ಪ್ರಾಯಶಃ ಅವರು ಕವಿಯಾಗದೆ ಉಳಿದಿದ್ದಲ್ಲಿ ಆಶ್ಚರ್ಯಪಡಬೇಕಾಗುತ್ತಿತ್ತು. ಕನ್ನಡ ಕಾವ್ಯಕ್ಷೇತ್ರದಲ್ಲಿ ಕಣವಿಯವರು ಬರೆದಿರುವ ಕಾವ್ಯಕ್ಕೆ ಇರುವ ಮಹತ್ವವನ್ನು ಗಮನಿಸುವಾಗ ಅವರು ಒಂದು ವೇಳೆ ಇರದಿದ್ದಲ್ಲಿ ಅಂತಹ ಬೇರೊಬ್ಬ ಕವಿಯನ್ನು ಹುಡುಕಲೇಬೇಕಾಗಿತ್ತು ಎನ್ನಿಸದೆ ಇರದು. ಕನ್ನಡದ ಬಗ್ಗೆ ಪ್ರೇಮ ಬೆಳೆಯಬೇಕಾದರೆ ಕಣವಿಯವರ ಕಾವ್ಯವನ್ನು ಒಮ್ಮೆ ಓದಿದರೆ ಸಾಕು ಎನಿಸುವಂತಿದೆ ಅವರ ಪದ್ಯಗಳ ಚೆಲುವು.

ಇವತ್ತು ಕನ್ನಡ ಕಾವ್ಯವು ಒಂದು ಸಂದಿಗ್ಧದಲ್ಲಿರುವಾಗ ಬದುಕಿನ ಹಾಗೂ ಕಾವ್ಯದ ಉದ್ದೇಶಗಳ ಮತ್ತು ಪ್ರಯೋಜನಗಳ ಬಗ್ಗೆ ಅತ್ಯಂತ ಶ್ರದ್ಧೆ ಹಾಗೂ ಉತ್ಸಾಹವನ್ನು ತಾಳಿರುವ ಕಣವಿಯವರು 'ನವೋದಯ' ಹಾಗೂ 'ನವ್ಯ' ಮಾರ್ಗಗಳೆರಡರಲ್ಲೂ ಕಂಡು ಕೊಂಡ ಸಿದ್ಧಿ ಬೆರಗುಗೊಳಿಸುವಂಥದ್ದು. ಅವರ ನವ್ಯಕಾವ್ಯವು 'ನವೋದಯ'ದ ಸುಕೋಮಲ ಹಾಗೂ ಭಾವನಾಪ್ರಧಾನ ಗುಣಗಳನ್ನು ಉಳಿಸಿಕೊಂಡಿದೆ ಎಂಬ ಆರೋಪ ವಿದ್ದರೂ, ಮಾರ್ಗಗಳ ಪರಿಮಿತಿಗಳನ್ನು ಮೀರುವ ಪ್ರಥಮ ದರ್ಜೆಯ ಕಾವ್ಯ ಪ್ರತಿಭೆ ಯುಳ್ಳ ಕಣವಿಯವರು ಸಕಲವನ್ನೂ ತಮ್ಮ ಕಾವ್ಯಾಭಿವ್ಯಕ್ತಿಯ ಸಮರ್ಪಕತೆಯತ್ತ ದುಡಿಸಿಕೊಳ್ಳುತ್ತಾರೆ. ಮೇಲ್ಕಂಡ ಆರೋಪವನ್ನು ಅವರೊಪ್ಪುವುದಿಲ್ಲ. "ಅದು ಮುಂಗಾಲ ಪುಟಿಗೆಯ ಅಭಿಪ್ರಾಯ (ಆರೋಪ). ಅಂಥವರಿಗೆ ನನ್ನ ಕಾವ್ಯವನ್ನು ಪೂರ್ವಗ್ರಹ ಪೀಡಿತರಾಗದೆ ಅಭ್ಯಾಸ ಮಾಡಬೇಕೆಂದು ಹೇಳಬಯಸುತ್ತೇನೆ; ಅಷ್ಟೇ' ಎಂದವರು ನುಡಿಯುತ್ತಾರೆ.

ಒಂಬತ್ತು ಕವನ ಸಂಕಲನಗಳನ್ನು (ಕೆಲವಾರು ಗ್ರಂಥಗಳನ್ನು ಸಂಪಾದಿಸಿರುವ ಮತ್ತು ವಿಮರ್ಶಾ ಪುಸ್ತಕಗಳನ್ನು ಬರೆದಿರುವ) ಹೊರತಂದಿರುವ ಕಣವಿಯವರಿಗೆ ಕಾವ್ಯ ಬರವಣಿಗೆ ವೃತ್ತಿಯಾಗದೆ, ಉಸಿರಾಟದಂತೆ ಪ್ರವೃತ್ತಿಯಾಗಿದೆ. ಅವರ ಕಾವ್ಯದ ಹಾಗೂ ಬದುಕಿನ ಕಾಳಜಿಗಳು ಒಂದೇ ಆಗಿವೆ. ನಿಸರ್ಗ, ಋತುಮಾನ, ಜೀವನಾನು ಭವಗಳ ವೈವಿಧ್ಯಗಳನ್ನು ಚಿತ್ರಿಸುತ್ತ ಬಂದ ಕಣವಿ (ಹುಟ್ಟು; 1928) ತಮ್ಮ ವಸ್ತು ವಿನಿಂದ ವ್ಯಕ್ತಿತ್ವ ಬೇರೆಯಲ್ಲ ಎಂಬಷ್ಟು ಗಾಢವಾದ ರೀತಿಯಲ್ಲಿ ತಾದಾತ್ಮ್ಯವನ್ನು ಸಾಧಿಸಿದ್ದಾರೆ. ಬೇಂದ್ರೆಯವರ ಚೆಲುವಾದ ನಿಸರ್ಗ ಕವನಗಳಲ್ಲೂ 'ನೋಡುವಾತ ಇರುತ್ತಾನೆ. ಆದರೆ ಕಣವಿಯವರು ಬರೆದ ಅನೇಕ ಕವನಗಳಲ್ಲಿ ಕವಿ ಕೇವಲ ಕವನದ ವಸ್ತುವಿಗೆ ಕನ್ನಡಿಯಾಗಿ ನಿಂತು, ಅವರ ವ್ಯಕ್ತಿತ್ವ ಮರೆಯಲ್ಲಡಗುತ್ತದೆ. ಬದುಕನ್ನು ಕಣವಿ ಅದರ ಕಾರಣಕ್ಕಾಗಿಯೇ (ಅದು ಇದೆ) ಮೆಚ್ಚಿ ಅದರಲ್ಲಿ ಒಂದಾಗುತ್ತಾರೆನಿ ಸುತ್ತದೆ.

ಯಾವ ಮಂದಿರದ ಆಧಾರಸ್ತಂಭಕೋ ಕಾಣೆ
ಇಂತು ಜೀವಸ್ತಂಭ ಸಿದ್ಧವಾಗಿ
ನಿಂತಿಹುದು ಕರ್ತವ್ಯಬದ್ಧವಾಗಿ.
ಹೊತ್ತು ತಲೆಭಾರದಲ್ಲಿ
ಕತ್ತು ತತ್ತರಿಸದೊಲು
ಯಾವ ಶಕ್ತಿಯು ನೆರವು ನೀಡಲಿಹುದೋ
ಇಲ್ಲ, ಬೇರೆಯ ತೆರವು ಬೇಡಲಿಹುದೋ!

ಎಂದು ವ್ಯಷ್ಟಿಯು ತನ್ನನ್ನು ಸಮಷ್ಟಿಗೆ ಅರ್ಪಿಸಿಕೊಳ್ಳುತ್ತದೆ ಅವರ ಮೊದಲಿನ ಒಂದು ಪದ್ಯದಲ್ಲಿ.

ಕಣವಿಯವರ ಕಾವ್ಯ ಬರೀ ನಿಸರ್ಗದ ವರ್ಣನೆಯಲ್ಲ ಅಥವಾ ಬದುಕಿನ ವಿವಿಧ ಅನುಭವ ಮತ್ತು ಸಂಬಂಧಗಳ 'ಕ್ಯಾಟಲಾಗ್' ಅಲ್ಲ; ಅದು ತನ್ನ ಹರಹಿನಲ್ಲಿ ಇವುಗಳೆಲ್ಲ ವನ್ನೂ ಒಳಗೊಂಡು ಇನ್ನೂ ಆಚೆಗೆ ಚಾಚುತ್ತದೆ. ವ್ಯಷ್ಟಿ-ಸಮಷ್ಟಿಯ ಕೊಡು ಕೊಳ್ಳುವಿಕೆಯಲ್ಲಿ ವ್ಯಷ್ಟಿಯೇ ಸಮಷ್ಟಿಯ ಅಭಿವ್ಯಕ್ತಿ ಆಗುವಂತೆಯೇ ಸಮಷ್ಟಿಯು ವ್ಯಕ್ತಿಯ ಕಾರ್ಯರಂಗವಾಗುತ್ತದೆ. ಎಂತಲೇ ಇವೆರಡೂ ಪರಸ್ಪರ ಪೂರಕ. 'ಮಣ್ಣಿನ ಮೆರವಣಿಗೆ'ಯಲ್ಲಿ ಕಣವಿ ಹೇಳುವಂತೆ:

ತಿರುಗುತ್ತಿದೆ; ಎಂದೊ ಸಿಡಿದಾರಿದ ಅಗ್ನಿಯ ಪಿಂಡ:
ಆರಿದೆಯೆಂದವರಾರೋ, ಇನ್ನೂ ನಿಗಿ ನಿಗಿ
ಉರಿಯುತ್ತಿದೆ ಅದರೆದಿಯಾಳದ ಕುಂಡ,
ಹರಿಯುತ್ತಿದೆ ಬೆಂಕಿಯ ಹೊಳೆ
ತಣ್ಣನೆ ಕಡಲೊಳಗೆ;
ಹೊಗೆಯಾಡುತ್ತಿದೆ ಸುಮ್ಮನೆ ನುಣ್ಣನೆ ಬಾನೊಳಗೆ,
ಬದ್ದಿವೆ, ಒಡಮುರಿದೆದ್ದಿವೆ ಗಿರಿ ಗಹ್ವರ-
ಯುಗ ಯುಗಗಳ ನೋವೆ!
ದರಿಕಂದರದೊಳಗಿನ್ನೂ ಹರಿದಾಡಿದೆ ಸಂಶಯವೆ.

ಇಂಥ 'ಮಣ್ಣ ಮನೆಯೊಳು ಮಗುವು ಕಣ್ಣು ತೆರೆದಿತ್ತು.' ಆದ್ದರಿಂದಲೇ 'ಓ ಜೀವನವೆ ಶುಭಮಸ್ತು ನಿನಗೆ' ಎನ್ನುವುದು ಹಾರೈಕೆಯೂ, ಕಾಣ್ಕೆಯೂ ಆಗುತ್ತದೆ,

ಕನ್ನಡ ಭಾಷಾ ಸತ್ವವನ್ನು ಅತ್ಯಂತ ಎಚ್ಚರದಿಂದ ದುಡಿಸಿಕೊಳ್ಳುತ್ತಿರುವ ಕೆಲವೇ ಮಂದಿ ಕವಿಗಳಲ್ಲಿ ಕಣವಿ ಒಬ್ಬರು. ಅವರ ಕವನಗಳಲ್ಲಿ ಶಿಲ್ಪವು ಕವನದ ತಿರುಳಿನಷ್ಟೇ ಆಕರ್ಷಕವಾಗಿರುವುದಕ್ಕೆ ಈ ಕವಿಯ ಭಾಷಾ ಶ್ರದ್ಧೆ ಕಾರಣ. ಮುಖ್ಯವಾಗಿ 'ಸುನೀತ' (ಸಾನೆಟ್)ಗಳ ರಚನೆಯ ಪ್ರಾಯಶಃ ಕಣವಿಯವರಿಗೆ ಸರಿದೊರೆಯಾಗಿರುವವರು ಅವರ ತಲೆಮಾರಿನ ಮತ್ತು ಅನಂತರದ ಪೀಳಿಗೆಯ ಕವಿಗಳಲ್ಲಿ ಯಾರೂ ಇಲ್ಲ. ಕನ್ನಡದ ಕಸುವಿನ ಒಂದು ನಿದರ್ಶನವಾಗಿ ಹಾಗೂ ಭಾಷೆಯ ಲಾಲಿತ್ಯದ ಒಂದು ಅಭಿವ್ಯಕ್ತಿಯಾಗಿ ಅವರ ಸುನೀತಗಳು ಉಳಿದುಕೊಳ್ಳುತ್ತವೆ. ಕನ್ನಡದಲ್ಲಿ 'ಸುನೀತ'ಗಳಿಗೆ ಭದ್ರ ಅಸ್ತಿವಾರ ಹಾಕಿದವರು ಶ್ರೀ 'ಶ್ರೀನಿವಾಸ' ಅವರು. ಅನಂತರ ಬೇಂದ್ರೆ ಮೊದಲಾಗಿ ಅನೇಕರು ಸುನೀತಗಳನ್ನು ಬರೆದರು. ಆದರೆ ಕಣವಿಯವರ ಸುನೀತಗಳದೇ ಒಂದು ತೂಕ ಎನ್ನುವಷ್ಟರಮಟ್ಟಿಗೆ ಸುನೀತ ರಚನೆಯಲ್ಲಿ ಕಣವಿ ಅಸಾಧಾರಣ ಯಶಸ್ಸು ಪಡೆದಿದ್ದಾರೆ.

ಕಣವಿಯವರ ಕಾವ್ಯ-ಜೀವನವನ್ನು ಗಮನಿಸುತ್ತ ಬಂದವರಿಗೆಲ್ಲ ಸ್ಪಷ್ಟವಾಗು ವುದು ಈ ಕವಿಗೆ ಜೀವನದ ಬಗ್ಗೆ ಇರುವ ಆಶಾವಾದಿತ್ವ ಹಾಗೂ ಶ್ರದ್ಧೆ. ಜೀವನಕ್ಕೆ ತತ್ವ, ತರ್ಕ, ಆಧ್ಯಾತ್ಮ ಇತ್ಯಾದಿ ಬೇರಾವ ಉಪಾದಿಗಳು ಇಲ್ಲದಿದ್ದರೂ ಬದುಕಿ ಬಾಳಲು ಯೋಗ್ಯವಾದುದೆಂಬ ನೆಲದ ಪ್ರಜ್ಞೆಯು ಅವರ ಕಾವ್ಯದಲ್ಲಿ ಹೊಮ್ಮುತ್ತಿರು

ತ್ತದೆ. ಅವರೇ ಒಂದು ಕಡೆ ಬರೆಯುತ್ತಾ: "...ವಿಸ್ತಾರವಾದ ಪ್ರಕೃತಿಯ ಮಧ್ಯದಲ್ಲಿ ಸಾಗುತ್ತಿರುವ ಜೀವನವೇ ನನಗೆ ಸ್ಫೂರ್ತಿಯ ಸೆಲೆಯಾಗಿದೆ. ವ್ಯಕ್ತಿಯ ಅಂತರಂಗ ಬಹಿರಂಗಗಳಲ್ಲಿ ನಡೆಯುವ ಘರ್ಷಣೆ ಜೀವನದ ರಹಸ್ಯವನ್ನು ಸ್ಫೋಟಗೊಳಿಸುವಂತೆ ನನಗೆ ತೋರುತ್ತದೆ" ಎಂದು ಹೇಳಿದ್ದಾರೆ. ಕಾವ್ಯವೇ ಜೀವನಧರ್ಮವಾದ ಈ ಕವಿ ಪ್ರಸಕ್ತ ಕನ್ನಡ ಕಾವ್ಯ ಕ್ಷೇತ್ರದಲ್ಲಿ ಕಂಡುಬರುತ್ತಿರುವ ನಿರುತ್ಸಾಹದ ಬಗ್ಗೆಯೂ ಚಿಂತಿಸಿದ್ದಾರೆ.

"ಪ್ರಸಕ್ತ ಕನ್ನಡ 'ನವ್ಯಕಾವ್ಯ' ಕ್ಷೇತ್ರದಲ್ಲಿ ಒಂದು ರೀತಿಯ ನಿಷ್ಕ್ರಿಯತೆ ಕಂಡು ಬರುತ್ತಿದೆ ಎಂಬ ಒಂದು ಅಭಿಪ್ರಾಯದ ಬಗ್ಗೆ ತಮ್ಮ ಪ್ರತಿಕ್ರಿಯೆಯೇನು ?"

"ಈ ಮಾತು ನಿಜ. ಕಳೆದ ಕಾಲುಶತಮಾನದಿಂದ ಪ್ರವರ್ಧಮಾನ ಸ್ಥಿತಿಯಲ್ಲಿದ್ದ ನವ್ಯಕಾವ್ಯಕ್ಕೆ ಈಗ ಇಳಿಗಾಲ ಒದಗಿದೆ. ಈಚಿನ ಈ ಮಾದರಿಯ ಎಷ್ಟೋ ಪದ್ಯಗಳು ಅನುಕರಣೆಗೆ ಬಿದ್ದು ನಿಸ್ತೇಜವಾಗಿರುವುದನ್ನು ಕಾಣುತ್ತಿದ್ದೇವೆ. ಬಹುಶಃ ಈ ಕಾವ್ಯದ ಸಾಧ್ಯತೆಗಳು ಮುಗಿದು ಹೋಗಿರುವುದೇ ಇದಕ್ಕೆ ಕಾರಣ. ಅದರ ಅಭಿವ್ಯಕ್ತಿಯಲ್ಲಿಯ ನಾವೀನ್ಯವೂ ಈಗ ಮಾಸಿ ಹೋಗಿದೆ. ಕಾವ್ಯಗುಣವನ್ನು ಮುಖ್ಯವಾಗಿ ಭಾವಿಸಿದ ಒಬ್ಬಿಬ್ಬರ ಕವಿತೆಗಳಲ್ಲಿ ಲವಲವಿಕೆ ಇನ್ನೂ ಜೀವಂತವಾಗಿಯೆದೆಯೇನೋ ನಿಜ. ಆದರೆ ಒಟ್ಟಿನಲ್ಲಿ ಕನ್ನಡ ಕಾವ್ಯ ಇನ್ನೊಂದು ಬದಲಾವಣೆಗೆ, ತಿರುವಿಗೆ ಕಾದಿದೆ ಎಂದರೆ ತಪ್ಪಾಗದು."

ನವ್ಯ ಕಾವ್ಯಕ್ಕೆ ಹೊಸ ಸ್ವರೂಪವನ್ನು ನೀಡಬೇಕೆನ್ನುವ ಕಣವಿ ಸ್ವತಃ 'ನವೋದಯ'ದಿಂದ 'ನವ್ಯ'ಕ್ಕೆ ಬಂದವರು. "ಒಂದು ಕಾವ್ಯಮಾರ್ಗ ಹೆಚ್ಚಿನದನ್ನು ಸಾಧಿಸಲು ಶಕ್ತವಾಗದಾಗ ಕಾವ್ಯ ಸತ್ವದ ಪುನರವತಾರಕ್ಕಾಗಿ, ಹೊಸತೊಂದು ಕಾವ್ಯಮಾರ್ಗವನ್ನು ಕಂಡುಕೊಳ್ಳುವ, ಹೊಸ ರೂಪ, ಆವಿಷ್ಕಾರಗಳನ್ನು ತಂದುಕೊಳ್ಳುವ, ಬದುಕನ್ನು ಕುರಿತ ತೀವ್ರವಾದ ಸಂವೇದನೆಯೊಂದಿಗೆ ಸ್ವತಂತ್ರವಾದ ಮನೋಧರ್ಮವನ್ನು ವ್ಯಕ್ತಪಡಿಸುವ ಕಾವ್ಯ 'ನವಕಾವ್ಯ'. ಅದು ಯಾವುದೋ ಒಂದು ಅವಧಿಗೆ ಮಾತ್ರ ಸೀಮಿತವಾದದ್ದಲ್ಲ. ಕಾಲಧರ್ಮಕ್ಕೆ ತಕ್ಕಂತೆ ಕಾವ್ಯದಲ್ಲಿ ಬದಲಾವಣೆಯಾದಾಗ ಅದು ತನ್ನ ಹಿಂದಿನದಕ್ಕೆ 'ನವ್ಯ' ಎನಿಸುತ್ತದೆ" ಎನ್ನುವ ಕಣವಿಯವರು ನವ್ಯವೆಂದರೆ ಸದಾ ಬದಲಾಗುತ್ತಿರುವುದೇ ಎಂಬ ನಿಲುವನ್ನುಳ್ಳವರಾಗಿದ್ದಾರೆ ಎನಿಸುತ್ತದೆ. ಇದಕ್ಕೆ ನಿದರ್ಶನವಾಗಿ ಅವರ ಕಾವ್ಯ ಬೆಳೆದುಬಂದ ಬಗೆಯೇ ನಮ್ಮ ಮುಂದೆ ನಿಂತಿದೆ.

'ನವೋದಯ' ಹಾಗೂ 'ನವ್ಯ' ಮಾರ್ಗಗಳ ಕಾಲದಲ್ಲಿ ತೆರೆದ ಮನಸ್ಸಿನಿಂದ ತಾವು ಬದುಕಿರುವುದೇ ತಮ್ಮ ಕಾವ್ಯದಲ್ಲಾದ ಬದಲಾವಣೆಗೆ ಪ್ರೇರಣೆಯಾಯಿತೆಂದು ಕಣವಿ ಹೇಳುತ್ತಾರೆ. "...ಈ ಬದಲಾವಣೆಯ ಬಯಕೆ ನನ್ನನ್ನೊಳಗೊಂಡು ಹಲವರ ಮನಸ್ಸಿನಲ್ಲಿ ಆಗ ಮಿಡಿಯುತ್ತಿತ್ತು. 1949ರಿಂದ 1953ರ ವರೆಗಿನ ಶ್ರೀ ಅಡಿಗರೊಂದಿಗಿನ ನನ್ನ ಪತ್ರವ್ಯವಹಾರ ಇದಕ್ಕೆ ಕೆಲಮಟ್ಟಿಗೆ ಪ್ರೇರಕವಾಗಿದೆ. ಮುಂದೆ ಶ್ರೀ ಗೋಕಾಕರ

ಧಾರವಾಡಕ್ಕೆ ಬಂದು ನೆಲಸಿದಾಗ ಅವರ ನಿಕಟ ಸಂಪರ್ಕದಿಂದ ನವ್ಯಕಾವ್ಯದ ಬಗೆಗೆ ಹೆಚ್ಚಿನ ಆಸಕ್ತಿಯುಂಟಾಯಿತು. 1956ರಲ್ಲಿ ಸ್ವಲ್ಪ ಅವಸರದಲ್ಲಿಯೇ ನಾವಿಬ್ಬರೂ 'ನವ್ಯ ಧ್ವನಿ'ಯನ್ನು ಸಂಪಾದಿಸಿ ಪ್ರಕಟಿಸಿದೆವು" ಎಂದು ಹೇಳುವ ಕಣವಿ ನಮ್ಮ 'ನವೋದಯ' ಹಾಗೂ 'ನವ್ಯ' ಕಾವ್ಯಗಳ ನಡುವಣ ವ್ಯತ್ಯಾಸಗಳನ್ನು ಗುರುತಿಸುತ್ತ ಹೀಗೆನ್ನುತ್ತಾರೆ.

"ವಾಸ್ತವ ಪ್ರಜ್ಞೆ, ಆತ್ಮವಿಮರ್ಶೆ, ಕಲಾಜಾಗೃತಿ, ಸೂಕ್ಷ್ಮವಾದ ವ್ಯಂಗ್ಯ ದಾಟಿ ನೂತನ ಛಂದಃಪ್ರಯೋಗ–ಇವು ಕೆಲಮಟ್ಟಿಗೆ ಕೂಡುಬಂದ ವ್ಯತ್ಯಾಸಗಳು. ಜೀವನ ಪ್ರೀತಿ, ಅತಿಯಿಲ್ಲದ ಆಶಾವಾದ, ಪ್ರಕೃತಿ ಪ್ರೇಮ, ಅಂತಃಶ್ರದ್ಧೆ, ಶುಚಿಪರಾಯಣತೆ, ಗುಣಸ್ವೀಕಾರ ದೃಷ್ಟಿ, ದೇಸಿಯ ಬಳಕೆ– ಇವು ನನ್ನ ಎರಡೂ ಬಗೆಯ ಪದ್ಯಗಳಿಗೆ ಸಮಾನವಾಗಿರತಕ್ಕ ಅಂಶಗಳು."

" 'ನವ್ಯ' ಮಾರ್ಗದಲ್ಲಿ ಸಾಗಿಬಂದಿರುವ ಕಾರಣ ತಮ್ಮ ಸಂವೇದನೆ ಯಾವ ರೀತಿ ಬದಲಾವಣೆಗೊಂಡಿತು ಎಂಬುದನ್ನು ತಿಳಿಸುವಿರಾ ?"

"ಮೇಲೆ ಸೂಚಿಸಿದ ವ್ಯತ್ಯಾಸಗಳಲ್ಲಿಯೇ ಇದಕ್ಕೆ ಉತ್ತರವಿದೆ. ಸಂಯಮ, ಸಮಗ್ರದೃಷ್ಟಿ, ಸತತ ಪರಿಶ್ರಮದ ಅಗತ್ಯಗಳನ್ನು ಕಂಡುಕೊಂಡ ಮನಸ್ಸು ತನ್ನ ಸಂವೇದನೆಯನ್ನು ಮೊಂಡುಗೊಳಿಸದೆ ಸದಾ ಜಾಗ್ರತವಾಗಿಟ್ಟುಕೊಳ್ಳಲು ಹವಣಿಸಿತು. ಅಲ್ಲದೆ ಭಾವಗೀತ ಹಾಗೂ ನವ್ಯಕಾವ್ಯ ಇವುಗಳ ಸಮನ್ವಯವನ್ನು ಸಾಧಿಸುವ ಪ್ರಯತ್ನ ನನಗರಿವಿಲ್ಲದೆಯೇ, ತನ್ನಷ್ಟಕ್ಕೆ ತಾನೇ ನಡೆಯಿತು."

ಆದರೆ ನವ್ಯ ಕಾವ್ಯದಿಂದ ಏನಾಗಬೇಕಾಗಿತ್ತೋ ಅದೆಲ್ಲವೂ ಈಗ ಆಗಿಹೋಗಿರುವುದರಿಂದ ಇನ್ನೂ ಹೆಚ್ಚಿನದನ್ನು ಅದರಿಂದ ಅಪೇಕ್ಷಿಸಬಾರದು. ಅದು ತನ್ನ ಕೆಲವು ಒಳ್ಳೆಯ ಗುಣಗಳನ್ನು ಮುಂಬರುವ ಕಾವ್ಯಕ್ಕೆ ಧಾರೆಯೆರೆದು, 'ಜನಪ್ರಿಯತೆ'ಯನ್ನು ಕಡೆಗಣಿಸಿದೆ. ಬದುಕಿನ ಸವಾಲುಗಳನ್ನು ಸ್ವೀಕರಿಸುವ ಹೊಸ ಕಾವ್ಯವನ್ನು ಹಸನ್ಮುಖದಿಂದ ಬರಮಾಡಿಕೊಳ್ಳಬೇಕೆಂದು ಕಣವಿ ಅಭಿಪ್ರಾಯಪಡುತ್ತಾರೆ. ಈ ಬದಲಾವಣೆಯ ಅಂಗವಾಗಿ ಕಾವ್ಯವನ್ನು ಇನ್ನೂ ಸ್ವಲ್ಪ ಹೆಚ್ಚಿನ ರೀತಿಯಲ್ಲಿ ಜನಸಂಪರ್ಕಕ್ಕೆ ಯತ್ನಿಸಬೇಕೆಂಬುದು ಕಣವಿಯವರ ಆಶೆ. ಯಾವ ಕಾವ್ಯವೂ ಸಂಪೂರ್ಣವಾಗಿ ಅರ್ಥವಾಗಬೇಕಾಗಿಲ್ಲವಾದರೂ ಹೇಳುವ ರೀತಿಯಲ್ಲಿ ಕ್ಲಿಷ್ಟತೆ ಇರಬಾರದು ಎಂದು ಈ ಕವಿ ಬಯಸುತ್ತಾರೆ.

ಅಲ್ಲದೆ ಸಮಾಜದಲ್ಲಿ ಇತರ ಕಲೆಗಳಿಗೆ ಯಾವ ಸ್ಥಾನವಿದೆಯೋ ಅದೇ ಸ್ಥಾನ ಕಾವ್ಯಕ್ಕೂ ಇರಬೇಕು– ಎಂದವರು ಹೇಳುತ್ತಾರೆ. ಆದರೆ, "ನಮ್ಮ ಜನತೆಯ ನಿರಕ್ಷರತೆಯನ್ನು ಹೋಗಲಾಡಿಸದೆ ಅದಕ್ಕೆ (ಕಾವ್ಯಕ್ಕೆ) ಯಾವ ಸ್ಥಾನವನ್ನು ಕೊಟ್ಟರೂ ಏನು ಪ್ರಯೋಜನ?" ಈ ಸಂದರ್ಭದಲ್ಲಿ ಕಾವ್ಯವು 'ಸಾಮಾಜಿಕ ಅಭಿವ್ಯಕ್ತಿ'ಯಾಕಾಗಬಾರದು? ಎಂದು ಕಣವಿ ಕೇಳುತ್ತಾರೆ. "ಕವಿಯೂ ಸಮಾಜದ ಒಂದು ಘಟಕವಾಗಿರುವುದರಿಂದ

ಹಾಗೂ ನಿತ್ಯವೂ ಅದರ ಒಡನಾಟದಲ್ಲಿರುವುದರಿಂದ ಅದರ ಸಮಸ್ಯೆಗಳನ್ನು, ವ್ಯವಸ್ಥೆಯನ್ನು, ಲೋಪದೋಷಗಳನ್ನು ವಿವೇಚಿಸಬೇಕಾಗುತ್ತದೆ. ರಾಜಕೀಯವೂ ಅದಕ್ಕೆ ಹತ್ತಿರದಲ್ಲಿಯೇ ಇರುವುದನ್ನು ಗಮನಿಸಬೇಕಾಗುತ್ತದೆ. 'ಸಾಮಾಜಿಕ ಅಭಿವ್ಯಕ್ತಿ' ಕವಿಯ 'ಸಾಮಾಜಿಕ ಪ್ರಜ್ಞೆ'ಯನ್ನು ಅವಲಂಬಿಸಿದೆ. ಈ ಅಭಿವ್ಯಕ್ತಿ ಸಹಾನುಭೂತಿಯ ಮಟ್ಟದ್ದಾಗಿರಬಹುದು. ಸಾಮೂಹಿಕ ಸ್ಥಿತಿಯ ತೀವ್ರಾನುಭವ ಹಾಗೂ ಆ ಬಗ್ಗೆ ವಿಶೇಷ ಕಾಳಜಿಯುಳ್ಳ ಕವಿಯಿಂದ ಮಾತ್ರ ಇದು ಸಾಧ್ಯ" ಎನ್ನುವ ಕಣವಿಯವರು 'ನವ್ಯಕಾವ್ಯ'ವನ್ನು ಬದಲಾಯಿಸುವಾಗ ಅದಕ್ಕೆ ಹೊಸತನ ನೀಡುವಲ್ಲಿ ಮೇಲ್ಕಂಡ ಅಂಶಗಳೂ ಸಹಕಾರಿಯಾಗಬಹುದೆಂಬುದನ್ನು ಸೂಚಿಸುತ್ತಾರೆ.

"ಜನಸಾಮಾನ್ಯರಿಗಾಗಿಯೇ ಉದ್ದೇಶ ಪೂರ್ವಕವಾಗಿ ಅವರಿಗರ್ಥವಾಗುವ ಹಾಗೆ ಕವಿ ಬರೆಯಲೇಬೇಕೇ ? ಕಾವ್ಯ ಯಾರಿಗಾಗಿ ?" ಎಂದು ನಾನು ಪ್ರಶ್ನಿಸಿದೆ.

ಕಣವಿ ಹೇಳಿದರು: ಕವಿ ಹೀಗೆ ಬರೆಯಲೇಬೇಕು ಎನ್ನುವ ಒತ್ತಾಯ ಸಲ್ಲದು. ಕಾವ್ಯರಚನೆಗೆ ಮುಖ್ಯವಾದುದು ತನ್ನ ಅನುಭವದ ಆಂತರಿಕ ಒತ್ತಡ. ಆದರೆ ಯಾವ ಬದುಕಿನ ಪರಿಸರದಲ್ಲಿ ಆತನ ಕಾವ್ಯ ನಿರ್ಮಾಣಗೊಂಡಿರುತ್ತದೆಯೋ ಆ ಜನಕ್ಕೆ ಅದು ಹೋಗಿ ಮುಟ್ಟಿದಾಗ ಅದಕ್ಕೆ ಹೆಚ್ಚಿನ ಸಾರ್ಥಕತೆ. ನಿಜವಾದ ಕಾವ್ಯ ತನ್ನ ಓದುಗರ ವಲಯವನ್ನು ವಿಸ್ತರಿಸುತ್ತ ಹೋಗಬಲ್ಲುದು.

'ಜನಸಾಮಾನ್ಯರು' ಎಂಬ ಪದಕ್ಕೆ ನೀವು ಯಾವ ಅರ್ಥವನ್ನು ಇಟ್ಟುಕೊಂಡಿದ್ದೀರೋ ಗೊತ್ತಿಲ್ಲ. ಅವರಿಗೂ ಅರ್ಥವಾಗುವ ಹಾಗೆ ಕಾವ್ಯ ಬಂದರೆ ಅದಕ್ಕಿಂತ ಹೆಚ್ಚಿನ ಸಿದ್ಧಿ ಯಾವುದಿದೆ ? ಆದರೆ ಕವಿ ಆ 'ಜನಸಾಮಾನ್ಯ'ರನ್ನೂ ಸರಿಯಾಗಿ ಅರ್ಥಮಾಡಿಕೊಂಡಿರಬೇಕಾದುದು ಅಷ್ಟೇ ಮುಖ್ಯ. ಉತ್ತಮ ಕಾವ್ಯ ಎಲ್ಲರಿಗೂ ಎಲ್ಲ ಕಾಲಕ್ಕೂ ತನ್ನ ಸಂಪೂರ್ಣ ಅರ್ಥವನ್ನು ಬಿಟ್ಟುಕೊಡುತ್ತದೆಂದು ಹೇಳಲುಬಾರದು. ಈ ಸಂದರ್ಭದಲ್ಲಿ ಕೋಲರಿಜ್‌ನ ಮಾತೊಂದು ನೆನಪಿಗೆ ಬರುತ್ತದೆ : 'ಪೋಯೆಟ್ರಿ ಗಿವ್ಸ್ ಮೋಸ್ಟ್ ಪ್ಲೆಷರ್ ವೆನ್ ಓನ್ಲಿ ಜನರಲಿ ಅ್ಯಂಡ್ ನಾಟ್ ಪರ್‌ಫೆಕ್ಟಲಿ ಅಂಡರ್ ಸ್ಟುಡ್.'

"ಕಾವ್ಯ ಜೀವನದ ವಿಕಾಸವನ್ನು, ಸಭ್ಯತೆ ಸಂಸ್ಕೃತಿಯನ್ನು ಬಯಸುವ ಎಲ್ಲರಿಗಾಗಿ, ಅದು ಪರಸ್ಪರ ಸಂವಾದಿಯಾದದ್ದಷ್ಟೇ ಹೊರತು ತನ್ನಷ್ಟಕ್ಕೆ ನಿರಪೇಕ್ಷವಾದದ್ದಲ್ಲ. ಕಾವ್ಯದ ಒಟ್ಟಾರೆ ಉದ್ದೇಶ ಜೀವನ ಪ್ರಜ್ಞೆಯನ್ನು ಹೆಚ್ಚಿಸುವುದು, ಮನಸ್ಸು–ಹೃದಯಗಳನ್ನು ಸಂಸ್ಕಾರಗೊಳಿಸುವುದು, ಇಡಿಯ ವ್ಯಕ್ತಿತ್ವವೇ ವಿಶ್ವತತ್ತ್ವವನ್ನು ಎದುರಿಸಿ ನಿಲ್ಲುವಂತೆ ಮಾಡುವುದು."

ಕಾವ್ಯ ಬದುಕಿಗೆ ನಿಷ್ಠವಾಗಿರಬೇಕು ಎಂಬ ನಿಲುವಿನ ಕಣವಿಯವರು ತಮ್ಮ ಕಾವ್ಯದಿಂದ ಇನ್ನೂ ಮಹತ್ತರವಾದುದನ್ನು ನಿರೀಕ್ಷಿಸಿರುವಂತಿದೆ ; ಅವರ ಕಾವ್ಯದ ಪರಿಚಯವುಳ್ಳವರಿಗೂ ಈ ನಿರೀಕ್ಷೆ ಇದ್ದೇ ಇದೆ. ಕಣವಿಯವರ ಮಟ್ಟಿಗೆ ಈ ನಿರೀಕ್ಷೆ ತಮ್ಮ ಬರವಣಿಗೆಯನ್ನು ಸುಧಾರಿಸಿಕೊಳ್ಳುವ ಹಂಬಲದ ಪ್ರತೀಕವಾಗಿದ್ದರೆ ಅದರ ಓದುಗರಿಗೆ ಇರುವ ನಿರೀಕ್ಷೆ ಇದುವರೆಗೆ ಇಷ್ಟು ಉತ್ತಮ ಕಾವ್ಯ ನೀಡಿದ ಈ ಕವಿ ಮುಂದೆ ಇನ್ನೂ

ಮಹತ್ತರವಾದುದನ್ನು ನೀಡುತ್ತಾರೆ ಎಂಬ ವಿಶ್ವಾಸವನ್ನು ಧ್ವನಿಸುತ್ತದೆ. ಕಣವಿಯವರಿಗಾದರೋ, "ನನ್ನ ಕಾವ್ಯ ಕೃಷಿ ನನಗೆ ಸಂತೋಷವನ್ನು ನೀಡಿದೆಯೆನ್ನುವುದರಲ್ಲಿ ಸಂದೇಹವಿಲ್ಲ. ಅಲ್ಲಲ್ಲಿ ಸಹೃದಯ ಓದುಗರು ಅದನ್ನು ಮೆಚ್ಚಿಕೊಂಡಾಗ ಆ ಸಂತೋಷ ಸಾರ್ಥಕವಾದುದು ಎನಿಸುತ್ತದೆ. ನನ್ನ ಮಟ್ಟಿಗೆ ಕಾವ್ಯ ಪ್ರಾರಂಭದಲ್ಲಿ ವೈಯಕ್ತಿಕವಾಗಿದ್ದು ಅನಂತರ ಸಾರ್ವತ್ರಿಕತೆಯನ್ನು ಪಡೆಯುವಂಥದ್ದು, ಜೀವನವನ್ನು ಬಿಟ್ಟರೆ ಕಾವ್ಯಕ್ಕೆ ಬೇರೆ ಗತಿಯಿಲ್ಲ. ಕಾವ್ಯ ಬದುಕಿಗೆ ಪರ್ಯಾಯವಾಗಿ (ಆಲ್ಟರ್‌ನೇಟಿವ್)ರುವ ಸುಂದರ ವಸ್ತುವೆಂದು ನಾನು ಭಾವಿಸುವುದಿಲ್ಲ. ಕಂಡುದನ್ನು, ಉಂಡುದನ್ನು ಮಾತ್ರ ಹೇಳುವುದು ಒಂದು ಗುಣವೆನ್ನಿಸಿದಲ್ಲಿ ಅದಕ್ಕೆ ನನ್ನ ಕಾವ್ಯದಲ್ಲಿ ಯಾವ ಕೊರತೆಯೂ ಇಲ್ಲ. ಆದರೆ ಬದುಕಿನ ಸಮಗ್ರಾನುಭವದ ದೃಷ್ಟಿಯಿಂದ ಅದು ನನ್ನಷ್ಟಕ್ಕೇ ಕೊಂಚ ಅತೃಪ್ತಿಯನ್ನು ಉಂಟುಮಾಡಿದೆ. ಕಾವ್ಯರಚನೆ ಕಷ್ಟದ್ದು, ಹೊಣೆಗಾರಿಕೆಯದು ಎನ್ನುವುದು ಈಚೆಗೆ ಹೆಚ್ಚು ಹೆಚ್ಚಾಗಿ ನನ್ನ ಅನುಭವಕ್ಕೆ ಬರುತ್ತಿದೆ."

ಈ ಒಂದು ದೃಷ್ಟಿಕೋನವನ್ನು ಹೊಂದಿರುವ ಕಣವಿ ಎತ್ತಲಿಂದಲೂ ನಮ್ಮತ್ತ ಬೆಳಕು ಬರಲಿ ಎಂಬ ಉದಾರವಾದಿಗಳು. 'ನವ್ಯಕಾವ್ಯ'ಕ್ಕೆ ಮೂಲ ಪ್ರೇರಣೆ ವಿದೇಶೀ ಕಾವ್ಯದಿಂದ ಆಯಿತೆಂಬುದನ್ನು ಒಪ್ಪಿದರೂ ಕಣವಿ– ಈ ಅಂಶವೇ ಈಗ ಜಗತ್ತು ಹೆಚ್ಚು ಹೆಚ್ಚು ಹತ್ತಿರಕ್ಕೆ ಬರುತ್ತಿರುವುದನ್ನು ತೋರಿಸುತ್ತಾರೆ. ವಿದೇಶಗಳಲ್ಲಿಯ ಪ್ರಭಾವಗಳೂ, ವಿದ್ಯಮಾನಗಳೂ ನಮ್ಮಲ್ಲೂ ಕಂಡುಬರುತ್ತಿರಬಹುದು. ಆದರೆ ಅವರ ಪ್ರೇರಣೆಗಳೇ ನಮ್ಮವೂ ಎಂದು ನಾವೀನ್ಯತೆಗಾಗಿ ಮಾತ್ರ ಭಾವಿಸಿದರೆ ನಮ್ಮ ಕವಿತೆ ಇಲ್ಲಿಗೆ ಅಸಹಜವಾಗುತ್ತದೆ. ಭಾರತೀಯನ, ಹಾಗೆಯೇ ಕನ್ನಡಿಗನ ಬದುಕಿನ ಪರಿಸರದ ಅನುಭವಕ್ಕೆ, ಸಾಂಸ್ಕೃತಿಕ ವಾತಾವರಣಕ್ಕೆ, ಸಾಮಾಜಿಕ ಪರಿಸ್ಥಿತಿಗೆ ನಾವು ಪ್ರಾಮಾಣಿಕರಾಗಿರಬೇಕಾದದ್ದು ಅತ್ಯಂತ ಮುಖ್ಯವಾದದ್ದು. ಬೇರೆ ಬೇರೆಯ ಪ್ರೇರಣೆಗಳಿಂದ ಪ್ರಚೋದನೆ ಪಡೆಯುವುದು ತಪ್ಪಲ್ಲ ; ಆದರೆ ತನ್ನ ಪರಂಪರೆಯ ಪ್ರಜ್ಞೆಗೆ ಅದು ವಿಮುಖವಾಗಿರಬಾರದು– ಎಂದು ಕಣವಿ ಅಭಿಪ್ರಾಯ ಪಡುತ್ತಾರೆ.

ಸಮನ್ವಯ, ಕಣವಿಯವರಿಗೆ ಅತ್ಯಂತ ಇಷ್ಟವಾದ ನಿಲುವೆಂದು ತೋರುತ್ತದೆ. ಈ ಸಮನ್ವಯವು ವಿಚಾರಗಳಲ್ಲಿ ಮಾತ್ರವಲ್ಲದೆ ಒಳ–ಹೊರಗೆ, ನುಡಿ–ನಡೆಗಳಲ್ಲಿ ಮತ್ತು ವ್ಯಕ್ತಿ–ಸಮಷ್ಟಿಗಳ ನಡುವೆ ಒಡಮೂಡಬೇಕೆನ್ನುವುದು ಅವರ ವಿಚಾರವಾಗಿರಬಹುದು. ಆಗ ಸತ್ಯವೆಂಬುದು ಅಂಗೈಯ ನೆಲ್ಲಿಯ ಹಾಗೆ ಅನುಭವಕ್ಕೆ ಬರಬಹುದು. ಸದ್ದುಗದ್ದಲವಿಲ್ಲದೆ ತಮ್ಮ ಕಾವ್ಯ ಬರವಣಿಗೆಯನ್ನು ಮುಂದುವರಿಸಿಕೊಂಡು ಹೋಗುತ್ತಿರುವ ಚೆನ್ನವೀರ ಕಣವಿಯವರನ್ನು ಕನ್ನಡ ಕಾವ್ಯದ ಬದಲಾಗುತ್ತಿರುವ ಸಂವೇದನೆಗಳ ಒಂದು ಉತ್ತಮ ಉದಾಹರಣೆ ಎಂದು ಹೇಳಬಹುದು. ನಿನ್ನೆಗಾಗಿ ಪಶ್ಚಾತ್ತಾಪ ಪಡದೆ ಮತ್ತು ನಾಳೆಗೆ ಬೆದರದೆ ಇಂದನ್ನು ಎದುರಿಸುತ್ತಿರುವ ಕಣವಿ ಬದುಕು ಹಾಗೂ ಕಾವ್ಯಗಳೆರಡೂ ಅವರ ಓದುಗರಿಗೆ ಪ್ರಿಯವಾಗಿದ್ದಲ್ಲಿ ಅದು ಕನ್ನಡದ ಅತ್ಯಂತ ಮನೋಜ್ಞ ಪ್ರಸಂಗಗಳಲ್ಲಿ ಒಂದಾಗುತ್ತದೆ.

ಕೆ. ರಾಘವೇಂದ್ರರಾವ್

# ಕಣವಿಯವರ ಜೊತೆ ಅನುವಾದಕನಾಗಿ ಕೆಲವು ಅನಿಸಿಕೆಗಳು

ಸಾಹಿತ್ಯ, ಪ್ರಾಯಶಃ, ಒಂದು ವಿಶಿಷ್ಟ ಹಾಗೂ ನಿಯಮಿತ ಪರಂಪರೆಯಲ್ಲಿ ಉದಿಸುತ್ತದೆನ್ನುವುದರಲ್ಲಿ ಸಂಶಯವಿಲ್ಲ. ಅಂಥ ಪರಂಪರೆ ಒಂದು ರಾಷ್ಟ್ರ–ರಾಜ್ಯದೊಳಗಿನ ಭಾಷೆಯಿಂದ ಅಥವಾ ಚಿಕ್ಕ ರಾಷ್ಟ್ರ—ರಾಜ್ಯದ ಭಾಷೆಯಿಂದ ರೂಪಗೊಂಡಿರಬಹುದು. ಆದರೆ ಇಂಥ ಸಂಕೋಚಿಸುವ ಪರಿಸರದಲ್ಲಿ ಜನಿಸಿದ್ದರೂ ಆ ಚೌಕಟ್ಟನ್ನು ಮೀರಿ ಅದರಾಚೆಗಿನ ಜನತೆಯನ್ನು ತಲುಪಲು ಅದು ಸದಾವಕಾಲ ಹವಣಿಸುತ್ತದೆ. ವಿಶ್ವಮಾನವ ಪ್ರಜ್ಞೆ ತನ್ನ ಆಸಕ್ತಿಯಾಗಿರುವ ಅದರ ಮೂಲ ಸ್ವಭಾವ, ಜಾಗತಿಕ ಸಂದರ್ಭವನ್ನು ಹಾಗೂ ಜಾಗತಿಕ ಅರ್ಥವನ್ನು ಅರಸಲು ಅದನ್ನು ಪ್ರಚೋದಿಸುತ್ತದೆ. ಆದರೂ ರಾಜಕೀಯವಾಗಿ ಅನೈಕಮತ್ಯವಾಗಿರುವ ಜಗತ್ತಿನಲ್ಲಿ, ನೈಜವಾದ ಜಾಗತಿಕ ಸಾಹಿತ್ಯ ಪರಂಪರೆಯಾಗಲಿ, ಪ್ರಜ್ಞೆಯಾಗಲಿ ಉದಿಸಲಾರವು. ಕಳೆದ ಮೂರು ಶತಮಾನಗಳಲ್ಲಿ ಜಗತ್ತು ರಾಜಕೀಯವಾಗಿ ಹಾಗೂ ಆರ್ಥಿಕವಾಗಿ ಕ್ರಮೇಣ ಹತ್ತಿರ ಹತ್ತಿರ ಬರುತ್ತಲಿದೆ. ಆದರೂ ಇದು ಅಂತಾರಾಷ್ಟ್ರೀಯ ಸಾಂಸ್ಕೃತಿಕ ಪ್ರಾಬಲ್ಯ ಹಾಗೂ ಶೋಷಣೆಗಳನ್ನು ಆಧರಿಸಿ ರೂಪಗೊಂಡ ಐಕ್ಯವಾಗಿದೆ. ರಾಜಕೀಯವಾಗಿ ಹಲವು ಹೋಳಾಗಿರುವ ಈ ವಿಷಮ ಪ್ರಪಂಚದಲ್ಲಿ ನಾವಿಂದು ಬದುಕಿದ್ದು ರಾಜಕೀಯ ದೃಷ್ಟಿಯಿಂದ ಪ್ರಬಲವಾಗಿರುವ ರಾಷ್ಟ್ರಗಳ ಸಾಹಿತ್ಯಕ ಸಂಸ್ಕೃತಿಗಳು ದುರ್ಬಲ ಪರಂಪರೆಗಳ ಮೇಲೆ ತಮ್ಮ ಸಾಹಿತ್ಯಕ ಮೌಲ್ಯಗಳನ್ನೂ, ಪ್ರಕಾರಗಳನ್ನೂ ಹೇರಲು ಸಮರ್ಥವಾಗಿವೆ. ಆದ್ದರಿಂದ ವಿಶ್ವಸಾಹಿತ್ಯಪ್ರಜ್ಞೆಯನ್ನು ಹುಟ್ಟಿಸುವ ಕಾರ್ಯ ಇಬ್ಬಗೆಯಾಗಿರುತ್ತದೆ. ಒಂದು ಬಗೆಯಿಂದ ರಾಜಕೀಯ ಹಂತದಲ್ಲಿ ನಿರ್ವಹಿಸಬೇಕಾದ ರಾಜಕೀಯ ಕಾರ್ಯಭಾರವೆಂದು ಅದನ್ನು ರೂಪಿಸುವದು, ಇನ್ನೊಂದು ಬಗೆಯಿಂದ, ಅದು ಶುದ್ಧ ಸಾಹಿತ್ಯಿಕ ತಂತ್ರೋಪಾಯವನ್ನು ಅಪೇಕ್ಷಿಸುವ ಕೇವಲ ಸಾಹಿತ್ಯಕ ಕರ್ತವ್ಯವೆಂದು ರೂಪಿಸುವದು. ಸಾಹಿತ್ಯಿಕ ತಂತ್ರೋಪಾಯದಲ್ಲಿ ಕೈಕೊಳ್ಳಬೇಕಾದ ಪ್ರಥಮ ಕ್ರಮವೆಂದರೆ, ನಿರ್ಗತಿಕ ಪರಂಪರೆಗಳುಳ್ಳ ಸಾಹಿತ್ಯವನ್ನು ಪ್ರಬಲ ಪರಂಪರೆಗಳ ಎಟುಕಿನಲ್ಲಿರುವ ಭಾಷೆಯಲ್ಲಿ ನಿರೂಪಿಸುವದು. ಇದು ಶೋಷಕ ಹಾಗೂ ಶೋಷಿತರ ನಡುವಿನ ಪೂರ್ವಭಾವೀ ಹಾಗೂ ಕನಿಷ್ಠ ಸ್ವರೂಪದ ಪ್ರತಿಭಟನೆಯಾಗಿದ್ದು, ಎಲ್ಲರೂ ಒಪ್ಪಿಕೊಂಡಿರುವಂತೆ ಇದು ಅಸಮಾನವಾದ ಸಾಂಸ್ಕೃತಿಕ ಸ್ಪರ್ಧೆಯಾಗಿದೆ. ಆದರೆ ಇದು ಮೊದಲ ಹೆಜ್ಜೆ. ಅನಂತರ, ಈಗಿರುವ ಅಂತಾರಾಷ್ಟ್ರೀಯ ಸಾಂಸ್ಕೃತಿಕ ವಾದಸ್ಥಾನಗಳೆಂದು ಹೇಳಿಕೊಳ್ಳು

ತ್ರಿರೀವ ವೇದಿಕೆಗಳಲ್ಲಿ ಹೋರಾಟವನ್ನು ಆರಂಭಿಸಿ, ಅವು ನಿಜವಾಗಿಯೂ ಅಂತಾರಾಷ್ಟ್ರೀಯವಾಗುವಂತೆ ಒತ್ತಾಯಪಡಿಸಬೇಕು. ಅಲ್ಲದೆ, ಶೋಷಿತರ ಸಂಘಟನಾತ್ಮಕ ಯೋಜನೆಗಳನ್ನು ನಿರ್ಮಿಸಿ ಅವುಗಳ ಮುಖಾಂತರ ಶೋಷಕರನ್ನು ಎದುರಿಸಬೇಕು. ಇಂಥ ಹೋರಾಟಗಳ ಪರಿಣಾಮವಾಗಿ ವಿಶ್ವಸಾಹಿತ್ಯಪ್ರಜ್ಞೆ ಉದಿಸಬಹುದು. ಅದಕ್ಕೆ ಕೈಕೊಳ್ಳಬೇಕಾದ ಪ್ರಥಮ ಕ್ರಮವೆಂದರೆ ಶೋಷಿತರ ಸಾಹಿತ್ಯ ಕೃತಿಗಳನ್ನು ಶೋಷಕರ ಭಾಷೆಯಲ್ಲಿ ಅನುವಾದಿಸುವದೇ ಆಗಿದೆ. ಕ್ಯಾಲಿಬನ್ ಶೋಷಿತನಾಗಿ ಪ್ರೊಸ್ಪೆರೋನ ಭಾಷೆಯನ್ನು ಕಲಿತ. ಆದರೆ ಅದನ್ನು ಪ್ರೊಸ್ಪೆರೋನ ವಿರುದ್ಧ ಬಳಸುವದೆಂತು ಎಂಬುದನ್ನು ಅರಿತಿದ್ದರೆ ಮಾತ್ರ ಹಾಗೆ ಬಳಸಬಲ್ಲ. ಇಂಥ ಮಾಡಬೇಕಾದ ಕೆಲಸದ ಹಿನ್ನೆಲೆಯಲ್ಲಿ ನಾನು ಚೆನ್ನವೀರ ಕಣವಿಯವರ ಗುಣವಿಮರ್ಶೆಯನ್ನು ಸ್ವಲ್ಪದರಲ್ಲಿ ಮಾಡ ಬಯಸಿದ್ದೇನೆ.

ಈ ಕ್ಷೇತ್ರದಲ್ಲಿ ಕಣವಿಯವರ ಕೊಡುಗೆ ಗಣನೀಯವಾಗಿದೆ ಎನ್ನುವದನ್ನು ಅನೇಕರು ಅರಿತಿಲ್ಲ. (ಅವರೆಂತು ಅರಿಯಬಲ್ಲರು ?) ಅದು ಸಕಲ ಸಾಹಿತ್ಯಪ್ರಕಾರಗಳಲ್ಲಿ ಅನುವಾದಿಸಲು ಅತ್ಯಂತ ಅಸಾಧ್ಯವೆನಿಸಿದ ಕಾವ್ಯಕ್ಕೆ ಸಂಬಂಧಿಸಿದೆ; ಆ ಅರ್ಥದಲ್ಲಿ ಕಣವಿಯವರ ಕೊಡುಗೆ ಇನ್ನೂ ಗರ್ವನಾರ್ಹವಾಗಿದೆ. ನನಗೆ ಈ ಕೆಲಸದ ವೈಯಕ್ತಿಕ ಪರಿಚಯವಿರುವ ಕಾರಣ, ನನ್ನ ತಿಳಿವಳಿಕೆಯಲ್ಲಿ ಇತರರೂ ಪಾಲುಗಾರರಾಗಲು ಅವಕಾಶ ದೊರೆಯಲಿ ಎಂದು ಆಶಿಸಿದ್ದೇನೆ. ಕಣವಿಯವರು ನಿರ್ವಹಿಸುವ ಪಾತ್ರವನ್ನು ಅರಿಯಬೇಕಾದರೆ, ಪ್ರಥಮತಃ ಒಳ್ಳೆಯ ಅನುವಾದವೆಂದರೇನು ಎನ್ನುವ ಪ್ರಶ್ನೆಯನ್ನು ಕೇಳಬೇಕು. ಅದು ಬಹಳಷ್ಟು ಪ್ರಮಾಣದಲ್ಲಿ ಕೇವಲ ಭಾಷೆಗೆ ಸಂಬಂಧಿಸಿದ ಪ್ರಶ್ನೆ ಎಂದು ಸರ್ವಸಾಮಾನ್ಯ ಕಲ್ಪನೆಯಾಗಿದೆ. ಈ ತಪ್ಪು ಕಲ್ಪನೆಯಿಂದ ಮೊದಲು ನಾವು ಮುಕ್ತರಾಗಬೇಕು. ಆರಂಭದಲ್ಲಿ ಅದು ಭಾಷೆಯ ವಿಧಾನ ಎಂಬುದು ನಿಜ. ಆದರೆ ಅದು ಮಾನವ ಪ್ರಜ್ಞೆಯ ತಿರುಳನ್ನು ಒಂದು ಭಾಷೆಯ ಸಾಂಸ್ಕೃತಿಕ ಚೌಕಟ್ಟಿನಿಂದ ಇನ್ನೊಂದರಲ್ಲಿ ಪುನಃ ರೂಪಿಸುವ ಒಂದು ಪ್ರಕ್ರಿಯೆಯಾಗಿದೆ. ಕೇವಲ ಶಬ್ದಗಳಷ್ಟೆ ಅಲ್ಲ, ಆದರೆ ಅವು ಹೇಳುವದೇನು ? ಅವುಗಳ ಅರ್ಥವೇನು ?—ಹೀಗೆ ಶಬ್ದಾರ್ಥನಿರ್ವಚನದ ಒಟ್ಟು ಶ್ರೇಣಿಯೆ ನಿರ್ಣಯಿಸಬೇಕಾದ ಪ್ರಶ್ನೆಯಾಗಿರುತ್ತದೆ. ವಿಶೇಷವಾಗಿ ಕಾವ್ಯದ ಅನುವಾದದಲ್ಲಿಯಂತೂ ಇದು ನಿರ್ಣಾಯಕ ಪ್ರಶ್ನೆಯಾಗಿರುತ್ತದೆ. ಕನ್ನಡ ಕಾವ್ಯವನ್ನು ಇಂಗ್ಲೀಷಿಗೆ ಅನುವಾದಿಸುವ ನನ್ನ ಒಂದು ಹವ್ಯಾಸದಲ್ಲಿ ಈ ಸಂಗತಿಯನ್ನು ನಾನೇ ಬಹಳಷ್ಟು ತಡವಾಗಿ ಅರಿತುಕೊಂಡೆ, ನನ್ನ ಸ್ನೇಹಿತರಾದ ಪಿ.ಲಾಲರು ಈ ವಿಧಾನವನ್ನು ವರ್ಣಿಸಲು 'ಪರಭಾಷೆಯಲ್ಲಿ ಪುನಃ ಸೃಷ್ಟಿ' ("transcreation") ಎನ್ನುವ ಪದವನ್ನು ಬಳಸುತ್ತಾರೆ. ಅನುವಾದಕನ ಸ್ವಾತಂತ್ರ್ಯ ಮೂಲ ಕರ್ತೃವಿನ ಸ್ವಾತಂತ್ರ್ಯಕ್ಕೆ ಸಮಾನ ದರ್ಜೆಯಲ್ಲಿದೆ ಎಂದು ಈ ಪದ ಸೂಚಿಸಬಹುದಾದ ಶಂಕೆ ಇರುವುದರಿಂದ, ಅದು ತಪ್ಪು ಅಭಿಪ್ರಾಯಕ್ಕೆ ಅಸ್ಪದವೀಯ ಬಹುದು ಎಂದು ನನ್ನ ಭೀತಿ. ಈ ನಿಲುವೇಯ ತಾರ್ಕಿಕ ಫಲಶ್ರುತಿ ಪ್ರತಿಭಾಸೃಷ್ಟಿಯೆ ವಿನಾ ಅನುವಾದವಲ್ಲ. ಇದರ ಪರಿಣಾಮವೇದರೆ,

ಎಡ್ವರ್ಡ್ ಫಿಟ್‌ಜೆರಾಲ್ಡ್ ಓಮರ ಖಯ್ಯಾಮನನ್ನು ನಿರೂಪಿಸಿದ ರೀತಿಯಂಥದ್ದು ಯಾವುದೋ ಒಂದು ನಮಗೆ ದೊರೆಯುವದೇ ವಿನಾ ಪ್ರತ್ಯಕ್ಷ ಓಮರಖಯಾಮನೆ ಅಲ್ಲ. ಎಲ್ಲ ಬಗೆಯ ಅನುವಾದ ಕಾರ್ಯದಲ್ಲೂ ಎದುರಾಗುವ ಸಮಸ್ಯೆ ಇದೇ.

1959ರಲ್ಲಿ ನಾನು ಪ್ರಥಮಸಲ ಕಣವಿಯವರನ್ನು ಕಂಡಾಗ ಈ ಸಮಸ್ಯೆ ನನ್ನ ಅರಿವಿಗೆ ಬಂದಿತು. ಆಧುನಿಕ ಕನ್ನಡ ಕವನಗಳ ಇಂಗ್ಲೀಷ ಅನುವಾದವನ್ನು ಸಂಗ್ರಹ ರೂಪದಲ್ಲಿ ತರಬೇಕೆಂದು ನಾನು ಆಗ ಯೋಚಿಸುತ್ತಿದ್ದೆ. ಆ ಸಾಹಿತ್ಯಿಕ ಅತಿ ಘೋರತೆ— ಅಂದರೆ ಇಂಗ್ಲೀಷದಲ್ಲಿ ಭಾರತೀಯ ಕಾವ್ಯ—ಅದರ ಅಂಶವನ್ನು ಸೃಷ್ಟಿಸುವ ಪ್ರಯತ್ನ ಮಾಡಿದ ಕಿಂಚಿತ್ ಅನುಭವ ಇದ್ದುದರಿಂದ ನನಗೂ ಇಂಗ್ಲೀಷ್ ತಕ್ಕ ಮಟ್ಟಿಗಾದರೂ ಚೆನ್ನಾಗಿ ಬರುತ್ತದೆಂದು ನನ್ನ ಎಣಿಕೆ. ಕನ್ನಡವಂತೂ ನನ್ನ ರಕ್ತನಾಳದಲ್ಲಿ, ಅಸ್ಥಿಗಳಲ್ಲಿ ಹರಿದಿದೆ; ನಾನು ಕನಸು ಕಾಣುವದೂ ಕನ್ನಡದಲ್ಲಿಯೆ. ಆದ್ದರಿಂದ ನನ್ನ ಕಾರ್ಯ ಕ್ಷೇತ್ರಕ್ಕೆ ಇದಿಷ್ಟು ಸಾಕೆಂದು ನಾನು ಬಗೆದಿದ್ದೆ. ಆದರೆ ಕಣವಿಯವರ ಸಂಪರ್ಕದಲ್ಲಿ ಬಂದು ಅವರೊಡನೆ ಜೊತೆಗೂಡಿ ಕಾರ್ಯಗೈಯ್ಯುತ್ತಿರುವಾಗ ನಾನು ಈ ಮೊದಲು ಪಡೆದುಕೊಂಡದ್ದು ತೀರ ನಿಕೃಷ್ಟವೆಂಬುದನ್ನು ಮನಗಂಡೆ. ಅನುವಾದಕನು, ಬಳಸ ಲಾಗುವ ಶಬ್ದಗಳ ಇಡಿಯ ಅರ್ಥವಲಯವನ್ನೆ ಅರಿತಿರಬೇಕೆಂಬುದು ನನಗೆ ಹೊಳೆಯ ತೊಡಗಿತು. ಇದನ್ನು ಕಣವಿಯವರು ಆಳವಾದ ಆದರೂ ಭಾರವೆನಿಸದ ತಮ್ಮ ವಿಶಿಷ್ಟ ಪಾಂಡಿತ್ಯದಿಂದ ನನಗೆ ತೋರಿಸಿಕೊಡಲು ಸಮರ್ಥರಾದರು. ಇದನ್ನೆ ನಾನು ಅವರ ಒಡನಾಟದಿಂದ ಪ್ರಥಮವಾಗಿ ಕಂಡೆನು. ಈ ವಿಷಯದಲ್ಲಿ ನನ್ನ ಅಜ್ಞಾನದ ಅರಿವು ನನಗೆ ಹುಟ್ಟುವಂತೆ ಅವರು ಮಾಡಿದರು. ಕಣವಿಯವರು ಕನ್ನಡದಲ್ಲಿ ಪ್ರಥಮ ದರ್ಜೆಯ ಪಂಡಿತರು. ಆದರೆ ಪಾಂಡಿತ್ಯಪೂರ್ಣಕೃತಿಗಳನ್ನು ಸಾಕಷ್ಟು ಪ್ರಮಾಣದಲ್ಲಿ ಅವರು ರಚಿಸಿಲ್ಲವೆಂಬುದು ಕೊಂಚ ವಿಷಾದನೀಯವಾದರೂ, ಅವರ ಇಂಗ್ಲೀಷ್ ಭಾಷಾ ಪರಿ ಜ್ಞಾನ, ವಿಶೇಷವಾಗಿ ಕವಿತೆಯ ಅರ್ಥಗ್ರಹಣ ಮಾಡಲರ್ಹವಾದ ಅವರ ಸ್ಪರ್ಶಶಕ್ತಿ ಬಹುಮಟ್ಟಿಗೆ ಸಹಜ ಪ್ರವೃತ್ತಿಯಾಗಿಯೇ ಅವರಿಗೆ ಬಂದಿದೆ. ವಸ್ತುತಃ ನನ್ನ ಎಲ್ಲ ಅನು ವಾದಗಳು ನನ್ನೊಬ್ಬನ ಹೆಸರಿನಲ್ಲಿಯೆ ಪ್ರಕಟವಾಗಿವೆ. ಆದರೆ ಅವು ಒಬ್ಬನವಲ್ಲ, ಉಭ ಯತರ ಕೃತಿಗಳು ಎಂದು ಹೇಳಿಕೊಳ್ಳಲಿಕ್ಕೆ ಅವುಗಳಿಗೆ ಅಷ್ಟೇ ಬಾಧ್ಯತೆಯಿದೆ. ಇಂಗ್ಲೀಷ್ ಕಾವ್ಯದ ವಿಷಯದಲ್ಲಿ ಕಣವಿಯವರಿಗಿದ್ದ ಹಿನ್ನೆಲೆ ಸೀಮಿತವಾಗಿದ್ದರೂ ಅದನ್ನು ಮೀರಲು ಇಂಗ್ಲೀಷ್ ಮಹಾಕೃತಿಗಳಲ್ಲಿ ಅವರಿಗಿರುವ ತಳಹದಿ ಸಾಕಷ್ಟು ಭದ್ರವಾಗಿದೆ. ಆದ್ದರಿಂದ ಅನುವಾದಕ್ಕೆ ಅವರು ಎರಡು ರೀತಿಯಿಂದ ತಮ್ಮ ಕಾಣಿಕೆಯನ್ನು ಸಲ್ಲಿ ಸಿದ್ದಾರೆ, ಕನ್ನಡ ಭಾಷಾ ಹಾಗೂ ಸಾಹಿತ್ಯದ ಮೇಲೆ ಅವರಿಗಿರುವ ಸೂಕ್ಷ್ಮ ಹಾಗೂ ಖಚಿತವಾದ ಹಿಡಿತ, ಮೂಲವನ್ನು ಅರ್ಥೈಸುವಾಗ ಭಾಷೆ ಹಾಗೂ ಸಾಹಿತ್ಯದ ದೃಷ್ಟಿ ಯಿಂದ ಆಗಬಹುದಾದ ದೋಷಗಳು ಸಂಬಂಧಿಸದಂತೆ ನೋಡಿಕೊಂಡಿತು. ಎರಡು, ಅವರಿ ಗಿರುವ ಇಂಗ್ಲಿಷ್ ಭಾಷೆಯ ಪ್ರಜ್ಞೆಯ ಮೂಲಕ ಆ ಭಾಷೆಯಲ್ಲಿಯ ಸಮಾನಾರ್ಥದ ಪದಗಳನ್ನು ಸರಿಯಾಗಿ ತಿಳಿದುಕೊಳ್ಳಲು ಸಾಧ್ಯವಾಗಿದೆ. –ಕನಿಷ್ಠಪಕ್ಷ ಯಾವ ಪದ ಸರಿ

ಯಲ್ಲವೆಂಬುದನ್ನಾದರೂ ಹೇಳುತ್ತಿದ್ದರು—ಅವರ ಈ ಕಾರ್ಯ ಚಹಾದ ರುಚಿ ನೋಡುವವನ ಕಾರ್ಯದಂತಿತ್ತು.

ಅನುವಾದಕ ಅಥವಾ ಕನಿಷ್ಠಪಕ್ಷ ಅನುವಾದ ಕ್ರಿಯೆಯಲ್ಲಿ ತೊಡಗಿರುವ ಕಣವಿಯವರು, ಜಾಗತಿಕ ಸಾಹಿತ್ಯಪ್ರಜ್ಞೆಗೆ ಸಲ್ಲಿಸುವ ಕೊಡುಗೆಯ ದೃಷ್ಟಿಯಿಂದ, ತುಂಬ ಮಹತ್ವದ ವ್ಯಕ್ತಿಯಾಗಿ ಪರಿಣಮಿಸಬಹುದು. ಅವರಲ್ಲಿ ಅಸಾಮಾನ್ಯವಾಗಿ ಸಂಗಮಿಸಿದ —ಕನ್ನಡದಲ್ಲಿ ಪಾಂಡಿತ್ಯ ಹಾಗೂ ಸೃಜನಶೀಲತೆ ಮತ್ತು ಇಂಗ್ಲೀಷ್ ಭಾಷೆಯ ವಿಷಯದಲ್ಲಿ ಸಂವೇದನಾಶಕ್ತಿ—ಇವು ಕನ್ನಡ ಸೃಜನಶೀಲ ಬರಹವನ್ನು ಇಂಗ್ಲೀಷಿಗೆ ಅನುವಾದಿಸುವ ಯಾವುದೇ ಪ್ರಯತ್ನದಲ್ಲಿ ಪ್ರಮುಖ ಪಾಲುದಾರನಾಗಬಲ್ಲ ಶಕ್ತಿಯನ್ನು ಅವರಿಗೆ ನೀಡುತ್ತವೆ. ಅವರ ಪರಿಚಯದಿಂದ ನನ್ನ ದೈವ ತೆರೆಯಿತು, ನನ್ನ ಸ್ಥಿತಿಯಲ್ಲಿರುವ ಅನೇಕರು ತಮ್ಮ ತಮ್ಮ ಕಣವಿಯವರನ್ನು ಪಡೆದರೆ ತಮಗೆ ತಾವೇ ಕೃತಜ್ಞರಾಗುತ್ತಾರೆ. ಕಣವಿಯವರು ತಂತ್ರ ನೈಪುಣ್ಯದ ದೃಷ್ಟಿಯಿಂದಲೂ ಸಿದ್ಧವ್ಯಕ್ತಿ. ಈ ವಿಷಯದಲ್ಲಿ ಅವರಂಥವರು ಅನೇಕರಿರಬಹುದು. ಆದರೆ ಸ್ವಂತ ಹಠ ಸಾಧಿಸದೆ ಅತ್ಯಂತ ಪ್ರಭಾವಯುತ ಕೊಡುಗೆಯನ್ನು ಸಲ್ಲಿಸಬಲ್ಲ ಸ್ವಭಾವ ಹಾಗೂ ವ್ಯಕ್ತಿತ್ವವನ್ನು ಪಡೆದುಕೊಂಡುದು ಅವರ ವೈಶಿಷ್ಟ್ಯವಾಗಿದೆ. ಕನ್ನಡ ಕಾವ್ಯ ರಂಗದಲ್ಲಿ ಅವರು ಪಡೆದ ಸ್ಥಾನದ—ಯಾವ ಅರ್ಥದಲ್ಲಿಯಾದರೂ—ಮೌಲ್ಯವನ್ನು ನಿರ್ಧರಿಸಲು ನಾನು ಸಮರ್ಥನಲ್ಲ. ಆದರೆ ಅವರ ಉಭಯ ಭಾಷಾ ಸಾಮರ್ಥ್ಯ, ಅಂದರೆ, ನೈಜವಾದ ಉಭಯ ಸಾಹಿತ್ಯ ಸಂವೇದನಾಸೂಕ್ಷ್ಮತೆ,—ಅದೊಂದು ದೊಡ್ಡ ಸೊತ್ತು ಎಂದು ಹೇಳಲು ನನಗಾವ ಸಂದೇಹವೂ ಇಲ್ಲ. ಕನ್ನಡ ಕೃತಿಗಳನ್ನು ಇಂಗ್ಲೀಷಿಗೆ ಅನುವಾದಿಸುವ ನಮ್ಮ ಪ್ರಯತ್ನಗಳಲ್ಲಿ ನಾವಿದನ್ನು ಹೆಚ್ಚು ಹೆಚ್ಚಾಗಿ ಬಳಸಿಕೊಳ್ಳಬೇಕು. ಇಲ್ಲಿಯವರೆಗೆ ಅವರಲ್ಲಿರುವ ಈ ಸುಪ್ತ ಶಕ್ತಿಯನ್ನು ನಾವು ಬಹಳಷ್ಟು ಉಪಯೋಗಿಸಿಕೊಂಡಿಲ್ಲ. ನಾನು ಇದುವರೆಗೆ ಮಾಡಿದ್ದಾದರೂ ಮೇಲೆ ಮೇಲೆ ಕೆದಕಿ ನೋಡಿದ್ದಷ್ಟೆ. ಸಾಹಿತ್ಯಿಕ ಹಾಗೂ ವಿಮರ್ಶಾತ್ಮಕ ಬರವಣಿಗೆಗಳಲ್ಲಿ ಈ ಬಗೆಯ ಶಕ್ತಿ ಸಾಮರ್ಥ್ಯಕ್ಕೆ ಹಾಗೂ ಸಿದ್ಧಿಗೆ ಪ್ರಚಾರ ಒದಗಿರುವದು ತೀರ ಅಪರೂಪ, ಏಕೆಂದರೆ ಸೃಜನಾತ್ಮಕ ಬರಹಗಾರರು ಹಾಗೂ ವಿಮರ್ಶಕರು (ಸೃಜನಾತ್ಮಕರಾಗಿರಲಿ ಅಥವಾ ಆಗದಿರಲಿ) ತಮ್ಮ ಯೋಗ್ಯತೆಯ ಮರ್ಯಾದೆಯನ್ನು ಮೀರಿ ಪ್ರಚಾರಕ್ಕೆ ಬರುವ ತಾರೆಗಳು. ಕ್ರಿಕೆಟ್ ಆಟದಲ್ಲಿ ಸಂಭವಿಸುವಂತೆ, ಸಮರ್ಥನಾದ ಕ್ಷೇತ್ರ ರಕ್ಷಕನನ್ನು, ಓಟಗಳಿಸುವವರ ಹಾಗೂ ವಿಕೆಟ್‌ಗಳಿಸುವವರ ಗದ್ದಲದ ಸಿದ್ಧಿಯಲ್ಲಿ ವಿರಳವಾಗಿ ಗಮನಿಸಲಾಗುತ್ತಿದೆ. ಬ್ಯಾಟ್ಸಮನ್ ಕಣವಿ ಪ್ರಖ್ಯಾತರೇ, ಪ್ರಾಯಶಃ ಆ ನೈಪುಣ್ಯಕ್ಕೆ ಅವರಿಗೆ ಸಲ್ಲಬೇಕಾದುದು ಸುದಿದೆ. ಈ ಸಂದರ್ಭದಲ್ಲಿ ನಾನು ಅಪೇಕ್ಷಿಸುವದು ಇಷ್ಟು ಮಾತ್ರ : ಕ್ಷೇತ್ರರಕ್ಷಕ ಕಣವಿಯವರ ಸಾಮರ್ಥ್ಯವನ್ನು ಸಂಪೂರ್ಣವಾಗಿ ಬೆಲೆಗಟ್ಟದಿದ್ದರೂ ಕನಿಷ್ಠಪಕ್ಷ ಅದನ್ನು ಗಮನಿಸಿದರೂ ಸಾಕು.

ಬಿ. ಎಚ್. ಶ್ರೀಧರ

# ಕಣವಿಯವರ ಜ್ಞಾನಪ್ರಸಾರ ಕಾರ್ಯದಲ್ಲಿ ರುಚಿಭೇದದ ಅರ್ಥ ಮತ್ತು ವ್ಯಾಪ್ತಿ

ನಾನಾತ್ವದಿಂದ ತುಂಬಿದ ದ್ರವ್ಯ, ಗುಣ, ಕರ್ಮಗಳುಳ್ಳ ಪ್ರಪಂಚದ ವ್ಯವಹಾರದಲ್ಲಿ ಕಾವ್ಯಕರ್ಮವೊಂದು. ಅದರ ಪ್ರಾತಿಭಾಸಿಕಾಂಶವು ವ್ಯವಹಾರ ಮೂಲ. ವ್ಯವಹಾರವು 'ಶಾಶ್ವತ ಅಥವಾ ಸಾಮಾನ್ಯ'' ಧರ್ಮಪಂಚಕದ ಆಧಾರವುಳ್ಳದ್ದು, ಗೀತೋಕ್ತಿಹಾಗೂವ ಮನಃ ಶಾಸ್ತ್ರಗಳಂತೆ ಗುಣತ್ರಯವು ಆನುವಂಶಿಕ ಮತ್ತು ಆವರಣಜನ್ಯ (Natural and Nurtural). ಅಭಿರುಚಿಯು ಗುಣತ್ರಯದಿಂದ ಉಪಾಹಿತ. ಸತ್ವ, ರಜಸ್, ತಮಸ್ಸುಗಳು ಸಾರ್ಥಕವಾದ ಸುಪ್ರಸಿದ್ಧ ಗುಣವಿಶೇಷಗಳು. ಅವುಗಳಲ್ಲಿ ಯಾವುದು ಯಾವ ಅವಧಿಯಲ್ಲಿ ಯಾವ ಕಲೆಗಾರನ ಕಲಾಪ್ರವೃತ್ತಿಯ ಮೇಲೆ ಪ್ರಭುತ್ವವನ್ನಿಟ್ಟು ಕೊಂಡಿರುವುದೋ ಅದು ಆಗ ಅವನ ಕೃತಿಯ ರಸಾಭಿರುಚಿಗೆ ಪ್ರಧಾನ ಪ್ರೇರಕವಾಗುತ್ತದೆ. ಈ ನಿಯಮವು ವಿಮರ್ಶಶಾಸ್ತ್ರ ಲೇಖಕನಿಗೂ ಅನ್ವಯಿಸುತ್ತದೆ; ವ್ಯಾವಹಾರಿಕ ಸಮಾರಂಭಗಳ ವಸ್ತು, ಪಾತ್ರ, ಸಂನಿವೇಶ, ಸಂವಿಧಾನ, ಸಮಯಗಳಿಗೂ ಅನ್ವಯಿಸುತ್ತದೆ.

ವ್ಯಾಪಕಾರ್ಥದ ರಸವಿಂದು ಭಾವಗಳನ್ನೊಳಗೊಂಡ Aesthetic appeal ಸೌಂದರ್ಯಭಾವ ಪ್ರೇರಕ ಕಾವ್ಯಾರ್ಥ ಅಥವಾ ಕಲಾರ್ಥ ("ಸಾಹಿತ್ಯ ದರ್ಪಣ" ವನ್ನು ನೋಡಿರಿ). ಕಲೆಗಾರ, ಕಾವ್ಯಕಾರ, ಕುಂಭಕಾರ, ವಿಮರ್ಶಕಾರ ಎಲ್ಲರಲ್ಲೂ Self-preservation ಸ್ವದೇಹೇಂದ್ರಿಯರಕ್ಷಣ ಮತ್ತು Gregarious ಸ್ವಜನಲೀನತೆ ಎಂಬ ಮೂಲ ಪ್ರವೃತ್ತಿಗಳು ಇರುತ್ತವೆ. ಇವುಗಳ ಭಿನ್ನ ಭಿನ್ನ ಬಲಪ್ರದರ್ಶನಗಳು ವ್ಯಕ್ತಿಯ ಭಿನ್ನ ಭಿನ್ನ (ಅಧಮೋತ್ತಮ) ಚಾರಿತ್ರ ಮಟ್ಟಗಳನ್ನು ನಿರ್ಧರಿಸುತ್ತವೆ. ಕವಿತ್ವ ವಿಮರ್ಶಕಾದಿ ಧರ್ಮಗಳೂ ಷಡ್ರಿಪುಗಳಿಂದ ತುಂಬಿದ ಹಾಗೂ ತುಂಬಿರದ ಭಾವಗಳೂ ಸೂಚೀಶತಪತ್ರ ನ್ಯಾಯದಂತೆ ಒಬ್ಬನೇ ಒಬ್ಬ ಮನುಷ್ಯನಲ್ಲಿ ಒಂದು ಅಥವಾ ಹಲವು ಸಂದರ್ಭಗಳಲ್ಲಿ ಪ್ರಭುತ್ವವನ್ನು ಚಲಾಯಿಸುತ್ತಿರಬಹುದು.

ಕ್ಷಣಿಕತೆಯ ಅತಿಯು ವಸ್ತುಗಳ ಅಭಿಜ್ಞಾನಕ್ಕೆ (Recognition) ವಿಘ್ನ ಉಂಟು ಮಾಡುವಂತೆ ವ್ಯಕ್ತಿಯ ಅಭಿರುಚಿಯ ಚಾಂಚಲ್ಯದ ಅಸ್ವಾಭಾವಿಕ ವೇಗವು ಅವನ (ವಿಮರ್ಶಕತ್ವದ ಮಾತರಲಿ) ರಸಿಕತೆಯ ಸಾತತ್ಯವನ್ನು ಗುರುತಿಸುವುದಕ್ಕೇ ವಿಘ್ನಕರವಾಗುತ್ತದೆ. Food value, taste value ಆಹಾರದ ಪೌಷ್ಟಿಕತ್ವದ ಮೌಲ್ಯ ಮತ್ತು ನಾಲಿಗೆ ಗುರುತಿಸುವ ರುಚಿ ಮೌಲ್ಯಗಳೆರಡಕ್ಕೂ ಪಂಚಮಹಾಧರ್ಮಗಳ (ಪಂಚಶೀಲಗಳ) ನಿಯಾಮಕತೆ ಇರುವುದನ್ನು ಮಹಾತ್ಮ ಗಾಂಧಿ ಸ್ಪಷ್ಟವಾಗಿ ಸೂಚಿಸಿದ್ದಾರೆ. ನಮ್ಮ

ದೇಶದ ನಾಗರಿಕತೆಯ ಸಾತತ್ಯದ (Continuity) ರಹಸ್ಯವಿರುವುದೂ ಇಲ್ಲೇ. ನಮ್ಮ ದೇಶದ ಸಾಂಸ್ಕೃತಿಕ ಪ್ರಭುತ್ವವು ನಮ್ಮ ಕಾಲದ ಸಾಂಸ್ಕೃತಿಕ Fashions ಚಾಪಲ್ಯ ಪ್ರಕಾರಗಳಿಗಿಂತ ಹೆಚ್ಚಿನದೆಂಬವರ ಮತ ನನ್ನದೂ. ಮಿತ್ರರಾದ 50ರ ಕಣವಿಯವರ ಅಭಿಪ್ರಾಯವು ಇವಕ್ಕಿಂತ ಭಿನ್ನ ಎಂಬುದು ಅವರು ಹಿಂದೊಮ್ಮೆ ಬರೆದ ಗ್ರಂಥವೊಂದರಲ್ಲಿ ಸ್ಪಷ್ಟವಾಗಿದೆ. ಮತ ಸ್ವಾತಂತ್ರ್ಯಕ್ಕೆ ಅವರು ಔಚಿತ್ಯದ ಕಡಿವಾಣವನ್ನು ಇನ್ನು 10 ವರ್ಷಗಳಲ್ಲಿ ಹಾಕಬಲ್ಲವರಾಗುತ್ತಾರೆ ಎಂದು ನನಗೆ ದೃಢಶ್ರದ್ಧೆಯಿದೆ. ಕಾವ್ಯದ ಆತ್ಮವು ರಸ (ವಿಶಾಲಾರ್ಥದಲ್ಲಿ Aesthetic appeal) ವಾದರೆ ರಸದ ಆತ್ಮವು ಔಚಿತ್ಯ (ಕ್ಷೇಮೇಂದ್ರೋಕ್ತ ಔಚಿತ್ಯ), ಶಾಸ್ತ್ರಗ್ರಂಥಗಳ ಔಚಿತ್ಯವಂತೂ "ಮಿಲಿಟರಿ" ಶಿಸ್ತಿನದು.

Man is a social, political, rational etc. animal— ಮಾನವನು ಸಾಮಾಜಿಕ, ರಾಜಕೀಯ, ವೈಚಾರಿಕ ಮುಂತಾದ ಪ್ರಾಣಿ ಎಂಬೆಲ್ಲವುದಕ್ಕಿಂತ ಹೆಚ್ಚಾಗಿ ಮಹಾತ್ಮ ಗಾಂಧಿಯವರೆಂದಂತೆ Moral animal ನೈತಿಕ ಪ್ರಾಣಿ— ಎಂಬುದು ಈ ದೇಶದಲ್ಲಿ ಅಬಾಧಿತ ಸತ್ಯ. ಆಧ್ಯಾತ್ಮಿಕತೆಯಿಂದ ಸಹಿತವಾದ ನೈತಿಕತೆ ಕಾವ್ಯ, ವಿಮರ್ಶೆ ಮುಂತಾದ ಎಲ್ಲ ಕರ್ಮಗಳಿಗೂ ವ್ಯಾಪಕ. ನಮ್ಮ ರಾಜ್ಯನೀತಿ ಇದನ್ನು ಮರೆತುದರಿಂದಲೇ ನಮ್ಮಲ್ಲಿ ಭ್ರಷ್ಟಾಚಾರದ ಹೃದ್ರೋಗ ಉಂಟಾಗಿ ಬಹಳ ಬೇಸರವನ್ನು ತಂದಿತು ಎಂಬುದೀಗ ಜನಜನಿತವಾಗಿದೆ. ಇದನ್ನು ಯಾರಾದರೂ ಪೂರ್ವಾಪರ ವಿವೇಕ ವಿದ್ದವರು ಅಲ್ಲಗಳೆಯ ಬಲ್ಲರೇ ? ವರ್ಣಗಳಿಗೂ ಲಿಂಗಿಗಳಿಗೂ ಸಾಮಾನ್ಯವಾದ ಪಂಚ ಮಹಾಧರ್ಮಗಳೇ Universal moral Principles ಜಾಗತಿಕ ನೀತಿತತ್ವಗಳು. ಚರಾಚರಗಳ ಮೇಲಿನ ವ್ಯಾಪಕವಾದ ದಯೆ (ಪ್ರೀತಿ ಮತ್ತು ಪಾತ್ರಾಪಾತ್ರ ವಿವೇಕ ಭಾರತ ಕೊಟ್ಟಷ್ಟು ಪ್ರಾಧಾನ್ಯವನ್ನು ಇನ್ನಾವ ದೇಶ ಕೊಟ್ಟಿದೆ? ಹೀಗಿರುವಾಗ ಕಾವ್ಯ (Literary composition) ಮತ್ತು ವಿಮರ್ಶ (Literary Criticism) ಶಾಸ್ತ್ರಗಳಲ್ಲಿ ಅಭಿರುಚಿ ಮೌಲ್ಯವಿವೇಚನೆಗೆ ಸತ್ವ, ರಜಸ್, ತಮಸ್ಸುಗಳ ಉತ್ತಮ ಮಧ್ಯಮ ಅಧಮ ಸ್ಥಾನಗಳನ್ನು (Conditions ಶರ್ತಗಳನ್ನು) ಹಾಕದೆ ಇರಲಾದೀತೆ ? ಅವುಗಳಲ್ಲಿ ಪ್ರಥಮವು ಪಂಚಮಹಾಧರ್ಮಗಳನ್ನೊಳಗೊಂಡಿದೆ.

ಜೊತೆಗೆ, ಯಾವ ಮತಸ್ಥೈರ್ಯವೂ ಇಲ್ಲದವರ ವಿಮರ್ಶೆ ಯಾವಾಗಲೂ "ರಾಮಾಯ ಸ್ವಸ್ತಿ, ರಾವಣಾಯ ಸ್ವಸ್ತಿ" ಎಂಬ ನಿರುಪಯೋಗಿ ತತ್ವವನ್ನು ಉಳ್ಳದ್ದಾಗಿರುವುದು ಸಹಜ. ಲೋಕೈಷಣ, ವಿತ್ತೈಷಣ, ಪುತ್ರೈಷಣಗಳಿಗೋಸ್ಕರವಾಗಿ ವಾಗ್ಯಯ ಮಾಡುವುದು ವಿಮರ್ಶ ಶಾಸ್ತ್ರಕ್ಕೆ ಅನ್ಯಾಯ ಬಗೆದಂತೆ. ವೈಜ್ಞಾನಿಕರ ತ್ರಿಕರಣ ಶುದ್ಧವಾದ ಹಾಗೂ ಪ್ರತ್ಯಕ್ಷಾನುಮಾನ ಪ್ರಮಾಣ ಬದ್ಧವಾದ ಸಂಶೋಧನದಿಂಧ ಲಭ್ಯವಾಗುವ ಅಭಿಪ್ರಾಯಗಳಂತೆಯೇ "ಕಾವ್ಯಾನುಶೀಲನಾಭ್ಯಾಸ ವಶದಿಂದ ವಿಶದೀಭೂತ ಮನೋಮುಕುರವುಳ್ಳ" ಹಾಗೂ ದೇಶ ಸಮಯ– ದೇಶಾದರ್ಶಗಳ ಸೂಕ್ಷ್ಮಪ್ರಜ್ಞೆ

ಯುಳ್ಳ ಮತ್ತು ಪೂರ್ವಾಪರಾಭಿಪ್ರಾಯ ವ್ಯಾಹತಿಯುಂಟಾಗದಂತೆ ನೋಡಿಕೊಳ್ಳುವ ವಿದಗ್ಧತೆ (Refer to the meaning of the word as explained by Dr. P.V. Kane)ಯೊಡನೆ ಪ್ರಥಮ ಮಟ್ಟದ ವಿಮರ್ಶಕತ್ವಕ್ಕೆ ನಿಕಷ. ಕಾಳಿದಾಸನು "ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ" ಎಂದು ಹೇಳಿದ ಸಂದರ್ಭವು ಭಾರತದ 50 ಕೋಟಿ ವ್ಯಕ್ತಿಗಳ 50 ಕೋಟಿ ರುಚಿಭೇದಗಳನ್ನು ಮನಸ್ಸಿನಲ್ಲಿಟ್ಟುಕೊಂಡು ಬರೆದದ್ದಲ್ಲ, ಸಾಹಿತ್ಯಾದಿ (ಭಾರತೀ, ಕೈಶಿಕೀ ಸಾತ್ವತೀ ಮತ್ತು ಆರಭಟೀ ಎಂಬ ವೃತ್ತಿ ಚತುಷ್ಟಯ) ಕಲೆಗಳ ಸಂಮ್ಮೇಳವು ನಾಟಕ (DRAMA) ದಲ್ಲಿ ಇರುವುದರಿಂದ ಅವುಗಳಲ್ಲಿ ಒಂದೊಂದಕ್ಕೇ ಹೆಚ್ಚು ಹೆಚ್ಚು ಪ್ರಾಧಾನ್ಯ ಕೊಡುವವರಿದ್ದರೆ ಅವರೆಲ್ಲರಿಗೂ ಆಯಾ ತೃಪ್ತಿಯನ್ನು (ಅವೆಲ್ಲವನ್ನೂ ನಾಟಕ ಒಳಗೊಂಡಿರುವುದರಿಂದ) ಕೊಡಬಲ್ಲದು–ಎಂಬುದೇ ಅರ್ಥ. ನಾಟಕ ವಿಮರ್ಶಕರು ಪ್ರೇಕ್ಷಕರೂ ಅಲ್ಲ ನಾಟಕದವರೂ ಅಲ್ಲ, ನಾಟಕ ಆಡಿಸಿದವರೂ ಅಲ್ಲ– ವಿವಿಧ ವೃತ್ತಿಗಳಲ್ಲಿ ಪಳಗಿದ ಕಾವ್ಯಜ್ಞರಾದ 12 ಜನರ ಉಪಸಮಿತಿಯೊಂದೇ ಎಂದು ಭರತ ಹೇಳಿದ್ದು ವಿಮರ್ಶಕತ್ವಕ್ಕೆ ಈಗಲೂ ಮಾರ್ಗದರ್ಶಕವಾಗಿದೆ. ಈ ನಿಷ್ಪಕ್ಷಪಾತತೆಯನ್ನು (ಸಾಮಾಜಿಕ (Social)ರಲ್ಲದ ಮನುಷ್ಯರು ಯಾರೂ ಇಲ್ಲವೆಂದೇ ಹೇಳಬಹುದಾದುದರಿಂದ) ವಿಮರ್ಶಕನನು ಜಾಗರದಲ್ಲಿ ಇಟ್ಟುಕೊಂಡೇ ತೀರಬೇಕು– ಎಂಬುದು ನ್ಯಾಯಸಮ್ಮತ. ಸಮಾಜವಿಲ್ಲ ರಸಿಕಸಮಾಜ, ರಸಿಕಜಾತಿ–"ಅರಸಿಕೇಷು ಕವಿತ್ವನಿವೇದನಂ ಶಿರಸಿ ಮಾಲಿಖ ಮಾಲಿಖ ಮಾಲಿಖ" ಎಂಬ ಮಾತಿಗೆ ಪಕ್ಕಾದ ಮಾನವ ಜಾತಿಯಲ್ಲ.

ಪ್ರತಿಯೊಂದು ಪ್ರಥಮ ದರ್ಜೆಯ ಕಾವ್ಯದಲ್ಲಿಯೂ ಶಾಸ್ತ್ರದಲ್ಲಿಯೂ ಸಮಕಾಲಿಕ ಮತ್ತು ಸಾರ್ವಕಾಲಿಕ ರಸೋತ್ತರ ಚಿಂತನಾರ್ಹ ಮಹಾವಿಚಾರ (Great Ideas) ಗಳಿದ್ದೇ ಇರುತ್ತವೆ, ದ್ವಿತೀಯ ದರ್ಜೆಯ ಗ್ರಂಥದಲ್ಲಿ ಸಮ ಸಾಮಯಿಕಕ್ಕೇ ಅಗ್ರಪ್ರಾಶಸ್ತ್ಯವಿರುತ್ತದೆ. ಆದುದರಿಂದ ಅದು ಚಿರಸ್ಥಾಯಿಯಾದರೂ ಸ್ಥಿರಸ್ಥಾಯಿಯಾಗಿ ಉಳಿಯದು. ಕಾವ್ಯವು ಯಶಸ್ಸಿಗಾಗಿ, ದುಡ್ಡಿಗಾಗಿ, ವ್ಯವಹಾರ ಜ್ಞಾನಕ್ಕಾಗಿ, ಅನಿಷ್ಟೋಪದ್ರವ ಪರಿಹಾರಕ್ಕಾಗಿ, ಸದ್ಯಃ ಪರನಿರ್ವೃತಿಗಾಗಿ ಮತ್ತು ಕಾಂತಾಸಂಮಿತಿಯ ಉಪದೇಶಕ್ಕಾಗಿ ಇರುವುದನ್ನು ವಿಮರ್ಶಕನು ಮರೆತರೆ ಅವನು ವಿಮರ್ಶಕನೇ ಅಲ್ಲ. ಈ ಷಟ್ಪ್ರಯೋಜನಗಳಲ್ಲಿ ಸದ್ಯಃ ಪರನಿರ್ವೃತಿ (Immediate pure aesthetic pleasure)ಯನ್ನು– ಅರಿಷಡ್ವರ್ಗರಹಿತವೂ ರಸಸಂಸ್ಕಾರ ಸಂಪನ್ನವೂ ಆದ ಮನಸ್ಸಿಗೆ ಪಳಚ್ಚನೆ ಆನಂದವನ್ನು ಹೊಳೆಯಿಸುವ, ಅನುಭವಕ್ಕೆ ತಂದು ಕೊಡುವ ಕಾವ್ಯ (ಗದ್ಯ ಅಥವಾ ಪದ್ಯ)ಕ್ಕಿರುವ ಯೋಗ್ಯತೆ ಉಕ್ತಪ್ರಯೋಜನವನ್ನು ಗೌಣಗೊಳಿಸುವ ಕಾವ್ಯಕ್ಕಿಲ್ಲ. ಜೊತೆಗೆ, ಅಪ್ರತ್ಯಕ್ಷವಾಗಿ ಸಮಾಜದ ನೀತಿವಂತಿಕೆಯ ಮೇಲೆ ಪ್ರಭಾವ ಬೀರುವ ಶಕ್ತಿ ಕಾವ್ಯಕ್ಕಿದೆಯೆಂಬ ಆರನೆಯ ಪ್ರಯೋಜನ (Value) ವನ್ನು ವಿಮರ್ಶಕ ಕಡೆಗಣಿಸಿದರೆ ಅವನು ಸಮಾಜದ್ರೋಹಿಯೂ ತನ್ನ ಸುಸಂಸ್ಕೃತತೆಗೆ ಅನ್ಯಾಯ ಬಗೆದುಕೊಂಡವನೂ ಆಗುತ್ತಾನೆ. "ಇಂದಿನ ಲೇಖನಗಳ ಸ್ಥಿತಿಗತಿಗಳ" ವಿಚಾರವನ್ನು ಚಿಂತ

ನಕ್ಕೆ ವಸ್ತುವನ್ನಾಗಿ ಆಯ್ದುಕೊಳ್ಳುವ ಭಾಷಣಕಾರನ ವಿಮರ್ಶಧರ್ಮಕ್ಕೂ ಇದು ಹೊರತಾದ ಮಾತಲ್ಲ. "ಸ್ವಧರ್ಮೇ ನಿಧನಂ ಶ್ರೇಯಃ" ಎಂಬ ವೀರಪ್ರಜ್ಞೆಗೆ ಬದ್ಧನಾಗದ"ಸ್ವಧರ್ಮಜ್ಞನು" ವಿಚಾರಕ್ಕೆ ಹಾಗೂ ವಿಮರ್ಶೆಗಿಳಿದರೆ ಅವನ ವಿಚಾರ ವಿಮರ್ಶೆಗಳು ಅವಾಚ್ಯ.

ಶ್ರೀ ಕಣವಿಯವರ ಜ್ಞಾನಪ್ರಸಾರದ ಕಾರ್ಯವು ವಿಶಾಲವಾದುದು. ಅವರ ಪ್ರಕಾಶಕತ್ವ–ಸಂಪಾದಕತ್ವ– ಲೇಖಕ (ಭಾಷಣಕಾರ) ಹಾಗೂ ವಿಷಯಗಳ ವರಣಕರ್ತೃತ್ವಗಳೆಲ್ಲವುಗಳಿಗೂ ಮೇಲೆ ಹೇಳಿದ ಉಪೋದ್ಘಾತವು ನಿಕಷ. ಆದರೆ ಅವರ ನಿರ್ದೇಶಕತ್ವದ ಸ್ಥಾನದಲ್ಲಿ ಸಿಕ್ಕಿಕೊಂಡಿದ್ದರೆ ನನಗಾದರೂ ಅವರು ಹೊರತಂದ ಪ್ರಕಟನೆಗಳಿಗಿಂತ ಉತ್ತಮಂಕರವಾದವುಗಳನ್ನು ಹೊರತರಲಾಗುತ್ತಿತ್ತೋ ಇಲ್ಲವೋ ಹೇಳಲಾರೆ.

ಉಪದೇಶವೆಂಬ ಆರನೆಯ ಪ್ರಯೋಜನವು ವ್ಯಾಸಂಗ ವಿಸ್ತರಣ ಮಾಲೆಯಲ್ಲಿ ಅಗ್ರಗಣ್ಯ. ಆದುದರಿಂದ ಅದರಲ್ಲಿ ಪದ್ಯಕ್ಕಿಂತ ಶಾಸ್ತ್ರೀಯ ಗದ್ಯಕ್ಕೆ ಮಹತ್ವ ಹೆಚ್ಚು. ಸರಳ ಶೈಲಿ ಇರಲಿ, ಕ್ಲಿಷ್ಟ ಶೈಲಿ ಇರಲಿ—ಗ್ರಂಥಗಳು ಸಾರ್ವಜನಿಕರಿಗೆ ಜ್ಞಾನದಾನ ಮಾಡುವಂತಿರಬೇಕು. ಭಾಷೆ ಅಸ್ಖಲಿತವಾಗಿರಬೇಕು. ಜನರು ಅನುಕರಣಶೀಲರು, ಶೈಲಿ ಕ್ಲಿಷ್ಟತೆ ಇರಬಾರದು—ಆದರೆ ಅದಕ್ಕಿಂತಲೂ ಹೆಚ್ಚಾಗಿ (1) ಶ್ರುತಿದುಷ್ಟ, (2) ಅರ್ಥದುಷ್ಟ, (3) ಕಲ್ಪನಾದುಷ್ಟ ಮತ್ತು (4) ಶ್ರುತಿ ಕಷ್ಟ—ಎಂಬ ದೋಷಗಳಿರಬಾರದು. ಶೈಲಿಯನ್ನೂ ಭಾಷಣದ ಹೂರಣವನ್ನೂ ಜನ (ನಿಷ್ಪಾಪ ಬುದ್ಧಿಯುಳ್ಳ ಪೂರ್ವಗ್ರಹ ರಹಿತವಾಗಿದ್ದರೆ) ಗ್ರಹಿಸುತ್ತದೆ. ಆ ಮೂಲಕ ತಮ್ಮ ಜೀವನದ ವಿವಿಧ ಕರ್ಮವಿಭಾಗಗಳಲ್ಲಿ ಉತ್ತಮ, ಉತ್ತಮತರ ಫಲಗಳನ್ನು ಪಡೆಯುವಂತಹ ಯೋಜನೆ ಭಾಷಣಗಳ ಹಿನ್ನೆಲೆಯಲ್ಲಿರಬೇಕು.

ಟೀ. ಎಸ್. ಎಲಿಯಟ್ ಹೇಳಿದಂತೆ ಇಂದಿನ ದಿನಮಾನದಲ್ಲಿ 1 ಅಂಶದಿಂದ 16 ಅಂಶಗಳ (ಪೂರ್ಣ ರೂಪಾಯಿಯ ವ್ಯಾವಹಾರಿಕ ಅರ್ಥದಂತೆ) ವರೆಗಿನ ವಿದ್ಯಾವಂತರು, ಕರ್ನಾಟಕದಲ್ಲಿದ್ದಾರೆ. ಆದುದರಿಂದ ಪಂಡಿತ–ಪಾಮರರೆಂಬ ಎರಡೇ ವರ್ಗಗಳನ್ನು ರಂಜಿಸಿ ಗೆದ್ದ ಹಿಂದಿನ ಉಪನ್ಯಾಸಕಾರ (ಬರಹಗಾರ)ರಷ್ಟು ಇಂದಿನವರ ಕೆಲಸ ಸುಲಭವಲ್ಲ. ನನ್ನ "ಮನುಸ್ಮೃತಿ" ಎಂಬ ಚಿಕ್ಕ ಪುಸ್ತಕ ಪುನಃ ಪುನಃ ಮುದ್ರಣ ಹೊಂದಿ ಸಾವಿರಗಟ್ಟಲೆಯಲ್ಲಿ ಖರ್ಚಾಗುವಂತಾದದ್ದು ಇಂದಿನ ದಿನಮಾನದಲ್ಲಿ ಅದ್ಭುತ. ಜನಾಭಿರುಚಿ, ಜನರ ಜ್ಞಾನತೃಷ್ಣೆ, ಜನರ ಪ್ರಯೋಜನ ದೃಷ್ಟಿ ಹಾಗೂ ಜೀವನ ಯೋಜನಾ ಚಿಂತನೆಯ ಬಗೆ ಬಹಳ ವೈವಿಧ್ಯಪೂರ್ಣವಾದುದು. ಶ್ರೀ ಕಣವಿಯವರು ನಿರ್ದೇಶಿಸಿದ ಚಿಕ್ಕ–ದೊಡ್ಡ ಹೊತ್ತಗೆಗಳಲ್ಲಿ ಯಶಸ್ವಿಯಾದವುಗಳು ಅಧಿಕ ; ಅಯಶಸ್ವಿಯಾದವುಗಳು ಅಲ್ಪ—ಎಂದು ತೋರುತ್ತದೆ, ಅವರು ನಗರದಲ್ಲಿದ್ದರೂ ಸ್ವಭಾವತಃ ಗ್ರಾಮೀಣರು. ಇದೇ ಅವರ ನಿರ್ದೇಶಕತ್ವ ಗ್ರಾಮಪ್ರಿಯವಾದುದರ ಗುಟ್ಟು. ಗ್ರಾಮ್ಯಪದ ಪ್ರಯೋಗದ ಅವರ ಕೆಲ ಪದ್ಯಗಳಿದಕ್ಕೆ ಸಾಕ್ಷಿ. ಹಳ್ಳಿಗರೊಡನೆ ಹಳ್ಳಿಗರಾಗಿ ಬೆರೆಯುವ ಅವರ ಸ್ವಭಾವ ಸಹಜ ಶಕ್ತಿಯು ಅವರ ಗ್ರಾಮಾಭಿರುಚಿಜ್ಞತೆಗೆ ಆಧಾರ, ಅವರು ನಿಜ

ವಾದ ಗ್ರಾಮಸ್ಥರು! ಗ್ರಾಮೀಣ ಸಭ್ಯತೆಯ ಆಗಾರ! ಕ್ಷೀರ-ಕ್ಷೀರ ಸಾಮರಸ್ಯವನ್ನು ತಾಳಬಲ್ಲ ಅವರ ಹಳ್ಳಿಗತನವು ಅವರು ಉಪನ್ಯಾಸಕ್ಕೆ ಆರಿಸಿದ ವಿಷಯಗಳ ಗ್ರಾಮೌಚಿತ್ಯಕ್ಕೆ ನಿಕಷ. ನಮ್ಮದು ಗ್ರಾಮ ಕರ್ಣಾಟಕ, ಗ್ರಾಮಭಾರತ—ಎಂಬುದು ಅವರಿಗೆ ಚೆನ್ನಾಗಿ ಗೊತ್ತು. ನಮ್ಮ ಗ್ರಾಮೀಣರೆಲ್ಲರೂ "ಗಾವಿಲ"ರಲ್ಲ. "ಕುರಿತೋದದೆಯುಂ ಕಾವ್ಯಪ್ರಯೋಗ ಪರಿಣತ ಮತಿಗಳ್" ಎಂಬುದಕ್ಕಿಂದು ಕುಂದು ಬಂದಿದ್ದರೂ ಜ್ಞಾನ ಪಿಪಾಸೆಯಲ್ಲಿ ಅವರೆಂದೂ ಪ್ರಯೋಜನ ದೃಷ್ಟಿಗೆ (Utilitarianism) ವಿಮುಖರಾಗಿಲ್ಲ. ಅವರ ಪರಂಪರೆಯು ಹೊಸ ವಿಚಾರಗಳನ್ನು (ಅವುಗಳನ್ನು ಪ್ರಯೋಜನದ ಒರೆಗೆ ಹಚ್ಚಿ) ಅಂಥ ಹಳೆಯ ವಿಚಾರಗಳೊಡನೆ ಲೀನಗೊಳಿಸಿಕೊಳ್ಳುವ ಬಗೆಯದು. ಅವರ ಒರೆಗಲ್ಲಿಗೆ ಹತ್ತದ್ದನ್ನು ಅವರು ಮೂಸಿ ಕೂಡ ನೋಡರು. ದಿ. ರಾಜೇಂದ್ರ ಪ್ರಸಾದರೆಂದಂತೆ ನಮ್ಮ ಜನರಲ್ಲಿ ಅನೇಕರು ನಿರಕ್ಷರರಾದರೂ ಅವಿದ್ಯಾವಂತರಲ್ಲ. ಅವರು ಪ್ರಜಾಪ್ರಭುತ್ವದ ಇಂದಿನ ದಿನ ಮಾನದಲ್ಲಿ "ವಿಮೃಶ್ಯೈತದಶೇಷೇಣ ಯಥೇಚ್ಛಸಿ ತಥಾ ಕುರ್ವಂತಿ" ಎಂಬ ವರ್ಗಕ್ಕೆ ಸೇರುತ್ತ ಹೋಗುತ್ತಿದ್ದಾರೆ. ಈ ಮರ್ವ ಕಣವಿಯವರಿಗೆ ಕ್ರಮೇಣ ಹೆಚ್ಚು ಹೆಚ್ಚು ಗೊತ್ತಾಗುತ್ತ ಹೋಗಿದೆ—ಇನ್ನೂ ಹೆಚ್ಚು ಹೆಚ್ಚು ಗೊತ್ತಾಗುತ್ತದೆ, ಈ ಸರ್ವಾಭಿರುಚಿ–ಸರ್ವಾಭಿಪ್ರಾಯ ಶ್ರವಣ, ಅವುಗಳ ಮನನ ಮತ್ತು ನಿದಿಧ್ಯಾಸಗಳ ಬಲದಿಂದ ಅವರ ನಿರ್ದೇಶಕತ್ವ ಪುಷ್ಟಿಹೊಂದುತ್ತಿದೆ. ಅವುಗಳ ಯುಕ್ತಾ ಯುಕ್ತತೆಯ ವಿವೇಕ ಹೆಚ್ಚುತ್ತ ಹೋಗುತ್ತದೆ. ಇದು ಅಪೇಕ್ಷಣೀಯ. ಪದವೀ ಧರರೆಲ್ಲರೂ ಬರೆಹಗಾರರಲ್ಲ, ಭಾಷಣಕಾರರಲ್ಲ, ಶಾಸ್ತ್ರಜ್ಞರಲ್ಲ, ಜನೋಪಕಾರಿಗಳಲ್ಲ, ಸಮರ್ಥ ಶಾಸ್ತ್ರೀಯ ಕ್ರಮಜ್ಞರಲ್ಲ ಎಂಬುದನ್ನು ಆಕಾಶವಾಣಿಗಳಿಗಿಂತ, ಸಿನೆಮೋತ್ಪಾದಕರಿಗಿಂತ ಮತ್ತು ವಿಶ್ವಕೋಶಾಧಿಕಾರಿಗಳಿಗಿಂತ ಮೊದಲೇ ಕಣವಿಯವರು ಅರಿತದ್ದು ಗೌರೀಶರಂಥವರ ಆಯ್ಕೆಯಿಂದ ಸ್ಪಷ್ಟ. ಹಾಗೇ ಪದವೀಧರರಲ್ಲಿಯೂ ಉಕ್ತಗುಣಗಳುಳ್ಳವರಿದ್ದಾರೆ ಎಂಬುದನ್ನು ಅವರು ಮೊದಲೇ ಅರಿತಕ್ಕೆ ಡಾ. ಕೃಷ್ಣಮೂರ್ತಿ ಮುಂತಾದ ವಿದ್ವಾಂಸರನ್ನು ಆರಿಸಿದ್ದು ಸಾಕ್ಷಿ. ಅಲ್ಲದೆ, ಇತರ ಲೇಖಕರ ಆಯ್ಕೆ ಇತರ ಆವಶ್ಯಕತೆಗಳ ಒತ್ತಡದಿಂದ ಉಂಟಾಗಿರಬಹುದು—ಅದುದರ ಸಾಮೂಹಿಕ ಕ್ಷಮ್ಯತೆ ಅವರಿಗೇ ಗೊತ್ತು.

ವಿಶ್ವವಿದ್ಯಾನಿಲಯ ಕಲಿಸುವ ಎಲ್ಲ ವಿಷಯಗಳ ಮೇಲೆಯೂ ಜನಪ್ರಿಯ ಉಪನ್ಯಾಸಗಳನ್ನು ಇಡಿಸಲು ಸಾಧ್ಯವಾದಂತೆ ತೋರುವುದಿಲ್ಲ. Elements of Law for the common man ಸಾಮಾನ್ಯನಿಗಾಗಿ ಕಾಯದೆಯ ಮೂಲಭೂತ ಅಂಶಗಳು" ಎಂಬ ಇಂಗ್ಲೀಷ್ ಗ್ರಂಥ ದಂತೆ "ಮೆಡಿಕಲ್, ಎಂಜಿನಿಯರಿಂಗ್, ಟೆಕ್ಸ್‌ಟೈಲ್ ಎಂಜಿನಿಯರಿಂಗ್" ಮುಂತಾದ ವಿವಿಧ ತಾಂತ್ರಿಕ ವಿಷಯಗಳ ಮೇಲಿನ ಸ್ಥೂಲ ಪರಿಚಯಗಳಂತೆ ಕಾಯದೆಗಳ ಬಗೆಗೂ ಸಾಮಾನ್ಯನ ಜೀವನಕ್ಕೆ ಸಂಬಂಧಿಸಿದ ವ್ಯಾವಹಾರಿಕ ಸಮಸ್ಯೆಗಳ ಪರಿಹಾರಕ್ಕೆ ಬೇಕಾದ ಜ್ಞಾನವು ಇನ್ನೂ ಹೆಚ್ಚಾಗಿ ಪ್ರಚುರವಾಗ ಬೇಕು, ಜೀವನದ ವಿವಿಧ ಕಾರ್ಯ ಕ್ಷೇತ್ರಗಳನ್ನು ಸಮನ್ವಿತವಾಗಿ ನಡೆಸಿಕೊಂಡು

ಹೋಗಲು ಮಹಾತ್ಮಗಾಂಧಿಯವರೂ ಜೆ. ಸಿ. ಕುಮಾರಪ್ಪನವರೂ ಹೇಳಿದ ಸಿದ್ಧಾಂತ ಹಾಗೂ ಪ್ರಯೋಗಗಳ ವಿಮರ್ಶಾತ್ಮಕ ವಿವರಣೆಗಳು ಬೇಕು. ಗಾಂಧಿಯವರ ರಾಜ ನೀತಿ. ಅರ್ಥ ನೀತಿ, ಸಮಾಜ ನೀತಿ, ವ್ಯಕ್ತಿ ನೀತಿಗಳಿನ್ನು ಕಾಯದೆಗಳಾಗಿ ಹೊರಬೀಳಲು ಬಹಳ ಕಾಲ ಕಳೆಯದು. ಅವುಗಳ ತುಲನಾತ್ಮಕವೂ ಜಗಚ್ಛಾಂತಿಧ್ಯೇಯದಿಂದ ಉಪಾಹಿತವೂ ಆದ ವಿವರಣೆ, ವಿಶ್ಲೇಷಣೆ, ಉದಾಹರಣೆ, ವಿಚಾರ ವಿನ್ಯಾಸ, ನಿರ್ಣಯಾತ್ಮಕ ನಿಗಮನ ಗಳನ್ನು ಈ ವ್ಯಾಸಂಗ ಮಾಲೆಯ ರೀತಿಯಿಂದಲೇ 100 ಪುಟಗಳೊಳಗೆ ಬರುವಂತೆ 4 ಆಣೆಯನ್ನು 8 ಆಣೆ ದರಕ್ಕಾದರೂ ಏರಿಸಿ ಹೊರತರುವುದು ಅತ್ಯಗತ್ಯ.

ನನ್ನ "ರಾಷ್ಟ್ರಸೂತ್ರ" (Published by the Dnyaneshwar press, Dajiban pet, Hubli) ದಲ್ಲಿ ಕೊಟ್ಟ ಹಿನ್ನೆಲೆಯಂತೆ ಪರಮಾರ್ಥ ವ್ಯವಹಾರಗಳನ್ನು ಸಮನ್ವಯಿಸುವ "ಮಾನುಸ್ಮರ ಯುಧ್ಯಚ" ಎಂಬಂತಹ ಸೂತ್ರದ ವ್ಯಾಪ್ತಿಯಲ್ಲಿ ಮಹಾಭಾರತ ಮನುಸ್ಮೃತಿ, ಕುಮಂದಕೀಯ ನೀತಿಸಾರ, ಶುಕ್ರ ನೀತಿಸಾರ ಬೃಹಸ್ಪತಿನೀತಿಸಾರ, ವಿಷ್ಣುಧರ್ಮೋತ್ತರ ಪುರಾಣ, ಅಗ್ನಿಪುರಾಣ, ಅರ್ಥಶಾಸ್ತ್ರ, ಚರಕ ಸಂಹಿತೆ, ಶುಶ್ರುತಸಂಹಿತೆ, ಮಾನಸೋಲ್ಲಾಸ ಮುಂತಾದವುಗಳಲ್ಲಿ ಬರುವ ಜೀವನನೀತಿ ಗಳನ್ನು ಆಧುನಿಕ ಸಮಾಜಾದಿ ಶಾಸ್ತ್ರಗಳ ಸಿದ್ಧಾಂತಗಳೊಡನೆ ತುಲನೆಮಾಡಿ ಕನ್ನಡ ಜಿಜ್ಞಾಸುಗಳಿಗೆ ಸುಲಭವಾಗಿ ದೊರಕುವಂತೆ ಮಾಡಬಹುದು. ಸ್ವದೇಶವನ್ನರಿಯದವ ಪರದೇಶಿಯ ವಿಚಾರಗಳಿಂದ ಲಾಭ ಹೊಂದಲಾರ. "Positive Sciences of the Hindus ಹಿಂದುಗಳ ಅನುಪೇಧಾತ್ಮಕ ವಿಜ್ಞಾನಗಳು" ಎಂದು ಸರ್ ಬೃಜೇಂದ್ರ ನಾಥ ಸೀಲರೂ "The seed of Race ಸ್ವಧರ್ಮ" ಎಂಬುದರ ಮೇಲೆ ಸರ್ ಜಾನ್‌ವುಡ್ರೋಫರೂ ಹಿಂದೆಯೇ ಬರೆದ ಗ್ರಂಥಗಳು ಇಂಥ ನವೋದಯಕ್ಕೆ ಸ್ಫೂರ್ತಿ ದಾಯಕಗಳು; 27 ನಕ್ಷತ್ರಗಳ ಹೆಸರುಗಳನ್ನೂ 60 ಸಂವತ್ಸರಗಳ ಹೆಸರುಗಳನ್ನೂ ಅರಿ ಯದವನು ಕನ್ನಡಿಗನೆ ? ಭಾರತೀಯನೆ ? Metrical translation ಛಂದೋ ಬದ್ಧ ಭಾಷಾಂತರ ರೂಪದಲ್ಲಿ ಸಹ ಕೆಲ ವಿಷಯಗಳನ್ನು ವ್ಯಾಸಂಗಕ್ಕೆ ಜನತೆಗಾಗಿ ತಯಾ ರಿಸಿ ಕೊಡಬಹುದು, ಅಂಥ ವಿಶೇಷ ಭಾಷಣಗಳ ಗ್ರಂಥ 150 ಪುಟಗಳವರೆಗೂ ಹೋಗ ಬಹುದು-ದರ 1 ಅಥವಾ 1 ½ ರೂಪಾಯಿಗಳವರೆಗೂ ಏರಬಹುದು. ನಮ್ಮ ಹೆಸರಿಗಿಂದು ಅದು ಭಾರವಾಗದು.

ಮಿತ್ರರಾದ ಚೆನ್ನವೀರರಿಂದ ಈ ಯಾವ ಕಾರ್ಯವೂ ಆಗದೆ ಹೋಗುವಂಥದಲ್ಲ. ಅವರಿಗೆ ಅಗತ್ಯವಾದ ಹಣ ಮತ್ತು ವಿದ್ವತ್ಸಹಾಯಗಳನ್ನು ಯು.ಜಿ.ಸಿ, ಕರ್ನಾಟಕ ಸರಕಾರ ಮುಂತಾದ ಸಂಸ್ಥೆಗಳಿಂದ ಒದಗಿಸಿಕೊಡುವುದು ನಮ್ಮ ಹೆಮ್ಮೆಯ ಕರ್ಣಾಟಕ ವಿಶ್ವವಿದ್ಯಾನಿಲಯದ ಕೆಲಸ. ಅದರ ಘನಕುಲಪತಿಗಳಿಗಿದು ಅಸಾಧ್ಯವಾದ ಕಾರ್ಯವಲ್ಲ. ಸುಲಭ ದರದಲ್ಲಿ 150 ಪುಟಗಳಿಗೆ (Crown ⅛ size) ಮೀರದ ತಿಳಿಹೊತ್ತಗೆ ಗಳನ್ನು ಕೊಳ್ಳಲು ಬೇಕಾದ ಸಂಸ್ಕಾರವನ್ನು ಶ್ರೀಮಾನ್ ಕಣವಿಯವರು ಈಗಾಗಲೇ

ಜನತೆಗೆ ಒದಗಿಸಿದ್ದಾರೆ. ಆಟವೇನೋ ಎಂದು ತೋರುವಂತೆ ಪಾಠ ಕಲಿಸುವ ನಿಜವಾದ (Play-Way in Mass Education) ಜನತಾ ಶಿಕ್ಷಣಕ್ಕೆ ನಿದರ್ಶನ ನೀಡುವ ಯೋಗ್ಯತೆಯೀಗ ಕಣವಿಯವರಿಗೆ ಕ್ರಮ ಕ್ರಮವಾಗಿ ಬರುತ್ತಿದೆ, ಬಂದಿದೆ.

ಈ ವರೆಗಿನ ಕಣವಿ ಸೇವೆ ಕೇವಲ ಸಂಬಳಕ್ಕಾಗಿ ಮಾಡಿದ್ದಲ್ಲ ಎಂದು ತಿಳಿದೇ ಗೆಳೆಯರು ಅವರಿಗೆ ಸಂಭಾವನಾ ಗ್ರಂಥವನ್ನು ಅರ್ಪಿಸಲು ಮುಂದೆ ಬಂದಿದ್ದಾರೆ. ಮಾನವ ಜೀವನದ ಸಾರ್ಥಕತೆ ಅಲ್ಲಿದೆ. ಹೇಳಿ ಮಾಡಿಸಿಕೊಳ್ಳುವ ಔತಣದಿಂದಲ್ಲ; ಹೇಳಿ ಅಥವಾ ಸೂಚ್ಯವಾಗಿ ಧ್ವನಿಸಿಯೋ ಇಲ್ಲದೆಯೋ (ಬರೆವವರ ಸ್ವಾರ್ಥಕ್ಕಾಗಿಯೋ) ಒರೆಯಿಂಸಿಕೊಳ್ಳುವ ಸ್ತೋತ್ರರತ್ನಾಕರಗಳಿಂದಲ್ಲ.

ಸಾತ್ವಿಕಃ ಸತ್ಯಶರಣಃ, ಚೆನ್ನವೀರೋ ಸುಹೃನ್ಮಹಾನ್ ।
ನಿರ್ದೇಶಕಶ್ಚಿರಾಯುಃಸ್ಯಾತ್ಕೀರ್ತಿಮಾನ್ ಸಜ್ಜನಪ್ರಿಯಃ ॥

ಬುದ್ದಣ್ಣ ಹಿಂಗಮಿರೆ

# ಜಿಜ್ಞಾಸೆ ಕೆರಳಿಸುವ ಕವಿ

ಶ್ರೀ ಚೆನ್ನವೀರ ಕಣವಿ ಅವರೊಂದಿಗೆ ನನ್ನ ಗಾಢಸಂಬಂಧ ಬಂದದ್ದು, ನನ್ನ 'ಶಬ್ದ ರಕ್ತ ಮತ್ತು ಮಾಂಸ' ಕವನ ಸಂಕಲನಕ್ಕೆ ಮುನ್ನುಡಿ ಬರೆದ ಸಂದರ್ಭದಲ್ಲಿ. ಅದೇ ಆಗ ಕಾವ್ಯದಲ್ಲಿ ಹೊಸ ತಿರುವು ಕಾಣಿಸಿಕೊಳ್ಳುತ್ತ ಮಣ್ಣಿನ ವಾಸನೆ, ಸಮಕಾಲೀನ ಪ್ರಜ್ಞೆಯ ಮಾತುಗಳು ಕಿವಿಯ ಮೇಲೆ ಬೀಳುತ್ತಿದ್ದುವು. ನಾನೆಷ್ಟೊ ಕವಿಪುಂಗವರನ್ನು ಈ ಮೊದಲು ಭೇಟಿಯಾಗಿದ್ದು, ಕಣವಿಯವರನ್ನು ಭೇಟಿಯಾದಾಗ ಉಂಟಾದ ಅನುಭವವೇ ಭಿನ್ನವಾದದ್ದು.

ಆಗಲೇ ಸಾಹಿತ್ಯದಲ್ಲಿಯೂ ರಾಜಕೀಯದಂತೆ ಗುಂಪುಗಾರಿಕೆ ನಡೆದು ಒಬ್ಬೊಬ್ಬರು ಒಂದೊಂದು ಕ್ಷೇತ್ರವನ್ನು ಗುತ್ತಿಗೆ ಹಿಡಿದುಬಿಟ್ಟಿದ್ದರು. ಇಂಥ ರಾಜಕೀಯದಿಂದ, ಗುಂಪುಗಳಿಂದ ಹೊರಗಿದ್ದು ನ್ಯಾಯವಾದದ್ದನ್ನು ನುಡಿಯುವ ಇಬ್ಬರು ಮೂವರು ಸಾಹಿತಿಗಳಲ್ಲಿ ಕಣವಿಯವರೂ ಒಬ್ಬರೆಂದು ನನಗೆ ಆಗ ಅನ್ನಿಸಿದ್ದು, ಇಂದಿಗೂ ಅವರ ಬಗೆಗಿನ ಅಭಿಪ್ರಾಯ ಬದಲಾಗಿಲ್ಲ. ಸಾಹಿತ್ಯ ಕುರಿತ ಯಾವುದೇ ಸಮಸ್ಯೆ, ಚರ್ಚೆ ನೋಡಿದ್ದೇನೆ. ಎಷ್ಟೋ ಸಲ ನಮ್ಮ ವಿಚಾರ ಗೆಲ್ಲುತ್ತ ಬಂದದ್ದುಂಟು. ನನ್ನ ಕಾವ್ಯದಲ್ಲಿನ 'ರಕ್ತ, ಮಾಂಸ'ವನ್ನು ಗುರ್ತಿಸಿದ ಒಬ್ಬರಾದರೂ ಕವಿಗಳಿದ್ದಾರಲ್ಲ—ಎನ್ನುವ ಸಂತೋಷ ನನಗಾದದ್ದು.

ನನ್ನ ಹಾಗೂ ನನ್ನ ಸಮಕಾಲೀನ ಕವಿಗಳಿಗೆ ಕಣವಿಯವರ ಕಾವ್ಯ ಹಾಗೂ ವಿಚಾರಗಳು ಹೊಸ ದಿಕ್ಕನ್ನು ತೋರಿಸಿದುವು. ಅಡಿಗರು ಬಹಳಷ್ಟು ದೂರದಲ್ಲಿದ್ದು ಅವರ ಕ್ಲಿಷ್ಟ ರಚನೆಗಳ ಮಾರ್ಗಬಿಟ್ಟು ನಮ್ಮ ಅನುಭವ, ಭಾಷೆ, ಸಂಸ್ಕೃತಿಗೆ ತಕ್ಕ ಜನಕ್ಕೆ ಹತ್ತಿರವಾಗಬಲ್ಲ ದಿಕ್ಕಿನಲ್ಲಿ ನಾವು ಬರೆಯುತ್ತ ಬಂದದ್ದುಂಟು.

ಕಣವಿಯವರ 'ದೀಪಧಾರಿ' 'ಮಣ್ಣಿನ ಮೆರವಣಿಗೆ' ಮುಂತಾದ ಪದ್ಯಗಳು ನಮ್ಮ ಬದುಕಿನ ಹಾಗೂ ಮಣ್ಣಿನ ಹುರುಡನ್ನು ಹಿಡಿಯುವ ಹೊಸ ದಿಕ್ಕನ್ನು ತೆರೆದವು.

ಸಾಹಿತ್ಯದಲ್ಲಿಯ ಹೊಸ ತಿರುವುಗಳನ್ನು, ಬಂಡಾಯದ ಧ್ವನಿಯನ್ನು ಗುರುತಿಸುತ್ತ, ಅಂಥ ತಿರುವುಗಳೊಂದಿಗೆ ಗಾಢ ಸಂಬಂಧವನ್ನಿರಿಸಿಕೊಂಡುಬಂದ ಕಣವಿಯವರು ಇಂದಿಗೂ ಮಹತ್ವದ ಹಾಗೂ ಅರ್ಥಪೂರ್ಣ ಕವಿಯಾಗಿದ್ದಾರಲ್ಲದೆ, ಅವರ ವ್ಯಕ್ತಿತ್ವವೇ ಅದಕ್ಕೆ ನಿಕಷವಾಗಿದೆ. ಸಾಮಾಜಿಕ ಹಾಗೂ ರಾಜಕೀಯ ಸ್ಥಿತ್ಯಂತರಗಳಿಂದ ನಿರ್ಮಾಣಗೊಳ್ಳುವ ಕಣವಿಯವರ ಕಾವ್ಯದಲ್ಲಿನ ರೂಪಕ, ಸಂಕೇತ ಹಾಗೂ ಪ್ರತಿಮೆಗಳು—ಅವರ

ಕಾವ್ಯಶಕ್ತಿಯ ಪ್ರದರ್ಶನವಲ್ಲದೆ ಸಾಮಾಜಿಕ ಸಾಂಸ್ಕೃತಿಕ ನೆಲಗಟ್ಟನ್ನು ಅಗೆದು ತೋರು ತ್ತವೆ.

ಎಷ್ಟೋ ಕವಿಗಳು ಕಾವ್ಯ ಬರೆದಾದ ಮೇಲೂ ಕಾವ್ಯದ ಮೂಡಿನಲ್ಲೇ ಮಾತಾಡು ತ್ತಾರೆ; ಆದರೆ ಕಣವಿಯವರು ಕಾವ್ಯ ಬರೆಯುವಾಗಷ್ಟೇ ಕವಿಯಾಗಿದ್ದು, ಆಮೇಲೆ ಅವರೊಬ್ಬ ಶ್ರೀಸಾಮಾನ್ಯ, ವಿಮರ್ಶಕ ಹಾಗೂ ಸದ್ಗೃಹಸ್ಥರಾಗಿಯೇ ಇರುತ್ತಾರೆ.

ನವ್ಯ, ದಲಿತ, ಬಂಡಾಯ ಯಾವುದೇ ಹೊಸ ಪ್ರವಾಹ ಬಂದರೆ ಅವುಗಳೊಂದಿಗೆ ಅವರು ತಮ್ಮ ಸಂಬಂಧವನ್ನಿರಿಸಿಕೊಳ್ಳುತ್ತ ಸ್ವಂತದ ಅಭಿಪ್ರಾಯಗಳನ್ನು ನೀಡುತ್ತ ಬಂದಿದ್ದಾರೆ. ಎಲ್ಲಾ ಬಗೆಯ ಚಟುವಟಿಕೆಗಳೊಂದಿಗೆ ಹೊಂದಿಕೊಳ್ಳಬಲ್ಲ ವಿಶಿಷ್ಟಗುಣ ಕಣವಿಯವರದು.

ಧಾರವಾಡದ ನೆಲದಲ್ಲಿ ಬೇರುಬಿಟ್ಟ ಕಣವಿಯವರ ಕಾವ್ಯ ಚಾಚಿರುವ ರಂಬೆ-ಕೊಂಬೆಗಳು ಅನೇಕ. ಅವರ ಕಾವ್ಯ 'ಪಕ್ಷತೀರ್ಥ' ವಾಗಿ ಯಾವಾಗಲೂ ಗಮನ ಸೆಳೆ-ಯುವಂಥಾದ್ದು.

ಮಾನವೀಯ ಮೌಲ್ಯಗಳನ್ನು ಧ್ವನಿಸುವ ಕವಿ ಕಣವಿ ಅವರು.

ಕಣವಿಯವರ ಕಾವ್ಯ ನವೋದಯ ಮತ್ತು ನವ್ಯ ಈ ಎರಡೂ ದಡಗಳಲ್ಲಿ ತುಂಬಿಕೊಂಡು ಹರಿಯುವ ಕಾವ್ಯ. ಸುಖ—ದುಃಖ, ಹುಟ್ಟು-ಸಾವು, ನೋವು—ನಲಿವು—ಇವುಗಳ ದ್ವಂದ್ವದಲ್ಲಿ ಆವಿರ್ಭವಿಸುವ ಸಮಸ್ಯೆಗಳು ಇತ್ಯಾದಿ ನಿರಾಯಾಸವಾಗಿ ನವೀನ ರೂಪಕಗಳನ್ನು ಸೃಷ್ಟಿಸಿಕೊಂಡು ಕಾವ್ಯದ ಕ್ಷಿತಿಜವನ್ನು ವಿಸ್ತರಿಸಲು ಕಾರಣ ವಾಗುತ್ತವೆ.

'ನನ್ನ ನಂಬಿಕೆಯೊಂದು ಆಕಾಶ' ಎನ್ನುವಂಥ ಹಲವು ರೂಪಕಗಳು ಕವಿ ಮಧುರ ಚೆನ್ನರಲ್ಲಿ ವಿಶಿಷ್ಟವಾಗಿದ್ದ ದ್ರವ್ಯವನ್ನು ವರ್ತಮಾನ ಸಂದರ್ಭದಲ್ಲಿ ಅರ್ಥ ಪೂರ್ಣ ವಾಗಿಸುವುದನ್ನು ಲಕ್ಷಿಸಬಹುದು.

ಕವಿಗೆ ಮೂರು ಬಗೆಯ ವಾಣಿಗಳಿವೆಯೆಂದು ಎಲಿಯಟ್ ಹೇಳಿದ್ದನ್ನು ಅನ್ವ ಯಿಸಿ ನೋಡಿದರೆ, ಕಣವಿಯವರ ಕಾವ್ಯದಲ್ಲಿ ಆ ಮೂರೂ ಬಗೆಯ ವಾಣಿಗಳಿರುವು ದನ್ನು ಬೇಕಾದಷ್ಟು ಉದಾಹರಣೆಗಳಿಂದ ಎತ್ತಿ ತೋರಿಸಬಹುದು. ಅಂತರ್ಗತ ಅನು ಭೂತಿಯನ್ನು ಹೇಳಿಕೊಳ್ಳುವುದು, ರೂಪಕ, ಪ್ರತಿಮೆ ಸಂಕೇತಗಳ ಮೂಖಾಂತರ ಅಭಿ ವ್ಯಕ್ತಿಸುವುದು ಹಾಗೂ ಅನುಭವವನ್ನು ನಾಟ್ಯೀಕರಿಸಿ ಕಣ್ಣಿಗೆ ಹಿಡಿಯುವುದು. ಈ ದೃಷ್ಟಿಯಿಂದ ಕಣವಿಯವರ 'ಮಣ್ಣಿನ ಮೆರವಣಿಗೆ,' 'ಎರಡುದಡ,' 'ನಗರದಲ್ಲಿ ನೆರಳು' ಇವು ಅವರನ್ನು ಕನ್ನಡದಲ್ಲಿ ಅತ್ಯಂತ ಮಹತ್ವದ ಕವಿಯನ್ನಾಗಿ ಮಾಡುತ್ತವೆ.

ಕೀರ್ತಿಕೋಟಿ, ಜಿ. ಎಚ್. ನಾಯಕ ಮುಂತಾದವರ ಪೂರ್ವಗ್ರಹ ಪೀಡಿತ ವಿಮರ್ಶೆ ಕಣವಿಯವರ ಕಾವ್ಯದ ಎತ್ತರವನ್ನು, ಅದರ ಬೀಸನ್ನು ಹಾಗೂ ಅವರ ಕಾವ್ಯದ

ಚಲನಶೀಲ ಗುಣವನ್ನು ಗುರುತಿಸಲು ಸಮರ್ಥವಾಗಿಲ್ಲದಿರುವುದು ಅದೂ ವಿಮರ್ಶಕರ ಸೋಲನ್ನು ಮಾತ್ರ ಧ್ವನಿಸುತ್ತದೆ ಅಷ್ಟೆ. ಮುಕ್ತ ವಿಮರ್ಶಕನ ಕಣ್ಣಿಗೆ ಕಣವಿಯವರ ಕಾವ್ಯದ ಸಾಮಾಜಿಕ, ಸಾಂಸ್ಕೃತಿಕ ಆಯಾಮವೇ ಅವರ ಕಾವ್ಯದ ಗಟ್ಟಿನೆಲೆಯನ್ನು ಹಾಗೂ ಅದರ ಪದರುಗಳನ್ನು ಬಿಚ್ಚಿ ತೋರುತ್ತದೆ.

ಅವರ ಇತ್ತೀಚಿನ 'ನಗರದಲ್ಲಿ ನೆರಳು' ಸಂಕೀರ್ಣ ಅನುಭವಕ್ಕೆ ಸಾಕ್ಷ್ಯನುಡಿಯುತ್ತ ಬೌದ್ಧಿಕ ಚೌಕಟ್ಟಿನಿಂದ ತಪ್ಪಿಸಿಕೊಂಡು, ಕಾವ್ಯ ಬೀದಿಗೆ ಬಂದು ಸಾಮಾಜಿಕ ಕಾಳಜಿಯಲ್ಲಿ ಹೊಸ ಹುಟ್ಟು ಪಡೆಯುವುದು ಅತ್ಯಂತ ಗಮನಾರ್ಹವಾದ ಬೆಳವಣಿಗೆಯಾಗಿದೆ.

ಅತಿಯಾದ ಅಂತರ್ಮುಖತೆಯೇ ಇಂದು ಅಡಿಗರ ಕಾವ್ಯವನ್ನು ನಿರಾಕರಿಸಲು ಕಾರಣವಾದದ್ದು. ಬಹಿರ್ಮುಖಿಯಾಗುವ ಕಾವ್ಯದಲ್ಲಿ ವರ್ತಮಾನದ ಮಿಡಿತಗಳಿರುವುದರಿಂದ ಕಣವಿಯವರ ಕಾವ್ಯ ನನಗೆ ಇಂದಿಗೂ ಅತ್ಯಂತ ಪ್ರಿಯವೆನ್ನಿಸುತ್ತದೆ.

ಹೊಸ ಕ್ಷಿತಿಜಗಳನ್ನು ತೆರೆಯುತ್ತ, ಓದುಗರನ್ನು ತನ್ನ ಪ್ರವಾಹದೊಂದಿಗೆ ಸೆಳೆದೊಯ್ಯುವ ಸಾಮರ್ಥ್ಯ ಕಣವಿಯವರ ಕಾವ್ಯಕ್ಕಿರುವದರಿಂದ ಅವರ ಕಾವ್ಯದ ಬೆಳವಣಿಗೆಯ ಬಗ್ಗೆ ನನಗಿನ್ನೂ ಜಿಜ್ಞಾಸೆಯಿದೆ.

# ಕಾಲ ನಿಲ್ಲುವುದಿಲ್ಲ

೧

ಈ ಕಾಲನೆಂಬುವ ಪ್ರಾಣಿ
ಕೈಗೆ ಸಿಕ್ಕರೆ ಚೆನ್ನಾಗಿ ಥಳಿಸಬೇಕೆಂದಿದ್ದೆ ;
ಎಲ್ಲೊ ತಲೆಮರೆಸಿಕೊಂಡು ಓಡಾಡುತ್ತಿದ್ದಾನೆ.
ಆಕಾಶದಲ್ಲಿ ಮಿಂಚಿ–,
ಭೂಕಂಪದಲ್ಲಿ ಗದಗದ ನಡುಗಿ,
ಜ್ವಾಲಾಮುಖಿಯೊಳಗೆ ಹಿಡಿದು ನುಚ್ಚುನೂರಾಗಿ
ನದನದಿಯ ಗರ್ಭವ ಹೊಕ್ಕು, ಮಹಾಪೂರದಲಿ ಹೊರಬಂದು
ನಮ್ಮೆದೆಯಲ್ಲಿ ತುಡಿವ ತಬಲವಾಗಿದ್ದಾನೆ.
ಹಿಡಿಯಿರೋ ಅವನ.........

ಗಡಿಯಾರದಲ್ಲವನ ಹಿಡಿದು ಗಾಣವಾಡಿಸಲು
ಹೆಣಗಿದ್ದೇವೆ.
ಹೊತ್ತು ಬಂದಾಗ ಕತ್ತೆಯ ಕಾಲು ಹಿಡಿದು
ಒದೆಸಿಕೊಂಡಿದ್ದೇವೆ.
ತುಡಿವೆದೆಗೆ ಕಿವಿಗೊಟ್ಟು, ಮಿಡಿವ ನಾಡಿಯ
ಹಿಡಿದು ನೋಡಿದ್ದೇವೆ.
ಒಳಹೊರಗೆ ಉಸಿರು ಆಡುತ್ತಿದೆ ನಿರಾಯಾಸ.
'ಬಯಲು ಆಲಯದೊಳಗೊ ? ಆಲಯವು ಬಯಲೊಳಗೊ'
ಕೊನೆಗೊಮ್ಮೆ ಅವನೇ ಎಲ್ಲ ಬಗೆಹರಿಸುತ್ತಾನೆ,
ಯಾರಿಗೂ ಅವಸರವಿಲ್ಲ ತಾನೆ ?

ಈ ಕುದುರೆಯೇರಿ, ಲಗಾಮು ಬಿಗಿಹಿಡಿದು
ಸವಾರಿ ಮಾಡುವದಷ್ಟು ಸುಲಭವಲ್ಲ.
ನಮ್ಮೆದೆಯ ಮೇಲೆಯೇ ಕಾಲಿಟ್ಟು ಓಡಿಹೋಗುವುದ
ನಾವೆಷ್ಟು ಸಲ ಅನುಭವಿಸಿಲ್ಲ ?
ಸೆಕಂದು, ಮಿನಿಟು, ತಾಸುಗಳ ಹಾಸುಹೊಕ್ಕಿನಲ್ಲಿ
ಅಲ್ಲೊಂದು ಇಲ್ಲೊಂದು ಬಣ್ಣದ ನೂಲು
ಚಿತ್ರಲೆ ಬದುಕ ಸುತ್ತಿ ತೋರಿಸುತ್ತಿದೆ ಡೌಲು
ಹೆಜ್ಜೆಯಿಟ್ಟಲೆಲ್ಲ ಜೋಲಿಹಿಡಿದಿದೆ ಮಣ್ಣು
ಧುಮುಕುತಿದೆ ನೀರು,

ಮೈಸುತ್ತಿ ಒಳಹೊಕ್ಕು ನೋಡಿದೆ ಗಾಳಿ,
ಹದ್ದು ಮೀರಿದೆ ಬಯಲು—
ಬೆಳಕು-ಕತ್ತಲೆ ಕುಂಡದಲ್ಲಿ ಮುಳುಗೇಳುತಿಹೆವು ದಿನವೊಂದಕ್ಕು
ನಿದ್ದೆ ತಿಳಿದೆದ್ದಾಗ ಭೂಮಿಯಾಕಾಶಕ್ಕೆ ದೊಡ್ಡ ಬಿರುಕು.

೨

ಸದಾ ಅದೇ ಸೂರ್ಯಚಂದ್ರರ ಸುಪರಿಚಿತ ಮೋರೆ,
ನಮ್ಮಂತೆಯೇ ಅವರಿಗೂ ತಿರುಗುವುದೊಂದೆ ಹೋರೆ.
ಆದರೂ ಆಗೀಗ ಈಚೆಯು ದಡಕ್ಕೂ ಹಾಯುವುದು ಬೆಳಕಿನ ತೆರೆ.
ಒಡಮುರಿದೆದ್ದು ನಾಲ್ಕು ಕಡೆಗೆ ಕೈಚಾಚಿ-
ನಿಂತಲ್ಲೆ ಬೇರು ಬಿಟ್ಟಿವೆ ವೃಕ್ಷ.
[ಅಗೆದು ನೊಡಲೆ ಬೇಕೆ ?]
ಹರಡಿಕೊಂಡಿದೆ ಹಸಿರು ಸಂಸಾರ
ನಮಗೂ ಅದಕೂ ನಿತ್ಯ ಹೊಕ್ಕು-ಬಳಕೆ.
ಆರು ಋತುಗಳು ಬಂದು ಆರೈಕೆ ಮಾಡುವವು
ಯಾವುದೊ ಹಾರೈಕೆ ಎದೆಯೊಳಿಟ್ಟು ;
ತತ್ತಿಯೊಡೆದು ರೆಕ್ಕೆಬಲಿತಾಗ ಹಾರುವವು ಗೂಡುಬಿಟ್ಟು.

ದೂರದಲ್ಲಿಯೆ ಸಾಲುನಿಂತ ಪರ್ವತ ಶಿಖರ
ಆಗಿಲ್ಲ ಭೂಮಿಗೆ ಭಾರ.
ತೇಲುತಿವೆ ಅಂತರಾಳದಲಿ ನೂರು ಗೋಲ.
ಸೋತು ತಲೆಬಾಗಿಲ್ಲ ಆಕಾಶ,
ಮೂಲೆ ಹಿಡಿದು ತೂಕಡಿಸಿಲ್ಲ ಗಾಳಿ,
ಒಳಗೂ ಹೊರಗೂ ಹರಿದು ಸ್ವಚ್ಛವಾಗಿದೆ ನೀರು
ಅಣೆಕಟ್ಟಿಗೂ ಕೆಳಗೆ ಆರುಪಾರು,

ಎತ್ತಿನ ಬಂಡಿಯಿಳಿದು, ಬಸ್ಸಿನ ದಾರಿ ಕಾಯ್ದು, ಕಾರಿನಲಿ ತೂರಿ
ಹಡಗ ಬಿಟ್ಟು ವಿಮಾನದಲಿ ಹಾರಿ
ಗೋಲಗಳ ಮೇಲೆ ದಾಳಿ ಮಾಡಿದ್ದೇವೆ.
ಮೈಕಿನಲಿ ಕೊಕ್ಕೊಕ್ಕೋ ಕೂಗಿ, ತುರಾಯಿ ಕುಣಿಸಿ
ಬೆಳಗಾಯಿತೆಂದು ಭ್ರಮಿಸಿದ್ದೇವೆ.
ಹೊಸದಾಗಿ ಹೂಡಿದ ಮೂಡಲ ಹೋರಿ ಮುಸುಂಗರೆದು
ಅಡ್ಡಾದಿಡ್ಡಿ ಜಗ್ಗುತ್ತಿದೆ,

ಜೊತೆಗಿರುವ ಸಾಧು ಎತ್ತಿನ ಕೂಡ ಕಾದಾಟ.
ಹೌದು, ನಾವೆಲ್ಲ ಹೊಸಬರೆ :
ಅಜ್ಜ, ಮುತ್ತಜ್ಜರಿಗೆ ಮಂಗಳಾರತಿ ಮಾಡಿ-
ಕೈಯಲ್ಲಿ ಗಂಟೆ ಹಿಡಿದಿದ್ದೇವೆ.
ನೈವೇದ್ಯಕ್ಕೆ ಪಾಕವೇ ಸಿದ್ಧವಾಗಿಲ್ಲ, ಆಗಲೇ
ಪ್ರಸಾದ ಹಂಚಿದ್ದೇವೆ.
ಎದುರಿಗಿದ್ದದ್ದೆಲ್ಲ ಅದಲು–ಬದಲು ಕಂಚೀಬದಲು
ಹುಡುಕುತ್ತಿದ್ದೇವೆ ಕಣ್ಮುಚ್ಚಿ : ಇವರ ಬಿಟ್ಟವರಾರು?

೩

ದಿನವು ಬಿಸಿ ಬಿಸಿ ಅನ್ನ ದೇಹಕ್ಕೆ ಹಿತ
ಮುಂಜಾವದಡಿಗೆ ಸಂಜೆಗಾಗಲೇ ತಂಗೂಳು.
ಹಳಸಿದನ್ನವ ನಾಯಿ ಕೂಡ ಮೂಸುವುದಿಲ್ಲ. ಅದೆ
ಅಕ್ಕಿ, ಜೊಳ, ಗೋದಿಗಳಿಂದ ವಿಧವಿಧದ ಪಕ್ವಾನ್ನ
ಗಮಗಮಿಸುವುದು. ಉಪ್ಪು, ಕಾರ, ಸಿಹಿ, ಹುಳಿ,
ತಕ್ಕಷ್ಟು. ಬದಲಾವಣೆಯೇ ಬಾಳಿನೊಗ್ಗರಣೆ.
ಬಾಡಿಸಿಕೊಳ್ಳಲೆಂದೇ ಉಪ್ಪಿನಕಾಯಿ.
[ಕದ ತಿನ್ನುವವಗೆ ಹಪ್ಪಳ ಈಡೆ ?]
ಮಿತಿಮೀರಿದರೆ ಎಂಥ ಸುಗ್ರಾಸವೂ ಅಜೀರ್ಣ
ಕುದಿಯುವದು, ಮಿದಿಯುವದು, ಹೊಂದಿ
ಹದಗೊಳ್ಳುವದು : ಬದುಕಿನಲಿ ಎಲ್ಲರಿಗೂ ತೆರೆದ ದಾರಿ.
ಶ್ರುತಿಗೂಡಿದಾಗ ಹೊಮ್ಮುವದು ಹಾಡಿನ ಲಹರಿ
ಗಾಳಿಯು ಬೆನ್ನ ಮೇಲೆ ಮೋಡದ ಸವಾರಿ.

ಗುಡುಗಿರಲಿ, ಮಿಂಚಿರಲಿ ಮುಂಗಾರಿಗಾರು ಕಾತರಿಸಿಲ್ಲ ?
ಉರಿವ ಬೇಸಗೆ ಚಿಗುರು ಚಿಣ್ಣರನು ಎತ್ತಿ–ಆಡಿಸಿಲ್ಲ?
ಥಂಡಿಯು ಮುಸುಗಿನಲ್ಲಿ ಬೆಚ್ಚಗೆ ಕನಸು ಕಂಡಿಲ್ಲ ?
ಬೆಂಗಾಡಿನಂಗಾಂಗದಲ್ಲು ತುಂಗಭದ್ರೆಯು ತುಂಬಿ ಹರಿದಿಲ್ಲ ?

ವರ್ತನೆಯು ನರ್ತನಕೆ ಪರಿವರ್ತನೆಯು ಸೊಬಗು;
ಕಂದ, ವೃತ್ತಗಳ ಝರಿ ತೊರೆಯು ನಡುವೆ
ಹಸುರಿಗೆ ಗದ್ಯದುದ್ಯಾನ ;
ಹದಿನೆಂಟು ಬಣ್ಣನೆಯು ಹುಲ್ಲು ಗದ್ದೆಯು ನಡುವೆ

ಚಂಪುವಿನ ತಂಪುಕೊಳ.
ನಿಬ್ಬಣಕೆ ಹೊರಟಂತೆ–ಹಾಡುಂಗಬ್ಬಗಳ ಕೊಲ್ಲಾರಿ ಬಂಡಿ.
ಭಾವ-ಗೀತ ಒಪ್ಪಿದರೆ ಚಂದ ವಧೂವರ ಜೋಡಿ.
ಒಲೆ ಹೂಡಿದ ಮೇಲೆ ಅದರ ಬಿಸಿ ತಾಗುವದು
ಕುದ್ದು ಹಣ್ಣಾಗುವದು ನೂರು ಅನುಭವದ ನವ್ಯಪಾಕ.

ಬಗಲಗಸೆ ಅಂಗಿಯಿಂದ ಒಂಚ್‌ಕೋಟಿನವರೆಗು
ತೊಟ್ಟು ಕಳಚಿದ್ದೇವೆ.
ಮಾಡಿ ಉಂಡಿದ್ದೇವೆ ನಮನಮಗೆ ಸೇರಿದ ಅಡಿಗೆ.
ಇರಬಹುದು ಇದರಲ್ಲಿ ಕೆಲಭಾಗ ಜೀವನಸತ್ವ ಕಡಿಮೆ.
ಇದ್ದ ಶಕ್ತಿಯಲಿ ತುಸು ದೂರ ನಡೆದಿದ್ದೇವೆ.
ರೂಢಿಯಾಗಿದೆ ಒಬ್ಬೊಬ್ಬರಿಗೂ ಒಂದೊಂದು ಬಗೆಯ ನಡಿಗೆ.
ಮುಖ್ಯ ಬೇಕಾದದ್ದು ಜೀವಂತಗತಿ, ಹೊಸನೆತ್ತರಿನ ಕೊಡುಗೆ

ಕಾಲ ನಿಲ್ಲುವದಿಲ್ಲ; ನಾವು ಕೊಡುವದಿಲ್ಲ.
ಮಳೆ ಬಂದರು ಕಾಮನ ಬಿಲ್ಲು ಮೂಡುವುದೆಂಬ ನಿಯಮವಲ್ಲ.
ಹಗಲಿರುಳ ಗಾಳಿಯಲಿ ಸೋಲು–ಗೆಲುವಿನ ಕೀಲು ಭದ್ರ.
ಪಂದ್ಯಾಟದಲ್ಲಿ ಯಾರೂ ಹೆಸರು ಕೊಡಬಹುದು
ನಿಂತವರಿಗೂ ಉಂಟು ನೋಡಿ ಸಂತಸಪಡುವ ಭಾಗ್ಯ.
ಗೆದ್ದವರಿಗಿದ್ದೆಯಿಂದೆ ಬೆಳ್ಳಿಯ ಥಾಲು.
ಸೋತವರ ಸೊತ್ತು
ಗೆದ್ದವರನಳೆವ ಜಗದೆಲ್ಲ ಅನುಭವದ ಪಾಲು.

# ನಗರದಲ್ಲಿ ನೆರಳು

ಮಟ ಮಟ ಮಧ್ಯಾಹ್ನದಲ್ಲಿ
ನೆರಳು ಹುಡುಕುತ್ತ ಹೊರಟಿದ್ದೇನೆ,
ಹಿಡಿದ ಕೊಡೆಯೂ ಕಾದು
ಭಾರವಾಗಿ ಬೇಸರವಾಗಿದೆ ಅದೂ,
ದಾರಿಯಿಕ್ಕೆಲಕು ತಣ್ಣಗೆ ಮೈಚಾಚಿ
ನಿಂತಿರುವ ಟೊಂಗೆಗಳನ್ನು—ಕೈಚಾಚಿ
ವಿದ್ಯುತ್ತಂತಿಗಡ್ಡಬರುತ್ತವೆಂದು
ಅಡ್ಡಾತಿಡ್ಡ ಕಡಿದು ಹಾಕಿದ್ದಾರೆ.
ಒಪ್ಪೋರೆ ನೆರಳೋ? ಬಿದ್ದಿದೆ ಆಸಡ್ಡಾಳ ಮುಳ್ಳು ಬೇಲಿಯ ಮೇಲೆ.

ಎಷ್ಟೋ ದಿನಗಳಿಂದ ಇಷ್ಟೆತ್ತರ ಬೆಳೆದು
ಸುತ್ತೆಲ್ಲ ಛತ್ತರಿ ಹಿಡಿದು
ಅಮರವಾಗಿದ್ದ ಮರಗಳನ್ನು :
ಟ್ರಕ್ಕು ಬಂದು ಹಾಯುತ್ತವೆಂದು,
ದನ ಬಂದು ನಿಲ್ಲುತ್ತವೆಂದು,
ದಾರಿಯನ್ನೆಲ್ಲ ಇನ್ನಿಷ್ಟು ಅಗಲ ಮಾಡುತ್ತೇವೆಂದು
ಉದಾರಿಗಳು
ಕಡಿದು ಸೌದೆ ಒಟ್ಟಿದ್ದಾರೆ.

ಅಲ್ಲಲ್ಲಿ ತೋಟದ ತುಂಬ ಬಾಬ್ ಕಟ್ ಮಾಡಿದ
ಆದರೂ ಹೂವುಡಿದ
ನಾನಾ ನಮೂನೆಯ ಕವಶಾನಿನ ಗಿಡ ಬಳ್ಳಿಗಳು
ನೆಲಕ್ಕೆ ತೊನ್ನು ಹತ್ತಿದ ಹಾಗೆ ನೆರಳು ;
ಉದ್ದಕ್ಕೂ ಚುರುಗುಡುತ್ತಿರುವ ಟಾರು ರೋಡು :
ಅದಕ್ಕೂ ಮೂಡುತ್ತವೆ ನೂರೆಂಟು ಕೋಡು,
ಹಾಯಿಸಿಕೊಂಡು. ದಬಾಯಿಸಿಕೊಂಡು
ನಿಬಾಯಿಸಿಕೊಳ್ಳುವುದೇ ನೆಟ್ಟಗೆ ದಾರಿ ಹಿಡಿದವರ ಪಾಡು.

ಸಣ್ಣವನಿದ್ದಾಗ–
ನಮ್ಮೂರ ಹೊರಗಿನ ಆಲದ ಮರದ ದಟ್ಟ ನೆರಳಲ್ಲಿ

ಗೋಲಿಯಾಡಿ, ಬೆರಳಿಗೆ ನೆತ್ತರು ಬರುವಂತೆ ಡೀಕಿ, ಡೀಕಿಸಿ
ಒಬ್ಬರಿಗೊಬ್ಬರು ತೆಕ್ಕೆ ಬಿದ್ದು, ಅಂಗಿ ಹರಿದು
ಅತ್ತಿದ್ದು, ಮತ್ತೆ ನಕ್ಕಿದ್ದು ಸಂತೋಷ ಉಕ್ಕಿದ್ದು,
ನೆನಪಾಗುತ್ತದೆ–
ಈ ನಗರದ ಸುಡುವ, ಸುತ್ತು ಬಳಸುವ ಕತ್ತು ಹೊರಳಿಸುವ
ಕುತ್ತು ಒಡ್ಡುವ ದಾರಿಯಲ್ಲಿ
ಹೀಗೆ
ಮಂದಿಯ ನಡುವೆ
ನೆರಳು ಹುಡುಕುತ್ತಾ ನಡೆಯುವಾಗ.

# ಅಪರಾವತಾರ

ಚೋಟುದ್ದ, ಗೇಣುದ್ದ ಆಕಾಶದುದ್ದ
ಕುತುಬ ಮಿನಾರಕ್ಕೆ ಕೈಯೂರಿ ಎದ್ದ!
ಕೆರೆಯಿಂದ ಸಾಗರದವರೆಗೆ ಸಾಗರಬಿದ್ದ
ರಾಡಿ ಪ್ಯೆಯಿಂದಲೇ ಮೇಲಕೆದ್ದ,–
ಗೌರೀಶಂಕರ ಶಿಖರ ಏರಬೇಕೆಂದಿದ್ದ
ಆದರೀಗಾಗಲೆ ಅದು ನಿಷಿದ್ಧ.
ಬುದ್ಧನೊಬ್ಬನು ಬೇರೆ ಆಗಿ ಹೋಗಿದ್ದ–
ಇಲ್ಲದಿದ್ದರೆ ಇವನೆ ಇಂದಿಗೂ ಮುಂದಿಗೂ
ಜಗದೆಲ್ಲ ಮಂದಿಗೂ ಸುಪ್ರಸಿದ್ಧ!

ಅಲ್ಲಿದ್ದ
ಇಲ್ಲಿದ್ದ
ಎಲ್ಲ ಕಡೆಗೂ ಬಾಲ ಗುಂಡಾಡಿಸಿದ್ದ.
ಹೋದ ಹೋದಲ್ಲೆಲ್ಲ ಹದನೋಡಿ ಹುಸಿಗೊಂಡು ಹಾರಿಸಿದ್ದ!
ಮುಂದ್ದಾಗಿ ತೋರಿದವ ಹದ್ದಾಗಿ ಹಾರಿದ
'ಉಳಿದ ಪಕ್ಷಿಗಳೇನು ನನ್ನಂತೆ ಹಾರುವವೆ
ಹಾಡಬಲ್ಲವೆ' ಎಂದು ಡಂಗುರವ ಸಾರಿದ.
'ಕಿಂಖಿಲಿಲಿಲಿಲಿಲಿ' ಹರಡಿತ್ತು ನಾದ ಪ್ರವಾದ!
ಆಕಾಶದಲ್ಲಿ ಯಾವ ದೇವರಿಗೊ ಪ್ರದಕ್ಷಿಣೆ ಹಾಕುತಿದ್ದವನು
ಕೆಳಗೆ ಸರ್ರನೆ ಇಳಿದು ಕೋಳಿಮರಿಗಳ ಮೇಲೆ
ಬಂದೆರಗಿದ!
ಪೂರ್ವಜನ್ಮದ ಸುಕೃತ—
ಈ ಮಹೋದಯನ ಕೃಪಾಕಟಾಕ್ಷಕ್ಕೆ ನಾ ಬಿದ್ದೆ ಅಪ್ರಬುದ್ಧ.
ಚಿಕ್ಕೆ ಬಳಗದ ಚಂದ್ರ ಚೆಲುವಿನಿಂದ್ರ
ನಾಲ್ಕಾಣೆ ಚೂರುಗಳ ನಡುವೆ ಹೊಳೆಯುವ ಬೆಳ್ಳಿ ರೂಪಾಯಿ
ಯಾದ.

ಬಿಡಲಿಲ್ಲ ಈತ. ಅಲ್ಲಿಗೂ ಹೋಗಿ ಗಟ್ಟಿ ತಳವೂರಿದ;
ಹೂವಿನ ಸುವಾಸನೆಯು ಬೆಳದಿಂಗಳಿನ ತಂಪ
ತಕ್ಕಡಿಯ ಪರಡಿಯಲಿ ತೂಗ ಹೊರಟ.
ಕೊಪ್ಪರಿಯ ಜೊತೆಗದರ ಕರಟವನ್ನೂ ಕೂಡ

ತಿಂದು ಬಿಟ್ಟ.
ನಿತ್ಯವೂ ಮೊಗೆ ಮೊಗೆದು ಕುಡಿಯುತೊಡಗಿದನಾಸೆಯಾಮಿಷದ
ಪೀಯೂಷ.

ಏನು ಕೊಟ್ಟರೆ ತಾನೆ ಬಂದೀತು ಇದರಿಂದ
ಬರುವ ಮಾದಕದಮಲು, ಸರಿಗಟ್ಟಿ ನಿಂತೀತು ದ್ರಾಕ್ಷಾರಸ ?
ರೂಪಾಯಿ, ಆಣೆ, ಪೈ.
ಮನಸಿನೊಳಗೇ ನೀನು ಬೇಕಾದ್ದು ಬೈ
(ಪೂರ್ಣಪರವಾನಿಗಿ)
ಜಮಾಖರ್ಚಿಗೆ ಮಾತ್ರ ವ್ಯತ್ಯಯವಾಗದಿರಲಿ
ವೇದದಷ್ಟೇ ಪೂಜ್ಯ ರೋಜ ಕಿರ್ದಿ.
ರೂ. ಆ. ಪೈ.
ಇದರ ನಾದವೆ ನಾದ, ಇದುವೆ ಸಂಗೀತ,
ಇದರ ಕುಣಿತವೆ ಕುಣಿತ; ಝಣ್ ಝಣ್ ತಕ್ಕಥೈ.
ಸೈ ಸೈ ತಲೆದೂಗಿ ಬೆನ್ನು ಚಪ್ಪರಿಸಿದನು
ಕಥೆಯಾಗಿ ಕುಳಿತ ಆ ಮಿಡಾಸ !

ಅವರಿವರು ತೊಟ್ಟ ಬಿಳಿಯ ಬಟ್ಟೆಯ ಮೇಲೆ
ಮಸಿಯ ಸಿಡಿಸಿದರೆಷ್ಟು ಸೊಗಸು ಸಂತೋಷ !
ಯಾರ ತಲೆಗೆಂಥ ಟೊಪ್ಪಿಗೆಯಾದರೊಪ್ಪೀತು—
ಹಗಲಿರುಳು ಅದರದೇ ಧ್ಯಾನ, ಅದುವೆ ಜೀವನೋಲ್ಲಾಸ !
ಕತ್ತರಿಸಿ, ಹೊಲಿದು, ಬಿಚ್ಚಿ ತೇಪೆಯ ಹಚ್ಚಿ, ತೊಟ್ಟು
ತೋರಿಸುವನು—ತಗೊ ತಾಸಿಗೆ ನೂರು ವೇಷ.
ಊರಿನುಸಾಬರಿ ಇವನ ಊಟಕುಪ್ಪಿನಕಾಯಿ
ಕೊಂಡಿ ಮಂಚಣ್ಣ, ಶಕುನಿ, ಜಕ್ಕಿಸಿ ಹೋದರಿವನೆದುರು
ಅವರಿಗಿದ್ದವೆ ಹೇಳಿ, ನೂರು ಬಾಯಿ ?
ಸಮಯ ಬಂದಾಗಿರಲಿ ಎಂದು ಸಂಗ್ರಹಿಸಿಹನು
ನಸುಗುನ್ನಿಕಾಯಿ.
ಕರಟಕರು ದಮನಕರಿಗೆಲ್ಲ ಇವನೇ ಇಂದು
ತಂದೆ ತಾಯಿ.

ಕಣ್ಣು ಗುಳಿಗಣ್ಣು, ಸದಾ ಒಳಸಂಚುಗಳ ಕೋಣೆ
ಒಮ್ಮೆಯಾದರೂ ಅಪ್ಪಿ ತಪ್ಪಿ ಹೃದಯದ ಮಾತು
ಹೊರಬಂದರಾಣೆ !

ಬಿಂಕಂದುಟಿಗಳ ಮೇಲೆ ಹಾಸ—ವಿರೋಧಾಭಾಸ
ಒಮ್ಮೊಮ್ಮೆ ಮಾತಿನಲಿ ಚೈತ್ರಮಾಸ !
ಮೊದಲ ನೋಟಕ್ಕಿವನು ಹಸುಳೆ, ಪೂರಾ ಹಸುಳೆ
ಗುಮ್ಮನಗುಸುಗ ;
ಭಾವಕೋಶದ ಮೇಲುಮುಸುಕನೆಳೆದರೆ ಸಾಕು
ಮೂಗು ಮುಚ್ಚದೆ ಬೇರೆ ಗತಿಯೆ ಇಲ್ಲ.
ಒಳ ಮುಚುಗ ; ನಾಲಗೆಯು ಹೊರಗೆ ಹಾದರೆ ಚುಚುಗ—
ತಿಂದುಚುಗ !

ಬೆಳಕಿಂಡಿಯುಲ್ಲಿಳಿದು ಬಂದು ಬೆಣ್ಣೆಯು ತಿಂದು
ಗುರ್ರೆನುವ ಬಾವುಗ !
ಗೋಣಿಚೀಲದಿ ಹಾಕಿ ಹೊತ್ತು ಹೊರಗೊಗೆದರೂ
ಮತ್ತೆ ಹೇಗೋ ಬಂದು ಮೂಸುವದು, ಸೋಜಿಗ.
ಅಲ್ಲಲ್ಲಿ ಸಂಶಯದಿ ಏಕೆ ಹುಡುಕುತ್ತಿಹಿರಿ
ಇಲ್ಲಿಯೇ, ಇವನಂತರಂಗದಲ್ಲಿಯೇ ಹೊಗೆಯಾಡುತಿದೆ
ಬನ್ನಿ, ಮೂರನೆ ಮಹಾಯುದ್ಧ.
ಗೊಬೆಲ್ಸ ಕೊನೆಯು ಗಳಿಗೆಯುಲಿ ತನ್ನೆಲ್ಲ
ಗುಟ್ಟು ಇವನಿಗೆ ಕೊಟ್ಟು ಪ್ರಾಣ ಬಿಟ್ಟ.

ಕಂಡಿರಾ ನೀವಿವನ, ಪರಮ ಸ್ನೇಹಿತನ ?
ಸ್ನೇಹಕೆಂದೇ ಮೂರ್ತಿಮತ್ತಾಗಿ ಈ ಇಳೆಗೆ ಅವತರಿಸಿದವನ ?
ಮೊನ್ನೆ ಮೊನ್ನೆಯೆ ಆಯಿತೆನಗೆ ತಾನಾಗಿಯೇ
ಇವನೊಡಲ ಬ್ರಹ್ಮಾಂಡದ ಮಹಾದ್ಭುತ ವಿಶ್ವರೂಪದ ದರ್ಶನ
ಸಿಡಿಲೆರಗಿದಂತಾಯ್ತು, ನಡುಗಿಹೋಯಿತು ನನ್ನ ಅತ್ಯಲ್ಪ ಚೇತನ.
"ನಮೋನಮೋಸ್ತೇऽಸ್ತು ಸಹಸ್ರ ಕೃತ್ವಃ
ಪುನಶ್ಚ ಭೂಯೋಽಪಿ ನಮೊ ನಮಸ್ತೆ".

# ನೀಲಾಂಬಿಕೆ

೧

ಸದುವಿನಯಂದ ತುಂಬಿದ ಕೊಡ
ತಂದಳು ನೀಲಾಂಬಿಕೆ.
ಕಲ್ಯಾಣದ ಅಂಗಳದಲಿ
ತಳಿಹೊಡೆದಳು ಛಂದಕೆ;
ಸಮ ಚಿತ್ತದ ರಂಗೋಲಿಯು
ಒಳ—ಹೊರಗೂ ಧೂಪವು;
ಹಾದಾಡುವ ಹೊಸತಿಲಲ್ಲಿ
ಹೊಯ್ದಾಡದ ದೀಪವು.

೨

ಮಹಾಮನೆಯ ಮಹಾತಾಯಿ
ಮಾಸದ ಮಡಿ ಹಾಸಲು,
ದಾಸೋಹಕೆ ಮೀಸಲಾದ
ತೃಪ್ತಿಯು ನಗೆ ಸೂಸಲು,
ಎಲ್ಲೆಲ್ಲಿಯು ಗಣ ತಿಂಥಿಣಿ
ತಣಿದು ಹಾಡಿ ಹರಸಲು
ಭಕ್ತಿಯ ಭಂಡಾರ ತುಂಬಿ
ಹರಡಿತು ಬೆಳುದಿಂಗಳು.

೩

ಅಯ್ಯನ ಕೈ ನೋವುದೆನಲು
ಆಭರಣವ ಕೊಟ್ಟಳು—
ಅನುಭಾವದ ಅಲಂಕಾರ
ಆಚರಣೆಯು ತೊಟ್ಟಳು.
ನೆರಳಾದಳು ಬಸವಣ್ಣನ
ಹರಳಾದಳು ಬೆರಳಿಗೆ,
ಅರಳಾದಳು ಲಿಂಗದಲ್ಲಿ
ಪರಿಮಳಿಸುತ ಪೂಜೆಗೆ,

೪

ಏನು ನೋವೊ ಹೇಳಲಿಲ್ಲ
ಕೇಳಲಿಲ್ಲ ಮಡದಿಗೆ,
ಹಾಗೆ ಹೊರಟು ಹೋದರಣ್ಣ
ಕಲ್ಯಾಣದ ಹುಡದಿಗೆ.
ಕೂಡಲದಲಿ ನೀರು ಹರಿದು
ತಿಳಿಗೊಂಡಿತು ಬನ್ನಿರಿ—
ನೀಲಾಂಬಿಕೆ ನೆನಪಾದಳು
ಬೇಗನೆ ಕರೆತನ್ನಿರಿ.

೫

ಕರಸ್ಥಲದಿ ಬಸವ ರೂಪು
ಪರಿಣಾಮವ ಮೀರಿಸಿ,
ಬಸವಯ್ಯನು ಮಾಡಿದಾಟ
ಲಿಂಗದೆಡೆಗೆ ತೋರಿಸಿ,
ಅಲ್ಲಿ ಇಲ್ಲಿ ಉಭಯವಳಿದು
ಅಂಗೈಯಲಿ ಸಂಗಮ;
ಅಲ್ಲಿದ್ದರಂ, ಇಲ್ಲಿಲ್ಲವೆ ?
ಜಗದ ಜೀವ ಜಂಗಮ.

೬

ನೀಲಾಂಬೆಯು ನಿಲವಿನಲ್ಲಿ
ಮಹಾಲಿಂಗ ಹೊಳೆಯಲು.
ಬಸವಣ್ಣನ ಭಕ್ತಿಕಲಶ
ಸಂಗಮನಡಿ ತೊಳೆಯಲು—
ಗಾಳಿಯಲ್ಲಿ ಗಾಳಿಯಾಗಿ
ಮಹಾ ಬೆಳಗು ಸಂದಿತು ;
ಪ್ರಾಣಲಿಂಗದಲ್ಲಿ ಕರಗಿ
ನೀಲಾಂಬರ ಮಿಂಚಿತು.

# ನಂಬಿಕೆ

ಅನಂತವೆಂದರೂ ಆಕಾಶಕೊಂದು ಆಕೃತಿಯುಂಟು,
ನೀಲವೆಂದರೂ ನೂರು ಬಣ್ಣದ ಲೀಲೆಗವಕಾಶವುಂಟು.
ಭೂಮಿಯ ಮೇಲೆ ಕಾಲೂರಿ ನಡೆದಿದ್ದರೂ ಇದರ
ಸ್ತರಗಳ ನಡುವ ಸ್ಥಿರಗೊಂಡ ಒಡನಾಟ, ನಿರಂತರ ನಂಟು.
ಹಗಲೆಲ್ಲ ಹಸುರಾಗಿ, ತುಂಬು ಕೆಂಪಾಗಿ, ರೆಂಬೆ—
ಕೊಂಬೆಗಳೆಲ್ಲ ಸಂಜೆ ಬಾನಿನ ನಿರಾಳ ಮನದಳಚ್ಯೊತ್ತಿ
ಚಿತ್ತಾರವಾಗಿ ಕಪ್ಪು ಮುಸುಕಿನ ಒಳಗೆ ಹುದುಗುವವು,
ಇದ್ದು ಇಲ್ಲದ ಹಾಗೆ ಇರುಳಿನಲಿ ಒಮ್ಮೆಲೆ ಚಿಗುರೊಡೆದು
ಅಂತರಂಗವ ಬಿಚ್ಚಿ ಬಯಲಿಗಿಡುವದು ಬಾನು :
ಎಚ್ಚರಾಗದ ಹಾಗೆ ನೆಲದ ಮೈದಡವಿ ಮುದ್ದಿಸುವದು.
ಆಗ ಎಲ್ಲರಿಗೂ ನಿದ್ದೆ. ಬೆಳಗಿನ ಜಾವ ಯಾವುದೊ
ಕನಸು : ಬೆಳಗಾದ ಮೇಲೆ ಮರೆತು ನೆನೆಸುವದು—
ತಿರುಗಾಡಿ ಬರುವಾಗ ಗೆಳೆಯರಿಗು ಹೇಳಿ ನಕ್ಕು
ನಗಿಸುವದು ; ಹೂ ಗಿಡಕೆ ನೀರು ಹಣಿಸುವದು.

೦ ೦ ೦

ಚಳಿಗಾಲದಲ್ಲಿ ಒಂದೊಂದೆ ಎಲೆಯುದುರಿ ನೆನಪು ಕಳಚು—
ತ್ತಿರುವಾಗ ಯಾರಿಗೂ ಕಾಣದ ಹಾಗೆ ಬೇರಿಂದ ರಸ ಹೀರಿ
ಚಿಗುರಿ ನಿಂತವರಾರು ? ಬಿರುಗಾಳಿ ಬೀಸಿ ಆಕಾಶದುದ್ದ
ಧೂಳಡರಿ ದಿಕ್ಕು ತಪ್ಪಿಸಿ, ಮನೆ ಮನೆಯ ಕಿಡಕಿ–ಬಾಗಿಲು
ಬಡಿದು, ಪಟಪಟ ಹನಿಯುದುರಿದಾಗ ಯಾರು ನೆಲಕಿಳಿದು
ಬಂದವರು ? ಮರುದಿನ ಬೇಲಿಗುಂಟ ಹೂವರಳಿದಾಗ ಯಾರು
ಕಿಲಕಿಲ ನಕ್ಕು ಹೋದವರು ? ನಿರ್ಮಲವಾಗಿ ನಿಂತ ಮೋಡ
ಹೊಯ್ದಾಡಿ ಎಲ್ಲೊ ಇಳಿಯುವದು—ಭೂಮಿ ಗುಟುಕರಿಸುವದು
ಆಗೀಗ ಮಿಂಚಿ ಅಂತರಿಕ್ಷದಲೇನೋ ಹೊಳೆಯುವದು.

೦ ೦ ೦

ಯಾವುದೋ ಗಳಿಗೆಯಲಿ ಹಟಾತ್ತನೆ ಒಳಗೆ ಅನಿಸುವ—
ದೊಂದು; ಬೆಟ್ಟದ ಮುಡಿಯ ಕಲ್ಲು ಬಂಡೆಯಲಿ ಚಿಲ್ಲನೆ ಬುಗ್ಗೆ
ಚಿಮ್ಮಿ ಮುಂದೆ ಹರಿದದ್ದೆಲ್ಲೊ, ಹಗಲಿರುಳು ಜಾರುವವು

ದಿನ ದಿನವು ನನ್ನೊಳಗಿಂದ ಏನೊ ಓಡುವವು: ಮತ್ತೆಲ್ಲೊ
ತಿರುಗಿ, ಪತ್ತೆಯಿಲ್ಲದ ಹಾಗೆ ಜೇನಿಟ್ಟು 'ಬಿಡಿಸಿಕೊ' ಎಂದು
ದುಡಿಸುವವು. ಜೇಂಗೊಡವ ಕಂಡು ಅಚ್ಚರಿಗೊಂಡರೂ
ಅವಸರಪಡುವ ಹಾಗಿಲ್ಲ; ದಾಹ ತೀರಿಸಲು ನೀರಲ್ಲ,
ಮತ್ತು ಬರಿಸುವ ಮದ್ಯವಲ್ಲ; ಅಂಗೈಯಲ್ಲಿ ಹನಿಹನಿ
ಹಾಕಿ, ನೆಕ್ಕಿ ನಾಲಗೆ ತುಂಬ ಸವಿದು, ಕಣ್ಮುಚ್ಚಿ
ತೆರೆಯ ಬೇಕು.

o o o

ನನ್ನ ನಂಬಿಕೆಯೊಂದು ಆಕಾಶ ;
ನಿಜ. ಅದಕೆ ತಳಬುಡವಿಲ್ಲ, ನಾನೆಷ್ಟು ಬೆಳೆದರೂ
ನನಗೆ ನಿಲುಕುವದಿಲ್ಲ, ದೂರದಿಂದಲ್ಲದೆ ನಾನದನು
ಮುಟ್ಟಿ ಅನುಭವಿಸಿಲ್ಲ. ಮೇಲೆ ನೋಡದೆ ಸೆಟೆದುಕೊಂಡೇ
ನಡೆದರೂ ಅದು ಸದಾ ನನ್ನ ತಲೆಯ ಮೇಲೆ.
ಹಗಲು ಹೊತ್ತಿನಲಿ ಅದರೆಡೆಗೆ ಲಕ್ಷ್ಯವಿಲ್ಲ. ನಮ್ಮ ಬದುಕಿನಲಿ
ನಾವು ಮಗ್ನರಾದರೆ ಸಾಕು, ಅದಕೆ ಚಿಂತೆಯಿಲ್ಲ.
ರಾತ್ರಿ ವಿದ್ಯುದ್ದೀಪ ಕೈಕೊಟ್ಟು, ಮಿಣಿ ಮಿಣಿ ಮೇಣ—
ಬತ್ತಿಯ ಹಚ್ಚಿ, ಅಂಜಿ ಆಕಳಿಸುತ್ತ ಕುಳಿತಾಗಲೂ
ಆಕಾಶದಲ್ಲಿ ಹೊಳೆವ ನಕ್ಷತ್ರಕ್ಕೆ ಲಕ್ಕವಿಲ್ಲ.

